# ಉಪಾಯನ

ಪ್ರೊ. ಡಿ. ಎಲ್. ನರಸಿಂಹಾಚಾರ್, ಎಂ.ಎ., ಅವರಿಗೆ
ಅವರ ಮಿತ್ರರೂ, ಶಿಷ್ಯರೂ ಒಪ್ಪಿಸಿದ ಪ್ರಬಂಧಗಳ ಸಂಪುಟ



ಪ್ರೊ. ಡಿ. ಎಲ್. ಎನ್.
ಸಂಭಾವನಾ ಗ್ರಂಥಪ್ರಕಾಶನ ಸಮಿತಿ, ಬೆಂಗಳೂರು

# ಉಪಾಯನ

ಪ್ರೊ. ಡಿ. ಎಲ್. ನರಸಿಂಹಾಚಾರ್, ಎಂ.ಎ., ಅವರಿಗೆ

ಅವರ ಮಿತ್ರರೂ, ಶಿಷ್ಯರೂ ಒಪ್ಪಿಸಿದ ಪ್ರಬಂಧಗಳ ಸಂಪುಟ


11976



ಪ್ರೊ. ಡಿ. ಎಲ್. ಎನ್.

ಸಂಭಾವನಾ ಗ್ರಂಥಪ್ರಕಾಶನ ಸಮಿತಿ, ಬೆಂಗಳೂರು

# ಅರಿಕೆ

ಕನ್ನಡ ಪ್ರಾಧ್ಯಾಪಕರಾಗಿ, ಸಾವಿರಾರು ವಿದ್ಯಾರ್ಥಿಗಳಿಗೆ ವಿದ್ಯಾದಾನಮಾಡಿ, ಮೈಸೂರು ವಿಶ್ವವಿದ್ಯಾನಿಲಯಕ್ಕೆ ಕೀರ್ತಿ ತಂದ, ಕನ್ನಡ ನಾಡಿನ ಶ್ರೇಷ್ಠ ವಿದ್ವಾಂಸರಾದ ಪ್ರೊ. ಡಿ. ಎಲ್. ನರಸಿಂಹಾಚಾರ್, ಎಂ.ಎ. ಅವರಿಗೆ ವಿದ್ವತ್ ಪ್ರಬಂಧಗಳ ಸಂಪುಟವೊಂದನ್ನು ಅರ್ಪಿಸುವುದರ ಮೂಲಕ ಗೌರವ ತೋರಬೇಕೆಂದು ಅವರ ಮಿತ್ರರೂ ಶಿಷ್ಯರೂ ಸಂಕಲ್ಪಿಸಿ ಈ ಕಾರ್ಯವನ್ನು ಸುಸೂತ್ರವಾಗಿ ನಿರ್ವಹಿಸಲು ಒಂದು ಸಮಿತಿಯನ್ನು ರಚಿಸಿದರು. ಈ ಸಮಿತಿಯಲ್ಲಿ ಶ್ರೀ ಟಿ. ಪಿ. ಕೃಷ್ಣಾಚಾರ್ಯರು ಅಧ್ಯಕ್ಷರಾಗಿಯೂ, ಪ್ರೊ. ಎ. ಎನ್. ಮೂರ್ತಿರಾಯರು ಉಪಾಧ್ಯಕ್ಷರಾಗಿಯೂ, ಶ್ರೀ ಆರ್. ಎಲ್. ನರಸಿಂಹಯ್ಯನವರು ಕೋಶಾಧಿಕಾರಿಗಳಾಗಿಯೂ, ಸರ್ವಶ್ರೀ ಜಿ. ವೆಂಕಟಸುಬ್ಬಯ್ಯ, ಎನ್. ಬಸವಾರಾಧ್ಯ, ಡಾ. ಎಂ. ಚಿದಾನಂದಮೂರ್ತಿ ಮತ್ತು ಟಿ. ವಿ. ವೆಂಕಟಾಚಲಶಾಸ್ತ್ರಿಗಳು ಕಾರ್ಯದರ್ಶಿಗಳಾಗಿಯೂ ಇದ್ದು ಸಂಪುಟದ ಮುದ್ರಣಕ್ಕೆ, ಬೇಕಾದ ಹಣಶೇಖರಣೆ, ಲೇಖನಗಳ ಸಂಗ್ರಹ ಮುಂತಾದ ಕೆಲಸಗಳನ್ನು ನಡೆಸಿಕೊಟ್ಟಿರುತ್ತಾರೆ.

ಸಮಿತಿಗೆ ಬಂದ ಲೇಖನಗಳನ್ನು ಪರಿಸೋಡಿ, ಪರಿಷ್ಕರಿಸಿ, ಮುದ್ರಣಕ್ಕೆ ಸಿದ್ಧಪಡಿಸಲು ಒಂದು ಸಂಪಾದಕ ಮಂಡಲಿಯನ್ನು ಗೊತ್ತುಮಾಡಲಾಯಿತು. ಇದರಲ್ಲಿ ಪ್ರೊ. ತೀ. ನಂ. ಶ್ರೀಕಂಠಯ್ಯನವರು ಅಧ್ಯಕ್ಷರಾಗಿಯೂ ಸರ್ವಶ್ರೀ ಆರ್. ಎಸ್. ಮುಗಳಿ, ಕೆ. ಎಸ್. ಹರಿದಾಸ ಭಟ್, ಡಿ. ಕೆ. ಭೀಮಸೇನರಾವ್, ಕೆ. ವಿ. ರಾಘವಾಚಾರ್, ಡಿ. ಜವರೇಗೌಡ ಇವರು ಸದಸ್ಯರಾಗಿಯೂ ಇದ್ದು ಈ ಕಾರ್ಯದಲ್ಲಿ ನೆರವು ನೀಡಿದ್ದಾರೆ.

ಈ ಸಂಪುಟದ ಮುದ್ರಣ ಮೊದಲಾದ ದಿನದಿಂದ ಹಿಡಿದು, ಅದರ ಕೊನೆಯ ಲೇಖನ ಅಚ್ಚಾಗುವವರೆಗೂ, ಪ್ರೊ. ತೀ. ನಂ. ಶ್ರೀಕಂಠಯ್ಯನವರು ತಮ್ಮ ದೇಹಶ್ರಮವನ್ನು ಲೆಕ್ಕಿಸದೆ ದುಡಿದಿದ್ದಾರೆ. ತಮ್ಮಲ್ಲಿಗೆ ಬಂದ ಲೇಖನಗಳನ್ನು ಓದಿ, ಸರಿನೋಡಿ ಅಚ್ಚಿಗೆ ಸಿದ್ಧಗೊಳಿಸುವುದರಲ್ಲಿ, ಅಚ್ಚಿನ ಮೊಳೆಗಳನ್ನು ನಿರ್ಣಯಿಸುವುದರಲ್ಲಿ, ಕರಡು ಪ್ರತಿಗಳನ್ನು ತಿದ್ದುವುದರಲ್ಲಿ, ಗ್ರಂಥದ ಸಮಷ್ಟಿ ಸೌಂದರ್ಯವನ್ನು ರೂಪಿಸುವುದರಲ್ಲಿ ಅವರ ಕೈವಾಡ ಪುಟ ಪುಟಗಳಲ್ಲಿಯೂ ಕಂಡುಬರುತ್ತದೆ. ಈ ಗ್ರಂಥದ ಪ್ರಕಟನೆಯಲ್ಲಿ ಅವರು ಪಟ್ಟಿರುವ ಶ್ರಮ ಎಷ್ಟೆಂಬುದು ಅವರು ನಿರ್ವಹಿಸುತ್ತಿದ್ದ ಕಾರ್ಯವನ್ನು ಹತ್ತಿರದಿಂದ ನೋಡಿದ್ದವರಿಗೆ ಮಾತ್ರ ತಿಳಿಯುವುದು ಸಾಧ್ಯ. ಶ್ರೀಯುತರು ಪ್ರೊ. ಡಿ. ಎಲ್. ಎನ್. ಅವರ ಒಡನಾಡಿಗಳಾಗಿದ್ದರು. ಸಹೋದ್ಯೋಗಿಗಳಾಗಿದ್ದರು. ಕನ್ನಡದ ವಿದ್ವತ್ ಪ್ರಪಂಚವನ್ನು ಬೆಳೆಸಲು ಇಬ್ಬರೂ ಜೊತೆ ಜೊತೆಯಾಗಿ ಕೆಲಸ ಮಾಡಿದರು. ಅವರು ಈ ದಿನ ನಮ್ಮೊಡನೆ ಇದ್ದು ಈ ಉತ್ಸವದಲ್ಲಿ ಭಾಗವಹಿಸಿದ್ದರೆ, ಇದಕ್ಕೆ ಎಂಥ ಸಡಗರ ಉಂಟಾಗುತ್ತಿದ್ದಿತೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಆದರೆ ನಮ್ಮ ಮತ್ತು ನಾಡಿನ ದುರ್ದೈವದಿಂದ ನಮ್ಮನ್ನು ಅವರು ಅಗಲಿದರು. ಶ್ರೀಯುತರ ಅಕಾಲ ನಿಧನಕ್ಕಾಗಿ ಕಣ್ಣೀರಿಡುತ್ತ, ಈ ಗ್ರಂಥ ಪ್ರಕಟನೆಗೆ ಅವರಿಂದಾದ ನೆರವನ್ನು ಸಮಿತಿ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತದೆ.

ಇನ್ನು ಕೃತಜ್ಞತೆಯ ಎರಡು ಮಾತುಗಳು. ಈ ಸಂಪುಟದ ಪ್ರಕಟನೆಗೆ ಅನೇಕ ಕಡೆಯಿಂದ ಉದಾರವಾದ ನೆರವು ಬಂದಿದೆ. ಮೈಸೂರು ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಬಹದೂರ್ ಅವರೂ ಮೈಸೂರು ವಿಶ್ವವಿದ್ಯಾನಿಲಯದವರೂ ಈ ಸಂಪುಟದ ಪ್ರಕಟನೆಗೆ ಉದಾರ ಧನಸಹಾಯ ಮಾಡಿ ನಮ್ಮನ್ನು ಪ್ರೋತ್ಸಾಹಿಸಿದ್ದಾರೆ. ನಮ್ಮ ಪ್ರಾರ್ಥನೆಯನ್ನು

ಮನ್ನಿಸಿ ಪ್ರೊ. ಡಿ. ಎಲ್. ಎನ್. ಅವರ ಮೇಲಿನ ಗೌರವದಿಂದ ವಿದ್ವಾಂಸರು ಲೇಖನಗಳನ್ನು ಕಳುಹಿಸಿಕೊಟ್ಟಿದ್ದಾರೆ. ನಾವು ಕೊಟ್ಟ ತೊಂದರೆಗಳನ್ನು ಸಹಿಸಿಕೊಂಡು, ಗ್ರಂಥವನ್ನು ಸರ್ವಾಂಗ ಸುಂದರವಾಗಿ ಮುದ್ರಿಸಿಕೊಟ್ಟಿರುವ ಮೈಸೂರಿನ ವೆಸ್ಲಿ ಪ್ರೆಸ್ಸಿನ ಅಧಿಕಾರಿಗಳ ದಕ್ಷತೆಯನ್ನು ಎಷ್ಟು ಹೊಗಳಿದರೂ ಸ್ವಲ್ಪವೇ. ಈ ಕಾರ್ಯ ಮೊದಲಾದಂದಿನಿಂದ ಅದನ್ನು ಎಲ್ಲ ಮಜಲುಗಳಲ್ಲಿಯೂ ರೂಪಿಸಿ, ಇದಕ್ಕಾಗಿ ಕೆಲಸಮಾಡಿರುವವರು ಶ್ರೀ ಎನ್. ಬಸವಾರಾಧ್ಯರು. ಈ ಸಂಪುಟದ ಪ್ರಕಟನಕಾರ್ಯದಲ್ಲಿ ವಿಶೇಷವಾಗಿ ನೆರವು ನೀಡಿರುವ ಪ್ರೊ. ಎಚ್. ಎಂ. ಶಂಕರನಾರಾಯಣರಾಯರಿಗೆ ಸಮಿತಿ ಕೃತಜ್ಞತೆಯನ್ನು ಸಲ್ಲಿಸುತ್ತದೆ. ಪ್ರೊ. ತೀ. ನಂ. ಶ್ರೀ ಅವರಿಗೆ ಅಚ್ಚಿನ ಪುಟಗಳನ್ನು ತಿದ್ದುವುದರಲ್ಲಿ ಡಾ. ಜಿ. ವರದರಾಜರಾಯರು ನೆರವಾಗಿದ್ದಾರೆ. ಹೀಗೆ ಈ ಕಾರ್ಯದಲ್ಲಿ ನಮಗೆ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಸಹಾಯಮಾಡಿದ ಎಲ್ಲ ಮಹನೀಯರಿಗೂ ಸಂಸ್ಥೆಗಳಿಗೂ ಹೃತ್ಪೂರ್ವಕವಾದ ವಂದನೆಗಳು.

ಪ್ರತಿಭೆ, ಪಾಂಡಿತ್ಯ, ರಸಿಕತೆಗಳಿಂದ ಕನ್ನಡ ವಿದ್ವತ್ ಪ್ರಪಂಚವನ್ನು ಬೆಳಗುತ್ತಿರುವ ಪ್ರೊ. ಡಿ. ಎಲ್. ನರಸಿಂಹಾಚಾರ್ಯರು ಅರವತ್ತು ವರ್ಷಗಳ ಸಾರ್ಥಕವಾದ ಬದುಕನ್ನು ನಡೆಸಿದ್ದಾರೆ. ಈ ಶುಭಸಂದರ್ಭದಲ್ಲಿ ಅವರಿಗೆ ಕನ್ನಡ ಜನತೆಯ ಪರವಾಗಿ ಅರ್ಪಿಸುತ್ತಿರುವ ಈ ಸಂಪುಟವನ್ನು ಆಚಾರ್ಯರು ಸ್ವೀಕರಿಸಿ ಅದರ ಮೂಲಕ ನಮಗೆ ಸಂತೋಷವನ್ನುಂಟು ಮಾಡಲಿ. ಶ್ರೀಯುತರು ಬಹುಕಾಲ ನಮ್ಮೊಡನಿದ್ದು ತಮ್ಮ ಕೃತಿಗಳಿಂದ ಕನ್ನಡ ಸಾರಸ್ವತ ಪ್ರಪಂಚವನ್ನು ಬೆಳೆಸಲು, ಕಿರಿಯರಿಗೆ ಮಾರ್ಗದರ್ಶನ ಮಾಡಿಸಲು ಭಗವಂತನು ಅವರಿಗೆ ಸಕಲ ಸನ್ಮಂಗಳಗಳನ್ನೂ ಆಯುರಾರೋಗ್ಯಗಳನ್ನೂ ಕೊಡಲೆಂದು ಪ್ರಾರ್ಥಿಸುತ್ತೇವೆ.

ತಾ. 3-12-66 — ಟಿ. ಪಿ. ಕೃಷ್ಣಾಚಾರ್
ತುಮಕೂರು — ಸಮಿತಿಯ ಪರವಾಗಿ

# ವಿಷಯಸೂಚಿಕೆ

| ಲೇಖನ | | | ಪುಟ |
|---|---|---|---|
| ಅರಿಕೆ | .... | .... | v |
| ಪರಿಚಯ—ಟಿ. ಪಿ. ಕೃಷ್ಣಾಚಾರ್ | .... | .... | ix |
| ಡಿ. ಎಲ್. ಎನ್.—ನಂ. ಶಿವರಾಮಶಾಸ್ತ್ರಿ | .... | .... | xii |
| ಶ್ರೀ ಆಚಾರ್ಯರೊಡನೆ—ದೇ. ಜವರೇಗೌಡ | .... | .... | xv |
| ಪ್ರಗಾಥ—ಎಸ್. ಅನಂತನಾರಾಯಣ | .... | .... | ೩ |
| ಸಾಹಿತ್ಯದಲ್ಲಿ ಔಚಿತ್ಯ—ಕೆ. ಆರ್. ಉಡುಪ | .... | .... | ೧೬ |
| ವಾಸೀಚಂದನಕಲ್ಪತ್ವ—ಆದಿನಾಥ ನೇಮಿನಾಥ ಉಪಾಧ್ಯೆ | .... | .... | ೨೪ |
| ಪ್ರಾಚೀನ ಭಾರತದಲ್ಲಿ ನೀರಾವರಿ—ಎಚ್. ಸಿ. ಕಪಿನೀಪತಿ ಭಟ್ಟ | | .... | ೨೭ |
| ಕಾವ್ಯದಲ್ಲಿ ಚಿತ್ರಕಲೆ—ಡಿ. ಎಸ್. ಕರ್ಕಿ | .... | .... | ೩೭ |
| ವಡ್ಡಾರಾಧನೆಕಾರನ ಕಾಲ, ದೇಶ—ಕೆ. ಜಿ. ಕುಂದಣಗಾರ | .... | .... | ೪೩ |
| ಅಜಿತಸೇನನ 'ಅಲಂಕಾರಚಿಂತಾಮಣಿ'—ಕೆ. ಕೃಷ್ಣಮೂರ್ತಿ | .... | .... | ೪೮ |
| ರಾಜಕಾರಣಪಟು ಶ್ರೀನಿವಾಸಶಾಸ್ತ್ರಿಗಳವರು—ಎಂ. ವಿ. ಕೃಷ್ಣರಾವ್ | | .... | ೫೯ |
| ಹರಿಹರ ಕ್ಷೇತ್ರ—ಕೆ. ಎಂ. ಕೃಷ್ಣರಾವ್ | .... | .... | ೬೫ |
| ಮಂತ್ರಗೋಪ್ಯ—ವೀರಭದ್ರಪ್ಪ ಕೊಪ್ಪಳ | .... | .... | ೭೧ |
| ಬೆಳಗುತ್ತಿಯ ಸಿಂದರು—ಬಾ. ರಾ. ಗೋಪಾಲ್ | .... | .... | ೮೭ |
| ಕನ್ನಡ ಸಾಹಿತ್ಯದ ಹಾಗೂ ಭಾಷೆಯ ಹಳಮೆ—ಗೋವಿಂದ ಪೈ | .... | .... | ೯೪ |
| "ಇಟ್" ಧಾತುವನ್ನು ಕುರಿತು—ಎಂ. ಚಿದಾನಂದ ಮೂರ್ತಿ | .... | .... | ೧೦೪ |
| ಬಸವಣ್ಣನವರ ಭಾವಚಿತ್ರ—ಚೆನ್ನವೀರ ಕಣವಿ | .... | .... | ೧೧೩ |
| ಜಲಶಾಯಿ ವಿಷ್ಣು—ಶಂ. ಬಾ. ಜೋಷಿ | .... | .... | ೧೧೯ |
| ಎರಡು ವಚನಗಳು—ಎಚ್. ದೇವೀರಪ್ಪ | .... | .... | ೧೨೨ |
| ವೈಯಾಕರಣ ಚೋದ್ಯ—ಹೆಮ್ಮಿಗೆ ದೇಶಿಕಾಚಾರ್ಯ | .... | .... | ೧೨೫ |
| ಕುಮಾರಲೋಧ್ರಸಮರ—ಪಾಂಡುರಂಗರಾವ್ ದೇಸಾಯಿ | .... | .... | ೧೩೮ |
| ಕೆಲವು ಅಪೂರ್ವ ನಕ್ಷತ್ರನಾಮಗಳು—ಆರ್. ಎಲ್. ನರಸಿಂಹಯ್ಯ | | .... | ೧೪೪ |
| ನ್ಯಾಯಾಂಗದಲ್ಲಿ ದೇಶಭಾಷೆ—ಸೇವ ನಮಿರಾಜ ಮಲ್ಲ | .... | .... | ೧೪೭ |
| ಕಾಳಿದಾಸನ ಸಂದೇಶ—ಪು. ತಿ. ನರಸಿಂಹಾಚಾರ್ | .... | .... | ೧೫೨ |
| ತಾಯ್ನುಡಿಯ ಬೋಧನೆಯ ಗೊತ್ತುಗುರಿಗಳು—ಎಸ್. ಪರಮೇಶ್ವರಪ್ಪ | | .... | ೧೬೦ |
| ಪಂಪನು ಬೆಳಗಿರುವ ಲೌಕಿಕದ ಒಂದು ಚಿತ್ರ—ಎಸ್. ವಿ. ಪರಮೇಶ್ವರ ಭಟ್ಟ | | .... | ೧೬೬ |
| ಬಸವೇಶ್ವರನ ಜೀವಮಾನಾವಧಿ—ಎಲ್. ಬಸವರಾಜು | .... | .... | ೧೭೭ |
| ಗುರುಭಕ್ತಾಂಡಾರ ಚರಿತೆ—ಎನ್. ಬಸವಾರಾಧ್ಯ | .... | .... | ೧೯೬ |
| ಖಡಿಯಾ ವರ್ಣಸಮಾಮ್ನಾಯ—ಎಚ್. ಎಸ್. ಬಿಳಿಗಿರಿ | .... | .... | ೨೦೪ |
| ಮೃಗಯಾವಿಹಾರಿ ದುಷ್ಯಂತ—ದ. ರಾ. ಬೇಂದ್ರೆ | .... | .... | ೨೧೭ |
| ರತ್ನಾಕರನ ಬಾಯ್ದೆರೆದ ಬ್ರಹ್ಮಲೋಕ—ಜಿ. ಬ್ರಹ್ಮಪ್ಪ | .... | .... | ೨೨೧ |
| ಜೈನಕಥಾಸಾಹಿತ್ಯ—ಕೆ. ಭುಜಬಲಶಾಸ್ತ್ರಿ | .... | .... | ೨೩೦ |
| 'ಮೂರಿ'—ಒಂದು ವಿಚಾರ—ಎಂ. ಮರಿಯಪ್ಪ ಭಟ್ಟ | .... | .... | ೨೩೪ |

ಲೇಖನ ಪುಟ


ಶ್ರೀ ಕುವೆಂಪು ಅವರ ಕಾವ್ಯಕಾರಣೆಯರು—ಸಾ. ಶಿ. ಮರುಳಯ್ಯ .... ೨೩೮
ಭಾರತೀಯ ಆತ್ಮ ವಿಚಾರದಲ್ಲಿ ಸಮನ್ವಯದೃಷ್ಟಿ—ವಿರ್ಜಿ ಅಣ್ಣಾರಾಯ .... ೨೪೬
ವಿಂಡ್ಸರ್ ಊರಿನ ವಿನೋದಪ್ರಿಯ ಪತ್ನಿಯರು—ಎ. ಎನ್. ಮೂರ್ತಿರಾವ್ .... ೨೫೦
ಕಿಮಾತ್ಮಾನಂ ನ ಬುಧ್ಯಸೇ—ಎಸ್. ವಿ. ರಂಗಣ್ಣ .... .... ೨೬೨
ಪ್ರತ್ಯಭಿಜ್ಞಾದರ್ಶನ—ಎಸ್. ರಾಮಚಂದ್ರರಾವ್ .... .... ೨೭೧
ನಾಲಡಿಯಾರ್—ಗೊರೂರು ರಾಮಸ್ವಾಮಿ ಅಯ್ಯಂಗಾರ್ .... .... ೨೮೭
ಒರಿಸ್ಟಿಯ ನಾಟಕ ಮಂಜರಿಯಲ್ಲಿ ಈಸ್ಕೈಲಸ್ಸನ ವಿಚಾರ ಲಹರಿ—ಬಿ. ಎಸ್. ರುಕ್ಕಮ್ಮ .... ೨೯೪
ಉಲ್ಲಕಮ್ಮಿ—ಎನ್. ಲಕ್ಷ್ಮೀನಾರಾಯಣರಾವ್ .... .... ೩೦೦
ಕೆಲವು ಕಿರುಗತೆಗಳು—ಜಿ. ವರದರಾಜರಾವ್ .... .... ೩೦೩
ಪಾರಸಿಯಲ್ಲಿ ಸಂಸ್ಕೃತದ ಗುರುತುಗಳು—ಎಂ. ವಾಸುದೇವಮೂರ್ತಿ .... ೩೧೮
ಕುಮಾರವ್ಯಾಸನ ದೃಷ್ಟಿ—ದರ್ಶನದ ದಿವ್ಯದ್ವಾರ—ಎಸ್. ಎಂ. ವೃಷಭೇಂದ್ರಸ್ವಾಮಿ .... ೩೨೩
'ವೃಷಲ'—ಶಬ್ದಾರ್ಥವಿಚಾರ—ವಿದ್ವಾನ್ ಕೆ. ವೆಂಕಟರಾಯಾಚಾರ್ಯ .... ೩೨೮
ಶಂಕರಕವಿಯ ಪಂಚತಂತ್ರ—ಅ. ವೆಂಕಟಸುಬ್ಬಯ್ಯ, ಎಂ. ಚಿದಾನಂದ ಮೂರ್ತಿ .... ೩೩೬
ಕನ್ನಡದಲ್ಲಿ ವರ್ಣಪಲ್ಲಟದ ಕೆಲವಂಶಗಳು—ಟಿ. ವಿ. ವೆಂಕಟಾಚಲಶಾಸ್ತ್ರೀ .... ೩೪೬
ರಾಜಸ್ನೇಹ—ಕೆ. ವೆಂಕಟರಾಮಪ್ಪ .... .... ೩೫೯
ಕವಿಸಮಯ—ಜಿ. ಎಸ್. ಶಿವರುದ್ರಪ್ಪ .... .... ೩೬೫
ಸೌಂದರ್ಯಮೀಮಾಂಸೆ—ಬಿ. ಎಚ್. ಶ್ರೀಧರ .... .... ೩೭೬
ತಿರುಮಳಿಶೈಪ್ಪಿರಾನ್ ಮತ್ತು ಅವರ ಪ್ರಬನ್ಧಗಳು—ಆ. ನ. ಶ್ರೀನಿವಾಸೈಯಂಗಾರ್ .... ೩೮೧
ಸೈನಿಕರು ಹಾಡಿದ ಶಾಂತಿಗೀತೆ—ಜಿ. ಎಸ್. ಸಿದ್ಧಲಿಂಗಯ್ಯ .... .... ೩೯೯
'ಥಿಕ್ ಪ್ರಹಸನಮ್'—ಕೆ. ವಿ. ಸುಬ್ಬಣ್ಣ .... .... ೪೦೭
ಹಿಂದೂಸ್ಥಾನಿ ಸಂಗೀತದ ರೂಪರೇಖೆಗಳು—ಉ. ಕಾ. ಸುಬ್ಬರಾಯಾಚಾರ್ .... ೪೧೨
೧೯ ನೆಯ ಶತಕದಲ್ಲಿ ಕನ್ನಡ ಸಾಹಿತ್ಯಕ್ಕಾಗಿ ಕ್ರೈಸ್ತರ ಕಾರ್ಯ—ಹುಯಿಲುಗೋಳ ವರದರಾಜ ೪೨೨
ಸಂಗೀತದಲ್ಲಿ ಧ್ವನಿಯ ಆಲೋಕ—ಜಿ. ಹನುಮಂತರಾವ್ .... .... ೪೩೨
ಬಿಚ್ಚಟಿ (೪) ಸು—ಒಂದು ವಿಚಾರ—ಹಂಪ ನಾಗರಾಜಯ್ಯ .... .... ೪೫೭
"ಮುನ್ನೀರು ಮುಂತಾಗಿ"—ತೀ. ನಂ. ಶ್ರೀಕಂಠಯ್ಯ .... .... ೪೬೨
ಮಹಾದೇವ-ರವಿ ನರ್ತಕ—ಎಚ್. ಎಂ. ಶಂಕರನಾರಾಯಣರಾವ್ .... ೪೬೬
ಆಚಾರ್ಯ ಶ್ರೀ. ಡಿ. ಎಲ್. ಎನ್. ಅವರ ಕೃತಿಗಳು—ಹಂಪ. ನಾ .... ೪೭೪



ಪ್ರೊ. ಡಿ. ಎಲ್. ನರಸಿಂಹಾಚಾರ್, ಎಂ.ಎ.

# ಪರಿಚಯ

ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರನ್ನು ವಿಶ್ವವಿದ್ಯಾನಿಲಯದ ಸುತ್ತುಗಟ್ಟಿಗೂ ಮತ್ತು ಸಾಹಿತ್ಯ ಪ್ರಪಂಚಕ್ಕೂ ಪರಿಚಯ ಮಾಡಿಕೊಡಲು ತೊಡಗುವುದು ಹಾಸ್ಯಾಸ್ಪದವಾಗುತ್ತದೆ. ಬಹುಮುಖದ ವಿದ್ವತ್ತಿನಿಂದಲೂ ನಿರಂತರ ಸಾಹಿತ್ಯಾಭ್ಯಾಸ ಚಿಂತನೆಗಳಿಂದಲೂ ಅವರು ತಮ್ಮದೇ ಆದ ಸ್ಥಾನವನ್ನು ಪಡೆದುಕೊಂಡಿದ್ದಾರೆ. 1930 ರ ಈಚಿನ 30-35 ವರ್ಷಗಳಲ್ಲಿ ಸಾವಿರಾರು ವಿದ್ಯಾರ್ಥಿಗಳು ಅವರಲ್ಲಿ ವ್ಯಾಸಂಗ ಮಾಡಿರುತ್ತಾರೆ. ಅಂತಹವರಲ್ಲಿ ಹಲವರನ್ನು ಇಂದಿನ ವಿಶ್ವವಿದ್ಯಾನಿಲಯಗಳ ಪ್ರಾಧ್ಯಾಪಕರಾದಿ ಅಧಿಕಾರ ವರ್ಗಗಳಲ್ಲಿ ಕಾಣಬಹುದು. ಇವರೆಲ್ಲರಿಗೂ ನರಸಿಂಹಾಚಾರ್ಯರು ಗುರುಸ್ಥಾನದಲ್ಲಿದ್ದು ಪೂಜನೀಯರಾಗಿರುತ್ತಾರೆ.

ನಾನು ನರಸಿಂಹಾಚಾರ್ಯರನ್ನು ಮೊದಲು ಕಂಡು ಪರಿಚಯ ಮಾಡಿಕೊಂಡದ್ದು 1919 ರ ಸುಮಾರಿಗೆ. ಆಗ ಅವರು ತುಮಕೂರಿನ ಎ. ವಿ. ಸ್ಕೂಲಿನಲ್ಲಿ ಕೊನೆಯ ತರಗತಿಯಲ್ಲಿ ಓದುತ್ತಿದ್ದರು. ಅದಕ್ಕೆ ಮುಂಚೆ ಪ್ರಾಥಮಿಕ ಮತ್ತು ಎ. ವಿ. ಸ್ಕೂಲುಗಳ ಇತರ ತರಗತಿಗಳ ವ್ಯಾಸಂಗವನ್ನು ಪಾವುಗಡ ಮತ್ತು ಸಿರಾ ಪಾಠಶಾಲೆಗಳಲ್ಲಿ ಓದಿದ್ದರು. ನಾನು ಅವರಿಗಿಂತ ಒಂದು ವರ್ಷ ಮುಂದೆ ಎಂದರೆ ಹೈಸ್ಕೂಲಿನ ಮೊದಲನೆಯ ತರಗತಿಯಲ್ಲಿದ್ದೆ. ನಮ್ಮಿಬ್ಬರ ಮನೆಗಳು ತುಮಕೂರಿನ ಹಳೆಯ ಊರಿನ ಒಂದು ಭಾಗದಲ್ಲಿದ್ದುವು. ಅವರು ಹೈಸ್ಕೂಲಿಗೆ ಬಂದ ಮೇಲೆ ನಮ್ಮ ಗೆಳೆತನ ಹೆಚ್ಚಿತು. ಆಟದ ಮೈದಾನದಲ್ಲಿ ಅವರ ಸಹವಾಸ ಲಭ್ಯವಾಯಿತು. ಅವರು ಫುಟ್‌ಬಾಲ್ ಆಟದಲ್ಲಿ ಒಳ್ಳೆಯ ಆಟಗಾರರಾಗಿದ್ದರು. ರೈಟ್‌ಔಟ್ (Right out) ಸ್ಥಾನದಲ್ಲಿ ಬಿರುಗಾಳಿಯಂತೆ ಓಡಿ ಚೆಂಡನ್ನು ಒದ್ದುಕೊಂಡು ಹೋಗುತ್ತಿದ್ದುದು ಈಗಲೂ ನೆನಪಿಗೆ ಬರುತ್ತದೆ. ಸ್ಕೂಲಿನ ಆಟಗಳಲ್ಲದೆ ಮನೆಯ ಸುತ್ತಲ ಆವರಣದಲ್ಲಿ ಆಡುವ ಆಟಗಳಲ್ಲಿ ಅವರಿಗೆ ಆಸಕ್ತಿ ಇತ್ತು. ಅದೂ ಗೋಲಿ ಆಡುವುದರಲ್ಲಿ. ಗೋಲಿ ಆಟದಲ್ಲಿ ಅವರದು ಯಾವಾಗಲೂ ಮೇಲುಗೈ. ನಮ್ಮೆಲ್ಲರನ್ನೂ ಸೋಲಿಸಿ ಸೋತ ತಪ್ಪಿಗಾಗಿ ದೇಕುವಂತೆ (ಮಡಿಸಿದ ಮುಷ್ಟಿಯಿಂದ ಗೋಲಿಯನ್ನು ನೆಲದಮೇಲೆ ನೂಕುತ್ತಾ ಹೋಗುವುದು) ಮಾಡಿ ಕೈಯಲ್ಲಿ ರಕ್ತ ಚಿಮ್ಮುವವರೆಗೂ ಕಾಡಿಸುತ್ತಿದ್ದರು.

ಶ್ರೀಯುತರು ಹೈಸ್ಕೂಲು ವಿದ್ಯಾಭ್ಯಾಸವನ್ನು 1924 ರಲ್ಲಿ ಮುಗಿಸಿಕೊಂಡು ಮುಂದಿನ ವ್ಯಾಸಂಗಕ್ಕಾಗಿ ಬೆಂಗಳೂರು ಸೆಂಟ್ರಲ್ ಕಾಲೇಜಿಗೆ ಬಂದರು. ಕಾಲೇಜಿನ ಮೊದಲನೆಯ ವರ್ಷದ ಪರೀಕ್ಷೆಯಲ್ಲಿ ಹೆಚ್ಚು ಅಂಕಗಳನ್ನು ಪಡೆದು B. Sc. (Chemistry and Physics) ತರಗತಿಗಳಿಗೆ ಸೇರಲು ಅರ್ಹತೆ ಪಡೆದಾಗ್ಯೂ ಭಾಷಾಶಾಸ್ತ್ರಗಳ ಮೇಲಿನ ಅಭಿಮಾನದಿಂದ ಬಿ. ಎ. ಪರೀಕ್ಷೆಗೆ ಓದಿದರು. 1927 ರ ಬಿ. ಎ. ಪರೀಕ್ಷೆಯಲ್ಲಿ ಉತ್ತಮ ರೀತಿಯಲ್ಲಿ ತೇರ್ಗಡೆಯಾಗಿ ಕನ್ನಡ ಭಾಷೆಯಲ್ಲಿ ಪ್ರಥಮ ಸ್ಥಾನವನ್ನು ಪಡೆದರು. ಆ ವರ್ಷದ ವಿಶ್ವವಿದ್ಯಾನಿಲಯದ ಘಟಿಕೋತ್ಸವದಲ್ಲಿ ಸುವರ್ಣಪದಕ ಮತ್ತು ಬಹುಮಾನಗಳು ಇವರಿಗೆ ಬಂದುವು.

ಬಿ. ಎ. ಆದನಂತರ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಅದೇ ವರ್ಷ ಪ್ರಾರಂಭವಾದ ಕನ್ನಡ ಎಂ. ಎ. ತರಗತಿಗೆ ಸೇರಿ 1929 ರಲ್ಲಿ ಎಂ. ಎ. ಪದವೀಧರರಾದರು. ಎಂ. ಎ. ಪರೀಕ್ಷೆಯಲ್ಲಿ ಪ್ರಥಮವರ್ಗ ಮತ್ತು ಪ್ರಥಮಸ್ಥಾನವನ್ನು ಪಡೆದು ವೈಸ್‌ಛಾನ್ಸ್‌ಲರ್ ಪದಕವನ್ನು ಗಳಿಸಿದರು.

ಎಂ. ಎ. ತರಗತಿಯಲ್ಲಿ ಅವರು ಓದುತ್ತಿದ್ದಾಗ ಸ್ವಲ್ಪಕಾಲ ಬಿಟ್ಟುಹೋಗಿದ್ದ ನನ್ನ ಮತ್ತು ಅವರ ಒಡನಾಟ ಮತ್ತೆ ಕೂಡಿ ಬಂತು. ನಾನು ಆಗ ಭೂಗರ್ಭ ಇಲಾಖೆಯಲ್ಲಿ ಉದ್ಯೋಗ

ದಲ್ಲಿದ್ದು ಕಡಕೊಳದ ಬಳಿ ಇರುವ ತಳೂರು ಎಂಬಲ್ಲಿ ಒಂದು ಗಣಿಯ ಮೇಲ್ವಿಚಾರಕನಾಗಿದ್ದೆ. ಆ ಗಣಿಯ ಸಂಬಂಧವಾಗಿ ನಾನು ಆಗಾಗ್ಗೆ ಮೈಸೂರಿಗೆ ಹೋಗಿ ಬರಬೇಕಾಗಿದ್ದಿತು. ಹಾಗೆ ಹೋದಾಗಲೆಲ್ಲಾ ನರಸಿಂಹಾಚಾರ್ಯರ ಕೊಠಡಿಯಲ್ಲಿ ತಂಗುತ್ತಿದ್ದೆ. ಅವರು ಗಣಿತ ಶಾಖೆಯ ಉಪಪ್ರಾಧ್ಯಾಪಕರಾಗಿದ್ದ ಶ್ರೀ. ಸಪ್ತರ್ಷಿ ಅಯ್ಯರ್ ಅವರ ಮನೆಯ ಮುಂಭಾಗದ ಕೊಠಡಿಯಲ್ಲಿ ವಾಸವಾಗಿದ್ದು ಸಮೀಪದ ಹೋಟಲೊಂದರಲ್ಲಿ ಊಟ ಮಾಡಿಕೊಂಡಿದ್ದರು. ಅವರ ಜೊತೆಯಲ್ಲಿದ್ದಾಗ ಅವರ ವಿದ್ಯಾಭ್ಯಾಸದ ಕ್ರಮ ಪರಿಚಯವಾಗುತ್ತಿತ್ತು. ಒಂದೇ ಧಾಟಿಯಲ್ಲಿ ಪದ್ಯಗಳನ್ನೋದುತ್ತಿದ್ದರು ಅದು ಕನ್ನಡವಾಗಲಿ, ಸಂಸ್ಕೃತವಾಗಲಿ, ತೆಲುಗಾಗಲಿ ಒಂದೇ ರಾಗದಲ್ಲಿ ಓದುತ್ತಿದ್ದುದನ್ನು ನೋಡಿ "ಏನಯ್ಯಾ, ಎಲ್ಲವನ್ನೂ ಒಂದೇ ರಾಗದಲ್ಲಿ ಓದುತ್ತಿದ್ದೀಯೆ" ಎಂದು ಕೇಳಿದರೆ "ಬಿಡೋ, ಓದಿದರಾಯ್ತು, ರಾಗವೇನು ಮುಖ್ಯ" ಎಂದು ಉತ್ತರಿಸುತ್ತಿದ್ದರು. ಆಗಾಗ್ಗೆ ನಾನು ಕೆಲಸ ಮಾಡಿಸುತ್ತಿದ್ದ ಹಳ್ಳಿಗೂ ಬರುತ್ತಿದ್ದರು.

1929 ನೆಯ ವರ್ಷದ ಎಂ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದ ಮೇಲೆ ನರಸಿಂಹಾಚಾರ್ಯರಿಗೆ ಗೌರ್ನಮೆಂಟ್ ಓರಿಯೆಂಟಲ್ ಲೈಬ್ರರಿಯಲ್ಲಿ ಪಂಡಿತರ ಕೆಲಸ ಮೊದಲು ಸಿಕ್ಕಿತು. ಅವರು ಮೊದಲನೆಯ ದಿವಸ ಕೆಲಸಕ್ಕೆ ಹೋದಾಗ ನಾನೂ ಮೈಸೂರಿನಲ್ಲಿದ್ದೆ. ನಸ್ಯದ ಕಂದು (Snuff brown) ಬಣ್ಣದ ಉಲ್ಲನ್ ಸೂಟ್ (Woolen suit) ಧರಿಸಿ ಟೈ ಕಟ್ಟಿಕೊಂಡು ಅಗಲವಾದ ಜರತಾರಿ ಅಂಚಿದ್ದ ರುಮಾಲನ್ನು ಹಾಕಿಕೊಂಡು ಹೊರಟರು. ನಾನೇ ಅವರ ರುಮಾಲನ್ನು ಕಟ್ಟಿಕೊಟ್ಟುದಾಗಿ ಜ್ಞಾಪಕ. ಅನಂತರ ಕೆಲವು ಕಾಲ ಅವರು ಸೂಟು ಹಾಕಿಕೊಂಡೇ ಹೋಗುತ್ತಿದ್ದರು. ಕ್ರಮೇಣ ಷರಾಯಿ ಹೋಗಿ ಕಚ್ಚೆ ಪಂಚೆಗೆ ಎಡೆಕೊಟ್ಟಿತು. ಓಪನ್‌ಕಾಲರ್ ಕೋಟು ಟೈ ಸ್ಥಾನದಲ್ಲಿ ಕ್ಲೋಸ್ ಕಾಲರ್ ಕೋಟು ಬಂತು. ರುಮಾಲಂತೂ ಕೊನೆಯವರೆಗೂ ಇತ್ತು. ಈಗಲೂ ಅವರು ಅದನ್ನು ಆಗಾಗ್ಗೆ ಹಾಕಿಕೊಳ್ಳುತ್ತಾರೆ.

ಅವರು ಕೆಲವು ಕಾಲ ಓರಿಯೆಂಟಲ್ ಲೈಬ್ರರಿಯಲ್ಲಿದ್ದು ಅಲ್ಲಿಂದ ಮಹಾರಾಜಾ ಕಾಲೇಜಿಗೆ ಅಧ್ಯಾಪಕರಾಗಿ ನೇಮಕಗೊಂಡು ಬಂದರು. ಮಹಾರಾಜಾ ಕಾಲೇಜಿನಲ್ಲಿ ಹಲವು ವರ್ಷಗಳಿದ್ದು ಬೆಂಗಳೂರು ಸೆಂಟ್ರಲ್ ಕಾಲೇಜಿಗೆ ಉಪಪ್ರಾಧ್ಯಾಪಕರಾಗಿ ಹೋಗಿ ಕೆಲವು ವರ್ಷಗಳು ಅಲ್ಲಿದ್ದರು. ಪುನಃ ಮೈಸೂರು ಮಹಾರಾಜಾ ಕಾಲೇಜಿಗೆ ಬಂದು ಅಲ್ಲಿಂದ ಕನ್ನಡ—ಕನ್ನಡ ಕೋಶದ ಕಾರ್ಯಕ್ಕೆ ಸಂಪಾದಕರಾಗಿ ನೇಮಕಗೊಂಡು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕೆಲವು ವರ್ಷಗಳು ಕೆಲಸಮಾಡಿದರು. ಇದಾದ ಮೇಲೆ ಕನ್ನಡ ಪ್ರಾಧ್ಯಾಪಕರಾಗಿ ಮಹಾರಾಜಾ ಕಾಲೇಜಿಗೆ ವರ್ಗವಾಗಿ ಬಂದರು. ಕೆಲಸದಿಂದ ನಿವೃತ್ತರಾಗುವವರೆಗೂ ಮಹಾರಾಜಾ ಕಾಲೇಜಿನಲ್ಲಿಯೂ ಮತ್ತು ಸ್ನಾತಕೋತ್ತರಭಾಗದ ಸಹಪ್ರಾಧ್ಯಾಪಕರಾಗಿ ಮಾನಸಗಂಗೋತ್ರಿಯಲ್ಲಿಯೂ ಕೆಲಸಮಾಡಿದರು. 1962 ರಲ್ಲಿ ನಿವೃತ್ತರಾದ ಮೇಲೆ U.G.C. Fellowship ಅಂಗವಾಗಿ ಪ್ರಾಧ್ಯಾಪಕರಾಗಿ ಸಂಶೋಧನೆ ಕೆಲಸಮಾಡುತ್ತಿರುತ್ತಾರೆ.

ನರಸಿಂಹಾಚಾರ್ಯರ ಪಾಂಡಿತ್ಯದ ವಿಷಯದಲ್ಲಿ ದೇಶಾದ್ಯಂತ ಮೆಚ್ಚುಗೆ ಇದೆ. ಅವರು ಬೀದರಿನಲ್ಲಿ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಸಮ್ಮೇಳನಾಧ್ಯಕ್ಷರಾಗಿ ಚುನಾಯಿತರಾದ ಕಾಲದಲ್ಲಿ ಅವರ ಮಿತ್ರರೂ ಸಹೋದ್ಯೋಗಿಗಳೂ ಮತ್ತು ಶಿಷ್ಯರೂ ಅರ್ಪಿಸಿದ "ಜ್ಞಾನೋಪಾಸಕ" ಎಂಬ ಗ್ರಂಥದಲ್ಲಿ ನರಸಿಂಹಾಚಾರ್ಯರ ವಿದ್ವತ್ತು ಮತ್ತು ಪ್ರತಿಭೆ ಸರ್ವತೋಮುಖವಾಗಿರುವುದು ವ್ಯಕ್ತಪಡುತ್ತದೆ. ಅವರು ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಹಲವಾರು ಲೇಖನಗಳನ್ನು ಬರೆದಿದ್ದಾರೆ. ನೂರಾರು ಕಡೆ ಉಪನ್ಯಾಸ ಮಾಡಿದ್ದಾರೆ. ಈ ಲೇಖನಗಳನ್ನು ಸಂಗ್ರಹಿಸಿ ಒಂದೆಡೆ ಅಚ್ಚು ಮಾಡಿದರೆ ಕೆಲವು ಸಂಪುಟಗಳಾಗುತ್ತವೆ. "ಡಿ. ಎಲ್. ಎನ್. ಎಂದರೆ ಪಾಂಡಿತ್ಯ, ಪಾಂಡಿತ್ಯ ಎಂದರೆ ಡಿ. ಎಲ್. ಎನ್." ಎಂದು ದಿ. ಟಿ. ಎನ್. ಶ್ರೀಕಂಠಯ್ಯನವರೇ ಹೇಳಿದ ಮೇಲೆ ನರಸಿಂಹಾಚಾರ್ಯರ ವಿದ್ವತ್ತಿನ ವಿಷಯದಲ್ಲಿ ಹೆಚ್ಚು ಹೇಳಬೇಕಾದುದೇನೂ ಇರುವುದಿಲ್ಲ.

ಇನ್ನು ವ್ಯಕ್ತಿಯ ವಿಷಯದಲ್ಲಿ ಕೆಲವೇ ಸಂಗತಿಗಳನ್ನು ಹೇಳಬಯಸುತ್ತೇನೆ. ನರಸಿಂಹಾ

ಚಾರ್ಯರು ಬಹಳ ಮೇಧಾವಿಗಳು, ಸರಸಿಗಳು, ಅಭಿಮಾನಶಾಲಿಗಳು. ಈ ಅಭಿಮಾನದ ಅನುಭವ ಬೆನ್ನಿನ ಮೇಲೆ ಗುದ್ದಿಸಿಕೊಂಡಿರುವ ಮೂಲಕ ಅನೇಕರಿಗೆ ಲಭಿಸಿರುತ್ತದೆ. ಅವರದು ಅತ್ಯಂತ ಆತ್ಮೀಯವಾದ ನಡವಳಿಕೆ. ತೋರಿಕೆಯೆಂಬುದು ಲೇಶವೂ ಅವರಲ್ಲಿಲ್ಲ. ಇದ್ದುದನ್ನು ಇದ್ದ ಹಾಗೆ ಹೇಳುವ ಸ್ವಭಾವ ಅವರದು. ಮೊದಮೊದಲಿಗೆ ಸ್ವಲ್ಪ ಒರಟಾಗಿ ಕಂಡುಬಂದರೂ ತಕ್ಷಣವೇ ಅವರ ಆತ್ಮೀಯತೆ ನಗುರೂಪದಲ್ಲಿ ಹೊರಬೀಳುತ್ತದೆ. ನನಗಂತೂ ಇವರ ಆದರಾಭಿಮಾನ, ಪ್ರೀತಿಗಳು ಕುಂದದೆ ಇದುವರೆಗೂ ಲಭ್ಯವಾಗಿವೆ. ಅವು ಮುಂದೆಯೂ ಇದೇ ರೀತಿಯಲ್ಲಿ ಮುಂದುವರಿಯಲೆಂದು ಆಶಿಸುತ್ತೇನೆ.

ಮಕ್ಕಳೆಂದರೆ ನರಸಿಂಹಾಚಾರ್ಯರಿಗೆ ಬಹಳ ಮಮತೆ. ಅವರು ಮಕ್ಕಳಿರುವ ಸ್ನೇಹಿತರ ಅಥವಾ ಬಂಧು ಬಳಗದವರ ಮನೆಗಳಿಗೆ ಹೋಗುವಾಗ ಹಣ್ಣನ್ನೂ, ಸಿಹಿಯನ್ನೂ (ಪೆಪ್ಪರ್ ಮೆಂಟು) ತೆಗೆದುಕೊಂಡು ಹೋಗುವುದು ವಾಡಿಕೆ. ಮಕ್ಕಳನ್ನು ಕರೆದು ಸಮೀಪದಲ್ಲಿ ಕೂಡಿಸಿಕೊಂಡು ತಂದಿರುವ ಸಿಹಿಯನ್ನು ಕೊಟ್ಟು ಆನಂದಪಡುತ್ತಾರೆ. ಒಂದುಸಲ ನಾನು ಬೆಂಗಳೂರಿನಲ್ಲಿದ್ದಾಗ ನರಸಿಂಹಾಚಾರ್ಯರು ಮನೆಗೆ ಬಂದರು. ಆಗ ನನ್ನ ಮಗಳು, ಮೊಮ್ಮಗ ಇದ್ದರು. ನನ್ನ ಮೊಮ್ಮಗನನ್ನು ತೊಡೆಯ ಮೇಲೆ ಕೂಡಿಸಿಕೊಂಡು ನನ್ನ ಮಗಳ ಕಡೆ ತಿರುಗಿ "It is this fellow that has made your father grand" ಎಂದು ಹೇಳಿದರು. ಸೂಕ್ಷ್ಮವಾದ ವಿಷಯಗಳನ್ನು ಅವರದೇ ಆದ ರೀತಿಯಲ್ಲಿ ಹೇಳುವುದು ನರಸಿಂಹಾಚಾರ್ಯರ ವೈಶಿಷ್ಟ್ಯ.

ಒಂದು ಸಲ ಮಾತನಾಡುತ್ತಿದ್ದಾಗ "ತಾಜ Comes from ತೇಜಸ್" ಎಂದರು. "ಹೌದೆ" ಎಂದು ಕೇಳಿದ್ದಕ್ಕೆ "ಸುಮ್ಮನೆ ಅಂದೆ ಕಣೊ" ಎಂದು ಉತ್ತರಕೊಟ್ಟರು. ಮಗುದೊಂದು ಸಲ "ಇದೇನು Ultra basic Rock ಓ" ಎಂದು ಹೊಳೆನರಸಿಪುರದ ಸಮೀಪದಲ್ಲಿರುವ ಕಲ್ನಾರಿನ ಗಣಿ ಬಳಿ ಕೇಳಿದರು. ಹಿಂದೆ ಮೈಸೂರು ಬಳಿ ಇದ್ದ ಗಣಿಯಲ್ಲಿ ಇಂತಹ ಕಲ್ಲು ಇದ್ದುದನ್ನು ಜ್ಞಾಪಿಸಿಕೊಂಡು ಹಲವು ವರ್ಷಗಳ ಮೇಲೆ ಈ ರೀತಿ ಕೇಳಿದರು. ಅವರ ಜ್ಞಾಪಕಶಕ್ತಿ ಅದ್ಭುತ. ಬುದ್ಧಿ ಯಾವಾಗಲೂ ಚುರುಕು.

ನರಸಿಂಹಚಾರ್ಯರು ಗೋಲಿ ಆಟದಲ್ಲಿ ಪ್ರವೀಣರಾಗಿದ್ದಾರೆಂದು ಹಿಂದೆ ಹೇಳಿದೆ. ಇದು ಮೂವತ್ತು ವರ್ಷಗಳ ನಂತರವೂ ನಿದರ್ಶನಕ್ಕೆ ಬಂತು. 1959 ರ ಸುಮಾರಿನಲ್ಲಿ ಟಿ. ಎನ್. ಶ್ರೀಕಂಠಯ್ಯನವರು ಬೆಂಗಳೂರಿನ ನಮ್ಮ ಮನೆಗೆ ಬಂದಿದ್ದರು. ಆಗ ನರಸಿಂಹಾಚಾರ್ಯರೂ ಬಂದರು. ಹುಡುಗರು ಮನೆಯ ಬಯಲಿನಲ್ಲಿ ಗೋಲಿ ಆಡುತ್ತಿದ್ದರು. ಆಗ ನರಸಿಂಹಾಚಾರ್ಯರು ಗೋಲಿಗಳನ್ನು ತೆಗೆದುಕೊಂಡು ಶ್ರೀಕಂಠಯ್ಯನವರಿಗೆ "ನೀವು ಹೊಡೀತೀರೇನ್ರಿ, ನೋಡೋಣ" ಎಂದು ಹೇಳಿ, ಅವರು ಸುಮ್ಮನಿದ್ದಾಗ 8-10 ಅಡಿಗಳ ದೂರದಲ್ಲಿದ್ದ ಗೋಲಿಯೊಂದಕ್ಕೆ ಗುರಿ ಇಟ್ಟು ಮೊದಲನೆ ಬಾರಿಗೆ ಹೊಡೆದು "ನೋಡಿದಿರೊ" ಎಂದರು.

ಇವಲ್ಲದೆ ಇನ್ನೂ ಅನೇಕ ವಿಷಯಗಳು ನೆನಪಿಗೆ ಬರುತ್ತವೆ. ನಾನು ಉದ್ಯೋಗದಲ್ಲಿದ್ದಾಗ ಇಲಾಖೆಯ ಕೆಲಸದ ಮೇಲೆ ಹೊರಗಡೆ ವಾಸಿಸುತ್ತಿದ್ದಾಗ ಕೆಲವು ವೇಳೆ ಸ್ನೇಹಿತರೊಂದಿಗೆ ಇವರು ಬಂದು ನನ್ನ ಬೇಸರವನ್ನು ಕಳೆದಿದ್ದಾರೆ.

ನರಸಿಂಹಾಚಾರ್ಯರು ನಿವೃತ್ತರಾಗಿದ್ದಾರಾದರೂ ಇನ್ನೂ ಕೆಲಸದಲ್ಲಿ ಆಸಕ್ತರಾಗಿ ಸಂಶೋಧನೆ ನಡೆಸುತ್ತಿದ್ದಾರೆ. ಅವರಿಗೆ ಈಗ ಅರವತ್ತು ವರ್ಷಗಳು ತುಂಬಿ ಅರವತ್ತೊಂದನೆಯ ವರ್ಷಕ್ಕೆ ಕಾಲಿಟ್ಟಿದ್ದಾರೆ. ದೇವರು ಅವರಿಗೆ ಆಯುಸ್ಸು ಆರೋಗ್ಯಾದಿಗಳನ್ನು ಅನಂತವಾಗಿ ದಯಪಾಲಿಸಿ ಹಲವು ಕಾಲ ಕನ್ನಡ ಸಾಹಿತ್ಯಕ್ಕೆ ಅವರಿಂದ ಉಪಕಾರವಾಗಲಿ ಎಂಬುದೇ ದೇವರಲ್ಲಿ ನನ್ನ ಪ್ರಾರ್ಥನೆ. ಹಾಗೆಯೆ ಎಲ್ಲರ ಪ್ರಾರ್ಥನೆಯೂ ಎನ್ನಬಹುದು.

**ಟಿ. ಪಿ. ಕೃಷ್ಣಾಚಾರ್**

# ಡಿ. ಎಲ್. ಎನ್.

ಸುಮಾರು ನಲವತ್ತು ವರ್ಷಗಳ ಹಿಂದಿನ ಮಾತು. ವಿಜ್ಞಾನದಲ್ಲಿ ಬಿ.ಎ. ಪ್ಯಾಸುಮಾಡಿ ಆಗ ತಾನೇ ಮಹಾರಾಜಾಕಾಲೇಜಿನಲ್ಲಿ ಆರಂಭವಾಗಿದ್ದ ಕನ್ನಡ ಎಂ.ಎ. ತರಗತಿಗೆ ಬಂದು ಸೇರಿದ್ದರು ಶ್ರೀ ಡಿ. ಎಲ್. ನರಸಿಂಹಾಚಾರ್ಯರು. ಅವರ ಪರಿಚಯ ಹೇಗಾಯಿತು ಎಂದು ನನಗೆ ನೆನಪಿಲ್ಲ. ಅದು ಚಕ್ಷೂರಾಗವಲ್ಲದಿದ್ದರೂ, ಮೆಚ್ಚುಗೆಯಿಂದ ಮೊದಲಾಗಿ ಕ್ರಮೇಣ ಗಾಢವಾದ ಸ್ನೇಹಕ್ಕೆ ತಿರುಗಿತು. ಒಂದ ಸ್ವಲ್ಪ ದಿನದಲ್ಲೇ ಅವರು ತಮ್ಮ ಕನ್ನಡದ ಜ್ಞಾನ, ಅದರ ವಿಸ್ತಾರ ಇವುಗಳಿಂದ ಅಧ್ಯಾಪಕವರ್ಗವನ್ನೂ ಸಹಪಾಠಿಗಳನ್ನೂ ಮಿತ್ರರನ್ನೂ ಚಕಿತಗೊಳಿಸಿದ್ದರು. ಅವರ ಗ್ರಹಣಶಕ್ತಿ ತೀಕ್ಷ್ಣ, ಧಾರಣಶಕ್ತಿಯಂತೂ ಅಸಾಧಾರಣ. ಉದಾಹರಣೆಗೆ ಒಂದು ಸಾರಿ ನನ್ನ ಮುಂದೆ "ಶ್ರೀರಾಮಪಟ್ಟಾಭಿಷೇಕ"ದ ಪದ್ಯಗಳನ್ನು ಪುಸ್ತಕದ ಸಹಾಯವಿಲ್ಲದೆ ಒಂದರ ಮೇಲೆ ಒಂದರಂತೆ ಅನಾಯಾಸವಾಗಿ ಸ್ವಲ್ಪ ಹೊತ್ತು ಪಠಿಸಿ ತೋರಿಸಿದ್ದರು. ಅದಕ್ಕೆ ತಕ್ಕಂತೆ ಕನ್ನಡದಲ್ಲಿ ಶ್ರದ್ಧೆ, ಅದಕ್ಕಾಗಿ ಸತತ ವ್ಯವಸಾಯ. ಕನ್ನಡ ವಿದ್ವಾಂಸರಾದ ತಿರುವಳ್ಳೂರು ಶ್ರೀನಿವಾಸರಾಘವಾಚಾರ್ಯರ ಬಂಧುಗಳು ಇವರು. ಅವರ ಪುಸ್ತಕ ಭಂಡಾರ ಇವರಿಗೆ ಹಸ್ತಗತ ವಾಗಿತ್ತು, ಕಂಠಗತವಾಗುತ್ತಿತ್ತು. ಈ ವಿದ್ಯಾರ್ಥಿ ತರ್ಣಕನಿಗೆ ಕನ್ನಡದಲ್ಲಿ ಬರೆದದ್ದೆಲ್ಲಾ—ಪದ್ಯ ವಾಗಲಿ ಗದ್ಯವಾಗಲಿ, ಹೊಸದಾಗಲಿ ಹಳೆಯದಾಗಲಿ, ಶಾಸನವಾಗಲಿ ತಾಳೆಗರಿಯಾಗಲಿ— ಎಲ್ಲವೂ ಸೇವೇ! ಈ ಹಸಿವೆಗೆ ತೃಪ್ತಿಯೇ ಕಾಣಲಿಲ್ಲ. ವಾತಾವರಣವೂ ಇದಕ್ಕೆ ಅನುಕೂಲ ವಾಗಿತ್ತು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಬಿ. ಎಂ. ಶ್ರೀಕಂಠಯ್ಯನವರು ಆಗತಾನೇ ಕನ್ನಡದ ರಥೋತ್ಸವಕ್ಕೆ ಕಂಕಣ ಕಟ್ಟಿ ನಿಂತಿದ್ದರು. ಅವರ ಕಾರ್ಯದಲ್ಲಿ ತಮ್ಮ ಸಹೋದ್ಯೋಗಿ ಗಳ ಜೊತೆಗೆ, ನರಸಿಂಹಾಚಾರ್ಯರಂಥ ಉತ್ಸಾಹಶಾಲಿಗಳೂ, ಶ್ರದ್ಧಾಳುಗಳೂ, ಕಾರ್ಯಶೀಲರೂ ಆದ ವಿದ್ಯಾರ್ಥಿಗಳು ಅವರಿಗೆ ದೊರೆತದ್ದು ಕನ್ನಡದ ಪುಣ್ಯ ಎಂದು ನಾನು ಭಾವಿಸುತ್ತೇನೆ.

ನರಸಿಂಹಾಚಾರ್ಯರು ಮೊದಲು ಕೆಲಸಕ್ಕೆ ಸೇರಿದ್ದು ಓರಿಯೆಂಟಲ್ ಲೈಬ್ರೆರಿಯಲ್ಲಿ, ಸೀನಿ ಯರ್ ಪಂಡಿತರಾಗಿ. ಅವರು ಎಂ. ಎ. ವಿಭಾಗದಲ್ಲಿ ವಿಶ್ವವಿದ್ಯಾನಿಲಯದಲ್ಲೇ ಪ್ರಥಮಸ್ಥಾನ ಗಳಿಸಿದ್ದರೂ ಕಾರಣಾಂತರದಿಂದ ಅವರು ಕೂಡಲೆ ಕನ್ನಡ ಅಧ್ಯಾಪಕರಾಗಲಿಲ್ಲ. ಇದು ಅವರಿಗೆ ಅನ್ಯಾಯವಾದಂತೆ ಆಗ ಕಂಡರೂ ಕೊನೆಗೆ ಕನ್ನಡಕ್ಕೆ ಮಹೋಪಕಾರವಾಗಿ ಪರಿಣಮಿಸಿತು. ಲೈಬ್ರೆರಿಯಲ್ಲಿದ್ದಾಗ ಡಿ. ಎಲ್. ಎನ್. ಅವರು ಅವಲೋಕಿಸದ ಕನ್ನಡ ಮಾತೃಕೆಗಳು ಯಾವುವೂ ಇಲ್ಲನೆಂದೇ ನನ್ನ ಅಭಿಪ್ರಾಯ. ಆಗ ಅವರು ಅಲ್ಲಿ ಗಳಿಸಿದ ಅದ್ವಿತೀಯ ಪರಿಚಯ, ಪಾಂಡಿತ್ಯ "ಕನ್ನಡಭಾರತ" ವನ್ನು ಸಂಪಾದಿಸುವುದರಲ್ಲಿ ವೆಂಕಣ್ಣಯ್ಯನವರಿಗೆ ಹೆಚ್ಚು ಸಹಾಯವಾಗು ವಂತೆ ಮಾಡಿತು; ನಮಗೆ "ವೊಡ್ಡಾರಾಧನೆ" ಯಂಥ ಅಪೂರ್ವ ಗ್ರಂಥವನ್ನು ಕೊಟ್ಟಿತು; ಮುಂದೆ "ಕನ್ನಡ ಗ್ರಂಥ ಸಂಪಾದನೆ"ಯಂಥ ವಿದ್ವತ್ಕೃತಿಯು ಸಾಧ್ಯವಾಗುವಂತೆ ಮಾಡಿತು; ಅವರು ಅಧ್ಯಾಪಕರಾದಾಗ ಕನ್ನಡ ಸಾಹಿತ್ಯ ಚರಿತ್ರೆಯ ಅವರ ಈ ಪೂರ್ಣಪರಿಚಯ ವಿದ್ಯಾರ್ಥಿಗಳಿಗೆ ಒಂದು ವರವಾಯಿತು. (ಇದನ್ನು ಪುಸ್ತಕರೂಪವಾಗಿ ಅವರು ಆಗಲೇ ಅಚ್ಚು ಮಾಡದೆ ಅನ್ಯಾಯಮಾಡಿದರೆಂದು ನನಗನಿಸುತ್ತದೆ.) ನನ್ನ ಮಿತ್ರ ತೀ. ನಂ. ಶ್ರೀಕಂಠಯ್ಯ ನವರು ನನ್ನೊಂದಿಗೆ ಒಂದುಸಾರಿ ಹೇಳಿದ್ದರು, ಸುಮಾರು ಇಪ್ಪತ್ತೈದು ವರ್ಷಗಳ ಕೆಳಗೆ: "ನರಸಿಂಹಾಚಾರ್ಯರಿಗೆ ತಿಳಿದಿರುವಷ್ಟು ಕನ್ನಡದ ವಿಷಯ ನಮ್ಮಲ್ಲಿ ಯಾರಿಗೂ ಗೊತ್ತಿಲ್ಲ— ಇದಕ್ಕೆ ಹಿರಿಯರೂ ಹೊರತಲ್ಲ" ಎಂದು; ಹಾಗೆಯೇ ಈಚೆಗೆ ಕೆಲವು ವರ್ಷಗಳ ಹಿಂದೆ: "ನರಸಿಂಹಾಚಾರ್ಯರು ಪಾಠಹೇಳದ ಕನ್ನಡ ಎಂ. ಎ. ತರಗತಿಯನ್ನು ಊಹಿಸುವುದೂ ನನಗೆ ಕಷ್ಟವಾಗಿದೆ" ಎಂದು.

ನರಸಿಂಹಾಚಾರ್ಯರು ತೆಲುಗು ತಮಿಳುಗಳ ಜೊತೆಗೆ ಸಾಕಷ್ಟು ಸಂಸ್ಕೃತ ಪ್ರಾಕೃತಗಳ ಪರಿಚಯವನ್ನು ಮಾಡಿಕೊಂಡಿರುವುದರಿಂದಲೂ, ಕರ್ಣಾಟಕದ ಶಾಸನಸಾಹಿತ್ಯ, ಐತಿಹಾಸಿಕ ಸಾಹಿತ್ಯಗಳನ್ನೂ ಕೂಲಂಕಷವಾಗಿ ಅಧ್ಯಯನ ಮಾಡಿರುವುದರಿಂದಲೂ, ಅವರ ಸಂಶೋಧನೆಗಳಲ್ಲಿ ಒಂದು ಪೂರ್ಣತೆ ಕಾಣುತ್ತದೆ. ಅವರ ಬರೆವಣಿಗೆಯಲ್ಲಿ ಓರೆಕೋರೆಗಳಿಲ್ಲ—ಎಲ್ಲವೂ ಖಚಿತ, ನಿಷ್ಕೃಷ್ಟ, ನಿರ್ದುಷ್ಟ. ಜೊತೆಗೆ ದೃಷ್ಟಿಯಲ್ಲಿ ಬರಿಯ ಅಭಿಮಾನವಾಗಲೀ ಪಕ್ಷಪಾತವಾಗಲೀ ಕಾಣುವುದಿಲ್ಲ. ಮಾತೂ ಕೂಡ ಸರಳ, ಗಂಭೀರ, ನೇರ.

ಕನ್ನಡದ ಹೊರ ಪ್ರಭಾವಲಯದಲ್ಲಿ ಸಿಕ್ಕಿಕೊಂಡ ನಾನು ಅನೇಕ ವೇಳೆ ನನ್ನ ಕನ್ನಡ ಮಿತ್ರರೊಂದಿಗೆ ಬೆರೆತಿದ್ದೇನೆ, ವಾದಿಸಿದ್ದೇನೆ, ಸಲ್ಲದ ಅಭಿಮಾನದೆದುರು ಹೋರಾಡಿದ್ದೇನೆ. ಯಾರೂ ಪರಿಪೂರ್ಣರಲ್ಲ, ನರಸಿಂಹಾಚಾರ್ಯರೂ ಅಲ್ಲ, ಅವರು ಹಾಗೆ ಹೇಳಿಕೊಳ್ಳುವುದೂ ಇಲ್ಲ. ಎಷ್ಟೋ ಸಾರಿ ಅವರು ಸಂಶಯ ಬಂದಾಗ ನನ್ನೊಂದಿಗೆ ಚರ್ಚೆ ನಡೆಸಿದ್ದಾರೆ, ಸಲಹೆ ಪಡೆದಿದ್ದಾರೆ ಇಂಥ ಸಂದರ್ಭಗಳಲ್ಲಿ ನನಗೆ ಯಾವಾಗಲೂ ಕಾಣುತ್ತಿದ್ದುದು ಅವರ ಕುತೂಹಲ, ಜ್ಞಾನಪಿಪಾಸೆ, ದೃಷ್ಟಿವೈಶಾಲ್ಯ. ಅವರೊಂದು ಬಾರಿ "The oldest datable word in Kannada" ಎಂದು, ಒಂದು ಪಾಂಡಿತ್ಯಪೂರ್ಣವಾದ ಉಪನ್ಯಾಸವನ್ನು ಕೊಟ್ಟರು. ಅವರ ವಾದ ನಮಗೆ ಸಮ್ಮತವಾಗಲಿಲ್ಲ. ಅದನ್ನು ನಾವು "The oldest *debatable* word in Kannada" ಎಂದು ಲೇವಡಿಮಾಡಿದೆವು. ಆದರೂ ಅವರು ಅದನ್ನು ತಪ್ಪು ತಿಳಿದುಕೊಳ್ಳದೆ ನಕ್ಕುಬಿಟ್ಟರು. ನಾನು ಹೇಳುವುದೇನೆಂದರೆ—"The oldest debatable word" ವಿಷಯವಾಗಿಯಾದರೂ ನರಸಿಂಹಾಚಾರ್ಯರೇ ನಮಗೆ ಹೇಳಬೇಕಾಗಿದೆ. ಇನ್ನು ಯಾರಿಗೂ ಸದ್ಯದಲ್ಲಿ ಆ ಅಧಿಕಾರವಿಲ್ಲ. ಅವರು "ಕವಿಚರಿತೆಯ" ಆರ್. ನರಸಿಂಹಾಚಾರ್ಯರ ಸಂಪ್ರದಾಯಕ್ಕೆ ಸೇರಿದವರು. ಅವರು ಬೆನ್ನುಬಗ್ಗಿಸಿ "ಕುರಿತೋದದ" ಓಲೆಗರಿಯಿಲ್ಲ, ಅಚ್ಚಾದ ಪುಸ್ತಕವಿಲ್ಲ, ಅವಲೋಕಿಸದ ಲೇಖನವಿಲ್ಲ. ಅವರು ಕನ್ನಡದಲ್ಲಿ ಎಲ್ಲವನ್ನೂ—ನಮ್ಮ ಗುರುಗಳಾಗಿದ್ದ ಕಾನಕಾನಹಳ್ಳಿ ವರದಾಚಾರ್ಯರ ಮಾತುಗಳಲ್ಲಿ ಹೇಳಬಹುದಾದರೆ—"ಎಂಪರಲಾಡಿಸಿಬಿಟ್ಟಿದ್ದಾರೆ." ಕನ್ನಡ ಭಾಷಾಸಾಹಿತ್ಯಗಳಿಗೆ ಅವರೊಂದು ಜಂಗಮ ವಿಶ್ವಕೋಶ. ಅವರ ಭಾಷೆಯ ಮೇಲಿನ ಹಿಡಿತ ಅಂಥದು, ವ್ಯಾಕರಣದ ಮೇಲಿನ ಪ್ರಭುತ್ವ ಅಂಥದು. ಹಳಗನ್ನಡ ಸಾಹಿತ್ಯದ ಅವರ ಅಧ್ಯಯನ ಎಷ್ಟು ವಿಶಾಲವೋ ಅಷ್ಟೇ ಆಳವಾದುದು. ಇವುಗಳೆಲ್ಲ ಕನ್ನಡ ಸಾಹಿತ್ಯ ಪರಿಷತ್ತು ಕೂಡಿಸುತ್ತಿರುವ "ಕನ್ನಡ—ಕನ್ನಡ ಕೋಶ"ದ ಸಂಪಾದನೆಯಲ್ಲಿ ಅವರಿಗೆ ಈಗ ನೆರವಾಗಿ ನಿಂತಿವೆ.

ಆದರೆ ಒಂದು ಜೋದ್ಯದ ಸಂಗತಿ. ನರಸಿಂಹಾಚಾರ್ಯರಿಗೆ—ನವ್ಯಕಾವ್ಯದ ಮಾತಿರಲಿ—ಒಟ್ಟು ಹೊಸಗನ್ನಡದ ಪದ್ಯ ಸಾಹಿತ್ಯದಲ್ಲೇ ನಂಬಿಕೆಯಿಲ್ಲ. ಅವರೂ ಒಂದು ಕಾಲದಲ್ಲಿ ಪದ್ಯಗಳನ್ನು ಬರೆದವರೆ. ಕುತೂಹಲವುಳ್ಳವರು ಮೈಸೂರು ಮಹಾರಾಜಾ ಕಾಲೇಜಿನ ಕರ್ಣಾಟಕ ಸಂಘವು ೧೯೨೮ ರಲ್ಲಿ ಪ್ರಕಟಿಸಿದ "ಕಿರಿಯ ಕಾಣಿಕೆ"ಯನ್ನು ನೋಡಬಹುದು. ಅಲ್ಲಿ ಅವರ ಎರಡು ಕವನಗಳಿವೆ—ಇತರ "ತರುಣ" ಕವಿಗಳ—ಕೆ. ವಿ. ಪುಟ್ಟಪ್ಪ, ಪಿ. ಟಿ. ನರಸಿಂಹಾಚಾರ್, ತೀ. ನಂ. ಶ್ರೀಕಂಠಯ್ಯ, ಎಲ್. ಗುಂಡಪ್ಪ ಇವರ—ಕವನಗಳ ಜೊತೆಗೆ. ಇನ್ನೂ ಎಷ್ಟು ಬರೆದಿದ್ದರೊ! ಆದರೆ ಕ್ರಮೇಣ ಈ ಒಲವು ಜಾರಿಹೋಯಿತು. ಅಸಮಾಧಾನ ಅಧಿಕವಾಗುತ್ತ ಬಂತು. ಈಚೀಚೆಗಂತೂ ಅವರು ತಮ್ಮ ಮನಸ್ಸನ್ನು ಮುಚ್ಚುಮರೆಯಿಲ್ಲದೆ ವೇದಿಕೆಗಳಿಂದ ಘೋಷಿಸಿದ್ದಾರೆ. ಅವರ ಈ ನಿಲುವನ್ನು ನಾನು ಒಪ್ಪಲಾರೆ. ಆದರೂ ಅವರ ಅಸಮಾಧಾನವನ್ನು ಅರ್ಥಮಾಡಿಕೊಳ್ಳಬಲ್ಲೆ. ಆಚಾರ್ಯರ ಈ ಅರೋಚಕಕ್ಕೆ ಕಾರಣ ನನಗೆ ಹೀಗೆನ್ನಿಸುತ್ತದೆ. ಪ್ರಾಚೀನ ಸಾಹಿತ್ಯದಲ್ಲಿ ಕಂಡು ಬರುವ ಬಿಗಿ, ಗಾಂಭೀರ್ಯ, ಪುಣ್ಯರಮ್ಯಗಳ ಸಂಗಮ, ಧ್ಯೇಯಾನುಸಂಧಾನ, ಇದು ಯಾವುದೂ ಅವರಿಗೆ ಇಲ್ಲಿ ಕಾಣುತ್ತಿಲ್ಲ. "ಶಾಕುಂತಲ"ದ ಶಾರ್ಙ್ಗರವನಿಗೆ ಆದಂತೆ ಅವರಿಗೆ ಆಗುತ್ತಿರಬೇಕು—ಮನೆಗೆ ಬೆಂಕಿ ಹೊತ್ತಿಕೊಂಡು ಜನವೆಲ್ಲ ಕಂಗೆಟ್ಟು ದಿಕ್ಕಾ

ಪಾಲಾಗಿ ಓಡುತ್ತಿರುವಂತೆ ತೋರುತ್ತಿರಬೇಕು. ಈ ಹೊಸ ಕಾವ್ಯದಲ್ಲಿ ಅವರಿಗೆ ಬರೀ ಸ್ವಚ್ಛಂದ, ಅರಾಜಕತೆ ಇವೇ ಕಾಣುತ್ತಿರಬೇಕು. ಒಬ್ಬ ನವ್ಯಕವಿ ತನ್ನ ಕಾವ್ಯ ಸಂಗ್ರಹವನ್ನು ಮಿತ್ರನೊಬ್ಬನಿಗೆ ನಿವೇದಿಸುತ್ತಾ ಹೀಗೆ ಬರೆದನಂತೆ; "ಒಂದು ಹೊಸಪುಸ್ತಕ ಪ್ರಕಟವಾಯಿತೆಂದು ಕೇಳಿದಾಗಲೆಲ್ಲಾ, ಒಂದು ಹಳೆಯ ಪುಸ್ತಕವನ್ನು ಓದುವ ನನ್ನ ಮಿತ್ರನಿಗೆ" ಎಂದು. ಆ ಮಿತ್ರನಂತೆ ನಮ್ಮ ನರಸಿಂಹಾಚಾರ್ಯರು. ಅವರು ಪ್ರಾಚೀನ ಸಾಹಿತ್ಯದಲ್ಲಿ ನಿಮಗ್ನರು. ಅವರ ರುಚಿ ನಿಷ್ಠುರ. ಅವರಿಗೆ ಇದೆಲ್ಲ ಬರೀ ಗದ್ದಲ, ಬರೀ ಗೊಂದಲ.

ಕನ್ನಡ ಜನವೇನೋ ಅವರನ್ನೂ ಅವರ ವಿದ್ವತ್ತನ್ನೂ ಮೆಚ್ಚಿಕೊಂಡಿದ್ದಾರೆ. ಕನ್ನಡ ವಿದ್ವಾಂಸರೂ ಅವರಲ್ಲಿ ಪೂಜ್ಯಭಾವನೆಯನ್ನಿಟ್ಟಿದ್ದಾರೆ. ಒಮ್ಮೆ ಅವರೂ ನಾನೂ ಗೋವಿಂದ ಪೈಗಳನ್ನು ನೋಡುವುದಕ್ಕೆಂದು ಮಂಜೇಶ್ವರಕ್ಕೆ ಹೋಗಿದ್ದೆವು. ಪೈಗಳಿಗೆ ಅವರನ್ನು ನೋಡಿದಾಗ ಆದ ಆನಂದ ಅಷ್ಟಿಷ್ಟಲ್ಲ. ನಾವು ಮನೆಯಲ್ಲಿದ್ದಾಗ, ಸಮುದ್ರತೀರಕ್ಕೆ ಹೋದಾಗ, ಊಟಕ್ಕೆ ಕುಳಿತಾಗ, ಉದ್ದಕ್ಕೂ ಮಾತು, ಚರ್ಚೆ, ಸಂಶಯ ಪರಿಚ್ಛೇದ. ಚರ್ಚೆಯ ಅನೇಕ ವಿಷಯಗಳಲ್ಲಿ "ಗೊಮ್ಮಟ" ಶಬ್ದದ ನಿರುಕ್ತಿಯೂ ಒಂದು. ಅದರ ವಿಷಯವಾಗಿ ಅವರು ದೀರ್ಘವಾಗಿ ಬರೆದಿದ್ದಾರೆ. ಅವರ ವಾದ ನಮಗೆ ಸಮರ್ಪಕವಾಗಿ ಕಾಣಲಿಲ್ಲ. ಆದರೆ ಅದು ಅಪ್ರಕೃತ. ಅವರು ನಮಗೆ ತಿಳಿಯದ ಎಷ್ಟೋ ವಿಷಯಗಳನ್ನೂ ಹೇಳಿದರು. ಅದೂ ಅಪ್ರಕೃತ. ಆದರೆ ಪೈಯವರ ಪ್ರಯೋಗಶೀಲತೆಗೆ ಒಂದು ಉದಾಹರಣೆಯನ್ನು ಮಾತ್ರ ಕೊಡುತ್ತೇನೆ. "Lionise ಎಂಬ ಅರ್ಥದಲ್ಲಿ 'ಸಿಂಹಾಪಿಸು' ಎಂಬ ಪದವನ್ನು ಪ್ರಯೋಗಿಸಿದ್ದೇನೆ, ಯಾರು ಏನು ಬೇಕಾದರೂ ಹೇಳಲಿ!" ಎಂದರು. ಮಾರನೆಯ ದಿನ ಅವರ ಮನೆಯಲ್ಲಿ ಒಂದು ದೇವಕಾರ್ಯ. ಆದರೂ ಗೋವಿಂದ ಪೈ ಅವರು "ಅತಿಥಿವಿಶೇಷ" ರಿಗಾಗಿ ನಿಯಮವನ್ನು ಸಡಿಲಿಸಿ ನಮ್ಮೊಡನೆ ಉಪಾಹಾರವನ್ನು ಸ್ವೀಕರಿಸಿ ನಮ್ಮನ್ನು ಬೀಳ್ಕೊಟ್ಟರು. ಅಲ್ಲಿಂದ ಮಂಗಳೂರಿನಲ್ಲಿ ಮುಳಿಯ ತಿಮ್ಮಪ್ಪಯ್ಯನವರನ್ನು ನೋಡುವುದಕ್ಕೆ ಹೋದಾಗ, ಅವರು ಅಸ್ವಸ್ಥರಾಗಿದ್ದರೂ ಆಚಾರ್ಯರನ್ನು ಆದರಿಸಿ ಸಾಕಷ್ಟು ವಿಷಯವಿನಿಮಯ ಮಾಡಿಕೊಂಡರು. ಆಮೇಲೆ ಮೂಡಬಿದರೆಯಲ್ಲಿ ಶ್ರೀ ಗೋಪಾಲಪೈಗಳ ಅತಿಥಿಗಳಾಗಿ ಹೋದೆವು. ಆ ಹೊತ್ತು ದುರ್ಗಾಷ್ಟಮಿ, ಜೈನರಿಗೆ "ಜೀವದಯಾಷ್ಟಮಿ." ನಮ್ಮ ಬೇರೆ ಕಾರ್ಯಕ್ರಮದ ಜೊತೆಗೆ ಆ ರಾತ್ರಿ ನರಸಿಂಹಾಚಾರ್ಯರು ಬಸದಿಯಲ್ಲಿ ಉಪನ್ಯಾಸ ಮಾಡುವಂತೆ ಏರ್ಪಾಡಾಗಿತ್ತು. ಅಲ್ಲಿ ಈ ಬ್ರಾಹ್ಮಣ, ಜೈನಧರ್ಮದ ವಿಷಯವಾಗಿಯೂ ಆ ದಿನದ ಮಹತ್ತ್ವವನ್ನು ಕುರಿತೂ ಕೊಟ್ಟ ಉಪನ್ಯಾಸ ಜೈನಬಾಂಧವರನ್ನು ಬೆರಗುಗೊಳಿಸಿತು, ಆಚಾರ್ಯರ ವಿಷಯದಲ್ಲಿ ಎಲ್ಲರಿಗೂ ಪೂಜ್ಯಭಾವನೆಯನ್ನು ಹುಟ್ಟಿಸಿತು.

ಜನವೇನೋ ನರಸಿಂಹಾಚಾರ್ಯರನ್ನು ಚೆನ್ನಾಗಿ ನೋಡಿಕೊಂಡಿದ್ದಾರೆ. ಕನ್ನಡಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠದಲ್ಲಿ ಕುಳ್ಳಿರಿಸಿ ಗೌರವಿಸಿದ್ದಾರೆ. ಆದರೂ ನಮ್ಮ ತಲೆಮಾರಿನ ಅನೇಕರಂತೆ ಎಷ್ಟೋವೇಳೆ ಅವರು ಆಶಾಭಂಗ, ನಿರುತ್ಸಾಹ, ನಿರಾಶೆ ಇವಕ್ಕೆ ತುತ್ತಾಗಿದ್ದಾರೆ. ನನಗೆ ತಿಳಿದಮಟ್ಟಿಗೆ ಅವರ ಉದ್ಯೋಗ ಜೀವನದಲ್ಲಿ ಅವರಿಗೆ ಬಂದ ಬಡ್ತಿಗಳೆಲ್ಲವೂ ಅಡಚಣೆಯಿಲ್ಲದೆ, ಹೊಡೆದಾಟವಿಲ್ಲದೆ, ಸುಗಮವಾಗಿ ಬರಲಿಲ್ಲ. ಆದರೂ ಅವರ ಕನ್ನಡದ ನಿಷ್ಠೆ ಅಚಲ, ಆತ್ಮವಿಶ್ವಾಸ ಅಷ್ಟೇ ಅಚಲ. ಸಂಸಾರದಲ್ಲೂ ಕ್ಲೇಶಗಳನ್ನು ಅನುಭವಿಸಿ ಸ್ವಲ್ಪ ಹಣ್ಣಾದ ಅವರು ತಮ್ಮ ಮಿತ್ರರಲ್ಲಿ—ಅವರೂ ಇವರಂತೆಯೇ!—ಸದಾ ಸ್ನೇಹಪರರು, ಅನುಕಂಪಿಗಳು, ನಕ್ಕು ನಗಿಸತಕ್ಕವರು, ಸಹಾಯಶೀಲರು. ಈ ಅಂತರಂಗದ ಮಿತ್ರನಿಗೆ ಈ ಸ್ವಲ್ಪ ಹಿರಿಯನಾದ ಮಿತ್ರನ ಹರಕೆ—ಅವರನ್ನು ಜನ ಇನ್ನೂ ಚೆನ್ನಾಗಿ ಕಾಣಲೆಂದು, ಅವರು ನೂರುಕಾಲ ಬಾಳಲೆಂದು, ಕನ್ನಡದ ಕೀರ್ತಿಯನ್ನು ಬೆಳಗಲೆಂದು!

**ನಂ. ಶಿವರಾಮಶಾಸ್ತ್ರಿ**

# ಶ್ರೀ ಆಚಾರ್ಯರೊಡನೆ

೧

ಕನ್ನಡಕ್ಕೂ ನರಸಿಂಹಾಚಾರ್ಯ ಎಂಬ ಹೆಸರಿಗೂ ಅಪೂರ್ವವೂ ಅತ್ಯಂತ ಗಾಢವೂ ಆದ ಸಂಬಂಧವಿರುವಂತೆ ತೋರುತ್ತದೆ. ಕನ್ನಡ ಮತ್ತು ನರಸಿಂಹಾಚಾರ್ಯ ಎಂಬ ಪದಗಳು ಸಮಾನಾರ್ಥಕವೆಂಬಂತೆ ಪರ್ಯಾಯ ಪದಗಳೆಂಬಂತೆ ಭಾಸವಾಗುತ್ತದೆ. ಕನ್ನಡ ವಾಗ್ದೇವಿ ಆ ಹೆಸರಿಗೆ ಮರುಳಾಗಿ ವಿಶೇಷೌದಾರ್ಯದಿಂದ ವರಪ್ರಸಾದವನ್ನು ನೀಡಿರುವಂತೆ ಕಾಣುತ್ತದೆ. ಆಧುನಿಕ ಕನ್ನಡಸಾಹಿತ್ಯದ ಇತಿಹಾಸದಲ್ಲಿ ಆ ಹೆಸರಿನ ನಾಲ್ಕು ವ್ಯಕ್ತಿಗಳು ಚಿರಸ್ಮರಣೀಯ ರಾಗಿದ್ದಾರೆ. ರಾ. ನರಸಿಂಹಾಚಾರ್ಯರು ಕನ್ನಡನಾಡಿನ ಶಾಸನಗಳನ್ನು ಸಂಗ್ರಹಿಸಿ, ಪ್ರಕಟಿಸಿ ನಾಡಿನ ಇತಿಹಾಸ ರಚನೆಗೆ ಮಹೋಪಕಾರ ಮಾಡಿರುವರಲ್ಲದೆ, ಕನ್ನಡಭಾಷಾ ಚರಿತ್ರೆ ಮತ್ತು ಕನ್ನಡ ಕವಿಚರಿತೆಗಳ ರಚನೆಯ ಮೂಲಕ ಭಾಷೆ ಸಾಹಿತ್ಯ ಮತ್ತು ಸಂಸ್ಕೃತಿಗಳ ಕ್ಷೇತ್ರಗಳಲ್ಲಿಯೂ ಶಾಶ್ವತವಾದ ಕಾಣಿಕೆಯನ್ನು ಸಲ್ಲಿಸಿದ್ದಾರೆ. ಎಸ್. ಜಿ. ನರಸಿಂಹಾ ಚಾರ್ಯರು ಓಲೆಗರಿ ಪ್ರತಿಗಳಲ್ಲಿ ಸೆರೆಯಾಗಿದ್ದ ಮಹಾಕೃತಿಗಳನ್ನು ಸರ್ವರಿಗೂ ಲಭ್ಯವಾಗು ವಂತೆ ಶೋಧಿಸಿ, ಸಂಪಾದಿಸಿ, ಪ್ರಕಟಿಸಿ ಕನ್ನಡ ವ್ಯಾಸಂಗಕ್ಕೆ ಸುಭದ್ರವಾದ ತಳಹದಿಯನ್ನು ಹಾಕಿದ್ದಾರೆ. ದೊಡ್ಡಬೆಲೆ ಲಕ್ಷ್ಮೀನರಸಿಂಹಾಚಾರ್ಯರು ಇವರಿಬ್ಬರ ಜಾಡಿನಲ್ಲಿ ನಡೆದು ಅನೇಕ ಹಳಗನ್ನಡಗ್ರಂಥಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ, ಕವಿಗಳ ಕಾಲದೇಶಗಳನ್ನು ಗುರುತಿಸಿ, ಅವರ ಕೃತಿಗಳನ್ನು ತುಲನಾತ್ಮಕವಾಗಿ ಬೆಲೆಕಟ್ಟಿ ವಿದ್ವತ್ತಿಗೆ ಕಳಸಪಟ್ಟಿದ್ದಾರೆ. ಮತ್ತೊಬ್ಬರು ನರಸಿಂಹಾಚಾರ್ಯರು ಕವಿಶ್ರೇಷ್ಠರಾಗಿ ನಾಡಿನಲ್ಲಿ ಪ್ರಸಿದ್ಧರಾಗಿದ್ದಾರೆ. ಈ ನಾಲ್ವರು ವಿದ್ವನ್ಮಣಿಗಳಿಂದ ಕನ್ನಡ ಭಾಷಾಸಾಹಿತ್ಯಗಳು ಶ್ರೀಮಂತವಾಗಿ ವೃದ್ಧಿಹೊಂದುತ್ತಿವೆ.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಬಿ. ಎಂ. ಶ್ರೀಕಂಠಯ್ಯನವರ ಮತ್ತು ಎಂ. ಹಿರಿಯಣ್ಣ ನವರ ಸಾಹಸ ಪ್ರೋತ್ಸಾಹಗಳಿಂದ ಯಾವ ಸುಮುಹೂರ್ತದಲ್ಲಿ ಕನ್ನಡಶಾಖೆ ಪ್ರಾರಂಭ ವಾಯಿತೋ ಅಂದಿನಿಂದ ಆ ಶಾಖೆ ದಿನೇದಿನೇ ಪ್ರವರ್ಧಮಾನವಾಗಿ ವಿಶ್ವವಿದ್ಯಾನಿಲಯದ ಕಣ್ಮಣಿ ಯಾಗಿ ಮಹಾಕವಿ ಮಹಾವಿದ್ವಾಂಸರಿಂದ ಪರಿಪೋಷಿತವಾಗಿ ಬೆಳೆಯುತ್ತಿದೆ. ವೆಂಕಣ್ಣಯ್ಯ ಮತ್ತು ಕೃಷ್ಣಶಾಸ್ತ್ರಿಗಳು ಕೇವಲ ಭಾಷಾಭಿಮಾನದಿಂದ ವಿರಾಮವಿಲ್ಲದೆ, ವಿಶ್ರಾಂತಿ ಬಯಸದೆ, ದೈಹಿಕಶ್ರಮವನ್ನು ಲೆಕ್ಕಿಸದೆ, ಮಾನಸಿಕ ಕ್ಲೇಶವನ್ನು ಪರಿಗಣಿಸದೆ, ಅನಿಲಶಕ್ತಿಯಾಗಿ ಊರೂರು ಗಳಿಗೆ ಕನ್ನಡದ ಕಂಪನ್ನು ಹೊತ್ತು, ಭಾಷಣ ಲೇಖನ ಬೋಧನೆಗಳ ಮೂಲಕ ಮೈಸೂರು ವಿಭಾಗದಲ್ಲಿ ಹೊಸ ಮನ್ವಂತರದ ಉದಯಕ್ಕೆ ಕಾರಣಭೂತರಾದರು. ಆ ಮಹನೀಯರ ಪ್ರಭಾವವಲಯದಲ್ಲಿ ಅಭಿವೃದ್ಧಿಹೊಂದಿ, ಕನ್ನಡದ ಏಳ್ಗೆಗಾಗಿ ಕಂಕಣತೊಟ್ಟು, ಆ ಮಹಾ ಕಾರ್ಯಕ್ಕಾಗಿ ತಮ್ಮ ಪ್ರತಿಭೆಯನ್ನೆಲ್ಲ ಧಾರೆಯೆರೆದು, ಚಿರಂತನ ಕೀರ್ತಿಯನ್ನು ಸಂಪಾದಿಸಿ, ಮೈಸೂರು ವಿಶ್ವವಿದ್ಯಾನಿಲಯದಲ್ಲಿ ರತ್ನತ್ರಯವೆಂಬ ಬಿರುದಿಗೆ ಪಾತ್ರರಾದ ಕುವೆಂಪು, ತೀ. ನಂ. ಶ್ರೀ. ಮತ್ತು ಡಿ. ಎಲ್. ಎನ್. ಅವರು ವಿಶ್ವವಿದ್ಯಾನಿಲಯಕ್ಕೆ, ಕನ್ನಡನಾಡಿಗೆ, ಕನ್ನಡಕ್ಕೆ ರಾಷ್ಟ್ರೀಯ ಗೌರವವನ್ನು ಸಂಪಾದಿಸಿಕೊಟ್ಟಿದ್ದಾರೆ; ಮುಂದಿನ ಪೀಳಿಗೆಗೆ ಆದರ್ಶ ಪ್ರಾಯರಾಗಿ, ಸ್ಫೂರ್ತಿಶಕ್ತಿಯಾಗಿ ಪರಿಣಮಿಸಿದ್ದಾರೆ.

೨

ನರಸಿಂಹಾಚಾರ್ಯರು ಹುಟ್ಟಿದ್ದು ಚಿಕ್ಕನಾಯ್ಕನಹಳ್ಳಿಯಲ್ಲಿ, ತಮ್ಮ ಮಾತಾಮಹರಾದ ಅಣ್ಣಾಸ್ವಾಮಿ ಅಯ್ಯಂಗಾರ್‌ರವರ ಮನೆಯಲ್ಲಿ, 27-10-1906 ರಂದು. ಅವರ ಪೂರ್ವಿಕರ ಊರು

ದೊಡ್ಡಬೆಲೆಯಾದರೂ ಇಂದಿಗೂ ಅವರು ಆ ಊರನ್ನು ನೋಡಿಲ್ಲ. ಅವರ ತಂದೆ ಶ್ಯಾಮಯ್ಯಂಗಾರ್ ಬಹು ಹಿಂದೆಯೇ ಊರುಬಿಟ್ಟು, ಸಬ್‌ರಿಜಿಸ್ಟ್ರಾರ್ ಆಫೀಸಿನ ಗುಮಾಸ್ತೆಯಾಗಿ ಊರಿಂದೂರಿಗೆ ಅಲೆಯುತ್ತಿದ್ದರು. ಮಧುಗಿರಿ, ಪಾವಗಡ, ತಿಪಟೂರು ಮತ್ತು ತುಮಕೂರುಗಳಲ್ಲಿ ಅವರ ವೃತ್ತಿಜೀವನ ಸಾಗಿತ್ತು. ಅವರ ತಂದೆಯ ತಂದೆ ದೊಡ್ಡಬೆಲೆ ಕೃಷ್ಣಮಾಚಾರ್ ಅವರು ಕೂಲಿಮಠದ ಮೇಷ್ಟ್ರಾಗಿ, ಒಳ್ಳೆಯ ಅಧ್ಯಾಪಕರೆಂದು ಹೆಸರು ಪಡೆದಿದ್ದರು. ತಾಯಿಯ ತಂದೆ ಅಣ್ಣಾಸ್ವಾಮಿ ಅಯ್ಯಂಗಾರ್ ಅವರು ಭಾರತವಾಚನದಲ್ಲಿ ಹೆಸರುವಾಸಿಯಾಗಿದ್ದರು. ಅವರು ವಾಚನ ನಡೆಸುತ್ತಿದ್ದ "ಕಟ್ಟೆ"ಯನ್ನು ಇಂದಿಗೂ ಜನ ತೋರಿಸುತ್ತಾರೆ. ಅವರು ತಾಲ್ಲೋಕು ಕಛೇರಿಯಲ್ಲಿ ರಿಕಾರ್ಡ್‌ಕೀಪರ್ ಆಗಿದ್ದರು. ಒಮ್ಮೆ ಸಬ್‌ಡಿವಿಜನ್ ಅಧಿಕಾರಿಗಳು ಕಛೇರಿಯ ತನಿಖೆಗಾಗಿ ಬಂದು ನಿಷ್ಕಾರಣವಾಗಿ ತಮ್ಮ ಮೇಲೆ ಜೋರು ಮಾಡಿದ್ದರಿಂದ ತಮ್ಮ ದಫ್ತರವನ್ನು ಬಿಸಾಡಿ ಅವರು ಕೆಲಸಕ್ಕೆ ರಾಜೀನಾಮೆ ಕೊಟ್ಟುಬಿಟ್ಟರು.

ಡಿ. ಎಲ್. ಎನ್ ಅವರ ಪೂರ್ವಿಕರು ಸೇಲಂ ಜಿಲ್ಲೆಯಿಂದ ಬಂದವರು. ಗಂಡಿಕೋಟೆ ಅವರ ನೆಲೆಯಾಗಿತ್ತು. ವಿಜಯನಗರದ ತಾತಾಚಾರ್ಯರ ಕಾಲದಲ್ಲಿ ಅವರು ಈ ಕಡೆಗೆ ವಲಸೆ ಬಂದು ನೆಲೆಸಿದರು. ಅವರದೂ ತಾತಾಚಾರ್ಯರದೂ ಒಂದೇ ಗೋತ್ರ. ಅವರು ಮೊದಲಿಗೆ ತಿರುಪತಿಯ ಶ್ರೀನಿವಾಸನ ಒಕ್ಕಲಾದರೂ ಈಚೆಗೆ ದೇವರಾಯದುರ್ಗದ ಲಕ್ಷ್ಮೀನರಸಿಂಹ ಅವರ ಮನೆದೇವರಾಗಿ, ಆ ವಂಶದವರನ್ನು ಕೈಹಿಡಿದು ನಡೆಸುತ್ತಿದ್ದಾನೆ. ನರಸಿಂಹಾಚಾರ್ಯರ ಹುಟ್ಟು ಹೆಸರು ಲಕ್ಷ್ಮೀನರಸಿಂಹಾಚಾರ್ಯ ಎಂದು. ಎ. ವಿ. ಸ್ಕೂಲಿನ ಹಾಜರಾತಿ ರಿಜಿಸ್ಟರಿನಲ್ಲಿ ಅವರ ಹೆಸರು ಗಡಿಮೀರುತ್ತಿದ್ದುದರಿಂದ ಅಧ್ಯಾಪಕರು ಅದನ್ನು ಹ್ರಸ್ವಗೊಳಿಸಿ ಡಿ. ಎಲ್. ನರಸಿಂಹಾಚಾರ್ಯ ಎಂದು ಬರೆಯುತ್ತಿದ್ದರು. ಅವರ ಪೂರ್ವಿಕರ ಜನ್ಮಸ್ಥಳದ ಕುರುಹಾಗಿ, ಅವರ ಭವಿತವ್ಯದ ಸಾಧನೆ ಯಶಸ್ಸುಗಳ ಸೂಚಕವಾಗಿ ದೊಡ್ಡಬೆಲೆ ಅವರ ಹೆಸರಿನೊಂದಿಗೆ ಅಂಟಿಕೊಂಡು ಬಂದಿದೆ.

ಪ್ರಾರಂಭದಶೆಯಲ್ಲಿ ಅವರ ತಂದೆಯ ವರ್ಗಾವಣೆಯೊಂದಿಗೆ ಅವರ ವಿದ್ಯಾಭ್ಯಾಸದ ಸ್ಥಾನವೂ ಬದಲಾವಣೆಯಾಗುತ್ತಿತ್ತು. ಅವರು ಮೊಟ್ಟಮೊದಲು ಶಾಲೆ ಸೇರಿದ್ದು ಪಾವಗಡದಲ್ಲಿ. ಮುಂದಿನ ಅವರ ವಿದ್ಯಾಭ್ಯಾಸ ಮಧುಗಿರಿ ಮತ್ತು ಶಿರಾಗಳಲ್ಲಿ ಅಭಿವೃದ್ಧಿಹೊಂದಿತು. ಶಿರಾದಲ್ಲಿದ್ದಾಗ ಅವರು ಕನ್ನಡ ಮತ್ತು ಸಂಸ್ಕೃತಭಾಷೆಗಳಲ್ಲಿ ಒಂದನ್ನು ಆರಿಸಿಕೊಳ್ಳಬೇಕಾಗಿತ್ತು. ಅನುಕೂಲವಿದ್ದರೆ ಅವರು ಬಹುಶಃ ಸಂಸ್ಕೃತವನ್ನೇ ಆರಿಸಿಕೊಳ್ಳುತ್ತಿದ್ದರು. ಅಲ್ಲಿ ಸಂಸ್ಕೃತ ಅಧ್ಯಾಪಕರು ಇಲ್ಲದ್ದರಿಂದ ಅವರು ಅನಿವಾರ್ಯವಾಗಿ ಕನ್ನಡಕ್ಕೆ ಗಂಟುಬೀಳಬೇಕಾಯಿತು. ಕನ್ನಡದ ಮೇಲಣ ಮಮತೆ ಅವರಲ್ಲಿ ಆಕಸ್ಮಿಕವಾಗಿ ಬಂದುದಾಗಿರಲಿಲ್ಲ. ಅವರು ಹುಟ್ಟಿಬೆಳೆದ ಆವರಣದಲ್ಲಿ ಕನ್ನಡದ ಕಂಪು ಮಘಮಘಿಸುತ್ತಿತ್ತು. ಅವರ ಅಜ್ಜ ಮನೋಮೋಹಕವಾಗಿ ಕುಮಾರವ್ಯಾಸ ಭಾರತವನ್ನು ವಾಚಿಸುತ್ತಿದ್ದಾಗ ಮೊಮ್ಮಗ ಅತ್ಯಂತಾಸಕ್ತಿಯಿಂದ ಚಿತ್ತೈಕಾಗ್ರತೆಯಿಂದ ಊಟತಿಂಡಿಗಳನ್ನು ಮರೆತು ಆಲಿಸುತ್ತಿದ್ದನು. 12 ನೆಯ ವಯಸ್ಸಿನಲ್ಲಿಯೇ ಅವರು ಜೈಮಿನಿ ಭಾರತವನ್ನು ಓದಿದುದು ಮಾತ್ರವೇ ಅಲ್ಲ, ಅದರ ಬಹುಭಾಗವನ್ನು ಬಾಯಿಪಾಠ ಮಾಡಿದ್ದರು. ಆಗಲೇ ರಾಜಶೇಖರವಿಲಾಸ ಮೊದಲಾದ ಪ್ರೌಢಗ್ರಂಥಗಳಕಡೆಗೂ ಅವರ ದೃಷ್ಟಿ ಹರಿದಿತ್ತು.

ಮಾಧ್ಯಮಿಕ ದರ್ಜೆಯ 5 ನೆಯ ತರಗತಿಯನ್ನು ಸೇರುವ ಹೊತ್ತಿಗೆ ಅವರು ತುಮಕೂರಿಗೆ ಬರಬೇಕಾಯಿತು. ಅವರ ಹೈಸ್ಕೂಲು ವಿದ್ಯಾಭ್ಯಾಸವೂ ಅಲ್ಲಿಯೇ ಮುಂದುವರಿಯಿತು. 4 ನೇ ಫಾರಂಗೆ ಬರುವ ಹೊತ್ತಿಗೆ ಅವರು ಗದಾಯುದ್ಧ, ಛಂದೋಂಬುಧಿ ಮತ್ತು ಪದ್ಯಸಾರದ ಎರಡನೆಯ ಸಂಪುಟಗಳನ್ನು ಚೆನ್ನಾಗಿ ಓದಿಕೊಂಡಿದ್ದರು. ಓಲೆಗರಿಯ ಪ್ರತಿಗಳನ್ನು ನೋಡುವ ಮತ್ತು ಓದುವ ಕುತೂಹಲ ಆಗಿನಿಂದಲೇ ಅವರಲ್ಲಿ ಚಟವಾಗಿ ಪರಿಣಮಿಸಿತ್ತು. ಮೈಸೂರಿನ

11976



ಇತಿಹಾಸವಿದ್ದ ಕಾಗದದ ಹಸ್ತಪ್ರತಿಯೊಂದು ಸಿಕ್ಕಿದಾಗ ಅವರಿಗಾದ ಆನಂದ ಹೇಳತೀರದು. ತುಮಕೂರಿನ ನಲ್ಲಪ್ಪ ಎಂಬುವರ ಮನೆಯಲ್ಲಿದ್ದ ಹಸ್ತಪ್ರತಿಗಳ ರಾಶಿಯಲ್ಲಿ ಅದು ಸಿಕ್ಕಿತಂತೆ. ಆ ನಲ್ಲಪ್ಪನವರ ತಂದೆ ಟಿಪ್ಪುವಿನ ಆಸ್ಥಾನದಲ್ಲಿ ಅಧಿಕಾರಿಯಾಗಿದ್ದರಂತೆ. ತಮ್ಮ ಕೈಗೆ ಸಿಕ್ಕಿದ ಹಸ್ತಪ್ರತಿಯನ್ನೋದಿ ನರಸಿಂಹಾಚಾರ್ಯರು ಆಗಲೇ ಅದನ್ನು ಇಂಗ್ಲಿಷ್ ಭಾಷೆಗೆ ತರ್ಜುಮೆ ಮಾಡಿದರು. ಆಮೇಲೆ ಮೂಲ ಪ್ರತಿ ಮತ್ತು ಭಾಷಾಂತರಗಳೆರಡೂ ಎಂ. ಎಚ್. ಕೃಷ್ಣ ಅವರ ಕೈಸೇರಿದುವಂತೆ.

ಆಗ ತುಮಕೂರು ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾಗಿದ್ದ ಕೆ. ವಿ. ಕೃಷ್ಣಸ್ವಾಮಿ ಅಯ್ಯರ್ ದೊಡ್ಡ ವಿದ್ವಾಂಸರೆಂದು ಸಂಗೀತ ಶಾಸ್ತ್ರಜ್ಞರೆಂದು ಮತ್ತು ಶಿಷ್ಯವತ್ಸಲರೆಂದು ಖ್ಯಾತಿಪಡೆದಿದ್ದರು. ಗುರು ಶಿಷ್ಯವೃಂದದಲ್ಲಿ ಹುದುಗಿದ್ದ ಶಕ್ತಿಸಾಮರ್ಥ್ಯಗಳನ್ನು ಹೊರಗೆಳೆಯುವ ಸಲುವಾಗಿ ಅವರು "ಸ್ಕೂಲ್‌ಫೋಕ್" ಎಂಬ ಇಂಗ್ಲಿಷ್—ಕನ್ನಡ ಪತ್ರಿಕೆಯನ್ನು ಪ್ರಾರಂಭಿಸಿದರು. "ದೊಡ್ಡ ಮನುಷ್ಯನು ಯಾರು" ಎಂಬ ತಲೆ ಬರಹವುಳ್ಳ ಡಿ. ಎಲ್. ಎನ್. ಅವರ ಪ್ರಥಮ ಲೇಖನ ಆ ಪತ್ರಿಕೆಯಲ್ಲಿ ಪ್ರಕಟವಾಯಿತು. ಅಲ್ಲಿ ಪ್ರಕಟವಾದ ಅವರ ಮತ್ತೊಂದು ಇಂಗ್ಲಿಷ್ ಲೇಖನ "The story of a cotton seed." ಹೈಸ್ಕೂಲಿನಲ್ಲಿದ್ದಾಗಲೇ ಅವರು ಖಾಸಗಿಯಾಗಿ ಕುಂಟು ಶಾಸ್ತ್ರಿಗಳೊಬ್ಬರಿಂದ ಸಂಸ್ಕೃತವನ್ನು ಕಲಿತು ರಘುವಂಶ ಮತ್ತು ಚಂಪೂರಾಮಾಯಣಗಳನ್ನು ವ್ಯಾಸಂಗಮಾಡಿದರು. ಪ್ರತಿನಿತ್ಯ ಬೆಳಗಿನಜಾವ ನಾಲ್ಕು ಗಂಟೆಗೆ ಸಂಸ್ಕೃತದ ಕಸರತ್ತು ಪ್ರಾರಂಭವಾಗುತ್ತಿತ್ತು. ಇದೇ ಸಮಯದಲ್ಲಿಯೇ ಅವರ ಹೃದಯಕ್ಕೆ ಕೆಲವು ಮಿತ್ರರ ಮೂಲಕ ರೇನಾಲ್ಡ್ಸ್‌ನ ಕಾದಂಬರಿಗಳ ರುಚಿಯೂ ಒದಗಿಬಂದಿತ್ತು.

ಡಿ. ಎಲ್. ಎನ್. ಹೈಸ್ಕೂಲಿನ ವಿದ್ಯಾರ್ಥಿಯಾಗಿದ್ದಾಗಲೇ ಬಿ. ಎಂ. ಶ್ರೀ ಯವರ ಹೆಸರು ಕೇಳಿದ್ದರು. ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದ ಶ್ರೀಯವರ ಒಲವು ಆಗತಾನೆ ಕನ್ನಡದ ಕಡೆಗೆ ಹರಿಯುತ್ತಿತ್ತು. 1924 ರಲ್ಲಿ ಕೊಲಿಜಿಯೇಟ್ ತರಗತಿಯ ಇನ್‌ಸ್ಪೆಕ್ಷನ್‌ಗೆಂದು ಶ್ರೀಯವರು ತುಮಕೂರಿಗೆ ಹೋಗಿದ್ದರು. ಆಗ ಡಿ. ಎಲ್. ಎನ್. ಎಂಟ್ರೆನ್ಸ್ ತರಗತಿಯಲ್ಲಿದ್ದರು. ಆ ಸಂದರ್ಭದಲ್ಲಿ ಶ್ರೀಯವರು Stories from Aeneid ಎಂಬ ಪಠ್ಯಪುಸ್ತಕದ ಮೇಲೆ ಉಪನ್ಯಾಸ ಮಾಡಿದರು. ಕಚ್ಚೆ ಪೇಟ ಮುಚ್ಚುಕೋಟುಗಳನ್ನು ಧರಿಸಿದ್ದ ಇಂಗ್ಲಿಷ್ ಪ್ರಾಧ್ಯಾಪಕರ ಮೂರ್ತಿಸ್ವರೂಪವನ್ನು ಡಿ. ಎಲ್. ಎನ್. ಅವರು ವಿಸ್ಮಯಭೂತರಾಗಿ ನೋಡಿ ಕುತೂಹಲಾಸಕ್ತಿಗಳಿಂದ ಅವರ ಭಾಷಣವನ್ನು ಕೇಳಿ ಹರ್ಷಿಸಿದರು. ಸುಮಾರು 1922 ರ ಹೊತ್ತಿಗೆ ಅವರ ಕೈಗೆ ಸಿಕ್ಕಿದ ಕಾವ್ಯಾವಲೋಕನದ ಪ್ರತಿ ಅಲ್ಲಿಂದ ಇಲ್ಲಿಯವರೆಗೆ ಅವರ ಪ್ರೇಮಾದರಗಳಿಗೆ ಪಾತ್ರವಾಗುಳಿದಿದೆ.

ಎಂಟ್ರೆನ್ಸ್ ಪರೀಕ್ಷೆ ಮುಗಿದನಂತರ ಮುಂದಿನ ವಿದ್ಯಾಭ್ಯಾಸಕ್ಕಾಗಿ ಅವರು 1924 ರಲ್ಲಿ ಬೆಂಗಳೂರು ಸೆಂಟ್ರಲ್ ಕಾಲೇಜು ಸೇರಿದರು. ಬಿ. ಎ. ಡಿಗ್ರಿಯ ಮೊದಲವರ್ಷದ ಪರೀಕ್ಷೆಯಲ್ಲಿ ರಸಾಯನಶಾಸ್ತ್ರ ವಿಭಾಗದಲ್ಲಿ ಅವರು ನೂರಕ್ಕೆ ಅರುವತ್ತು ಅಂಕಗಳನ್ನು ಪಡೆದಿದ್ದರು. ಆದರೆ ಆಗಿನ ಪ್ರಾಧ್ಯಾಪಕರ ಸ್ವಜನಪಕ್ಷಪಾತ ಮನೋಭಾವದಿಂದ, ತಮಗೆ ದೊಡ್ಡವರ ಒತ್ತಾಸೆಯಿಲ್ಲದ್ದರಿಂದ, ತಮ್ಮಷ್ಟೇ ಅಂಕಗಳನ್ನು ಪಡೆದಿದ್ದ ಸಹಪಾಠಿಗಳಿಗೆ ದೊರೆತ ಅನುಕೂಲಾವಕಾಶಗಳು ಅವರಿಗೆ ದೊರೆಯಲಿಲ್ಲ. ವಿಜ್ಞಾನ ವಿಭಾಗದಲ್ಲಿ ಸ್ಥಾನ ದೊರೆಯದೆ ಅವರು ಅನಿವಾರ್ಯವಾಗಿ ಭಾಷೆ, ಭೌತಶಾಸ್ತ್ರ, ರಸಾಯನಶಾಸ್ತ್ರಗಳನ್ನೊಳಗೊಂಡ ಆರ್ಟ್ಸ್‌ವಿಭಾಗದಲ್ಲಿ ತಮ್ಮ ವ್ಯಾಸಂಗ ಮುಂದುವರಿಸಬೇಕಾಯಿತು. ಕನ್ನಡದ ಭಾಗ್ಯಲಕ್ಷ್ಮಿಯೇ ಸಂಚುಹೂಡಿ ಅವರಿಗೆ ಸೈನ್ಸ್‌ವಿಭಾಗದಲ್ಲಿ ಸ್ಥಾನ ದೊರೆಯದಂತೆ ಕೈವಾಡ ನಡೆಸಿದ್ದಳೆಂದು ತೋರುತ್ತದೆ. ಭಾಷಾಸಾಹಿತ್ಯಗಳ ವ್ಯಾಸಂಗದಲ್ಲಿ ತೀವ್ರಾಸಕ್ತಿಯನ್ನು ಬೆಳೆಸಿಕೊಂಡಿದ್ದ ಡಿ. ಎಲ್. ಎನ್. ಅವರಿಗೆ ಇದರಿಂದ ನಿರುತ್ಸಾಹವಾಗಲಿಲ್ಲ. ಕನ್ನಡದ ಮೇಲಣ ಶ್ರದ್ಧೋತ್ಸಾಹಗಳು ದಿನೇದಿನೇ ವರ್ಧಿಸುತ್ತಿದ್ದುವು. ಕನ್ನಡ ಸಾಹಿತ್ಯದಲ್ಲಿದ್ದ ಅವರ ಪ್ರೇಮ ಆ ಹೊತ್ತಿಗಾಗಲೇ ನಾನಾ ರೀತಿ

ಯಿಂದ ಮೂರ್ತಸ್ವರೂಪ ತಾಳಿ ಹೊರಹೊಮ್ಮುತ್ತಿತ್ತು. ಡಿಗ್ರಿ ತರಗತಿಯ ಎರಡನೆಯ ವರ್ಷ ದಲ್ಲಿದ್ದಾಗ ಅವರು ಬರೆದು ಓದಿದ 'ಕನ್ನಡಕಾವ್ಯಗಳಲ್ಲಿ ಋತು ವರ್ಣನೆ'ಯೆಂಬ ಸುದೀರ್ಘ ಲೇಖನ ಅವರ ಆಳವಾದ ಪಾಂಡಿತ್ಯಕ್ಕೆ ಸಾಕ್ಷಿಯಾಗಿದೆ. ಅವರು ಆಗಾಗ್ಗೆ ಪದ್ಯಗಳನ್ನು ಗೀಚುತ್ತಿದ್ದರು. ಸಿ. ಆರ್. ದಾಸ್ ಸತ್ತುಹೋದಾಗ ಬರೆದ ಪದ್ಯ 'ಸಾಧ್ವಿ' ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಮತ್ತೆರಡು ಪದ್ಯಗಳನ್ನು ಅವರು ವೆಂಕಣ್ಣಯ್ಯನವರಿಗೂ ತೋರಿಸಿದ್ದರು. ಆದರೆ ವೆಂಕಣ್ಣಯ್ಯನವರು ಅವುಗಳಬಗ್ಗೆ ಆಸಕ್ತಿ ವ್ಯಕ್ತಪಡಿಸಲಿಲ್ಲವಾದ್ದರಿಂದ ಅವು ಉತ್ತಮ ವಾಗಿರಲಿಲ್ಲವೆಂದು ತಿಳಿದು ಡಿ. ಎಲ್. ಎನ್. ಸುಮ್ಮನಾದರು.

ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದ ನಂತರ ಯಾವುದಾದರೂ ನೌಕರಿಗೆ ಸೇರ ಬೇಕೆನ್ನುವುದು ಡಿ. ಎಲ್. ಎನ್. ಅವರ ಅಪೇಕ್ಷೆಯಾಗಿತ್ತು. ಆ ವರ್ಷದ (1927) ಜೇಸಿಗೆ ಯಲ್ಲಿ ಅವರು ತಾಯಿಯೊಂದಿಗೆ ತಮ್ಮ ಸೋದರಮಾವನ ಮನೆಗೆ ಮೊದಲಸಲ ಮೈಸೂರಿಗೆ ಬಂದರು. ಆಗ ಮಹಾರಾಜ ಕಾಲೇಜಿನಲ್ಲಿ ಕನ್ನಡ ಎಂ. ಎ. ಪ್ರಾರಂಭವಾಗುತ್ತದೆಂಬ ವದಂತಿ ಹರಡಿತ್ತು. ಕೂಡಲೇ ಡಿ. ಎಲ್. ಎನ್. ಅವರ ಮನಸ್ಸು ಆಕಡೆಗೆ ವಾಲಿತು. ಅವರು ಎಂ. ಎ. ತರಗತಿ ಸೇರಿಕೊಂಡಿದ್ದೂ ಆಯಿತು. ತಮ್ಮಿಬ್ಬರು ಮಿತ್ರರೊಂದಿಗೆ ಬಾಡಿಗೆ ಕೊಠಡಿ ಗೊತ್ತು ಮಾಡಿಕೊಂಡು ಬಡವಿದ್ಯಾರ್ಥಿಗಳಿಗೆಂದು ನಿಯೋಜಿತವಾಗಿದ್ದ ವಿಶ್ವವಿದ್ಯಾನಿಲಯದ ಹೋಟೆಲಿ ನಲ್ಲಿ ಊಟಮಾಡಿಕೊಂಡು ತಮ್ಮ ವ್ಯಾಸಂಗಾವಧಿಯನ್ನು ಮುಗಿಸಿದರು. ಟಿ. ಎಸ್. ವೆಂಕಣ್ಣಯ್ಯ, ಬಿ. ಎಂ. ಶ್ರೀಕಂಠಯ್ಯ, ಅನಂತಕೃಷ್ಣಶರ್ಮ, ಸಿ. ಆರ್. ನರಸಿಂಹಶಾಸ್ತ್ರಿ ಮೊದಲಾದವರು ಅವರ ಗುರುಗಳಾಗಿದ್ದರು. ಎ. ಆರ್. ಕೃಷ್ಣಶಾಸ್ತ್ರಿಗಳವರು ಕೆಲವುಕಾಲ ಅವರಿಗೆ ಅಧ್ಯಾಪಕರಾಗಿದ್ದರು. ಕಾಲೇಜಿನ ಬಳಿಯಿದ್ದ ಪ್ರಾಚ್ಯವಿದ್ಯಾಸಂಶೋಧನ ಸಂಸ್ಥೆ ಅವರ ಬುದ್ಧಿಯ ಹಸಿವಿಗೆ ಅಮೃತಾಹಾರದ ನಿಧಿಯಾಯಿತು. ಅನೇಕ ಹಳಗನ್ನಡ ಕೃತಿಗಳನ್ನು ಹಸ್ತಪ್ರತಿಗಳಿಂದಲೇ ಓದಿದರು. ಹಸ್ತಪ್ರತಿಗಳನ್ನೋದಿದಷ್ಟೂ ಅವರ ಜ್ಞಾನತೃಷೆ ಅಧಿಕ ವಾಗುತ್ತಿತ್ತು. ಎರಡು ವರ್ಷಗಳ ನಂತರ ಎಂ. ಎ. ಪರೀಕ್ಷೆಯಲ್ಲಿ ಪ್ರಥಮಸ್ಥಾನವನ್ನು ಗಳಿಸಿ ಪ್ರಥಮ ವೈಸ್‌ಚಾನ್ಸಲರ್ ಎಚ್. ವಿ. ನಂಜುಂಡಯ್ಯನವರ ಪದಕವನ್ನು ಗಳಿಸಿದರು.

ಅದೇ ವರ್ಷ ತಾನೆ ವಿಶ್ವವಿದ್ಯಾನಿಲಯ ಕನ್ನಡಕ್ಕೆ ಪ್ರಪ್ರಥಮವಾಗಿ ಸಂಶೋಧನ ವೇತನದ ಅವಕಾಶವನ್ನು ಕಲ್ಪಿಸಿತ್ತು. ಆ ಪ್ರಥಮ ವೇತನವನ್ನು ಪಡೆಯುವ ಭಾಗ್ಯ ನರಸಿಂಹಾಚಾರ್ಯರದಾಗಿತ್ತು. 'ವೀರಶೈವ ಸಾಹಿತ್ಯದ ಉಗಮ' ಎಂಬ ವಿಷಯ ವನ್ನು ಕುರಿತು ನಿಯಮಿತ ವೇಳೆಗೆ ಮುಂಚೆಯೇ ನಿಬಂಧವನ್ನು ಸಿದ್ಧಪಡಿಸಿದರು. ಆ ನಿಬಂಧದ ಒಂದು ಭಾಗ 'ಕೆಲವು ವಚನಕಾರರು' ಎಂಬ ಹೆಸರಿನಿಂದ ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟವಾಯಿತು. ಅನಂತರ ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಯಲ್ಲಿ ತಿಂಗಳಿಗೆ 80 ರೂಪಾಯಿ ಸಂಬಳದ ಮೇಲೆ ಕನ್ನಡ ಪಂಡಿತರಾಗಿ ನೇಮಕಗೊಂಡರು. ಆ ಕೆಲಸದ ಜೊತೆಗೆ ಮಹಾರಾಜಾ ಕಾಲೇಜಿನಲ್ಲಿ ಒಪ್ಪೊತ್ತಿನ ಪಂಡಿತರಾಗಿ ಪಾಠ ಹೇಳುತ್ತಿದ್ದರು. 1932 ರಲ್ಲಿ ಪೂರ್ಣಕಾಲದ ಪಂಡಿತರಾಗಿ ಮಹಾರಾಜಾ ಕಾಲೇಜಿನಲ್ಲಿ ನೇಮಕಗೊಂಡಾಗ ಅವರ ಸಂಬಳ 120 ರೂಪಾಯಿ! ಏಳು ವರ್ಷಗಳನಂತರ ಅಂದರೆ 1939 ರಲ್ಲಿ ಅವರು ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾದರು. 1945 ರಲ್ಲಿ ಉಪಪ್ರಾಧ್ಯಾಪಕರಾಗಿ ಬಡ್ತಿ ಪಡೆದು ಬೆಂಗಳೂರು ಸೆಂಟ್ರಲ್ ಕಾಲೇಜಿಗೆ ವರ್ಗವಾದರು. 1945 ರಲ್ಲಿ ಕನ್ನಡಕೋಶದ ಪ್ರಧಾನ ಸಂಪಾದಕರಾಗಿ ಸಾಹಿತ್ಯ ಪರಿಷತ್ತಿನಲ್ಲಿ ಹಗಲಿರುಳು ದುಡಿದು ಕನ್ನಡಕೋಶದ ಪ್ರಥಮ ಪುಟ ಗಳನ್ನು ಅಚ್ಚುಕಟ್ಟಾಗಿ ಸಿದ್ಧಪಡಿಸಿದರು. ಅಲ್ಲಿಂದ ಮತ್ತೆ ಪ್ರಾಧ್ಯಾಪಕರಾಗಿ ಮಹಾರಾಜಾ ಕಾಲೇಜಿಗೆ ಬಂದು 1962 ರ ಮಾರ್ಚಿ 31 ರಂದು ವಿಶ್ರಾಂತಿ ಪಡೆದರು.

ದುಡಿಮೆಯೇ ರಕ್ತಗತವಾಗಿರುವ ಕ್ರಿಯಾಶೀಲರಾದ ವ್ಯಕ್ತಿಗಳಿಗೆ ವಿಶ್ರಾಂತಿಯೆಂದ ರೇನು? ಸರ್ಕಾರಿ ನೌಕರಿಯಿಂದ ಅವರಿಗೆ ನಿವೃತ್ತಿಯೇ ಹೊರತು ಸಾಹಿತ್ಯ ಕ್ಷೇತ್ರದಿಂದಲ್ಲ.

ಓಲೆಯಗರಿಗೂ ಅವರಿಗೂ ಅಂಟಿಕೊಂಡು ಬಂದಿರುವ ಸಂಟು ಇಂದಿಗೂ ಬಿಟ್ಟುಹೋಗಿಲ್ಲ; ಶಬ್ದವಿಹಾರ ನಿಂತಿಲ್ಲ; ಗ್ರಂಥಾಲಯದ ನಿತ್ಯಯಾತ್ರೆ ಕಡಿದುಹೋಗಿಲ್ಲ; ವ್ಯಾಸಂಗ ಸಂಶೋಧನೆ ಮತ್ತು ಲೇಖನ ವ್ಯವಸಾಯಗಳು ಎಂದಿನಂತೆ ಸಾಗುತ್ತಿವೆ.

೩

ಕನ್ನಡ ಭಾಷಾಸಾಹಿತ್ಯ ಕ್ಷೇತ್ರಗಳಲ್ಲಿ ಸಂಶೋಧನೆ ವಿಮರ್ಶೆಗಳಿಗೆ ಮೀಸಲಾದ ವಿದ್ವತ್ತು ಈಚೀಚೆಗೆ ಅಂಕುರಗೊಂಡುದಾಗಿದೆ. ಕಿಟೆಲ್ ಸಾಹೇಬರಿಗೆ ಹಿಂದೆ ಮುಂದೆ ಕೆಲವು ಗಣ್ಯರಾದ ವಿದ್ವಾಂಸರು ಆ ನಿಟ್ಟಿನಲ್ಲಿ ತಕ್ಕಮಟ್ಟಿಗೆ ಕೆಲಸಮಾಡಿರುವರಾದರೂ ವಾಸ್ತವವಾಗಿ ಕಿಟೆಲ್ ಅವರಿಂದ ವಿದ್ವತ್‌ಪ್ರಪಂಚದ ಸಾಹಸಯಾತ್ರೆ ಪ್ರಾರಂಭವಾಯಿತೆನ್ನಬಹುದು. ಅವರು ಸಂಪಾದಿಸಿರುವ ವ್ಯಾಕರಣ ಲಕ್ಷಣಗ್ರಂಥಗಳು ಒತ್ತಟ್ಟಿಗಿರಲಿ; ಅವರು ರಚಿಸಿದ ಮಹಾಕೋಶ ವೊಂದೇ ಸಾಕು ಅವರ ಹೆಸರನ್ನು ಚಿರಸ್ಥಾಯಿಗೊಳಿಸುವುದಕ್ಕೆ. ಅವರ ಬಹುಮುಖವಾದ ಪಾಂಡಿತ್ಯ ಪ್ರತಿಭೆಗಳು ಕೋಶದ ರೂಪದಲ್ಲಿ ಮೂರ್ತಿಮತ್ತಾಗಿವೆ. ಮುಂದಿನ ಸಾಧನೆಸಿದ್ಧಿ ಗಳಿಗೆ ಈ ಗ್ರಂಥ ಆಧಾರಕಾರಣವೂ ಆಶ್ರಯಮಾತ್ರವೂ ಆಗಿದೆ. ಆದ್ದರಿಂದ ಕಿಟೆಲ್ ಅವರು ಕನ್ನಡದ ವಿದ್ವತ್‌ಸಾಮ್ರಾಜ್ಯದ ಮೂಲಸಂಸ್ಥಾಪಕರೆಂದೂ ಪ್ರಥಮ ಸಮ್ರಾಟರೆಂದೂ ಧಾರಾಳವಾಗಿ ಹೇಳಬಹುದು. ಅವರಂತೆಯೇ ಆ ಸಾಮ್ರಾಜ್ಯದ ಬಹುಮುಖವಾದ ವಿಸ್ತರಣೆಗೆ ಕಾರಣಪುರುಷರಾದ ರಾ. ನರಸಿಂಹಾಚಾರ್ಯರು ಶಿಖರಸ್ಥಾನದಲ್ಲಿ ನಿಂತಿದ್ದಾರೆ. ಅವರ ಕಿರಿಯ ಸಮಕಾಲೀನರಾದ ಬಸವನಾಳ, ಮುಳಿಯತಿಮ್ಮಪ್ಪಯ್ಯ ಮೊದಲಾದವರು ಮುಂದಿನ ಪೀಳಿಗೆಗೆ ಆದರ್ಶಪ್ರಾಯರಾಗಿದ್ದಾರೆ. ದ್ವಿತೀಯಘಟ್ಟದಲ್ಲಿ ಡಿ. ಎಲ್. ನರಸಿಂಹಾಚಾರ್ಯರು ಮತ್ತು ಅವರ ಸಮಕಾಲೀನರು ಆ ಸಾಮ್ರಾಜ್ಯದ ಗಡಿಗಳನ್ನು ಸುತ್ತಮುತ್ತ ವಿಸ್ತರಿಸಿ ಬುದ್ಧಿಸಾಹಸ ವನ್ನೂ ವಿವೇಕಸಾಮರ್ಥ್ಯವನ್ನೂ ಜ್ಞಾನಗಭೀರತೆಯನ್ನೂ ವ್ಯಕ್ತಪಡಿಸಿ ಆ ಕ್ಷೇತ್ರದಲ್ಲಿ ಮಹಾನಾಯಕಮಣಿಗಳಾಗಿ ಲೋಕಗೌರವಕ್ಕೆ ಭಾಜನರಾಗಿದ್ದಾರೆ.

ವಿದ್ವತ್ತೆಂಬುದು ಅಂಗಡಿ ಮುಂಗಟ್ಟುಗಳಲ್ಲಿ ಸುಲಭವಾಗಿ ದೊರೆಯುವ ವ್ಯಾಪಾರ ಸಾಮಗ್ರಿಯಲ್ಲ. ದೀರ್ಘಕಾಲದ ತಪಸ್ಯೆಯಿಂದ, ಸತತಾಭ್ಯಾಸದಿಂದ, ನಿರಂತರವಾದ ಚಿಂತನ ಮಂಥನಗಳಿಂದ ದೊರಕಬಹುದಾದ ಅಮೃತವಸ್ತು. ಪಾಂಡಿತ್ಯಸಂಪಾದನೆ ಬಹುಶ್ರಮಸಾಧ್ಯ ವಾದ ಶೀಘ್ರಫಲದಾಯಕವಲ್ಲದ ಸಾಧನೆಯಿಂದ ಲಭ್ಯವಾಗುವಂತಹುದು. ಭಾವಪ್ರಧಾನವಾದ ಕಾವ್ಯರಚನೆಯಷ್ಟು ಸರಾಗವಲ್ಲ ಬುದ್ಧಿಪ್ರಧಾನವಾದ ಸಂಶೋಧನ ಮತ್ತು ವಿಮರ್ಶನಕಾರ್ಯ. ಸ್ಫೂರ್ತಿಯೊದಗಿದಾಗ ಒಂದೇ ಉಸಿರಿನಲ್ಲಿ ಅವಿಚ್ಛಿನ್ನವಾಗಿ ಕಾವ್ಯಲಹರಿ ಪ್ರವಹಿಸುತ್ತದೆ. ಅಲ್ಲಿ ಚಿಂತನಮಂಥನಕ್ರಿಯೆ ಇಲ್ಲವೆಂದಲ್ಲ. ಅದಿದ್ದರೂ ಗುಪ್ತಗಾಮಿಯಾಗಿ, ಅವಕುಂಠನ ಶೀಲೆಯಂತೆ ವರ್ತಿಸುತ್ತದೆ. ಸಂಶೋಧನಕ್ರಿಯೆಯಲ್ಲಿ ಕಲ್ಪನೆ ಗುಪ್ತಗಾಮಿಯಾಗಿದ್ದು ಚಿಂತನಾಂಶ ನಾಯಕಪಾತ್ರವನ್ನು ವಹಿಸುತ್ತದೆ. ಚಿಂತನಮಂಥನಗಳಿಗೆ ಪ್ರೇರಕವಾದ ಆಧಾರ ಸಾಮಗ್ರಿಗಳ ಸಂಗ್ರಹಕಾರ್ಯಕ್ಕೆ ಸಂಶೋಧನೆಯಲ್ಲಿ ಅಗ್ರಮಾನ್ಯತೆ ಅನಿವಾರ್ಯ. ಈ ಕಾರಣ ದಿಂದ ಸಂಶೋಧಕ ಶೀಘ್ರಫಲವನ್ನು ನಿರೀಕ್ಷಿಸುವಂತಿಲ್ಲ. ಒಂದೊಂದು ಪದ ಒಂದೊಂದು ವಾಕ್ಯ ಬರೆಯುವಾಗಲೂ ಅವನು ತನ್ನ ಸ್ಮೃತಿಕೋಶವನ್ನೆಲ್ಲ ಕಲಕಬೇಕಾಗುತ್ತದೆ, ಪಾಂಡಿತ್ಯ ದುರ್ಗಕ್ಕೆ ಲಗ್ಗೆ ಹೂಡಬೇಕಾಗುತ್ತದೆ, ಗ್ರಂಥಭಂಡಾರವನ್ನು ಸೂರೆಗೊಳ್ಳಬೇಕಾಗುತ್ತದೆ, ಹತ್ತಾರುಕಡೆಗಳಿಂದ ವಿಷಯವನ್ನು ಸಂಚಯಿಸಬೇಕಾಗುತ್ತದೆ. ಇಷ್ಟಾದರೂ ತಾನು ಸುರಿಸುವ ಬೆವರಿಗೆ, ಮಾಡುವ ದುಡಿಮೆಗೆ ಅನುಗುಣವಾದ ಲಾಭವನ್ನವನು ನಿರೀಕ್ಷಿಸುವಂತಿಲ್ಲ.

ಸಂಶೋಧನೆ ನೀರಸವಾದ ವ್ಯಾಪಾರವೆಂದು ಕೆಲವರು ಭಾವಜೀವಿಗಳು ಬೇಜವಾಬ್ದಾರಿ ಯಿಂದ ಹರಟುವುದುಂಟು. ಈ ಹರಟೆಯ ಬುಗ್ಗೆಗೆ ಗರ್ವವೇ ಸೆಲೆ. ಸತ್ಯಸೌಂದರ್ಯಗಳ ಸಾಕ್ಷಾತ್ಕಾರವೇ ಮಾನವನ ಬುದ್ಧಿಸಾಹಸ ಮತ್ತು ಕಲ್ಪನಾ ವ್ಯಾಪಾರಗಳ ಕೊನೆಯಗುರಿ

ಯಾಗುವ ಪಕ್ಷಕ್ಕೆ ಕಾವ್ಯರಚನೆಯಂತೆಯೇ ಸಂಶೋಧನವ್ಯಾಪಾರವೂ ಆನಂದದಾಯಿಯಾಗುತ್ತದೆ. ತನ್ನ ಸತತ ಸಾಧನೆಯ ಪರಿಣಾಮವಾಗಿ ಹೊಸಬೆಳಕು ಸುಳುಹುದೋರಿದಾಗ ಸಂಶೋಧಕ ಆನಂದಪರವಶನಾಗುತ್ತಾನೆ; ಆ ಬೆಳಕು ಜನಮನವನ್ನರಳಿಸುವ ಅರುಣರಾಗವಾಗುತ್ತದೆ. ವಿಜ್ಞಾನಿಯ ವಿಶ್ಲೇಷಣಸಾಮರ್ಥ್ಯ ಮತ್ತು ಸತ್ಯನಿಷ್ಠೆಗಳಂತೆಯೇ ಕಾವ್ಯಪ್ರತಿಭೆಯೂ ಸಾಹಿತ್ಯಸಂಶೋಧಕನಲ್ಲಿ ಉಚ್ಚಪ್ರಮಾಣದಲ್ಲಿರಬೇಕು. ಸಾಹಿತ್ಯದ ಬೆಳವಣಿಗೆಗೆ ಮತ್ತು ಅದರ ಆರೋಗ್ಯಕ್ಕಾಗಿ ಪ್ರತಿಭಾಸ್ಪಿತರಾದ ಸಂಶೋಧಕ ವಿಮರ್ಶಕರ ಪೀಳಿಗೆ ಸದಾ ಅಭಿವೃದ್ಧಿಯಾಗುತ್ತಿರಬೇಕು. ಕಾವ್ಯಕ್ಷೇತ್ರದಲ್ಲಿ ಬುದ್ಧಿ ಭಾವಕ್ಕೆ ಶರಣಾದರೆ ಸಂಶೋಧನ ಸೀಮೆಯಲ್ಲಿ ಭಾವ ಬುದ್ಧಿಗೆ ಶರಣಾಗುತ್ತದೆ. ಕವಿ-ಸಂಶೋಧಕರಿಬ್ಬರ ಚರಮಗುರಿ ಒಂದೇ—ಆನಂದ; ಅವರ ಸಾಧನೆಯ ಮಾರ್ಗಮಾತ್ರ ಬೇರೆಬೇರೆ.

ತಮ್ಮ ಸಮಕಾಲೀನ ಪ್ರತಿಭಾವ್ಯಕ್ತಿಗಳು ತಂತಮ್ಮ ಕ್ಷೇತ್ರಗಳಲ್ಲಿ ಅಪೂರ್ವ ಸಿದ್ಧಿಯನ್ನು ಸಾಧಿಸಿದಂತೆ, ಡಿ.ಎಲ್.ಎನ್. ಅವರು ಸಂಶೋಧನ-ವಿಮರ್ಶೆಯ ಕ್ಷೇತ್ರದಲ್ಲಿ ಶಿಖರಸ್ಥಾನವನ್ನು ತಲುಪಿ ಅದ್ವಿತೀಯರಾಗಿದ್ದಾರೆ. ಅವರು ಕಾವ್ಯಕ್ಕೆ ಸೋತು ಸಂಶೋಧನೆಯ ಕಡೆಗೆ ವಿಮುಖರಾಗಿದ್ದರೆ ಕನ್ನಡದ ವಿದ್ವತ್ತು ಮುಕ್ಕಾಗುತ್ತಿತ್ತು, ಬರಡಾಗುತ್ತಿತ್ತು; ಕನ್ನಡ ಸಾಹಿತ್ಯ ಕ್ಷೇತ್ರದ ಒಂದು ಪ್ರಮುಖ ಭಾಗ ಪಾರ್ಶ್ವವಾಯುವಿಗೆ ಬಲಿಯಾಗುತ್ತಿತ್ತು. ಪದ್ಯದ ಕಡೆ ಮನಸವೊಲಿದಿದ್ದರೆ ಅವರೂ ಶ್ರೇಷ್ಠವರ್ಗದ ಕವಿಗಳಲ್ಲೊಬ್ಬರಾಗುತ್ತಿದ್ದರೆಂಬುದಕ್ಕೆ ಅವರ ಒಂದೆರಡು ತುಣುಕುಗಳಿಂದ ತಿಳಿಯುತ್ತದೆ 'ಲಾಳ ಕಟ್ಟಿಸಿಕೊಂಡ ಕುದುರೆ,' 'ಕಣ್ಣೋ ಕುರುಡೋ,' 'ವ್ಯಾಸಂಗದ ಹವ್ಯಾಸ'—ಮುಂತಾದ ಪ್ರಬಂಧಗಳನ್ನೋದಿದಾಗ ಅವರ ಕಾರಯಿತ್ರೀ ಪ್ರತಿಭೆಯ ಪರಿಚಯವಾಗುತ್ತದೆ. ಈ ಪ್ರತಿಭೆಯೇ ಸಂಶೋಧನೆಯ ಮತ್ತು ವಿಮರ್ಶೆಯ ರೂಪದಲ್ಲಿ ಹೊರಹೊಮ್ಮುತ್ತದೆ. ಬೇರೆ ಬೇರೆ ಅಚ್ಚಿನಲ್ಲಿ ಎರಕಹೊಯ್ದ ಗಾಜಿನ ಪಾಕ ಬೇರೆ ಬೇರೆ ರೂಪ ಪಡೆಯುವಂತೆ ಆಯಾಯ ಸನ್ನಿವೇಶ ಪಾತ್ರಗಳಿಗೆ ತಕ್ಕಂತೆ ಪ್ರತಿಭೆಯೂ ರೂಪಾಂತರ ಹೊಂದುತ್ತದೆ. ಸಂಸ್ಕಾರ ಸನ್ನಿವೇಶಗಳ ಅಭ್ಯಾಸ ಆಸಕ್ತಿಗಳ ಪರಿಣಾಮವಾಗಿ ಇದು ಕಾವ್ಯ ಕಾದಂಬರಿ ಕಥೆ ನಾಟಕ ವಿಮರ್ಶೆ ಸಂಶೋಧಗಳ ರೂಪವನ್ನು ಪಡೆಯುತ್ತದೆ. ಈ ಕಾರಣದಿಂದ ಸಂಶೋಧನ ಸಾಹಿತ್ಯವೂ ಸೃಷ್ಟಿಸಾಹಿತ್ಯವೇ. ಕಾವ್ಯ—ಸಂಶೋಧನೆಗಳು ಒಂದೇ ನಾಣ್ಯದ ಬೇರೆ ಬೇರೆ ಮುಖಗಳು, ಪರಸ್ಪರ ಪೂರಕಗಳು.

ಹಳೆಯುಳಿಕೆ ನುಡಿಗಳ ರೂಪಾರ್ಥಗಳನ್ನು ಖಚಿತಪಡಿಸುವಲ್ಲಿ, ಗ್ರಂಥ ಸಂಪಾದನೆಗೆ ಸಂಬಂಧಿಸಿದಂತೆ ಪಾಠಾಂತರಗಳನ್ನು ನಿರ್ಣಯಿಸುವಲ್ಲಿ ಡಿ. ಎಲ್. ಎನ್. ಅವರ ಪ್ರತಿಭಾಸಾಮರ್ಥ್ಯ ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತದೆ; ಕವಿ ವಿಜ್ಞಾನಿಗಳಿಬ್ಬರೂ ಏಕತ್ರ ಮೈಗೊಂಡಂತೆ, ಬುದ್ಧಿಭಾವಗಳು ಮದುವೆಗೊಂಡಂತೆ, ತರ್ಕ ಕಲ್ಪನೆಗಳು ಪರಸ್ಪರಾಲಿಂಗನದಲ್ಲಿ ತಲ್ಲೀನವಾದಂತೆ ತೋರುತ್ತದೆ. ಪ್ರಾಣವಿಲ್ಲದ ಶವಗಳಂತೆ, ದೇವರಿಲ್ಲದ ಗುಡಿಗಳಂತೆ ಶೂನ್ಯ ಸುರಿಯುತ್ತಿದ್ದ ಪದಗಳಿಗೆ ಚೈತನ್ಯ ತುಂಬಿ, ಭಗವತ್ ಶಕ್ತಿಯನ್ನು ಆವಾಹಿಸಿ, ಅವನ್ನು ಪುನರುಜ್ಜೀವನಗೊಳಿಸಿ, ಆ ಮೂಲಕ ಪ್ರಾಚೀನ ಮಹಾಕವಿಗಳ ಪ್ರತಿಭಾ ಶ್ರೀಮಂತತೆಯನ್ನು ಹೊರಗಾಣಿಸಿ, ಮುಂದಿನ ಪೀಳಿಗೆಯ ಸಂಶೋಧಕರಿಗೆ ಡಿ.ಎಲ್.ಎನ್. ಮಾರ್ಗದರ್ಶನ ಮಾಡಿದ್ದಾರೆ. ಕಾಲಗರ್ಭದಲ್ಲಿ ಹೂತುಹೋಗಿರುವ ಭಾಷೆಯ ಅಂತಸ್ತರಗಳಲ್ಲಿ ಮರೆಯಾಗಿರುವ ಮಾತುಗಳನ್ನು ಹೊರತೆಗೆದು, ಅವುಗಳ ವಯಸ್ಸು ರೂಪಸ್ವರೂಪ ಸತ್ವಗಳನ್ನು ನಿರ್ಣಯಿಸಿ, ಅವನ್ನು ಪುನರೂರ್ಜಿತಗೊಳಿಸುವಲ್ಲಿ ಅವರು ಪಟ್ಟಿರುವ ಶ್ರಮ, ವ್ಯಯಿಸಿರುವ ಕಾಲ, ತೋರಿಸಿರುವ ಸಾಹಸ, ನಡೆಸಿರುವ ಜಿಜ್ಞಾಸೆ ತಾಳಿರುವ ತಾಳ್ಮೆ ದುರ್ಜ್ಞೇಯವಾದುವು. ಜೊತೆಗೆ ಅವರ ಮತಿಯ ಹರಿತ, ಸ್ಮೃತಿಯ ಜಿಗುಟು ಎಷ್ಟರಮಟ್ಟಿಗೆ ಅವರ ಈ ಸಂಶೋಧನೆಯಲ್ಲಿ ನೆರವಾಗಿವೆಯೆಂಬುದು ಅವರನ್ನು ಬಲ್ಲವರಿಗೆಲ್ಲ ತಿಳಿದಿರುವ ವಿಷಯ. ಒಂದು ಪದದ ಅರ್ಥ ನಿರ್ಣಯಕ್ಕೆ ಎಷ್ಟು ಕಡೆಯಿಂದ—ಶಾಸನಗಳಿಂದ, ಹಲವಾರು ಪ್ರಾಚೀನ ಗ್ರಂಥಗಳಿಂದ, ಸಂಸ್ಕೃತ ಪ್ರಾಕೃತ ತೆಲುಗು ತಮಿಳು ಭಾಷೆ

ಗಳಿಂದ—ವಿಷಯ ಸಂಗ್ರಹಿಸಿದ್ದಾರೆಂಬುದು ಅವರ 'ಶಬ್ದವಿಹಾರ'ದಿಂದ ತಿಳಿಯುತ್ತದೆ. ಅವರು ತಂದಡಕಿರುವ ಆಧಾರ ಸಾಮಗ್ರಿ ಎಂಥವನಿಗಾದರೂ ಕೈಕಾಲು ಬಿಡಿಸುತ್ತವೆ, ಶಕ್ತಿಯನ್ನುಡುಗಿಸುತ್ತವೆ, ತಲೆಸುತ್ತು ಬರಿಸುತ್ತವೆ. ಮೇಗಾಳಿ ಕಿಗ್ಗಾಳಿ, ಹುಡುಕುನೀರು, ಒಲ್ಲಣಿಗೆ, ಕಾಳಸೆಪಬಂಗಾಸು, ಕಾರೋಹಣದ ಪಟಿ ಮುಂತಾದ ಪದಗಳ ಪೂರ್ವಭವಾವಳಿಯನ್ನು ನಿರೂಪಿಸುವಾಗ ಅವರು ಜೈನಪುರಾಣಗಳ ಚಾರಣ ಋಷಿಗಳಂತೆ ಗೋಚರಿಸುತ್ತಾರೆ. ಆದಿಪುರಾಣದ ೧೧ ನೆಯ ಸಂಧಿಯ ೪೩ ನೆಯ ಕಂದ ಪದ್ಯದಲ್ಲಿ ಬರುವ 'ಕೊಳತ' ಎನ್ನುವ ಮಾತಿನ ಅರ್ಥ ಯಾವ ವಿದ್ವಾಂಸನಿಗೂ ತಿಳಿಯದೆ, ವಿದ್ವಜ್ಜನ ಪೇಚಾಟಕ್ಕೆ ಸಿಕ್ಕಿ ಲಜ್ಜೆಗೊಂಡಿದ್ದಾಗ, ಪಂಪನೇ ಡಿ. ಎಲ್. ಎನ್. ಅವರ ಆತ್ಮವನ್ನು ಮಿಡಿದನೋ ಎನ್ನುವಂತೆ ಅವರು ಅದರ ಕುಲಗೋತ್ರಗಳನ್ನು ಕಂಡುಹಿಡಿದು, ಅದರ ಅರ್ಥವನ್ನು ನಿಷ್ಕರ್ಷಿಸಿ, ಪ್ರಾಚೀನ ಮಹಾಕವಿಯೊಬ್ಬನನ್ನು ರಕ್ಷಿಸಿದ್ದಲ್ಲದೆ, ವಿದ್ವತ್ತಿನ ಕೋಡಿಗೆ ಚಿನ್ನದ ಅಣಸಪಿಟ್ಟರು. ಹೀಗೆ ಹಳಗನ್ನಡದ ಪದಗಳ ಮರ್ಜಿಯನ್ನರಸುತ್ತ, ಚರ್ಯೆಯನ್ನು ವಿವರಿಸುತ್ತ, ಕಣ್ಮುಚ್ಚಿಕೊಂಡು ಅದರ ಅರ್ಥವನ್ನು ಮೆಲುಕು ಹಾಕುತ್ತ, ಅದರ ಭಾವ ವಿಲಾಸವನ್ನು ಚಪ್ಪರಿಸುತ್ತ, ಆನಂದ ಪರವಶರಾಗುವ ಆ ಶಬ್ದ ಮರ್ಮಜ್ಞರನ್ನು ನೋಡಬೇಕು!

ಪಾಠಾಂತರ ನಿಷ್ಕರ್ಷೆಯಲ್ಲಂತು ಡಿ. ಎಲ್. ಎನ್. ಸಿದ್ಧಹಸ್ತರು. ಸಾವಿರಾರು ವರ್ಷಗಳ ಹಿಂದಿನ ಕವಿಯೊಬ್ಬನ ಮನೋಗರ್ಭವನ್ನು ಪ್ರವೇಶಿಸಿ, ಅವನ ಅನುಭವವನ್ನು ತಮ್ಮದಾಗಿಸಿಕೊಂಡು, ಮೂಲಕವಿಯ ಪ್ರತಿಭೆಯನ್ನು ಪ್ರತಿಬಿಂಬಿಸುವಂಥ ಪಾಠವನ್ನು ನಿರ್ಣಯಿಸುವಲ್ಲಿ ಡಿ. ಎಲ್. ಎನ್. ಅವರ ಸಂಯೋಜಕಪ್ರತಿಭೆ, ಊಹಾಶಕ್ತಿ, ಬಹುಶ್ರುತತ್ವ ಮತ್ತು ಯಥಾರ್ಥ ಜ್ಞಾನಗಳು ಸುವ್ಯಕ್ತವಾಗುತ್ತವೆ. ಅವರೇ ಹೇಳುವಂತೆ ಅನುಸೃಷ್ಟಿಯನ್ನು ಮಾಡುವ ಶಕ್ತಿಯುಳ್ಳ ಪ್ರತಿಭೆ ಶೂನ್ಯವಾಗಿದ್ದರೆ ಇಂಥ ಗುರುಕಾರ್ಯ ಸಾಧ್ಯವಾಗದು. ತರ್ಕ ವ್ಯಾಕರಣ ಕಾಮಶಾಸ್ತ್ರ ಅಶ್ವಶಾಸ್ತ್ರ ಗಜವಿಜ್ಞಾನ ದ್ಯೂತಕಲೆ ಮೊದಲಾದ ಲೋಕದ ಎಲ್ಲ ವಿದ್ಯೆಗಳನ್ನೂ ಕಲೆಗಳನ್ನೂ ಸಂಪಾದಕ ನೆರೆಗೊಳ್ಳದಿದ್ದರೆ ಅವನ ಕಾರ್ಯ ಸಮರ್ಪಕವಾಗಲಾರದು. ಪಂಪಭಾರತದ ಮೊದಲ ಪದ್ಯದಲ್ಲಿ ಬರುವ 'ಸುಪುಷ್ಪವೃಷ್ಟಿಯ' ಎಂಬ ಅರ್ಥವಾಗದ ಪದ ಪುಂಜವನ್ನು ಸರಿಪಡಿಸಬೇಕಾದರೆ ಶಿಲ್ಪಶಾಸ್ತ್ರದ ನೆರವು ಬೇಕಾಗುತ್ತದೆ. ಈ ನೆರವಿನಿಂದ ಅದು 'ಸುಪುಷ್ಪಪಟ್ಟ'ವೆಂದಿರಬೇಕೆಂಬುದಾಗಿ ಡಿ. ಎಲ್. ಎನ್. ನಿರ್ಣಯಿಸಿ, ಮೂಲ ಕವಿಯ ಅನುಭವ ವಿಶೇಷದಿಂದ ವಂಚಿತರಾಗಲಿದ್ದ ಸಂಕಟದಿಂದ ಸಹೃದಯರನ್ನು ಪಾರು ಮಾಡಿದ್ದಾರೆ. ಕಾಮಶಾಸ್ತ್ರದ ಪರಿಚಯವಿಲ್ಲದೆ ಆದಿಪುರಾಣದ ೧೧ ನೆಯ ಆಶ್ವಾಸದ ೯೯ ನೆಯ ವೃತ್ತದಲ್ಲಿ ಬರುವ 'ಭೂಷಿತಕಮಂ' ಎಂಬ ಪದವನ್ನು ಸರಿಪಡಿಸಲಾಗದೆಂದು ತೋರಿಸಿದ್ದಾರೆ. 'ಬಸವಣ್ಣನವರ ಕೆಲವು ವಚನಗಳ ಪಾಠ' ಎಂಬ ಲೇಖನದಲ್ಲಿ ಕೆಲವು ವಚನಗಳ ಪಾಠಾಂತರಗಳನ್ನು ಸರಿಯಾಗಿ ಗುರುತಿಸಿ, ತಿದ್ದಿದ ಪಾಠಗಳ ರಮಣೀಯತೆಯ ಉತ್ಕರ್ಷವನ್ನೆತ್ತಿ ತೋರಿಸಿ, ವಚನಗಳ ಹಾಗೂ ಹಳಗನ್ನಡ ಕಾವ್ಯಗಳ ಶಾಸ್ತ್ರೀಯ ಪರಿಶೋಧನೆಯ ಅಗತ್ಯವನ್ನು ಸ್ಪಷ್ಟಪಡಿಸಿದ್ದಾರೆ. 'ಹರಿವ ಹಾವಿಂಗಂಜೆ' ಎಂದು ಪ್ರಾರಂಭವಾಗುವ ವಚನದಲ್ಲಿ ಬರುವ 'ಪರಸ್ತ್ರೀಯೆಂಬ ಜೂಜಿಂಗಂಜುವೆ' ಎಂಬ ಪದಪುಂಜವನ್ನು ಸಾಧಾರನಾಗಿ 'ಪರಸ್ತ್ರೀಯೆಂಬ ಜೂಬಿಂಗಂಜುವೆ' ಎಂದು ತಿದ್ದಿರುವಲ್ಲಿ ಅವರ ಪಾಂಡಿತ್ಯದ ಆಳ ಹರಹುಗಳೂ ಕಾವ್ಯಪ್ರಜ್ಞೆಯ ಅನನ್ಯತೆಯೂ ಅಪಾರತ್ವವೂ ರೂಪುದೋರುತ್ತವೆ. ಶಾಸನಗಳ ಆಧಾರದಿಂದ 'ಜೂಬು' ಪದದ ಅರ್ಥವನ್ನು ಹೊರಗೆಳೆಯುವಾಗ ವಾಚಕರಿಗೆ ರೋಮಾಂಚವಾಗದಿರದು. ತಾವೇ ಸ್ವತಃ ಹಳಗನ್ನಡ ಗ್ರಂಥಗಳನ್ನು ಸಂಪಾದಿಸಿ, ಕನ್ನಡ ಗ್ರಂಥಸಂಪಾದನೆಯನ್ನು ಶಾಸ್ತ್ರೀಯಗೊಳಿಸಿ, ಸ್ವಾನುಭವರೂಪದ 'ಕನ್ನಡ ಗ್ರಂಥಸಂಪಾದನೆ' ಎಂಬ ನಾಯಕಕೃತಿಯನ್ನು ರಚಿಸಿ, ಹಳಗನ್ನಡ ಸಾಹಿತ್ಯದ ಪುನರ್ಮೌಲ್ಯಮಾಪನ ದೃಷ್ಟಿಯಿಂದ ಕನ್ನಡಸಾಹಿತ್ಯ ಕ್ಷೇತ್ರದಲ್ಲಿ ನೂತನ ಶಕೆಯನ್ನಾರಂಭಿಸಿ ಉನ್ನತ ವಿಮರ್ಶೆಗೆ ಭದ್ರವಾದ ತಳಹದಿಯನ್ನು ಹಾಕಿದ್ದಾರೆ.

ತಾವು ಪರಿಶೋಧಿಸಿ ಸಂಪಾದಿಸಿರುವ ಹಳಗನ್ನಡ ಗ್ರಂಥಗಳಿಗೆ ಬರೆದಿರುವ ಒಂದೊಂದು ದೀರ್ಘ ಪೀಠಿಕೆಯೂ ಸ್ವಸಂಪೂರ್ಣವಾದ ಉದ್ವ ಕೃತಿಯಾಗುತ್ತದೆ. ಒಂದೊಂದು ಕೃತಿಯ ಮೂಲವನ್ನು ಶೋಧಿಸಿ, ಆಕರ ಗ್ರಂಥಗಳನ್ನು ಪರೀಕ್ಷಿಸಿ, ತುಲನಾತ್ಮಕವಾಗಿ ವಿಮರ್ಶಿಸಿ, ಆ ಕೃತಿಯನ್ನು ರೂಪಿಸಿದ ಪ್ರಭಾವ ಪ್ರೇರಣೆಗಳನ್ನು ವಿವೇಚಿಸಿ, ಕಥಾ ಸಂವಿಧಾನ ಪಾತ್ರ ಸನ್ನಿವೇಶ ವರ್ಣನೆ ಶೈಲಿಗಳನ್ನು ವ್ಯಾಖ್ಯಾನಿಸುವಲ್ಲಿ, ಆ ಕೃತಿಯ ಸಾರವನ್ನು ಭಟ್ಟಿಯಿಳಿಸಿ ಅದರ ಸಮಗ್ರ ಸ್ವರೂಪವನ್ನು ಸಮರ್ಪಕವಾಗಿ ತೋರಿಸಿಕೊಡುವಲ್ಲಿ ಅವರು ಉಚ್ಚ ವಿಮರ್ಶೆಯಲ್ಲಿ ಒಂದು ಹೊಸ ಸಂಪ್ರದಾಯವನ್ನು ಸ್ಥಾಪಿಸಿದ್ದಾರೆ. ಆಧುನಿಕ ವಿಮರ್ಶೆಯ ಮೂಲ ತತ್ವಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಿದ ಪಂಪರಾಮಾಯಣ ಸಂಗ್ರಹ, ಸುಕುಮಾರ ಚರಿತೆ, ಸಿದ್ಧರಾಮ ಚರಿತೆಯ ಸಂಗ್ರಹಗಳ ಮುನ್ನುಡಿಗಳು ಅವರ ಶಿಷ್ಯರಿಗೂ ಮುಂದಿನ ತಲೆಮಾರಿನ ವಿದ್ವಾಂಸರಿಗೂ ಸ್ಫೂರ್ತಿ ಉತ್ತೇಜನಗಳನ್ನು ನೀಡುವಂಥವಾಗಿವೆ. ಇವುಗಳ ಜೊತೆಗೆ ಅಗ್ಗಳದೇವ, ಪದ್ಮನಾಭ, ರುದ್ರಭಟ್ಟ, ಆದಿದೇವ, ಸಿದ್ಧಲಿಂಗೇಶ, ಶಿವಸಿದ್ಧರಾಮ, ಜಟಾಸಿಂಹನಂದಿ, ನಂಜುಂಡ, ಕರ್ಣಪಾರ್ಯ, ಗುಣವರ್ಮ, ಎಳಂದೂರು ಹರೀಶ್ವರ, ಲಕ್ಷ್ಮೀಶ ಮೊದಲಾದ ಕವಿಗಳ ಕಾವ್ಯಗಳನ್ನು ಪರಿಚಯ ಮಾಡಿಕೊಟ್ಟಿದ್ದಾರೆ. ವಿದ್ವಾಂಸರಿಗೆ ಸವಾಲಾಗಿ ಕಗ್ಗಂಟಾಗಿರುವ ಹಲವು ಕವಿಗಳ ಕಾಲ ಸಂಬಂಧವಾದ ಸಮಸ್ಯೆಗಳನ್ನು ಪರಿಹರಿಸಿ ಕನ್ನಡ ಸಾಹಿತ್ಯ ಚರಿತ್ರೆಗೆ ಕಲಶವಿಟ್ಟಿದ್ದಾರೆ.

ಸಮಗ್ರ ಕನ್ನಡ ನಾಡಿನಲ್ಲಿ ಡಿ. ಎಲ್. ಎನ್. ಅವರಂತೆ ಹಳಗನ್ನಡ ನಡುಗನ್ನಡ ಸಾಹಿತ್ಯವನ್ನು ಸಂಪೂರ್ಣವಾಗಿ ಜೀರ್ಣಮಾಡಿಕೊಂಡಿರುವ ವ್ಯಕ್ತಿಗಳು ವಿರಳ; ಇಲ್ಲವೆಂದರೂ ಅತಿಶಯೋಕ್ತಿಯಾಗಲಾರದು. ಹೆಚ್ಚು ಕಡಿಮೆ ಎಲ್ಲ ಕೃತಿಗಳನ್ನೂ ಓಲೆಯಗರಿಯ ಪ್ರತಿಗಳ ಮೂಲಕ ಅಭ್ಯಾಸಮಾಡಿದ್ದಾರೆ. ಬಹುಶಃ ಅವರ ತಿಳಿವಳಿಕೆಗೆ ಬಾರದ ಕವಿಯಿಲ್ಲ, ಕಣ್ಣಿಗೆ ಬೀಳದ ಗ್ರಂಥವಿಲ್ಲ. ಹಳಗನ್ನಡ ಸಾಹಿತ್ಯದ ಯಾವ ಒಂದು ಪದ, ಪದಪುಂಜ, ವಾಕ್ಯಮಾಲೆಯನ್ನಾದರೂ ಕುಳಿತಲ್ಲಿ ನಿಂತಲ್ಲಿ ಕೇಳಿದೊಡನೆ ಕೇವಲ ಸ್ಮೃತಿಯ ಒತ್ತಳಿಕೆಯಿಂದ ಹೊರಗೆಳೆಯಬಲ್ಲರು. ಪ್ರತಿಯೊಬ್ಬ ಕವಿಯ ಕೃತಿಯನ್ನು ಆಧುನಿಕ ವಿಮರ್ಶೆಯ ಒರೆಗಲ್ಲಿಗೆ ಹಚ್ಚಿ, ಅದರಲ್ಲಿ ಅನುಕರಣವೆಷ್ಟು, ಸ್ವಂತಿಕೆಯೆಷ್ಟು, ಪಿತ್ರಾರ್ಜಿತವಾದದ್ದೆಷ್ಟು, ಸ್ವಯಾರ್ಜಿತವಾದದ್ದೆಷ್ಟು, ಅದರ ನೆಲೆಬೆಲೆಗಳೇನೆಂಬುದನ್ನು ಅತ್ಯಂತ ಪ್ರಾಮಾಣಿಕತೆಯಿಂದ ಸತ್ಯನಿಷ್ಠೆಯಿಂದ ಪರೀಕ್ಷಿಸಿದ್ದಾರೆ. ಹಳಗನ್ನಡದ ಮೇಲಣ ಅವರ ಪ್ರಭುತ್ವ ಅಪ್ರತಿಹತವಾದದ್ದು. ಆನರ್ಸ್ ವಿದ್ಯಾರ್ಥಿಗಳಿಗೊಮ್ಮೆ ಏರ್ಪಡಿಸಿದ್ದ ಬೀಳ್ಕೊಡಿಗೆಯ ಸಮಾರಂಭದಲ್ಲಿ ಸುಮಾರು ಅರ್ಧಗಂಟೆಯ ಕಾಲ ನಿರರ್ಗಳವಾಗಿ ಅಪ್ರಯಾಸವಾಗಿ ಹಳಗನ್ನಡದಲ್ಲಿ ಮಾತಾಡಿ, ಸಭಿಕರನ್ನು ದಂಗು ಬಡಿಸಿದರು.

ಪ್ರಾಚೀನ ಸಾಹಿತ್ಯದ ಬಗೆಗೆ ಒಲವರವನ್ನು ತೋರಿಸಿದ ಡಿ. ಎಲ್. ಎನ್. ಏಕೋ ಏನೋ ಹೊಸಗನ್ನಡ ಸಾಹಿತ್ಯದ ಕಡೆಗೆ ಸಾಕಷ್ಟು ಗಮನ ಹರಿಸಿದಂತೆ ಕಾಣುವುದಿಲ್ಲ. ಸಮಯಾಭಾವವೂ ಇದಕ್ಕೆ ಪ್ರಮುಖ ಕಾರಣವಿರಬೇಕು. ಸಂಶೋಧನೆಯ ಮತ್ತು ವಿಮರ್ಶೆಯ ಪ್ರಬಂಧಗಳು ಅವರ ಕಣ್ತಪ್ಪಿಸಿಕೊಳ್ಳುವಂತಿಲ್ಲ. ಕಥೆಕಾದಂಬರಿ ನಾಟಕ ಮೊದಲಾದ ಪ್ರಕಾರಗಳ ಹುಲುಸು ಬೆಳೆಯನ್ನು ಗಮನಿಸುತ್ತಿದ್ದರೂ ಅವುಗಳನ್ನು ಕುರಿತು ಹೆಚ್ಚು ಬರೆದಿಲ್ಲ. ಪೀಠಿಕಾರೂಪದ ಮತ್ತು ಪರಿಚಯಾತ್ಮಕವಾದ ಲೇಖನಗಳನ್ನು ನೋಡಿದಾಗ, ಅಲ್ಲಿಯ ವಿಮರ್ಶೆಯ ಮಟ್ಟವನ್ನು ಗಮನಿಸಿದಾಗ, ಈ ಕಡೆಗೂ ಅವರ ಮನಸ್ಸು ಹರಿದಿದ್ದರೆ ಅದು ಹೊರವಾಗಿ ಬೆಳೆಯುತ್ತಿತ್ತೆನ್ನುವುದರಲ್ಲಿ ಸಂಶಯವಿಲ್ಲ. ವಿಮರ್ಶೆಗೆ ಯಾವ ಪುಸ್ತಕವನ್ನಾರಿಸಿಕೊಂಡರೂ ನಿರ್ಮತ್ಸರವಾಗಿ ಅದರ ಗುಣವನ್ನು ಪ್ರಶಂಸಿಸಿ, ನಿರ್ದಾಕ್ಷಿಣ್ಯವಾಗಿ ಅದರ ಕುಂದನ್ನೆತ್ತಿ ತೋರಿಸಿ, ನಿರ್ಮಮತೆಯಿಂದ ನಿರ್ವಂಚನೆಯಿಂದ ಆ ಕೃತಿಯ ಬೆಲೆಯನ್ನು ಗೊತ್ತುಮಾಡುತ್ತಾರೆ. 'Heritage of Karnataka' ಎಂಬ ಮುಗಳಿಯವರ ಗ್ರಂಥವನ್ನು ವಿಮರ್ಶಿಸುತ್ತ ದ್ರಾವಿಡ ಪೂರ್ವಜನಾಂಗದ ವಿವರಣೆ ಇಲ್ಲದ್ದೊಂದು ದೊಡ್ಡಕೊರತೆಯೆಂದು ತೋರಿಸಿದ್ದಾರೆ. 'ಕಣ್ಮರೆಯಾದ ಕನ್ನಡ' ಮತ್ತು 'ಮಹಾರಾಷ್ಟ್ರರ ಮೂಲ' ಎಂಬ ಕೃತಿ

ಗಳಲ್ಲಿ ಶಂ. ಬಾ ಜೋಷಿಯವರು ಮಂಡಿಸಿರುವ ವಾದವನ್ನು ಬುಡಮುಟ್ಟ ಅಲುಗಾಡಿಸಿದ್ದಾರೆ. ಶ್ರೀರಂಗರ 'ವೈದ್ಯರಾಜ' ಎಂಬ ನಾಟಕವನ್ನು ವಿಮರ್ಶಿಸುತ್ತ ಅದರ ಲೋಪದೋಷಗಳನ್ನು ನಿರ್ಭಯವಾಗಿ ಬಯಲಿಗೆಳೆದಿದ್ದಾರೆ: "ಆದರೆ ಇನ್ನು ಕೆಲವೆಡೆಗಳಲ್ಲಿ ನಾಟಕದ ಬೆಳೆವಣಿಗೆಗಾಗಲಿ ಪಾತ್ರಗಳ ಗುಣದೋಷ ವಿಕಾಸಕ್ಕಾಗಲಿ ಸ್ವಲ್ಪವೂ ಸಹಾಯವನ್ನು ಮಾಡದ ಅನಾವಶ್ಯಕವಾದ ಸಂಭಾಷಣೆಯೂ ದೃಶ್ಯವಿಸ್ತರಣವೂ ಬೆಳೆಯುತ್ತ ಹೋಗಿವೆ . . . ಜನಜೀವನವನ್ನು ಸ್ವಲ್ಪವೂ ಹೆಚ್ಚು ಕಡಮೆಯಾಗದಂತೆ ಸಹಜವಾಗಿ ಚಿತ್ರಿಸುವುದು ಸಾಮಾಜಿಕ ನಾಟಕದ ಮುಖ್ಯ ಕರ್ತವ್ಯ. ಆದರೆ ಈ ನಾಟಕದಲ್ಲಿ ಇಂತಹ ಪ್ರಯತ್ನವಾವುದೂ ಸರಿಯಾಗಿ ನಡೆದಿರುವಂತೆ ಕಾಣುವುದಿಲ್ಲ." ಹೀಗೆಯೇ ಯಾವ ಕೃತಿಯನ್ನು ಕೈಗೆತ್ತಿಕೊಂಡರೂ ಒಳ್ಳೆಯದನ್ನು ಮುಕ್ತ ಕಂಠದಿಂದ ಶ್ಲಾಘಿಸುತ್ತಾರೆ, ಸರಿಯಲ್ಲದ್ದನ್ನು ನಿರ್ಭಯವಾಗಿ ಖಂಡಿಸುತ್ತಾರೆ.

'ಮರಳಿಮಣ್ಣಿಗೆ'ಯನ್ನು ಕುರಿತ ವಿಮರ್ಶೆಯಂತು ಕಾವ್ಯಮಯವಾದ ನೂತನ ಸೃಷ್ಟಿಯೆಂದೇ ಹೇಳಬಹುದು. ವಿಮರ್ಶಕರು ಕಾದಂಬರಿಯಲ್ಲಿ ತಲ್ಲೀನರಾಗಿ, ಅಲ್ಲಿಯ ಪಾತ್ರಗಳ ಸುಖದುಃಖಗಳಲ್ಲಿ ಸಮಭಾಗಿಯಾಗಿ, ಅಲ್ಲಿಯ ಘಟನೆಗಳಲ್ಲಿ ತಾದಾತ್ಮ್ಯಹೊಂದಿ, ಅಲ್ಲಿಯ ಅನುಭವ ಸಂಪತ್ತನ್ನು ಪುನರನುಭವಿಸಿ, ಆ ಕಾದಂಬರಿಯ ಮಹತ್ತನ್ನು ತೋರಿಸಿಕೊಟ್ಟಿದ್ದಾರೆ. ಆ ಮಹದ್ದರ್ಶನದಿಂದ ಅವರ ಭಾಷೆ ನೆಲದಿಂದ ಗಗನಕ್ಕೆ ಚಿಮ್ಮುವಂತಾಗಿದೆ: "ಸಂಸಾರದ ಸಂಗ್ರಾಮದಲ್ಲಿ, ಬಡತನದ ವಿಮಾನ ದಾಳಿಯಲ್ಲಿ, ತನ್ನ ಪೌರುಷವನ್ನು ನಾಗವೇಣಿ ಪ್ರದರ್ಶಿಸಿದ ಅವೆಷ್ಟೋ ಕಥಾನಕಗಳು ಎಂಥವರಿಗಾದರೂ ಕರುಳನ್ನು ಕೊರೆಯುವುವು." ಹೃದಯದ ಅನುಭವಗಳಿಗೆ ಸಾಕಾರತೆಯನ್ನು ನೀಡುವ ಭಾಷೆಯ ಮೋಡಿ ಅವರಿಗೆ ವಶವಾಗಿದೆಯೆನ್ನುವುದಕ್ಕೆ ಒಂದು ನಿದರ್ಶನ ಕೊಡಬಹುದು: "ಅವನು ಹಳ್ಳಿಯ ತಂಟೆ ತಕರಾರುಗಳಿಗೆ ತತ್ತಿಯಕೋಳಿ. ಅವನು ಹಾಕಿದ ಮೊಟ್ಟೆಗಳು ಮರಿಗಳಾಗಿ ಬಲಿತು ಊರನ್ನು ತಿಪ್ಪೆಯಾಗಿ ಕೆದರಬಲ್ಲುವು." ಹೀಗೆಯೇ ಮೈಸೂರು ಮಲ್ಲಿಗೆಯನ್ನು ಕುರಿತು ಬರೆಯುವಾಗ ಅದು "ಕಸ್ತೂರಿಯ ನೆಲದಲ್ಲಿ ಕಾಮನ ಬಿಲ್ಲನ್ನು ಬಿತ್ತಿ ಬೆಳೆಯಿಸಿರುವ ಹೂದೋಟ; ಏನುಬಣ್ಣ, ಏನುಕಂಪು, ಎಂಥ ಸೊಗಸು" ಎಂದಿದ್ದಾರೆ. ಡಿ. ಎಲ್. ಎನ್. ಅವರ ಕವಿಹೃದಯ ಹೀಗೆಯೇ ಅನೇಕ ಕಡೆ ಪುಟಿಯುತ್ತದೆ. ಅವರು ಪದ್ಯವನ್ನೇ ರಚಿಸಬೇಕಿಲ್ಲ. ಪದ್ಯದಿಂದಲೇ ಸಾಹಿತ್ಯ ಶ್ರೀಮಂತವಾಗುವುದಿಲ್ಲ. ಭಾಷೆಯ ಮರ್ಜಿಯನ್ನು ಬಲ್ಲ ಪ್ರತಿಭಾಸಂಪನ್ನ ಗದ್ಯದಲ್ಲಿ ಪದ್ಯದ ವಿಲಾಸವನ್ನೂ ಅದರ ಶಕ್ತಿ ತೇಜಸ್ಸುಗಳನ್ನೂ ತೋರಿಸಬಲ್ಲ. ಆದರೆ ಅಂಥ ಗದ್ಯರಚನೆ ಪದ್ಯರಚನೆಗಿಂತ ಕಷ್ಟವಾಗುತ್ತದೆ. ಇತ್ತೀಚೆಗೆ ಪದ್ಯ ಗದ್ಯದ ಜಾಡುಹಿಡಿಯುತ್ತಿರುವುದೇ ಇದಕ್ಕೆ ಸಾಕ್ಷಿ. ಗದ್ಯದಿಂದ ಸಾಹಿತ್ಯ ಶ್ರೀಮಂತವಾಗುತ್ತದೆ, ವೀರ್ಯವತ್ತಾಗುತ್ತದೆ, ಬಹುರೂಪಿಯಾಗುತ್ತದೆ. ಡಿ. ಎಲ್. ಎನ್. ಅಂಥ ಗದ್ಯವನ್ನು ಶಿಲ್ಪಿಸಿ, ಕನ್ನಡಕ್ಕೆ ಮಹದುಪಕಾರಮಾಡಿದ್ದಾರೆ.

೪

ನಡೆನುಡಿಗಳಲ್ಲಿ ಡಿ. ಎಲ್. ಎನ್. ತುಂಬಿದಕೊಡ; ಒಟ್ಟಿನಲ್ಲಿ ಭೂಮಿತೂಕದ ವ್ಯಕ್ತಿ. ವಿನಯ ಅವರ ಹುಟ್ಟುಗುಣ; ಅದು ಅವರ ವಿದ್ವತ್ತಿಗೆ ಭೂಷಣಪ್ರಾಯವಾಗಿದೆ. ಅವರ ವ್ಯಕ್ತಿತ್ವದಲ್ಲಾಗಲೀ ಅವರ ಬರೆಹಗಳಲ್ಲಾಗಲೀ ಅಹಂಕಾರ ಲವಲೇಶವೂ ಕಾಣುವುದಿಲ್ಲ. ಅಹಂಕಾರವೆಂಬ ಪದವೇ ಅವರ ಕೋಶದಲ್ಲಿಲ್ಲ. ತಾವು ದೊಡ್ಡ ವಿದ್ವಾಂಸರೆಂಬ ಅರಿವೂ ಇದ್ದ ಹಾಗೆ ಕಾಣುವುದಿಲ್ಲ. ಆ ಅರಿವಿಲ್ಲದ್ದರಿಂದಲೇ ಅವರ ಶಿರ ಸ್ವಲ್ಪ ಬಾಗಿದಂತೆ ಕಾಣುತ್ತದೆ. ಯಾರಾದರೂ ಮತ್ತೊಬ್ಬರ ಕೃತಿಯಲ್ಲಿ ಹುಳುಕನ್ನೆತ್ತಿ ತೋರಿಸಿ ಕಟುವಾಗಿ ಟೀಕಿಸಿದರೆಂದರೆ ಅವರಿಗಾಗದು. ನಡೆಯುವವನು ಎಡಹುತ್ತಾನೆ; ಬರೆಯುವವನು ತಡವರಿಸುತ್ತಾನೆ. ತಪ್ಪು ತೋರಿಸುವುದು ವಿಮರ್ಶಕನ ಕರ್ತವ್ಯ ಸರಿ. ಆದರೆ ಕುಹಕ ವ್ಯಂಗ್ಯ ಕಲಹ ಕಟಕಿ ತರವಲ್ಲವೆಂಬುದು ಅವರ ಅಭಿಪ್ರಾಯ. ತಮ್ಮನ್ನು ಯಾರಾದರೂ ಉಗ್ರವಾಗಿ ಟೀಕಿಸಿದ್ದಾದರೆ ಅವರು

ವ್ಯಗ್ರಗೊಳ್ಳುವುದಿಲ್ಲ; ಸಮಚಿತ್ತತೆಯನ್ನು ಕಳೆದುಕೊಳ್ಳುವುದಿಲ್ಲ; ಅಂಥ ಟೀಕೆಗಳ ಬಗೆಗೆ ನಿರ್ಲಕ್ಷ್ಯದಿಂದಿರುತ್ತಾರೆ. ವಯಸ್ಸು ಮಾಗಿದಂತೆಲ್ಲ ಅವರು ದಾಕ್ಷಿಣ್ಯಪರರಾಗುತ್ತಿರುವಂತೆ ಕಾಣುತ್ತದೆ. ಸತ್ಯವಾದನ ಜನರಿಗೆ ಬೇಡವಾಗಿದೆಯೆಂದು ಪರಿತಪಿಸುತ್ತಾರೆ; ಇದ್ದದ್ದನ್ನು ಇದ್ದಂತೆ ಹೇಳಿ ಜನರ ನಿಷ್ಠುರಕ್ಕೆ ಭಾಜನವಾಗುವ ಬದಲು ತೆಪ್ಪಗಿರುವುದೇ ಸರಿಯೆಂದು ದೃಢನಿಶ್ಚಯ ಮಾಡಿಕೊಂಡಂತೆ ಕಾಣುತ್ತದೆ.

ಡಿ. ಎಲ್. ಎನ್ ಅವರ ಪಾಂಡಿತ್ಯ ಸುಮಾರು ನಲವತ್ತು ವರ್ಷಗಳ ದೀರ್ಘ ತಪಸ್ಸಿನ, ಸತತ ವ್ಯವಸಾಯದ, ಸ್ವಧರ್ಮನಿಷ್ಠೆಯ ಫಲ. ವ್ಯಾಸಂಗ, ಚಿಂತನ, ಮಂಥನಗಳನ್ನು ಬಿಟ್ಟರೆ ಅವರು ಯಾವ ಹವ್ಯಾಸಕ್ಕೂ ಮನಸ್ಸು ತೆತ್ತವರಲ್ಲ. ಅವರ ಈ ಏಕೈಕನಿಷ್ಠೆಯನ್ನು ಅಧಿಕಾರದ ವ್ಯಾಮೋಹ ಚಲಿಸಲಿಲ್ಲ, ಸಂಸಾರದ ಕ್ಲೇಶ ಕೆಡಿಸಲಿಲ್ಲ, ಹೊರಗಣ ಜಗತ್ತಿನ ಸೂಕ್ಷ್ಮತಾಕಳಗಳು ಗೊಂದಲಗಡಿಬಿಡಿಗಳು ವಿಮುಖಗೊಳಿಸಲಿಲ್ಲ. ವ್ಯಾಸಂಗ, ಸಂಶೋಧನೆ ಮತ್ತು ಲೇಖನ ವ್ಯವಸಾಯಗಳು ಅವರ ಬಾಳುಸಿರಾಗಿವೆ; ಅವುಗಳಲ್ಲಿ ಆತ್ಮಾಹ್ಲಾದ ಆತ್ಮೋನ್ನತಿಗಳನ್ನವರು ಕಂಡುಕೊಂಡು ಭಾಷಾಋಣವನ್ನೂ ರಾಷ್ಟ್ರಋಣವನ್ನೂ ತೀರಿಸಿ ಧನ್ಯರಾದದ್ದಲ್ಲದೆ, ಸಮಗ್ರ ಕನ್ನಡ ನಾಡಿನ ಗೌರವಾದರಗಳಿಗೆ ಭಾಜನರಾಗಿದ್ದಾರೆ.

ದೇ. ಜ. ಗೌ.

# ಪ್ರಗಾಥ (The ode)

ಪ್ರಗಾಥವು ಭಾವಗೀತೆಯ ಮುಖ್ಯ ರೂಪಗಳಲ್ಲೊಂದು. ಇಂಗ್ಲಿಷಿನ Lyric (ಲಿರಿಕ್) ಕನ್ನಡದಲ್ಲಿ 'ಭಾವಗೀತೆ' ಎಂದಾಗಿರುವಂತೆಯೇ Ode (ಓಡ್) ಎಂಬುದಕ್ಕೆ ಸಮಾನಾರ್ಥದಲ್ಲಿ 'ಪ್ರಗಾಥ' ಪದವು ಬಳಕೆಯಲ್ಲಿದೆ. ಇಂಗ್ಲಿಷಿನಲ್ಲಿ ಓಡ್ ಎಂಬುದು ಲಿರಿಕ್ ರೂಪಗಳಲ್ಲಿ ಒಂದು. ಆದರೆ ಓಡ್ ಹುಟ್ಟಿದ ಪುರಾತನ ಗ್ರೀಸಿನ ಸಾಹಿತ್ಯದಲ್ಲಿ ಹಾಗಿರಲಿಲ್ಲ. ಓಡ್ ಎಂಬುದೇ ಒಂದು ಸ್ವತಂತ್ರ ಕಾವ್ಯರೂಪವಾಗಿತ್ತು. ಅದು ಕೂಟಗಾನ ಮತ್ತು ನರ್ತನ (Choric song and dance) ಗಳಿಗಾಗಿ ರಚಿತವಾಗುತ್ತಿದ್ದ ಹಾಡು. ಇಂಗ್ಲಿಷಿನಲ್ಲಿ ಇದು ಸ್ವತಂತ್ರ ಕಾವ್ಯಪ್ರಕಾರವಾಗಿರದೆ ಲಿರಿಕ್‌ನ ಒಂದು ರೂಪವಾಗಿ ಬೆಳೆದು ಬಂದಿದೆ. "ಸಣ್ಣ ಕವಿತೆಯೆಲ್ಲಕ್ಕೂ ಲಿರಿಕ್ ಎಂಬ ಪದವೇ ಬಳಕೆಯಾಗುತ್ತಿದೆ. ಈ ಪದಕ್ಕೆ ತಾನು ನಿರ್ದೇಶಿಸುತ್ತಿರುವ ಕಾವ್ಯ ಕೃತಿಯ ವಸ್ತು ಅಥವಾ ಛಂದೋರೂಪ ಇವುಗಳ ಸಂಬಂಧ ಸ್ವಲ್ಪವೂ ಇಲ್ಲ."[1] ಅಂತೆಯೇ ಓಡ್ ಎನ್ನುವುದು ಲಿರಿಕ್‌ನ ಒಂದು ರೂಪವಿಶೇಷವಾಗಿ ಎಣಿಸಲ್ಪಟ್ಟಿದೆ.

ಇಂಗ್ಲಿಷಿನ 'ಲಿರಿಕ್' ಕನ್ನಡದಲ್ಲಿ ಭಾವಗೀತೆಯಾದಂತೆಯೇ 'ಓಡ್' ಪ್ರಗಾಥವಾಯಿತು. 'ಪ್ರಗಾಥ' ಎಂಬುದು ಬಹಳ ಹಿತವಾದ ಮತ್ತು ಹದವಾದ ಪದ. 'ಗಾಥಾ' ಎಂಬುದು 'ಹಾಡುತನ'ವನ್ನು ಸೂಚಿಸುತ್ತದೆ. ಈ ಹಾಡುತನವೇ ಓಡ್‌ನ ಪ್ರಮುಖ ಗುಣ. ಓಡ್ ಎನ್ನುವುದು ಸಾಮಾನ್ಯವಾಗಿ ಪ್ರಾಸವುಳ್ಳ ಗೀತೆ; ಗಂಭೀರ ಮತ್ತು ಘನವಾದ ಶೈಲಿಯಲ್ಲಿರುತ್ತದೆ. ಬದಲಾಯಿಸುವ, ಅನಿಯತವಾದ ಛಂದಸ್ಸಿನಲ್ಲಿರುವ ಇದು ೫೦ ರಿಂದ ೨೦೦ ಸಾಲುಗಳಷ್ಟಿರುತ್ತದೆ.[2] ಇದು ಸಂಬೋಧನೆಯ ರೂಪದಲ್ಲಿರುತ್ತದೆ. ವಸ್ತು, ಭಾವ ಇವುಗಳಲ್ಲಿಯೂ ಶೈಲಿಯಂತೆಯೇ ಗಂಭೀರವಾಗಿರುತ್ತದೆ.[3] ಎಡ್ಮಂಡ್ ಗಾಸ್ ಇದನ್ನು "ಉತ್ಸಾಹ ಪೂರ್ಣ ಮತ್ತು ಗಂಭೀರ ಭಾವಗೀತೆ. ಒಂದೇ ಗುರಿಯನ್ನುಳ್ಳುದು, ಪ್ರೌಢವಾದ ವಸ್ತುವಿನ ಬಗ್ಗೆ ಗಂಭೀರವಾದ ನಡೆಯುಳ್ಳುದು" ಎಂದು ನಿರ್ದೇಶಿಸಿದಾನೆ.[4] ಈ ಹಲವು ಅಭಿಪ್ರಾಯಗಳನ್ನೂ ಬೇರೆ ಅಭಿಪ್ರಾಯಗಳನ್ನೂ ನೋಡಿದರೆ ಒಂದು ವಿಷಯ ಸ್ಪಷ್ಟವಾಗುತ್ತದೆ. ವಿಮರ್ಶಕರಲ್ಲಿ ಓಡ್‌ನ ಎಲ್ಲ ಲಕ್ಷಣಗಳ ಬಗ್ಗೆ ಖಚಿತವಾದ ಅಭಿಪ್ರಾಯವಿಲ್ಲದಿದ್ದರೂ, ಕೆಲವು ಲಕ್ಷಣಗಳ ಬಗ್ಗೆ ಒಮ್ಮತವಿದೆ. ಇದಕ್ಕೆ ಪ್ರೌಢವಾದ ವಸ್ತು ಇರಬೇಕು, ಇದು ಗಂಭೀರ ಶೈಲಿಯಲ್ಲಿರಬೇಕು ಎಂದು ಎಲ್ಲರೂ ಒಪ್ಪುತ್ತಾರೆ. ಓಡ್ ಗಂಭೀರವಾದ ಕಾವ್ಯ (Majestic poem)[5] ಮತ್ತು ನಿರ್ದಿಷ್ಟ ಛಂದಸ್ಸಿಲ್ಲದುದು[6] ಎಂಬುದು ನಿರ್ವಿವಾದ. ಹೀಗೆ ಅವ್ಯವಸ್ಥೆಯಾಗಲು ಕಾರಣ ಗ್ರೀಕಿನ ಓಡ್‌ಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಇಂಗ್ಲಿಷಿಗೆ ತಂದುದೇ ಎಂದು ವಿಮರ್ಶಕರ ಅಭಿಪ್ರಾಯ.

"ಓಡ್ ಎಂಬುದು ವಾದ್ಯದ ಜೊತೆಗೆ ಹಾಡಲು ಬರೆದ ಘೋಷರೂಪ (Chant)ವಾದ ಕವಿತೆ" ಎಂಬುದು ಗ್ರೀಕರಲ್ಲಿ ಪ್ರಚುರವಾಗಿದ್ದ ಅರ್ಥ. ಹಾಡುಗಬ್ಬವು ಕೂಟಗಾನವಾಗಿ ಓಡ್ ಆಯಿತು; ವೈಯಕ್ತಿಕಗಾನವಾಗಿ ಲಿರಿಕ್ ರೂಪವನ್ನು ಪಡೆಯಿತು ಎಂದು ಎಡ್ಮಂಡ್ ಗಾಸ್ ತನ್ನ 'ಓಡ್ಸ್' ಎಂಬ ಲೇಖನದಲ್ಲಿ ನಿರ್ದೇಶಿಸಿದಾನೆ.[7] ಓಡ್‌ಗಳನ್ನು ಬರೆಯುವ ಕವಿಯ ಕೆಲಸ ಸುಲಭವಾಗಿರಲಿಲ್ಲ. ಛಂದಸ್ಸು ಮತ್ತು ಸಂಗೀತ ಇವುಗಳ ಆಳವಾದ

---

[1] C. M. Bowra: *Greek Lyric Poetry*, p. I. [2] *Everyman's Encyclopaedia*, X. P. 24. [3] *New English Dictionary*. [4] Edmund Gosse: *English Odes*, p. xiii. [5] Peter Westland: *Literary Appreciation*, p. 149. [6] W. H. Hudson: *Introduction to the Study of Literature* p. 99. [7] *Encyclopaedia Britannica* (1947), XVI, p. 702.

ಅಭ್ಯಾಸವೂ ಕೂಟನೃತ್ತಗಳ ತೊಡಕುನಡೆಗಳ ತಾಳಲಯಗಳ ತಿಳಿವಳಿಕೆ ಇವೆಲ್ಲವನ್ನೂ ಹೊಂದಿಸಿಕೊಳ್ಳುವ ಸಾಮರ್ಥ್ಯವೂ ಅಗತ್ಯವಾಗಿತ್ತು. ಜಟಿಲಛಂದೋರೂಪಗಳು, ನರ್ತನದ ಸಂಕ್ಲಿಷ್ಟ ಮತ್ತು ತೊಡಕು ನಡೆಗಳು (Complex and intricate movements) ಮತ್ತು ಸಂಗೀತ ಇವುಗಳನ್ನೆಲ್ಲ ಸಾಮರಸ್ಯದಿಂದ ಬೆಸೆದು ಓಡ್‌ಗಳನ್ನು ರಚಿಸಬೇಕಾಗಿತ್ತು. ಪಿಂಡಾರನ ಓಡ್‌ಗಳನ್ನು ಕಂಡಾಗ ಈ ರೂಪದ ಕಲಾತ್ಮಕ ಜೋಡಣೆಗೆ ಅಚ್ಚರಿಗೊಳಿಸುತ್ತದೆ.[8] ಆದರೆ ವಿಮರ್ಶಕರಾಗಲಿ ಕವಿಗಳಾಗಲಿ ಬಹುಕಾಲದವರೆಗೆ ಪಿಂಡಾರನ ಪ್ರಗಾಥಗಳ ನಿಯತ ಛಂದಸ್ಸನ್ನಾಗಲಿ ನಿರೂಪಣೆಯ ವೈಖರಿಯನ್ನೇ ಆಗಲಿ ಗುರುತಿಸಲಿಲ್ಲ. ಪಿಂಡಾರನದೆಲ್ಲ ನಿಯಮವಿಲ್ಲದ ರಚನೆ ಎಂದೇ ತಿಳಿದಿದ್ದರು. ಅವನ ಗಹನಛಂದೋರೂಪಗಳ ಗುಟ್ಟು ಲ್ಯಾಟಿನ್ (Latin) ಕವಿಗಳಿಗೂ ಸಿಕ್ಕಲಿಲ್ಲ. ಇದರಿಂದಲೇ ಹೊರೇಸ್ (Horace) ಮತ್ತಿತರ ಕವಿಗಳು ಪಿಂಡಾರನನ್ನು ಬಿಟ್ಟು ಭಾವಗೀತೆಯ ಕವಿಗಳಾದ ಅನಾಕ್ರಿಯಾನ್ (Anacreon) ಮತ್ತು ಸಾಫೋ (Sappho) ಇವರನ್ನನುಕರಿಸಿದರು.

ಪಿಂಡಾರನ ಓಡಿನಂತಹ ರಚನೆಯನ್ನು ಇಂಗ್ಲಿಷ್ ಭಾಷೆಗೆ ತರಲು ಮೊತ್ತಮೊದಲ ಬಾರಿಗೆ ಪ್ರಯತ್ನಿಸಿದವನು ಅಬ್ರಹಾಂ ಕೌಲಿ (Cowley). ಪಿಂಡಾರನ ಓಡ್‌ಗಳ ಕಟ್ಟಡ ಬಹಳ ಜಾಣ್ಮೆಯಿಂದ ಕಟ್ಟಿದುದೆಂಬ ಅರಿವು ಕೌಲಿಗಿತ್ತು. ಆದರೆ ಅದರ ನಿಯಮದ ಗೊತ್ತು ಮಾತ್ರ ಅವನಿಗಾಗಲಿಲ್ಲ. ತನ್ನ ರಚನೆಗಳನ್ನು ಪಿಂಡಾರನ ರೀತಿಯ ಓಡ್‌ಗಳು (Pindaric odes) ಎಂದು ಕರೆದು, ಜನರ ಮನಸ್ಸಿನಲ್ಲಿ ತಪ್ಪು ಅಭಿಪ್ರಾಯವು ಮೂಡಲು ಅವಕಾಶ ಮಾಡಿಕೊಟ್ಟ. "ಓಡ್ ಎನ್ನುವುದು ಗಂಭೀರವಾದ ಮತ್ತು ತೀವ್ರೋದ್ರೇಕವುಳ್ಳ ನಿಯತ ರೂಪವಿಲ್ಲದ ಕಾವ್ಯ. ಕವಿಯ ಉತ್ಸಾಹ ಹರಿದೆಡೆಗೆ ಹಾಯಿಯಾಗಲಿ ಹುಟ್ಟಾಗಲಿ ಇಲ್ಲದೆ ತೇಲಿಹೋಗುತ್ತದೆ" ಎಂದು ತಪ್ಪಭಿಪ್ರಾಯವನ್ನು ಕೌಲಿ ಮೂಡಿಸಿದನೆಂದು ಎಡ್ಮಂಡ್ ಗಾಸ್ ಒತ್ತಿಒತ್ತಿ ಹೇಳಿದಾನೆ.[9] ಲ್ಯಾಟಿನ್ ಕವಿಗಳ ಪ್ರಭಾವದಿಂದ ಮತ್ತೊಂದು ಕಡೆ ಭಾವಗೀತೆಯಂತಹ ಬೇರೆ ಬೇರೆ ನುಡಿ (Stanza) ಗಳುಳ್ಳ ಕವಿತೆಯ ರೂಪವಾಗಿಯೂ ಓಡ್ ಬೆಳೆಯಿತು. ಗ್ರೇ (Gray), ವರ್ಡ್ಸ್‌ವರ್ತ್, ಕೋಲ್‌ರಿಜ್, ಷೆಲ್ಲಿ ಮುಂತಾದವರು ಈ ರೀತಿಯ ಓಡ್‌ಗಳನ್ನು ಬರೆದರು. ಷೆಲ್ಲಿಯೇನೋ ಗ್ರೀಕ್ ರೂಪವನ್ನು ತನ್ನ 'Ode to the West Wind' (ಓಡ್ ಟು ದಿ ವೆಸ್ಟ್ ವಿಂಡ್) ನಲ್ಲಿ ತರಲು ಪ್ರಯತ್ನಿಸಿ ವಿಫಲನಾದ. ಇಂಗ್ಲಿಷಿನಲ್ಲಿ ಬಂದಿರುವ ಓಡ್‌ಗಳನ್ನು ಒಂದೇ ರೀತಿಯ ಕೆಲವು ನುಡಿಗಳುಳ್ಳ ದೊಡ್ಡ ಭಾವಗೀತೆಗಳೆಂದು ಕರೆಯಬಹುದು. ಹೀಗೆ ಎರಡು ರೀತಿಯಲ್ಲಿಯೂ, ನಿಯತ ಮತ್ತು ಅನಿಯತ ರೂಪಗಳಲ್ಲಿ ಓಡ್ ಇಂಗ್ಲಿಷಿನಲ್ಲಿ ಬೇರೂರಿ ಬೆಳೆಯಿತು.

ಓಡ್‌ನಿಂದ ಕ್ರಮೇಣ ಹಾಡುತನವು ಮಾತ್ರ ಮಾಯವಾಯಿತು. ಕೂಟಗಾನ, ನರ್ತನಕ್ಕಾಗಿ ಬರೆಯುತ್ತಿದ್ದ ಹಾಡುಗಬ್ಬವು ಬರಿಯ ಓದುಗಬ್ಬವಾಯಿತು. ನಿಧಾನವಾಗಿ ಓದಿಕೊಂಡು, ಅದರ ಭಾವಗಳನ್ನು ಅನುಭವಿಸಿ, ಜಾಣ್ಮೆಯನ್ನು ಮೆಚ್ಚಿ, ವಿಚಾರಗಳನ್ನು ಮೆಲುಕುಹಾಕಲು ಓದುಗರಿಗೆ ಅವಕಾಶವಾಯಿತು. ಅಂತೆಯೇ ಸಾಮಾನ್ಯವಾಗಿ ಹಾಡಿನಲ್ಲಿ ಬರಲು ಅಸಾಧ್ಯವಾದ ಗಹನವಿಚಾರ, ತೊಡಕುನಡೆ, ಹೂವರಳುವಂತೆ ವಿಸ್ತಾರವಾದ ವಿಚಾರದ ವಿಕಸನ, ಹಸರ ಇವುಗಳೂ ಉತ್ಸಾಹಪೂರಿತವಾದ ಗಂಭೀರ ಶೈಲಿಯ ಜೊತೆಗೆ ಕೂಡಿಕೊಂಡುವು.[10] ಎಂದರೆ ಹಳೆಯ ರೂಪದಲ್ಲಿ ಹೊಸ ಆತ್ಮವನ್ನು ತುಂಬುವ ಕೆಲಸವು ನಡೆಯಿತು. ವಿಚಾರಗಳ ತಿರುವು ಮರುತಿರುವು (Turns and Counter-turns) ಇವುಗಳಿಂದ ತೀವ್ರ ಮತ್ತು ಮಂದಗತಿಯ ನಡೆಗಳು ಆವಶ್ಯಕವಾದುವು. ಅಂತೆಯೇ ಛಂದಸ್ಸು ಕೂಡ ಬದಲಾಯಿಸಿತು. ಸ್ವಚ್ಛಂದವಾದ ಛಂದೋ

[8] ಅದೇ, XIX: R. C. Jebb: 'Pindar', p. 98. [9] *Encyclopaedia Britannica* (1917), XX p. I. ಮತ್ತು Edmund Gosse: *English Odes*, p. 16. [10] Hudson: *Introduction to the Study of Literature*, p. 99 ಮತ್ತು Gosse, *English Odes*, p. 14.

ರೂಪದ ಓಡ್ ಬೆಳೆಯಿತು. ಇದೇ ಅನಿಯತ ಪ್ರಗಾಥ (Irregular ode). ಕೀಟ್ಸ್ ಮುಂತಾದವರು ತೀವ್ರಭಾವೋದ್ರೇಕವನ್ನೂ ತಮ್ಮ ಭಾವಗೀತೆಯ ರೂಪದ ಓಡ್‌ಗಳಲ್ಲಿ ತುಂಬಿದರು. ಇದೇ ನಿಯತಪ್ರಗಾಥವೆಂದು (Regular ode) ಹೆಸರಾಯಿತು. ಗ್ರೇ, ವರ್ಡ್ಸ್‌ವರ್ತ್ ಇವರ ಓಡ್‌ಗಳಲ್ಲಿ ಛಂದಸ್ಸು, ವಿಚಾರ ಇವುಗಳ ಪಲುಕುಗಳೂ ತಿರುವು ಮುರುತಿರುವುಗಳೂ ಸಮರಸವಾಗಿ ನಡೆಯುವುದರಿಂದ ಅವು ಕಲಾತ್ಮಕವಾಗಿವೆ.[11]

ಕನ್ನಡಕ್ಕೆ ಓಡ್ ಬಂದುದು ಇಂಗ್ಲಿಷಿನಿಂದ. ಇದನ್ನು ತಂದವರು ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು. ಇಂಗ್ಲಿಷಿನಿಂದ ತಂದ ಓಡ್‌ಗೆ ಸಂಸ್ಕೃತದಿಂದ 'ಪ್ರಗಾಥ' ಎಂಬ ಹೆಸರನ್ನು ತಂದು ಇಟ್ಟವರೂ 'ಶ್ರೀ' ಯವರೇ. ಗ್ರೀಕ್ ಮತ್ತು ಇಂಗ್ಲಿಷ್ ಓಡ್‌ಗಳ ಸ್ಥೂಲ ಪರಿಚಯ ಮಾಡಿಕೊಂಡಂತೆಯೇ ಸಂಸ್ಕೃತದ ಪ್ರಗಾಥದ ಸಣ್ಣ ಪರಿಚಯವನ್ನೂ ಮಾಡಿಕೊಂಡು ಕನ್ನಡ ಪ್ರಗಾಥಗಳನ್ನು ಅನಂತರ ಗಮನಿಸೋಣ.

ವೇದದಲ್ಲಿ ಪ್ರಗಾಥವು ಒಂದು ಛಂದಸ್ಸು. "ಪ್ರಗಾಥವು ಋಗ್ವೇದದಲ್ಲಿ ಬಹಳ ಅಪರೂಪ. ಒಂದು ಕಾಕುಭ ಅಥವಾ ಬೃಹತೀ ಛಂದಸ್ಸಿನ ನುಡಿಗೆ ಒಂದು ಸತೋಬೃಹತಿಯ ನುಡಿಯನ್ನು ಸೇರಿಸಿದರೆ ಕಾಕುಭಪ್ರಗಾಥವೋ, ಬೃಹತೀಪ್ರಗಾಥವೋ ಆಗುತ್ತದೆ."[12] ಕಾಕುಭ, ಬೃಹತಿ ಮತ್ತು ಸತೋಬೃಹತಿಗಳು ಗೀತ ಛಂದಗಳು (Lyric metres). ಅವುಗಳ ಛಂದೋರೂಪ ಹೀಗಿದೆ:

**ಕಾಕುಭ : ೮ : ೧೨ : ೮ ಅಕ್ಷರಗಳ ಮೂರು ಪಂಕ್ತಿಗಳು.**
**ಬೃಹತೀ : ೮ : ೮ : ೧೨ : ೮ ಅಕ್ಷರಗಳ ನಾಲ್ಕು ಪಂಕ್ತಿಗಳು.**
**ಸತೋಬೃಹತೀ : ೧೨ : ೮ : ೧೨ : ೮ ಅಕ್ಷರಗಳ ನಾಲ್ಕು ಪಂಕ್ತಿಗಳು.**

ಕಾಕುಭ ಪ್ರಗಾಥವು ಎರಡು ಬೇರೆಬೇರೆ ಛಂದಸ್ಸಿನ ವೃತ್ತಗಳನ್ನು ಸೇರಿಸುವುದರಿಂದ ಆದ ಮಿಶ್ರವೃತ್ತ. ವೇದಗಳಲ್ಲಿ ಕಾಕುಭ ಪ್ರಗಾಥ ಅಷ್ಟಾಗಿ ಬಳಕೆಯಲ್ಲಿಲ್ಲ. ಋಗ್ವೇದದಲ್ಲಿ ಇದರ ಸಂಖ್ಯೆ ಸುಮಾರು ೫೦. ಇದರ ಒಂದು ಉದಾಹರಣೆಯನ್ನು ನೋಡಬಹುದು:

| | |
|---|---|
| **ಆ ನೋ ಅಶ್ವಾ \| ವದಶ್ವಿನಾ \|** | **೮.** |
| **ವರ್ತಿರ್ಯಾಸಿಷ್ಟಮ್ ಮಧು \| ಪಾತಮಾ ನರಾ \|\|** | **೧೨.** |
| **ಗೋಮದ್ದಸ್ರಾ \| ಹಿರಣ್ಯವತ್ \|\|** | **೮.** |
| **ಸುಪ್ರಾ ವರ್ಗಮ್, ಸುವೀರ್ಯಂ \| ಸುಷ್ಠು ವಾರಿಯಮ್ \|** | **೧೨.** |
| **ಅನಾಧೃಷ್ಟಮ್ \| ರಕ್ಷಸ್ವಿನಾ \|\|** | **೮.** |
| **ಅಸ್ಮಿನ್ ಆ ವಾಮ್, ಆಯಾನೇ \| ವಾಜಿನೀವಸೂ \|** | **೧೨.** |
| **ವಿಶ್ವಾ ವಾಮಾ \| ನಿ ಧೀಮಹಿ \|\|** | **೮.** |

ಇದು ಕಾಕುಭ ಪ್ರಗಾಥವಾಯಿತು. ಅಂತೆಯೇ ಬೃಹತೀ ಛಂದಸ್ಸಿನ ವೃತ್ತಕ್ಕೆ ಸತೋಬೃಹತಿಯ ವೃತ್ತವನ್ನು ಸೇರಿಸಿ ಬಾರ್ಹತ ಪ್ರಗಾಥವನ್ನು ರಚಿಸಿದಾರೆ. ೮ : ೮ : ೧೨ : ೮+೧೨ : ೮ : ೧೨ : ೮ ಇದು ಅದರ ಛಂದೋರೂಪ. ಈ ಎರಡು ಪ್ರಗಾಥಗಳು ಮುಖ್ಯವಾದುವು. ಇವುಗಳ ಒಟ್ಟು ಸಂಖ್ಯೆಯು ವೇದದಲ್ಲಿ ೨೫೦ ಕ್ಕೆ ಮೀರಿಲ್ಲ. ಇವುಗಳ ಛಂದೋರೂಪದಲ್ಲಿ ಅಲ್ಲಲ್ಲಿ ೮ ಅಕ್ಷರಗಳದೊಂದು ಸಾಲು ೧೨,೮ ಅಕ್ಷರಗಳ ಎರಡು ಸಾಲುಗಳನ್ನೋ ೧೨,೮,೮ ಅಕ್ಷರಗಳ ಮೂರು ಸಾಲುಗಳನ್ನೋ ಸೇರಿಸಿಕೊಂಡು ವೈವಿಧ್ಯವನ್ನು ಸಾಧಿಸಿದಾರೆ. ಒಂದು ಬಾರಿ ೧೨ : ೧೨ : ೮ : ೮ ಅಕ್ಷರಗಳ ನಾಲ್ಕು ಸಾಲಿನ ಒಂದು ನುಡಿಯನ್ನು ಬಳಸಿರುವುದೂ ಉಂಟು.[13] "೮ ಮತ್ತು ೧೨ ಅಕ್ಷರಗಳ ಪಾದಗಳನ್ನು ಬೆರಸಿ ನಾಲ್ಕು ಪಾದದ ವೃತ್ತವನ್ನು

---

[11] P Westland: *Literary Appreciation*, p. 150. [12] Arnold: *Vedic Metres* (1905), P. 8. [13] A. Macdonell: *Vedic Grammar* (1916), 1953 Ed., p. 446.

ಏಳರವರೆಗೆ ವಿಸ್ತರಿಸಿ ಪ್ರಗಾಥಗಳನ್ನು ವೈದಿಕ ಕವಿಗಳು ರಚಿಸಿದರು. ಇವು ಬಹು ಗಂಭೀರವಾಗಿಯೂ ಉತ್ಸಾಹಪೂರಿತವಾಗಿಯೂ ಇರುತ್ತವೆ. . . . ಈ ವೈದಿಕ ವೃತ್ತಗಳು ಸಂಸ್ಕೃತದಲ್ಲಿಯೇ ಮುಂದೆ ಬಿಟ್ಟು ಹೋದುವು. ಕನ್ನಡ ಕವಿಗಳಿಗೂ ಕಣ್ಮರೆಯಾದುವು. ಮುಂದೆ ಬರುವ ಕವಿಗಳಾದರೂ ಜೀವಕಳೆಯಿಂದ ನಲಿಯುವ ಈ ವೈದಿಕ ಛಂದಸ್ಸಿನ ಸೌಂದರ್ಯದ ಕಡೆಗೆ ಕಣ್ಣು ತಿರುಗಿಸಬಹುದಲ್ಲವೇ?" ಎಂದಿದಾರೆ 'ಶ್ರೀ'ಯವರು.[14]

'ಶ್ರೀ'ಯವರು ಪ್ರಗಾಥವನ್ನು ಕನ್ನಡಕ್ಕೆ ತಂದರು. ಹೆಸರು ಸಂಸ್ಕೃತದ್ದೇ ಆದರೂ ಇದರ ಸ್ಫೂರ್ತಿ ಇಂಗ್ಲಿಷ್ ಕಾವ್ಯದಿಂದಲೇ ಬಂದುದು ಎಂಬುದು ನಿಸ್ಸಂದೇಹ. ಆರ್. ಸಿ. ಜೆಬ್ ಎಂಬ ಪ್ರಖ್ಯಾತ ಗ್ರೀಕ್ ಸಾಹಿತ್ಯ ಪಂಡಿತರು ಪಿಂಡಾರನ ಬಗ್ಗೆ ಹೇಳಿದ ಮಾತುಗಳನ್ನು 'ಶ್ರೀ'ಯವರಿಗೂ ಸರಿಯಾಗಿ ಅನ್ವಯಿಸಬಹುದು. "Pindar's genius was boldly original; at the same time he was an exquisite artist." ಪಿಂಡಾರನ ಪ್ರತಿಭೆಯು ದಿಟ್ಟತನವುಳ್ಳ ಹೊಸತು, ಆತ ಕುಶಲಕಲೆಗಾರ[15] ಎಂಬ ಈ ಮಾತುಗಳು 'ಶ್ರೀ'ಯವರಿಗೂ ಒಪ್ಪುತ್ತವೆ. ಪಿಂಡಾರ್ ತನ್ನ ಪ್ರಗಾಥಗಳನ್ನು ಬರೆಯುವ ಮೊದಲು ಹೀಗೆ ಪ್ರಾರ್ಥಿಸಿದನಂತೆ: "ಹೊಸ ರಾಗಗಳನ್ನು ಸೃಷ್ಟಿಸುವ ಪುಣ್ಯ ನನ್ನ ಪಾಲಿಗೆ ಬರಲಿ. ಕಾವ್ಯದೇವತೆಗಳ ರಥದ ಹಾದಿಯಲ್ಲಿ ನಡೆಯುವ ಸಿದ್ಧಿ ನನ್ನದಾಗಲಿ. ದಿಟ್ಟತನದ ಹೊಸ ಚೈತನ್ಯ ಯಾವಾಗಲೂ ನನ್ನಲ್ಲಿರಲಿ. ಆಳವಾಗಿ ಅರಿತುಕೊಳ್ಳುವ ಶಕ್ತಿಯೂ ನನ್ನದಾಗಲಿ."[16] ಪಿಂಡಾರನ ಬಾಯಿಂದ ಬಂದಿತೆಂಬ ಈ ಪ್ರಾರ್ಥನೆ 'ಶ್ರೀ'ಯವರ ಬಾಯಿಂದಲೂ ಬಂದಿದ್ದರೆ ಆಶ್ಚರ್ಯವೇನೂ ಇಲ್ಲ. ಪಿಂಡಾರನು ಪ್ರತಿಮೆಗಳನ್ನು ಅತಿ ಸಂಖ್ಯೆಯಲ್ಲಿ ಬಳಸಿದನೆಂದು ಅವನಿಗೆ ಥೀಬ್ಸಿನ ಕವಿ ಕಾರಿನ್ನ್ ಈ ಬುದ್ಧಿವಾದವನ್ನು ಕೊಟ್ಟನಂತೆ: "ಕೈಯಿಂದ ಕಾಳೆರಚು, ಚೀಲದಿಂದ ಚೆಲ್ಲಬೇಡ". ಈ ಬುದ್ಧಿಯ ಮಾತು ಸಂಯಮದ ಅಗತ್ಯವನ್ನು ಒತ್ತಿ ಹೇಳುತ್ತದೆ. ಈ ಪದಪ್ರತಿಭೆ, ಸಂಯಮಪೂರ್ಣವಾದ ಪ್ರತಿಮಾಪ್ರಯೋಗ, ಅಗತ್ಯವಾದಷ್ಟೇ ಬಳಸಿರುವ ನಾಟಕೀಯತೆ ಇವು ಪಿಂಡಾರನ ಓಡ್‌ಗಳಿಗೆ ಪರಿಪೂರ್ಣತೆಯನ್ನು ತಂದಿವೆ. ಶ್ರೀಯವರ ಪ್ರಗಾಥಗಳಲ್ಲಿಯೂ ಈ ಎಲ್ಲ ಗುಣಗಳೂ ತುಂಬಿವೆ. ಪಿಂಡಾರನಲ್ಲಿಯಂತೆಯೇ ಶ್ರೀಯವರಲ್ಲಿಯೂ ದೈವದ ಬಗ್ಗೆ ಭಕ್ತಿಯೂ ತುಂಬಿಕೊಂಡು ಬಂದಿದೆ.

ಮಂ. ಗೋವಿಂದಪೈಯವರು 'ಬಾನಕ್ಕಿಗೆ' ಎಂದೂ 'ಶ್ರೀ'ಯವರು 'ಬಾನಾಡಿ' ಎಂದೂ ಷೆಲ್ಲಿಯ 'Ode to a Skylark' ಪದ್ಯವನ್ನು ಕನ್ನಡಕ್ಕೆ ತಂದಿರುವರು. ಶ್ರೀಯವರ ಸ್ವತಂತ್ರ ಪ್ರಗಾಥಗಳು—"ಶ್ರೀ ಕೃಷ್ಣರಾಜ ರಜತ ಮಹೋತ್ಸವ ಪ್ರಗಾಥ" (೧೯೨೭), 'ಕನ್ನಡ ತಾಯ ನೋಟ' ಮತ್ತು 'ಶುಕ್ರಗೀತೆ'. 'ರಜತಮಹೋತ್ಸವ ಪ್ರಗಾಥ' ಬರೆದ ಸಂದರ್ಭ, ನಾಲ್ಮಡಿ ಕೃಷ್ಣರಾಜ ಒಡೆಯರ ೨೫ ವರ್ಷಗಳ ಆಳಿಕೆಯ ನವಿಹಬ್ಬ. 'ಕನ್ನಡ ತಾಯ ನೋಟ'ವನ್ನು ಬರೆದುದು ವಿಜಯನಗರ ಸಾಮ್ರಾಜ್ಯದ ಆರು ನೂರು ವರ್ಷದ ಹಬ್ಬಕ್ಕಾಗಿ (೧೯೩೬) ಮತ್ತು 'ಶುಕ್ರಗೀತೆ'ಯನ್ನು ರಚಿಸಿದುದು ಮೈಸೂರು ವಿಶ್ವವಿದ್ಯಾನಿಲಯದ ಬೆಳ್ಳಿಯ ಹಬ್ಬದಲ್ಲಿ (೧೯೪೧). ಈ ಮೂರು ಪ್ರಗಾಥಗಳಿಗೂ ಗಂಭೀರವಾದ ಹಿನ್ನಲೆಯಿದೆ. ಬರವಣಿಗೆಯ ಸಂದರ್ಭವೂ ಉತ್ಸಾಹ ತುಂಬಿದ ಹಬ್ಬ, ಗಂಭೀರ ಸನ್ನಿವೇಶ.

'ಶ್ರೀ'ಯವರಿಗಿಂತ ಮೊದಲು 'ಪ್ರಗಾಥ' ಎಂಬ ಹೆಸರನ್ನು ಬಳಸದಿದ್ದರೂ ಆ ರೂಪದ ಕವಿತೆಗಳನ್ನು ಕೆಲವರು ಬರೆದಿದ್ದರೆಂದು ಹೇಳಬಹುದು. ಅವುಗಳಲ್ಲಿ ನಮಗೆ ತಿಳಿದಮಟ್ಟಿಗೆ ೧೯೧೨ ರಲ್ಲಿ 'ಶ್ರೀ ಕೃಷ್ಣಸೂಕ್ತಿ'ಯ ಸಂಪಾದಕರಾದ ಎಮ್. ರಾಜಗೋಪಾಲ ಕೃಷ್ಣರಾಯರು ಬರೆದ 'ಪಟ್ಟಾಭಿಷೇಕಾಷ್ಟಕಂ' ('Ode on the Coronation' ಎಂದು ಇಂಗ್ಲಿಷಿನಲ್ಲಿ ಅವರೇ ಹೆಸರು ಕೊಟ್ಟಿದಾರೆ) ಮೊದಲನೆಯದು. ವೃತ್ತ, ಕಂದಗಳೇ ಈ ಪದ್ಯದ ಛಂದೋ

---

14 'ಕನ್ನಡಕೈಪಿಡಿ', ಮೊದಲಸಂಪುಟ (1955ರ ಮುದ್ರಣ), ಪು. 109. 15 *Encyclopaedia Britannica*, XIX, P. 101. 16 R. C. Jebb: *Lectures and Addresses* ನೋಡಿ.

ರೂಪಗಳು. ಏಳು ವೃತ್ತಗಳೂ ಎರಡು ಕಂದ ಪದ್ಯಗಳೂ ಇರುವ ಈ ಕವಿತೆಯು ಮಂಗಳ ಕೋರುವ ಪದ್ಯ. ಅದರ ಈ ವೃತ್ತ ನೋಡಿ :[17]

> " ತಿರೆಯೊಳ್ ರಾಜಾಧಿರಾಜರ್ ಪಲಬರುವಿರಲೇಂ ? ನೋಡೆ ರಾಜನ್ವತೀತ್ವಂ
> ಸ್ಥಿರಮಕ್ಕುಂ ಜಾಜ್ವರ್ಭೂಪೋತ್ತಮ ವಿಮಲಯಶೋಲಕ್ಷ್ಮಿಯಿಂ ಕ್ಷೋಣಿಯೊಳ್ವ
> ಸ್ತ್ರ ನಕ್ಷತ್ರಾಳಿಯಿದ್ದುರ್ಂ ಫಳವಿರದದಱಿಂ ನಾಡೆ ;—ತೇಜೋವತೀತ್ವಂ
> ದೊರೆಕೊಳ್ಗುಂ ಪೂರ್ಣಚಂದ್ರಪ್ರಸೃತಶುಭಕರಜ್ಯೋತಿಯಿಂ ರಾತ್ರಿಗಂ ತಾಂ ! "

ಈ ವೃತ್ತದ ಮೂಲವು ಕಾಳಿದಾಸನ ರಘುವಂಶದಲ್ಲಿದೆ. ೧೯೦೨ ರಲ್ಲಿ ಇದೇ ವೃತ್ತವನ್ನೇ ಪಂಡಿತ ಎಂ. ಡಿ. ಅಳಸಿಂಗರಾಚಾರ್ಯರೂ, ಅಪ್ರಮೇಯಯ್ಯಂಗಾರ್ಯರೂ ಕನ್ನಡಿಸಿದ್ದ ರೆಂಬುದನ್ನು ಇಲ್ಲಿ ಗಮನಿಸಬಹುದು.[18] ಇಲ್ಲಿ ಸ್ವತಂತ್ರ ಕಲ್ಪನೆಯಾಗಲಿ, ಪ್ರೌಢಶೈಲಿಯಾಗಲಿ, ಸಂಬೋಧನೆಯ ರೀತಿಯಾಗಲಿ ಇಲ್ಲ. ಶ್ರೀ ಕೃಷ್ಣರಾಜ ಒಡೆಯರು ಪಟ್ಟಕ್ಕೆ ಬಂದಾಗ ಬರೆದ ಇದನ್ನು ಇವರು "ಶ್ರೀ ಕೃಷ್ಣರಾಜಶ್ರೇಯಃಪ್ರಾರ್ಥನೆ" ಎಂಬ ಹೆಸರಿನಲ್ಲಿ ಪ್ರಕಟಿಸಿ ದರು. ಆದರೆ ಅದನ್ನೇ ಹಲವು ಬೇರೆ ವೃತ್ತಗಳೊಂದಿಗೆ ಬರೆದ ರಾಜಗೋಪಾಲಕೃಷ್ಣರಾಯರು 'Ode on the Coronation' ಎಂದು ಕರೆದುದು ವಿಶೇಷ. ಹೆಸರು 'Ode' ಆದರೂ, ಇದು ಬರಿಯ ಮಂಗಳಾಶಾಸನಪದ್ಯ. ಇಷ್ಟಾದರೂ ಕವಿಗಳಿಗೆ ಓಡ್ (ಪ್ರಗಾಥ)ಗಳ ಬಗ್ಗೆ ಇದ್ದ ಆಸಕ್ತಿಗೆ ಇದೊಂದು ಸೂಚನೆಯಾಗಿದೆ.

ಶ್ರೀ. ಡಿ. ವಿ. ಗುಂಡಪ್ಪನವರು ಬರೆದಿರುವ "ಬೇಲೂರಿನ ಶಿಲಾಬಾಲಿಕೆಯರು" (೧೯೨೪) ಕನ್ನಡದ ಮೊತ್ತಮೊದಲ ಸ್ವತಂತ್ರ ಪ್ರಗಾಥವೆಂದು ಹೇಳಲಡ್ಡಿಯಿಲ್ಲ. ಸೀಸ ಪದ್ಯಗಳೇ ಇರುವ ಈ ಪ್ರಗಾಥದ ಆರಂಭಕ್ಕೆ ಮಾತ್ರ ಒಂದು ಕಂದಪದ್ಯ ಸೇರಿದೆ. ಇದನ್ನು ನಿಯತ ಪ್ರಗಾಥದ ಗುಂಪಿಗೆ ಸೇರಿಸಬಹುದು. ಇದಕ್ಕೆ ಎರಡು ಸ್ಫೂರ್ತಿಗಳಿವೆ. ಬೇಲೂರಿನ ಚೆನ್ನಕೇಶವ ದೇವಾಲಯದ ಶಿಲಾಬಾಲಿಕೆಯರ ಚೆಲುವು ಮೊದಲ ಸ್ಫೂರ್ತಿ. ಈ ವಿಗ್ರಹಗಳ ಸೊಗಸು ಸಂವೇದನೆ (Sensation)ಯ ರೂಪದಲ್ಲಿ ಕವಿ ಹೃದಯದಲ್ಲಿ ಸ್ಫುರಿಸಿತು. ಎರಡನೆಯದು ಕೀಟ್ಸ್ (Keats) ಕವಿಯ ಸುಂದರ ಪ್ರಗಾಥ 'Ode on a Grecian urn' ಕಾವ್ಯಸ್ಫೂರ್ತಿಯಾಗಿ ಡಿ. ವಿ. ಜಿ. ಯವರಿಗೆ ಬಂದಿತೆನ್ನಬಹುದು. ಈ ಎರಡು ಸ್ಫೂರ್ತಿಗಳ ಸಮನ್ವಯವನ್ನು ಡಿ. ವಿ. ಜಿ. ಯವರ ಪ್ರಗಾಥದಲ್ಲಿ ಕಾಣಬಹುದು.

'ಗ್ರೀಕ್ ಪಾತ್ರೆಯ ಮೇಲಿನ ಪ್ರಗಾಥ' (Ode on a Grecian urn) ಮತ್ತು 'ಬೇಲೂರಿನ ಶಿಲಾಬಾಲಿಕೆಯರು' ಇವ್ರಗಳೆರಡರಲ್ಲಿಯೂ ವಸ್ತು, ಭಾವ, ವಿಚಾರ ಮತ್ತು ನಿರೂಪಣೆಯ ಬಗೆ ಇವು ಒಂದೇ ರೀತಿಯವು. ಅಲ್ಲಲ್ಲಿ ಕೀಟ್ಸ್ ಕವಿಯ ಮಾತುಗಳು ಡಿ. ವಿ. ಜಿ. ಯವರ ಮಾತುಗಳಲ್ಲಿ ತಮ್ಮ ನೆರಳನ್ನು ಮೂಡಿಸಿರುವುದನ್ನು ಕಾಣಬಹುದು.

> " ಶ್ರುತಗಾನಮಭಿರಾಮಮಾದೊಡಶ್ರುತಗಾನ
> ಮಭಿರಾಮತರಮ್ "[19] —ಎಂಬ ಸಾಲುಗಳು
>
> " **Heard melodies are sweet, but those unheard**
> **Are sweeter**'[20] —ಎಂಬ ಪಂಕ್ತಿಗಳ ಅನುವಾದ.

ಕೀಟ್ಸ್ ಕವಿಗೆ ಆ ಸುಂದರಪಾತ್ರೆ ಬದುಕಿನ ಮಹತ್ತರ ಸತ್ಯವನ್ನು ಸಾರಿತಂತೆ. ಇದನ್ನೇ ನಾವು ಡಿ. ವಿ. ಜಿ. ಯವರ ಕವಿತೆಯಲ್ಲಿ ಸುಂದರ ಚಿತ್ರಗಳು ಬದುಕಿನ ಸತ್ಯವನ್ನು ಸಾರಿದಂತೆ ಕಾಣುತ್ತೇವೆ.

---

[17] ಎನ್. ರಾಜಗೋಪಾಲಕೃಷ್ಣರಾವ್ : 'ಪಟ್ಟಾಭಿಷೇಕಾಷ್ಟಕಂ' (Ode on the Coronation), 'ಶ್ರೀ ಕೃಷ್ಣಸೂಕ್ತಿ', ಜುಲೈ ೧೯೧೩, ಪು. ೧೪-೧೫. [18] 'ಸುವಾಸಿನೀ' ಮಂಗಳೂರು, ಸೆಪ್ಟೆಂಬರ್ ೧೯೦೨, ಪು. 49-50. [19] ಡಿ. ವಿ. ಗುಂಡಪ್ಪ: ನಿವೇದನ (೧೯೨೮), 'ಬೇಲೂರಿನ ಶಿಲಾಬಾಲಿಕೆಯರು', ಸಾಲು, ೨೯-೩೦. [20] John Keats : *Poetical works*, 'The Ode on a Grecian urn', *ll.* 11-12.

"When old age shall this generation waste
Thou shalt remain, in midst of other woe
Than ours, a friend to man, to whom thou sayest
Beauty is Truth, Truth Beauty" —*ll.* 46-49.

ಸೌಂದರ್ಯವೇ ಸತ್ಯ, ಸತ್ಯವೇ ಸೌಂದರ್ಯವೆಂಬ ಮಾತನ್ನೇ ಡಿ. ವಿ. ಜಿ. ಯವರ ಕವಿತೆಯಲ್ಲಿಯೂ, ಅಷ್ಟು ಸಂಕ್ಷಿಪ್ತ ಪೋಷಮಾತಿನಲ್ಲಿಲ್ಲದಿದ್ದರೂ ಬಿಡಿಸಿ ಬಿಡಿಸಿ ವಿವರವಾಗಿ ಹೇಳಿರುವುದನ್ನು ಕಾಣಬಹುದು.

"ಚಿರಕಾಲವೆಸೆವುದಾ ಚಿತ್ತವೇಧನಿಯರಿರ
ಕುದಿವ ಲೋಕಕೆ ಮುದದ ತಣಿವ ಬೀರಿ
ಸೌಂದರ್ಯವೇ ವಿಶ್ವತತ್ತ್ವಮಾ ಪರತತ್ತ್ವ
ಭಾಸಮೇ ಸೌಂದರ್ಯಮೆನುತ ಸಾರಿ" —ಸಾಲು ೬೭-೭೦.

ಎರಡು ಕವಿತೆಗಳಲ್ಲಿಯೂ ಈ ತತ್ತ್ವವನ್ನು ಸಾರುವವರು ವಿಗ್ರಹಗಳೇ! ಕೀಟ್ಸ್ ಮತ್ತು ಡಿ. ವಿ. ಜಿ. ಇವರಿಬ್ಬರ ನಿರೂಪಣೆಯ ರೀತಿಯೂ ಒಂದೇ. ಶಿಲ್ಪಗಳ ಚೆಲುವು ಕವಿಯನ್ನು ಬೆರಗುಗೊಳಿಸಿ, ಕಣ್ಣನ್ನು ತಂಪುಗೊಳಿಸುತ್ತದೆ ಪ್ರತಿವಿಗ್ರಹವೂ, ಭಿತ್ತಿಯೂ ಬೇರೆಬೇರೆಯಾಗಿ ಅನಂತರ ಮತ್ತೆ ಸಮಷ್ಟಿಯಾಗಿ ಕಣ್ಣಿಗೆ ಬಿದ್ದು, ಬದಲಾಯಿಸುತ್ತಿರುವ ಪ್ರಪಂಚದಲ್ಲಿ ಚಿರ ಕಾಲವೂ ಇರುವುದು ಈ ಸೌಂದರ್ಯಸತ್ಯವೇ ಎಂದು ಕವಿಗೆ ದರ್ಶನದ ಭಾಸವಾಗುತ್ತದೆ. ಈ ಶಿಲ್ಪ ಸೌಂದರ್ಯಸತ್ಯಗಳ ಅದ್ವೈತವನ್ನು ಸಾರುತ್ತದೆ. ಇದು ಈ ಎರಡು ಕವಿತೆಗಳಲ್ಲಿಯೂ ವಿಚಾರ ನಿರೂಪಣೆಯ ರೀತಿ.

ಇಷ್ಟಾದರೂ 'ಬೇಲೂರಿನ ಶಿಲಾಬಾಲಿಕೆಯರು' ಕೀಟ್ಸನ 'ಗ್ರೀಕ್ ಪಾತ್ರೆ'ಯ ಒಂದು ನಿರ್ಜೀವ ಪ್ರತಿಯಲ್ಲ. ದರ್ಶನ ಸ್ಫೂರ್ತಿಯೂ ಇಲ್ಲಿ ತುಂಬಿ ಇದು ಜೀವಂತವಾಗಿ ಮಿಡಿಯುತ್ತದೆ. ಭಾರತೀಯ ಸಂಸ್ಕೃತಿಗೇ ಸಲ್ಲತಕ್ಕ ವಿಶಿಷ್ಟವಾದ ಭಾವನೆಗಳು ಡಿ. ವಿ. ಜಿ. ಯವರ ಕವಿತೆಯಲ್ಲಿವೆ; ಇವು ಕೀಟ್ಸನಲ್ಲಿಲ್ಲ. ಶಿಲಾಬಾಲಿಕೆಯರ ಸೌಂದರ್ಯ ದೇವರ ದಿವ್ಯತೆಯನ್ನು ಸಾರುವ ಸಂಕೇತಗಳಾಗಿ ಡಿ. ವಿ. ಜಿ. ಯವರಿಗೆ ತೋರುತ್ತವೆ. ಇವು ದೈವತ್ವದ ಪ್ರತೀಕಗಳಾಗಿ ಭಾಸವಾಗುತ್ತವೆ. ಇಂದ್ರಿಯಗಳಿಗೆ ದೃಷ್ಟಿಸಂತೃಪ್ತಿ, ಮನಸ್ಸಿನ ಸಂವೇದನೆ, ಸೌಂದರ್ಯಾನುಭವ ಮತ್ತು ದೈವಾಂಶದಿಂದ ಕೂಡಿರುವುದರಿಂದ ಶಿಲಾಬಾಲಿಕೆಯರು ಕವಿ ಮನಸ್ಸಿಗೆ ಪ್ರಿಯವಾಗುತ್ತಾರೆ. ಈ ವಿಗ್ರಹಗಳೂ ಸಂಸ್ಕೃತಿಯ ರೂಪದಲ್ಲಿ ದೈವಸೇವೆಯನ್ನು ನಡೆಸುತ್ತಿವೆಯೆಂದು ಕವಿಗಳು ಹೇಳಿದಾರೆ (ಸಾಲುಗಳು ೪೯-೫೨). ಈ ಭಕ್ತಿಪಥ ಭಾರತದ ಸಂಸ್ಕಾರದ್ದು. ಇದನ್ನೇ ನಾವು ಗೋವಿಂದಪೈಯವರ 'ಶ್ರೀಗೊಮ್ಮಟ ಜಿನಸ್ತುತಿ 'ಯಲ್ಲಿ ಮತ್ತು ಕುವೆಂಪು ಅವರ 'ಗೊಮ್ಮಟೇಶ್ವರ' ದಲ್ಲಿ ಕಾಣುತ್ತೇವೆ. ಡಿ. ವಿ. ಜಿ. ಯವರ ಪ್ರಗಾಥದಂತೆಯೇ ಕುವೆಂಪು ಅವರ ಪ್ರಗಾಥವೂ ಸೀಸಪದ್ಯದಲ್ಲಿದೆ. ಸೀಸಪದ್ಯವನ್ನು ಸಾನೆಟ್ ರೂಪಕ್ಕೆ ಬದಲಾಗಿ ಡಿ. ವಿ. ಜಿ. ಅವರು ಬಳಸಿಕೊಂಡರೆಂಬುದನ್ನು ಇಲ್ಲಿ ಪ್ರಾಸಂಗಿಕವಾಗಿ ನೆನೆಯಬಹುದು.

ಕುವೆಂಪು ಮತ್ತು ಗೋವಿಂದಪೈ ಇವರ ಪ್ರಗಾಥಗಳ ವಸ್ತು ಒಂದೇ. ಇವರಿಬ್ಬರೂ ಶ್ರೀಯವರ ಅನಂತರ ಪ್ರಗಾಥಗಳನ್ನು ರಚಿಸಿದರೂ ಇಲ್ಲಿಯೇ ಈ ಎರಡು ಪ್ರಗಾಥಗಳ ಬಗ್ಗೆ ನಾಲ್ಕು ಮಾತುಗಳನ್ನಾಡಿ ಮುಗಿಸುವುದು ಅನುಚಿತವಾಗದು. 'ಗೊಮ್ಮಟೇಶ್ವರ'ದಲ್ಲಿ ಕುವೆಂಪು ಅವರು, ಡಿ. ವಿ. ಜಿ. ಯವರಂತೆಯೇ ಸೀಸಪದ್ಯವನ್ನು ಪಯೋಗಿಸಿದಾರೆ.[21] ಶ್ರೀ ಗೊಮ್ಮಟೇಶ್ವರನ ವಿಗ್ರಹ 'ಮೌನದಿಂದೇಕಾಂಗಿಯಾಗಿ' ಎಷ್ಟು ಶತಮಾನಗಳಿಂದ ಹೀಗೆ ನಿಂತಿದೆ; ರಕ್ತಪಾತ,

---

[21] ಕುವೆಂಪು: ಕೊಳಲು (೧೯೩೦). ಪು. ೪೨-೪೫.

ಚಕ್ರಾಧಿಪತ್ಯಗಳ ನಿರ್ನಾಮ, ಜನಾಂಗಗಳ ಏಳುಬೀಳುಗಳನ್ನೂ ಕಂಡೂ "ನೀ ಸದಾ ಶಾಂತನೈ ಗೋಮಟೇಶ" ಎಂದು ಕವಿ ಅಚ್ಚರಿಯಿಂದ ಉಸುರುತ್ತಾನೆ. ಇಲ್ಲಿ ಪಿಂಡಾರನಲ್ಲಿ ಬರುವಂತಹ ಅಪ್ರಕೃತ ಪ್ರಸ್ತಾಪ (Digression) ಬಂದಿದೆ. ಹೊರಗಿಂದ ವೈಚಾರಿ ಬಂದಿರುವ ಈ ಪ್ರಸ್ತಾಪದಲ್ಲಿ, ಭಾರತದ ಮೇಲೆ ಪರಕೀಯರ ದಾಳಿ, "ಕ್ರಿಸ್ತ ವೇಷವ ನಾಂತು ಸೈತಾನನಾಚಾರದಿಂ" ನಡೆದ ಅಕೃತ್ಯಗಳು, ಜನರು ಸಹಿಸಿಕೊಂಡ ದಬ್ಬಾಳಿಕೆ—ಇವುಗಳ ವರ್ಣನೆಯಿದೆ. "ಭಾರತಿಗೆ ನೀನೆ ಸಾಕ್ಷಿ" ಎಂದ ಕವಿ, ವಿಗ್ರಹದ ಭೀಮಾಕಾರದಲ್ಲಿ ಕೂಡ ಮಾಹಾತ್ಮ್ಯವನ್ನು ದೈನ್ಯವನ್ನು ಕಂಡು ಮೆಚ್ಚಿಕೊಳ್ಳುತ್ತಾರೆ. ಈ ವಿಗ್ರಹವು "ರಮ್ಯ ಕನ್ನಡನಾಡ ಧರ್ಮಮೂರ್ತಿ", "ಕರ್ಣಾಟಕದ ಶಿಲ್ಪಿವರರಮರ ಕೀರ್ತಿ"ಯೂ ಹೌದು. ಶಿಲ್ಪಿಯನ್ನು ಕವಿ ಹೊಗಳುತ್ತಾ ಈ ಶಿಲ್ಪವೂ ಯೋಗಸಾಧನೆ ಎಂದು ಹೇಳುತ್ತಾರೆ. "ನಿನ್ನ ಸಿದ್ಧಿಗೆ ಹಿರಿದದಾವುದೈ ಶಿಲ್ಪಿಸಿದ್ಧ ? ನೀನೆ ಜೀವನ್ಮುಕ್ತ ! ನಿನ್ನದೈ ಬ್ರಹ್ಮಯೋಗಂ !" ಎಂದು ಕವಿತೆ ಮುಕ್ತಾಯಗೊಳ್ಳುತ್ತದೆ. ಇಲ್ಲಿ ಅಪ್ರಕೃತ ಪ್ರಸ್ತಾಪ ಬಂದರೂ, ಒಟ್ಟು ಮೂಡಿಕೆಯಲ್ಲಿ ಅದು ಬೆರೆತುಕೊಂಡು ಸಾಮರಸ್ಯವನ್ನು ಸಾಧಿಸಿದೆ.

"ಮೇಲೆ ವಿಚಾರವಾಹಿನಿ, ಒಳಗೆ ಭಾವದ ಪ್ರವಾಹ; ಭಾವಗೀತೆಯ ಪ್ರಕಾರಗಳಲ್ಲಿ ಅತ್ಯಂತ ವಿಚಾರಯುತವಾದುದು, ಪ್ರಜ್ಞಾಪೂರ್ವಕವಾದ ಕಲೆಗಾರಿಕೆಯ ಸಿದ್ಧಿಯುಳ್ಳದ್ದು ಪ್ರಗಾಥ"[22] ಎಂದು ಆರ್. ಎಂ. ಆಲ್ಡೆನ್ ಹೇಳಿರುವುದು ಕನ್ನಡದ ಈ ಪ್ರಗಾಥಗಳಿಗೂ ಅನ್ವಯಿಸುತ್ತದೆ. ಗಾಂಭೀರ್ಯ ಘನತೆ ಇವುಗಳೂ ಮನಮುಟ್ಟುವಂತಿವೆ. ವಿಚಾರವು ಹಂತ ಹಂತವಾಗಿ ಬೆಳೆಯುತ್ತದೆ. ಪ್ರಜ್ಞಾಪೂರ್ವಕ ನಯಗಾರಿಕೆಯಿಂದ ಈ ಪ್ರಗಾಥಗಳು ಕಲಾಪೂರ್ಣವಾಗಿವೆ. ಗೋವಿಂದಪೈಯವರ ಪ್ರಗಾಥ 'ಶ್ರೀ ಗೊಮ್ಮಟಜಿನಸ್ತುತಿ'ಯು ಇಂತಹುದೊಂದು ಪ್ರಗಾಥ. ಇಲ್ಲಿ ಯಾವ ಹೊರವಿಚಾರದ ಪ್ರಸ್ತಾಪವೂ ಇಲ್ಲ. ಭರತ ಬಾಹುಬಲಿಯ ಕತೆ, ಗೊಮ್ಮಟವಿಗ್ರಹದ ಶಾಂತಿ ಜೀವಂತತೆಗಳ ವರ್ಣನೆ, ಜಿನತತ್ತ್ವನಿರೂಪಣೆ—ಕೊನೆಯಲ್ಲಿ ಜಗತ್ತನ್ನು ಕಾಪಾಡಲು ಮತ್ತೆ ತನ್ನ ಕೃಪೆಯನ್ನು ಜನರ ಮೇಲೊಸರಬೇಕು ಎಂಬ ಪ್ರಾರ್ಥನೆ—ಹೀಗಿದೆ ಈ ಕವಿತೆಯ ನಡೆ. ಗಂಭೀರವಾದ ವಾತಾವರಣದ ಕಲ್ಪನೆಯನ್ನು ಮಾಡಿಕೊಡುವ ಬಿಗಿ ಇಲ್ಲಿ ಕಾಣುತ್ತದೆ.

"ಕನಸೇ ಕಲ್ಲಲಿ ರೂಪವೆತ್ತಿತೊ ಚಿಕೀರ್ಷಾಭಕ್ತಿಯಾ ಭಕ್ತರಾ
ತನುವನ್ನಾಂತನುವಾಯ್ತೊ ? ಗಂಡುವರಿಜಂ ಜೈನಾಗಮಂಬೆತ್ತುದೋ ?
ಕೊಡಗೂಸನ್ನಿಳಿಯಾದಳೇ ? ನೊಡರ ಕಂಬಂ ನಟ್ಟುದೇ ಧರ್ಮಮೇ
ನೆನುತಂ ಕಂಡವರೆಲ್ಲ ಮೂವದಿಮೆಯಂ ಬೆಪ್ಪಾದರೇ ? ಗೊಮ್ಮಟಾ ||"[23]

ಇಲ್ಲಿ ಪಾಂಡಿತ್ಯ, ವಿಚಾರ ಇವುಗಳೇ ಹೆಚ್ಚಾಗಿ ಕಾವು ಕೊಂಚ ತಗ್ಗಿದೆಯೆನಿಸಬಹುದು.

ಮಾಸ್ತಿಯವರ 'ಅರುಣ'ವೂ ಸಂಬೋಧನಾತ್ಮಕವಾಗಿರುವ ಒಂದು ನಿಯತ ಪ್ರಗಾಥವೆನ್ನಬಹುದು. ಮೊದಲ ಮತ್ತು ಕೊನೆಯ ನುಡಿಗಳೆರಡನ್ನು ಬಿಟ್ಟು ಉಳಿದೆಲ್ಲ ನುಡಿಗಳಲ್ಲೂ ೧೧ ಸಾಲುಗಳನ್ನು ಬಳಸಿದ್ದಾರೆ. ಅರುಣನನ್ನು ಹೊಗಳಿ, ಅವನ ಜೀವನ ಕತೆ ಹಿರಿಮೆಗಳನ್ನು ವರ್ಣಿಸಿ, 'ಜಗತ್ತನ್ನು ಕಾಪಾಡು, ನಿರ್ಮಲ ತೇಜಸ್ಸನ್ನು ಎಲ್ಲರಿಗೂ ದಯಪಾಲಿಸು'[24] ಎಂದು ಕವಿಗಳು ಪ್ರಾರ್ಥಿಸಿದಾರೆ. ಇಲ್ಲಿ ಗಾಂಭೀರ್ಯ, ಉತ್ಸಾಹಪೂರ್ಣತೆ ಇವುಗಳು ಚೆನ್ನಾಗಿ ಪಡಿಮೂಡಿವೆ. ಬಹುರಮ್ಯವಾದ, ಸುಂದರವಾದ ವರ್ಣನೆಗಳೇ ಈ ಪ್ರಗಾಥದ ಸೊಗಸು.

ಈ ನಿಯತ ಪ್ರಗಾಥಗಳೊಂದಿಗೇ ಬೇಂದ್ರೆಯವರು ನಡೆಸಿದ ಒಂದು ಪ್ರಯೋಗವನ್ನೂ ಇಲ್ಲಿಯೇ ಗಮನಿಸಬಹುದು. Ode (ಓಡ್) ಎಂಬ ಮಾತಿನ ಸೂಚನೆ ಬರುವಂತೆ 'ಓ ಹಾಡೇ' ಎಂಬ ಕವಿತೆಯನ್ನು ಬೇಂದ್ರೆ ಅವರು ರಚಿಸಿದಾರೆ. ಇದನ್ನು ಪ್ರಗಾಥದ ಬದಲಾಗಿ ರಚಿಸಿದು

---

22 R. M. Alden: *An Introduction to Poetry*, p. 67. 23 ಎಂ. ಗೋವಿಂದ ಪೈ: ಶ್ರೀ ಗೊಮ್ಮಟಜಿನ ಸ್ತುತಿ (೧೯೩೫). ಪು. ೩. 24 ಮಾಸ್ತಿ: ಅರುಣ (೧೯೩೪), ಪು. ೫.

ದಾಗಿ ಅವರು ಹೇಳಿದಾರೆ.[25] ಈ ಪ್ರಗಾಥದಲ್ಲಿ ಆದಿಪ್ರಾಸ, ಅಂತ್ಯಪ್ರಾಸ ಇವುಗಳೆರಡನ್ನೂ ಉಳಿಸಿಕೊಂಡು ಬಂದಿರುವುದು ಇಲ್ಲಿಯ ವೈಶಿಷ್ಟ್ಯ.

"ಬಿತ್ತಿದರೆ ಬಿತ್ತುವುದು ಮುಕ್ಕು ಚಿಕ್ಕೆಯ ಕಾಳು
ಮುತ್ತುರತುನವ ಬಿತ್ತಿ ಮಾಡದಿರು ಹೊಲ ಹಾಳು
ಜೀವವನು ಚಾಚಿ ಮುಗಿಲಂಗಳಕೆ ಹಚ್ಚಿ
ದೇವಸೊಡೆನುಡಿವಂತೆ ಮಾಡು ಮೆಚ್ಚಿ ;
ಏಳು ಮಲಗಿಹೆಯೇಕೆ ಶರಣ ನಾಡೇ
ಓ ಹಾಡೆ, ಓ ಹಾಡೆ, ಓ ಹಾಡೇ !"[26]

ಆರು ಸಾಲಿನ ಎಂಟು ನುಡಿಗಳನ್ನುಳ್ಳ ಈ ನಿಯತ ಪ್ರಗಾಥ "ನಾಡಿನ ಸ್ವತ್ವಸನ್ನೇ ಹಾಡಿನ ಸತ್ವವನ್ನಾಗಿ ಕಂಡು ಪ್ರಾರ್ಥಿಸಿದ್ದು"[27] ಹಂತಹಂತವಾಗಿ ಬೆಳೆದಿದೆ. ಈ ನಿಯತ ಪ್ರಗಾಥಗಳಲ್ಲಿಯೂ ಗ್ರೀಕ್ ರೀತಿಯ Strophé, Anti-strophé, Epode ಮುಂತಾದ ವಿಭಜನೆಯಿಲ್ಲ. ಈ ರೀತಿಯ ವಿಭಜನೆಯಿರುವ ಓಡ್‌ಗಳು ಇಂಗ್ಲಿಷಿನಲ್ಲಿಯೇ ಇಲ್ಲವೆಂದ ಮೇಲೆ ಕನ್ನಡದಲ್ಲಿಲ್ಲದುದು ಆಶ್ಚರ್ಯವೇನೂ ಇಲ್ಲ.

ಅನಿಯತ ಪ್ರಗಾಥಗಳಾದರೂ ಕನ್ನಡದಲ್ಲಿ ಹೆಚ್ಚು ಸಂಖ್ಯೆಯಲ್ಲಿಲ್ಲ. 'ಶ್ರೀ'ಯವರು ಆರಂಭಿಸಿ ಬೆಳಸಿದ ಈ ರೂಪದಲ್ಲಿ ಅವರ ಹೊರತು ಕುವೆಂಪು, ಕೆ. ಎಸ್. ನರಸಿಂಹಸ್ವಾಮಿ ಇವರಿಬ್ಬರೇ ಒಂದೆರಡು ಕೃತಿಗಳನ್ನು ರಚಿಸಿರುವುದು. ಈ ಅನಿಯತ ಪ್ರಗಾಥಗಳಿಗೂ ನಿಯತ ಪ್ರಗಾಥಗಳಿಗೂ ಇರುವ ಮುಖ್ಯ ವ್ಯತ್ಯಾಸವು ಛಂದಸ್ಸು ಮತ್ತು ಪ್ರಾಸ ಇವುಗಳ ವೈವಿಧ್ಯದಲ್ಲಿ. ಇಲ್ಲಿ ನಿಯತವಾಗಿ ಪ್ರತಿಯೊಂದು ನುಡಿಗೂ ಇಷ್ಟೇ ಸಾಲುಗಳಿರಬೇಕೆಂಬ ನಿಯಮವಿಲ್ಲ. ಪ್ರತಿ ಪಂಕ್ತಿಯೂ ಇಷ್ಟೇ ಉದ್ದವಾಗಿರಬೇಕೆಂಬ ಕಟ್ಟುನಿಟ್ಟೂ ಇಲ್ಲ. ಆದರೆ ಇಲ್ಲಿ ಎಲ್ಲವೂ ಹುಚ್ಚುಹುಚ್ಚಾಗಿ ನಿಯಮ ಬಾಹಿರವಾಗಿ ಹರಿಯುವುದೆಂದು ಅರ್ಥವಲ್ಲ. ಇಲ್ಲಿ ಛಂದೋರೂಪವು ಭಾವದ ಏರಿಳಿತಕ್ಕೆ ಹೊಂದಿಕೊಳ್ಳಬೇಕು.[28] ವರ್ಡ್ಸ್‌ವರ್ತನ 'ಅನಂತತೆಯ ಸೂಚನೆಗಳು' (Intimations of Immortality) ಎಂಬುದು ಈ ರೀತಿಯ ಓಡ್‌ಗೆ ಅತ್ಯುತ್ತಮ ಉದಾಹರಣೆ. ಇಲ್ಲಿ ಬೇರೆಬೇರೆಯ ನೆನಪುಗಳು ಬಂದಂತೆ, ಬೇರೆ ಬೇರೆ ಕಾವಿನ ಭಾವಗಳು ಉತ್ಪನ್ನವಾಗಿ, ತಮಗೆ ತಕ್ಕ ಛಂದಸ್ಸಿನಲ್ಲಿ ಅಭಿವ್ಯಕ್ತಗೊಂಡಿವೆ. ಛಂದಸ್ಸು ಭಾವದ ನೆರಳಿನಂತೆ ರೂಪುಗೊಂಡಿದೆ. "ಈ ವಿವಿಧ ಛಂದೋರೂಪಗಳು ಎಲ್ಲವೂ ಕವಿತೆಯ ಅಂತರ್ಗತವಾಗಿ ಹೊಂದಿಕೊಂಡಿವೆ. ಹೇಳಬೇಕಾದುದಕ್ಕೂ ಹೇಳಿರುವ ರೀತಿಗೂ ಹೊಂದಿಕೆಯಿದೆ. ಎರಡನ್ನೂ ಬೇರ್ಪಡಿಸಲಾಗುವುದಿಲ್ಲ. ಈ ಪ್ರಗಾಥದ ಬಗ್ಗೆ ಈ ಮಾತನ್ನಂತೂ ಹೇಳಬಹುದು. ಇಲ್ಲಿ ಆತ್ಮದಿಂದ ದೇಹವು ರೂಪಿತವಾಗಿದೆ."[29] ಈ ಮಾತನ್ನು ಚೆನ್ನಾಗಿ ನೆನಪಿಡುವುದು ಅಗತ್ಯ. ಏಕೆಂದರೆ ಛಂದೋವೈವಿಧ್ಯದಿಂದ ನಮಗೆ ಅಚ್ಚರಿಯಾಗಬಹುದು. ಅಥವಾ ಥಿಯೋಡೋರ್ ವಾಟ್ಸನಂತೆ ನಮಗೆ ಅದರ ಗೊತ್ತುಗುರಿಯೇ ಅರಿವಾಗದೆ, ಅದನ್ನು ತೆಗಳಬೇಕೆನ್ನಿಸಲೂ ಬಹುದು.[30] ಹಾಗೆ ಬೇಸರವಾದಾಗ, ಈ ಆತ್ಮದೇಹಗಳ ನೆನಪು ಮಾಡಿಕೊಂಡಲ್ಲಿ ಛಂದಸ್ಸಿನ ವೈಖರಿಯು ಭಾವದ ನಡೆಗೆ ಹೊಂದಿಕೊಂಡಿರುವುದು ಅರ್ಥವಾಗುತ್ತದೆ. ಇಂಗ್ಲಿಷಿನಲ್ಲಿರುವ ಅನಿಯತ ಪ್ರಗಾಥಗಳಲ್ಲೆಲ್ಲ ಅಂತ್ಯಪ್ರಾಸವಿದೆ. ಈ ಪ್ರಗಾಥಗಳಿಗೆ ಒಕ್ಕಟ್ಟು, ಜಿಗಿವು ಇವುಗಳನ್ನು ಕೊಟ್ಟಿರುವುದು ಪ್ರಾಸವೇ ಎಂದು ವಿಮರ್ಶಕರ ಅಭಿಪ್ರಾಯ.[31]

---

[25] ೧. ೭. ೧೯೫೬ ರಂದು ಧಾರವಾಡದಲ್ಲಿ ನನ್ನೊಂದಿಗೆ ಮಾತನಾಡುತ್ತಾ ಹೇಳಿದುದು. [26] ಬೇಂದ್ರೆ: ಗರಿ (೧೯೩೨). ೧೯೪೫ ರ ಆವೃತ್ತಿಯ ಪು. ೩೨. [27] ಅದೇ. ಭಾವಸಂದರ್ಭಸೂಚನೆ. ಪು. ೨. [28] R. M. Alden : *Introduction to Poetry*. p. 342. [29] Prof. Corson : *A Primer of English verse* : P. 32. [30] T. Watts : 'Poetry' in *Enc. Brit*, XIX p. 258 [31] W. P. Ker : *Form and Style in Poetry*, p. 162.

ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರ ಪ್ರಗಾಥಗಳು ಮೂರು. 'ಶ್ರೀ ಕೃಷ್ಣರಾಜ ರಜತಮಹೋತ್ಸವ ಪ್ರಗಾಥ' ಗಂಭೀರವಾದ ಸಂದರ್ಭದಿಂದ ಪ್ರೇರಿತವಾದುದು. ರಾಜಭಕ್ತಿಯಿಂದ ತುಂಬಿ ತುಳುಕುತ್ತಿದ್ದ ಕವಿಯ ಮನಸ್ಸನ್ನು ಕಿರೀಟೋತ್ಸವದ ಬೆಳ್ಳಿಯ ಹಬ್ಬವು ಪ್ರಚೋದಿಸಿದುದು ಆಶ್ಚರ್ಯವೇನೂ ಅಲ್ಲ. ತಿಳಿಯಾದರೂ ಬಹಳ ಗಂಭೀರವಾಗಿ ಪ್ರೌಢವಾದ ಈ ಪ್ರಗಾಥದ ಶೈಲಿ "ತೇಲುವುದಿಲ್ಲ. ಗಂಭೀರವಾಗಿ ಮುಂದಡಿಯಿಡುತ್ತದೆ."[32] ಇಲ್ಲಿಯ ಛಂದಸ್ಸು, ನಿರೂಪಣೆಯೂ ಕಾವ್ಯದ ಅರ್ಥದ ಒಂದುಭಾಗ. "ಪದಗಳನ್ನು ಜೋಡಿಸುವ ರೀತಿಯೂ ಶೈಲಿಯೂ, ನಾಲ್ಕಾರು ಶಬ್ದಗಳ, ಸ್ವನಗಳ ಕೂಡಿಕೆಯಲ್ಲ. ಇದು ಕವಿಯ ಮನಸ್ಸಿನಲ್ಲಿ ಹುಟ್ಟಿ ಬೆಳೆದ ಜೀವಂತ ವಸ್ತು"[33] ಎಂದು ಶ್ರೀಯವರ ಪ್ರಗಾಥಗಳ ಛಂದಸ್ಸಿನ ಬಗ್ಗೆಯೂ ಹೇಳಬಹುದು.

'ಶ್ರೀ ಕೃಷ್ಣರಾಜ ರಜತಮಹೋತ್ಸವ ಪ್ರಗಾಥ'ವು ಏಳು ಭಾಗಗಳಲ್ಲಿದೆ.[34] ಮೊದಲ ಭಾಗದಲ್ಲಿ ಕವಿಯು ಗೌರಿ, ವಾಣಿಯರನ್ನು ಪ್ರಾರ್ಥಿಸಿಕೊಂಡಿದಾರೆ.

| | |
|---|---|
| "ತಾಯಿ, ತಾಯಿ, ಕೃಪೆಯ ತೋರಿ | ೩ : ೩ : ೩ : ೩ : |
| ನಮ್ಮ ಕೃಷ್ಣನ | ೩ : ೩ : ಗ |
| . . . . | |
| ಹೊನ್ನು ನಡೆಯ, ಹೊನ್ನು ನುಡಿಯ | ೩ : ೩ : ೩ : ೩ |
| ಕನ್ನಡಿಗರ ವಯಿರ ಮುಡಿಯ | ೩ : ೩ : ೩ : ೩ |
| ಒಡೆಯ ಕೃಷ್ಣನ" | ೩ : ೩ : ಗ |

ಇಲ್ಲಿ ಆದಿಪ್ರಾಸವೂ ಅಂತ್ಯಪ್ರಾಸವೂ ಇವೆಯೆಂಬುದನ್ನು ಗಮನಿಸಬಹುದು. ಪ್ರಗಾಥದ ಎರಡನೆಯ ಭಾಗದಲ್ಲಿ ಕನ್ನಡಸಿರಿ, ಕಡಲಸಿರಿ ಮತ್ತು ಭರತಮಾತೆ ಮೂವರೂ ಬರುತ್ತಾರೆ. ಭರತಮಾತೆಯ ಮಾತು ಬಂದಾಗ, ಭಾವಕ್ಕೆ ತಕ್ಕಂತೆ ಛಂದಸ್ಸು ಬಾಗಿದೆ, ಬಳುಕಿದೆ:

"ಶ್ರೀ ಭರತಮಾತೆಯದೊಬ್ಬಳು
ತನ್ನ ಮಕ್ಕಳ ಬೀರಗನಸುಗಳುಬ್ಬುತಿರೆ ನಸುನಗುವಳು;
ಭರತಮಾತೆ! ಪ್ರೇಮಮಾತೆ!
ಮಹಿಮೆಯಲಿ ಕಳೆ ಮಿಗುವಳು!
ಗೌರಿಯೋಲಗದಿಂದ ಬಂದಳು; ಪೂರ್ಣಕುಂಭವ ತಂದಳು"

ಕನ್ನಡನಾಡಿನಲ್ಲೆಲ್ಲ ಹಿಗ್ಗು, ಉತ್ಸಾಹ, ಆನಂದ. ಇದನ್ನು ಚಿತ್ರಿಸುವಲ್ಲಿನ ಪ್ರಾಸಾನುಪ್ರಾಸದ ವೈಖರಿ, ದೀರ್ಘಸ್ವರಗಳ ಬಳಕೆ ಇವು ಮೆಚ್ಚುವಂತಿವೆ.

"ಮಂಗಳಮಯವಾಯಿತು ನಾಡು;
ಸಿಂಗರದಾ ಕನ್ನಡ ನಾಡು.
ಪಡುಗಡಲಿನ ತೆರೆ ಮುದ್ದಾಡುವ ಕರೆ, ಹೊಳೆಹಾಲಿಳಿಯುವ ಘಟ್ಟದೆರೆ,
ಪಂಪನ ರನ್ನನ ಪುಟವಿಡಿಸಿದ ಕಡೆ, ಹಂಪೆಯ ತಾಂಡವವಾಡಿದೆಡೆ"

ಇಲ್ಲಿ ಛಂದಸ್ಸು ಕುಣಿಯುತ್ತದೆ, ಬೀಗುತ್ತದೆ, ಬಳುಕುತ್ತದೆ. ಪ್ರಾಸ, ಅನುಪ್ರಾಸ, ಅಂತಃಪ್ರಾಸ, ಅಂತ್ಯಪ್ರಾಸಗಳು ಮೆರೆಯುತ್ತವೆ. ಮುಂದೆ ಪ್ರಗಾಥದಲ್ಲಿ ಯದುರಾಯರ ಕತೆ, ಮೈಸೂರರಮನೆಯಲ್ಲಿ ಒಡೆಯರ ಮನೆತನದ ಸ್ಥಾಪನೆ. ಅನಂತರ ಚಾಮುಂಡಾಂಬಿಕೆಯು ಮುತ್ತೈದೆಯೊಬ್ಬಳ ಮೇಲೆ ಬಂದು ಹರಸುವುದು, ಮೈಸೂರರಸರ ಸಾಧನೆಗಳು. "ಹೊಳೆಗಳನು

---

[32] R. M. Alden: *An Introduction to Poetry*, p. 195. [33] W. P. Ker: *Form and Style in Poetry*, p. 202. [34] ಶ್ರೀ: ಹೊಂಗನಸುಗಳು. ೧೯೪೩ ರಲ್ಲಿ ಕೆಲವರು ಮಿತ್ರರಲ್ಲಿ ಹಂಚಲಾದ ಪ್ರತಿ; ೧೯೫೦ ರಲ್ಲಿ ಮತ್ತೆ ಅಚ್ಚಾಗಿದೆ.

ತಡೆಗಟ್ಟಿ ಬೆಂದ ಕಾಡನು ಬೆಳಸಿ ಹಸುರೆರಚುತಿಹರು" ಇವರು; ಜನಪ್ರೇಮಗಳಿಸಿದಾರೆ. ಆದುದರಿಂದ ಕನ್ನಡನಾಡನ್ನು ಸದಾ ಕಾಯುವುದಾಗಿ ಚಾಮುಂಡಾಂಬಿಕೆ ಭರವಸೆಕೊಡು ವಳು. ಕೊನೆಯ ಭಾಗದಲ್ಲಿ ಮೊದಲಭಾಗದ ಸಾಲುಗಳೇ ಬಂದು ಪ್ರಗಾಥಕ್ಕೆ ಒಂದು ಬಿಗಿಪು ಬಂದಿವೆ. ಇಲ್ಲಿ ಅಲ್ಲಲ್ಲಿ ಕಾಣುವ ೨೮ ಮಾತ್ರೆಗಳ ದೀರ್ಘಸಾಲುಗಳು ಗ್ರೀಕ್ ಕಾವ್ಯದ ೨೪ ಮಾತ್ರೆಗಳ ಸಾಲುಗಳ ಗಾಂಭೀರ್ಯವನ್ನು ಪಡಿಮೂಡಿಸಿವೆ. ಇಲ್ಲಿ ೫, ೪ ಮತ್ತು ೩ ಮಾತ್ರೆಗಳ ಗಣಗಳನ್ನು ಬಳಸಿಯೇ ಶ್ರೀಯವರು ವೈವಿಧ್ಯ ಸಾಧಿಸಿದಾರೆ.

ಶ್ರೀಯವರ 'ಕನ್ನಡತಾಯಿ ನೋಟ'ವು ವಿಜಯನಗರ ಸಾಮ್ರಾಜ್ಯದ ಆರುನೂರು ವರ್ಷದಂದು ಕನ್ನಡನಾಡಿಗೆ ಕವಿ ತಂದ ಒಸಗೆ. ಕವಿಯು ಕನ್ನಡದ ನಾಡಿನಲ್ಲಿ 'ಹರಕೆಯ ಪವಿತ್ರ ಯಾತ್ರೆಯಲಿ' ಸುತ್ತಿ ಈ ನಾಡು 'ಚೆಲುವು ಚೆಲ್ಲುವ ನಾಡು' ಎಂದು ಪ್ರೇಮದ ಕಣ್ಣಿನಿಂದ ವರ್ಣಿಸಿದಾರೆ.

> "ಕೆಳಗೆ ಬೆಳೆಹೊಲ ಕಪ್ಪು, ಮೇಲೆ ಬಾಂಬೊಲ ಕಪ್ಪು, ಬೆಟ್ಟಗಳು ಕಪ್ಪು
> ಕಾರ್ ಮೋಡಗಳು ಕಪ್ಪು, ಹೊಳೆ ಕೆರೆಯ ಮಡು ಕಪ್ಪು, ತಾಯಿ ಕಾಲ್ ತೊಳೆವ
> ಉಪ್ಪು ಕಡಲದು ಕಪ್ಪು".

ಮತ್ತು ಕರ್‌ನಾಟದಲ್ಲಿ

> "ಹೆಣ್ಣುಗಳ ಕಣ್ ನೋಟ, ತಣ್ ನೋಟ ಕರ್ಪು, ಬಲು ಕರ್ಪು!
> ಕರ್ಪೊ, ಬೆಳ್ಪೋ ಕಾಣೆ, ಕನ್ನಡದ ಕಣ್ಣೋಟ—ಕೂರ್ಪು, ಆರ್ಪು".

ಕವಿ ಹಂಪೆಗೆ ಬಂದಾಗ ಕನ್ನಡತಾಯಿ ಅಲ್ಲಿ ಬಿಸಿಲ ಬೇಗುದಿಯಲ್ಲಿ ಕುಳಿತು ತನ್ನ ಅಳಲನ್ನು ತೋಡಿಕೊಳ್ಳುತ್ತಾಳೆ. "ಸಾವಿಲ್ಲ ನನಗೆ—ಸಾವಿಲ್ಲ ಸಾಯುತಿಹೆ" ಎಂದು ಹಮ್ಮಲ ಮರುಗುತ್ತಾಳೆ. ಅಕ್ಕತಂಗಿಯರ ಮನೆಗಳಲ್ಲಿ ಎಲ್ಲ ಚೆನ್ನವಾಗಿ ಚಿನ್ನವಾಗಿ, ಮನೆ ಬೆಳಗಿ ಹಬ್ಬ ಮಾಡುತ್ತಿದಾರೆ. ಆದರೆ ಕನ್ನಡನಾಡಿನಲ್ಲಿ ಮಕ್ಕಳಿಗೆ ತಾಯ ನೆನಪೂ ಇಲ್ಲ.

> "ಏನು ಕವಿಯಿತೊ ಮಂಕು ಮಕ್ಕಳಿಗೆ! ಯಾರೆರಚಿದರೊ ಬೂದಿ ಕಾಣೆ,
> ನನ್ನನೊಲ್ಲರು, ನನ್ನ ಮಕ್ಕಳೇ! . . .
> ನನ್ನ ನಾಡಿನಲಿರುಳು".

ಈ ಕೊರಗಿನ ಕೂಗನ್ನು ಕೇಳಿದ ಕವಿಯು ತಾಯಿಗೆ ಆಶ್ವಾಸನೆ ಕೊಡುತ್ತಾನೆ. ಕನ್ನಡನಾಡಿನ ಜನರು ಈಗ ಎಚ್ಚೆತ್ತು ಕಾರ್ಯೋನ್ಮುಖರಾಗಿದಾರೆ. ತಾಯಿಯು ಹರಸಬೇಕೆಂದು ಬೇಡಿಕೊಳ್ಳುತ್ತಾನೆ. ಆಗ

> "ನಕ್ಕಳಾ ತಾಯಿ.
> ಮುದುಕಿ ಎಳೆಯವಳಾಗಿ, ಮಾಸು ಮಿಂಚೆಳೆಯಾಗಿ, ನವೆದ ಮೈತುಂಬಿ,
> ಕಡಲ ತೆರೆಗಳನುಟ್ಟು, ಬೆಟ್ಟ ಬಯಲನು ತೊಟ್ಟು, ಅರಿಲ ಮುಡಿಗಿಟ್ಟು".

ಈ ಸಾಲುಗಳು ಮಿಂಚು ಮೈದಪ್ಪಿದಂತೆ ನಮ್ಮನ್ನು ಪುಲಕಗೊಳಿಸುತ್ತವೆ. ತಾಯಿಯು ಕವಿಯನ್ನು ಆಶೀರ್ವದಿಸುತ್ತಾಳೆ. ಆಗ ಕವಿಯು ಜನರಿಗೆ ಒಸಗೆಯನ್ನು "ಸಿರಿಗನ್ನಡಂ ಗೆಲ್ಗೆ, ಕನ್ನಡತಾಯ್ ಗೆಲ್ಗೆ, ಬಾಳ್ಗೆ" ಎಂಬುದನ್ನು ಹೇಳುತ್ತಾರೆ. ಇಲ್ಲಿ ಭಾವವು ತೋರಿದಂತೆ ಛಂದಸ್ಸೂ ತೋರುತ್ತದೆ. ೨೮ ಮಾತ್ರೆಗಳ ಸಾಲುಗಳು ವಸ್ತುವಿಗೆ ತಕ್ಕ ಗಾಂಭೀರ್ಯದಿಂದ ನಡೆಯುತ್ತವೆ. ಕನ್ನಡದಲ್ಲಿರುವ ಆಸಿಯತ ಪ್ರಗಾಥಗಳಲ್ಲಿ ಇದಕ್ಕೆ ಮೊದಲಸ್ಥಾನ.

ಶ್ರೀಯವರ 'ಶುಕ್ರಗೀತೆ' ಸಂಬೋಧನಾತ್ಮಕವಾಗಿಲ್ಲದಿದ್ದರೂ ಪ್ರಗಾಥದ ಉಳಿದೆಲ್ಲ ಲಕ್ಷಣಗಳೂ ಇದರಲ್ಲಿವೆ. ವಿಶ್ವವಿದ್ಯಾನಿಲಯದ ಬೆಳ್ಳಿಯ ಹಬ್ಬದಲ್ಲಿ ಓದಿದ ಕವಿತೆ ಇದು. ಋಷಿಕುಮಾರರು, ಅಮೃತಪುತ್ರರು ಭುವಿಯ ಬೆಳಕನ್ನು ಚೆಲುವನ್ನು ಕಂಡು ಮಾಡಿದ ಪ್ರಾರ್ಥನೆ—ಬೆಳಕಾದುದು, ಬೆಳಕು ಚೆಲುವಾದುದು ಅನಂತರ ಕತ್ತಲೆ ಹಬ್ಬಾಗಿ "ಪೊಗೆಯಾಗಿ

ನೋಣೆವ ಪಿಡಿನೆಳಲಾಗಿ, ನಂಜಾಗಿ, ಕಣ್ಣ ಮಂಜಾಗಿ" ಸಂದೇಹ ಸಂಶಯಗಳನ್ನು ಬೆಳಸುವ ಚಿತ್ರಣವಿದೆ. ಈ ಕತ್ತಲು—ಬೆಳಕುಗಳ ಸಂಘರ್ಷ ಮಾನವ ಹೃದಯದಲ್ಲಿ ಸದಾಕಾಲವೂ ನಡೆಯುತ್ತಿರುತ್ತದೆ. ಯುಗಯುಗದಲ್ಲಿಯೂ ಧರ್ಮಾಮೃತವನ್ನು ಚಿಲುಮೆಗೊಳಿಸುವ ಗುರುಗಳೇ ಬೆಳಕಿನ ಮಕ್ಕಳೆಂದು ಹೇಳಿ ಮಂಗಳಪದ್ಯದಲ್ಲಿ "ಋತವೊಂದೆ ಗೆಲ್ಲುವುದು ಅನೃತವಲ್ತು" ಎಂದು ಸಾರಿ "ಕನ್ನಡಿಗರುಸಿರಾಗಿ ಕನ್ನಡಂ ಬಾಳ್ಗೆ" ಎಂದು ಕವಿತೆ ಮುಕ್ತಾಯವಾಗುತ್ತದೆ.

ಶ್ರೀಯವರ ಈ ಪ್ರಗಾಥಗಳಲ್ಲಿ ಬದಲಾಗುವ ಮತ್ತು ಅನಿಯತವಾದ ಛಂದಸ್ಸು, ಶ್ರೀಮಂತಕಲ್ಪನೆ, ದೃಢವಾದ ದೈವಭಕ್ತಿ, ಕನ್ನಡತನದ ಕೆಚ್ಚು ಇವುಗಳನ್ನು ಚೆನ್ನಾಗಿ ಕಾಣಬಹುದು. "ಉತ್ಸಾಹಪೂರ್ಣವಾದ ಮತ್ತು ಗಂಭೀರವಾದ ಶೈಲಿಯಲ್ಲಿರುವ ಭಾವಗೀತೆ" ಪ್ರಗಾಥ ಎಂಬ ಮಾತು ಈ ಪ್ರಗಾಥಗಳಿಗೆ ಸಂಪೂರ್ಣವಾಗಿ ಅನ್ವಯಿಸುತ್ತದೆ.

ಕೆ. ಎಸ್. ನರಸಿಂಹಸ್ವಾಮಿಯವರ 'ಡೊಮಿನಿಯನ್ ಜನನ'ವು[35] ಭಾರತವನ್ನಾಳುತ್ತಿದ್ದ ಬ್ರಿಟಾನಿಯಳನ್ನು ಕುರಿತು ಆಡಿದಂತಿರುವ ಪ್ರಗಾಥ. ಹತ್ತು ಸಾಲಿನ ಏಳು ನುಡಿಗಳೂ, ಐದು ಸಾಲಿನ ಒಂದು ನುಡಿಯೂ ಇರುವ ಈ ಪ್ರಗಾಥದಲ್ಲಿ ನಿಯತಪ್ರಾಸವಿಲ್ಲ, ಒಂದೇ ಉದ್ದದ ಪಂಕ್ತಿಗಳಿಲ್ಲ. ಸರಳವಾದರೂ ಶೈಲಿಯಲ್ಲಿ ಗಾಂಭೀರ್ಯದ ನಡೆಯಿದೆ, ಸುಂದರ ಚಿತ್ರಣವಿದೆ.

"ನೀಲಜಲದಲಿ ನಕ್ಕ ಅಚ್ಚರಿಯ ನೆಲವೆ,
ಎದೆ ತುಂಬ ಹೊಂಬಣ್ಣ ತುಂಬಿ ತೂಗುವ ಬಯಲೆ,
ವರ್ತಕರ ಸಿರಿಮೆರೆವ ನಾಡೆ, ಬ್ರಿಟಾನಿಯ—
ಕಾವ್ಯಸಾಗರದ ಅಧಿದೇವತೆಯೆ ಆಗಿ
ಆಳೌ ಬ್ರಿಟಾನಿಯಾ, ಆಳು ತೆರೆಗಳನು—
ಸಾಮ್ರಾಜ್ಯಮುಕ್ತಿ ನಿನಗಿಂದು ಲಭಿಸಿಹುದು."

ಮುಂದೆ ಬ್ರಿಟನ್ ಕಾವ್ಯರಾಣಿಯಾಗಿ ಆಳುವಳೆಂಬ ಆಶಯ ಇಲ್ಲಿದೆ. ಮುಂದಿನ ಭಾಗದಲ್ಲಿ ಬ್ರಿಟನ್ ದೇಶವು ಸಾಮ್ರಾಜ್ಯವನ್ನು ರಚಿಸಿದ ಚಿತ್ರ, ಅವರ ಆಳಿಕೆಯ ಚಿತ್ರವಿದೆ. ಭಾರತದ ಮಕ್ಕಳು ದಬ್ಬಾಳಿಕೆಯನ್ನೆದುರಿಸಿದಾಗ

"ಹೂಬಳ್ಳಿಯೆಲ್ಲ ಉಕ್ಕಾಗಿ ಸತ್ಯಾಗ್ರಹದ
ಸವ್ಯಮಾರ್ಗದಲಿ ಸಂಗ್ರಾಮವನು"

ನಡೆಸಿದ ಚಿತ್ರಣ ಸೊಗಸಾಗಿದೆ. ಗಾಂಧೀಜಿಯ ಹರಕೆ ಹಿಮಗಿರಿಯಂತೆ ಹಬ್ಬಿರಲು ೧೫-೮-೧೯೪೭ರ ಮಧ್ಯರಾತ್ರಿ ಡೊಮಿನಿಯನ್ ಜನನವಾಯಿತು. ನೆಲವು ಒಂದಿದ್ದುದು ಎರಡಾಗಿ ಒಡೆಯಿತು, ಭಾರತ ಮತ್ತು ಪಾಕಿಸ್ತಾನಗಳಾಗಿ! ಕೊನೆಯಲ್ಲಿ ಭಾರತವು ಬ್ರಿಟಾನಿಯಾಳಿಗೆ ಶುಭಪ್ರಯಾಣ ಕೋರುವ ಸಾಲುಗಳು ಅಮೋಘವಾಗಿವೆ.

"ಫೇರ್‌ವೆಲ್ ಬ್ರಿಟಾನಿಯಾ, ನೀನಿಂದು ಗ್ರೇಟ್‌ಬ್ರಿಟನ್!
. . . . . . . . . . . .
ಬಾನ ತುಂಬಿಹುದು ಈ ಕೂಗು, ಜಯ ಗಾಂಧಿ".

ಒಂದು ಮಹತ್ತರ ಘಟನೆಯ ಬಗ್ಗೆ ನೇರವಾಗಿ ಮನಮುಟ್ಟುವಂತಹ ಸರಳ ಗಂಭೀರ ಪ್ರಗಾಥ ಇದು. ಕನ್ನಡ ಪ್ರಗಾಥಗಳಲ್ಲಿ ಇದೂ ಒಂದು ಉತ್ತಮ ಪ್ರಗಾಥ.

ಕುವೆಂಪು ಅವರ 'ಶ್ರೀ ಸ್ವಾತಂತ್ರ್ಯೋದಯ ಮಹಾಪ್ರಗಾಥ' (೧೯೪೮) ಇದೇ ಮಹತ್ತರ ಘಟನೆಯ ಬಗ್ಗೆ ಬರೆದ ಪ್ರೌಢವಾದ ಶೈಲಿಯ ಪ್ರಗಾಥ. ಪ್ರಾಸದ ಕಟ್ಟು ಇದೆ. ಪ್ರತಿಯೊಂದು ನುಡಿಯಲ್ಲಿಯೂ ಛಂದಸ್ಸಿನ ತಿರುವಿದೆ. ಪಿಂಡಾರನಲ್ಲಿರುವಂತೆಯೇ ಪ್ರತಿಮಾ

---

[35] ಕೆ. ಎಸ್. ನರಸಿಂಹಸ್ವಾಮಿ : ಉಂಗುರ (೧೯೪೯), ಪು. ೩-೧೧.

ಪ್ರೌಢಿಮೆ, ಛಂದಸ್ಸಿನ ತಿರುವು ಪ್ರತಿತಿರುವು ಮುಂತಾದ ತಾಂತ್ರಿಕ ಪರಿಣತಿಯು ಇಲ್ಲಿಯೂ ಕಾಣುತ್ತದೆ. ಸಾಧಾರಣ ಪದಪುಂಜಗಳನ್ನೂ ಸಂಸ್ಕೃತ ವ್ಯಾಕರಣರೀತಿಯಲ್ಲಿ ಬಳಸುವ ತಾಂತ್ರಿಕ ನಿಪುಣತೆ, ಪುರಾಣೇತಿಹಾಸಕತೆಗಳನ್ನು ಅಳವಡಿಸಿಕೊಳ್ಳುವ ಚತುರತೆ, ಮಾನವನ ಎಲ್ಲ ಸಿದ್ಧಿಯೂ ದೈವಕೃಪೆಯದು ಎಂಬ ಭಕ್ತಿ, ಶ್ರದ್ಧೆ, ಇವುಗಳೆಲ್ಲ ಪಿಂಡಾರನನ್ನು ನೆನಪಿಗೆ ತರುತ್ತವೆ. ಕೆಲವುವೇಳೆ ಕಾಳನ್ನು ಚೀಲದಿಂದಲೇ ಚೆಲ್ಲಿದಂತೆ, ಅತಿಯಾದ ವರ್ಣನೆ, ಪ್ರತಿಮೆಗಳ ವಿಶೇಷ ಉಪಯೋಗ ಅರ್ಥವನ್ನೇ ಮರೆಸಿ, ಸೂಚನೆ ಧ್ವನಿಗಳನ್ನು ಸೋಲಿಸಿ, ಸ್ವನಕ್ಕೆ ಮಾರು ಹೋಗಿ ಪದಗಳು ಓಡುವುದನ್ನೂ ನೋಡಬಹುದು.

ಸ್ವಾತಂತ್ರ್ಯದ ದಿನದಂದು ಸರಸ್ವತಿಯು ಹರಕೆಯನ್ನು ಪಡೆದ ಕವಿ 'ವಂದೇ ಮಾತರಂ' ಎಂಬ ಘೋಷಣೆ ಮಾಡಲು ಜನರನ್ನು ಕರೆಯುತ್ತಾನೆ. ಇಲ್ಲಿ ಛಂದಸ್ಸಿನ ಗತಿ ನಾಟ್ಯಗತಿಯಾಗಿ ಕುಣಿಯುವುದನ್ನು ಕಾಣಬಹುದು.

"ಬಾನಿಳಿದು ನಿಲ್ವ, ಬುವಿ ಏರಿ ಸೋಲ್ವ, ಆ ಮಲೆಯ ತಲೆಗೆ
ಅನ್ನಮಯದಾಚೆ, ತನ್ನತನದೀಚೆ ಚಿನ್ಮಯದ ಶಿಲೆಗೆ"

ಬನ್ನಿರೆಂದು ಎಲ್ಲರಿಗೂ, ಜನರಿಗೇ ಅಲ್ಲದೆ ಸಹ್ಯಾದ್ರಿ, ವಿಂಧ್ಯಾದ್ರಿ ಮುಂತಾದ ಪರ್ವತ ಶ್ರೇಣಿಗಳಿಗೂ, ಗಂಗೆ ತುಂಗೆಯರಿಗೂ ಕರೆ ಬರುತ್ತದೆ. ಕವಿಯು ಉನ್ನತ ಪ್ರದೇಶಕ್ಕೆ ಹೋದಾಗ ಅಲ್ಲಿ, ಆ ತುಂಗಶೃಂಗದಲ್ಲಿ ಅಪಾರ ಶಾಂತಿ, ಕಾಂತಿ ತುಂಬಿರುವ ಅನುಭವವಾಗುತ್ತದೆ. ಬೆಳಗು ಮೆಯ್ಯ ಪುಣ್ಯಮೂರ್ತಿಗಳೆಲ್ಲ ಹರಸಲು ನಿಂದಿದಾರೆ. ಅಲ್ಲಿಯೇ ಹೆಸರರಿಯದ, ಬಾಳ ಸ್ಫೂರ್ತಿಯಹಾದ ನೇಗಿಲಯೋಗಿಯೂ ಕೈಮುಗಿದು ನಿಂತಿದಾನೆ. ಕವಿಯು ಎಲ್ಲರನ್ನೂ ಹೊಸ ಬಾಳಿಗೆ ಹೊಸ ಸೋಂಪಿಯ ಹೊಸ ಕಂಕಣವನ್ನು ತನ್ನಿರೆಂದು ಕರೆಯುತ್ತಾನೆ. ಇದರ ನಂತರ ಸ್ವಾತಂತ್ರ್ಯದ ಹರ್ಷದ ವರ್ಣನೆಯಿದೆ.

"ಬೆಳ್ಳಿ ಬೆಟ್ಟದಿಂದ ದುಮುಕಿ ರುದ್ರನಟ್ಟಹಾಸ
ತೆರೆಯ ತಟ್ಟಿದಂತೆ ಬಂತು ಜನಸಮುದ್ರಘೋಷ."

ಭಾರತಾಂಬೆ ಇಂದು ಎಚ್ಚರಗೊಂಡಳು. ಈ "ಆದಿಶಕ್ತಿ, ಅಂತ್ಯಮುಕ್ತಿ, ಸಾಂತೆ ಮೇಣ ಸಂತೆ"ಗೆ ಭಕ್ತಿಯಿಂದ ನಮಸ್ಕರಿಸಿ ಕವಿ ತ್ರಿವರ್ಣಕೇತನವನ್ನು ವರ್ಣಿಸಿದಾನೆ. ಎಲ್ಲ ದೇವರ ಹರಕೆಯನ್ನೂ ಹೊತ್ತ ಈ ಬಾವುಟ ಪುನೀತವಾದ ವೈಜಯಂತಿ. "ಭರತಖಂಡದಗ್ನಿ ಕುಂಡದಿಂದ ಸಿಡಿದ ಕೆಂಡ", ಜಗತ್ತಿಗೆಲ್ಲ ಮೈತ್ರಿಯನ್ನು ಹರಡುವ ಪತಾಕೆ.

ಈ ಸ್ವಾತಂತ್ರ್ಯದ ಸಮಾರಂಭದಲ್ಲಿ ಕವಿಯ ಕಣ್ಣು, ಉಳಿದವರಂತೆಯೇ ಯಾರನ್ನೋ ಹುಡುಕುತ್ತದೆ. ಆತನೆಲ್ಲಿಯೂ ಕಾಣದಿರಲು ಕಣ್ಣೀರು ತುಂಬಿ ಆತನ ನೆನಪಾಗುತ್ತದೆ. ಗಾಂಧೀಜಿಯ ಸುಂದರವಾದ ಚಿತ್ರಣವಿದೆ ಇಲ್ಲಿ.

"ಮರೆವುದೆಂತಾ ನಮ್ಮ ಸ್ವಾತಂತ್ರ್ಯಶಿಲ್ಪಿಯಂ
ದಿವ್ಯದಿನದೀ ಶುಭ ಮುಹೂರ್ತದಲ್ಲಿ"

ಗಾಂಧೀಜಿ ದಿನವೂ ನಮ್ಮೆದೆಯ ವಿಷವನ್ನು ಕುಡಿಯುವ ನೀಲಕಂಠ,

"ಗಾಂಧಿಯೆಂಬಾ ಪೆಸರೆ ನಾಂದಿಯಾಗಲಿ ನಮ್ಮ
ಸ್ವಾತಂತ್ರ್ಯ ಸಂಭ್ರಮಕೆ".

ಈ ಸ್ವಾತಂತ್ರ್ಯವು ಅನವರತವೂ ಉಳಿಯಲೆಂದು ಕವಿಯು ದೇವದೇವತೆಯರಿಗೆ ಗುರುಹಿರಿಯರಿಗೆ ಅದನ್ನರ್ಪಿಸುತ್ತಾನೆ. ಪರಮಹಂಸರಿಗೆ, ಅರವಿಂದರಿಗೆ, ರಮಣ ಮಹರ್ಷಿಗಳಿಗೆ ಸ್ವಾತಂತ್ರ್ಯ

ವನ್ನರ್ಪಿಸಿ ಭೀಮ, ಅರ್ಜುನ, ಶ್ರೀಕೃಷ್ಣ, ಆಂಜನೇಯ, ಶ್ರೀರಾಮ ಇವರೆಲ್ಲರೂ ತಮ್ಮ ಭುಜ ಬಲದಿಂದ ಇದನ್ನು ಕಾಪಾಡಲಿ ಎಂದು ಕವಿ ಹಾರೈಸುತ್ತಾನೆ.

"ರಕ್ಷೆಯಾಗಲಿ ದಕ್ಷಿಣೇಶ್ವರ ಪರಮಗುರುದೇವ!
ರಕ್ಷೆಯಾಗಲಿ ಸಕಲ ರಕ್ಷಕನಾ ಮಹಾದೇವ
ಓಂ ಶಾಂತಿಃ ಶಾಂತಿಃ ಶಾಂತಿಃ"

ಎಂದು ಪ್ರಗಾಥವು ಮುಕ್ತಾಯವಾಗುತ್ತದೆ. ಇಲ್ಲಿ ೨೮೪ ಸಾಲುಗಳಲ್ಲಿ ಸ್ವಾತಂತ್ರ್ಯದ ಉದ್ರೇಕ, ಉತ್ಸಾಹ ಇವು ತೀವ್ರವಾಗಿ ಚಿತ್ರಿತವಾಗಿವೆ. ಇಲ್ಲಿ ವಿಚಾರಕ್ಕೆ ಅಷ್ಟು ಪ್ರಾಶಸ್ತ್ಯ ವಿಲ್ಲ. ಪದಪುಂಜಗಳಲ್ಲಿ ಧ್ವನಿಗಿಂತ ವಿಸ್ತಾರವಾಗಿ ಬಿಡಿಸಿಟ್ಟ ವಾಚ್ಯಾರ್ಥವೇ ಹೆಚ್ಚೆನಿಸುತ್ತದೆ. ಡ್ರೈಡನ್ ಮತ್ತು ಕೌಲಿಯವರ ಪ್ರಗಾಥಗಳಂತೆ ಶಬ್ದಮಾಧುರ್ಯ, ಶಬ್ದಸಂಪತ್ತಿ ಇವು ಹೆಚ್ಚಾಗಿ ಕಂಡರೂ ಅಚ್ಚರಿಯಿಲ್ಲ.

ಕನ್ನಡದಲ್ಲಿ ಪ್ರಗಾಥಗಳ ಸಂಖ್ಯೆ ಹೆಚ್ಚಾಗಿಲ್ಲ. ಈಗ ಬಂದಿರುವ ಪ್ರಗಾಥಗಳಲ್ಲಿ ಸಾಧನೆಯೂ ಚೆನ್ನಾಗಿದೆ, ಸಿದ್ಧಿಯೂ ಉತ್ತಮವಾಗಿದೆ. ಇಂಗ್ಲಿಷಿನಲ್ಲಿ ಬಹುಸಂಖ್ಯೆಯಲ್ಲಿ, ಬಹುವಿಚಾರ ಪ್ರೌಢಿಮೆಯಿಂದ ತುಂಬಿಕೊಂಡು ಬಂದಿದೆ ಪ್ರಗಾಥ ಸಾಹಿತ್ಯ. ಆದರೆ ಕನ್ನಡದಲ್ಲಿ ಭಾವಗೀತೆಯ ಒಂದು ಮುಖ್ಯ ಪ್ರಕಾರವಾದ ಪ್ರಗಾಥ ಇನ್ನೂ ಬೆಳೆಯಬೇಕು. ಈಗಿರುವ ಬೆಳೆ ಸಾಲದು, ಅದೊಂದು ಕೊರೆ ಎಂದು ಹೇಳಬಹುದು. ಈಚೆಗೆ ಭಾವಗೀತೆಯ ಬೇರೆ ಪ್ರಕಾರ ಗಳಲ್ಲಿ ಪ್ರಯೋಗ ನಡೆಯುತ್ತಿದೆ. ಆದರೆ ಪ್ರಗಾಥದ ಕಡೆಗೆ ಯಾರದೂ ದೃಷ್ಟಿಬಿದ್ದಂತಿಲ್ಲ. ಈ ಕೊರೆಯನ್ನು ತುಂಬುವ ಕಾಲ ಬಂದೀತೆಂದೂ, ವೈವಿಧ್ಯ ಪೂರ್ಣ ಪ್ರಗಾಥಗಳು ಕನ್ನಡದಲ್ಲಿ ಬರುತ್ತದೆಂದೂ ಹಾರೈಸಬಹುದು.

ಎಸ್. ಅನಂತನಾರಾಯಣ

# ಸಾಹಿತ್ಯದಲ್ಲಿ ಔಚಿತ್ಯ

ಜೀವನದಲ್ಲಿ ಔಚಿತ್ಯದ ಸ್ಥಾನ ಬಹು ಹಿರಿದಾದುದು. ಉಚಿತವಾಗಿ, ಒಪ್ಪುವಂತೆ, ಓರಣವಾಗಿರುವುದೇ ಔಚಿತ್ಯ. ಸಂಸಾರದಲ್ಲಿ ಸತಿ-ಪತಿ, ತಂದೆ-ಮಕ್ಕಳು, ಬಂಧು-ಮಿತ್ರರು, ತಮ್ಮ ಉಚಿತ ಸ್ಥಾನವನ್ನರಿತು ಬಾಳಿದರೇನೇ ಆ ಸಂಸಾರ ಸುಗಮವಾಗಿ, ಸುಂದರವಾಗಿ ಸಾಗುತ್ತದೆ. ಮಾನವನಲ್ಲಿ ವಸ್ತ್ರಾಲಂಕಾರಾದಿಗಳೂ ತಮಗೊಪ್ಪುವ ಸ್ಥಾನದಲ್ಲಿ, ಒಪ್ಪುವ ರೀತಿಯಲ್ಲಿದ್ದರೇನೇ ಅಂದವಾಗಿರುತ್ತವೆ. 'ಕಂಠೇ ಮೇಖಲಯಾ ನಿತಂಬಫಲಕೇ ತಾರೇಣ ಹಾರೇಣ ವಾ—'ಎಂಬಂತೆ ಕಂಠಕ್ಕೆ ಪಟ್ಟಿಯನ್ನು ಕಟ್ಟಿ, ಸೊಂಟಕ್ಕೆ ಹಾರವನ್ನು ಹೇರಿಸಿದ್ದಾದರೆ ಆ ಸುಂದರ ಭೂಷಣವಾದರೂ ಒಪ್ಪುವ ಸ್ಥಾನದಲ್ಲಿಲ್ಲದೆ ದೂಷಣವೇ ಆಗಬಹುದು.

ಅದೇ ರೀತಿ ಸುಂದರ ಅವಯವಗಳೂ ಆಯಾ ಸ್ಥಾನದಲ್ಲಿ ಉಚಿತ ರೀತಿಯಿಂದಿದ್ದರೆ ಮಾತ್ರ ಅವು ಮನಮೋಹಕವಾಗುತ್ತವೆ. ಇಲ್ಲವಾದರೆ ಹಾಸ್ಯಾಸ್ಪದವಾಗುತ್ತವೆ. ಚಿತ್ತಾಕರ್ಷಕ ಕೇಶಪಾಶವಾದರೂ ಶಿರಸ್ಸಿನಲ್ಲಿ ಉಚಿತ ರೀತಿಯಿಂದಿದ್ದರೆ ಮಾತ್ರ ಅಂದವಾಗುವುದಲ್ಲದೆ, ಅದನ್ನು ಮೀರಿ ಬೆಳೆದರೆ, ಗಡ್ಡ ಮೀಸೆಯೂ ತೋರುವಂತಾದರೆ ನಾರೀಮಣಿಯ ಎಂತಹ ಸುರೂಪವನ್ನಾದರೂ ಅದೇ ಕುಗ್ಗಿಸುತ್ತದೆ. ಅದನ್ನೇ ಹಿರಿಯರು 'ಸ್ಥಾನಭ್ರಷ್ಟಾ ನ ಶೋಭಂತೇ ದಂತಾಃ, ಕೇಶಾಃ, ನಖಾ, ನರಾಃ'—ಎಂದಿದ್ದಾರೆ. ಮುಖಾಲಂಕಾರಕ್ಕೆ ಪ್ರಮುಖ ಸಾಧನವಾದ ಮುತ್ತಿನಂತಹ ಹಲ್ಲು, ಕಂಗೊಳಿಸುವ ಕೇಶಪಾಶವಾದರೂ ತಕ್ಕ ಸ್ಥಾನದಲ್ಲಿಲ್ಲವಾದರೆ ಸ್ಥಾನಭ್ರಷ್ಟನಾದ ಮಾನವನಂತೆ ಶೋಚನೀಯವಾಗುತ್ತವೆ. ಅಂತು ಔಚಿತ್ಯವೇ ಸೌಂದರ್ಯದ ಮೂಲವೆಂಬುದರಲ್ಲಿ ಯಾವ ಭಿನ್ನಾಭಿಪ್ರಾಯವೂ ಇಲ್ಲ.

ಉತ್ತಮ ಗುಣಗಳಾದ ಶೌರ್ಯ, ದಯೆ ಮುಂತಾದುವು ಸಹ ಬೇಕಾದಾಗ, ಬೇಕಾದಲ್ಲಿ ಉಪಯೋಗಿಸಲ್ಪಟ್ಟರೆ ಮಾತ್ರ ಸಾರ್ಥಕವಾಗುತ್ತವೆ. ಅಲ್ಲದೆ ಶರಣಾಗತನಲ್ಲಿ ಪರಾಕ್ರಮವೂ, ಶತ್ರುವಿನ ಮೇಲೆ ದಯೆಯೂ ತೋರಿಸಲ್ಪಟ್ಟುದಾದರೆ ಅದು ಅನರ್ಥಪರಂಪರೆಗಳಿಗೆ ಮೂಲವಾಗಬಹುದು. ಹಾಗೆಯೇ ವಿವಾಹಕಾಲದಲ್ಲಿ ವೈರಾಗ್ಯವೂ, ಮುಪ್ಪಿನಲ್ಲಿ ಮಿತಿಮೀರಿದ ಅನುರಾಗವೂ ಅನುಚಿತವಾಗಿಯೇ ತೋರುತ್ತವೆ. ಈ ತರದಲ್ಲಿ ಗುಣಾಲಂಕಾರಗಳಿಗೆ ಸ್ಥಾನಮಹಿಮೆ ಬಹು ವಿಶೇಷವಾದುದೆಂಬುದನ್ನು ನಾವು ಜೀವನದಲ್ಲಿ ಕಾಣುತ್ತೇವೆ. ಎಲ್ಲಿಗೆ ಯಾವುದು ಒಪ್ಪುವುದೋ ಅದೇ ಉಚಿತವಾಗಿರುತ್ತದೆ. 'ಔಚಿತ್ಯಂ ಪ್ರಾಹುರಾಚಾರ್ಯಾಃ ಸದೃಶಂ ಕಿಲ ಯಸ್ಯ ಯತ್'—ಎಂಬುದಾಗಿ ಇದನ್ನೇ ಹಿರಿಯರು ಸಾರಿದ್ದಾರೆ.

ಕಲೆ ಮತ್ತು ಸಾಹಿತ್ಯ ಜೀವನದ ಪ್ರತಿಬಿಂಬದಂತಿವೆ. ಚಿತ್ರಕಲೆಯಲ್ಲಿ ಬಣ್ಣ, ಭಂಗಿ, ಹಿನ್ನೆಲೆ, ಚೌಕಟ್ಟು—ಎಲ್ಲವೂ ಒಂದಕ್ಕೊಂದು ಹೊಂದುವಂತಿದ್ದರೇನೇ ಆಕರ್ಷಕವಾಗುತ್ತವೆ. ಅದಕ್ಕಿಂತಲೂ ವಿಶೇಷವಾಗಿ ಸಾಹಿತ್ಯದಲ್ಲಿ ಔಚಿತ್ಯದ ಸ್ಥಾನ ಹಿರಿದಾಗಿದೆ. ಅಂದರೆ ನೋಡುವವರಿಗೆ ಕಾವ್ಯದಲ್ಲಿ ಕಾಣಸಿಗುವುದು ಬಿಳಿದಾದ ಕಾಗದದ ಮೇಲೆ ಕಪ್ಪಾದ ಅಕ್ಷರಗಳು ಮಾತ್ರ. ಅಥವಾ ಕೇಳಸಿಗುವುದು ಓದುಗನ ಸ್ವರ ಮಾತ್ರ. ಅದರಲ್ಲೇ ರೂಪ, ಬಣ್ಣ, ಲಾವಣ್ಯ, ಅಲಂಕಾರ, ಮಾಧುರ್ಯ, ರಸ, ಭಾವ, ಧ್ವನಿ—ಇವೆಲ್ಲ ಹೃದಯಂಗಮವಾಗಿ ಉಕ್ಕಿಬರಬೇಕು. ಎಲ್ಲವೂ ಎದ್ದು ಕಂಗೊಳಿಸಬೇಕು. ಹಾಗಿರುತ್ತ ಸಾಹಿತಿಯು 'ರವಿ ಕಾಣದುದಂ ಕವಿ ಕಾಣ್ಬಂ'—ಎಂಬಂತಾದರೆ ಮಾತ್ರ ಓದುಗನಿಗೆ ಒಪ್ಪಿಗೆಯಾಗುವ ಕಾವ್ಯ ಸೃಷ್ಟಿಯಾಗಬಹುದು.

## ಪದ–ವಾಕ್ಯ

ಕವಿ ಉಪಯೋಗಿಸುವ ಸಾಧನ ಮುಖ್ಯವಾಗಿ ಪದಗಳು,ವಾಕ್ಯಗಳು. ಸಂದರ್ಭೋಚಿತವಾಗಿ, ರಸೋಚಿತವಾಗಿ ಅವುಗಳ ಪ್ರಯೋಗ ನಡೆಯಬೇಕಾಗಿದೆ. ವಾಕ್ಯ, ಪದ, ಪದಾಂಶ, ಅಕ್ಷರ—ಮುಂತಾದ ಅತಿ ಸಣ್ಣ ವಿಚಾರದಲ್ಲೂ ಔಚಿತ್ಯವಿದ್ದರೇನೇ ಸರಿಯಾದ ರಸ ಒಸರುವಂತಾಗುತ್ತದೆ. ಪ್ರೇಮಾನುರಾಗಗಳಿಗೆ ಸಂಬಂಧಿಸಿದ ಸರಸ ಸಂದರ್ಭದಲ್ಲಿ ಮೃದು ಮಧುರವಾದ ಪದ ವಾಕ್ಯಗಳನ್ನು ಉಪಯೋಗಿಸಿದ್ದಾದರೆ ಆ ಔಚಿತ್ಯವೇ ಅನುರಾಗವನ್ನು ಮೂಡಿಸುವಂತಾಗುತ್ತದೆ.

'ಮುಂಜಾವದ ಮೂ
ಡಣ ಬಾನಂದದಿ
ಹೊನ್ನಿಯ ಮೊಗ ಕೆಂಪೇರಿದುದು.
ನುಡಿಯಲಿ ನಡೆಯಲಿ
ನೋಟದಿ ಪಾಟದಿ
ಲಜ್ಜೆಯೆ ಹಜ್ಜೆಯನಿಟ್ಟಿಹುದು.' (ನಲ್ಮೆ)

ಇಲ್ಲೀಗ, ಹೊನ್ನಿಯ ಲಜ್ಜಾನುರಾಗಗಳಿಗೊಪ್ಪುವ ಎಂತಹ ಪದವಾಕ್ಯಗಳ ಪ್ರಯೋಗವಾಗಿದೆ!

ಕೋಪೋದ್ರಿಕ್ತ ಭೀಮ ದುರ್ಯೋಧನನೊಳಗಾದ ಘೋರಸಂಗ್ರಾಮಾವಸರದಲ್ಲಿ ರನ್ನನುಪಯೋಗಿಸಿದ ಆ ಕಡುನುಡಿಗಳೇ ರೌದ್ರಾವೇಶಗೈಯ್ಯುವಂತಿವೆ—

'ಸ್ಥಿರಬದ್ಧಮತ್ಸರರ್ ಭೀ-
ಕರಬದ್ಧಭ್ರುಕುಟಿಘಟಿತರದ್ಭುತರಟ್ಟಾ-
ಸುರರಧಿಕಕೋಪಪಾಟಳ-
ಪರುಷೇಕ್ಷಣರೆನಿಸಿ ದೃಷ್ಟಿಯುದ್ಧಂಗೆಯ್ದರ್ ||'

ಅಂತು, ಮೃದುಮಧುರಪದಮಯವಾದ 'ಮಾಧುರ್ಯ' ಎಂಬ ಗುಣವು ಶೃಂಗಾರ, ಹಾಸ್ಯ, ಕರುಣರಸಗಳಿಗೂ, ಪರುಷಪದಮಯವಾದ 'ಓಜಸ್' ಎಂಬ ಗುಣವು ವೀರ ರೌದ್ರಾದಿ ರಸಗಳಿಗೂ, ಉಚಿತವಾಗಿವೆಯೆಂದು ಪ್ರಾಚೀನ ಲಾಕ್ಷಣಿಕರು ಹೇಳಿದುದು ತುಂಬಾ ಯುಕ್ತಿಯುಕ್ತವಾಗಿದೆ.

ಈ ಗುಣಗಳನ್ನು ಬಳಸಿಕೊಳ್ಳುವುದು ಬಹುಮುಖ್ಯವಿಚಾರವಾದರೂ ಎಷ್ಟೋ ವೇಳೆ ಕವಿಗಳು ಇದನ್ನು ಮರೆತುಬಿಟ್ಟವರಂತೆ ವರ್ತಿಸುತ್ತಾರೆ. ಆದರೆ ಸಹೃದಯ ವಾಚಕನಿಗೆ ಆ ಕುಂದು ಗೋಚರವಾಗದಿರುವುದಿಲ್ಲ.

## ವರ್ಣನೆ

ಪ್ರಾಚೀನ ಕಾವ್ಯಗಳಲ್ಲಿ ಸಿಕ್ಕ ಸಿಕ್ಕಲ್ಲಿ ಮಹಾ ಮಹಾ ವರ್ಣನೆ ಮಾಡಿ ತೋರಿಸುವುದು ಒಂದು ಮೀರಲಾಗದ ಕಡುಪದ್ಧತಿಯೇ ಆಗಿದ್ದಂತೆ ತೋರುತ್ತದೆ. ರಾಜ್ಯ ಕಳಕೊಂಡು ಮಹಾರಾಜ ಕಾಡಿಗೈದಿದರೂ ವನದೇವಿಯ ರಮಣೀಯ ವರ್ಣನೆ ಬರಲೇಬೇಕು. ಅಲ್ಲಿ ರಾಜ ಕಂಗೆಟ್ಟು ಅಳುತ್ತಿರುವಾಗಲೂ ಪಿಕಾರಾವ ವರ್ಣನೆ ಇರಲೇ ಬೇಕು. ಅಪಾರ ಸಂತಾಪಕ್ಕೊಳಗಾದ ಮನಸ್ಸಿಗೆ ವನದೇವಿಯ ಕಮನೀಯತೆಯೂ ಕಾಣದು, ಪಿಕಾರಾವದ ಮಾಧುರ್ಯವೂ ಹಿಡಿಸದು. ಪರಿಸ್ಥಿತಿ ಹೀಗಿದ್ದರೂ ಕೆಲವೆಲ್ಲ ಕವಿಪುಂಗವರು ನಡೆಸುವ ಇಂತಹ ವರ್ಣನೆಗಳು ಔಚಿತ್ಯವನ್ನರಿಯದೆ ನಡೆಸುವ ಅಪಚಾರವೆನ್ನಬೇಕು.

ಈ ವಿಚಾರವನ್ನೇ ಕವಿವರ ಮುದ್ದಣನು ಶೇಷರಾಮಾಯಣವನ್ನು ಹೇಳತೊಡಗಿ 'ಸುರಾಸುರೇಂದ್ರ ಫಣೀಂದ್ರ ಮಣಿಮಕುಟತಟಘಟಿತ' ಎಂದು ಮೊದಲಾಗಿ 'ನೀರಿಳಿಯದ ಗಂಟಲೊಳ್ ಕಡುಬಂ ತುರುಕ' ತೊಡಗಿದಾಗ, ಮನೋರಮೆ 'ವಸುಧೆಗೊಡೆಯನಪ್ಪ ರಾಮಚಂದ್ರನ ಕತೆಯಂ ಪೇೞನೆ ಬಸದಿಗೊಡೆಯರಪ್ಪ ಸುರೇಂದ್ರರ ಕತೆಯ'ನ್ನೊದರುವುದು ಬೇಡವೆಂದು ಎಚ್ಚರಿಕೆಯಿತ್ತು ತಿಳಿಸಿದ್ದಾಳೆ. ನಗರಾರ್ಣವ ಶೈಲರ್ತುಗಳ ವರ್ಣನೆ ಬರಬೇಕು ನಿಜ. ಅದು ಮಿತವಾಗಿದ್ದರೆ ಮನೋಹರವಾಗುವುದೂ ನಿಜ. ಆದರೆ ಸಂದರ್ಭೌಚಿತ್ಯವಿಲ್ಲವಾದರೆ ಆ ವರ್ಣನೆ ಎದೆಯೊಡೆವ ವರ್ಣನೆಯೇ ಆಗಬಹುದು.

ಅದರಲ್ಲೂ ಎಷ್ಟೋವೇಳೆ ವರ್ಣನೆಯ ದಾಸರಾಗಿ ಹೋಗಿ ಕವಿಗಳು ತಮ್ಮನ್ನೇ ತಾವು ಮರೆತುಬಿಡುವುದೂ ಉಂಟು. ಹೇಳತೊಡಗಿದ ಕತೆಗಂತು ದೇವರೇ ಗತಿ! ಬಾಣಕವಿಯ ಸುಪ್ರಸಿದ್ಧ ಕಾದಂಬರಿಯನ್ನು ಓದಲಾರಂಭಿಸಿದರೆ, 'ರಾಜನ ಹಿಂದೆ ಛತ್ರವಲ್ಲ; ಛತ್ರದ ಹಿಂದೆ ಮಹಾರಾಜ!' ಎಂಬಂತೆ ವರ್ಣನಾಪರಂಪರೆಗಳ ಕಗ್ಗಾಡಿನಲ್ಲಿ ಕತೆ ದಿಕ್ಕುತಪ್ಪಿ ಕಂಗಾಲಾಗಿ ಹೋದುದನ್ನು ಧಾರಾಳವಾಗಿ ಕಾಣಬಹುದು. ಯಾವ ಕಾಡೇ ಬರಲಿ; ಯಾವ ಮರವೇ ಸಿಗಲಿ; ಯಾವ ಹಕ್ಕಿಯೇ ದೊರಕಲಿ; ಕವಿ ವರ್ಣನಾವೈಖರಿಯ ಅಚಲಸ್ತಂಭಕ್ಕೆ ಬದ್ಧನಾಗಿ ಹೋಗುತ್ತಾನೆ. ಆ ಕಾಲದ ಅಭಿರುಚಿಯ ಪ್ರಭಾವ ಕವಿಯ ಮೇಲೆ ಬಿದ್ದಿತೋ ಅಥವಾ ರಾಜಪೂಜಿತ ಮಹಾಕವಿಯು ತನ್ನ ಪ್ರಭಾವವನ್ನು ಕಾಲದಮೇಲೆ ಬೀರಿದ್ದನೋ ಹೇಳಬರುವಂತಿಲ್ಲ. ಅಂತು 'ಬಾಣೋಚ್ಛಿಷ್ಟಂ ಜಗತ್ಸರ್ವಂ' ಎಂಬುದಾಗಿ ಸಮಸ್ತ ಸಾಹಿತ್ಯ ಸಾಮ್ರಾಜ್ಯವೇ ಬಾಣನ ಕೈಕೆಳಗೆ ಎಂದಾಗಿ ಹೋಗಿತ್ತು ಆ ಒಂದು ಕಾಲದಲ್ಲಿ.

ಅವನಂತಹ ವರ್ಣನಾಪ್ರಿಯರಾದ ಸಂಸ್ಕೃತ ಕವಿವರರನ್ನು ಅನುಸರಿಸಿ ತೊಡಗಿದ ಕನ್ನಡ ಕವಿಗಳೂ ಈ ವಿಚಾರದಲ್ಲಿ ಹಿಂದೆ ಬೀಳಲಿಲ್ಲ. ಕಾವ್ಯಾರಂಭ ಮಾಡಿದೊಡನೆ ಆತ್ಮಕಾವ್ಯ ಪ್ರಶಂಸೆ, ಕುಕವಿನಿಂದೆಯ ಅಧಿಕಪ್ರಸಂಗ, ನಗರೋಪವನಗಳ ಶ್ಲೇಷಮಯವರ್ಣನೆ—ಇತ್ಯಾದಿಗಳಿಂದಲೇ ಹೆಚ್ಚಿನ ಕನ್ನಡ ಕವಿಗಳು ಗ್ರಂಥಾರಂಭ ಮಾಡಿದರು. ಕಾಡು ದೊರೆತಲ್ಲೆಲ್ಲ ಗಿಳಿ ಕೋಗಿಲೆಗಳನ್ನು ತಂದರು; ಊರು ಬಂದಲ್ಲೆಲ್ಲ ಉದ್ಯಾನ, ಸರೋವರ, ಕಮಲ, ಭ್ರಮರ, ಬೆಳದಿಂಗಳುಗಳನ್ನು ಸೃಷ್ಟಿಸತೊಡಗಿದರು; ಯಾವಾಗಲೂ ಶುಕ್ಲಪಕ್ಷ; ಎಂದೆಂದೂ ವಸಂತ ಪೌರ್ಣಮಿ! ಇಂತಹ ಕೃತಕ ವಾತಾವರಣವನ್ನು ಖಂಡಿಸಿದ ಮುದ್ದಣನೂ ಸಹ ಹಿರಿಯ ಕವಿಗಳ ಅಭ್ಯಾಸ ಬಲದಿಂದ ಧರಣೀಮಂಡಲ ವರ್ಣನೆಯ ಹುಚ್ಚಲ್ಲಿ ಸಿಕ್ಕಿ ಬೀಳುವ ಸಂದರ್ಭದಲ್ಲಿ, 'ಬಣ್ಣನೆಯ ಧರಣೀಮಂಡಲಂಗಳೇಕೆ? ಒಂದುಳಿಯದಂತು ಕತೆಯ ತಿರುಳನೆ ಕೂಡಿ ಪೇೞೈ'—ಎಂದು ಮನೋರಮೆ ಆತನನ್ನು ಸರಿದಾರಿಗೆ ತರಬೇಕಾಗುತ್ತಿತ್ತು.

## ನಾಟಕ

ಗದ್ಯ ಪದ್ಯ ಕಾವ್ಯಗಳಿಗಿಂತಲೂ ದೃಶ್ಯಕಾವ್ಯವಾದ ನಾಟಕದಲ್ಲಿ ಔಚಿತ್ಯದ ಪಾತ್ರ ಬಹು ಹಿರಿದಾದುದು. ಏಕೆಂದರೆ—ಮುಖ್ಯವಾಗಿ ನಾಟಕ ಬರೆಯಲಾಗುವುದು ಪ್ರದರ್ಶನಕ್ಕಾಗಿ; ರಂಗದಲ್ಲಿ ಎಲ್ಲ ತರದ ಜನರಿಗೂ ತೋರಿಸಲಿಕ್ಕಾಗಿ. ಅಂತಹ ಸಂದರ್ಭದಲ್ಲಿ ಭಾಷೆ ಒಂದು ಬಾರಿ ಕೇಳಿದೊಡನೆ ಸಾಮಾನ್ಯ ಪ್ರೇಕ್ಷಕನಿಗೂ ಅರ್ಥವಾಗುವಂತಿರಬೇಕು. ಸಹೃದಯನು ರಸಾಸ್ವಾದನೆಗೈಯುವಂತಾಗಬೇಕು. ಹಾಗಾಗುವುದಕ್ಕಾಗಿ ಮಾಧುರ್ಯ ಲಾಲಿತ್ಯಗಳಿದ್ದಷ್ಟು ಉತ್ತಮ. ಕನ್ನಡ ಸಾಹಿತ್ಯದಲ್ಲಿ ಪ್ರಾಚೀನ ನಾಟಕಗಳು ವಿಶೇಷವಾಗಿ ಉಪಲಬ್ಧವಾಗಿಲ್ಲ. ಸಂಸ್ಕೃತ ನಾಟಕಗಳನ್ನು ತೆಗೆದುಕೊಂಡರೆ ಕೆಲವು ನಾಟಕಕಾರರು ಕಠಿನಬಂಧ, ದೀರ್ಘಗದ್ಯಗಳ ಕಬ್ಬಿಣದ ಕಡಲೆಗಳನ್ನು ನಾಟಕ ಮಧ್ಯದಲ್ಲೂ ತುರುಕಿಸಿಬಿಟ್ಟುದು ಎಷ್ಟೋ ಸಂದರ್ಭದಲ್ಲಿದೆ. ಶ್ಲೇಷಾಲಂಕಾರಮಯ ಪದ್ಯಗಳನ್ನು ಸೇರಿಸಿ ಪ್ರೇಕ್ಷಕರು ನಿಘಂಟು ಸಹಿತವೇ ನಾಟಕ ನೋಡಲು ಬರುವುದನ್ನು ಕವಿಗಳು ಊಹಿಸಿದಂತೆಯೂ ತೋರುವುದಿದೆ. ಅಂತು ಎಲ್ಲ ವಿಚಾರ

ದಲ್ಲೂ ಔಚಿತ್ಯದ ಅರಿವು ನಾಟಕಕಾರನಿಗಿದ್ದರೇನೇ ನಾಟಕ ಸಫಲವಾಗುವುದು. ಇದನ್ನೇ ಭರತನು ತನ್ನ ಸುಪ್ರಸಿದ್ಧ ನಾಟ್ಯಶಾಸ್ತ್ರದಲ್ಲಿ ಸುಂದರವಾಗಿ ಸಾರಿದ್ದಾನೆ:—

'ವಯೋನುರೂಪಃ ಪ್ರಥಮಸ್ತು ವೇಷೋ
ವೇಷಾನುರೂಪಶ್ಚ ಗತಿಪ್ರಚಾರಃ |
ಗತಿಪ್ರಚಾರಾನುಗತಂ ಚ ಪಾಠ್ಯಂ
ಪಾಠ್ಯಾನುರೂಪೋಭಿನಯಶ್ಚ ಕಾರ್ಯಃ ||'

ಹೀಗೆ ಕಾಲ ವಯಸ್ಸಿಗೊಪ್ಪುವ ವೇಷಭೂಷಣ, ಅನುಗುಣವಾದ ಹಾವಭಾವ, ಪಾತ್ರಾನುಸಾರವಾದ ಭಾಷೆ, ಸಂದರ್ಭಾನುಸಾರವಾದ ಪದ್ಯ, ಒಪ್ಪುವ ಅಭಿನಯ—ಈ ಮೊದಲಾಗಿ ಹೆಜ್ಜೆಹೆಜ್ಜೆಗೂ ಔಚಿತ್ಯವರಿತು ಪ್ರಯತ್ನಿಸಿದರೇನೇ ನಾಟಕ ಪರಿಣಾಮಕಾರಿಯಾದೀತು; 'ಕಾವ್ಯೇಷು ನಾಟಕಂ ರಮ್ಯಂ'—ಎಂಬೀ ಮಾತು ಸಾರ್ಥಕವಾದೀತು.

ಕೆಲವೆಲ್ಲ ಕನ್ನಡ ಸಂಗೀತ ನಾಟಕಗಳಲ್ಲಿ ಕೋಪ ಬಂದಾಗಲೂ ಹಾಡು, ಸಾಯ ಹೋಗುವಾಗಲೂ ಕಂದಪದ್ಯ ಮುಂತಾದುವನ್ನು ನಟರ ಬಾಯಿಗೆ ಕಟ್ಟಿ ಪ್ರೇಕ್ಷಕರು ಅಳಬೇಕಾದ ಸಂದರ್ಭದಲ್ಲೂ ನಗುವಂತಾಗುವ ಸನ್ನಿವೇಶಗಳು ಎಷ್ಟೋವೇಳೆ ಸಿಗುತ್ತವೆ. ರೂಪಾಯಿ ತೆತ್ತು 'once more' ಹಾಕಿದಲ್ಲಿ ಸತ್ತವನೆದ್ದು ಮತ್ತೊಮ್ಮೆ ಹಾಡಿ ಸಾಯುವುದೂ ಇದೆ! ಇವೆಲ್ಲ ತೀರಾ ಕೃತಕ ವಾತಾವರಣವನ್ನು ಕಲ್ಪಿಸಿ ಹಾಸ್ಯಾಸ್ಪದವಾಗುತ್ತವೆ.

ಪಾತ್ರಧಾರಿಗಳ ಆಯ್ಕೆಯಲ್ಲಂತೂ ನಾಟಕದ ದಿಗ್ದರ್ಶಕ ಪರಮ ನಿಪುಣನಿರಬೇಕು. ಮುಖ ನೋಡಿದಾಗಲೇ ನಾಟಕದ ಪಾತ್ರದ ಗುಣ, ಶೀಲ, ಯೋಗ್ಯತೆಗಳ ಅರಿವಾಗುವಂತಿರಬೇಕು. ಅಂತು ನಾಟಕಕಾರ, ನಾಟಕದ ದಿಗ್ದರ್ಶಕ—ಹೆಜ್ಜೆ ಹೆಜ್ಜೆಗೂ ಪ್ರತಿಯೊಂದು ಅಂಶದಲ್ಲೂ ಔಚಿತ್ಯದ ಅರಿವಿರುವವನಾಗಬೇಕು. ಹಾಗಾದರೇನೇ ಸರಿಯಾದ ಪರಿಣಾಮ ಪ್ರೇಕ್ಷಕರಲ್ಲಿ ಮೂಡಬಹುದು.

## ಕಾವ್ಯಾಲಂಕಾರ

ಕಾವ್ಯದಲ್ಲಿ ಶಬ್ದಾರ್ಥಗಳ ಅಲಂಕಾರದ ಪ್ರಾಧಾನ್ಯವು ಒಂದು ಕಾಲದಲ್ಲಿ ಬಹಳವಾಗಿ ಬೆಳೆದುಹೋಗಿ ಅಲಂಕಾರವಿಲ್ಲವಾದರೆ ಅದು ಕಾವ್ಯವೇ ಅಲ್ಲ—ಎಂಬಲ್ಲಿಗೂ ಬಂದಿತ್ತು.

'ಅಂಗೀಕರೋತಿ ಯಃ ಕಾವ್ಯಂ ಶಬ್ದಾರ್ಥಾವನಲಂಕೃತೀ |
ಅಸೌ ನ ಮನ್ಯತೇ ಕಸ್ಮಾದನುಷ್ಣಮನಲಂ ಕೃತೀ ||

ಅನಲಂಕೃತವಾದ ಅಂದರೆ ಅಲಂಕಾರರಹಿತವಾದ ಕಾವ್ಯವನ್ನು ಒಪ್ಪುವವನು ಅನುಷ್ಣವಾದ (ಉಷ್ಣವಲ್ಲದ) ಅನಲವನ್ನು (ಬೆಂಕಿ) ಒಪ್ಪಬಾರದೇಕೆ? ಹೀಗೆ ಕಾವ್ಯದ ಪ್ರತಿಯೊಂದು ಅಂಶದಲ್ಲೂ ಅಲಂಕಾರವಿಲ್ಲದೆ ಸಾಧ್ಯವೇ ಇಲ್ಲ ಎಂಬುದಾಗಿ ಸಾರಿದವರೂ ಇದ್ದಾರೆ. ಒಂದು ಕಾಲದಲ್ಲಿ ಪಾದಾದಿಕೇಶಪರ್ಯಂತವಾಗಿ ಮಾನವನು ಘನವಾದ ಅಲಂಕಾರಗಳನ್ನು ಧರಿಸುವುದೊಂದು ನಿಯಮವೇ ಆಗಿದ್ದ ಆ ಕಾಲದ ಅಭಿರುಚಿಯಿಂದಾಗಿ ಕಾವ್ಯದಲ್ಲಿಯೂ ಅಲಂಕಾರವಿರಲೇಬೇಕು ಎಂಬೀ ಮಾತು ಪ್ರಾಯಶಃ ಬಂದಿರಬೇಕು.

ಅದರ ಪರಿಣಾಮವಾಗಿಯೇ ಭರತನಾಟ್ಯಶಾಸ್ತ್ರದಲ್ಲಿದ್ದ ಉಪಮಾರೂಪಕ, ಯಮಕ ದೀಪಕ, ಎಂಬೀ ನಾಲ್ಕು ಅಲಂಕಾರಗಳು ಹದಿನಾರನೆಯ ಶತಮಾನದ ಕುವಲಯಾನಂದಕಾರನ ಕಾಲಕ್ಕೆ ನೂರ ಇಪ್ಪತ್ತೈದಕ್ಕೆ ಬೆಳೆದು ನಿಂತಿವೆ. ಅವುಗಳಲ್ಲೂ ಬರುವ ಒಳಭೇದಗಳನ್ನು ತೆಗೆದುಕೊಂಡರೆ ಅಲಂಕಾರಗಳು ಅನಂತರೂಪವನ್ನು ತಾಳಿನಿಂತುದು ಕಂಡುಬರುವಂತಿದೆ. ಕವಿಗಳೆಲ್ಲ ಉಚಿತವಿರಲಿ ಇಲ್ಲದಿರಲಿ ಪ್ರತಿಪದ್ಯಕ್ಕೊಂದೆರಡು ಅಲಂಕಾರಗಳನ್ನು ಕಟ್ಟಿಯೇ ಬಿಡುತ್ತಿದ್ದರು. ಗುಡ್ಡಗಾಡು ಜನರು ಈಗಲೂ ಏನೇನೋ ಭಾರವಾದ ಅಲಂಕಾರಗಳನ್ನು

ದೇಹದ ಅವಯುವಗಳೆಲ್ಲದಕ್ಕೂ ಕಟ್ಟಿಬಿಡುವಂತೆಯೇ ಪರಿಸ್ಥಿತಿ ಒದಗಿಬಂದುದೂ ಉಂಟು. ಮಹಾಕವಿಗಳು ಕೂಡ ಈ ಮಾತಿಗೆ ಅಪವಾದವಾಗಿದ್ದಿಲ್ಲ.

'ಗುರುವಂ ಲಘುಸಂಧಾನದೆ
ನರನಿಸೆ ಗುರುಲಘುವಿಮಿಶ್ರಿತಂ ದೊರೆಕೊಳೆ ತ|
ದ್ಗುರು ತಚ್ಛಂದೋವೃತ್ತಿಗೆ
ದೊರೆಯೆನಿಸಿರ್ದುದು ಮನಕ್ಕೆ ದುರ್ಯೋಧನನಾ ||'

ಎಂಬೀ ಗದಾಯುದ್ಧ ಪದ್ಯದಲ್ಲಿ ರನ್ನನು ಅರ್ಜುನ ದ್ರೋಣರ ಯುದ್ಧವರ್ಣನೆಯ ಸಂದರ್ಭದಲ್ಲಿ ಗುರುಲಘುಮಯವಾದ ಛಂದಶ್ಶಾಸ್ತ್ರವನ್ನು ಶ್ಲೇಷಾಲಂಕಾರದಿಂದ ಕಟ್ಟಿ ತಂದಿದ್ದಾನೆಂದರೆ ಮಹಾಕವಿಯೂ ಸಹ ಈ ಅಲಂಕಾರಾಪ್ಸರೆಯರ ಮೋಹಕ್ಕೆ ದೂರವಾಗಲಾರನೆಂದಾಯಿತು. ರಸಮಯ ಮಹಾಕಾವ್ಯವನ್ನು ಕಟ್ಟಿದ ಈತನ ಪರಿಸ್ಥಿತಿಯೇ ಹೀಗಾದ ಬಳಿಕ ಉಳಿದ ಕವಿಗಳಲ್ಲಿ ಬರೇ ಅಲಂಕಾರದ ಹೊರೆ ಏರಿಸಿದ್ದರೆ ಕಾವ್ಯತ್ವವೇ ಒರಲಾರದೆಂದು ಔಚಿತ್ಯದ ಮೇರೆ ಮೀರಿ ಕಾವ್ಯವನ್ನು ಕೆಡಿಸಿದವರೇ ಹೆಚ್ಚು.

'ಹರಿತನಯಾರಿಯೆಂದೆನಿಸಿಯುಂ ಧವಳಾಂಶುಕಧಾರಿ ನೀಲಕಂ-
ಧರನೆನಿಸಿರ್ದುಮಾದೃತಸುಮಾನಸಹಂಸನುಪಾತ್ತಸಿಂಧುರಾ|
ಜರುಚಿರನಾಗಿಯುಂ ತಾಜಡಾಶ್ರಯವಿಪ್ರಿಯನಪ್ರಮೋಹಭಾ
ಸುರನೆನಿಸಿರ್ದುಮನ್ವಿತನಯಸ್ಥಿತಿಯೊಪ್ಪಿದನದ್ರಿಜಾಧವಂ' ||

ಇಂತಹ ಶ್ಲೇಷಮಯ ಕ್ಲಿಷ್ಟ ಪದ್ಯಗಳನ್ನು ಧಾರಾಳವಾಗಿ ಹೇರಿಸಿ ಷಡಕ್ಷರಿಕವಿಯು ಸಾಧಾರಣದ ವಾಚಕನನ್ನು ಸಾಕುಸಾಕಾಗಿಸಿದ್ದಾನೆ.

ಹೀಗೆಯೇ, ನಗರಾರ್ಣವ ಶೈಲವರ್ಣನೆಯೆಂದರೆ ವಿರೋಧಾಭಾಸ, ಶ್ಲೇಷ, ಪರಿಸಂಖ್ಯಾಲಂಕಾರಗಳ ಭಯಂಕರ ವಾತಾವರಣವಿರಲೇ ಬೇಕು. ಯಮಕಾನುಪ್ರಾಸಗಳ ಗರ್ಜನೆಯಿರಲೇ ಬೇಕು. ಇದೀಗ ವಧೂಪರೀಕ್ಷೆಗೆ ಹೋಗಿ ಕಾಲಕಡಗ, ತೋಳಬಂದಿಗಳಿವೆ ಎಂಬ ಮಾತ್ರದಿಂದಲೇ ಕುರೂಪಿಯೊಬ್ಬಳನ್ನು 'ಸಾಲಂಕೃತಕನ್ಯೆ'ಯೆಂದು ಸಾಲಮಾಡಿ ಮದುವೆಯಾದ ವಸಂತಾಗಿದೆ ಕೆಲವು ಕವಿಗಳ ಕತೆ.

ಅಂದರೆ ಅಲಂಕಾರಗಳು ಕಾವ್ಯದಲ್ಲಿರಬಾರದೆಂದಲ್ಲ. ಅವು ಸಂದರ್ಭೋಚಿತವಿರಬೇಕು. ಕಾವ್ಯಭೂಷಣವಾಗಿರಬೇಕಲ್ಲದೆ ಕಾವ್ಯಭಾರವಾಗಿರಬಾರದು. ಈ ಕೆಳಗಿನ ಪದ್ಯದಲ್ಲಿ ಅಲಂಕಾರವಿದೆಯಾದರೂ ಎಷ್ಟು ಸರಳ! ಎಷ್ಟು ಸರಸ!

'ಮರಗಳ ಶಾಖೆಯು ಬಳುಕಿದ ಬಳ್ಳಿಯು
ತಬ್ಬುತ ಪಿಸುಮಾತಾಡುತಿದೆ;
ಭೂಮಿಯು ಚಂದಿರನಿತ್ತಿಹ ಮುತ್ತಿಗೆ
ಪುಲಕಿಸಿ ಬೆಳುನಗೆ ಬೀರುತಿದೆ' (ಅಮ್ಮೆಂಬಳ)

## ರಸ

ರಸವಿಚಾರದಲ್ಲಂತು ಔಚಿತ್ಯದ ಅತಿ ಸೂಕ್ಷ್ಮ ವಿವರಗಳನ್ನೂ ಕವಿಯು ಸರಿಯಾಗಿ ಅರಿತಿರಬೇಕು. ಶೃಂಗಾರರಸದೊಡನೆ ಹಾಸ್ಯರಸವು ಸರಿಹೋಗುವುದಾದರೂ ಎಲ್ಲೆಲ್ಲೂ ವಿದೂಷಕನನ್ನು ತಂದು ರಣರಂಗದಲ್ಲಿ ಹಾಸ್ಯವನ್ನೆಬ್ಬಿಸಲು ಕವಿ ಪ್ರಯತ್ನಿಸಿದುದಾದರೆ ಅದು ವಿರಸವಾಗುವುದು. ವೈರಾಗ್ಯೋದಯ ಸಂದರ್ಭದಲ್ಲೂ ಕವಿಗಳು ಶೃಂಗಾರಾಲಂಕಾರಗಳ ಬಂಧನವನ್ನು ಕಡಿದು ಬಿಡದವರಾಗಿದ್ದಾರೆಂಬುದಕ್ಕೆ ಈ ಕೆಳಗಿನ ಪಂಪನವಾಕ್ಯವೇ ನಿದರ್ಶನ—

'ಸಂಸಾರಶರೀರಭೋಗವಿರಕ್ತಾಂತರಂಗನುಂ, ಮುಕ್ತಿಕಾಂತಾನುರಕ್ತಚಿತ್ತನುಮಾಗಿರ್ಪನ್ನೆಗಂ'

ಇಲ್ಲೀಗ 'ಮುಕ್ತಿಕಾಂತಾಸುರಕ್ತಚಿತ್ತ' ಎಂಬೀ ಮಾತು ವೃಷಭೇಂದ್ರನಿಗೆ ವೈರಾಗ್ಯೋದಯವಾದನಂತರ ಪರಿನಿಷ್ಕ್ರಮಣ ಕಲ್ಯಾಣದ ವೇಳೆಯಲ್ಲಿ ಹೇಗೆ ತಾನೇ ಉಚಿತವಾದೀತು?

ಅದೇ ರೀತಿ ಗದಾಯುದ್ಧದಲ್ಲಿ ವೀರರೌದ್ರರಸಗಳು ಪ್ರಧಾನವಾಗಿದ್ದರೂ ಸಹ ರನ್ನನು ಸಂಪ್ರದಾಯದ ಕಟ್ಟಿಗೆ ಒಳಗಾಗಿಯೋ ಏನೋ, ಹಾಸ್ಯ ಶೃಂಗಾರಗಳನ್ನು ರಣರಂಗ ಮಧ್ಯದಲ್ಲಿ ತರಲಿಕ್ಕೂ ಹಿಂಜರಿಯಲಿಲ್ಲ. ಕುರುಕುಲ ಪ್ರಳಯಕಾಲೆ, ಅಗ್ನಿಪುತ್ರಿ ದ್ರೌಪದಿಯಲ್ಲಿ ರಣರಂಗದ ಜುಗುಪ್ಸಾವಹ ವಾತಾವರಣದಲ್ಲೂ ಪ್ರೇಮಾನುರಾಗ ವರ್ಣನೆ ಬರುವುದು ಭೀಮಸೇನನ ಹಿಡಿಂಬಾಸಂಬಂಧ ದೋಷದಿಂದಿರಬೇಕು. ಆಕೆಯ ಕರತಳಸ್ಪರ್ಶನವು ಪಾರಿಜಾತಪಲ್ಲವೋಲ್ಲಸಿತನಿಕಾಮಕೋಮಲವಂತೆ!

ಕೌರವ್ಯರಾಜೇಂದ್ರನ ರತ್ನಕುಂಡಲರಶ್ಮಿಪ್ರಕಟಜ್ವಲನ್ಮಕುಟಮಂ ಭೀಮಸೇನಂ ವಾಮಾಂಘ್ರಿಯಿಂದೊದೆದಾಗ ಬಲದೇವನು ಸಹ ದುರ್ಯೋಧನಂಗಾದವಸ್ಥೆಯಂ ನೋಡಲಾರದೆವೋದಾಗ—

'ಅಡಿ ಕಿಱಿದೊಡೆ ಪೆರ್ದೊಡೆ ಕಟಿ
ನಡುವೆದೆ ತೋಳ್ ಸೀಳ್ವ ಬೆರಲುಗುರ್ಕೊರಲಂದಂ |
ಬಡೆದ ಮೊಗ ಸುಟಿಗುರುಳ್ಗೋ
ಮುರ್ಡಿ ನೋಡಲ್ಕಾದೆ ಸೊಗಯಿಕುಂ ದ್ರೌಪದಿಯಾ ||'

ಎಂದು ಮೊದಲಾಗಿ ರನ್ನನು ದ್ರೌಪದಿಯ ಶೃಂಗಾರವನ್ನು ಬಹಳವಾಗಿ ಬಣ್ಣಿಸಿದ್ದಾನೆ. ಇವೆಲ್ಲ ಔಚಿತ್ಯದ ಮೇರೆ ಮೀರಿದವುಗಳಲ್ಲವೇ?

ಕಾವ್ಯವಸ್ತುವನ್ನು ಆರಿಸುವುದರಲ್ಲಿ ಸಹ ಕವಿವರನು ಸರಿಯಾದ ಔಚಿತ್ಯವರಿತು, ಮೂಲಕಥೆಯಲ್ಲಿ ಅಗತ್ಯವಿದ್ದರೆ ಕೆಲ ಬದಲಾವಣೆಗಳನ್ನು ಸಹ ಮಾಡಿ, ಕಾವ್ಯದ ಯೋಗ್ಯತೆಯನ್ನು ಹೆಚ್ಚಿಸಿಕೊಳ್ಳಬೇಕಾಗಿದೆ. ಪ್ರಾಚೀನ ಕವಿಗಳು ಹೆಚ್ಚಾಗಿ ಪುರಾಣ ಪ್ರಸಿದ್ಧ ವೀರರನ್ನೂ ದೇವಾಂಶಸಂಭೂತ ರಾಜರನ್ನೂ ನಾಯಕರನ್ನಾಗಿ ಆರಿಸಿಕೊಂಡು ಕಾವ್ಯ ನಾಟಕ ಬರೆದಿದ್ದಾರೆ. ಮಹಾಪುರುಷರ ಭವ್ಯಕಥೆ ಬರೆದು ಮಹಾಕವಿಗಳೆಂಬ ಬಿರುದು ಪಡೆದಿದ್ದಾರೆ. ಮಹಾಕವಿ ಕಾಳಿದಾಸನು ತಾನು ಆರಿಸಿಕೊಂಡ ಶಕುಂತಲೋಪಾಖ್ಯಾನದಲ್ಲಿ ದುಷ್ಯಂತನ ಮೇಲೆ ಶಕುಂತಲೆ ತೋರಿದ ಸಾಮಾನ್ಯ ಪ್ರೇಮವನ್ನು ಭವ್ಯ ದಿವ್ಯ ಪ್ರೇಮವನ್ನಾಗಿಸಲಿಕ್ಕಾಗಿ ಮಾಡಿಕೊಂಡ ಮಾರ್ಪಾಟುಗಳಿಂದಾಗಿಯೇ ಕಾಳಿದಾಸ ಹಾಗೂ ಶಾಕುಂತಲ ನಾಟಕ ಜಗದ್ವಿಖ್ಯಾತವಾಗುವಂತಾಯಿತು. ಇದೇ ರೀತಿ ಸ್ಥೂಲವಾದ ಮೂಲಕಥೆಯನ್ನು ನಯ ನಾಜೂಕುಗೈದು ಲಾವಣ್ಯಮಯವಾಗಿಸಲಿಕ್ಕಾಗಿ ಶೇಕ್ಸ್‌ಪಿಯರ್ ಉಪಯೋಗಿಸಿದ ಚಮತ್ಕಾರವೇ ಆತನ ನಾಟಕಗಳ ಜನಪ್ರಿಯತೆಗೆ ಮುಖ್ಯಕಾರಣವಾಗಿದೆ.

ಆದರೆ ಕನ್ನಡದ ಪ್ರಸಿದ್ಧ ಕವಿಗಳಾದ ಪಂಪ ರನ್ನರು ಮಹಾಭಾರತದ ಸುಪ್ರಸಿದ್ಧ ವೀರರಾದ ಅರ್ಜುನ ಭೀಮರನ್ನು ತಮ್ಮ ಕಾವ್ಯನಾಯಕರನ್ನಾಗಿ ಆರಿಸಿಕೊಂಡಿದ್ದರೂ, ಮಧ್ಯದಲ್ಲಿ ತಮಗೆ ಆಶ್ರಯದಾತರಾದ ಅರಿಕೇಸರಿ, ಸತ್ಯಾಶ್ರಯರಾಜರ ಕರಡು ಕಥೆಯನ್ನು ತುರುಕಿಸಿ ಬಿಟ್ಟು ಓದುಗರು ರಸಾಸ್ವಾದನೆಯಲ್ಲಿ ಮೈಮರೆತಿರುವಾಗ ಗಂಟಲು ಹಿಡಿವಂತಾಗಿಸಿದ್ದಾರೆ. ಪ್ರಾಯಶಃ ಕಾಲಮಹಾತ್ಮೆ, ಆಶ್ರಯದಾತರಾಜರಿತ್ತ ಬಹುಮಾನಮಹಾತ್ಮೆ ಈ 'ಕಟುಮಿಶ್ರಣ'ಕ್ಕೆ ಕಾರಣವಿರಬೇಕು. ಅಂತು ಇದರಿಂದ ಕಾವ್ಯವಸ್ತುವಿನ ಔಚಿತ್ಯ ಕೆಲಮಟ್ಟಿಗಾದರೂ ಕೆಡುವಂತಾದುದು ಸ್ಪಷ್ಟವಿದೆ.

ಕೆಲವೇಳೆ ಕವಿಗಳು ಅಪಾರವಾದ ಶೋಕ, ಅಗಾಧವಾದ ಪ್ರೇಮ ಇತ್ಯಾದಿಗಳನ್ನು ವರ್ಣಿಸುವಾಗ ಉದ್ದುದ್ದವಾದ ವರ್ಣನೆಯಿಂದ ರಸವನ್ನು ಕಸವಾಗಿಸುವುದಿದೆ. ನೂರಾರು ಮಾತುಗಳಿಂದ ದುಃಖವನ್ನು ವರ್ಣಿಸುತ್ತ ಹೋಗಿ ಓದುಗರನ್ನು ಬೇಸರದಿಂದ ದುಃಖಗೊಳಿಸು

ವುದಕ್ಕಿಂತ, ಕೆಲವೇ ಘನವಾದ ಮಾತುಗಳಿಂದ ಭಾವಾವೇಶವನ್ನುಂಟುಮಾಡುವುದು ಎಷ್ಟೋ ಪರಿಣಾಮಕಾರಿಯಾಗುತ್ತದೆ.

ಶಾಕುಂತಲ ನಾಟಕದಲ್ಲಿ ಕಣ್ವಮಹರ್ಷಿಯು ಶಕುಂತಲೆಯನ್ನು ಪತಿಗೃಹಕ್ಕೆ ಕಳುಹುವ ವೇಳೆಯಲ್ಲಿ—

'ಅಬಲಿನಿತಾಗೆ ಕಾಡಮನುಜಂಗೆನಗಂ ಕಡುನೇಹದಿಂದವಿ-
ನ್ನುಟಿದ ಗೃಹಸ್ಥರಾತ್ಮಭವೆಯಂ ಕಳುಪುತ್ತಕಟೆಂತಬಲ್ವರೋ !'

ಎಂಬೀ ಶ್ಲೋಕದಲ್ಲಿ ಸಾಕುಮಗಳಾದ ಶಕುಂತಲೆ ಪೋದಪಳು (ಕಳುಹುವುದಲ್ಲ) ಎಂದು ಕಾಡಮನುಜಂಗೆ **ಎನಗಂ—ಅಬಲ್—ಇನಿತಾಗೆ—**ಇನ್ನುಟಿದ ಗೃಹಸ್ಥರ್ . . . ಆತ್ಮಭವೆಯಂ . . . ಕಳುಪುತ್ತ—ಅಕಟ ಎಂತು ಅಬಲ್ವರೋ ?

ಈ ಕೆಲವೇ ಮಾತುಗಳಿಂದ ಕಾಳಿದಾಸನು ಆ ದುಃಖದ ಪರಮಾವಧಿಯನ್ನು ಎಷ್ಟು ಹೃದಯಸ್ಪರ್ಶಿಯಾಗಿ ವರ್ಣಿಸಿದ್ದಾನೆ! Silence speaks the rest ಎಂಬಂತಾಗಿದೆ. ದುಃಖದ ಮಾತು ಮುಗಿದರೂ ಕಣ್ಣೀರ ಧಾರೆ ಕಡಿಯದು—ಎಂದಾಗಿದೆ. ಇದೀಗ ಮಹಾಕವಿಯ ಮಿತವಾದ ಮಾತಿನ ಪರಿಣಾಮವಾಗಿದೆ. ನೂರಾರು ಶ್ಲೋಕಗಳನ್ನು ಹೇರಿಸಿದರೂ ಆ ಪರಿಣಾಮ ಎಷ್ಟಕ್ಕೂ ಬರಲಾರದು.

## ಛಂದಸ್ಸು

ಪದ್ಯಕಾವ್ಯದಲ್ಲಿ ವಿಷಯಕ್ಕೊಪ್ಪುವ ಛಂದಸ್ಸು, ಛಂದಸ್ಸಿಗೊಪ್ಪುವ ಪದಬಂಧ—ಇತ್ಯಾದಿಗಳೆಲ್ಲ ಬಹು ಮುಖ್ಯವಾದ ಅಂಶಗಳಾಗಿವೆ. ಕಾಳಿದಾಸನ ಮೇಘಸಂದೇಶದ ಜನಪ್ರಿಯತೆಗೆ ಅವನುಪಯೋಗಿಸಿದ ಮಂದಾಕ್ರಾಂತವೃತ್ತವೂ ಬಹುಮಟ್ಟಿಗೆ ಕಾರಣವಾಗಿದೆ. ನಿಧಾನವಾಗಿ ಹಾಡಬರುವಂತಿರುವ ಆ ಪದ್ಯಗಳು ವಿರಹ ಶೃಂಗಾರಕ್ಕೆ ಎಲ್ಲ ರೀತಿಯಿಂದಲೂ ಒಪ್ಪುವಂತಿದೆ.

'ಆಲೋಕೇ ತೇ ನಿಪತತಿ ಪುರಾ ಸಾ ಬಲಿವ್ಯಾಕುಲಾ ವಾ
ಮತ್ಸಾದೃಶ್ಯಂ ವಿರಹತನು ವಾ ಭಾವಗಮ್ಯಂ ಲಿಖಂತೀ'

ಎಂದು ಕಣ್ಣೀರಿಡುತ್ತ ಹಾಡುವಾಗ ನಿರ್ಜೀವ ಮೇಘವೂ ಕರಗುವಂತಾಗುವುದರಲ್ಲಿ ಸಂಶಯವಿಲ್ಲ.

ಹಾಗೆಯೇ ಹರಿಹರನ ಜನಪ್ರಿಯತೆಗೆ ಆತನು ದೀರ್ಘಕಥಾಕಥನಕ್ಕೊಪ್ಪುವ ಸರಳವಾದ ರಗಳೆಯನ್ನಾರಿಸಿದುದು ಒಂದು ಉತ್ತಮ ಕಾರಣವಾಗಿದೆ. ಬಸವಣ್ಣನವರು ಸಾಮಾನ್ಯ ಜನರೂ ಅರಿತು ಅನುಸರಿಸಯೋಗ್ಯವಾದ ಘನವಾದ ವಿಚಾರಗಳನ್ನು ಲಲಿತ ವಚನಗಳಿಂದ ಹೇಳಿದುದೇ ಅವರ ಯೋಗ್ಯತೆ ಗಗನಚುಂಬಿಯಾಗಲಿಕ್ಕೆ ಮೂಲವಾಗಿದೆ. 'ಕುಮಾರ ವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರ' ವಾಗಲಿಕ್ಕೆ ಅವನಾರಿಸಿಕೊಂಡ ಭಾಮಿನೀ ಷಟ್ಪದಿಯಲ್ಲಿರುವ ಔಚಿತ್ಯವೇ ಬಹುಮಟ್ಟಿಗೆ ಕಾರಣವಾಗಿದೆ.

ಮಾತ್ರವಲ್ಲದೆ ಪ್ರಾಚೀನ ಸಾಹಿತ್ಯದಲ್ಲಿ ಪದ್ಯಕ್ಕೆ ಅತಿಹಿರಿದಾದ ಸ್ಥಾನ ಕೊಡಲ್ಪಟ್ಟು ಎಲ್ಲವೂ ಪದ್ಯಕಾವ್ಯವೇ—ಎಂದಿದ್ದುದು ಕೃತಕ ಹಾಗೂ ಅನುಚಿತ ಎಂದೂ ತೋರುತ್ತಿದೆ. ವಿಸ್ತಾರವಾದ ವಿಷಯವನ್ನು ಸಂಗ್ರಹವಾಗಿ, ರಮ್ಯವಾಗಿ ಹೇಳಲಿಕ್ಕೆ, ಹಾಡಿ ಹಾಡಿ ಜ್ಞಾಪಕದಲ್ಲಿಟ್ಟುಕೊಳ್ಳಲಿಕ್ಕೆ ಪದ್ಯ ಅನುಕೂಲ ನಿಜ. ಆದರೆ ಜೀವನದಲ್ಲಿ ನಾವು ಬಹ್ವಂಶ ಗದ್ಯದಲ್ಲೇ ವ್ಯವಹರಿಸುತ್ತಿರುವಾಗ, ಜೀವನದ ಪ್ರತಿಬಿಂಬದಂತಿರುವ ಸಾಹಿತ್ಯದಲ್ಲಿ ಮಾತ್ರ ಪದ್ಯವೇ ಬಹ್ವಂಶವಾಗಿರುವುದು ಅಷ್ಟು ಸಮಂಜಸವಾಗಿ ತೋರುವುದಿಲ್ಲ. ಪ್ರತಿಯೊಂದನ್ನೂ

ಹಾಡಿ ಕಂಠಪಾಠ ಮಾಡಿಕೊಳ್ಳುವ ಅಗತ್ಯವೂ ಮುದ್ರಣ ಸೌಕರ್ಯವಿರುವ ಈ ಯುಗದಲ್ಲಿರುವುದಿಲ್ಲ. ಅದರಿಂದಾಗಿಯೇ ಪದ್ಯಸಾಹಿತ್ಯದಿಂದ ಬೆಂದು, ನೊಂದ ಮನೋರಮೆ 'ಪದ್ಯಂ ವಧ್ಯಂ; ಗದ್ಯಂ ಹೃದ್ಯಂ' ಎಂದು ಗದ್ಯದ ಔಚಿತ್ಯವನ್ನು ಸಾರಿರಬೇಕು. ಯೋಚಿಸಿ ನೋಡಿದರೆ ಕನ್ನಡ ಸಾಹಿತ್ಯದಲ್ಲಿ ಸರಿಯಾದ ಔಚಿತ್ಯಮಾರ್ಗಪ್ರದರ್ಶಕ ಮುದ್ದಣನೆಂದರೆ ತಪ್ಪಾಗಲಾರದು. ಕನ್ನಡ ಭಾಷೆಯ ವಿಷಯದಲ್ಲೂ—ಕರ್ಮಣಿ ಸರದೊಳ್ ಚೆಂಬವಳಮಂ ಕೋದಂತೆ ಎಡೆಯೆಡೆಯೊಳ್ ಸಕ್ಕದದ ನಲ್ನುಡಿಗಳನ್ನು ರಸವೊಸರೆ ಲಕ್ಕಣಂ ವಿಕ್ಕಿರೆ ಸೇರಿಸಿ—ಉಪಯೋಗಿಸುವುದು ಉಚಿತವಾಗಿದೆ ಎಂದು ಸಾರಿದವನೂ ಆ ಮುದ್ದಣನೇ ಆಗಿದ್ದಾನೆ.

ಇನ್ನು, ಕಾವ್ಯ ನಾಟಕಗಳಿಗೆ ಕೊಡುವ ಹೆಸರು, ನಾಯಕ ನಾಯಿಕೆಯರಿಗಿಡುವ ನಾಮಧೇಯ, ಗ್ರಂಥದ ಗಾತ್ರ, ಪದ ವಾಕ್ಯ ಅಧ್ಯಾಯಾದಿಗಳ ಪರಿಮಾಣ—ಪ್ರತಿಯೊಂದು ಸಹ ಔಚಿತ್ಯವರಿತು ನಡೆದರೇನೇ ವಾಚಕನ ಮೇಲೆ ಸರಿಯಾದ ಪರಿಣಾಮವುಂಟಾಗುತ್ತದೆ. ಯಾವುದೂ ಹೆಚ್ಚಿಗಿರಲೂ ಬಾರದು; ಕಡಿಮೆಯಾಗಲೂ ಬಾರದು. ಸುರಸಮಯವಾದ ಮೃಷ್ಟಾನ್ನ ಭೋಜನವಾಗಬೇಕಾದರೆ ಷಡ್ರಸಗಳೋ, ಷೋಡಶರಸಗಳೋ, ಅಷ್ಟು ಸರಿಯಾಗಿ ಹೆಚ್ಚೂ ಇಲ್ಲ ಕಡಿಮೆಯೂ ಇಲ್ಲ ಎಂಬಂತಿರಬೇಕು ತಾನೆ? ಅದೇ ತರದಲ್ಲಿ ಸಾಹಿತ್ಯದಲ್ಲಿ ಔಚಿತ್ಯವೆಂಬುದು ಆದಿಯಿಂದ ಅಂತ್ಯದವರೆಗೆ ಪ್ರತಿಯೊಂದು ಹೆಜ್ಜೆಯಲ್ಲೂ, ಪ್ರತಿಯೊಂದು ಅಂಶದಲ್ಲೂ ಇದ್ದರೇನೇ ಸಮಂಜಸವಾಗುತ್ತದೆ. 'A figure looks best when it escapes one's notice that it is a figure' ಎಂಬಂತಾಗಬೇಕು. ಕಾವ್ಯದ ಪರಿಣಾಮ 'ಭಾರತ ಕಣ್ಣಲಿ ಕಟ್ಟುವುದು'—ಎಂದಾಗಬೇಕು. ಅದೇ ನಿಜವಾದ ಮಹಾಕಾವ್ಯ. ಅಲ್ಲಿ ಔಚಿತ್ಯದ ಸ್ಥಾನ ಬಹು ಹಿರಿದಾದುದು.

ಕೆ. ಆರ್. ಉಡುಪ

# ವಾಸೀಚಂದನಕಲ್ಪತ್ವ

ಪ್ರಾಕೃತ, ಪಾಲಿ ಮತ್ತು ಸಂಸ್ಕೃತ ಭಾಷೆಯ ಸಾಹಿತ್ಯದಲ್ಲಿ ಆಗಾಗ್ಗೆ 'ವಾಸೀಚಂದನಕಲ್ಪ' ಎಂಬ ವಿಶೇಷಣವು ಶ್ರೇಷ್ಠ ಮತ್ತು ಸಮಭಾವಿಗಳಾದ ಮುನಿಗಳಿಗೆ ಆಗಾಗ್ಗೆ ಹಚ್ಚಿದ್ದು ಕಂಡು ಬರುತ್ತದೆ. ಈ ಶಬ್ದದ ಪ್ರಯೋಗ ಮತ್ತು ಅದರ ನಿಜವಾದ ಅರ್ಥವನ್ನು ತಿಳುಕೊಳ್ಳುವದು ಈ ಚಿಕ್ಕ ಲೇಖದ ಉದ್ದೇಶವಾಗಿದೆ.

(೧) ಔಪಪಾತಿಕಸೂತ್ರದ[1] ೨೯ ನೆಯ ಸೂತ್ರದಲ್ಲಿ ಆ ಶಬ್ದವು ಈ ರೀತಿಯಾಗಿ ದೊರೆಯುತ್ತದೆ:

"ತೇ ಣಂ ಭಗವಂತೋ ವಾಸಾವಾಸವಜ್ಜಂ ಅಟ್ಠ
ಗಿಮ್ಹ ಹೇಮಂತಿಯಾಣಿ ಮಾಸಾಣಿ ಗಾಮೇ ಏಗರಾಯಿಯಾ
ಣಯರೇ ಪಂಚ ರಾಇಯಾ ವಾಸೀಚಂದಣ-
ಸಮಾಣಕಪ್ಪಾ ಸಮಲೇಟ್ಠುಕಂಚಣಾ ಸಮಸುಹ-
ದುಕ್ಖಾ ಇಹಲೋಗ-ಪರಲೋಗ-ಅಪ್ಪಡಿಬದ್ಧಾ
ಸಂಸಾರಪಾರಗಾಮೀ ಕಮ್ಮಣಿಗ್ಘಾಯಣಟ್ಠಾಏ
ಅಬ್ಭುಟ್ಠಿಯಾ ವಿಹರಂತಿ."

ಮಳೆಗಾಲವನ್ನು ಬಿಟ್ಟು ಗ್ರೀಷ್ಮ ಮತ್ತು ಹೇಮಂತ ಋತುಗಳ ಎಂಟುತಿಂಗಳುಗಳಲ್ಲಿ (ಮಹಾವೀರ ತೀರ್ಥಂಕರರ ಶಿಷ್ಯರು) ಭಗವಂತರು ಈ ರೀತಿಯಾಗಿ ವಿಹಾರಮಾಡುತ್ತಾರೆ—ಹಳ್ಳಿಗಳಲ್ಲಿ ಒಂದುದಿನ, ನಗರಗಳಲ್ಲಿ ಐದುದಿನ ಉಳಕೊಳ್ಳುತ್ತಾರೆ. ವಾಸೀಚಂದನಸಮಾನಕಲ್ಪರಾಗಿರುತ್ತಾರೆ. ಮಣ್ಣು ಮತ್ತು ಹೊನ್ನು—ಇವುಗಳನ್ನು ಸಮಾನವಾಗಿ ತಿಳಿದುಕೊಳ್ಳುತ್ತಾರೆ. ಸುಖದುಃಖಗಳು ಅವರಿಗೆ ಸಮಾನ. ಇಹಲೋಕ ಮತ್ತು ಪರಲೋಕಗಳಲ್ಲಿ ಅವರಿಗೆ ಲೋಭವಿಲ್ಲ. ಅವರಿಗೆ ಸಂಸಾರವನ್ನು ದಾಟಬೇಕಾಗಿದೆ. ಕರ್ಮವನ್ನು ನಾಶಗೊಳಿಸಲಿಕ್ಕೆ ಅವರು ಪ್ರಯತ್ನ ಮಾಡುತ್ತಿರುತ್ತಾರೆ.

(೨) ಇದೇ ರೀತಿ ಕಲ್ಪಸೂತ್ರದಲ್ಲಿಯೂ[2] ಸಹ ಮಹಾವೀರ ತೀರ್ಥಂಕರರನ್ನು ವರ್ಣಿಸುವಾಗ 'ವಾಸೀಚಂದನಸಮಾನಕಲ್ಪರು' ಎಂಬ ಉಪಮೆಯು ಅವರ ರಾಗದ್ವೇಷರಹಿತ ಭಾವವನ್ನು ಸೂಚಿಸುವದಕ್ಕಾಗಿ ಉಪಯೋಗಿಸಲ್ಪಟ್ಟಿದೆ. ಅಲ್ಲಿಯ ಸೂತ್ರವು (೧೧೯) ಮೇಲಿನ ಸೂತ್ರದಂತೆಯೇ ಸಾಧಾರಣವಾಗಿ ಇರುತ್ತದೆ.

(೩) ಉತ್ತರಾಧ್ಯಯನ ಸೂತ್ರದಲ್ಲಿ[3] ಮುನಿಯ ವೃತ್ತಿಯನ್ನು ವರ್ಣಿಸುವಾಗ ಈ ರೀತಿಯ ಗಾಥೆಯು ದೊರೆಯುತ್ತದೆ: (೧೯/೯೨)—

ಅಣಿಸ್ಸಿಓ ಇಹಂ ಲೋಏ ಪರಲೋಏ ಅಣಿಸ್ಸಿಓ |
ವಾಸೀಚಂದಣಕಪ್ಪೋ ಯ ಅಸಣೇ ಅಣಸಣೇ ತಹಾ ||

ಅಂದರೆ, ಈ ಲೋಕದಲ್ಲಿ ಮತ್ತು ಪರಲೋಕದಲ್ಲಿ ಯಾವ ತರದ ಅಪೇಕ್ಷೆಯೂ ಅವನಿಗಿಲ್ಲ. ಆಹಾರವು ದೊರೆಯಲಿ ಅಥವಾ ದೊರೆಯದಿರಲಿ ಅವನ ವೃತ್ತಿಯು ವಾಸೀಚಂದನಸಮಾನವಾಗಿದೆ.

---

[1] ಸಂ. ಎನ್. ಜಿ. ಸುರು (ಪುಣೆ ೧೯೩೧). [2] ಜಿನದತ್ತಸೂರಿ ಪ್ರಾಚೀನ ಪುಸ್ತಕೋದ್ಧಾರ ಫಂಡ್ ೪೨, (ಸುರತ್ ೧೯೩೯). [3] ಸಂ. ಜೆ. ಚಾರ್ಪೆಂಟಿಯರ್ (ಉಪ್ಸಾಲಾ ೧೯೨೨).

(೪) ಆವಶ್ಯಕನಿರ್ಯುಕ್ತಿಯಲ್ಲಿಯೂ (ಗಾಥಾ ಸಂ. ೧೫೪೪)[4] ಶ್ರೇಷ್ಠ ಕಾಯೋತ್ಸರ್ಗವನ್ನು ಆಚರಿಸುವ ಮುನಿಯ ವರ್ಣನೆಯು ಈ ರೀತಿಯಾಗಿ ಇರುತ್ತದೆ:

ವಾಸೀಚಂದಣಕಪ್ಪೋ ಜೋ ಮರಣೇ ಜೀವಿಏ ಯ ಸಮಸಣ್ಣೋ |
ದೇಹೇ ಯ ಅಪಡಿಬದ್ಧೋ ಕಾವುಸ್ಸಗ್ಗೋ ಹವಇ ತಸ್ಸ ||

ಅಂದರೆ, ಆ ಮುನಿಯು ವಾಸೀಚಂದನಕಲ್ಪದಂತೆ ಇರುತ್ತಾನೆ. ಜೀವಿತ ಮತ್ತು ಮರಣ ಇವೆರಡರಲ್ಲಿ ಅವನು ಸಮಭಾವವನ್ನು ತಾಳುತ್ತಾನೆ; ಮತ್ತು ಶರೀರದ ಸಂಬಂಧವಾಗಿ ಅವನಲ್ಲಿ ಯಾವ ಮಮತ್ವವೂ ಇಲ್ಲ.

(೫) ಹರಿಭದ್ರನು ತನ್ನ ಅಷ್ಟಕದಲ್ಲಿ (೨೯) ಈ ರೀತಿಯಾಗಿ ಹೇಳುತ್ತಾನೆ:

ಸಾಮಾಯಿಕಂ ಚ ಮೋಕ್ಷಾಙ್ಗಂ ಪರಂ ಸರ್ವಜ್ಞಭಾಷಿತಂ |
ವಾಸೀಚನ್ದನಕಲ್ಪಾನಾಮುಕ್ತಮೇತನ್ ಮಹಾತ್ಮನಾಮ್ ||

ಅಂದರೆ, ಸರ್ವಜ್ಞನು ಹೇಳಿದಂತೆ ಸಾಮಾಯಿಕವು ಶ್ರೇಷ್ಠವಾದ ಮೋಕ್ಷದ ಸಾಧನವಾಗಿದೆ; ಮತ್ತು ವಾಸೀಚಂದನಕಲ್ಪವನ್ನು ಆಚರಿಸುವ ಮಹಾತ್ಮರಿಗೆ ಇದು ಸಾಧ್ಯವಾಗಿದೆ.

ಈ ಮೇಲಿನ ಪ್ರಯೋಗಗಳನ್ನು ನೋಡಲಾಗಿ 'ವಾಸೀಚಂದನಕಲ್ಪ'ದ ಅರ್ಥವು ಏನೆಂಬುದನ್ನು ನಾವು ಸಾಧಾರಣವಾಗಿ ಊಹಿಸಬಹುದು. ಅದು ಶ್ರೇಷ್ಠಮುನಿಯ ಸಮಭಾವದ ಆಧ್ಯಾತ್ಮಿಕ ಸಾಮ್ಯತೆಯ ದ್ಯೋತಕವಾಗಿದೆ. ಉಪಕಾರಿಗಳಾಗಲಿ, ಅಥವಾ ಅಪಕಾರಿಗಳಾಗಲಿ ಇವರನ್ನು ಒಂದೇ ದೃಷ್ಟಿಯಿಂದ, ಸಮಾನತೆಯಿಂದ, ಸಮಭಾವದಿಂದ, ರಾಗದ್ವೇಷಗಳಿಗೆ ಬಲಿಬೀಳದೆ ನೋಡುವುದು. ಇದು ಮಾಧ್ಯಸ್ಥಭಾವದ ಲಕ್ಷಣ; ಸಮಸುಖ-ದುಃಖಿಯ ಲಕ್ಷಣ. ಅಧ್ಯಾತ್ಮದ ಮೇಲಿನ ಮೆಟ್ಟಲುಗಳನ್ನು ಮುಟ್ಟಿದ ಶ್ರೇಷ್ಠ ಶ್ರಮಣರಿಗೆ, ಮುನಿಗಳಿಗೆ, ಮಹರ್ಷಿಗಳಿಗೆ ಇಂಥ ಭಾವವು ಶಕ್ಯವಾಗಿದೆ.

ಬೇರೆ ಬೇರೆ ಸಂದರ್ಭಗಳಲ್ಲಿ ಈ ಪ್ರಯೋಗದ ಅರ್ಥವು ಈ ರೀತಿಯಾಗಿ ದೊರೆಯುತ್ತದೆ.

(೧) ಮೇಲೆ ಹೇಳಿದ ಆವಶ್ಯಕನಿರ್ಯುಕ್ತಿಯ ಗಾಥೆಯನ್ನು ಸ್ಪಷ್ಟೀಕರಿಸುವಾಗ ಹರಿಭದ್ರನು ಕೆಳಗಿನ ಗಾಥೆಯನ್ನು ಸ್ಪಷ್ಟೀಕರಣಾರ್ಥವಾಗಿ ಉದ್ಧರಿಸಿದ್ದಾನೆ—

ಜೋ ಚಂದಣೇಣ ಬಾಹುಂ ಆಲಿಂಪಇ ವಾಸಿಣಾ ಯ ತಚ್ಛೇಇ |
ಸಂಥುಣಇ ಜೋ ವ ನಿಂದಇ ಮಹರಿಸಿಣೋ ತತ್ಥ ಸಮಭಾವಾ ||

ಅಂದರೆ, ಕೆಲವರು ತೋಳಿಗೆ ಚಂದನವನ್ನು ಲೇಪಿಸಬಹುದು, ಮತ್ತೆ ಕೆಲವರು ಬಾಚಿಯಿಂದ ತೋಳನ್ನು ಕೆತ್ತಬಹುದು. ಕೆಲವರು ಸ್ತುತಿಸಬಹುದು, ಕೆಲವರು ನಿಂದಿಸಬಹುದು.—ಇವರೆಲ್ಲರಲ್ಲಿ ಮಹರ್ಷಿಗಳು ಸಮಭಾವವನ್ನು ದರ್ಶಿಸುತ್ತಾರೆ.

(೨) ಮಿಲಿಂದಪಞ್ಹ (೯-೨೫)[5]ದಲ್ಲಿ ಇದರ ಸ್ಪಷ್ಟೀಕರಣವು ಈ ರೀತಿಯಾಗಿದೆ—

ಏಕಂ ಚ ಬಾಹಂ ವಾಸಿಯಾ ತಚ್ಛೇಯ್ಯ ಕುಪಿತಮಾನಸಾ |
ಏಕಂ ಚ ಬಾಹಂ ಗನ್ಧೇನ ಆಲಿಮ್ಪೇಯ್ಯ ಪಮೋದಿತಾ ||
ಅಮುಸಿಂ ಪಟಿಘೋ ನತ್ಥಿ ರಾಗೋ ಅಸ್ಮಿಂ ನ ವಿಜ್ಜತಿ |
ಪಥವೀಸಮಚಿತ್ತಾ ತೇ ತಾದಿಸಾ ಸಮಣಾ ಮಮ ||

ಅಂದರೆ, ಕೆಲವರು ಸಿಟ್ಟಿಗೆದ್ದು ಬಾಚಿಯಿಂದ ಭುಜವನ್ನು ಕೆತ್ತಬಹುದು; ಕೆಲವರು ಆನಂದದಿಂದ ಭುಜಕ್ಕೆ ಗಂಧವನ್ನು ಹಚ್ಚಬಹುದು. ಇವರಿಬ್ಬರಲ್ಲಿಯೂ ದ್ವೇಷ ಅಥವಾ ರಾಗವನ್ನು ಇಡದೆ ಶ್ರಮಣರು ಪೃಥ್ವಿಯಂತೆ ಸ್ಥಿರವಾದ ಚಿತ್ತವುಳ್ಳವರಾಗಿರುತ್ತಾರೆ.

[4] ಯೋಗಶತಕ. ಪೃ. ೩೪.೬ (ಗುಜರಾತ ವಿದ್ಯಾಸಭಾ, ಅಹಮದಾಬಾದ್, ೧೯೩೯). [5] ಸಂ. ಟ್ರೆಂಕ್ನರ್ (ಪೃ. ೨೮೩)

(೩) ಮಹಾಭಾರತದಲ್ಲಿ (ರಾಜಧರ್ಮ, ಅಧ್ಯಾಯ ೯ ; ಶ್ಲೋ. ೨೫) ಇದೇ ರೀತಿಯ ಕೆಳಗಿನ ಶ್ಲೋಕವು[6] ದೊರೆಯುತ್ತದೆ—

ವಾಸ್ಯೈಕಂ ತಕ್ಷತೋ ಬಾಹುಂ ಚಂದನೇನೈಕಮುಕ್ಷತಃ |
ನಾಕಲ್ಯಾಣಂ ನ ಕಲ್ಯಾಣಂ ಚಿಂತಯನ್ನುಭಯೋಸ್ತಯೋಃ ||

ಅಂದರೆ ಬಾಚಿಯಿಂದ ಭುಜವನ್ನು ಕೆತ್ತುವವನ ಅಕಲ್ಯಾಣವನ್ನಾಗಲಿ, ಚಂದನದಿಂದ ಭುಜವನ್ನು ಲೇಪಿಸುವವನ ಕಲ್ಯಾಣವನ್ನಾಗಲಿ ಅವನು ಚಿಂತಿಸುವದಿಲ್ಲ.

ಈ ಮೇಲಿನ ಮೂರೂ ಉದ್ಧರಣಗಳಿಂದ 'ವಾಸೀಚಂದನಕಲ್ಪ'ದ ಶಬ್ದಾರ್ಥವು ಮತ್ತು ಧ್ವನ್ಯಾರ್ಥವು ಸ್ಪಷ್ಟವಾಗುತ್ತದೆ.

'ವಾಸಿ' ಎಂದರೆ 'ಬಡಿಗನ ಬಾಚಿ'; ಅದೊಂದು ಕೆತ್ತುವ ಸಾಧನ. ಅಪಕಾರ ಮಾಡುವವನಾದರೂ ಸಹ ಒಂದು ರೀತಿಯಿಂದ ಉಪಕಾರವನ್ನೇ ಮಾಡುತ್ತಾನೆಂದು ತಿಳಿಯುವದು ಶ್ರೇಷ್ಠವಾದ ಸಾಮ್ಯಭಾವವು. ತಲೆನೋವನ್ನು ದೂರಮಾಡಲಿಕ್ಕೆ ಶಿರಶ್ಛೇದವನ್ನು ಮಾಡುವ ವೈದ್ಯನು ಉಪಕಾರಿಯಲ್ಲವೆ? ಮಹಾತ್ಮರು ಅಪಕಾರೀ ಜನರ ಮೇಲೆ ಸಹ ಉಪಕಾರವನ್ನು ಮಾಡುತ್ತಾರೆ. ತನ್ನನ್ನು ಕೆತ್ತುವ, ಕಡಿಯುವ ಬಾಚಿಯನ್ನು ಸಹ ಚಂದನದ ಗಿಡವು ಸುಗಂಧಿತವನ್ನಾಗಿಯೇ ಮಾಡುತ್ತದೆ.

**ಆದಿನಾಥ ನೇಮಿನಾಥ ಉಪಾಧ್ಯೆ**

[6] ಡಾ. ಬೆಲವಲಕರ ಇವರು ಈ ಶ್ಲೋಕವನ್ನು ನನಗೆ ತೋರಿಸಿದರು.

# ಪ್ರಾಚೀನ ಭಾರತದಲ್ಲಿ ನೀರಾವರಿ

ಭಾರತದಲ್ಲಿ ನೀರಾವರಿಯ ಇತಿಹಾಸವು ಪಶ್ಚಿಮ ಪಂಜಾಬಿನಲ್ಲಿ ಹರಪ್ಪ ಮತ್ತು ಸಿಂಧುದೇಶದಲ್ಲಿ ಮೊಹೆಂಜದಾರೊ ನಗರಗಳ ಸುತ್ತ ೫೦೦೦ ವರ್ಷಗಳ ಹಿಂದೆ ಬೆಳೆದ ಸಿಂಧು ನದೀ ಕಣಿವೆಯ ನಾಗರಿಕತೆಯ ಕಾಲದವರೆಗೂ ಹೋಗುತ್ತದೆ. ಆಗ ಸಿಂಧು ಮತ್ತು ಅದರ ಉಪನದಿಗಳ ದಡದ ಬಯಲುಗಳಿಗೆ ಈ ಹೊಳೆಗಳ ಪ್ರವಾಹದ ನೀರನ್ನು ನೇರವಾಗಿ ತಿರುಗಿಸಿ ಗೋಧಿ ಮತ್ತು ಯವೆಯ ಪೈರುಗಳನ್ನು ವಿಶಾಲವಾದ ಮಟ್ಟವಾದ ಫಲವತ್ತಾದ ಭೂಮಿಯಲ್ಲಿ ಬೆಳೆಯುತ್ತಿದ್ದರು. ಕಂಚಿನ ಯುಗವೆಂದು ಕರೆಯುವ ಇದೇ ಕಾಲದಲ್ಲಿ ನೈಲ್ ನದಿಯ ದಡದಲ್ಲಿ ಕೆಳ ಈಜಿಪ್ಟಿನಲ್ಲಿಯೂ, ಯೂಫ್ರಟಿಸ್, ಟೈಗ್ರಿಸ್ ಯಮಳ ನದಿಗಳ ದಡದಲ್ಲಿ ಮೆಸೊಪೊಟೇಮಿಯದಲ್ಲಿಯೂ ಪ್ರತ್ಯೇಕವಾದ ನಾಗರಿಕತೆಗಳು ಆ ನದಿಗಳ ನೀರನ್ನು ಬಳಸಿ ಬೆಳೆದ ಆಹಾರಧಾನ್ಯಗಳ ಆಧಾರದ ಮೇಲೆ ಬೆಳೆದು ಪ್ರವರ್ಧಮಾನಕ್ಕೆ ಬಂದವು. ಅಲ್ಲಿನ ಜನರ ಉಪಯೋಗಕ್ಕೆ ಬೇಕಾಗುವುದಕ್ಕಿಂತ ಹೆಚ್ಚಾಗಿ ಬಂದ ಧಾನ್ಯದಿಂದ ಒಂದೊಂದು ನಾಗರಿಕತೆಯಲ್ಲಿಯೂ ವಿಶಿಷ್ಟವಾದ ಸಂಸ್ಕೃತಿ, ವಿಜ್ಞಾನ, ಕೈಗಾರಿಕೆ, ವಾಣಿಜ್ಯ, ಜಲಸಂಚಾರಗಳು ಬೆಳೆದವು. ದೋಣಿಗಳ ಮೇಲೆ ಒಂದು ನದಿಯ ಕಣಿವೆಯಿಂದ ಇನ್ನೊಂದಕ್ಕೆ ಕಲಾಕೃತಿಗಳೂ ಉಪಯುಕ್ತವಾದ ಪದಾರ್ಥಗಳೂ ಸಾಗುತ್ತಿದ್ದವು.

ಸಿಂಧು ಕಣಿವೆಯಲ್ಲಿ ಮೇಲುಗಡೆ ಹಿಮಾಲಯದಲ್ಲಿ ಮಂಜು ಕರಗಿದ್ದರಿಂದಲೂ ಬೆಟ್ಟಗಳ ಮೇಲೆ ಬಿದ್ದ ಅತಿವೃಷ್ಟಿಯಿಂದಲೂ ನದಿಗಳಲ್ಲಿ ಆಗಾಗ ಪ್ರವಾಹಗಳು ಬಂದು ತೊಂದರೆಯಾಗುತ್ತಿತ್ತು. ಇಂಥ ಒಂದು ಮಹಾ ಪ್ರವಾಹದಲ್ಲಿಯೋ ಇಲ್ಲವೆ ಅನಾವೃಷ್ಟಿಯಿಂದಲೋ ಅತಿಯಾದ ಸೆಕೆಯಿಂದಲೋ ಈ ಭವ್ಯವಾದ ನಾಗರಿಕತೆಯೇ ಭೂಗತವಾಯಿತು. ಈಚೆಗೆ ಪ್ರಾಕ್ತನ ಶೋಧಕರ ಸಾಹಸದಿಂದ ನಮಗೆ ಈ ನಾಗರಿಕತೆಯ ಪರಿಚಯವಾಗಿದೆ. ಹೀಗೆ ನಾಗರಿಕತೆಯನ್ನು ನೀರಾವರಿಯು ಪೋಷಿಸಿದರೆ ಅದರೊಂದಿಗೇ ಬೆರೆದಿರುವ ಹುಚ್ಚುಹೊಳೆಗಳೂ ವೀರಕ್ಷಾಮಗಳೂ ಅದನ್ನು ನಾಶಮಾಡುತ್ತವೆ.

**ಋಗ್ವೇದದ ಕಾಲ**—ಸಿಂಧು ಮತ್ತು ಉಪನದಿಗಳ ತೀರದಲ್ಲಿಯೇ ಕೆಲವು ಶತಮಾನಗಳ ಮೇಲೆ ಆರ್ಯರ ನಾಗರಿಕತೆಯು ಬೇರು ಬಿಟ್ಟು ಗಿಡವಾಗಿ ಮರವಾಗಿ ಇವೊತ್ತೂ ಜೀವಂತವಾಗಿದೆ. ಆದರೆ ಈ ಸರಳವಾದ ನಾಗರಿಕತೆಯಲ್ಲಿ ಕೈಗಾರಿಕೆಯು ಬೆಳೆಯಲಿಲ್ಲ. ಅದಕ್ಕೆ ಬದಲಾಗಿ ಸಾಹಿತ್ಯ, ಸತ್ಯಾನ್ವೇಷಣೆ, ತತ್ತ್ವಶಾಸ್ತ್ರ, ಜ್ಯೋತಿಷ, ವಿಜ್ಞಾನಗಳು ಬೆಳೆದು ಹಬ್ಬಿದವು.

ನದಿಗಳನ್ನು ತಾಯಿಯಂತೆ ಪೂಜ್ಯರೆಂದು ಎಣಿಸಿ, ಅವುಗಳಿಂದ ನಮಗೆ ದಿನದಿನವೂ ಆಗುವ ಮಹೋಪಕಾರಕ್ಕಾಗಿ ದೇವತೆಗಳ ಮಟ್ಟಕ್ಕೆ ಏರಿಸಿ ನದೀಪೂಜೆಯು ಪ್ರಾರಂಭವಾದದ್ದು ಋಗ್ವೇದದ ಕಾಲದಲ್ಲಿ. ಋಗ್ವೇದದ ಹತ್ತನೆಯ ಮಂಡಲದಲ್ಲಿ ಒಂದು ನದೀ ಸೂಕ್ತವೇ ಇದೆ (೧೦.೭೫). ಅದರಲ್ಲಿನ ಈ ಮಂತ್ರವನ್ನು ದೇಶದ ಆದ್ಯಂತವೂ ಹಿಂದುಗಳು ದೇವರ ಪೂಜೆಯಲ್ಲಿ ನಿತ್ಯವೂ ಪಠಿಸುತ್ತಾರೆ.

> **ಇಮಂ ಮೇ ಗಂಗೇ ಯಮುನೇ ಸರಸ್ವತಿ ಶತುದ್ರಿಸ್ತೋಮಂ ಸಚತಾ ಪರುಷ್ಣ್ಯಾ।**
> **ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾ ಆರ್ಜೀಕೀಯೇ ಶೃಣುಹ್ಯಾಸುಷೋಮಯಾ (೧೦. ೭೫. ೫)**

(ಓ ಗಂಗೇ, ಯಮುನೇ, ಸರಸ್ವತೀ, ಶತುದ್ರೀ, ಪರುಷ್ಣೀ—ನೀವು ನನ್ನ ಪ್ರಾರ್ಥನೆಯನ್ನು

ಸ್ವೀಕರಿಸಿ. ಅಸಿಕ್ನೀ, ವಿತಸ್ತು, ಆರ್ಜೀಕ್ಯೇ, ಇವುಗಳಿಂದ ಕೂಡಿದ ಮರುದ್ವೃಧೇ, ಸುಷೋಮಾ—ನೀವು ಸ್ವೀಕರಿಸಿ.)

ಇಲ್ಲಿ ಶತುದ್ರಿಯೆಂದರೆ ಸಟ್ಲೆಜ್, ಪರುಷ್ಣಿಯೆಂದರೆ ರವಿ, ಅಸಿಕ್ನಿಯೆಂದರೆ ಚೀನಾಬ್, ವಿತಸ್ತು ಎಂದರೆ ಝೀಲಂ, ಆರ್ಜಿಕ್ಯ ಎಂದರೆ ಬಿಯಾಸ್, ಕೊನೆಯ ಮೂರೂ ಸೇರಿ ಮರುದ್ವೃಧೆ, ಸುಷೋಮಾ ಎಂದರೆ ಸಿಂಧು ನದಿ. ಈ ಏಳು ನದಿಗಳ—ಸಪ್ತಸಿಂಧುಗಳ—ನಾಡೇ ಋಗ್ವೇದದ ಕಾಲದ ಭಾರತ. ಗಂಗಾ, ಯಮುನಾ, ಸರಸ್ವತೀ—ಈ ನದಿಗಳು ಇನ್ನೂ ಪೂರ್ವಕ್ಕೆ ಉತ್ತರ ಪ್ರದೇಶದಲ್ಲಿ ಹರಿಯುತ್ತವೆ.

ನೀರಿಗೆ ಎಷ್ಟು ಗೌರವವನ್ನು ಕೊಟ್ಟಿದೆಯೆಂದು ನಿತ್ಯಾನುಸಂಧೇಯವಾದ ಋಗ್ವೇದದ ಈ ಮಂತ್ರಗಳಿಂದ ಕಾಣಬಹುದು.

ಯೋ ವಃ ಶಿವತಮೋ ರಸಸ್ತಸ್ಯ ಭಾಜಯತೇ ಹನಃ। ಉಶತೀರಿವ ಮಾತರಃ

ವಾತ್ಸಲ್ಯವುಳ್ಳ ತಾಯಿಯರಂತೆ ನಿಮ್ಮ ಮಂಗಳವಾದ ರಸವನ್ನು ನಮಗೆ ಕರುಣಿಸಿ.)

ಇದಮಾಪಃ ಪ್ರವಹತ ಯತ್ಕಿಂಚ ದುರಿತಂ ಮಯಿ।
ಯದ್ವಾಹಮಭಿದುದ್ರೋಹ ಯದ್ವಾ ಶೇಫ ಉತಾನೃತಂ॥

(ನಾನು ತಪ್ಪನ್ನು ಮಾಡಿರಲಿ, ದೊಡ್ಡವರ ವಿಷಯದಲ್ಲಿ ಕೆಟ್ಟ ಮಾತನ್ನಾಡಿರಲಿ, ಸುಳ್ಳನ್ನೇ ಹೇಳಿರಲಿ, ನೀರುಗಳೇ, ನೀವು ನನ್ನ ಎಲ್ಲಾ ಪಾಪಗಳನ್ನೂ ನಿರ್ಮೂಲಮಾಡಿ.)

ನಾಲ್ಕು ವೇದಗಳಲ್ಲಿಯೂ ನೀರನ್ನು ಬಹುವಾಗಿ ಪ್ರಶಂಸೆ ಮಾಡಿದ್ದಾರೆ. ಋಗ್ವೇದದ ಈ ಮಂತ್ರದಲ್ಲಿ ವಿಜ್ಞಾನದ ದೃಷ್ಟಿಯಿಂದ ನೀರನ್ನು ವಿಂಗಡಿಸಿದ ಹಾಗಿದೆ.

ಯಾ ಆಪೋ ದಿವ್ಯಾ ಉತ ವಾ ಸ್ರವಂತಿ। ಖನಿತ್ರಿಮಾ ಉತ ವಾ ಯಾಃ ಸ್ವಯಂಜಾಃ॥
ಸಮುದ್ರಾರ್ಥಾ ಯಾಃ ಶುಚಯೋ ಯಃ ಪಾವಕಾಃ। ತಾ ಆಪೋದೇವೀರಿಹ ಮಾಮವಂತು॥

(ಆಕಾಶದಲ್ಲಿ ಇರುವ ನೀರು, ನೆಲದ ಮೇಲೆ ಹರಿಯುವ ನೀರು, ಭೂಮಿಯಲ್ಲಿ ಅಗೆದ ಬಾವಿಯಿಂದ ಬರುವ ನೀರು, ಬುಗ್ಗೆಗಳಲ್ಲಿ ಮೇಲಕ್ಕೆ ಏಳುವ ನೀರು, ಸಮುದ್ರಗಾಮಿಯಾದ ನೀರು—ಎಲ್ಲವೂ ಶುದ್ಧವೂ, ಶುದ್ಧಿಯನ್ನು ಮಾಡತಕ್ಕವೂ ಆಗಿವೆ. ಇವು ನಮ್ಮನ್ನು ಕಾಪಾಡಲಿ.)

ಯಜುರ್ವೇದದಲ್ಲಿ ನೆಲದಲ್ಲಿ ತೋಡಿದ ನೀರಿನ ನಾಲೆಗಳ ಉಲ್ಲೇಖವಿದೆ. ಸಾಮವೇದ ದಲ್ಲಿ ತಾವು ಕತ್ತಲಾಗಿರುವಷ್ಟು ಆಳವಾದ ಬಾವಿಗಳ ಪ್ರಸ್ತಾಪವಿದೆ. ಅಥರ್ವಣವೇದದಲ್ಲಿ ನದಿಯಿಂದ ನಾಲೆಯನ್ನು ತೆಗೆಯುವ ವರ್ಣನೆಯಿದೆ. ಅಲ್ಲಿ ನದಿಯನ್ನು ಹಸುವಿಗೂ ನಾಲೆಯನ್ನು ಕರುವಿಗೂ ಹೋಲಿಸಿದೆ.

ತೈತ್ತಿರೀಯೋಪನಿಷತ್ತಿನ ನಾಲ್ಕನೆಯ ಪ್ರಶ್ನೆಯಲ್ಲಿ "ನೀರೇ ಸಮಸ್ತವೂ ಆಗಿದೆ ಅದೇ ಸತ್ಯ, ಅದೇ ಎಲ್ಲಾ ದೇವತೆಗಳು" ಇತ್ಯಾದಿಯಾಗಿ ಪ್ರಶಂಸೆ ಮಾಡಿದೆ.

ಆಪೋ ವಾ ಇದಂ ಸರ್ವಂ ವಿಶ್ವಾಭೂತಾನ್ಯಾಪಃ ಪ್ರಾಣಾ ವಾ ಆಪಃ
ಪಶವ ಆಪೋಽಮೃತಮಾಪಃ ಸಡಾಪೋ ವಿರಾಡಾಪಃ
ಸ್ವರಾಡಾಪಶ್ಛಂದಾಂಸ್ಯಾಪೋ ಜ್ಯೋತೀಂಷ್ಯಾಪೋ ಯಜೂಂಷ್ಯಾಪಃ
ಸತ್ಯಮಾಪಃ ಸರ್ವಾ ದೇವತಾ ಆಪೋ ಭೂರ್ಭುವಸ್ಸುವರಾಪ ಓಂ॥

ಸ್ಮೃತಿಗಳು ನೀರಾವರಿಯ ಕೆಲಸಗಳ ವಿಷಯವಾಗಿ ಇನ್ನೂ ಸ್ಪಷ್ಟವಾಗಿ ಹೇಳುತ್ತವೆ.

ತಡಾಗಾನ್ಯುದಪಾನಾನಿ ವಾಪ್ಯಃ ಪ್ರಸ್ರವಣಾನಿ ಚ।
ಸೀಮಾ ಸಂಧಿಷು ಕಾರ್ಯಾಣಿ ದೇವತಾಯತನಾನಿ ಚ॥ (ಮನು, ೮.೨೪೮)

ಮನುಸ್ಮೃತಿಯಲ್ಲಿ ತಟಾಕಗಳು, ಕೊಳಗಳು ಮತ್ತು ಬಾವಿಗಳನ್ನು ದೇವಸ್ಥಾನಗಳ ಜೊತೆಗೆ ಎರಡು ರಾಜ್ಯಗಳ ಸಂಧಿಗಳಲ್ಲಿ ಕಟ್ಟಬೇಕೆಂದು ಹೇಳಿದೆ.

ತಡಾಗಭೇದಕಂ ಹನ್ಯಾತ್ (ಮನು, ೨೯. ೨೭೯): ತಟಾಕವನ್ನು ಒಡೆಯುವವನು ವಧಾರ್ಹನು.

ನಾರದ ಮಹರ್ಷಿಗಳು ಯುಧಿಷ್ಠಿರನನ್ನು ಕೇಳುವ ಕುಶಲ ಪ್ರಶ್ನೆಗಳಲ್ಲಿ ಇದೊಂದು: 'ಬೇಸಾಯಗಾರರು ಸೌಖ್ಯವಾಗಿದ್ದಾರೆಯೆ? ರಾಜ್ಯದ ಎಲ್ಲಾ ಭಾಗಗಳಲ್ಲಿಯೂ ಸಾಕಷ್ಟು ದೊಡ್ಡದಾದ ತಟಾಕಗಳಿವೆಯೆ? ಬೇಸಾಯವು ಮಳೆಯನ್ನು ಮಾತ್ರವೇ ಅವಲಂಬಿಸಿಲ್ಲವಷ್ಟೆ,?

ಬೃಹಸ್ಪತಿಯ ಮತದಲ್ಲಿ ಕೆರೆಗಳನ್ನು ಕಟ್ಟುವುದು ಪುಣ್ಯಕೆಲಸ. ಶ್ರೀಮಂತರು ಅದನ್ನು ಮಾಡಬೇಕು. ನೀರನ್ನು ಒದಗಿಸುವುದಕ್ಕೆ ಕೆಲವು ಕೆಲಸಗಳು ಸೂಚಿತವಾಗಿವೆ:

(೧) ದಾರಿಹೋಕರಿಗಾಗಿ ಅರವಟ್ಟಿಗೆಗಳು (ಪ್ರಪಾ) (೨) ದನಕರುಗಳಿಗೆ ನೀರಿನ ತೊಟ್ಟಿಗಳು (೩) ಕುಡಿಯುವ ನೀರಿನ ಬಾವಿಗಳು (ಕೂಪ) (೪) ಕಲ್ಯಾಣಿ (ವಾಪಿ)– ದೀರ್ಘಚತುರಸ್ರಾಕಾರವಾದ ನೀರಿನ ಕೊಳ (೫) ನದಿಯಿಂದ ತೆಗೆಯುವ ನೀರಿನ ನಾಲೆ (ಕುಲ್ಯಾ) (೬) ಕಮಲಗಳು ಬೆಳೆದಿರುವ "ಪದ್ಮಾಕರ" (೭) ಕೆರೆ, ಜಲಾಶಯ ಅಥವಾ ತಟಾಕ. ಎಲ್ಲವೂ ಪುಣ್ಯ ಕೆಲಸಗಳೇ ಆದರೂ ಜಮೀನುಗಳಿಗೆ ನೀರನ್ನು ಒದಗಿಸುವ ತಟಾಕಕ್ಕೆ ಶ್ರೇಷ್ಠತೆ ಹೆಚ್ಚು.

ಬೌದ್ಧರ ಧರ್ಮಗ್ರಂಥವಾದ ಧಮ್ಮಪದದಲ್ಲಿ ನೆತ್ತಿಕರು ನೀರನ್ನು ಒಯ್ದ ಹಾಗೆ ("ಉದಕಂ ಹಿ ನಯಂತಿ–ನೆತ್ತಿಕಾ" (೮೦) ಪಂಡಿತರು ಆತ್ಮದಮನ ಮಾಡಿಕೊಳ್ಳುವರೆಂದು ಹೇಳಿದೆ. ನೆತ್ತಿಕಾ ಎಂದರೆ ನಾಲೆಗಳನ್ನೂ ಮೇಲುಗಾಲುವೆಗಳನ್ನೂ (Canals and aqueducts) ಕಟ್ಟುವವರು.

ಪಾಣಿನಿಗಳು "ಕರ್ಕಂಧು", "ಶಕಂಧು" ಎಂಬ ಎರಡು ಬಾವಿಗಳನ್ನು ಹೆಸರಿಸಿದ್ದಾರೆ. "ಶಕಂಧು"ವು ಪ್ರಾಯಶಃ ಶಕರು ಬಳಸುತ್ತಿದ್ದ ಪರ್ಷಿಯದ ಚಕ್ರ (Persian Wheel) ದಿಂದ ನೀರನ್ನು ಎತ್ತುತ್ತಿದ್ದ ಬಾವಿಯಿರಬೇಕು. ಆ ಕಾಲದಲ್ಲಿ ವಿಪಾಶಾ (Beas) ನದಿಯ ಬಲದಡದಲ್ಲಿ ಅಗೆದ ಬಾವಿಗಳಲ್ಲಿ ಯಾವಾಗಲೂ ನೀರು ಇರುತ್ತಿತ್ತಂತೆ. ಎಡದಡದ ಬಾವಿಗಳು ಪ್ರವಾಹ ಕಾಲದಲ್ಲಿ ನದಿಯ ನೀರಿನಲ್ಲಿ ತಾತ್ಕಾಲಿಕವಾಗಿ ಮುಚ್ಚಿಹೋಗುತ್ತಿದ್ದವು.

ಕೌಟಿಲ್ಯನ ಕಾಲಕ್ಕೆ (ಕ್ರಿ.ಪೂ. ೩೦೦) ಕಟ್ಟೆಗಳೂ ನಾಲೆಗಳೂ ಸಾಮಾನ್ಯವಾಗಿ ಬಳಕೆಯಲ್ಲಿದ್ದವು. ಈತನ ದೃಷ್ಟಿಯಲ್ಲಿ ಒಂದು ರಾಜ್ಯದ ಆಡಳಿತವು ಚೆನ್ನಾಗಿದೆಯೆನ್ನಬೇಕಾದರೆ ಅಲ್ಲಿ ಬೇಸಾಯವು ಕೇವಲ ಮಳೆಯ ನೀರನ್ನೇ ಅವಲಂಬಿಸಿರಬಾರದು. ಯಾರಾದರೂ ನೀರಾವರಿ ಕೆಲಸಗಳಿಗೆ ಅಪಾಯಮಾಡಿದರೆ ಅವರಿಗೆ ಕ್ರೂರವಾದ ಶಿಕ್ಷೆಯನ್ನು ವಿಧಿಸುತ್ತಿದ್ದರು. ಖಾಸಗಿಯಾಗಿ ನಿರ್ವಹಿಸುತ್ತಿದ್ದ ನೀರಾವರಿ ಕೆಲಸಗಳನ್ನು ಐದು ವರ್ಷಗಳ ಕಾಲ ನೋಡಿಕೊಳ್ಳದೆ ಹೋದರೆ ಅವನ್ನು ರಾಜನು ವಹಿಸಿಕೊಳ್ಳುತ್ತಿದ್ದನು. ಆ ಕೆಲಸಗಳನ್ನು ಸಾರ್ವಜನಿಕರ ದ್ರವ್ಯ ಸಹಾಯದಿಂದ ಕಟ್ಟಿದ್ದರೆ ಐದು ವರ್ಷಗಳ ಕಾಲ ಕಂದಾಯವನ್ನು ಮಾಫಿ ಮಾಡುತ್ತಿದ್ದರು. ರಿಪೇರಿ ಮಾಡಿದ್ದರೆ ನಾಲ್ಕು ವರ್ಷಗಳ ಕಾಲ ಕಂದಾಯ ವಿನಾಯತಿ. ಹೀಗೆಲ್ಲಾ ಕಟ್ಟುಪಾಡುಗಳಿದ್ದವು.

ಪಂಚವರ್ಷೋಪರತಕರ್ಮಣಃ ಸೇತುಬಂಧಸ್ಯ ಸ್ವಾಮ್ಯಂ ಉಪ್ಯೇತಾನ್ಯತ್ರಾಪದ್ಭ್ಯಃ|
ತಟಾಕಸೇತುಬಂಧಾನಾಂ ನವಪ್ರವರ್ತನೇ ಪಾಂಚವಾರ್ಷಿಕಃ ಪರಿಹಾರಃ|
ಭಗ್ನೋತ್ಸೃಷ್ಟಾನಾಂ ಚತುರ್ವಾರ್ಷಿಕಃ || (ಕೌಟಿಲೀಯ ಅರ್ಥಶಾಸ್ತ್ರ, ೩.೯)

ತನ್ನ ಸರದಿಯಲ್ಲಲ್ಲದೆ ಯಾರಾದರೂ ನೀರನ್ನು ಬಿಟ್ಟುಕೊಂಡರೆ ಅಥವಾ ಇನ್ನೊಬ್ಬರ ಸರದಿಯಲ್ಲಿ ನೀರನ್ನು ತಡೆದರೆ ಅವರಿಗೆ ೬ ಪಣಗಳ ಜುಲ್ಮಾನೆಯನ್ನು ಕೌಟಿಲ್ಯನು ವಿಧಿಸಿದ್ದನು.

ಸೇತುಭ್ಯೋ ಮುಂಚತಸ್ತೋಯಮವಾರೇ ಷಟ್ಪಣೋ ದಮಃ|
ವಾರೇ ವಾ ತೋಯಮನ್ಯೇಷಾಂ ಪ್ರಮಾದೇನೋಪರುಂಧತಃ ||(೩.೯)

ಪ್ರಾಯಶಃ ಈ ದೇಶದಲ್ಲಿ ಕ್ಷಾಮಗಳೂ ಮಹಾಪ್ರವಾಹಗಳೂ ಯಾವಾಗಲೂ ತಪ್ಪಿರಲಿಲ್ಲವೆಂದು ತೋರುತ್ತದೆ. ಈ ಪರಿಸ್ಥಿತಿಯು ಇಲ್ಲಿನ ಮಳೆಯ ಒಂದು ಲಕ್ಷಣ. ಕ್ಷಾಮಕಾಲದಲ್ಲಿ ರಾಜನು ತಟಾಕಗಳ ಬಳಿ ವಾಸಮಾಡಬೇಕು:

**ದುರ್ಭಿಕ್ಷೇ ರಾಜಾ . . . ಸಮುದ್ರ ಸರಸ್ತಟಾಕಾನಿ ವಾ ಸಂಶ್ರಯೇತ (೪.೩)**

ನದಿಗಳಲ್ಲಿಯೂ ತಟಾಕಗಳಲ್ಲಿಯೂ ನಾಲೆಗಳಲ್ಲಿಯೂ ಇರುವ ಮೀನುಗಳಿಗೆ ಹಿಂಸೆಯಾಗದ ಹಾಗೆ ರಕ್ಷಿಸಬೇಕು. ಮೀನನ್ನು ಹಿಡಿಯಬೇಕಾದರೆ ಹಣವನ್ನು ಕೊಟ್ಟು ಲೈಸೆನ್ಸನ್ನು ಪಡೆಯಬೇಕು:

**ಮತ್ಸ್ಯಾಃ ಸಾರಸಾ ನಾದೇಯಾಸ್ತಟಾಕಕುಲ್ಯೋದ್ಭವಾ ವಾ . .**
**ಹಿಂಸಾಬಾಧೇಭ್ಯೋ ರಕ್ಷ್ಯಾಃ| ರಕ್ಷಾತಿಕ್ರಮೇ ಪೂರ್ವಸ್ಸಾಹಸದಂಡಃ|| (೨.೨೬)**

ಯಂತ್ರಗಳಿಂದ ಬಾವಿಯ ನೀರನ್ನೆತ್ತಿ ನೀರಾವರಿಗೆ ಉಪಯೋಗಿಸಿಕೊಂಡಾಗ ಬೆಳೆದ ಧಾನ್ಯದ ಮೂರರಲ್ಲೊಂದು ಭಾಗವನ್ನೂ ನದಿಗಳು, ಸರೋವರಗಳು, ಕೆರೆಗಳು, ಬಾವಿಗಳಿಂದ ನೀರನ್ನು ತೆಗೆದುಕೊಂಡಾಗ ನಾಲ್ಕರಲ್ಲೊಂದು ಭಾಗವನ್ನೂ ಕಂದಾಯವಾಗಿ ಕೊಡಬೇಕು.

**ಸ್ರೋತೋಯಂತ್ರಪಾವರ್ತಿಮಂ ಚ ತೃತೀಯಂ**
**ಚತುರ್ಥಂ ನದೀಸರಸ್ತಟಾಕಕೂಪೋದ್ಘಾಟಂ || (೨.೨೪)**

ಕ್ರಿ. ಶ. ನಾಲ್ಕನೆಯ ಶತಮಾನದ ಅಮರಕೋಶದಲ್ಲಿ ಹೊಳೆಯ ನೀರಿನಿಂದ ಸಾಗುವಳಿಯಾಗುವ ಭೂಮಿಯನ್ನು ನದೀಮಾತೃಕವೆಂದೂ ಮಳೆಯ ನೀರಿನಿಂದ ಸಾಗುವಳಿಯಾಗುವ ಭೂಮಿಯನ್ನು ದೇವಮಾತೃಕವೆಂದೂ ಕರೆದಿದೆ.

**ದೇಶೋ ನದ್ಯಂಬುವೃಷ್ಟ್ಯಂಬುಸಂಪನ್ನವ್ರೀಹಿಪಾಲಿತಃ|**
**ಸ್ಯಾನ್ನದೀಮಾತೃಕೋ ದೇವಮಾತೃಕಶ್ಚ ಯಥಾಕ್ರಮಂ || (ದ್ವಿತೀಯಕಾಂಡ—ಭೂಮಿವರ್ಗ)**

ಸುಶ್ರುತ ಮಹಾಶಯನ ವೈದ್ಯಗ್ರಂಥದ ಮೇಲೆ ಕ್ರಿ. ಶ. ೧೨ನೆಯ ಶತಮಾನದಲ್ಲಿ ದಲ್ಹಣನು ಬರೆದಿರುವ ವ್ಯಾಖ್ಯಾನದಲ್ಲಿ ನೀರಿನ ತಟಾಕಗಳನ್ನೂ ಅವುಗಳಿಂದ ಜಮೀನಿಗೆ ನೀರನ್ನು ಒಯ್ಯುವ ನಾಲೆಗಳನ್ನೂ ಪ್ರತ್ಯೇಕವಾಗಿ ಹೇಳಿದ್ದಾನೆ. ನೈಸರ್ಗಿಕವಾದ ಕೊಳವನ್ನು ಸರಸ್ಸೆಂದೂ ಮಾನವ ನಿರ್ಮಿತವಾದದ್ದನ್ನು ತಟಾಕವೆಂದೂ ಕರೆದಿದ್ದಾನೆ.

ಕೌಟಿಲ್ಯನ ಕಾಲದಲ್ಲಿಯೇ ಮಳೆಯ ನೀರನ್ನು ಅಳೆಯುವ ಮಾಪಕಗಳು ಬಳಕೆಯಲ್ಲಿದ್ದವು. ಈಚಿನ ಶಾಸನಗಳಲ್ಲಿ "ಜಲಸೂತ್ರದ" ಎಂಬ ನೀರಾವರಿಯ ಶಿಲ್ಪ ಪಂಡಿತರ ಉಲ್ಲೇಖವಿದೆ. ಈ ದೇಶದಲ್ಲಿ ವೇದಾಂಗಗಳ ಮೇಲೆ ಗ್ರಂಥಗಳನ್ನು ಬರೆದ ಹಾಗೆಯೇ ಜಲಶಾಸ್ತ್ರ, ಕಟ್ಟೆಗಳು, ನಾಲೆಗಳು, ಕೆರೆಗಳು, ಬಾವಿಗಳು, ಇವುಗಳ ಮೇಲೂ ಗ್ರಂಥಗಳಿದ್ದವು. ಗಾರ್ಗ ಮುನಿಗಳು ಜಲಶಾಸ್ತ್ರದ ಮೇಲೆ ಬರೆದ ಉದ್ಗ್ರಂಥದ ಎಂಟು ಹಾಳೆಗಳು ಈಗಲೂ ನೇಪಾಳದ ರಾಜರ ಪುಸ್ತಕಭಂಡಾರದಲ್ಲಿವೆ. ಈ ಗ್ರಂಥಗಳೆಲ್ಲಾ ಸಮಗ್ರ ಸಿಕ್ಕಿಲ್ಲ. ಸಿಕ್ಕಿರುವ ಶಾಸನಗಳಲ್ಲಿ ಜಲಶಾಸ್ತ್ರಜ್ಞರ ವಿಚಾರವಾಗಿ ವಿಪುಲವಾಗಿ ಬರೆದಿದ್ದಾರೆ. ಪ್ರಾಕ್ತನ ಸಂಶೋಧಕರ ಶ್ರಮದಿಂದ ಅನೇಕ ಕಡೆ ಭೂಗತವಾಗಿದ್ದ ನೀರಾವರಿಯ ಕಟ್ಟಡಗಳು ಬೆಳಕಿಗೆ ಬಂದಿವೆ. ಕ್ರಿ. ಪೂ. ೩ ನೆಯ ಶತಮಾನದ ಹಿಂದೆ ಗ್ವಾಲಿಯರಿನಲ್ಲಿ ಭಿಲ್ಸದ ಬಳಿ ಕಟ್ಟಿದ್ದ ೭ ಅಡಿ ಅಗಲ, ೫೨ ಅಡಿ ಆಳ, ೧೮೫೦ ಅಡಿ ಉದ್ದದ ಕಲ್ಲು ಗಾರೆಯ ನಾಲೆಯನ್ನು ಈ ಇಲಾಖೆಯವರು ೧೯೧೫ರಲ್ಲಿ ಅಗೆದಿದ್ದಾರೆ. ಇನ್ನೂ ಎಷ್ಟು ಕಾಮಗಾರಿಗಳು ಭೂಗರ್ಭದಲ್ಲಿ ಸೇರಿ ಹೋಗಿವೆಯೋ!

ಜೀವನದಿಗಳಿಗೆ ಅಡ್ಡಲಾಗಿ ಅಣೆಕಟ್ಟುಗಳನ್ನು ಹಾಕಿ ನಾಲೆಗಳಿಂದ ನೀರಾವರಿಗೆ

ಈಗ್ಗೆ ೨೫೦೦ ವರ್ಷಗಳ ಹಿಂದೆಯೇ ನೀರನ್ನು ಬಿಡುತ್ತಿದ್ದರೆಂಬುದಕ್ಕೆ ಆಧಾರಗಳಿವೆ. ಕ್ರಿ. ಪೂ. ನಾಲ್ಕನೆಯ ಶತಮಾನಕ್ಕಿಂತ ಹಿಂದಿನ "ಕುನಾಲಜಾತಕ"ದಲ್ಲಿ ಕಪಿಲವಸ್ತುವಿಗೂ ಕೋಲಿಗೂ ಮಧ್ಯೆ ಹರಿಯುವ ನದಿಗೆ ಅಣೆಕಟ್ಟನ್ನು ಕಟ್ಟಿ ನೀರನ್ನು ಬಿಡುತ್ತಿದ್ದರೆಂದು ಹೇಳಿದೆ.

ನಂದ ಚಕ್ರವರ್ತಿಯು ಕ್ರಿ. ಪೂ. ನಾಲ್ಕನೆಯ ಶತಮಾನದಲ್ಲಿ ಕಟ್ಟಿ ಬಹುಕಾಲ ಅನಾದರಣೆಗೆ ತುತ್ತಾಗಿದ್ದ ಒಂದು ನಾಲೆಯ ಮೇಲುಗಾಲುವೆಯನ್ನು (Aqueduct) ಖಾರವೇಲನೆಂಬ ಕಳಿಂಗದ ರಾಜನು ಕ್ರಿ. ಪೂ. ೧ ನೆಯ ಶತಮಾನದಲ್ಲಿ ರಿಪೇರಿ ಮಾಡಿಸಿದನು.

**ಸುದರ್ಶನ ಸರೋವರ**—ಮೌರ್ಯರ ಕಾಲದಲ್ಲಿ ಕಾಥಿಯವಾಡದ ಪೂರ್ವಕ್ಕೆ ೧೦ ಮೈಲಿ ದೂರದಲ್ಲಿ ಸುದರ್ಶನವೆಂಬ ಸರೋವರವನ್ನು ನಿರ್ಮಿಸಿದ್ದರು. ಸುಮಾರು ನಾಲ್ಕು ಶತಮಾನಗಳ ಕಾಲ ಆ ಪ್ರದೇಶದಲ್ಲಿ ನೀರನ್ನೊದಗಿಸುತ್ತಿದ್ದ ಈ ಸರೋವರವು ಅತಿವೃಷ್ಟಿಯಲ್ಲಿ ೪೨೦ ಮೊಳ ಅಗಲ, ೭೫ ಮೊಳ ಆಳವಾಗಿ ಕೊರೆದು ನೀರೆಲ್ಲಾ ಹೊರಕ್ಕೆ ಹೋಯಿತು. ಕ್ರಿ. ಶ. ೧೫೦ ರಲ್ಲಿ ಮೊದಲನೆಯ ರುದ್ರದಾಮನು ಬಹು ಕಷ್ಟಪಟ್ಟು ಮೊದಲಿನಂತೆಯೇ ಸರೋವರವನ್ನು ರಿಪೇರಿಮಾಡಿಸಿ ಅಲ್ಲಿ ಅಶೋಕ ಚಕ್ರವರ್ತಿಯ ಶಿಲಾಶಾಸನವಿರುವ ಬಂಡೆಯ ಮೇಲೆಯೇ ತಾನು ಮಾಡಿಸಿದ ರಿಪೇರಿಯ ವಿಚಾರವಾಗಿ ಶಾಸನವನ್ನು ಕೆತ್ತಿಸಿದ್ದಾನೆ. ಇದಾಗಿ ಮೂರು ಶತಮಾನಗಳ ಮೇಲೆ ಮತ್ತೆ ಅತಿವೃಷ್ಟಿಯಲ್ಲಿ ಈ ಸರೋವರವು ಕೊರೆದು ಹೋಯಿತು. ಆಗ ಗುಪ್ತರಾಜ ಸ್ಕಂದಗುಪ್ತನು ರಿಪೇರಿ ಮಾಡಿಸಿ ಅದೇ ಬಂಡೆಯ ಮೇಲೆಯೇ ಮತ್ತೊಂದು ಶಾಸನವನ್ನು ಬರೆಸಿದನು.

ದಕ್ಷಿಣ ಭಾರತದಲ್ಲಿ ಚೋಳರಾಜರು ನದಿಗಳಿಗೆ ಅಡ್ಡಲಾಗಿ ಕಲ್ಲಿನ ಅಣೆಕಟ್ಟುಗಳನ್ನು ಕಟ್ಟುವುದರಲ್ಲಿ ಭಾರತದಲ್ಲಿಯೇ ಅಗ್ರಗಣ್ಯರು. ಇವರು ಕಾವೇರಿಗೆ ಅಡ್ಡಲಾಗಿ ಶ್ರೀರಂಗದ ಕೆಳಭಾಗದಲ್ಲಿ ಕ್ರಿ. ಶ. ಒಂದನೆಯ ಶತಮಾನದಲ್ಲಿ ಕಟ್ಟಿದ ಕಲ್ಲಣೆ—ಗ್ರ್ಯಾಂಡ್ ಅಣೆಕಟ್ಟು—ನಮ್ಮ ದೇಶಕ್ಕೆ ಬ್ರಿಟಿಷ್ ಇಂಜಿನಿಯರುಗಳು ಬರುವುದಕ್ಕೆ ಮುಂಚೆ ಕಟ್ಟಿದ ನೀರಾವರಿ ಕೆಲಸಗಳಲ್ಲೆಲ್ಲಾ ದೊಡ್ಡದು, ಶಾಸ್ತ್ರೀಯವಾದುದು, ಹೆಚ್ಚಿನ ಉಪಯೋಗವುಳ್ಳದ್ದು. ಇದರ ಉದ್ದ ೧೦೮೦ ಅಡಿ, ಅಗಲ ೪೦ ಅಡಿಯಿಂದ ೬೦ ಅಡಿ, ಎತ್ತರ ೧೫ ಅಡಿಯಿಂದ ೧೮ ಅಡಿ. ಈ ಅಣೆಯು ನೇರವಾಗಿಲ್ಲ, ಬಳಸಿಕೊಂಡು ಹೋಗುತ್ತದೆ. ಇದನ್ನು ಮರಳಿನ ತಳಪಾಯದ ಮೇಲೆ ಭದ್ರವಾಗಿ ಕಟ್ಟಿದ್ದಾರೆ. ಈ ಅಣೆಕಟ್ಟು ಮಳೆಗಾಲದಲ್ಲಿ ಹೊಳೆಯಲ್ಲಿ ಬಂದ ನೀರನ್ನು ತಂಜಾವೂರು ಡೆಲ್ಟದಲ್ಲಿ ನೀರಾವರಿಗಾಗಿ ತಿರುಗಿಸುತ್ತದೆ. ಈ ಡೆಲ್ಟದಲ್ಲಿ ನೀರಾವರಿಯು ಕ್ರಿ. ಪೂ. ೨ ನೆಯ ಶತಮಾನದಿಂದಲೂ ನಡೆಯುತ್ತಿದೆ. ಇವೊತ್ತಿಗೂ ಈ ಪ್ರದೇಶವನ್ನು ಮದರಾಸಿನ ಕಣಜವೆನ್ನುತ್ತಾರೆ.

ಕ್ರಿ. ಶ. ಮೊದಲನೆಯ ಶತಮಾನದ ಮತ್ತೊಬ್ಬ ಚೋಳರಾಜನಾದ ಮೊದಲನೆಯ ಕರಿಕಾಲನು ಕಾವೇರಿಯ ನೀರಿಗೆ ಅಡ್ಡಲಾಗಿ ಅನೇಕ ಮಣ್ಣಿನ ಏರಿಗಳನ್ನು ಹಾಕಿ ಪ್ರವಾಹದ ಹಾವಳಿಯನ್ನು ತಡೆದದ್ದೇ ಅಲ್ಲದೆ ನಾಲೆಗಳಿಂದ ಗದ್ದೆಗಳಿಗೆ ನೀರನ್ನು ಹಾಯಿಸಿದನು. ಈತ ಪ್ರತಿಭಾಶಾಲಿ. ರೈತರ ಅನುಕೂಲಕ್ಕಾಗಿ ಏರಿಗಳನ್ನೇ ಅಲ್ಲದೆ ನಾಲೆಗಳನ್ನೂ ಕೆರೆಗಳನ್ನೂ ಇತರ ರಾಜರ ಸಹಾಯದಿಂದ ಕಟ್ಟಿ ಕಾವೇರೀನಾಥನೆಂಬ ಬಿರುದನ್ನು ಪಡೆದನು.

ರಾಜೇಂದ್ರ ಚೋಳನು (೧೦೧೨–೧೦೪೪) ತನ್ನ ರಾಜಧಾನಿಯಾದ ಗಂಗೈಕೊಂಡ ಚೋಳಪುರದ ಹತ್ತಿರ ದೊಡ್ಡ ಕೆರೆಯನ್ನು ಕಟ್ಟಿದನು. ಇದರ ಏರಿಯು ೧೬ ಮೈಲಿ ಉದ್ದವಾಗಿದೆ. ಇವೊತ್ತಿಗೂ ವಿಶಾಲವಾದ ಬಯಲುಗಳಿಗೆ ನೀರನ್ನು ಒದಗಿಸುತ್ತಾ ಉಪಯೋಗದಲ್ಲಿದೆ.

ಮೈಸೂರು ದೇಶದ ಶಿವಮೊಗ್ಗ ಜಿಲ್ಲೆಯಲ್ಲಿ ಕ್ರಿ. ಶ. ೬ ನೆಯ ಶತಮಾನದಲ್ಲಿ ಕದಂಬ ದೊರೆ ಕಾಕುತ್ಸ್ಥವರ್ಮನು ತಾಳಗುಂದದ ಕೆರೆಯನ್ನು ಕಟ್ಟಿದನು. ಇದೇ ಸಮಯದಲ್ಲಿ ಕರ್ಣಾಟಕ, ತೆಲುಗು, ಮತ್ತು ತಮಿಳು ಜಿಲ್ಲೆಗಳಲ್ಲಿ ದೊಡ್ಡ ಹಳ್ಳಗಳಿಗೆ ಅಡ್ಡಲಾಗಿ ಮಣ್ಣಿನ ಏರಿಗಳನ್ನು ಹಾಕಿ ನೂರಾರು ಕೆರೆಗಳನ್ನು ಕಟ್ಟಿದರು.

ಏಳನೆಯ ಶತಮಾನದಲ್ಲಿ ಉತ್ತರ ಆರ್ಕಾಟ್ ಜಿಲ್ಲೆಯಲ್ಲಿ ಮಹೇಂದ್ರವಾಡಿ ಕೆರೆಯನ್ನು

ಮೊದಲನೆಯ ಮಹೇಂದ್ರವರ್ಮನ ಕಾಲದಲ್ಲಿ ಕಟ್ಟಿದರು. ಇದರ ಏರಿಯು ಬಹಳ ಎತ್ತರವಾಗಿದೆ. ಮಹೇಂದ್ರವರ್ಮನ ಮೊಮ್ಮಗ ಪರಮೇಶ್ವರವರ್ಮನು ಕಾಂಚೀಪುರಕ್ಕೆ ವಾಯುವ್ಯದಲ್ಲಿ ೯ ಮೈಲಿ ದೂರದ ಕುರುಹಳ್ಳಿಯಲ್ಲಿ ಚತುರ್ವೇದಪಾರಂಗತರಾದ ನೂರೆಂಟು ವಿಪ್ರ ಸಂಸಾರಗಳು ನೆಮ್ಮದಿಯಾಗಿ ಅಧ್ಯಯನ ಮಾಡಲು ಅವಕಾಶ ಮಾಡಿಕೊಟ್ಟನು. ಈ ಕೆರೆಗೆ ಪಾಲಾರ್ ನದಿಯಿಂದ ನೇರವಾಗಿ ನೀರು ಬರುವ ಹಾಗಿದೆ.

ಕಾಂಚೀಪುರದ ಪೂರ್ವಕ್ಕೆ ೧೦ ಮೈಲಿ ದೂರದಲ್ಲಿ ತಿರಯನೇರಿಯಲ್ಲಿ ನಂದಿವರ್ಮ ಪಲ್ಲವ ಮಲ್ಲನು ಎಂಟನೆಯ ಶತಮಾನದ ಪ್ರಾರಂಭದಲ್ಲಿ ದೊಡ್ಡ ಕೆರೆಯನ್ನು ಕಟ್ಟಿ ಅದರಿಂದ ನಾಲೆಗಳನ್ನು ತೆಗೆದನು. ಮೂರನೆಯ ನಂದಿವರ್ಮನು ಉತ್ತರ ಆರ್ಕಾಟ್ ಜಿಲ್ಲೆಯ ವಾಲಾಜ ತಾಲ್ಲೂಕಿನಲ್ಲಿ ಕಾವೇರಿಪಾಕಂ ಕೆರೆಯನ್ನು ನಿರ್ಮಿಸಿದನು. ಇದರ ಏರಿಯು ಉತ್ತರ ದಕ್ಷಿಣವಾಗಿ ನಾಲ್ಕು ಮೈಲಿ ಉದ್ದವಾಗಿದೆ. ಇದೇ ಶತಮಾನದಲ್ಲಿ ಪಲ್ಲವರು ಚಂಗಲ್‌ಪೇಟೆ ಜಿಲ್ಲೆಯ ಉತ್ತಿರಮೇರೂರಿನಲ್ಲಿ ಕಟ್ಟಿದ ವಾಯಿರಮೇಗ ತಟಾಕದ ಮೇಲ್ವಿಚಾರಣೆಯನ್ನು ಹಳ್ಳಿಯ ಮುಖಂಡರು ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದರು. ಒಂದು ಸಾರಿ ಕೆಲವು ರೈತರು ತಾವು ಕೊಡಬೇಕಾದ ನೀರಿನ ಕಂದಾಯವನ್ನು ಕೊಡದೆ ಹೋದಾಗ ಹಳ್ಳಿಯ ಸಮಿತಿಯು ಆ ಬಾಕಿಯನ್ನು ಕೊಟ್ಟು ಮೂರು ವರ್ಷಗಳವರೆಗೆ ಜಮೀನನ್ನು ವಹಿಸಿಕೊಂಡು ಬಾಕಿಯು ತೀರಿದ ಮೇಲೆ ಹಿಂದಕ್ಕೆ ಕೊಟ್ಟರು. ಈ ರೀತಿಯ ಕಟ್ಟಳೆಗಳಿಲ್ಲದೆ ಈಗ ಕೆರೆಗಳ ಏರಿಗಳನ್ನೂ ನಾಲೆಗಳನ್ನೂ ದುರಸ್ತಿನಲ್ಲಿಡುವುದೇ ಕಷ್ಟವಾಗಿದೆ. ಈ ಕರೆಯ ರಿಪೇರಿಗೂ ಹೂಳು ಮಣ್ಣನ್ನು ತೆಗೆಸುವುದಕ್ಕೂ ಧರ್ಮಾತ್ಮರು ಭೂಮಿ, ಧನ, ಧಾನ್ಯಗಳನ್ನು ದತ್ತಿಗಳಾಗಿ ಕೊಟ್ಟಿದ್ದಾರೆ.

ವಿಜಯನಗರದ ಸಾಮ್ರಾಜ್ಯದ ಕಾಲದಲ್ಲಿ ದೇವಸ್ಥಾನಗಳಿಗೇ ಅಲ್ಲದೆ ನೀರಾವರಿ ಕೆಲಸಗಳಿಗೂ ಪ್ರಾಮುಖ್ಯತೆಯಿತ್ತು. ೧೪ ನೆಯ ಶತಮಾನದಲ್ಲಿ ಕಡಪಜಿಲ್ಲೆಯ ಬದ್ವೇಲು ತಾಲ್ಲೂಕಿನಲ್ಲಿ ಅನಂತರಾಜ ಸಾಗರವನ್ನು (ಪೋರುಮಮಿಲ್ಲಕೆರೆ) ಕಟ್ಟಿದರು. ಇದರ ಏರಿಯು ಸ್ವಾರಸ್ಯವಾಗಿದೆ. ನಾಲ್ಕು ನೈಸರ್ಗಿಕವಾದ ಗುಡ್ಡಗಳ ನಡುವೆ ಮೂರು ಮಣ್ಣಿನ ಏರಿಗಳನ್ನು ಕಟ್ಟಿ ನೀರಿನ ಮುಖದ ಕಡೆ ಕಡಪ ಕಲ್ಲಿನ ಚಪ್ಪಡಿಗಳನ್ನು ಜೋಡಿಸಿದ್ದಾರೆ. ಕೃತಕವಾದ ಏರಿಗಳ ಒಟ್ಟು ಉದ್ದ ೪೫೦೦ ಅಡಿ. ಗುಡ್ಡಗಳನ್ನು ಸೇರಿಸಿದರೆ ೧೪೦೦೦ ಅಡಿ ಉದ್ದವಾಗುತ್ತದೆ. ಕೆರೆಯ ನೀರಿನ ಆಳ ೩೩ ಅಡಿ. ಏರಿಯ ತಳದ ಅಗಲ ೧೫೦ ಅಡಿ. ಮೇಲಿನ ಅಗಲ ೧೨ ಅಡಿ. ಕೆರೆಯು ೭ ಮೈಲಿ ಉದ್ದವಾಗಿಯೂ ಸರಾಸರಿ ೨½ ಮೈಲಿ ಅಗಲವಾಗಿಯೂ ಇದೆ. ಈ ಕೆರೆಯಲ್ಲಿ ನಾಲ್ಕು ತೂಬುಗಳೂ ಐದು ಕೋಡಿಗಳೂ ಇವೆ. ಕೆರೆಯ ಹತ್ತಿರ ಭೈರವ ದೇವಾಲಯದ ಬಳಿ ಕೆತ್ತಿರುವ ಶಾಸನದಲ್ಲಿ ಹೊಸ ಕೆರೆಗೆ ಬೇಕಾದ ಸಾಧನಗಳನ್ನೂ, ವರ್ಜಿಸಬೇಕಾದ ದೋಷಗಳನ್ನೂ ಬರೆದಿದ್ದಾರೆ. ಸಾಧನಗಳ ಪೈಕಿ ಇವು ಮುಖ್ಯವಾದವು: (೧) ಧರ್ಮಿಷ್ಠನಾದ ದೊರೆ, (೨) ಜಲಶಾಸ್ತ್ರದಲ್ಲಿ ಪಾರಂಗತನಾದ ದ್ವಿಜ, (೩) ತಳಪಾಯದಲ್ಲಿ ಗಟ್ಟಿಯಾದ ನೆಲ, (೪) ಸಿಹಿ ನೀರಿರುವ ಹಳ್ಳ, (೫) ಏರಿಯ ಎರಡು ಪಕ್ಕಗಳಲ್ಲಿಯೂ ಕಲ್ಲಿನ ಗುಡ್ಡಗಳು, (೬) ವಿಶಾಲವಾದ ಆಳವಾದ ಕೆರೆಯ ಅಂಗಳ, (೭) ಉದ್ದವಾದ ಕಲ್ಲು ದೊರೆಯುವ ಬೆಟ್ಟಗಳು, (೮) ಸಾಗುವಳಿಗೆ ಮಟ್ಟವಾದ ಫಲವತ್ತಾದ ಹಣ್ಣಿನ ಮರಗಳಿರುವ ಭೂಮಿ, (೯) ಅನುಭವಿಗಳಾದ ಕೆಲಸಗಾರರು. ಈ ಗುಣಗಳಂತೆ ದೋಷಗಳೂ ಇವೊತ್ತಿಗೂ ಅನ್ವಯಿಸುತ್ತವೆ: (೧) ಕೆರೆಯ ಏರಿಯಲ್ಲಿ ನೀರು ಜಿನುಗುವಹಾಗಿರಬಾರದು ; (೨) ಸಾಗುವಳಿಯಾಗುವ ಭೂಮಿಯಲ್ಲಿ ಬಿಳಿಯ ಉಪ್ಪು ಮೇಲುಗಡೆ ಇರಬಾರದು ; (೩) ಏರಿಯು ಎರಡು ರಾಜ್ಯಗಳ ಗಡಿಯಲ್ಲಿರಬಾರದು ; (೪) ಕೆರೆಯ ಅಂಗಳದ ಮಧ್ಯದಲ್ಲಿ ಉಬ್ಬುಗಳಿರಬಾರದು ; (೫) ಕೆರೆಗೆ ಬರುವ ನೀರು ಕಡಿಮೆಯಾಗಿದ್ದು ಸಾಗುವಳಿಯಾಗುವ ಭೂಮಿಗೆ ಸಾಕಾಗದ ಹಾಗಿರಬಾರದು ; (೬) ಪ್ರತಿಯಾಗಿ ಕೆರೆಯಲ್ಲಿ ಹೆಚ್ಚು ನೀರಿದ್ದು ಸಾಗುವಳಿಯಾಗುವ ಭೂಮಿಯು ಕಡಿಮೆಯಾಗಿರಬಾರದು.

ಬಳ್ಳಾರಿ ಜಿಲ್ಲೆಯಲ್ಲಿ ಸಂಡೂರಿನ ಹತ್ತಿರ ನಾಗಲಾಪುರದ ಕೆರೆಯನ್ನು ವಿಜಯನಗರದ

ಕೃಷ್ಣರಾಜರು ಕ್ರಿ. ಶ. ೧೫೨೦ ರಲ್ಲಿ ಕಟ್ಟಿಸಿದರು. ಜಮೀನು ಬೇಗ ಸಾಗಾಗುವುದಕ್ಕಾಗಿ ಕಂದಾಯವಿಲ್ಲದೆ ೯ ವರ್ಷ ರೈತರಿಗೆ ಕೊಟ್ಟರು. ಈ ಕೆರೆಯ ಏರಿಯ ಮೇಲೆ ಹೊಸಪೇಟೆಯಿಂದ ದಕ್ಷಿಣಕ್ಕೆ ಹೋಗುವ ದೊಡ್ಡ ರಸ್ತೆಯು ಹೋಗುತ್ತದೆ. ಇದೇ ದೊರೆಯೇ ತುಂಗಭದ್ರಾನದಿಯ ಮೇಲೆ ಕೊರಗಲ್ಲಿನ ಬಳಿ ಒಂದು ನಾಲೆಯನ್ನೂ ಬಸವಣ್ಣನಾಲೆಯನ್ನೂ ತೆಗೆಸಿದನು.

೧೧ ನೆಯ ಶತಮಾನದಲ್ಲಿ ನಿರ್ಮಿತವಾದ ಭೋಜಪುರದ ಮಹಾತಟಾಕವು ಭೋಪಾಲಿಗೆ ದಕ್ಷಿಣಕ್ಕೆ ೧೦ ಮೈಲಿ ದೂರದಲ್ಲಿ ಬೆಟ್ಟ ನದಿಯ ಪಾತ್ರದಲ್ಲಿದೆ. ಇದರ ನೀರು ೨೫೦ ಚದರ ಮೈಲಿ ಹರಡಿದೆ. ಗುಡ್ಡಗಳ ಸಾಲಿನಲ್ಲಿ ಎರಡು ಕಂಡಿಗಳನ್ನು ಒಂದೊಂದಕ್ಕೂ ಅಡ್ಡಲಾಗಿ ಭಾರಿ ಏರಿಗಳನ್ನು ಹಾಕಿ ಮುಚ್ಚಿದ್ದಾರೆ. ಒಂದು ಏರಿಯು ೮೭ ಅಡಿ ಎತ್ತರವಾಗಿ ತಳದಲ್ಲಿ ೩೦೦ ಅಡಿ ಅಗಲವಾಗಿದೆ. ಮಣ್ಣಿನ ಏರಿಯ ಎರಡು ಕಡೆಗಳಲ್ಲಿಯೂ ದೊಡ್ಡ ಕಲ್ಲುಗಳಿಂದ ಕಟ್ಟಣವನ್ನು ಕಟ್ಟಿದ್ದಾರೆ. ಇನ್ನೊಂದು ಏರಿಯು ೪೦ ಅಡಿ ಎತ್ತರವಾಗಿ ಮೇಲುಗಡೆ ೧೦೦ ಅಡಿ ಅಗವಾಗಿದೆ ಏರಿಯ ಮೇಲೆ ಭೋಪಾಲದಿಂದ ಕಲಿಯಖೋರಿಗೆ ದೊಡ್ಡ ರಸ್ತೆಯು ಹೋಗುತ್ತದೆ. ಎತ್ತರವಾದ ಏರಿಯನ್ನು ಕೆಲವು ಶತಮಾನಗಳ ಮೇಲೆ ಒಡೆದು ಕೆರೆಯ ಅಂಗಳವನ್ನು ಸಾಗುವಳಿಗೆ ಕೊಡಲಾಯಿತು. ಏರಿಯನ್ನು ನೆಲಸಮ ಮಾಡುವುದಕ್ಕೆ ೩ ವರ್ಷವೂ, ಅಲ್ಲಿ ಜನರು ವಾಸಮಾಡುವ ಹಾಗೆ ಮಾಡುವುದಕ್ಕೆ ೩೦ ವರ್ಷವೂ ಹಿಡಿಯಿತು. ಆ ಪ್ರಾಂತದಲ್ಲಿ ಒಂದು ನಾಣ್ನುಡಿಯಿದೆ: "ಸರೋವರವೆಂದರೆ ಭೂಪಾಲ್ ಸರೋವರವೊಂದೇ. ಉಳಿದುವೆಲ್ಲಾ ಸಣ್ಣ ಕಟ್ಟೆಗಳು." ಕೋಡಿಯನ್ನು ಪೂರ್ವ ದಿಕ್ಕಿನ ತಗ್ಗಾದ ಗುಡ್ಡದಲ್ಲಿ ಹುಟ್ಟುಬಂಡೆಯಲ್ಲಿ ಕೊರೆದು ಕಟ್ಟಿದ್ದಾರೆ. ಇದು ಕೆರೆಗೆ ಬಹಳ ದೂರದಲ್ಲಿದ್ದರೂ ಸರಿಯಾದ ಮಟ್ಟದಲ್ಲಿದೆ. ಈಗಿನ ಹಾಗೆ ಮಟ್ಟಗಳನ್ನು ಅಳತೆಮಾಡುವ ಉಪಕರಣಗಳಿಲ್ಲದ ಕಾಲದಲ್ಲಿಯೂ ಹೇಗೆ ಈ ಜನ ಇಷ್ಟು ಕರಾರುವಾಕಾ ಕೆಲಸ ಮಾಡಿದರೆಂದು ನೋಡಿದರೆ ಆಶ್ಚರ್ಯವಾಗುತ್ತದೆ.

ಕ್ರಿ. ಶ. ಎಂಟನೆಯ ಶತಮಾನದಲ್ಲಿ (೧)ಉತ್ತರ ಆರ್ಕಾಟ್ ಜಿಲ್ಲೆಯಲ್ಲಿ ಗುಡಿಮಲ್ಲ ಕೆರೆ (೨) ಸೇಲಂ ಜಿಲ್ಲೆಯಲ್ಲಿ ಧರ್ಮಪುರಿ ಕೆರೆಗಳು ನಿರ್ಮಾಣವಾದವು.

ಒಂಬತ್ತನೆಯ ಶತಮಾನದಲ್ಲಿ (೧) ಅರಕೋಣಂ ಬಳಿ ತಾಂಡಲಂ ಕೆರೆ (೨) ಆರ್ಕಾಟ್ ತಾಲ್ಲೂಕಿನಲ್ಲಿ ಉಕ್ಕಲ್ ಕೆರೆ (೩) ವೆಲ್ಲೋರಿನ ಹತ್ತಿರ ಸೋಲಾಪುರದ ಬಳಿ ಕನಕವಲ್ಲಿಯೇರಿ, ಪಕ್ಕದಲ್ಲಿ ವಿಷ್ಣುದೇವಾಲಯ (೪) ಚಿತ್ರಮೇಗತಟಾಕ—ಇವು ಮುಖ್ಯವಾದವು.

ಹತ್ತನೆಯ ಶತಮಾನದಲ್ಲಿ (೧) ಮೈಸೂರು ದೇಶದಲ್ಲಿ ಚಿಕ್ಕಬಳ್ಳಾಪುರದ ದೊಡ್ಡ ಕೆರೆ (೨) ಉತ್ತರ ಆರ್ಕಾಟ್ ಜಿಲ್ಲೆಯಲ್ಲಿ ಚೋಳವಾರಿಧಿ (೩) ಜಾಲಾರ್‌ಪೇಟೆ—ಕಾಟ್ಪಾಡಿ ರೈಲ್ವೆದಾರಿಯಲ್ಲಿ ಆಂಬೂರು ನಿಲ್ದಾಣದ ಬಳಿ ವಿನಮಂಗಲಂ ಕೆರೆ (೪) ಉತ್ತರ ಆರ್ಕಾಟ್ ಜಿಲ್ಲೆಯಲ್ಲಿ ವೀರನಾರಾಯಣತಟಾಕ (೫) ತಿರುಚಿರಪಲ್ಲಿ ಜಿಲ್ಲೆಯಲ್ಲಿ ನಂಗಾವರಂ ಕೆರೆ ಮತ್ತು (೬) ಪಾಂಡಿಚೆರಿಯ ಹತ್ತಿರ ಬಾಹೂರು ಕೆರೆಗಳನ್ನು ಕಟ್ಟಿದರು.

ನಮ್ಮ ಪೂರ್ವಿಕರಿಗೆ ದೇವಸ್ಥಾನಗಳ ವಾಸ್ತುಶಿಲ್ಪದಲ್ಲಿಯೂ ನೀರಾವರಿ ಕೆಲಸಗಳ ನಿರ್ಮಾಣದಲ್ಲಿಯೂ ಅಸಾಮಾನ್ಯವಾದ ಪ್ರತಿಭೆಯಿತ್ತು. ಅವರು ಬಹಳ ಹಿಂದೆ ನಿರ್ವಹಿಸಿದ ಎಷ್ಟೋ ಕೆಲಸಗಳು ಕಲ್ಪನೆಯಲ್ಲಿ ಆಧುನಿಕ ರೀತಿಯಲ್ಲಿವೆ. ಮೈಸೂರು ಜಿಲ್ಲೆಯಲ್ಲಿ ಲಕ್ಷ್ಮಣತೀರ್ಥ ನದಿಯಿಂದ ಹೊರಡುವ ಹನಗೋಡು ನಾಲೆಯು ಲಕ್ಷ್ಮಣತೀರ್ಥಕ್ಕೂ ಕಪಿನಿ ನದಿಗೂ ನಡುವೆ ಇರುವ ನೀರನೆತ್ತಿಯನ್ನು ದಾಟಿ ಕಪಿನಿ ನದಿಯ ಕಣಿವೆಯಲ್ಲಿ ವಿಶಾಲವಾದ ಬಯಲುಗಳಿಗೆ ನೀರನ್ನು ಒದಗಿಸುತ್ತದೆ. ಈಚೆಗೆ ನಿರ್ಮಾಣವಾದ ಕೃಷ್ಣರಾಜಸಾಗರದಿಂದ ಹೊರಡುವ ವಿಶ್ವೇಶ್ವರಯ್ಯನಾಲೆಯು ಕಾವೇರಿಗೂ ಶಿಂಷಾನದಿಗೂ ಮಧ್ಯೆ ಇರುವ ದಿಣ್ಣೆಯನ್ನು ಹುಲಿಕೆರೆಯ ಸುರಂಗದ ಮೂಲಕ ದಾಟಿ ಅಲ್ಲಿನ ಗದ್ದೆಗಳಿಗೆ ನೀರನ್ನು ಒಯ್ಯುತ್ತದೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ವೇದ ಮತ್ತು ಆವತಿ ನದಿಗಳಿಗೆ ಅಡ್ಡಲಾಗಿ ಬಹಳ ಹಿಂದೆ ಕಟ್ಟಿದ ಅಯ್ಯನಕೆರೆ ಮತ್ತು ಮದಗದ ಕೆರೆಗಳಲ್ಲಿ ಬೆಟ್ಟಗಳ ಹತ್ತಿರ ನೀರನ್ನು ಕೂಡಿಹಾಕಿ ಅದನ್ನು

ಮಿತವ್ಯಯದಿಂದ ಒಳಸುತ್ತಿದ್ದಾರೆ. ಆ ನದಿಗಳಲ್ಲಿ ಒಂದರ ಕೆಳಗೆ ಒಂದು ಕಲ್ಲುಗಾರೆಯ ಅಣೆಕಟ್ಟನ್ನು ಕಟ್ಟಿ ಮೇಲಿನ ಗದ್ದೆಗಳಿಂದ ಒರುವ ಜೀಳುನೀರನ್ನು ಮತ್ತೆ ಮತ್ತೆ ಉಪಯೋಗಿಸುತ್ತಿದ್ದಾರೆ. ಈಚೆಗೆ ಬಂಗಾಳದಲ್ಲಿ ದಾಮೋದರ ನದಿಯ ಕಣಿವೆಯಲ್ಲಿಯೂ ಹೀಗೆ ಒಂದರ ಕೆಳಗೆ ಒಂದು ಕಟ್ಟೆಯನ್ನು ಕಟ್ಟಿದ್ದಾರೆ.

ಮೈಸೂರು ಜಿಲ್ಲೆಯಲ್ಲಿ ಕಾವೇರಿ ನದಿಗೆ ಅಡ್ಡಲಾಗಿ ಕೃಷ್ಣರಾಜಸಾಗರದ ಮೇಲುಗಡೆ ಪೂರ್ವಕಾಲದಲ್ಲಿ ಕಟ್ಟಿದ ಮಿರ್ಲೆ ಅಣೆಕಟ್ಟಿನಿಂದ ಹೊರಡುವ ದೊಡ್ಡ ನಾಲೆಯ ಕೆಳಗಡೆ ಒಂದರ ಕೆಳಗೆ ಒಂದರಂತೆ ಸಮಾನಾಂತರವಾಗಿ (Parallel) ಏಳು ನಾಲೆಗಳನ್ನು ಅನುಕೂಲವಾದ ಜಾಗದಲ್ಲಿ ತೋಡಿ ಮೇಲಿನ ಗದ್ದೆಗಳ ಜೀಳುನೀರನ್ನು ಕೆಳಗಿನ ನಾಲೆಯಲ್ಲಿ ಹಿಡಿದು ಮತ್ತೆ ಮತ್ತೆ ಉಪಯೋಗಿಸುತ್ತಿದ್ದಾರೆ.

ಮೈಸೂರು ಜಿಲ್ಲೆಯ ನಾಗಮಂಗಲದ ಹತ್ತಿರ ಇರುವ ಸೂಳೆಕೆರೆಗೆ ತನ್ನ ಜಲಾನಯನ ಭೂಮಿಯಿಂದ ಸಾಕಷ್ಟು ನೀರು ಬರುವುದಿಲ್ಲ. ಆ ಪ್ರದೇಶದಲ್ಲಿ ಮಳೆಯೇ ಕಡಿಮೆ. ಅದಕ್ಕಾಗಿ ಪಕ್ಕದ ಜಲಾನಯನ ಭೂಮಿಯಲ್ಲಿ ಉಪಯೋಗವಾಗದೆ ಉಳಿದ ನೀರನ್ನು ಪೋಷಕ ನಾಲೆಗಳ (Feeder Channels) ಮುಲಕ ಈ ಕೆರೆಗೆ ತಂದಿದ್ದಾರೆ. ಈ ವಿಧಾನವನ್ನು ಅತ್ಯಾಧುನಿಕವಾದ ನೀರಾವರಿ ಕ್ರಮಗಳಲ್ಲಿ ಈಗ ಬಳಸುತ್ತಿದ್ದಾರೆ.

## ನಾಲೆಗಳು

೧. **ದಕ್ಷಿಣ ಭಾರತ**—ತಿರುಚಿರಪಳ್ಳಿಯ ಹತ್ತಿರ ಉಯ್ಯಗೊಂಡನ್ ನಾಲೆಯನ್ನು (೯೮೫-೧೦೧೪) ಚೋಳವಂಶದ ಮೊದಲನೆಯ ರಾಜರಾಜನು ಅಗೆಸಿದನು. ಇದು ಕಾವೇರಿ ನದಿಯಿಂದ ಹೊರಟು ತಿರುಚಿರಪಳ್ಳಿ ನಗರದೊಳಗೆ ಹಾದು ಪಶ್ಚಿಮಕ್ಕೆ ಹತ್ತು ಮೈಲಿ ದೂರದಲ್ಲಿರುವ ವಳವಂದನ್‌ಕೊಟ್ಟೈ ಎಂಬ ಹಳ್ಳಿಯ ಹತ್ತಿರ ಇರುವ ದೊಡ್ಡಕೆರೆಗೆ ಜೀಳುತ್ತದೆ. ಈ ನಾಲೆಯ ತೂಬಿನ ಹತ್ತಿರ ಎರಡು ಶಾಸನಗಳಿವೆ. ಒಂದರಲ್ಲಿ ಕ್ರಿ. ಶ. ೧೨೦೫ ರಲ್ಲಿ ಚೋಳ ರಾಜನಾದ ಮೂರನೆಯ ಕುಲೋತ್ತುಂಗನ ಕಾಲದಲ್ಲಿ ನಾಲೆಗೆ ಮಾಡಿಸಿದ ರಿಪೇರಿಯ ವಿಚಾರವಾಗಿ ಬರೆದಿದೆ.

ವಿಜಯನಗರದ ಮೊದಲನೆಯ ದೇವರಾಜನ ಕಾಲದಲ್ಲಿ ಹರಿದ್ರಾನದಿಗೆ ಅಡ್ಡಲಾಗಿ ಹಿಂದೆ ಕಟ್ಟಿದ್ದ ಅಣೆಕಟ್ಟಿನಿಂದ ನಾಲೆಯನ್ನು ತೆಗೆದಿದ್ದರು. ಕೆಲವು ಕಾಲದ ಮೇಲೆ ಈ ಅಣೆಕಟ್ಟು ಒಡೆದುಹೋಯಿತು. ಇದರ ರಿಪೇರಿಯು ಹಿಡುವಳಿದಾರರ ಅನುಕೂಲವನ್ನು ಮೀರಿತ್ತು. ಕ್ರಿ. ಶ. ೧೪೨೪ ರಲ್ಲಿ ಒಬ್ಬ ದಂಡನಾಯಕನು ಅದನ್ನು ಸರಿಮಾಡಿಸಿ ಅದರ ನೀರಿನ ಆಸರೆಯಿಂದ ಬದುಕಿಕೊಂಡಿದ್ದ ದ್ವಿಜರಿಗೂ ದೇವಸ್ಥಾನಕ್ಕೂ ಅನುಕೂಲವನ್ನು ಮಾಡಿಕೊಟ್ಟು ಅನಂತ ಪುಣ್ಯವನ್ನು ಸಂಪಾದಿಸಿದನು.

೨. **ಉತ್ತರ ಭಾರತದ ನಾಲೆಗಳು**—ಉತ್ತರ ಭಾರತದಲ್ಲಿ ಮಟ್ಟವಾದ ಗಂಗಾನದಿಯ ಬಯಲಿನಲ್ಲಿ ಕೆರೆಗಳಿಗೆ ಅವಕಾಶವೇ ಇಲ್ಲ. ಇಲ್ಲಿ ಹೊಳೆಗಳಿಗೆ ಅಡ್ಡಲಾಗಿ ತಗ್ಗಾದ ಅಣೆಕಟ್ಟುಗಳನ್ನು ಕಟ್ಟಿ ನಾಲೆಗಳನ್ನು ಎಷ್ಟುದೂರ ಬೇಕಾದರೂ ಒಯ್ದು ವಿಶಾಲವಾದ ಮೈದಾನಗಳಿಗೆ ನೀರನ್ನು ಒದಗಿಸಬಹುದು. ಇಲ್ಲಿ ಇರುವ ಇನ್ನೊಂದು ಅನುಕೂಲವೆಂದರೆ ಹೊಳೆಗಳಿಗೆ ಬೇಸಿಗೆಯಲ್ಲಿ ಹಿಮಾಲಯದಲ್ಲಿನ ಮಂಜು ಕರಗಿ ನೀರು ಬರುವುದರಿಂದ ವರ್ಷವೆಲ್ಲಾ ನೀರಿರುತ್ತದೆ. ಮೊದಲು ಸಿಂಧೂನದಿಯಿಂದ ಹೊಳೆಗೆ ಅಡ್ಡಲಾಗಿ ಅಣೆಕಟ್ಟೇ ಇಲ್ಲದೆ ಪ್ರವಾಹದ ನೀರನ್ನು ಮಳೆಗಾಲದಲ್ಲಿ ಮೂರು ನಾಲ್ಕು ತಿಂಗಳ ಕಾಲ ನಾಲೆಗಳಿಂದ (Inundation canals) ನೇರವಾಗಿ ಬಯಲುಗಳಿಗೆ ಸಾಗಿಸಿ ಸಾವಿರಾರು ಎಕರೆಗಳಿಗೆ ನೀರನ್ನು ಸಾಗಿಸುತ್ತಿದ್ದರು. ಈಚೆಗೆ ಎಲ್ಲಾ ಕಡೆಗಳಲ್ಲಿಯೂ ಅಣೆಕಟ್ಟುಗಳಿಂದ ನಾಲೆಗಳನ್ನು ಒಯ್ಯುತ್ತಿದ್ದಾರೆ.

ಡೆಲ್ಲಿಯ ಹತ್ತಿರ ಅನಕ್‌ಪುರದ ಒಂದು ತಟಾಕವನ್ನು ಎರಡನೆಯ ಅನಂಗಪಾಲನು

11976



ಕ್ರಿ. ಶ. ೧೦೫೧ ರಲ್ಲಿ ಕಟ್ಟಿಸಿದನು. ಕಲ್ಲಿನ ಏರಿಯನ್ನು ೨೮೯ ಅಡಿ ಅಗಲವಾದ ಆಳವಾದ ಹಳ್ಳಕ್ಕೆ ಅಡ್ಡಲಾಗಿ ಕಟ್ಟಿದೆ. ಏರಿಯು ತಳದಲ್ಲಿ ೧೫೦ ಅಡಿ ಅಗಲವಾಗಿದೆ. ತಳದಲ್ಲಿ ಮೂರು ಕೆಳಗಾಲುವೆಗಳಿಂದ (Culverts) ನೀರನ್ನು ಕಲ್ಲಿನ ಕಟ್ಟೆಯ ಮೂಲಕ ನೀರಾವರಿಗೆ ತೆಗೆದು ಕೊಂಡು ಹೋಗಿದ್ದಾರೆ.

ಡೆಲ್ಲಿಯ ಹತ್ತಿರವೇ ಒಂದು ಉಪನದಿಗೆ ಅಡ್ಡಲಾಗಿ ಗಯಾಸುದ್ದೀನ್ ತೊಗಲಕನ ಕಾಲದಲ್ಲಿ (೧೩೨೦-೨೮) ಸಾತ್ಪುಲ್ಲ ಕಲ್ಲಿನ ಕಟ್ಟೆಯನ್ನು ಕಟ್ಟಿ ನೀರನ್ನು ನೀರಾವರಿಗೆ ಸಾಗಿಸಿದ್ದರು.

ಯಮುನಾ ನದಿಯ ಬಲದಡದಲ್ಲಿ ೧೪ ನೆಯ ಶತಮಾನದಲ್ಲಿ ಫಿರೋಸ್‌ಷಾ ತೊಗಲಕನ ಕಾಲದಲ್ಲಿ ಒಂದು ನಾಲೆಯನ್ನು ೧೫೦ ಮೈಲಿ ದೂರ ಹಿಸ್ಸಾರಿಸವರೆಗೂ ತೆಗೆದುಕೊಂಡು ಹೋಗಿದ್ದರು. ಅಕ್ಬರ್‌ಚಕ್ರವರ್ತಿಯು ಈ ನಾಲೆಯನ್ನು ರಿಪೇರಿ ಮಾಡಿಸಿದ್ದನು. ಮತ್ತೆ ಷಾಜಹಾನ್ ೧೬೪೭ ರಲ್ಲಿ ನಾಲೆಯನ್ನು ರಿಪೇರಿಮಾಡಿ ಮುಂದುವರಿಸಿ ಡಿಲ್ಲಿಯವರೆಗೂ ಒಯ್ದನು.

ಯಮುನಾ ನದಿಯ ಎಡದಡದ ನಾಲೆಯನ್ನು ೧೮ ನೆಯ ಶತಮಾನದಲ್ಲಿ ತೋಡಿದರು. ಒಬ್ಬ ರೋಹಿಲರಾಜನು ನಾಲೆಯ ಮೇಲೆ ಕಲ್ಲುಗಾರೆಯ ಕಟ್ಟಡಗಳನ್ನು ಕಟ್ಟಿ ರಿಪೇರಿಮಾಡಿಸಿ ಸಹರನ್‌ಪುರದ ಕೆಳಕ್ಕೂ ನೀರನ್ನು ಒಯ್ದನು.

ಪಂಜಾಬಿನಲ್ಲಿ ರಾವಿ ನದಿಯಿಂದ ೧೭ ನೆಯ ಶತಮಾನದಲ್ಲಿ ಹಸ್ಲಿ ನಾಲೆಯನ್ನು ೧೩೦ ಮೈಲಿ ದೂರ ಲಾಹೋರ್ ನಗರದವರೆಗೂ ತೆಗೆದುಕೊಂಡು ಹೋಗಿದ್ದರು. ಈ ಜಾಡಿನ ಮೇಲೆ ಈಗ ಬಾರಿ ದೋಆಬ್ ನಾಲೆಯು ಹರಿಯುತ್ತಿದೆ.

ಗಂಗಾ, ಮಹಾನದಿ, ಗೋದಾವರಿ, ಕೃಷ್ಣಾ—ಈ ನದಿಗಳಿಗೆ ಅಣೆಕಟ್ಟುಗಳನ್ನು ಈಚೆಗೆ ೧೯ ನೆಯ ಶತಮಾನದಲ್ಲಿ ಬ್ರಿಟಿಷ್ ಇಂಜಿನಿಯರುಗಳು ಕಟ್ಟಿದರು. ದೊಡ್ಡ ನದಿಗಳಿಗೆ ಅಡ್ಡಲಾಗಿ ಪೆರಿಯಾರ್ ಕಟ್ಟೆ, ಮಾರಿಕಣಿವೆಯ ಕಟ್ಟೆ (ವಾಣೀವಿಲಾಸ ಸಾಗರ) ಇಂಥ ಎತ್ತರವಾದ ಕಲ್ಲುಗಾರೆಯ ಕಟ್ಟೆಗಳು (Dams) ನಿರ್ಮಾಣವಾದದ್ದೂ ೧೯ ನೆಯ ಶತಮಾನದ ಕೊನೆಯಲ್ಲಿ. ಈ ಶತಮಾನದಲ್ಲಿ ಕಲ್ಲುಗಾರೆಯಿಂದಲೂ ಸಿಮೆಂಟ್ ಕಾಂಕ್ರೀಟಿನಿಂದಲೂ ಇನ್ನೂ ಎತ್ತರವಾದ ಕಟ್ಟೆಗಳನ್ನು ಕಟ್ಟಿ ನೀರಾವರಿಯೇ ಅಲ್ಲದೆ ವಿದ್ಯುತ್ತಿನ ಉತ್ಪತ್ತಿ, ನೀರಿನ ಸರಬರಾಜು, ಪ್ರವಾಹ ನಿಯಂತ್ರಣ, ಜಲಸಂಚಾರ ಮೊದಲಾದ ಉದ್ದೇಶಗಳಿಗೂ ಬಳಸುತ್ತಿದ್ದಾರೆ.

## ನೀರಾವರಿ ಕೆಲಸಗಳ ಸಂಸ್ಥಿತಿ (Maintenance) ಮತ್ತು ರಿಪೇರಿ

ಕೆರೆಗಳು, ಕಟ್ಟೆಗಳು, ತೂಬುಗಳು, ನಾಲೆಗಳು—ಇವುಗಳಿಂದ ಶಾಶ್ವತವಾದ ಉಪಯೋಗ ವಾಗಬೇಕಾದರೆ ಅವು ಕೆಡದಂತೆ ನೋಡಿಕೊಳ್ಳಬೇಕು. ಅಕಸ್ಮಾತ್ ಕೆಟ್ಟಾಗ ಕೂಡಲೆ ರಿಪೇರಿ ಮಾಡಬೇಕು. ಕೆರೆಗಳಲ್ಲಿ ತುಂಬಿಕೊಳ್ಳುವ ಹೂಳುಮಣ್ಣನ್ನು ತೆಗೆಯುವುದಕ್ಕ ದೋಣಿ ಗಳನ್ನು ಉಪಯೋಗಿಸುತ್ತಿದ್ದರು. ಇದಕ್ಕಾಗಿ ಶ್ರೀಮಂತರು ದತ್ತಿಗಳನ್ನು ಬಿಟ್ಟಿದ್ದರು. ಇವು ಪುಣ್ಯ ಕೆಲಸಗಳೆಂದು ಜನರಲ್ಲಿ ನಂಬಿಕೆಯಿರುವವರೆಗೂ ಕೆಲಸ ಸುಸೂತ್ರವಾಗಿ ನಡೆಯುತ್ತಿತ್ತು. ಆ ಮೇಲೆ ನೀರಾವರಿಯಿಂದ ಬಂದ ಉತ್ಪತ್ತಿಯ ಒಂದು ಭಾಗವನ್ನು ಈ ಕೆಲಸಕ್ಕೆ ಉಪಯೋಗಿಸುತ್ತಿದ್ದರು. ಕೆರೆಗಳಲ್ಲಿ ಹೂಳುಮಣ್ಣನ್ನು ತೆಗೆಯುವುದಕ್ಕೆ ಬೆಸ್ತರನ್ನು ನೇಮಿಸಿ ಅವರಿಗೆ ವರ್ಷ ವರ್ಷವೂ ಭತ್ತವನ್ನೂ ಹುಲ್ಲನ್ನೂ ಕೊಡುತ್ತಿದ್ದರು. ಕ್ರಿ. ಶ. ೧೩೬೭ ರಲ್ಲಿ ಮೈಸೂರು ಸೀಮೆಯ ಅರಸೀಕೆರೆ ತಾಲ್ಲೂಕಿನ ಒಂದು ಕೆರೆಯ ಬಳಿ ಬರೆಸಿದ ಶಾಸನದಲ್ಲಿ ಹೂಳು ಮಣ್ಣನ್ನು ತೆಗೆಯುವುದಕ್ಕಾಗಿ ಒಂದು ಕೋಣದ ಗಾಡಿಯನ್ನು ಗೊತ್ತುಮಾಡಿದ್ದರೆಂದೂ ಗಾಡಿಯವನಿಗೆ ಜಮೀನುಗಳ ಹಿಡುವಳಿದಾರರು ಕ್ಲುಪ್ತವಾದ ವರಮಾನವನ್ನು ಸಲ್ಲಿಸುತ್ತಿದ್ದ ರೆಂದೂ ಹೇಳಿದೆ.

ಕೆರೆ ಮತ್ತು ನಾಲೆಗಳ ರಿಪೇರಿ ಕೆಲಸವು ಇಷ್ಟು ಸುಲಭವಲ್ಲ. ಕ್ರಿ. ಶ. ೧೪೨೨ ರಲ್ಲಿ ಹರಿದ್ರಾ ನದಿಗೆ ಅಡ್ಡಲಾಗಿ ಕಟ್ಟಿದ್ದ ಕಟ್ಟೆಯು ಒಡೆದಾಗ ದೇವರಾಜನ ಮಂತ್ರಿಯು ಅದನ್ನು ಕಷ್ಟಪಟ್ಟು ಸರಮಾಡಿಸಿದನಂತೆ. ಕಾಲಕಾಲಕ್ಕೆ ನೋಡಿಕೊಳ್ಳುವವರಿಲ್ಲದೆ ಕಳೆದ ಹತ್ತು ಶತಮಾನಗಳ ಅವಧಿಯಲ್ಲಿ ಎಷ್ಟು ಪುರಾತನವಾದ ನೀರಾವರಿ ಕೆಲಸಗಳು ನಿರುಪಯೋಗವಾಗಿ ನಿರ್ನಾಮವಾಗಿವೆಯೋ !

ನೀರು ನಮಗೆ ಕುಡಿಯುವುದಕ್ಕೂ ಪೈರುಗಳನ್ನು ಬೆಳೆಯುವುದಕ್ಕೂ ಬೇಕು. ನದಿಗಳ ತೀರದಲ್ಲಿ ಭಾರತದ ಸಂಸ್ಕೃತಿಯು ಬೆಳೆದಿದೆ. ಆಸೇತುಹಿಮಾಚಲಪರ್ಯಂತ ಎಲ್ಲಾ ನದಿಗಳ ದಡದಲ್ಲಿರುವ ಪುಣ್ಯ ಕ್ಷೇತ್ರಗಳಿಗೂ ಭಾರತೀಯರೆಲ್ಲರೂ ಯಾತ್ರೆಗಾಗಿ ಹೋಗುತ್ತಾರೆ. ಪರ್ವತಗಳ ಮತ್ತು ದೇವಸ್ಥಾನಗಳ ಹಾಗೆ ನದಿಗಳೂ ಭಾರತದ ಭೂಗೋಳದ ವ್ಯತ್ಯಾಸಗಳನ್ನು ಅತಿಕ್ರಮಿಸುವಂತೆ ಮಾಡಿ ಹೊರಗಡೆ ತೋರುವ ಉಬ್ಬುತಗ್ಗುಗಳು, ವಾಯುಗುಣ, ಭಾಷೆ—ಈ ಭೇದಗಳ ಅಂತರ್ಯದಲ್ಲಿರುವ ಐಕ್ಯವನ್ನು ನಮಗೆ ಕಾಣಿಸುತ್ತವೆ. ಎಷ್ಟೋ ಶತಮಾನಗಳಿಂದಲೂ ಇವು ಭಾರತೀಯರೆಲ್ಲರ ಮೇಲೂ ಪ್ರಭಾವವನ್ನು ಬೀರಿವೆ. ಒಂದು ರೀತಿಯಲ್ಲಿ ನಮ್ಮ ದೇಶದ ಚರಿತ್ರೆಯೇ ಈ ನದಿಗಳ ನೀರನ್ನು ಕಾಲಕಾಲಕ್ಕೂ ನಾವು ಎಷ್ಟರಮಟ್ಟಿಗೆ ಉಪಯೋಗಿಸಿಕೊಂಡಿದ್ದೇವೆಯೆಂಬುದರ ಕಥೆಯಾಗಿದೆ. ನದಿಗಳನ್ನು ಹತೋಟಿಗೆ ತಂದು ನಿಸರ್ಗವನ್ನು ನಮ್ಮ ಉಪಯೋಗಕ್ಕಾಗಿ ನಮ್ಮ ಶಕ್ತಿಯಿಂದ ಬಗ್ಗಿಸುವ ದೃಷ್ಟಿಯು ಧರ್ಮಪ್ರಧಾನವಾದ ನಮ್ಮ ಸಂಸ್ಕೃತಿಗೆ ಹೇಳಿಸಿದ್ದಲ್ಲ. ನಾವು ನದಿಗಳ ಕೃಪೆಗೂ ಸಹಾಯಕ್ಕೂ ಕೃತಜ್ಞರಾಗಿ ನಮ್ರರಾಗಿ ವಂದಿಸುತ್ತೇವೆ. ಇನ್ನೂ ಹೆಚ್ಚಾದ ಸಹಾಯವನ್ನು ನಿರೀಕ್ಷಿಸಿ ನಮ್ಮ ಸಹಕಾರವನ್ನು ನೀಡುತ್ತೇವೆ. ಪ್ರಗತಿಯನ್ನು ಸಾಧಿಸುತ್ತೇವೆ.

**ಎಚ್. ಸಿ. ಕಪಿನೀಪತಿಭಟ್ಟ**

# ಕಾವ್ಯದಲ್ಲಿ ಚಿತ್ರಕಲೆ

ವಿಶ್ವದಲ್ಲಿ ಹೇಗೋ ಹಾಗೆ ಕಲಾಪ್ರಪಂಚದಲ್ಲಿ ಎರಡು ಅಂಗಗಳು ಎದ್ದು ಕಾಣುತ್ತವೆ. ಒಂದು ನಾದ; ಇನ್ನೊಂದು ರೂಪ. ಸಂಗೀತದಲ್ಲಿ ನಾದ ಮಾತ್ರ. ಉಳಿದ ಕಲೆಗಳಲ್ಲಿ—ಶಿಲ್ಪದಲ್ಲಿ, ವಾಸ್ತುಶಿಲ್ಪದಲ್ಲಿ, ವರ್ಣಶಿಲ್ಪದಲ್ಲಿ, ಸಾಹಿತ್ಯದಲ್ಲಿ—ರೂಪವೇ ಪ್ರಧಾನ. ಸಾಹಿತ್ಯದಲ್ಲಿ ವಿಶೇಷತಃ ಕಾವ್ಯದಲ್ಲಿ, ರೂಪದೊಡನೆ ಸಂಗೀತದ ಸೇರುವೆಯೂ ತೋರುತ್ತದೆ. ಕಲೆಯೆಲ್ಲಕ್ಕೂ ಸಾಧಾರಣವಾದುದು, ಕಲೆಯೆಲ್ಲದರ ಕಳೆಯಾದುದು ಸೌಂದರ್ಯ. ಸೌಂದರ್ಯ ಎದ್ದು ಕಂಡು ಬರುವುದು ರೂಪದಲ್ಲಿ. ರೂಪಸೌಂದರ್ಯದ ದರ್ಶನವಾಗುವುದು ಕಣ್ಣಿನಿಂದಾದರೂ ಆ ಕಣ್ಣಿನ ಹಿಂದೆ ಇರುವ ಚಿತ್ತ ಸೂಕ್ಷ್ಮವಾಗಿ ತನ್ನ ಕಾರ್ಯವನ್ನು ಮಾಡುತ್ತದೆ. ಚಿತ್ತಕ್ಕೆ ಸೌಂದರ್ಯದ ಸಂಪರ್ಕವು ಪುನಃ ಪುನಃ ಒದಗಿದರೆ, ಸೌಂದರ್ಯವನ್ನು ಗ್ರಹಿಸಬಲ್ಲ ಹದ ಚಿತ್ತಕ್ಕೆ ಉಂಟಾಗಿದ್ದರೆ, ಸೌಂದರ್ಯ ದೃಷ್ಟಿ ನಿರ್ಮಾಣವಾಗುತ್ತದೆ.

ಸೌಂದರ್ಯವನ್ನು ಮಾನವಜೀವನಸೌಂದರ್ಯ, ಪ್ರಕೃತಿಸೌಂದರ್ಯ ಎಂದು ಎರಡು ವಿಧವಾಗಿ ಹೇಳಬಹುದು. ಕಲಾಸೌಂದರ್ಯವು ಮಾನವಜೀವನಸೌಂದರ್ಯದಲ್ಲಿ ಸಮಾವೇಶವಾಗುತ್ತದೆ. ಕಲೆ ಮಾನವನು ಸೃಷ್ಟಿಸುವ ಸೌಂದರ್ಯವೆಂಬುದನ್ನು ಮನದಂದರೆ ಈ ಮಾತು ಮನದಟ್ಟಾಗದಿರದು. ಪ್ರಕೃತಿ ಮಾನವನ ಮೇಲೆ ಒಂದು ಪ್ರಭೆಯನ್ನು ಬೀರುತ್ತ ಬಂದಿದೆ; ಕಲೆಯತ್ತ ಆತನ ಚಿತ್ತವನ್ನು ಪ್ರೇರಿಸುತ್ತ ಬಂದಿದೆ. ಪ್ರಕೃತಿಸೌಂದರ್ಯವು ಆತನ ಕಲೆಯಲ್ಲಿ ಪ್ರತಿಬಿಂಬಿತವಾಗುತ್ತ ಬಂದಿದೆ.

ಉದಯರಾಗ, ಸಂಧ್ಯಾರಾಗ, ಮಿನುಗುವ ಚಿಕ್ಕೆ, ನಗುವ ಚಂದ್ರ, ತೇಲುವ ಮೋಡ, ಹಾರುವ ಹಕ್ಕಿ, ಹರಿಯುವ ಹೊಳೆ, ಚಲಿಸುವ ಬಳ್ಳಿ, ಮೂಡುವ ಮೊಗ್ಗು, ಅರಳುವ ಹೂವು, ರಸತುಂಬಿ ಬಣ್ಣಬೀರುವ ಹಣ್ಣು—ಒಂದೇ? ಎರಡೇ?—ಎಲ್ಲವೂ ಸೌಂದರ್ಯವನ್ನು ಕಣ್ಣಿಗೆತ್ತಿ ತೋರುವ ರೂಪಗಳು. ಅವುಗಳ ಸೌಂದರ್ಯವನ್ನು ಕಾಣಲು ಕಣ್ಣಿಗೆ—ಅದರಂತೆ ಅದರ ಹಿಂದಿನ ಹೃದಯಕ್ಕೆ—ಒಂದು ದೀಕ್ಷೆಯಾಗಿರಬೇಕು. ನಮ್ಮ ಸುತ್ತಲೂ ಸೂರೆಯಾಗಿರುವ ಚೆಲುವನ್ನು ಪ್ರತಿಫಲಿಸಲು ನಮ್ಮ ಮನವೊಂದು ಮಾನಸಸರೋವರವಾಗಿರಬೇಕು. ಸೌಂದರ್ಯ ದೃಷ್ಟಿಯಿದ್ದವನಿಗೆ ವಿಶ್ವವು ಒಂದು ಮಹಾ ಚಿತ್ರಶಾಲೆ. ಮೇಲೆ, ಕೆಳಗೆ, ಸುತ್ತು ಮುತ್ತು, ನೋಡಿದಲ್ಲೆಲ್ಲ ಚಿತ್ರ ಚೆಲ್ಲವರಿದಿವೆ. ನೆಲದ ಮೇಲೆ ತರುಲತೆಗಳ ಚಿತ್ರ, ಬೆಟ್ಟಬನಗಳ ಚಿತ್ರ, ಜಲದಲ್ಲಿ ನೊರೆತೆರೆಗಳ ಚಿತ್ರ, ಮುಗಿಲಲ್ಲಿ ಬಗೆಬಗೆಯ ಬಣ್ಣಬೆಳಕುಗಳ ಚಿತ್ರ. ಅವುಗಳ ಬೆಡಗೇನು! ಬಿನ್ನಾಣವೇನು! ವೈವಿಧ್ಯವೇನು! ವೈಖರಿಯೇನು!

ಬಿಂಬಕ್ಕಿಂತ ಪ್ರತಿಬಿಂಬ ಹೆಚ್ಚು ಸುಂದರ ಕಾಣುತ್ತದೆ. ಮೇಲೆ ಬಾನಿನಲ್ಲಿ ಬಿಳಿ ಮೋಡಗಳು ತೇಲುತ್ತ ಇವೆ ಎಂದು ಕಲ್ಪಿಸೋಣ. ಅವು ಕೆಳಗಣ ಒಂದು ಶಾಂತ ಸರೋವರದಲ್ಲಿ ಪ್ರತಿಬಿಂಬಿತವಾದಾಗ ಅವು ಹೆಚ್ಚು ಚಂದ ಕಾಣುತ್ತವೆಂಬುದಕ್ಕೆ ನಮ್ಮ ಅನುಭವವೇ ನಿದರ್ಶನ. ಹೊಳೆಯ ದಡದಲ್ಲಿ ಅಲರ ಮುಡಿದು ನಳನಳಿಸುವ ತರುಲತೆಗಳು ಅಂದವಾಗಿರುತ್ತವೆ ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಬೆಳುದಿಂಗಳ ಮಾಯೆ ಇಳೆಗೆ ಇಳಿದಾಗ ಆ ತರುಲತೆಗಳು ಕೋದ ಜಲದಲ್ಲಿ ಚೆಲ್ಲಿದ ಛಾಯೆ ಇನ್ನೂ ಮನೋಹರವಾಗಿರುತ್ತದೆ. ಶಿಲ್ಪಕಲೆಯಲ್ಲಿಯೇ ಆಗಲಿ, ಚಿತ್ರಕಲೆಯಲ್ಲಿಯೇ ಆಗಲಿ ಕಾವ್ಯಕಲೆಯಲ್ಲಿಯೇ ಆಗಲಿ ಇದೇ ರೀತಿಯ ಒಂದು ಪರಿಣಾಮ ಉಂಟಾಗುತ್ತದೆ. ಕಲೆ ಚೆಲುವನ್ನು ಇಂತೆಯೇ ಕನ್ನಡಿಸುತ್ತದೆ. ಮೂರ್ತಿಶಿಲ್ಪಿ ಶಿಲೆಯಲ್ಲಿ, ವರ್ಣಶಿಲ್ಪಿ ರೇಖಾವರ್ಣಜಾಲದಲ್ಲಿ ತಮ್ಮ ಮನವನ್ನು ಸೂರೆಗೊಂಡ ನೋಟಗಳನ್ನು ಹಿಡಿದಿಡುವಂತೆ ಕವಿ ಭಾಷೆಯ ಮಾಧ್ಯಮದಲ್ಲಿ ಚಿತ್ರಗಳನ್ನು ಬಿಡಿಸಬಲ್ಲ, ಬಿಡಿಸುತ್ತಾನೆ. ಭಾಷೆಗೊಂದು

ಭಾಸುರವಾದ ಮೋಹಿನೀ ಶಕ್ತಿಯುಂಟು. ಮಾಟಿನ ಬೆಳುದಿಂಗಳಲ್ಲಿ ಮಂಜಿನ ಹನಿ ಮುತ್ತಾಗುತ್ತದೆ, ಹುಲ್ಲಿನ ಚಪ್ಪರ ಬೆಳ್ಳಿಯ ಮಂಟಪವಾಗುತ್ತದೆ. ಸಹೃದಯರ ಹೃದಯವೀಣೆಯನ್ನು ಮೀಂಟಬಲ್ಲ ಕವಿ ಕಲ್ಲಿನಲ್ಲಿ ಕಡೆಯಲಾಗದ, ಕುಂಚಿನಿಂದ ಎಳೆಯಲಾಗದ ರೂಪಗಳನ್ನು ದೀಪಿಸಬಲ್ಲ. ನುಡಿಯಲಾಗದುದನ್ನು ಕೂಡ—ಸಂಗೀತದಂತೆ—ಸೂಚ್ಯವಾಗಿ ಸೆರೆಹಿಡಿಯಬಲ್ಲ ಕೆಳಗಣ ಪದ್ಯವನ್ನು ಗಮನಿಸಬೇಕು.

ಕರುವಿಟ್ಟಂ ಕಾಮದೇವಂ ರತಿಯತಿಶಯದಿಂ ಬಣ್ಣವಿಟ್ಟಳ್ ಬಸಂತಂ
ಬರೆದಂ ಸರ್ವಾಂಗಮಂ ಕಣ್ದೆಱೆದನೊಸೆದು ಶೀತಾಂಶು ಚೈತ್ರಾನಿಲಂ ತೀ
ವಿರೆ ಜೀವಂಬೊಯ್ದನಂತಲ್ಲದೊಡೆ ಸೊಗಯಿಪೀ ರೂಪವೀ ಬಣ್ಣವೀ ಮೈ
ಸಿರಿಯೀ ಕಣ್ಗೆಲ್ಲಮೀ ಭಾವಕಮೊಗೆಯದನಲ್ ಕಾಂತೆ ಕಣ್ಗೆಡ್ಡಮಾದಳ್

ಕಾವ್ಯದಲ್ಲಿ ಕವಿಗಳು ಚಿತ್ರಗಳನ್ನು ಅರಳಿಸಿದ ರೀತಿಗಳನ್ನು ವಿವರಿಸುವುದು ಈ ಲೇಖನದ ಗುರಿ. ಕಾವ್ಯದಲ್ಲಿ ಕಾಣಿಸಿಕೊಳ್ಳುವ ಶಬ್ದಚಿತ್ರಗಳನ್ನು ಮುಖ್ಯವಾಗಿ ಮೂರು ಗುಂಪುಗಳಾಗಿ ವಿಂಗಡಿಸಬಹುದು. ಒಂದು ವಾಸ್ತವರೀತಿ, ಇನ್ನೊಂದು ಉಪಮಾರೀತಿ, ಮೂರನೆಯದು ರೂಪಕದ ರೀತಿ—ಈ ಮೂರು ರೀತಿಗಳಿಗೆ ಅವವುಗಳ ವಿಶಿಷ್ಟವಾದ ಅಂದವುಂಟು.

ವಾಸ್ತವರೀತಿ :

ಮೊದಲು ವಾಸ್ತವರೀತಿಯನ್ನು ಪರಿಶೀಲಿಸೋಣ. ವಸ್ತುಗಳನ್ನಾಗಲಿ ಸನ್ನಿವೇಶಗಳನ್ನಾಗಲಿ ಇದ್ದಕ್ಕಿದ್ದಂತೆ ಚಿತ್ರಿಸುವುದು ವಾಸ್ತವರೀತಿ. ಕಾವ್ಯದಲ್ಲಿ ತೋರುವ ಈ ರೀತಿಯ ಚಿತ್ರಗಳು ಶಿಲ್ಪಕ್ಕೆ ಹಾಗು ವರ್ಣಶಿಲ್ಪಕ್ಕೆ ಸಂಬಂಧಿಸಿದ ಚಿತ್ರಗಳಿಗೆ ತೀರ ಹತ್ತಿರವಾದುವುಗಳು. ವಾಸ್ತವರೀತಿಯಲ್ಲಿ ಕವಿ ಚಿತ್ರಕಾರನಾಗಿ ಕಾರ್ಯಮಾಡುತ್ತಾನೆ. ಈ ರೀತಿಯಾಗಿ ಕಾವ್ಯದಲ್ಲಿ ಬಿಡಿಸಿದ ಚಿತ್ರಗಳನ್ನು ಅಲಂಕಾರಶಾಸ್ತ್ರಜ್ಞರು 'ಸ್ವಭಾವೋಕ್ತಿ'ಯಲ್ಲಿ ಸಮಾವೇಶಗೊಳಿಸುತ್ತಾರೆ. ವ್ಯಾಖ್ಯೆ ವ್ಯಾಖ್ಯಾನಗಳಿಗಿಂತ ಉದಾಹರಣೆ ಲೇಸು. ಇದು ಒಂದು ಹಂಸೆಯ ಚಿತ್ರ: ಅದು ಹಂಸೆಯ ನಿಲವನ್ನು ಎತ್ತಿತೋರಿದೆ.

ಮುಗಿದಲರ್ಗಂಗಳಿರ್ದೆಸೆಗೆ ಜೋಲ್ವ ಪತತ್ರದ ಕಾಂತಿ ಮೌನದಿಂ
ನೆಗಪಿದದೊಂದು ಕಾಲ್ ಕೊಳನೊಳೂಱಿದುದೊಂದಡಿ ಕೊಂಕುವೆತ್ತ ಮೇಣ್
ವಿಗೆ ಸುಖನಿದ್ರೆಯಂ ಬಯಸುವಾನನಮೊಪ್ಪುವ ಪೊನ್ನ ಹಂಸೆ ದಿ
ಟ್ಟಿಗೆ ಪೊಸ ಭಿತ್ತಿಯೊಳ್ ಬರೆದ ಚಿತ್ರದ ಹಂಸೆವೊಲಿರ್ದುದಾಕ್ಷಣಂ

(ಚೌಂಡರಸ ಕೃತ 'ನಳಚಂಪು')

ರಾಜಹಂಸದ ಬಗೆಗೆ ಇಲ್ಲಿದೆ ಇನ್ನೊಂದು ಚಿತ್ರ. ಮೊದಲನೆಯದು ಹಂಸೆಯ ನಡೆಯ ಬೆಡಗನ್ನು ತೋರಿದರೆ ಇದು ಅದರ ಅಂಗಾದಿಗಳ ರಂಗುರಂಗನ್ನು ಬೆಡಗಿನಲ್ಲಿ ಬಿಡಿಸಿ ತೋರಿ ಮನಂಗೊಳಿಸುವ ಚಿತ್ರ:—

ಬಟ್ಟದುವಾದ ಕಣ್ಣ ಕರಿಯಾಲಿಯ ಸುತ್ತಣ ಸಣ್ಣ ಬೆಳ್ಪು ನೇ
ರ್ಪಟ್ಟುದು ಕರ್ಬುರಚ್ಛವಿಯ ಚಂಚು ಮನಂಗೊಳಿಸಿತ್ತು ಮೈಯ ಬೆ
ಳ್ಪಿಟ್ಟಳಮಾಯ್ತು ಕಾಲ್ಗಳರಿದಾಳದ ಮೇಗಣ ಕೆಂಪಿನಕ್ಕೆಯಿಂ
ದಿಟ್ಟಿಗೆ ಬಂದುದಾರ್ ಬರೆವರಿಂತಳವಟ್ಟಿರೆ ರಾಜಹಂಸನಂ

(ನಾಗಚಂದ್ರನ 'ಮಲ್ಲಿನಾಥ ಪುರಾಣ')

"ಆರ್ ಬರೆವರಿಂತಳವಟ್ಟಿರೆ ರಾಜಹಂಸನಂ?" ಎಂದು ಕೇಳಿದ ಕವಿ ತನ್ನ ಪ್ರಶ್ನೆಗೆ ತಾನೇ ಉತ್ತರ ಕೊಟ್ಟಂತೆ ಈ ಶಬ್ದ-ಚಿತ್ರವನ್ನು ಸರಿಯಾದ ಬಣ್ಣಗಳ ಹೊಂದಿಕೆಯಲ್ಲಿ

ಸರಸವಾಗಿ ಬರೆದಿದ್ದಾನೆ. ಇನ್ನೊಂದು ಪಕ್ಷಿಯ ಚಿತ್ರವನ್ನೇ ಉದಾಹರಿಸಬಹುದಾದರೆ ತಸಿವಣ್ಣಿನ ರಸವನ್ನು ಹೀರುವ ಗಿಳಿಯ ಚಿತ್ರವನ್ನು ಕೆಳಗಣ ಪದ್ಯದಲ್ಲಿ ನೋಡಬಹುದು.

ಬಿಗಿಯಪ್ಪಿ ಮೊಗಮನಿಟ್ಟಾ
ಲಿಗಳಂ ನಸುಮುಚ್ಚಿ ಪಕ್ಷಯುಗಮೆಬಲಿ ರಸಂ-
ದೆಗೆವ ದನಿ ನಿವಿರೆ ನಾಲಗೆ
ಚಿಗುರುತ್ತಿರೆ ಸವಿದುದೊಂದು ಗಿಳಿ ತನಿವಣ್ಣಂ

(ಹರಿಹರನ 'ಗಿರಿಜಾಕಲ್ಯಾಣ')

ಹೊಸಕವನಗಳಲ್ಲಿಯೂ ಅಲ್ಲಲ್ಲಿ ವಾಸ್ತವ ಚಿತ್ರಗಳು ಸುಮನೋಹರವಾಗಿ ರೇಖಿಸಲ್ಪಟ್ಟಿವೆ. ಬೇಂದ್ರೆ ಅವರ 'ಪಾತರಗಿತ್ತಿಪಕ್ಕಾ' ಎಂಬ ಕವನವನ್ನು ಉದಾಹರಿಸಬಹುದು. ಜಲದಲ್ಲಿ ಅಲೆವ ಮೀನಿನ ಹೊಳೆವ ಚಿತ್ರ ಕೆಳಗಣ ಪದ್ಯದಲ್ಲಿದೆ.

ಪಿಳುಕಿಸದ ಸಿರಿಗಣ್ಣು ಸುತ್ತ ಚಿನ್ನದ ರೇಖೆ
ಬೆಳ್ಳಿಮಿರುಗಿನ ಮೈಯ ಕಾಂತಿ ನಿನಗೆ
ತಿಳಿಗಂಗೆ ನಿಮ್ಮವ್ವ ಮೀನಮೂರುತಿ ತಿಳಿಸೊ
ನನ್ನೊಡೆಯ ಅಡಗಿರುವನಾವ ಕಡೆಗೆ

(ಮಧುರಚೆನ್ನ : 'ನನ್ನ ನಲ್ಲ')

ಜಾನಪದ ಗೀತದಲ್ಲಿ ದೊರೆಯುವ ಮೀನಿನ ಚಿತ್ರವನ್ನು ಇದರೊಡನೆ ಸರಿಹಚ್ಚಿ ನೋಡಬೇಕು.

ಬೆಳ್ಳಗ ಬೆಳಗಾಗಿ ಬೆಳ್ಳಿ ಮೂಡಲವಾಗಿ
ಬಳ್ಳೊಳ್ಳಿ ಮೀನು ಗಂಠಗೆದು ಆಡ್ಯಾವ
ಗರತಿ-ಗಂಗಮನ ಉಡಿಯಾಗ

ಉಪಮಾರೀತಿ :

ಇನ್ನು ಉಪಮಾರೀತಿಯ ಚಿತ್ರವನ್ನು ಕುರಿತು ಉಪಮೆ ಒಂದು ಅಲಂಕಾರವೆಂಬುದನ್ನು ಬೇರೆ ಹೇಳಬೇಕಿಲ್ಲ. ಉಪಮೆ ಒಂದು ವಸ್ತುವನ್ನು ಇನ್ನೊಂದರ ಛಾಯೆಯಲ್ಲ ಚಿತ್ರಿಸುತ್ತದೆ. ಒಂದು ನೋಟ ಇನ್ನೊಂದರ ಮಿಂಚಿನಲ್ಲಿ ಮಿಸುಗುತ್ತದೆ. ವಸ್ತುಗಳ ಹೋಲಿಕೆಯನ್ನು ಕಾಣುವ ಗುಣ ನಮ್ಮ ಕಣ್ಣಿನಲ್ಲಿಯೇ ಇದೆ. ಸಾಮಾನ್ಯವಾಗಿ ಜನರ ಬಾಯಮಾತಿನಲ್ಲಿಯೂ ಹೋಲಿಕೆಯ ವಸ್ತುಗಳು ಚಿತ್ರಿತವಾಗುತ್ತವೆ. ಕೆಲವಂತೂ ಇಂಥ ಚಿತ್ರಮಯ ಶೈಲಿಯಲ್ಲಿಯೇ ಮಾತನಾಡುವುದುಂಟು. ಜಾನಪದ ಗೀತಗಳಲ್ಲಿ, ಗರತಿಯರ ಹಾಡುಗಳಲ್ಲಿ ಉಪಮಾ ಚಿತ್ರಗಳು ಎದ್ದು ಮೂಡಿದುದನ್ನು ಕಾಣಬಹುದು. ಇಂಥ ಒಂದು ಚಿತ್ರ :

ಅಳುವ ಕಂದನ ತುಟಿಯು ಹವಳದ ಕುಡಿಯಂಗ
ಕುಡಿಹುಬ್ಬು ಬೇವಿನೆಸಳಂಗ ಕಣ್ನೋಟ
ಶಿವನ ಕೈಯಲಗು ಹೊಳೆದಂಗ

ಮುದ್ದು ಮಗುವಿನ ಶುದ್ಧ ಚಿತ್ರವನ್ನು ಇದಕ್ಕೂ ಚೆನ್ನಾಗಿ ಬರೆಯಬಹುದೇ ? ನಮ್ಮ ಹಳೆ ಹೊಸ ಕಾವ್ಯಗಳಲ್ಲಿ ಉಪಮಾಚಿತ್ರಗಳು ಸಾಕಷ್ಟು ದೊರೆಯುತ್ತವೆ. ಕೆಳಗಣ ಪದ್ಯದಲ್ಲಿ ಇಂಥ

ಒಂದು ಚಿತ್ರ ಹೃದ್ಯವಾಗಿ ಮೂಡಿದೆ. ಉಪಮೆ ಉತ್ಪ್ರೇಕ್ಷೆಯ ಮಟ್ಟಕ್ಕೆ ಏರಿದಾಗಲಂತೂ ಉಪಮಾಚಿತ್ರ ಅನುಪಮವಾಗುತ್ತದೆ.

ಒಂದದ ಪಗಲಿರುಳಿರದರ
ಸಂದುಗಳಂ ವರುಣಶಿಲ್ಪಿ ರಕ್ತಾಂಬರದಿಂ
ಸಂದಿಸಿ ಪೊಲ್ದುವೊಲೆಸೆದುದು
ಮುಂದ್ಯೆಸಿದ ಸಂಜೆಗೆಂಪು ಪಡುವಣ ದೆಸೆಯೊಳ್

(ರುದ್ರಭಟ್ಟ: 'ಜಗನ್ನಾಥವಿಜಯ')

ಹಗಲು ಜಾರುತ್ತಿದೆ. ಇರುಳು ಇನ್ನೂ ಇಳೆಗೆ ಇಳಿದಿಲ್ಲ. ಹಗಲೆರಡರ ನಡುವೆ ಉಳಿಯುವ ಅವಕಾಶ ಸಂಧ್ಯಾಕಾಲ. ಏಕಕಾಲಕ್ಕೆ ಕೂಡದ ಹಗಲು ಇರುಳುಗಳನ್ನು ಸಂಜೆಯ ಮುಗಿಲು ಅರುಣಾಂಬರದಂತೆ, ಎಂದರೆ ಕೆಂಪು ಬಟ್ಟೆಯಂತೆ, ಜೋಡಿಸಿತೆಂಬ ಉಪಮೆ ಎಷ್ಟು ಸೊಗಸಾಗಿದೆ! ಇಲ್ಲಿ ಸಂಜೆಗೆ ಉಪಮೆ ಬಣ್ಣ ಬರೆದರೆ, ಉತ್ಪ್ರೇಕ್ಷೆ ಆ ಉಪಮೆಗೆ ಹೆಚ್ಚಿನ ಬಣ್ಣ ಬರೆದಿದೆ.

ನಾಗಚಂದ್ರಕವಿಯ ರಾಮಚಂದ್ರಚರಿತಪುರಾಣದಲ್ಲಿ ಒಂದೆಡೆ ಬಂದ ಸುಂದರವಾದ ಉಪಮಾಚಿತ್ರವನ್ನು ಇಲ್ಲಿ ಉದಾಹರಿಸಬಹುದು. ಸಂದರ್ಭ ಹೀಗಿದೆ: ರಾವಣೇಶ್ವರನು ತನ್ನ ಪುಷ್ಪಕ ವಿಮಾನವನ್ನೇರಿ ಆಕಾಶಮಾರ್ಗದಲ್ಲಿ ಹೋಗುತ್ತಿದ್ದಾನೆ. ಆಗ ಕೆಳಗೆ ಒಂದು ಪ್ರಕೃತಿ ರಮ್ಯ ಸ್ಥಳದಲ್ಲಿ ರಾಮಸೀತೆಯರು ಕುಳಿತಿದ್ದಾರೆ, ಸೀತೆಯ ಸೌಂದರ್ಯವನ್ನು ಮೇಲಿನಿಂದ ಕಂಡ ರಾವಣನ ಮನದ ಸ್ಥಿತಿ ಹೇಗಾಯಿತೆಂಬುದನ್ನು ಕವಿ ಒಂದು ಸುಂದರವಾದ ಸಾದೃಶ್ಯದ ಮೂಲಕ ಪರಿಣಾಮಕಾರಕವಾಗಿ ಚಿತ್ರಿಸಿದ್ದಾನೆ. ನೋಡಬೇಕು:

ತಳತಳಸಿ ಪೊಳೆಯೆ ಸೀತೆಯ
ಚಳನಯನಂ ಖಚರ ಚಕ್ರವರ್ತಿಯ ಚಿತ್ತಂ
ಕೊಳದೊಳಗೆಳವಾಳೆ ತೆಜಿಂ
ಬೊಳೆವಂತೆ ಕಲಂಕಿ ಕದಡಿದತ್ತಾ ಕ್ಷಣದೊಳ್.

ಚೆಲುವಾಗಿ ಚಲಿಸುವ ಸೀತಾದೇವಿಯ ಕಣ್ಣುಗಳನ್ನು ಮೀನುಗಳಿಗೂ ರಾವಣನ ಚಿತ್ತವನ್ನು ಆ ಮೀನುಗಳಾಡುವ ಕೊಳಕ್ಕೂ ಹೋಲಿಸಿದ ಈ ಶಬ್ದ ಚಿತ್ರ ನಮ್ಮ ಮನಃಪಟದ ಮೇಲೆ "ತೆಱಂಬೊಳೆ"ಯದಿರದು.

ಇನ್ನು ಹೊಸಗನ್ನಡ ಕವಿತೆಗಳಲ್ಲಿ ತೋರಿಬರುವ ಉಪಮಾಚಿತ್ರಗಳಲ್ಲಿ ಒಂದೆರಡನ್ನು ಇಲ್ಲಿ ಕಣ್ಣಿಗೆತ್ತಿ ಹಿಡಿಯಬಹುದು. ಮೊದಲನೆಯದಾಗಿ ಕುವೆಂಪು ಅವರ 'ಮಳೆಬಿಲ್ಲಿ'ನಲ್ಲಿ ಬಂದ ಮಳೆಬಿಲ್ಲಿನ ಚಿತ್ರ:

ನೋಡಲ್ಲಿ ಮೂಡಿಹುದು ಮುಗಿಲಿನಲಿ ಮಳೆಬಿಲ್ಲು
  ಬಾನ್ದೇವಿಯಾಂತ ಮಣಿಹಾರದಂತೆ
. . . . . . . . . . . . . . . . .
  . . . . . . . . . . . . . . . . .
ಚೆಲುವಿಕೆಯ ಚೈತನ್ಯ ಬಿಲ್ಲಾದುದೆಂಬಂತೆ
  ಮಾಯೆ ಬರೆದಿಹ ಮಧುರ ಚಿತ್ರದಂತೆ—

ರಾಜರತ್ನಂ ಅವರ 'ರತ್ನನ ಪದ'ಗಳಲ್ಲಿ 'ಪುಟ್ನಂಜೀ ರೂಪ' ಎಂಬುದು ಒಂದು ಪದ. ಅದರಲ್ಲಿ ಅರಳಿದ ಕೆಲವೊಂದು ಉಪಮಾಚಿತ್ರಗಳಲ್ಲಿ ಒಂದು ಅತ್ಯಂತ ಸುಂದರವಾಗಿದೆ. ಹೀಗಿದೆ ಆ ಚಿತ್ರ:

ಅಲ್ನಲ್ ಕಮಲದ್ ಊ ತೇಲ್ಬುಟ್ಟು
ಮೇಲ್ ಒಂದ್ ತೆಳ್ನೆ ಲೇಪ
ಚಿನ್ನದ್ ನೀರ್ನಲ್ ಕೊಟ್ಟಂಗೈತೆ—
ನನ್ ಪುಟ್ನಂಜೀ ರೂಪ.

ರೂಪಕದ ರೀತಿ:

ಉಪಮೆಗೂ ರೂಪಕಕ್ಕೂ ಹತ್ತಿರದ ಸಂಬಂಧ. ಎರಡು ಭಿನ್ನವಸ್ತುಗಳನ್ನು ಒಂದೇ ರೂಪದಲ್ಲಿ ಎತ್ತಿಹಿಡಿಯುವ ಕಾರ್ಯ ರೂಪಕದ ಕಾರ್ಯ. ರೂಪಕ ಎಂಬ ಹೆಸರು ಬಂದುದು ಇದಕ್ಕಾಗಿಯೇ. ಉಪಮೆಯಲ್ಲಿ ಬಿಚ್ಚಿ ಹೇಳುವ ಹೋಲಿಕೆ ರೂಪಕದಲ್ಲಿ ಸೂಚ್ಯವಾಗಿರುತ್ತದೆ. ಆದುದರಿಂದ ಉಪಮೆಗಿಂತ ರೂಪಕದಲ್ಲಿ ಸೊಗಸು ಹೆಚ್ಚು. ಆದುದರಿಂದ ಉಪಮಾಚಿತ್ರಕ್ಕಿಂತ ರೂಪಕ ಚಿತ್ರ ಹೆಚ್ಚು ಮನೋಹರವಾದುದು. ರೂಪಕದಲ್ಲಿ ದೀಪಕಶಕ್ತಿ ಇರುತ್ತದೆ. ಅದರಿಂದಾಗಿ ವಸ್ತುಗಳಾಗಲಿ ಜೀವನಾನುಭವಗಳಾಗಲಿ ಥಳ್ಳನೆ ಹೊಳೆದು ತಮ್ಮ ಸ್ವಾರಸ್ಯವನ್ನು ಬೆಳಗುತ್ತವೆ. ರೂಪಕಚಿತ್ರಕ್ಕೆ ಹಳಗನ್ನಡ ಕಾವ್ಯದಿಂದ ಒಂದು ಉದಾಹರಣೆ:

ಗಿಳಿಯ ಹಸುಗೂಸು ಮಾವಿನ
ಸೆಳೆಗೊಂಬಿನ ತಳಿರ ತೊಟ್ಟಿಲೊಳಗಟುತಿರೆ ಕಂ
ಡಳಿನಿವಹಮುಟ್ಕಿಱಿಂ ಜೋ
ಗುಳಮಂ ಪಾಡುವುವು ತೂಗಿದುದು ಗಂಧವಹಂ

ಗಿಳಿಯಮರಿ ಒಂದು ಹಸುಗೂಸಂತೆ. ಮಾವಿನ ತಳಿರ್‌ತೊಂಗಲು ಅದರ ತೊಟ್ಟಿಲಂತೆ. ಅದರಲ್ಲಿ ಪಟ್ಟ ಕೂಸು ಅಳಲು ಭ್ರಮರಗಳು ಹಾಡಿ ಸಂತೈಸುವವಂತೆ. ಸುಳಿಗಾಳಿ ತೊಟ್ಟಿಲನ್ನು ತೂಗುವದಂತೆ. ತುಂಬ ಚೆನ್ನಾಗಿಲ್ಲವೇ ಈ ರೂಪಕ ಚಿತ್ರ!

ಕೆಲವೊಂದು ವಚನಗಳಲ್ಲಿ ಅನುಭವವು ರೂಪಕದಲ್ಲಿ ದೀಪ್ತವಾದುದನ್ನು ಕಾಣುತ್ತೇವೆ. ಒಂದು ಉದಾಹರಣೆ:

"ತನುವೆಂಬ ಏರಿಗೆ ಮನವೆಂಬ ಕಟ್ಟೆಯ ಕಟ್ಟಿ ಆಚಾರವೆಂಬ ಸೋಪಾನದಿಂದ ಪರಮಾನಂದವೆಂಬ ಜಲವ ತುಂಬಿ ಕೆರೆಯ ಕಟ್ಟಬಲ್ಲವರನಾರೆಯೂ ಕಾಣೆ. ನಾನು ಕಟ್ಟದ ಕೆರೆ ಸ್ಥಿರವಾಯಿತು ಗುಹೇಶ್ವರಾ ನಿಮ್ಮಾಣೆ."

ಹೊಸಗನ್ನಡ ಕವನಗಳಲ್ಲಿ ಅಳವಟ್ಟ ಅನೇಕ ರೂಪಕಚಿತ್ರಗಳಲ್ಲಿ ಒಂದೆರಡನ್ನು ಇಲ್ಲಿ ಪ್ರದರ್ಶಿಸಿದರೆ ಸಾಕು.

ಮೂಡಲ ಮನೆಯಾ ಮುತ್ತಿನ ನೀರಿನ
ಎರಕವ ಹೊಯ್ದಾ
ನುಣ್ಣನ್ನೆರಕವ ಹೊಯ್ದು
ಬಾಗಿಲ ತೆರೆದು ಬೆಳಕೂ ಹರಿದು
ಜಗವೆಲ್ಲಾ ತೊಯ್ದಾ
ಹೊಯ್ತೋ ಜಗವೆಲ್ಲಾ ತೊಯ್ದಾ

(ಅಂಬಿಕಾತನಯದತ್ತ: 'ಬೆಳಗು')

ಗಾಳಿ ಬೆರಳು ಮೋಡದ ಮುಸು
ಕನ್ನು ಮೆಲನೆ ಸರಿಸಿರೆ
ಮಡುಗಟ್ಟದ ಮಂದಹಾಸ
ಜಲಕ್ಕನೆಯೆ ಜಾರಿರೆ
ಬಾಸಿಂಗವ ಸೂಡಿಕೊಂಡು
ಗುಡಿಯ ಬೆಟ್ಟ ನಿಂದಿರೆ
ಹದುಗಿ ಹರಿವ ಗುಟ್ಟನಂತೆ
ಹಸುರಿಗೆ ಪಿಸುಮಾತನೊರೆದು
ನುಸುಳುತಿರಲು ಕಾಲುವೆ
ತೆಕ್ಕನೊಂದು ಚೆಲುವಿನ ಪುಟ
ಕಣ್ಣೆದುರಿಗೆ ತೆರೆದಿದೆ.

—ಜಿ. ಎಸ್. ಶಿವರುದ್ರಪ್ಪ : 'ಚೆಲುವಿನ ಪುಟ'
('ದೇವಶಿಲ್ಪ'ದಿಂದ)

ಎರಡೆರಡೇ ಸಾಲುಗಳಲ್ಲಿ ಲೀಲಾಜಾಲವಾಗಿ ಚಿತ್ರಗಳನ್ನು ತೆರೆಯುವ ರೂಪಕಗಳಲ್ಲಿ ಕೆಲವನ್ನು ಇಲ್ಲಿ ಉದ್ಧರಿಸದಿರಲಾರೆ.

೧. "ಹಸಿರಿನುಯ್ಯಾಲೆಯಲಿ
ಬಿಸಿಲು ತೂಗಾಡುತಿದೆ"

೨. "ಹೃದಯಮಂದಿರದಲ್ಲಿ ಮಧುರಪ್ರಾಣೇಶನಿಗೆ
ಪ್ರಣಯದಾರತಿ ಪೂಜೆಯಾಗುತಿದೆ ಬಾ"

೩. "ನಮ್ಮೂರು ಚೆಂದವೋ ನಿಮ್ಮೂರು ಚೆಂದವೋ
ಎಂದೆನ್ನ ಕೇಳಲೇಕೆ
ನಮ್ಮೂರ ಮಂಚದಲಿ ನಿಮ್ಮೂರ ಕನಸಿದನು
ವಿಸ್ತರಿಸಿ ಹೇಳಬೇಕೇ"

—ಕೆ. ಎಸ್. ನರಸಿಂಹಸ್ವಾಮಿ ('ಮೈಸೂರು ಮಲ್ಲಿಗೆ'ಯಿಂದ)

ಜಾನಪದ ಗೀತಗಳಲ್ಲಿ, ಅದರಲ್ಲಿಯೂ ಗರತಿಯ ಹಾಡುಗಳಲ್ಲಿ, ರೂಪಕಚಿತ್ರಗಳು ಚೆಲುವಾಗಿ ಚೆಲ್ಲವರಿದುದನ್ನು ಕಾಣಬಹುದು. ಅವುಗಳಲ್ಲಿ ಒಂದೊಂದೇ ಸಾಲು ತೆರೆದು ತೋರುವ ಚಿತ್ರಗಳನ್ನು ಕಂಡು ತಲೆದೂಗದವರಾರು?

೧ "ಯಾರ ಮಗಳವ್ವ ನೀ ಎರಳಿ ನೋಟದ ಗೊಂಬಿ?"
೨ "ಕಮಳದ ಹೂ ನಿನ್ನ ಕಾಣದ ಇರಲಾರೆ"
೩ "ಚೆಂದರಾಮನ ಚಿಕ್ಕಿ ಇಂಬಾಗಿ ಇರಲೆವ್ವ"
೪ "ಮಗಳು ಮಾತಿನ ಗಿಳಿಯು ಸೊಸೆಯು ಸೂತರಗೊಂಬಿ"
೫ "ಅತ್ತರ ಕಂದನ ಮುತ್ಯಾಕ ಉದುರ್ಯಾವ"
೬ "ಮಲ್ಲಿಗಿಹೂವೆ ನೀ ಇಲ್ಯಾಕ ನಿಂತಿದ್ದೆ"
೭ "ತೊಟ್ಟಿಲದಾಗೊಂದು ತೊಳೆದ ಮುತ್ತನು ಕಂಡೆ"

ತೊಳೆದ ಮುತ್ತನ್ನು ಕಂಡಮೇಲೆ ಮತ್ತಿನ್ನೇನು ಬೇಕು. ಇಷ್ಟಕ್ಕೆ ಸಾಕು.

ಡಿ. ಎಸ್. ಕರ್ಕಿ

# ವಡ್ಡಾರಾಧನೆಕಾರನ ಕಾಲ, ದೇಶ

ಸುಮಾರು ಒಂದು ಸಾವಿರ ವರುಷಗಳವರೆಗೆ ಕಾಲಗರ್ಭದಲ್ಲಡಗಿದ, ಇತ್ತೀಚೆ ಶ್ರೀ ಡಿ. ಎಲ್. ನರಸಿಂಹಾಚಾರ್ಯರವರಿಂದ ಪ್ರಕಟವಾದ ವಡ್ಡಾರಾಧನೆಯೆಂಬ ಗ್ರಂಥವನ್ನು ರಚಿಸಿದ ಶಿವಕೋಟ್ಯಾಚಾರ್ಯರ ಬಗೆಗೆ ಕನ್ನಡಸಾಹಿತಿಗಳ ಕುತೂಹಲವು ಕೆರಳಿ ನಿಂತಿದೆ. ಆತನ ಕಾಲನಿರ್ಣಯವನ್ನುಳಿದು ಮತ್ತಾವ ವಿಷಯವೂ ಚರ್ಚಿತವಾಗಿಲ್ಲ. ಕಾಲದ ವಿಷಯ ದಲ್ಲಿ ಸಾಧಕಬಾಧಕ ಪ್ರಮಾಣಗಳನ್ನೊಳಗೊಂಡ ಕೂಲಂಕಷವಾದ ಚರ್ಚೆ ನಡೆದು ಒಂದು ನಿರ್ಣಯಕ್ಕೆ ಬಂದಂತಾಗಿದೆ. ಅದನ್ನು ಇಲ್ಲಿ ಸಂಕ್ಷೇಪವಾಗಿ ಹೇಳಿ ಆ ಮುಂದೆ ಆತನ ದೇಶ ವಾವುದೆಂಬ ವಿಷಯವನ್ನು ಚರ್ಚಿಸಲಾಗುತ್ತದೆ.

## ಶಿವಕೋಟ್ಯಾಚಾರ್ಯರ ಕಾಲನಿರ್ಣಯ

ಈ ಗ್ರಂಥವು ಮೊದಲು ದಿವಂಗತ ಪ್ರೊ. ಕೆ. ಬಿ. ಪಾಠಕರವರ ಕಣ್ಣಿಗೆ ಬಿದ್ದಿತು. ಇದರ ರಚಕರು ರೇವಾಕೋಟ್ಯಾಚಾರ್ಯರೆಂದೂ, ರಚನಾಕಾಲವು ಕ್ರಿ. ಶ. ೧೧೮೦ ಎಂದೂ ಅವರು ಭ್ರಮಿಸಿದರು. ದಿವಂಗತ ರಾ. ಬ. ಆರ್. ನರಸಿಂಹಾಚಾರ್ಯರು ಪ್ರೊ. ಪಾಠಕರವರನ್ನು ತಮ್ಮ ಕವಿಚರಿತೆಯ ಮೊದಲನೆಯ ಭಾಗದಲ್ಲಿ ಅನುಸರಿಸಿದ್ದಾರೆ. ಆ ತರುವಾಯ ಶ್ರೀ ಎಂ. ಗೋವಿಂದ ಪೈ ಅವರು ಅದನ್ನು ಭಾಷಾದೃಷ್ಟಿಯಿಂದ ಪರೀಕ್ಷಿಸಿ ಅದು ಕ್ರಿ. ಶ. ೬ ನೆಯ ಶತಮಾನಕ್ಕಿಂತ ಈಚೆಯದಲ್ಲವೆಂದು ಅಪ್ಪಣೆಕೊಡಿಸಿದರು. ಪೂರ್ವಪುರಾಣದೊಳಗಿನ ಗುಣ ಭದ್ರಾಚಾರ್ಯರ ಪದ್ಯಗಳು ಇದರಲ್ಲಿ ಉದ್ಧೃತವಾಗಿರುವುದರಿಂದ ಅದು ಕ್ರಿ. ಶ. ೮೫೦ ರ ಪೂರ್ವದ್ದಲ್ಲವೆಂದು ಪ್ರೊ. ಕೆ. ಜಿ. ಕುಂದಣಗಾರರು ಅಭಿಪ್ರಾಯಪಟ್ಟರು. ಬಹುತರವಾಗಿ ಅದು ೧೧ ನೆಯ ಶತಮಾನದಲ್ಲಿ ರಚಿತವಾಗಿರಬೇಕೆಂದು ಡಾ. ಎ. ಎನ್. ಉಪಾಧ್ಯೆಯವರು ನಿರ್ಣಯಿಸಿದರು. ಪ್ರೊ. ಡಿ. ಎಲ್. ನರಸಿಂಹಾಚಾರ್ಯರು ಅದು ಕ್ರಿ. ಶ. ೯೨೦ ರಲ್ಲಿ ರಚಿತ ವಾಗಿರಬೇಕೆಂಬ ಕೊನೆಯ ನಿರ್ಧಾರಕ್ಕೆ ಬಂದಿದ್ದಾರೆ. ಡಾ. ಆರ್. ಎಸ್. ಮುಗಳಿಯವರು ಪ್ರೊ. ಡಿ. ಎಲ್. ನರಸಿಂಹಾಚಾರ್ಯರ ನಿರ್ಣಯವೇ ಕೊನೆಯದೆಂದು ಗ್ರಹಿಸಿದ್ದಾರೆ. ಈ ನಿರ್ಣಯ ಎಲ್ಲ ಪಂಡಿತರಿಗೂ ಒಪ್ಪಿಗೆಯಾಗುವಂತಿದೆ.

ಈ ಗ್ರಂಥಕಾರನ ಕಾಲನಿರ್ಣಯದ ಹೊರತು ಆತನ ಜೀವನವನ್ನು ಕುರಿತು ಬೇರೆ ಯಾವ ವಿಷಯಗಳೂ ಈವರೆಗೆ ಚರ್ಚಿತವಾಗಿಲ್ಲ. ಆತನು ಕರ್ನಾಟಕದೊಳಗಿನ ಯಾವ ಪ್ರಾಂತ್ಯದವನು ಎಂಬ ವಿಷಯವನ್ನು ಯಾವ ಕನ್ನಡ ಪಂಡಿತನೂ ಚರ್ಚಿಸಿಲ್ಲ. ಆ ಗ್ರಂಥದೊಳಗಿನ ಕಥೆಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರೆ ಈ ವಿಷಯದ ಮೇಲೆ ಸಾಕಷ್ಟು ಬೆಳಕು ಬೀಳಬಹುದು. ಆ ಕಥೆಗಳ ಭಾಷಾಶೈಲಿ, ಅಲ್ಲಿನ ಅಪೂರ್ವವಾದ ಶಬ್ದಗಳು, ಸಾಮಾಜಿಕ ಮತ್ತು ಔದ್ಯೋಗಿಕ ರೂಢಿಗಳನ್ನು ವಿವರಿಸುವ ಮಾತುಗಳು ಆ ಪ್ರಾಂತ್ಯವನ್ನು ಸೂಚಿಸುತ್ತವೆಂದು ಧೈರ್ಯವಾಗಿ ಹೇಳಬಹುದು. ಈ ವಿಷಯವನ್ನೇ ಈ ಮುಂದೆ ಚರ್ಚಿಸಲಾಗಿದೆ.

## ಭಾಷಾಶೈಲಿಯಲ್ಲಿ 'ಒಡೆಯ'

ವಡ್ಡಾರಾಧನೆಯ ಭಾಷಾಶೈಲಿ ಪೂರ್ವದ ಹಳಗನ್ನಡ-ಹಳಗನ್ನಡಗಳ ಮಿಶ್ರಣರೂಪ ವಾಗಿದೆ. ಅದರಲ್ಲಿ 'ಒಡೆಯ' ಎಂಬ ಪದಪ್ರಯೋಗವನ್ನು ಗ್ರಂಥಕಾರನು ತೀರ ಸಹಜವಾಗಿ ಮಾಡಿದ್ದಾನೆ. ಇದನ್ನು ಪುಷ್ಟೀಕರಿಸುವ ಪ್ರಾಧ್ಯಾಪಕ ಡಾ. ಆರ್. ಎಸ್. ಮುಗಳಿಯವರ "ಶ್ರೀ ಗೋವಿಂದಪೈಗಳು ಹೇಳಿದಂತೆ 'ಒಡೆಯ' ಎಂಬ ಉತ್ತರಪದವುಳ್ಳ ಹಲವಾರು ಪ್ರಯೋಗಗಳನ್ನು

'ವಡ್ಡಾರಾಧನೆ' ತೀರ ಸಹಜವಾಗಿ ಉಪಯೋಗಿಸಿದೆ. ಅಪರೂಪವಾಗಿ ಪಂಪಾದಿಗಳಲ್ಲಿ ಇದು ಬಂದಿದೆ. ಕೇಶಿರಾಜನೂ ಇದಕ್ಕೆ ಮನ್ನಣೆ ಕೊಟ್ಟಿದ್ದಾನೆ," ಈ ಅಭಿಪ್ರಾಯವು ಇಲ್ಲಿಯವರೆಗೆ ಸರಿಯಾಗಿದೆ. ಇದರ ಮುಂದೆ ಬಂದಿರುವ "ಆದರೆ ಯಾವ ಕನ್ನಡ ಗ್ರಂಥದಲ್ಲಿಯೂ ಇಷ್ಟು ತರತರದಿಂದ ಇಷ್ಟು ಸಹಜವಾಗಿ ಈ ಪ್ರಯೋಗವಿಲ್ಲ" ಎಂಬ ಅಭಿಪ್ರಾಯವು ಮಾತ್ರ ಅಷ್ಟು ಸಮಂಜಸವೆಂದು ತೋರುವುದಿಲ್ಲ. ಇದಕ್ಕೆ ಕಾರಣವಿಲ್ಲದಿಲ್ಲ. ಕ್ರಿ. ಶ. ೧೧ ನೆಯ ಶತಮಾನದಲ್ಲಿ ಇದ್ದಿರಬಹುದಾದ ನೇಮಿಚಂದ್ರಕವಿ ಸೋಮದೇವಸೂರಿಯ ನೀತಿವಾಕ್ಯಾಮೃತಕ್ಕೆ ಕನ್ನಡ ವ್ಯಾಖ್ಯಾನವನ್ನು ಬರೆದಿದ್ದಾನೆ. ಅದರಲ್ಲಿ 'ಒಡೆಯ' ಪದದ ಪ್ರಯೋಗವು ಸಹಜವಾಗಿ ಧಾರಾಳವಾಗಿ ಗ್ರಂಥದ ತುಂಬಾ ಬಂದಿದೆ. ಇದೂ ಅಲ್ಲದೆ ಈ ವ್ಯಾಖ್ಯಾನದ ಭಾಷೆ ವಡ್ಡಾರಾಧನೆಯ ಭಾಷೆಯನ್ನು ಬಹುಮಟ್ಟಿಗೆ ಹೋಲುತ್ತದೆ. ಮತ್ತೆ ಈ ಹೊತ್ತಿಗೆಯ ಓಲೆಗರಿಯ ಪ್ರತಿಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಾತ್ರ ದೊರೆಯುತ್ತವೆ. ಆದುದರಿಂದ ಇದು ಆ ಕಾಲದಲ್ಲಿ ಅಂದರೆ ಕ್ರಿ. ಶ. ೯ ನೆಯ ಶತಮಾನದಿಂದೀಚೆ ೧೪ ನೆಯ ಶತಮಾನದ ವರೆಗೆ ತೌಳವ ಪ್ರಾಂತ್ಯದಲ್ಲಿ ಗ್ರಂಥಸ್ಥವಾಗಿ ನಿಂತ ಕನ್ನಡ ಭಾಷಾಶೈಲಿಯಾಗಿರಬೇಕು. ಇಂಥ ಭಾಷೆ ಇನ್ನೂ ಕೆಲವು ಕಡೆಗೆ ಸಿಗಬಹುದು, ಸಿಗುತ್ತದೆ. ಮಾಘನಂದ್ಯಾಚಾರ್ಯರ ಶಾಸ್ತ್ರಸಾರಸಮುಚ್ಚಯವು ನಾನಾ ಮಾದರಿಯ ಭಾಷಾಸರಣಿಗಳುಳ್ಳ ಅವತರಣಿಕೆಗಳ ವಿಶ್ವಕೋಶವಾಗಿದೆ. ಅಲ್ಲಿ 'ಒಡೆಯ' ಪದವನ್ನೊಳಗೊಂಡ ಕೆಲವು ಅವತರಣಿಕೆಗಳನ್ನು ಕಾಣಬಹುದು. ಪುಟ ೨೭೯ ರಲ್ಲಿ—**ಸಪ್ತ ಸಂಯಮಾಃ** ಎಂಬ ೩೯ ನೆಯ ಸೂತ್ರದ ವ್ಯಾಖ್ಯಾನದಲ್ಲಿ—"ಈ ಎರಡುಂ ಪ್ರಮತ್ತ ಸಂಯತಾದಿ ಚತುರ್ಗುಣಸ್ಥಾನದೊಳಪ್ಪುವು. ತ್ರಿಂಶದ್ವರ್ಷ ಆಯುಷ್ಯನುಂ ಸಮಸ್ತಭೋಗಾನುಭುಕ್ತನುಂ ಉತ್ತಮ ಸಂಹನನಶರೀರನುಮಪ್ಪ ಪುರುಷಂ, ಜಾತರೂಪಮಂ ಧರಿಸಿ ತೀರ್ಥಕರ ಪಾದಮೂಲದಲ್ಲಿ ವರ್ಷಪೃಥಕ್ತ್ವಂಬರಂ ಪ್ರತ್ಯಾಖ್ಯಾನಮೆಂಬೊಂಭತ್ತನೆಯ ಪೂರ್ವಮನೋದಿ ಸಂಯಮವಿನಾಶಿಭೀರುವಪ್ಪ ಪರಿಹಾರಶುದ್ಧಚಾರಿತ್ರಮಂ ಕೈಕೊಂಡು ನೆಗಳ್ವವರ ಲಕ್ಷಣಮಂ ಪಂಚಸಮಿತಿಗಳೊಳಂ ತ್ರಿಗುಪ್ತಿಗಳೊಳಂ ಕೂಡಿ ಸರ್ವಸಾವದ್ಯಮಂ ಪರಿಹರಿಸುವುದೂ, ಪಂಚವ್ರತದೊಳಂ ಕೂಡಿದುದು, ಮೇಣೇಕವ್ರತಮನೇ **ತನಗೊಡೆಯುದು**, ತ್ರಿಸಂಧ್ಯೆಗಳ ನುಳಿಪಿ ದಿನಂಪ್ರತಿ ಗವ್ಯೂತಿದ್ವಯಪ್ರಮಾಣಕ್ಷೇತ್ರಮಂ ವಿಹಾರಿಸುವುದು **ಮೊದಲಾಗೊಡೆಯುದು**, ಅಂತಾ ಪರಿಹಾರವಿಶುದ್ಧಿಯ ಪುರುಷಂ ಷಡ್ಜೀವನಿಕಾಯ ಸಂಕೀರ್ಣಮಪ್ಪ ಲೋಕದೊಳು ಚರಿಸುತಿರ್ದು ಪದ್ಮಪತ್ರಮೆಂತು ನೀರೊಳಗಿರ್ದು ನೀರಂ **ಪೊ**ರೆಯದಂತೆ ಪಾಪಸಮೂಹದೊಳ್ಪೊರೆವನಲ್ಲಂ, ಆಯತಿಗೆ ಮಳೆಗಾಲಂ ಸಯಮವಿಲ್ಲ. ಆ ತೃತೀಯ ಸಂಯಮಂ ಪ್ರಮತ್ತರೊಳಪ್ರಮತ್ತರೊಳಲ್ಲದಿಲ್ಲ ||೩|| ಸೂಕ್ಷ್ಮ ಮಾಡಲ್ಪಟ್ಟ ಸಂಜ್ವಲನಲೋಭಮ **ನೊಡೆಯವಪ್ಪ** ಯತಿಗಳುಪಶಮಂಗಳ್ಗೆ ಕ್ಷಪಕಂಗಕ್ಕೆ ವಿಕಲ್ಪರಹಿತಮಪ್ಪ ಪರಿಣಾಮ **ಮನೊಡೆಯುದು,** ಯಥಾಖ್ಯಾತಚಾರಿತ್ರದೊಳೇನಾನುಂ ಕುಂದಿದುದು ಸೂಕ್ಷ್ಮಸಾಂಪರಾಯ ಶುದ್ಧಚಾರಿತ್ರಂ ||೪|| ಮೋಹನೀಯದುದಯದಿಂದ ಪಿಂಗಿದುದೇಕ ಸ್ವರೂಪಮಪ್ಪ ಮನಮ**ನೊಡೆಯುದು** . . . ."

ಪುಟ ೨೮೨-೨೮೩ ರಲ್ಲಿ—**ಷಡ್ವಿಧಾ ಸಮ್ಯಕ್ತ್ವಮಾರ್ಗಣಾ** || ಎಂಬ ೪೩ ನೆಯ ಸೂತ್ರದ ವ್ಯಾಖ್ಯಾನದಲ್ಲಿ—"ಮಿಥ್ಯಾದೃಷ್ಟಿಯುಂ, ಭವ್ಯನುಂ, ಸಂಜ್ಞಿಯುಂ, ಪರ್ಯಾಪ್ತನುಂ, ಗರ್ಭಜನುಮಪ್ಪ ಜೀವಂ ಲಬ್ಧಿಚತುಷ್ಟಯಂ ಮೊದಲಾ**ಗೊಡೆಯ ಪಲ**ವುಂ ಸಾಮಗ್ರಿಗಳ ನೆಯ್ದಿದಿಂಬಳಿಕ ತ್ರಿಕರಣಲಬ್ಧಿಯಂ ಪಡೆದು, ಪ್ರಥಮೋಪಶಮಸಮ್ಯಕ್ತ್ವಮಂ ಕೈಕೊಳ್ಗುಂ . . . . ಕ್ಷಾಯಿಕದಿಂದಮೇ ತನ್ನ ಕಾಲದೊಳಗೆ ಜನನಮರಣಂ ಮೊದಲಾ**ಗೊಡೆಯುವಿಲ್ಲ** . . . . ಸಮ್ಯಗ್ಮಿಥ್ಯಾತ್ವಂ, ಮಿಶ್ರಶ್ರದ್ಧಾನಮಪ್ಪ ಕ್ಷಯೋಪಶಮಿಕ ಗುಣಮಕ್ಕುಂ. ಆ ಗುಣಮ**ನೊಡೆಯವರ್ಗೆ** ತದ್ಭವಮರಣಮೊದಲಾ**ಗೊಡೆಯುವಿಲ್ಲ**."

ಪುಟ ೨೮೫ ರಲ್ಲಿ—**ದ್ವಿವಿಧಂ ಸಂಜ್ಞಿತ್ವಂ** || ಎಂಬ ೪೪ ನೆಯ ಸೂತ್ರದ ವ್ಯಾಖ್ಯಾನ

ದಲ್ಲಿ—"ಅಂಗೋಪಾಂಗದುದಯದೊಳಾದ ವಿಕಸಿತಮಪ್ಪಷ್ಟದಳಪದ್ಮಾಕಾರಮಂ **ಪೋಲ್ವ** ದ್ರವ್ಯಮನದೊಳು ಕ್ಷಯೋಪಶಮಮುಂ, ಅರಿತಮುಂ ಮನೋಇಂದ್ರಿಯಮೆಂಬುದದ **ನೊಡೆಯಾತಂ** ತಕ್ಕುದು ತಗದೆಂಬುದುಮಂ, ಪುಸಿ ನನ್ನಿಯೆಂಬುದುಮಂ ಮುನ್ನಮಾರಯ್ದು ಶಿಕ್ಷಿಸಿದುದಂ ಕೈಕೊಳ್ಗುಂ." ಮತ್ತೆ ಪುಟ ೨೮೮ ರಲ್ಲಿ—**ಪುದ್ಗಲಾಕಾಶಕಾಲದ್ರವ್ಯಾಸ್ರವಶ್ಚ ಪ್ರತ್ಯೇಕಂ ದ್ವಿವಿಧಾಃ ||** ಎಂಬ ೪೭ನೆಯ ಸೂತ್ರದ ವ್ಯಾಖ್ಯಾನದಲ್ಲಿ—"ಅದರಿಂ ಚತುರ್ಗತಿಯ ಜೀವಂಗಳ ಶರೀರೋತ್ಸೇಧಮುಂ, ಅಕೃತ್ರಿಮ ಚೈತ್ಯಾಲಯಂಗಳುಮೆಂದಿವು ಮೊದಲಾ**ಗೊಡೆಯುವಂ** ಪ್ರಮಾಣಿಸುವುದು."

(ಈ ಅವತರಣಿಕೆಗಳನ್ನು ಅಚ್ಚಾದ ಪುಸ್ತಕದಲ್ಲಿದ್ದಂತೆ ಉದಾಹರಿಸಲಾಗಿದೆ. ಇವುಗಳಲ್ಲಿ ಹಳಗನ್ನಡದ ಲಕ್ಷಣಗಳಿವೆ. ಇಲ್ಲಿ 'ಪ' ಕಾರಕ್ಕೆ 'ಹ' ಕಾರಾದೇಶವಾದುದು ಕಂಡುಬರುವುದಿಲ್ಲ).

ಮಾಘನಂದ್ಯಾಚಾರ್ಯರು ವಿಶಿಷ್ಟಭಾಷಾಶೈಲಿಗೆ ಗಮನಕೊಟ್ಟು ಈ ಅವತರಣಿಕೆಗಳನ್ನು ಆಯ್ದುಕೊಳ್ಳದಿದ್ದರೂ ಅಪ್ರತ್ಯಕ್ಷರೀತಿಯಿಂದ ಅವರು ಭಾಷಾಶೈಲಿಯ ಅಭ್ಯಾಸಕ್ಕೆ ಸಹಾಯಮಾಡಿದ್ದಾರೆ. ಈ ಶೈಲಿಯ ಭಾಷೆಯನ್ನೊಳಗೊಂಡ ನೀತಿವಾಕ್ಯಾಮೃತದ ವ್ಯಾಖ್ಯಾನ ಗ್ರಂಥವೊಂದು ಈಗ ದೊರೆತಿದೆ. ದಕ್ಷಿಣ ಕನ್ನಡಜಿಲ್ಹೆಯಲ್ಲಿ ಶೋಧಮಾಡಿದರೆ ಈ ಮಾದರಿಯ ಭಾಷೆಯ ಇನ್ನೂ ಅನೇಕ ಗ್ರಂಥಗಳು ದೊರೆಯಬಹುದಾಗಿದೆ. ಹಾಗಾದಲ್ಲಿ ಈ ಭಾಷಾಶೈಲಿಯ ಅಭ್ಯಾಸಕ್ಕೆ ಹೆಚ್ಚು ಉತ್ಸಾಹ ಅವಕಾಶ ದೊರೆಯಬಹುದು.

## ವಡ್ಡಾರಾಧನೆಯಲ್ಲಿ ತುಳುದೇಶದ ಶಬ್ದಗಳು

ಈ ಗ್ರಂಥದಲ್ಲಿ ದೊರೆಯುವ ಅನೇಕ ಶಬ್ದಗಳು ನೀತಿವಾಕ್ಯಾಮೃತದ ಕನ್ನಡ ವ್ಯಾಖ್ಯಾನದಲ್ಲಿ ಮತ್ತು ತುಳುಭಾಷೆಯಲ್ಲಿ ದೊರೆಯುತ್ತವೆ. ಅವುಗಳಲ್ಲಿ ಕೆಲವನ್ನು ಈ ಮುಂದೆ ಪರೀಕ್ಷಿಸಲಾಗಿದೆ.

**ಉತ್ತವಳ** (ಪು. ೨೮, ಪಂ. ೨೨)—'ತಾಳ್ಮೆಯಿಲ್ಲದ, ಆತುರಪಡುವ' ಎಂಬ ಅರ್ಥದಲ್ಲಿ ಸಂಸ್ಕೃತದ 'ಉತ್ತಾಮ್ಯತಿ' ಎಂಬ ಕ್ರಿಯಾಪದದಿಂದ. ಅಲ್ಲಿ 'ಉತ್ತಾಮಿಲ' ಎಂಬ ಪದವೂ ಇದೆ. ಈ ಪದವು ಮರಾಠಿಯಲ್ಲಿ 'ಉತಾವೀಳ' ಎಂದಾಗಿದೆ.

**ಏರಣಿಗ** (ಪು. ೪೬, ಪಂ. ೧೩)—'ಅಕ್ಕಸಾಲೆ' ಎಂಬ ಅರ್ಥದಲ್ಲಿ ಮರಾಠಿ ಮತ್ತು ಕೊಂಕಣಿ ಭಾಷೆಗಳಲ್ಲಿ 'ಐರಣ' ಎಂಬ ಪದವಿದೆ. ಅದರ ಅರ್ಥ 'ಅದ್ಗಣಿ' (Anvil). 'ಐರಣ' ಪದದಿಂದ ಅಕ್ಕಸಾಲೆ ಎಂಬರ್ಥದ ಪದವು ಮರಾಠಿಯಲ್ಲಿ ಅಥವಾ ಕೊಂಕಣಿಯಲ್ಲಿ ಸಾಧಿತವಾಗಿಲ್ಲ. ಆದರೆ 'ಸುವರ್ಣಕಾರ' ಪದದಿಂದ 'ಸೋನಾರ' ಎಂಬುದು ಆ ಭಾಷೆಗಳಲ್ಲಿ ರೂಢವಾಗಿದೆ. 'ಐರಣವು' ವಿಕಾರಗೊಂಡು ತುಳುವಿನಲ್ಲಿ 'ಏರಣ'ವಾಗಿ, ಅದಕ್ಕೆ 'ಇಗ' ಪ್ರತ್ಯಯ ಅಂಟಿಕೊಂಡು 'ಏರಣಿಗ' ವಾಗಿದೆ. 'ಐರಣ'ವು 'ಅರಣಿ' ಎಂಬ ಸಂಸ್ಕೃತಪದದಿಂದ ಬಂದಿದೆಯೆಂದು ಮರಾಠಿಭಾಷಾಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ

**ಕೆಗಲೆ** (ಪು. ೫೧, ಪಂ. ೮ ; ಪು. ೫೫, ೯೧)—ಇದರ ಅರ್ಥ 'ಎದೆ'. ಇದು ತುಳು ಶಬ್ದ. ಇದು ಈಗ 'ತಿಗಲೆ' ಎಂದು ವಿಕಾರಗೊಂಡಿದೆ; ಅರ್ಥವೂ ಬದಲಾಗಿ ಅದು 'ಹೆಗಲು, ಭುಜ' ಎಂದು ರೂಢಿಯಲ್ಲಿದೆ.

**ಮಾಣಿ** (ಪು. ೬೮, ಪಂ. ೨೨)—ಇದು ತುಳು ಶಬ್ದ. 'ಹುಡುಗ' ಎಂಬುದು ಇದರರ್ಥ. ಈಗಲೂ ರೂಢಿಯಲ್ಲಿದೆ.

**ಕಟಿ** (ಪು. ೬೨, ಪು. ೨೦)—ಇದು ತುಳುವಿನಲ್ಲಿದೆ. 'ಪಳಿದ್ಯ' ಎಂಬುದು ಇದರರ್ಥ. ತಮಿಳಿನಲ್ಲಿ 'ಕಡಿ' ಎಂದಿದೆ.

ಬಾಡು (ಪು ೭೨, ಪಂ. ೧೬)—ಇದು ತುಳುವಿನಲ್ಲಿದೆ. 'ತರಕಾರಿ, ಕಾಯಿಪಲ್ಯ' ಎಂದು ಇದರರ್ಥ. ಅದು ಅಳಿದುಹೋಗಿ, ಅದರ ಅವಶೇಷವಾದ 'ಬಾಳುಕ' ಎಂಬ ಪದ ಮಾತ್ರ ಕನ್ನಡದಲ್ಲಿ ಉಳಿದಿದೆಯೆಂದು ಕೆಲವರು ಅಭಿಪ್ರಾಯಪಡುತ್ತಾರೆ (?). ಬಾಳುಕ=ಒಣಗಿಸಿದ ಕಾಯಿಪಲ್ಯ.

ಸೋದಿಗೆ (ಪು. ೭೩. ಪಂ. ೧೭)—ಇದು ತುಳುವಿನಲ್ಲಿದೆ. 'ಸಜ್ಜಿಗೆ, ಚಜ್ಜಕ' ಎಂದು ಇದರರ್ಥ. ಮರಾಠಿ ಗುಜರಾಥಿ ಭಾಷೆಗಳಲ್ಲಿ ಇದು 'ಸೂಜಿ' ಎಂದಾಗಿದೆ. ಈ ಶಬ್ದವನ್ನು 'ಸೋದಿಗೆಗೆ' ಪ್ರತಿಯಾಗಿ ಉಪಯೋಗಿಸಿದರೆ ಎಷ್ಟು ಅನರ್ಥವಾಗಬಹುದು!

ಪಸವ (ಪು ೮೩. ಪಂ. ೮)—ಇದು ದೇಶ್ಯಶಬ್ದ : ತುಳುವಿನಲ್ಲಿದೆ. ಪಂಪನು ಇದನ್ನು ತನ್ನ ಭಾರತದಲ್ಲಿ ಉಪಯೋಗಿಸಿದ್ದಾನೆ. (೧೨-೨೧೯)—'ಜರ, ಕ್ಷಾಮ' ಎಂಬುದಿದರರ್ಥ. 'ಬಯಕೆ, ಆಸೆ' ಎಂಬ ಅರ್ಥವೂ ಉಂಟು. ಪಂಪನು ತುಳು ಪ್ರಾಂತ್ಯದಲ್ಲಿ ಸಂಚರಿಸಿ, ಅಲ್ಲಿನ ಕೆಲವು ಪ್ರಯೋಗಗಳನ್ನು ತನ್ನವಾಗಿಸಿಕೊಂಡು ತನ್ನ ಕಾವ್ಯಗಳಲ್ಲಿ ಅವುಗಳನ್ನು ಬಳಸಿ ಕೊಂಡಿದ್ದಾನೆ. ಅವುಗಳಲ್ಲಿ ಇದೊಂದು.

ತುಂಗಭದ್ರ (ಪು ೧೪೮, ಪಂ. ೨೭)—ಮೂಲದಲ್ಲಿ ಇದು ಒಂದು ನದಿಯ ಹೆಸರು. ಇಲ್ಲಿ ಅದು ಒಬ್ಬ ಕಟ್ಟಿಗೆ ಒಡೆಯುವವನ ಹೆಸರಾಗಿದೆ. ಈ ಹೆಸರು ವಿಶೇಷವಾಗಿ ಶಿವಮೊಗ್ಗೆ ಜಿಲ್ಲೆಯಲ್ಲಿ ರೂಢವಾಗಿರುವಂತೆ ತೋರುತ್ತದೆ. ತುಂಗಾ ಮತ್ತು ಭದ್ರಾ ನದಿಗಳು ಶಿವಮೊಗ್ಗೆ ಜಿಲ್ಲೆಯಲ್ಲಿ ಪಶ್ಚಿಮಘಟ್ಟದಲ್ಲಿ ಹುಟ್ಟಿ ಅದೇ ಜಿಲ್ಲೆಯೊಳಗಿನ **ಕೂಡಲಿಯ** ಹತ್ತಿರ ಕೂಡಿಕೊಂಡು ಮುಂದೆ **ತುಂಗಭದ್ರಾ** ಎಂಬ ಹೆಸರಿನಿಂದ ಹರಿಯುತ್ತವೆ. ಸಾಮಾನ್ಯವಾಗಿ ನದಿಯ ಹೆಸರುಗಳನ್ನು ಹೆಣ್ಣುಮಕ್ಕಳಿಗಿಡುವುದುಂಟು. ಗಂಗಪ್ಪ ಯಮನಪ್ಪ ಎಂಬುವು ಮಾತ್ರ ಅಪವಾದಗಳು. ಅದರಂತೆ ಗಂಡಸಿನ ಹೆಸರು 'ತುಂಗಭದ್ರ' ಎಂದಿರುವುದು ಅಪವಾದವಾಗಿರಲಿಕ್ಕೆ ಸಾಕು.

## ಬೇಸಾಯದ ರೂಢಿಗಳು

ತುಳು ಪ್ರಾಂತ್ಯದಲ್ಲಿ ಮತ್ತು ಕೊಂಕಣ ಪ್ರದೇಶದಲ್ಲಿ (ಮಲೆನಾಡಿನಲ್ಲಿ) ರೂಢವಾಗಿದ್ದ ಮತ್ತು ಅವುಗಳ ಅವಶೇಷಗಳು ಈಗಲೂ ಕಂಡು ಬರುವ ಕೆಲವು ರೂಢಿಗಳನ್ನು ವಡ್ಡಾರಾಧನೆಕಾರನು ಹೇಳಿರುವನು. ನೋಡಿ :

"ಹಳಮುಖನೆಂಬ ಪಾರ್ವಂ ತನ್ನ ಮೂಡಣ ಕೆಯ್ಯನುಬಲೆಂದು ಪೋಗಿ ಕೆಸಱಾದುದಂ ಕಂಡುಬಿಲ್ ಪದನಲ್ತೆಂದು ಬೆಟ್ಟದ ಪಡುವಣ ಕೆಯ್ಯನುಬಲ್ ಪೋಗುತ್ತಂ" (ಪು. ೧೪೫).

ಇಲ್ಲಿ ಬ್ರಾಹ್ಮಣನಾದ ಹಳಮುಖನು ತನ್ನ ಗದ್ದೆಯಲ್ಲಿ ನೇಗಿಲ ಹೊಡೆಯುವ ಬೇಸಾಯಕ್ಕೆ ಹೊರಟಿದ್ದಾನೆ. ಅಂದರೆ ಆ ಪ್ರದೇಶದಲ್ಲಿ ಬ್ರಾಹ್ಮಣರು ಒಕ್ಕಲತನವನ್ನು ಮಾಡುತ್ತಿದ್ದರೆಂದು ಹೇಳಲಾಯಿತು. ಮತ್ತೆ ಆ ಮುಂದೆ—

"ಆತನ ಪಾರ್ವಂತಿಯುಂ ಪಗಲಪ್ಪಾಗಳ್ ಕೂಟಂ ಕೊಂಡುಬಂದು ಕೆಯ್ಯೊಳಗಲಮಱಸಿ ಕಾಣದೆ ಸೂರ್ಯಪ್ರತಿಮೆಯಿಂದ ಭಟಾರರಂ ಬೆಸಗೊಂಡಳಜ್ಜಾ ಎನ್ನ ಭಟ್ಟನೀಕೆಯ್ಯನುಬಲ್ ಬಂದಾತನೆತ್ತ ವೋದಂ" (ಪು. ೧೪೫).

ಆ ಬ್ರಾಹ್ಮಣನ ಪತ್ನಿ ಮಧ್ಯಾಹ್ನಸಮಯದಲ್ಲಿ ಆತನಿಗೆ ಊಟಕೊಡಲು ಬುತ್ತಿಯನ್ನು ತೆಗೆದುಕೊಂಡು ಬಂದಿದ್ದಾಳೆ. ಇತ್ಯರ್ಥವೆಂದರೆ ಆ ಪ್ರದೇಶದಲ್ಲಿ ಬ್ರಾಹ್ಮಣರು—ಗಂಡಹೆಂಡಿರು ಬೇಸಾಯದಲ್ಲಿ ತೊಡಗಿರುತ್ತಿದ್ದರು. ಸಾಮಾನ್ಯವಾಗಿ ಕರ್ನಾಟಕದಲ್ಲಿ (ಉತ್ತರ ದಕ್ಷಿಣ ಕನ್ನಡ ಜಿಲ್ಲೆಗಳನ್ನುಳಿದು) ಬ್ರಾಹ್ಮಣರು ಒಕ್ಕಲತನದಲ್ಲಿ ನಿರತರಾಗಿರು

ವುದಿಲ್ಲ. ಅದರಲ್ಲಿಯೂ ಬ್ರಾಹ್ಮಣ ಸ್ತ್ರೀಯರು ಬೇಸಾಯಕ್ಕೆ ಗಮನಕೊಟ್ಟವರೇ ಅಲ್ಲ. ಅದು ನೀಚವೃತ್ತಿಯೆಂಬುದು ಅವರ ಭಾವನೆ. ಹೊಲಗಳಲ್ಲಿ ದುಡಿಯುತ್ತಿರುವ ತಮ್ಮ ಗಂಡಂದಿರರಿಗೆ ಅವರು ಬುತ್ತಿಯನ್ನು ಎಂದೂ ಒಯ್ದವರಲ್ಲ. ಮಧ್ಯಾಹ್ನದ ಊಟಕ್ಕೆ ಅವರು ಮನೆಗೆ ಬರಲೇ ಬೇಕು. ಅದೇ ಉತ್ತರ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಬ್ರಾಹ್ಮಣರು ಒಕ್ಕಲತನಮಾಡುವು ದುಂಟು. ಅದರಲ್ಲಿಯೂ ಹವಿಗಬ್ರಾಹ್ಮಣರು ಶುದ್ಧ ಒಕ್ಕಲಿಗರು. ಅವರಲ್ಲಿ ಸ್ತ್ರೀಪುರುಷರೆಲ್ಲರೂ ಬೇಸಾಯವನ್ನು ಮೆಚ್ಚಿದವರು. ಅನಾಥ ಬ್ರಾಹ್ಮಣ ಸ್ತ್ರೀಯರು ತಾವೇ ಗದ್ದೆಗಳಲ್ಲಿ ದುಡಿದು ಬತ್ತ, ಅಡಕೆ, ತೆಂಗು ಬೆಳೆಯುತ್ತಾರೆ. ವಡ್ಡಾರಾಧನೆಕಾರನು ಹೇಳಿದ ಬ್ರಾಹ್ಮಣರು ಇವರೇ ಇರ ಬೇಕೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

"ಕಮ್ಮರಿಯಂ ಸುಡಲೆಂದು" (ಪು. ೧೪೮)—ಮಲೆನಾಡಿನಲ್ಲಿ ಪರ್ವತ ಪಾರ್ಶ್ವವನ್ನು ಉತ್ತು ಬಿತ್ತಿ ಧಾನ್ಯ ಬೆಳೆಯುತ್ತಾರೆ. ಹಾಗೆ ಮಾಡಬೇಕಾದರೆ ಆ ಭೂಮಿಯನ್ನು ಸುಟ್ಟು ಅದಕ್ಕೆ ಕಸುವು ತಂದುಕೊಳ್ಳಬೇಕಾಗುತ್ತದೆ. ಇದು ಪುರಾತನಕಾಲದಿಂದ ಇಲ್ಲಿಯವರೆಗೆ ನಡೆದು ಬಂದ ಭೂಮಿಸಾಗುವಳಿಯ ಒಂದು ಕ್ರಮ.

"ಕೊಂಕಣವಿಷಯವನೆಯ್ದಿ" (ಪು. ೧೪೮)—ಶಿವಮೊಗ್ಗೆ ಚಿಕ್ಕಮಗಳೂರು ಜಿಲ್ಹೆಗಳಿಗೆ ಈಗಲೂ ಮಲೆನಾಡು ಎಂದು ಹೇಳುವುದುಂಟು. ವಡ್ಡಾರಾಧನೆಕಾರನು ಹೇಳುವ 'ಕೊಂಕಣವಿಷಯವು' ಇವೆರಡು ಜಿಲ್ಹೆಗಳ ಪ್ರದೇಶವಾಗಿರಬೇಕು. 'ತುಂಗಭದ್ರ' ಎಂಬ ಪೋಡುಂಗಾಱನ ಹೆಸರು ಈ ಊಹೆಗೆ ಪುಷ್ಟಿಕೊಡುತ್ತದೆ.

'ಮಗನೆ' ಎಂಬ ಪದವನ್ನು ಸಹಜವಾಗಿ ಸಲಿಗೆಯಿಂದ ಮತ್ತು ಅವಹೇಳನಾರ್ಥವಾಗಿ ಉತ್ತರ ದಕ್ಷಿಣ ಕನ್ನಡ ಜಿಲ್ಹೆಗಳಲ್ಲಿ ಸಂಭಾಷಣೆಯಲ್ಲಿ ಬಳಸುವುದುಂಟು. ವಡ್ಡಾರಾಧನೆಕಾರನು ಅದನ್ನು **ವಿದ್ಯುಚ್ಚೋರರಸಿಯ ಕಥೆ**ಯಲ್ಲಿ ಈರೀತಿಯಾಗಿ ಉಪಯೋಗಿಸಿದ್ದಾನೆ:

"(ವಿದ್ಯುಚ್ಚೋರನುಂ ಯಮದಂಡತಳಾರನುಂ) ಉಳಿಸೆಂಡನಾಡುತ್ತಿರಲೋಕನ ವಿದ್ಯೆಯನೀತಂ ಕಲ್ತನಪ್ಪುದಱಿಂದೆಲ್ಲಿಯುಮಿಳಿದೊಡಂ ಕಾಣಲಾಗದೀತನಂ ನೀಡುಮಱಿಸಿ ಕಾಣದೆ . . . **ಮಗನೆ** ನೀಂ ತಳಾಱನಪ್ಪಂದು ನಿನ್ನ ಕಾಪಿನೊಳ್ ಕಳ್ದು ನಿನ್ನಂ ಕೊಲಿಸದಾಗಳೇನಾ ಯ್ತೆಂದು ನುಡಿದೊಡೀತನುಮಿಂತೆಂದನಕ್ಕುಂ **ಮಗನೆ** ನೀನೆನ್ನ ತಳಾಱುಗೆಯ್ವಂದು ಕಳ್ದೊಡೆ . . . ಎಂದಿರ್ವರುಮೋರೊರ್ವರಂ ಮೂದಲಿಸಿ" (ಪು. ೧೨೨). ಇದಕ್ಕೆ ಸನ್ನಿವೇಶವೂ ತಕ್ಕು ದಾಗಿದೆ. ವಿದ್ಯುಚ್ಚೋರನು ಅರಸುಮಗನು; ಯಮದಂಡನು ತಳಾರನ ಮಗನು. ಅವರಿಬ್ಬರು ಒಬ್ಬ ಗುರುವಿನ ಹತ್ತಿರವೇ ಶಿಕ್ಷಣ ಪಡೆಯುತ್ತಿದ್ದಾರೆ. ಅದರಿಂದ ಅವರು ಗುರುಬಂಧುಗಳಾಗಿ ತಮ್ಮ ತಮ್ಮ ಸ್ಥಾನವ್ಯತ್ಯಾಸಗಳನ್ನು ಮರೆತು ಸಲಿಗೆ ಬೆಳಸಿಕೊಂಡು ಬಂದಿದ್ದಾರೆ. ಈ ಕಾರಣ ದಿಂದ ಅವರು ತಾವು ಪಡೆದ ವಿದ್ಯೆಯ ಪ್ರಭಾವದ ಮೇಲ್ಮೆಗೆಂದು ಸ್ಪರ್ಧೆಗೆ ನಿಲ್ಲುವಂತಾಗುತ್ತದೆ.

ಇದಲ್ಲದೆ ಉತ್ತರದಕ್ಷಿಣ ಕನ್ನಡ ಜಿಲ್ಹೆಗಳಲ್ಲಿ ಕಾಣಸಿಗುವ ಪಶುಪಕ್ಷಿಗಳ ಮತ್ತು ಸರಟುಗಳ ಹೆಸರುಗಳು ಈ ಗ್ರಂಥದಲ್ಲಿ ಉಲ್ಲೇಖಿಸಲಾಗಿವೆ. ಉದಾ.—ಪೆಂಗುರು, ಕಾರಂಡ, ಅಂದೆ, ಕುರ್ಕು (ಪು. ೯೨) ಇವು ಪಕ್ಷಿಗಳ ಹೆಸರುಗಳು. ಸೀನರ್ನಾಯ್, ಒಟ್ಟೆ, ಒಂತಿ (ಪು. ೯೨) ಇವು ಭೂಚರಗಳು.

ಈ ಎಲ್ಲ ಆಧಾರಗಳಿಂದ ವಡ್ಡಾರಾಧನೆಕಾರನು ದಕ್ಷಿಣ ಕನ್ನಡ ಜಿಲ್ಹೆಯವನಾಗಿ ಕೆಲವು ಕಾಲ ಮಲೆನಾಡುಪ್ರದೇಶದಲ್ಲಿ ವಾಸವಾಗಿರಬಹುದು. ಅಥವಾ ಮಲೆನಾಡುಪ್ರದೇಶದವನಾಗಿ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಕೆಲವು ಕಾಲ ವಾಸವಾಗಿರಬಹುದು.

ಶುಭಂ ಭೂಯಾತ್

**ಕೆ. ಜಿ. ಕುಂದಣಗಾರ**

# ಅಜಿತಸೇನನ ‘ ಅಲಂಕಾರಚಿಂತಾಮಣಿ ’

## ೧

ಗಂಗರಾಜ ಮಾರಸಿಂಹ II,[1] ಚಾವುಂಡರಾಯ, ರನ್ನರ ಗುರುವೂ, ‘ಮಲ್ಲಿಷೇಣ ಪ್ರಶಸ್ತಿ’ಯೇ ಮೊದಲಾಗಿ ಅನೇಕ ಶಿಲಾಶಾಸನಗಳ ಮುಖ್ಯ ಪ್ರಶಂಸಾವಿಷಯನೂ,[2] ‘ಶಬ್ದ ಚತುರ್ಮುಖ’, ‘ತಾರ್ಕಿಕ ಚಕ್ರವರ್ತಿ’ ‘ವಾದೀಭಸಿಂಹ’ ಇತ್ಯಾದಿ ಬಿರುದಾವಲೀ ಪಾತ್ರನೂ[3] ಆದ ಅಜಿತಸೇನಾಚಾರ್ಯನು ಕನ್ನಡ ಸಾಹಿತ್ಯ ವೀಕ್ಷಕರಿಗೆ ಅಪರಿಚಿತನೇನೂ ಅಲ್ಲ. ಅವನ ಶಿಷ್ಯರಾದ ಚಾವುಂಡರಾಯ, ರನ್ನರೇ ಉದ್ದಾಮ ಗ್ರಂಥಗಳನ್ನು ರಚಿಸಿರುವಾಗ ಆತನು ಕೂಡ ಮಹಾಕವಿಯೂ ಆಲಂಕಾರಿಕನೂ ಆಗಿದ್ದಿರಬಹುದು.

ರೈಸ್ ಅವರು ಅಜಿತಸೇನನ ಎರಡು ಕೃತಿಗಳ ಹಸ್ತಪ್ರತಿಗಳನ್ನು ಉಲ್ಲೇಖಿಸಿದ್ದಾರೆ—೧. ಅಲಂಕಾರ ಚಿಂತಾಮಣಿ ೨. ಮಣಿಪ್ರಕಾಶಿಕಾ.[4]

ಹುಲ್ಷ್ ಅವರು ‘ಮಲ್ಲಿಷೇಣನ ಪ್ರಶಸ್ತಿ’ಯನ್ನು ವಿಮರ್ಶಿಸುತ್ತಾ, ಅದರಲ್ಲಿ ಉಕ್ತನಾಗಿರುವ ಅಜಿತಸೇನನೇ ಈ ಎರಡೂ ಕೃತಿಗಳ ಕರ್ತೃವಿರಬೇಕೆಂದು ತಮ್ಮ ಅಭಿಪ್ರಾಯವನ್ನು ಪ್ರಕಟಿಸಿದ್ದಾರೆ—

“He may be identified with Ajitasenācārya, the author of the Alaṅkāra-cintāmaṇi and Maṇiprakāśikā.[5]

ಈ ಎರಡನೆಯ ಕೃತಿಯ ಪೂರ್ಣ ನಾಮಧೇಯ ‘ಚಿಂತಾಮಣಿ-ಪ್ರಕಾಶಿಕಾ’ ಎಂದು ಹೀರಾಲಾಲರು ಬರೆದಿದ್ದಾರೆ.[6] ಇದು ಶಾಕಟಾಯನ ವ್ಯಾಕರಣದ ಸ್ವೋಪಜ್ಞಟೀಕೆಯಾದ ‘ಅಮೋಘವೃತ್ತಿ’ಗೆ ರಚಿತವಾದ ಯಕ್ಷವರ್ಮನ ‘ಚಿಂತಾಮಣಿ’ಗೆ ಟೀಕೆ. (ನೋಡಿ—Belvalkar : *Systems of Sanskrit Grammar*).

ಶೇಷಗಿರಿಶಾಸ್ತ್ರಿಗಳು ‘ಶೃಂಗಾರಮಂಜರೀ’ ಎಂಬ ಅಲಂಕಾರಗ್ರಂಥವು ಪೂರ್ವೋಕ್ತ ಅಜಿತಸೇನನದೆಂದು ಹೇಳಿದ್ದಾರೆ. ಅದರ ಮದ್ರಾಸ್ ಹಸ್ತಪ್ರತಿಯನ್ನು ವಿವರಿಸುತ್ತಾ—

---

[1] ‘. . . ಬಂಕಾಪುರದೊಳ್ ಅಜಿತಸೇನಭಟ್ಟಾರಕರ ಶ್ರೀಪಾದಸನ್ನಿಧಿಯೊಳ್ ಆರಾಧನ ವಿಧಿಯಿಂ. . . ಜೈನಶಿಲಾಲೇಖಸಂಗ್ರಹ, I, ಪು. ೧೬.

[2] ‘ಏಕಾಸ್ಯಃ ಚತುರಾನನೋ ಗಣಪತಿರ್ನೇಭಾನನೋ ಭಾರತೀ
ನ ಸ್ತ್ರೀ ಸರ್ವಕಲಾಧರೋಽಶಶಿಧರಃ ಕಾಮಾಂತಕೋ ನೇಶ್ವರಃ |
ವಿದ್ಯಾನಾಂ ಪರಿನಿಷ್ಠಿತಕ್ಷಿತಿತಲಂ ತನ್ಮೂಲಮಾಲಂಬನಂ
ಚಿತ್ತೇ ತೇಽಜಿತಸೇನದೇವ ವಿದುಷಾಂ ವೃತ್ತಂ ವಿಚಿತ್ರೀಯತೇ ||
—ಜೈನಶಿಲಾಲೇಖಸಂಗ್ರಹ, II, ಪು. ೩೦೪.

[3] ಇದು ಅವನ ಜಯಭೇರಿ—

‘ಸಕಲಭುವನಪಾಲಾನಮ್ರಮೂರ್ಧಾವಬದ್ಧ-
ಸ್ಫುರಿತಮುಕುಟಚೂಡಾಲೀಢಪಾದಾರವಿಂದಃ |
ಮದವದಖಿಲವಾದೀಭೇಂದ್ರಕುಂಭಪ್ರಭೇದೀ
ಗಣಭೃದಜಿತಸೇನೋ ಭಾತಿ ವಾದೀಭಸಿಂಹಃ ||’
—ಮಲ್ಲಿಷೇಣಪ್ರಶಸ್ತಿ, ಪದ್ಯ ೫೯.
*Epigraphia Indica*, vol. III, No. 26, p 184.

[4] *Sanskrit Manscripts in Mysore & Coorg* p., 304, No. 2795 ; and p. 308, No. 2818. [5] *Ep. Ind*, vol. 184 ff. [6] *Catalogue of Skt. and Pkt. Mss in C. P. and Berar*, p. xxv.

"A short work on poetics written by Ajitasenadeva Yatīndra at the request of a Jaina king of the lunar race named Rāya (Kāmirāya) for his instruction. The work consists of 128 stanzas and is divided into three chapters. The author was a Jaina priest of Chāmundarāya. Ajitasena was the head of the mutt of Bankapore" ಎಂದಿದ್ದಾರೆ.[7]

ಕೃಷ್ಣಮಾಚಾರಿಯವರೂ ಇದನ್ನೇ ಸಮರ್ಥಿಸುತ್ತಾರೆ.[8]

ಡಾ. ಎಸ್. ಶ್ರೀಕಂಠಶಾಸ್ತ್ರಿಗಳು ಈ ಅಜಿತಸೇನನಿಗೆ ಜಿನಸೇನನೆಂಬ ಹೆಸರೂ ಇತ್ತು— This Ajitasena was also called ಜಿನಸೇನ' ಎಂದಿದ್ದಾರೆ.[9] ಇವನು 'ಹರಿವಂಶ'ಕಾರನಿಗಿಂತಲೂ 'ಮಹಾಪುರಾಣ'ಕಾರನಿಗಿಂತಲೂ ಭಿನ್ನನಾದ ಮೂರನೆಯ ಜಿನಸೇನನೆಂದು ಭಾವಿಸುತ್ತಾರೆ. ಇವನೇ 'ಅಲಂಕಾರಚಿಂತಾಮಣಿ'ಯ ಕರ್ತೃವೆನ್ನುವ ಬಗೆಗೆ ಅವರಿಗೆ ಸಂದೇಹವಿಲ್ಲ.

ಪ್ರೊ. ವೇಳಣಕರ ಅವರ 'ಜಿನರತ್ನಕೋಶ'ದಲ್ಲಿ ಅಲಂಕಾರಚಿಂತಾಮಣಿಯು ಅಜಿತಸೇನನ ಕೃತಿಯೆಂಬ ಉಲ್ಲೇಖ, ಅದರ ಹಸ್ತಪ್ರತಿಗಳ ನಿರ್ದೇಶದ ಹೊರತು ಬೇರಾವ ಅಂಶಗಳೂ ಇಲ್ಲ.

ಶ್ರೀ ಎಲ್. ಬಿ. ಗಾಂಧಿ ಅವರು ಜಿನಸೇನನೇ ಅಲಂಕಾರಚಿಂತಾಮಣಿಯ ಕರ್ತೃವೆನ್ನುತ್ತಾರೆ.[10]

ಪ್ರೊ ಡಾ. ವಿ. ರಾಘವನ್ ಅವರು 'ಅಲಂಕಾರಚಿಂತಾಮಣಿ'ಯನ್ನು ಕುರಿತು ವಿವರಿಸುತ್ತ, ಅಜಿತಸೇನನು ಬಂಗವಾಡಿಯ ಶಾಂತೀಶ್ವರ ದೇವಾಲಯದಲ್ಲಿ ಜೈನಗುರುವಾಗಿದ್ದನೆಂದು ತಿಳಿಸುತ್ತಾರೆ. ಒಂದು ಹಸ್ತಪ್ರತಿಯಲ್ಲಿ ಗ್ರಂಥಕಾರನ ಹೆಸರು ಜಿನಸೇನನೆಂದಿರುವುದು ಬಹುಶಃ ತಪ್ಪಿರಬೇಕೆಂದು ಸೂಚಿಸುತ್ತಾರೆ. "ಕಾವ್ಯಾಂಬುಧಿ"ಯಲ್ಲಿ ೧೮೯೩-೯೪ ನೆ ಇಸವಿಯಲ್ಲಿ ಮುದ್ರಿತವಾಗಿತ್ತೆಂದು ಬರೆಯುತ್ತಾರೆ.[11] ಡಾ. ಕಾಣೆಯವರೂ ಇದನ್ನೇ ಬರೆಯುತ್ತಾರೆ.[12]

ಇದಿಷ್ಟೂ ವಿದ್ವಾಂಸರು ತಿಳಿಸುವ ವಿಷಯವಾಯಿತು.

೨

ಇಲ್ಲಿ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಲ್ಲಿ 'ಅಲಂಕಾರಚಿಂತಾಮಣಿ'ಯ ಒಂದು ತಾಳೆಯಗರಿ ಹಸ್ತಪ್ರತಿಯಿದೆ.[13] ೪೭ ಪತ್ರಗಳಲ್ಲಿ ಇಡಿಯ ಐದು ಅಧ್ಯಾಯಗಳ ಗ್ರಂಥ ಅಡಕವಾಗಿದೆ. ಲಿಪಿಕಾರನ ಕನ್ನಡ ಅಕ್ಷರಗಳು ಬಹಳ ಮುದ್ದಾಗಿವೆ, ಅಶುದ್ಧಿಗಳೂ ಕಡಿಮೆ. ಇದನ್ನು ಅಧ್ಯಯನಮಾಡಲಾರಂಭಿಸಿದೆ. ಆದಿಯಲ್ಲಾಗಲಿ, ಅಂತ್ಯದಲ್ಲಾಗಲಿ, ಅಧ್ಯಾಯದ ಕಡೆಯ ಪುಷ್ಪಿಕೆಗಳಲ್ಲಾಗಲಿ ಎಲ್ಲಿಯೂ ಗ್ರಂಥಕಾರನ ಹೆಸರೇ ಇಲ್ಲ. ಹಸ್ತಪ್ರತಿಯ ಅಕ್ಷರ ಸ್ವರೂಪವನ್ನು ನೋಡಿದರೆ ಇದು ಹದಿನೈದನೆಯ ಶತಮಾನದ್ದಿರಬಹುದೆಂದು ನನ್ನ ಸೂನ್ಯಮಿತ್ರ ಡಾ. ಪಿ. ಬಿ. ದೇಸಾಯಿ ಅವರು ಹೇಳುತ್ತಾರೆ.

"ಕಾವ್ಯಾಂಬುಧಿ"ಯಲ್ಲಿ ಅಚ್ಚಾಗಿರುವ ಉಲ್ಲೇಖ ಗೊತ್ತಿದ್ದುದರಿಂದ ಇದನ್ನು ದೊರಕಿಸಲು ಯತ್ನಿಸಿ ವಿಫಲನಾದಾಗ, ಜೈನಸಾಹಿತ್ಯದಲ್ಲಿ ಪಂಡಿತಶ್ರೇಷ್ಠರಾದ ಡಾ. ಎ. ಎನ್. ಉಪಾಧ್ಯೆ ಅವರಿಗೆ ಸಹಾಯಕ್ಕಾಗಿ ವಿನಂತಿಸಿಕೊಂಡೆ. "ಕಾವ್ಯಾಂಬುಧಿ"ಯೆಂಬುದು ಮೈಸೂರ ಕಡೆ ಹಿಂದೆ ಅಚ್ಚಾಗುತ್ತಿದ್ದ, ಈಗ ನಿಂತಿರುವ ಪತ್ರಿಕೆಯಿರಬೇಕೆಂದು ತಿಳಿಸಿದರಷ್ಟೆ

---

[7] *Report on a search for Skt. and Tamil Mss. for 1893-94*, p. 83. [8] *Hist. of Skt. Lit.*, p. 752. [9] *Sources of Karnataka History*, pp. 168 & 171. [10] ನರೇಂದ್ರಪ್ರಭುಸೂರಿಯ 'ಅಲಂಕಾರಮಹೋದಧಿ'ಯ ಪೀಠಿಕೆ. G. O. S., Baroda. [11] *New Catalogus Catalogorum.* [12] *History of Alaṅkāra Litrature*, Index. [13] ನಂಬರು 797. ಇದನ್ನು ಈ ಲೇಖನಕ್ಕಾಗಿ ಉಪಯೋಗಿಸಲು ನನಗೆ ಅವಕಾಶವಿತ್ತ ಸಂಸ್ಥೆಯ ಡೈರೆಕ್ಟರಾದ ಡಾ. ಸಾಲೆತೊರೆ ಅವರಿಗೆ ನಾನು ತುಂಬಾ ಕೃತಜ್ಞ.

ಅಲ್ಲ; ತಮ್ಮ ಬಳಿಯಿದ್ದ ಮುದ್ರಿತ ಪ್ರತಿಯೊಂದನ್ನು ನನ್ನ ಉಪಯೋಗಕ್ಕಾಗಿ ಮರುಟಪ್ಪಾಲಿಗೆ ಕಳುಹಿಸಿ ಉಪಕಾರ ಮಾಡಿದ್ದಾರೆ. "ಇದರ ಕರ್ತೃವಂತೂ ಜಿನಸೇನನಲ್ಲ; ಅಜಿತಸೇನನೇ. ಈ ಕೃತಿಯಲ್ಲಿ ಗುಣಭದ್ರ, ಭೂಪಾಲ, ವಾಗ್ಭಟರ ಉಲ್ಲೇಖವುಂಟು" ಎಂದು ತಮ್ಮ ಅಮೂಲ್ಯ ಅಭಿಪ್ರಾಯವನ್ನೂ ಸೂಚಿಸಿ ಹೆಚ್ಚಿನ ಸಂಶೋಧನೆ ನಡೆಯಬೇಕೆಂದು ಹರಸಿದ್ದಾರೆ. ಅವರ ಉಪಕಾರವನ್ನು ಸ್ಮರಿಸಿ ಪ್ರಕೃತ ನಿರೂಪಣೆಗೆ ಹೊರಡುತ್ತೇನೆ.

ಡಾ. ಉಪಾಧ್ಯೆ ಅವರು ಕಳಿಸಿರುವ ಪ್ರತಿ "ಕಾವ್ಯಾಂಬುಧಿ"ಯಲ್ಲಿ ಅಚ್ಚಾದುದಲ್ಲ. ೧೯೦೭ ರಲ್ಲಿ ಸೋಲಾಪುರ ನಿವಾಸಿಗಳಾದ 'ದೋಸೀ' ಉಪಾಹ್ವ ಸಖಾರಾಮ ನೇಮಿಚಂದರು ಕೊಲ್ಹಾಪುರದ ಜೈನೇಂದ್ರಮುದ್ರಣಾಲಯದಲ್ಲಿ ಅಚ್ಚುಮಾಡಿರುವುದು. ಇದರಲ್ಲಿ ಮುದ್ರಿತ ೧೫೦ ಪುಟಗಳಿವೆ. ಗ್ರಂಥಕ್ಕೆ ಸಂಪಾದಕರ ಪೀಠಿಕೆಯೇನೂ ಇಲ್ಲ. ಆದರೆ ಪುಸ್ತಕದ ಕಡೆಯಲ್ಲಿ— "ಏತಾವತ್ಪರ್ಯಂತಮೇವ ಪ್ರಾಚೀನಪುಸ್ತಕೇ ಲಭ್ಯತೇ ಇತ ಉತ್ತರಂ ಏತಚ್ಛ್ಲೋಕಪೂರ್ತಿ ಪರ್ಯಂತಮೇವ ಸ್ಯಾದಿತಿ ಭಾತೀತಿ ಶುಭಂ" ಎಂದಿರುವುದರಿಂದ ಒಂದೇ ಹಸ್ತಪ್ರತಿಯನ್ನಾಧರಿಸಿ ಮುದ್ರಿಸಿರಬೇಕೆಂದು ತೋರುತ್ತದೆ.[14]

ಈ ಮುದ್ರಿತ ಪ್ರತಿಯಲ್ಲಿ ಕೂಡ ಲೇಖಕನ ಹೆಸರು ಜಿನಸೇನನೆಂದೇ ಇದೆ.

## ೩

ಮೈಸೂರು ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಟ್‌ನಲ್ಲಿ 'ಅಲಂಕಾರಚಿಂತಾಮಣಿ'ಯ ಒಂದು ಹಸ್ತಪ್ರತಿಯಿದೆ.[15] ಇದು ಕ್ರಿ. ಶ. ೧೮೦೮ ರಲ್ಲಿ[16] ಪದ್ಮಪಂಡಿತನ ಮಗ ಶಾಂತರಾಜನೆಂಬವನು ಬರೆದು ಮುಗಿಸಿದುದು.

ಈ ಪ್ರತಿಯಲ್ಲಿ ಒಂದು ವ್ಯಾಖ್ಯಾನವೂ ಇದೆ, ಆದರೆ ನಾಲ್ಕೇ ಪುಟಗಳಷ್ಟು. ಅದರ ಉಪಕ್ರಮದಲ್ಲಿ—

"ಸ್ವಸ್ತಿ ಶ್ರೀಮದನವರತವಿನಮದಮರೇಶ್ವರ-ಪ್ರಭೃತಿ-ಶತೇಂದ್ರ-ಮಣಿ-ಮಸ್ತಕ-ಮಣಿ-ಕಿರಣ-ಸಮೂಹಕೃತ-ಪುಷ್ಪಾಂಜಲಿ-ಪದಕಮಲ-ಯುಗಲಾರ್ಹತ್-ಪರಮೇಶ್ವರ-ಮುಖ-ಕಮಲ-ವಿನಿರ್ಗತಾನೇಕಾನ್ತಾತ್ಮಕ-ಪರಮಾಗಮಾಂಭೋಧಿ-ವರ್ಧನ-ಸುಧಾಸೂತಿ ಭವ್ಯಜನ-ಹೃದಯಾಲಂಕಾರ ಚಾರ್ವಾಕ-ಮೀಮಾಂಸಕ-ವೇದಾಂತ-ವೈಶೇಷಿಕ-ಭಾಟ್ಟ-ಪ್ರಾಭಾಕರ-ಕಾಣಾದಾದಿ-ಸಮಸ್ತವಾದಿ-ಕಲ್ಪಿತ-ಕುಮತ-ಕುಧರ-ಕುಲಿಶಾಯಮಾನ-ಸಮಸ್ಯಾಪೂರಣಾದ್ಯಖಿಲ-ಚಾತುರ್ಯ-ಸಮೇತ ಜಿನಸಮಯ-ಗಗನ-ಮಾರ್ತಾಂಡ-ಮಂಡಲಾಯಮಾನ-ಸಮಸ್ತರಾಜಾಧಿರಾಜ-ಪರಮೇಶ್ವರ-ನತಚರಣ-ಯುಗಲಃ **ಅಜಿತಸೇನಮುನೀಶ್ವರಃ ಬಂಗವಾಡಿ ಪುರಸ್ಥ ಶಾಂತೀಶ್ವರ ಚೈತ್ಯಾಲಯೇಽಲಂಕಾರಶಾಸ್ತ್ರಂ ಚಿಕೀರ್ಷುಸ್ತತ್ರ** ಮಂಗಲಮಾಚರತಿ—ಶ್ರೀಮತೇ ಇತ್ಯಾದಿ.

ಈ ವ್ಯಾಖ್ಯಾಕಾರನ ಅಭಿಪ್ರಾಯದಲ್ಲಿಯೂ ರಾಜಾಧಿರಾಜ ಪರಮೇಶ್ವರರು ನಮಸ್ಕರಿಸುತ್ತಿದ್ದ ಪ್ರಸಿದ್ಧ ಅಜಿತಸೇನನೇ ಅಲಂಕಾರಚಿಂತಾಮಣಿಯ ಕರ್ತೃ. "ಬಂಗವಾಡಿಪುರ"ದ ಶಾಂತೀಶ್ವರಚೈತ್ಯಾಲಯದಲ್ಲಿ ಇದನ್ನು ಬರೆದನೆಂದು ಅವನ ಊಹೆ.

ಈ "ಬಂಗವಾಡಿಪುರ"ವು ಪೂರ್ವೋಕ್ತ "ಬಂಕಾಪುರ"ವೇ[17] ಇರಬಹುದೆಂದೂ ಕಡೆಗೆ ಬರೆದ ವ್ಯಾಖ್ಯಾಕಾರನು ಸ್ವಲ್ಪ ಅದರ ಹೆಸರನ್ನು ಪಲ್ಲಟಿಸಿರಬಹುದೆಂದೂ ತೋರುತ್ತದೆ. ಆದರೆ ಕೋಲಾರ ಜಿಲ್ಲೆಯಲ್ಲಿ ಕೋಲಾರ ತಾಲೂಕಿನಲ್ಲಿ ಒಂದು "ಬಂಗವಾಡಿ"ಯೂ ಮುಳ

---

[14] ಪ್ರಾಯಿಕವಾಗಿ ಪಾಠಾಂತರಗಳ ಸೂಚನೆಯಿಲ್ಲ. ಆದರೆ ೭೦ ನೆ ಪುಟದ ಅಡಿಟಿಪ್ಪಣಿಯಲ್ಲಿ "ತದಾಕೃತಿಮಿತ್ಯತ್ರ ತೃಣಾದನಮಿತಿ ಪಾಠಾಂತರಮ್" ಎಂದು ಬರೆದಿರುವುದರಿಂದ ಮತ್ತೊಂದು ಪ್ರತಿಯನ್ನು—ಬಹುಶಃ ಅಪೂರ್ಣವಿದ್ದರೂ ಇರಬಹುದು—ಅವರು ಉಪಯೋಗಿಸಿಯೂ ಇರಬಹುದು. ಅಥವಾ ಇದೊಂದೇ ಪಾಠಾಂತರದ ಸೂಚನೆಯಿರುವುದನ್ನು ನೋಡಿದರೆ ಮೂಲವಾದ ಹಸ್ತಪ್ರತಿಯಲ್ಲೇ ಅದರ ಸೂಚನೆಯಿದ್ದರೂ ಇದ್ದಿರಬಹುದು ನಮ್ಮ ಹಸ್ತಪ್ರತಿಯಲ್ಲಿ (ಧಾರವಾಡ) ಮುದ್ರಿತ ಪಾಠವೇ ಇದೆ. [15] ಇದರ ನಂಬರು A. 67. [16] 'ಶಾಕೇಽಬ್ದೇ ನಗಸೂಪ ಭಾಜಿ'—ಲಿಪಿಕಾರನ ಗ್ರಂಥಾಂತ್ಯ ಪದ್ಯ. [17] ಶಾಸನಗಳಲ್ಲಿ ಇದು ಸುಪ್ರಸಿದ್ಧ. ನೋಡಿ: *Ep. Ind.* vol. xiii, *No.* 14, p. 168.

080.888
NAR

ಬಾಗಲು ತಾಲೂಕಿನಲ್ಲಿ ಇನ್ನೊಂದು "ಬಂಗವಾಡಿ"ಯೂ ಶಾಸನಗಳಲ್ಲಿ ಉಕ್ತವಾಗಿವೆ.[18] ಇದಮಿತ್ಥವೆಂದು ತೀರ್ಮಾನಿಸುವಂತಿಲ್ಲ.[19]

೪

ಪೂರ್ವೋಕ್ತ ಮುದ್ರಿತಪ್ರತಿಯ ಕಡೆಗೆ ಗ್ರಂಥ ಮುಗಿದ ಮೇಲೆ ಲಿಪಿಕಾರನು ಕೆಳಗಿನ ಶ್ಲೋಕಗಳನ್ನು ಬರೆದಿದ್ದಾನೆ:—

ಜಗತ್ಪೂಜ್ಯವಿಂಧ್ಯಾಗ್ರೇ ಇಕ್ಷ್ವಾಕುವರವಂಶಜಮ್ ।
ಸುರಾಸುರಾದಿವಂದ್ಯಾಂಘ್ರಿದೋರ್ಬಲೀಶಂ ನಮಾಮ್ಯಹಮ್ ॥
ರಾಜಾಧಿರಾಜಚಾಮುಂಡರಾಜ್ಞಾ ನಿರ್ಮಿತಪತ್ತನಮ್
ತತ್ಪುರೇ ಸ್ಥಿತವತಾಂ ಚಾರುಕೀರ್ತಿಪಂಡಿತಯೋಗಿನಾಮ್॥
ಪ್ಲವಸಂವತ್ಸರೇ ಮಾಸೇ ಶುಕ್ಲೇ ಚ ಸುಶರದೃತೌ ।
ಆಶ್ವಿಜೇ ಚ ಚತುರ್ದಶ್ಯಾಂ ಯುಕ್ತಾಯಾಂ ಗುರುವಾಸರೇ ॥
ಏತದ್ದಿನೇಷ್ವಲಂಕಾರಚಿಂತಾಮಣಿಸಮಾಹ್ವಯಮ್ ।
ಸಮ್ಯಕ್ಪಠಿತ್ವಾ ಶ್ರುತ್ವಾಹಂ ಸಂಪೂರ್ಣಂ ಶುಭಮಸ್ತು ನಃ ॥
ಕೌಶ್ಯಪೇ ನಾಮ್ನಿ ಗೋತ್ರೇ ಚ ಸೂತ್ರೇ ಚಾಹ್ವಾನನಾಮ್ನಿ ಚ ।
ಪ್ರಥಮಾನುಯೋಗಶಾಖಾಯಾಂ ವೃಷಭಪ್ರವರೇಪಿ ಚ ॥
ಏತದ್ವಂಶೇಷು ಜಾತೋಽಹಂ . . .

ಇಲ್ಲಿಯ ತಿಥಿವಾರಗಳು ಕೂಡಿದ ಪ್ಲವಸಂವತ್ಸರವು ಇಂಗ್ಲಿಷ್ ಪಂಚಾಂಗದ ೧೦–೧೦–೧೪೨೧ ಕ್ಕೆ ಸರಿಹೊಂದುವುದೆಂದು ಪಂಡಿತನಾರಾಯಣಸ್ವಾಮಿಶಾಸ್ತ್ರಿಗಳು ತಿಳಿಸಿದ್ದಾರೆ. ಹೀಗೆ ಗ್ರಂಥದ ಪ್ರತಿಯೇ ೧೪೨೧ ರಲ್ಲಿ ಆಗಿರಬೇಕಾದರೆ ಗ್ರಂಥದ ರಚನೆ ಅದಕ್ಕೂ ಪೂರ್ವದಲ್ಲಿ ಆಗಿರಬೇಕೆಂದು ಒಂದು ನಿರ್ದಿಷ್ಟ ಅವಧಿ ದೊರೆತಂತಾಗುತ್ತದೆ. ಬೇರೆ ಇನವಿಗಳಲ್ಲೂ ಕೂಡಬಹುದೋ ಹೇಗೆಂಬುದು ಇನ್ನೂ ವಿಚಾರಾರ್ಹವಾದ ವಿಷಯ.

೫

ಮುದ್ರಿತ 'ಗದ್ಯಚಿಂತಾಮಣಿ' ಮತ್ತು 'ಕ್ಷತ್ರಚೂಡಾಮಣಿ' ಎಂಬ ಎರಡು ಗದ್ಯಕಾವ್ಯಗಳ ಕರ್ತೃವಾದ ವಾದೀಭಸಿಂಹನು ಪ್ರಸಿದ್ಧ ಅಜಿತಸೇನನೇ ಎಂಬುದು ಭುಜಬಲಶಾಸ್ತ್ರಿಗಳ ಅಭಿಪ್ರಾಯ.[20] ಇದನ್ನು ಒಪ್ಪಲು ಸಾಕಷ್ಟು ಕಾರಣಗಳಿಲ್ಲವೆಂದು ನಾಥೂರಾಮ ಪ್ರೇಮಿಗಳ ಮತ.[21] "ದ್ರವಿಳಸಂಘದ ನಂದಿಗಣದರುಂಗಳಾನ್ವಯದ ವಾದೀಭಸಿಂಹರೆನಿಪ ಜಿತಸೇನ ಪಂಡಿತದೇವರು" ಎಂದು ಒಂದು ಶಾಸನದಲ್ಲಿ ಉಕ್ತವಾಗಿದೆ.[22] ಇವರೂ ಮಲ್ಲಿಷೇಣನ ಗುರುಪರಂಪರೆಯಲ್ಲಿ ಬರುವ ಮೂಲಸಂಘದ ಅಜಿತಸೇನಾಚಾರ್ಯರೂ ಭಿನ್ನವ್ಯಕ್ತಿಗಳೋ ಅಭಿನ್ನರೋ ಸ್ಪಷ್ಟವಿಲ್ಲ.

---

[18] *Epigraphia Carnatica*, vol. x. [19] ಮೈಸೂರು ಹಸ್ತಪ್ರತಿಯ ಈ ವಿವರಗಳನ್ನು ಅಲ್ಲಿಯ ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಟ್‌ನಲ್ಲಿ ಸಂಶೋಧಕ-ಪಂಡಿತರಾಗಿರುವ ವೇ. ಬ್ರ. ಶ್ರೀ ನಾರಾಯಣಸ್ವಾಮಿಶಾಸ್ತ್ರಿಗಳು ಒದಗಿಸಿ ಉಪಕಾರಮಾಡಿದ್ದಾರೆ. [20] ಜೈನಸಿದ್ಧಾಂತಭಾಸ್ಕರ, Vol. VI, No 2, pp. 78-87 ಮತ್ತು Vol. VII, No 1. pp. 1-8. [21] ಜೈನಸಿದ್ಧಾಂತ ಔರ ಇತಿಹಾಸ (1956), p. 314 f. [22] ಹುಂಚದ ಶಿಲಾಸ್ತಂಭಲೇಖ.

"ಶ್ರೀ ಮೂಲಸಂಘೇಽಜಿತಸೇನಸೂರಿಜಿನೇಂದ್ರಧರ್ಮಾಂಬರಚಾರುಚಂದ್ರಃ |
ರಾಜೇಂದ್ರಮೌಳಿಪ್ರವಿಚುಂಬಿತಾಂಘ್ರಿಃ ಜೀಯಾದಶೇಷಾಗಮಪಾರದೃಶ್ವಃ ||"[23]

ಎಂದು ವರ್ಣಿತರಾದವರು ಮಲ್ಲಿಷೇಣನ ಗುರುಗಳು. **ಬಹುವಿಶ್ರುತರಾದ, "ಗೊಮ್ಮಟಸಾರ"ದಲ್ಲೂ ಸ್ತುತರಾದ ಅಜಿತಸೇನರ ಕಾಲ ಹತ್ತನೆಯ ಶತಮಾನವೆಂಬುದು ನಿರ್ವಿವಾದ.** ಡಾ. ಉಪಾಧ್ಯೆ ಅವರು ಅಚ್ಚುಮಾಡಿರುವ[24] ಸೇನಗಣದ ಪಟ್ಟಾವಲಿಯೊಂದರಲ್ಲಿಯೂ ಒಬ್ಬ ಅಜಿತಸೇನರ ಉಲ್ಲೇಖವಿದೆ:—

'ಶ್ರೀ ಪಾರ್ಶ್ವಸೇನಾ ವಿಜಯಾದಿಸೇನಾಃ ಶ್ರೀ ರಾಜಸೇನಾ ಅಜಿತಾದಿಸೇನಾಃ' (ಪದ್ಯ ೩೭)

ಇದರಿಂದಲೂ ಅಲಂಕಾರಚಿಂತಾಮಣಿಯ ಕರ್ತೃನಿರ್ಣಯಕ್ಕೆ ಪ್ರಯೋಜನ ಕಡಿಮೆ.

೬

ಈಗ 'ಅಲಂಕಾರಚಿಂತಾಮಣಿ'ಯ ಅಂತರಪ್ರಮಾಣಗಳ ಕಡೆಗೆ ತಿರುಗೋಣ. ಶಾಂತಿನಾಥಜಿನ, ಸರಸ್ವತಿ, 'ಸಮಂತಭದ್ರಾದಿಕವಿಕುಂಜರ'ರ ನಮಸ್ಕಾರದನಂತರ ಸೂರಿಗಳ ಚೇತೋರಂಜನಕಾರಿಯೂ ಇಷ್ಟಾಲಂಕಾರ ಪ್ರದವೂ ಆದ 'ಅಲಂಕಾರಚಿಂತಾಮಣಿ' ಯೆಂಬ ಅಲಂಕಾರಗ್ರಂಥವನ್ನು ರಚಿಸುವೆನು ಎಂದು ಗ್ರಂಥ ಆರಂಭವಾಗುತ್ತದೆ.

ಅತ್ರೋದಾಹರಣಂ ಪೂರ್ವಪುರಾಣಾದಿಸುಭಾಷಿತಂ |
ಪುಣ್ಯಪೂರುಷಸಂಸ್ತೋತ್ರಪರಂ ಸ್ತೋತ್ರಮಿದಂ ತತಃ ||

ಎಂಬುದಾಗಿ ತಾನು ಪೂರ್ವಪುರಾಣಾದಿ ಸುಭಾಷಿತಗಳನ್ನೇ ಉದಾಹರಿಸುವುದರಿಂದ ಗ್ರಂಥವು ಪುಣ್ಯಪುರುಷಕೀರ್ತನರೂಪವಾದ ಸ್ತೋತ್ರವೂ ಆಗುವುದೆಂದು ತಿಳಿಸಿದ್ದಾನೆ. ಜಿನಸೇನನ 'ಪೂರ್ವಪುರಾಣ'ವೇ ಇಲ್ಲಿ ಅಭಿಪ್ರೇತವಿರಬೇಕು. ಮುಂದೆ ಪ್ರಹೇಳಿಕಾದಿ ಚಿತ್ರಕಾವ್ಯಗಳ ಉದಾಹರಣ ಪ್ರಸಂಗದಲ್ಲಿ ಸ್ಪಷ್ಟವಾಗಿಯೇ—

"ಶ್ರೀಮತ್ಸಮಂತಭದ್ರಾರ್ಯಜಿನಸೇನಾದಿಭಾಷಿತಂ |
ಲಕ್ಷ್ಯಮಾತ್ರಂ ಲಿಖಾಮಿ ಸ್ವನಾಮಸೂಚಿತಲಕ್ಷಣಂ ||"[26]

ಸಮಂತಭದ್ರ, ಜಿನಸೇನರ 'ಭಾಷಿತ'ವನ್ನೇ ಲಕ್ಷ್ಯವಾಗಿ ಬರೆಯುವೆನೆಂದು ತಿಳಿಸಿದ್ದಾನೆ; ಅಷ್ಟೆ ಅಲ್ಲ; "ಸ್ವನಾಮಸೂಚಿತಲಕ್ಷಣ"ವನ್ನೂ ಪ್ರಸ್ತಾಪಿಸಿದ್ದಾನೆ. ಈ ಸಂದರ್ಭದಲ್ಲಿ ಬರುವ ಇಪ್ಪತ್ತು ಪದ್ಯಗಳು ಜಿನಸೇನನ ಮಹಾಪುರಾಣದಲ್ಲಿ ದೊರೆಯುತ್ತವೆ.[27]

ವಟವೃಕ್ಷಃ ಪುರೋಽಯಂ ತೇ ಘನಚ್ಛಾಯಃ ಸ್ಥಿತೋ ಮಹಾನ್ |
ಇತ್ಯುಕ್ತೋಽಪಿ ನ ತಂ ಘರ್ಮೇ ಶ್ರಿತಃ ಕೋಽಪಿ ವದಾದ್ಭುತಂ ||[28]

---

[23] *Sources of Karnataka History*, pp. 168 and 171. [24] *Paṭṭāvali of the Senagaṇa*, Jaina Antiquary, Vol XIII, No. 2, p. 6. [25] ಅ. ಚಿಂ. I. 5. [26] ಅ. ಚಿಂ., II. 28.
[27] "ಇದಂ ಸರ್ವಂ ಪೂರ್ವಪುರಾಣೇ ದಿಕ್ಕನ್ಯಾಭಿರ್ಮರುದೇವ್ಯಾಲಸ್ಯಪರಿಹಾರಗೋಷ್ಠ್ಯಾಮುಕ್ತಂ' ಎಂದು ಪ್ರಕರಣವನ್ನು ಕವಿ ತಿಳಿಸಿದ್ದಾನೆ. [28] ಅ. ಚಿಂ., II. 29 ಮತ್ತು ಜಿನಸೇನನ ಮಹಾಪುರಾಣ, XII. 226.

ಎಂಬುದು ಮೊದಲನೆಯ ಪದ್ಯ. ಇದು ಮಹಾಪುರಾಣದ ಹನ್ನೆರಡನೆಯ ಸರ್ಗದ ೨೨೬ ನೆಯ ಪದ್ಯವಾಗಿದೆ. ಜಿನಸೇನನ ಮಂಗಳಶ್ಲೋಕವಾದ—

"ಶ್ರೀಮತೇ ಸಕಲಜ್ಞಾನಸಾಮ್ರಾಜ್ಯಪದಮೀಯುಷೇ |
ಧರ್ಮಚಕ್ರಭೃತೇ ಭರ್ತ್ರೇ ನಮಸ್ಸಂಸಾರಭೀಮುಷೇ ||"

ಎಂಬಲ್ಲಿ ಉಪಮೆಯಲ್ಲ, ರೂಪಕಾಲಂಕಾರವೇ ಎಂದು ಅಜಿತಸೇನನು ನಿರ್ಧರಿಸಿದ್ದಾನೆ.[29]

ಅರ್ಥಾಪತ್ತಿ ಅಲಂಕಾರಕ್ಕೆ ಲಕ್ಷ್ಯವಾಗಿ ಮಹಾವಾದಿಯೆಂದು ಪ್ರಸಿದ್ಧನಾದ ಸಮಂತಭದ್ರನ ಈ ಪದ್ಯವನ್ನುದಾಹರಿಸಲಾಗಿದೆ:—

"ಅವಟುತಟಮಟತಿ ಝುಟಿತಿ ಸ್ಫುಟಚಟುವಾಚಾಟಧೂರ್ಜಟೇರ್ಜಿಹ್ವಾ |
ವಾದಿನಿ ಸಮಂತಭದ್ರೇ ಸ್ಥಿತವತಿ ಕಾ ಕಥಾನ್ಯೇಷಾಮ್ ||"[30]

ಸೌಶಬ್ದ್ಯಕ್ಕೆ ಉದಾಹರಣೆಯಾಗಿ—

"ಕವೀನಾಂ ಗಮಕಾನಾಂ ಚ ವಾದಿನಾಂ ವಾಗ್ಮಿನಾಮಪಿ |
ಯಶಃ ಸಾಮಂತಭದ್ರೀಯಂ ಮೂರ್ಧ್ನಿ ಚೂಡಾಮಣೀಯತೇ ||"[31]

ಎಂಬ ಪದ್ಯವಿದೆ. ಚಕ್ರಬಂಧಾದಿ ಲಕ್ಷ್ಯದ ಕಡೆಯಲ್ಲಿ "ಏತತ್ಸರ್ವಂ ಜಿನಶತಕೇ ಪ್ರೋಕ್ತಂ"[32] ಎಂದು ಸಮಂತಭದ್ರನ ಗ್ರಂಥನಿರ್ದೇಶವೂ ಇದೆ.

"ಭವತೇ ಪ್ರಾಪ್ನುತೇ ಭವೇ ಪ್ರಾಪ್ತಾವಿಣಿಂತಿ ಅಮೋಘವೃತ್ತೌ ಉಕ್ತತ್ವಾತ್ ಆತ್ಮನೇಪದಂ"[33]

ಎಂಬಲ್ಲಿ ಶಾಕಟಾಯನವ್ಯಾಕರಣದ ಅಮೋಘವೃತ್ತಿಯ ನಿರ್ದೇಶವಿದೆ.

"ಚಕಾರಾಷ್ಟಸಹಸ್ರೀಂ ಕೋ ಮುನಿವೃನ್ದಾರಕೋ ಭುವಿ |
ಮಧ್ಯವರ್ಣದ್ವಯಂ ತ್ಯಕ್ತ್ವಾ ಕಾ ಜಾಯನ್ತೇ ವದಾಗಮಾತ್ || ವಿದ್ಯಾನಂದಃ |"

ಎಂಬಾಗ ಸಮಂತಭದ್ರನ 'ಆಪ್ತಮೀಮಾಂಸೆ'ಯ ಮೇಲೆ ರಚಿತವಾದ ಭಟ್ಟಾಕಳಂಕನ ಅಷ್ಟಶತಿಯ ವಿವರಣೆಗಾಗಿ ವಿದ್ಯಾನಂದನು ಬರೆದ 'ಅಷ್ಟಸಾಹಸ್ರೀ' ಎಂಬ ಭಾಷ್ಯದ ನಿರ್ದೇಶವಿದೆ.

ಹೀಗೆ ಜಿನಸೇನ, ಸಮಂತಭದ್ರ, ವಿದ್ಯಾನಂದ, ಶಾಕಟಾಯನ—ಇವರೆಲ್ಲರೂ ಕ್ರಿ. ಶ. ೯ನೆಯ ಶತಮಾನ ಅಥವಾ ಅದಕ್ಕೂ ಪೂರ್ವದವರು. ಇವುಗಳಷ್ಟರಿಂದಲೇ ಪ್ರಸಿದ್ಧ ಅಜಿತಸೇನನು ಅಲಂಕಾರ ಚಿಂತಾಮಣಿಯ ಕರ್ತೃವಲ್ಲವೆನ್ನುವಂತಿಲ್ಲ.

**ಆದರೆ ಗ್ರಂಥದಲ್ಲಿ ಇವರಂತೆ ಇನ್ನೊಬ್ಬನೇ ಒಬ್ಬನ ಸ್ಪಷ್ಟ ನಿರ್ದೇಶ ಎರಡು ಸಲ ಬಂದಿದೆ. ಅವನೆಂದರೆ ವಾಗ್ಭಟ.**

---

[29] ಅ. ಚಿಂ. IV. 23. [30] ಅ. ಚಿಂ. IV. 83. [31] ಅ. ಚಿಂ. V. 4. [32] ಅ. ಚಿಂ. II. 64ರ ವಿವರಣೆ. [33] ಅ. ಚಿಂ. III. 14ರ ವಿವರಣೆ.

"ಉದಾತ್ತತ್ವಮೌದಾರ್ಯೇsನ್ತರ್ಭವತಿ ವಾಗ್ಭಟಾದ್ಯಪೇಕ್ಷಯಾ"[34]

ಮತ್ತು

"ಪದಾನಾಮರ್ಥಚಾರುತ್ವಪ್ರತ್ಯಾಯಕ ಪದಾಂತರೈಃ |
ಮಿಲಿತಾನಾಂ ಯದಾದಾನಂ ತದೌದಾರ್ಯಂ ಸ್ಮೃತಂ ಯಥಾ ||
ಇತಿ ವಾಗ್ಭಟೋಕ್ತಿರಪೀಷ್ಟಾ"[35]

ಎಂಬವೇ ಆ ಎರಡು ಉಲ್ಲೇಖಗಳು.

ಸಂಸ್ಕೃತ ಅಲಂಕಾರಶಾಸ್ತ್ರದಲ್ಲಿ ಇಬ್ಬರು ವಾಗ್ಭಟರಿದ್ದಾರೆ. ವಾಗ್ಭಟಾಲಂಕಾರವನ್ನು ಬರೆದವನು ಮೊದಲನೆಯವನು. ಇವನ ಕಾಲ ವಿಕ್ರಮಾಬ್ದ ೧೧೭೮ (=ಕ್ರಿ. ಶ. ೧೧೨೧) ಎಂದರೆ ೧೨ ನೆಯ ಶತಮಾನವೆಂಬುದು ಸುನಿಶ್ಚಿತ. ಏಕೆಂದರೆ ವಾಗ್ಭಟಾಲಂಕಾರ ಟೀಕಾಕಾರ ಸಿಂಹ ಗಣಿಯು—

ಶ್ರೀ ಮದ್ವಾಗ್ಭಟದೇವೋsಪಿ ಜೀರ್ಣೋದ್ಧಾರಮಕಾರಯತ್ |
ಶಿಖೀಂದುರವಿ ವರ್ಷೇಚ ಧ್ವಜಾರೋಪಂ ವ್ಯಧಾಪಯತ್ ||

ಎಂಬಲ್ಲಿ ವಿಕ್ರಮಾಬ್ದ ೧೨೧೩ (=ಕ್ರಿ. ಶ. ೧೧೫೬) ರಲ್ಲಿ ವಾಗ್ಭಟನು ಜಿನಮಂದಿರವೊಂದರ ಜೀರ್ಣೋದ್ಧಾರ ಮಾಡಿದ ವಿಷಯನ್ನೂ ತಿಳಿಸಿದ್ದಾನೆ. ಈ ಗ್ರಂಥದಲ್ಲಿ ಕರ್ಣಪುತ್ರ ಜಯಸಿಂಹ ರಾಜನ (ಕ್ರಿ. ಶ. ೧೦೯೩-೧೧೪೩) ಪ್ರಶಂಸೆಯೂ ಬಂದಿದೆ. ಅಲಂಕಾರಚಿಂತಾಮಣೀಕಾರನು ಈ ಉದ್ಭಟನ ಔದಾರ್ಯಗುಣಲಕ್ಷಣವನ್ನು ಉದಾಹರಿಸಿರುವುದರಿಂದ ಅವನು ಬಹು ವಿಶ್ರುತ ನಾದ ಹತ್ತನೆಯ ಶತಮಾನದ ಅಜಿತಸೇನನಾಗಿರಲಾರನೆಂಬುದನ್ನು ಈಗ ನಿರ್ಣಯಿಸಲೇಬೇಕಾಗಿ ಬಂದಿದೆ.[36] ಈ ಅಜಿತಸೇನನು ಕ್ರಿ. ಶ. ೧೨ ನೆಯ ಶತಮಾನಕ್ಕಿಂತ ಈಚಿನವನೆಂಬುದು ಖಚಿತ. ಎಷ್ಟು ಈಚಿನವನೆಂಬುದನ್ನು ಇನ್ನು ನೋಡಬಹುದು.

೭

ಅಲಂಕಾರಚಿಂತಾಮಣಿಯಲ್ಲಿ ಗೂಢವಾದ ಸ್ವನಾಮನಿರ್ದೇಶವಿರುವುದನ್ನು ಮೇಲೆ ಸೂಚಿಸಲಾಯಿತು. ಈಗ ಅದನ್ನು ಸ್ವಲ್ಪ ವಿವರವಾಗಿ ನೋಡೋಣ:—

"ಅತ್ರ ಏಕಾದ್ಯಂಕ ಕ್ರಮೇಣ ಪಠಿತೇ ಸತಿ **ಅಜಿತಸೇನೇನ ಕೃತ ಚಿಂತಾಮಣಿ. ಭರತ ಯಶಸೀತಿ** ಗಮ್ಯತೇ ಎಂದು ಸುಸ್ಪಷ್ಟವಾಗಿ ಬರೆದಿರುವ ಚಕ್ರಬಂಧದ ಪದ್ಯಮತ್ತು ಚಿತ್ರಗಳಿವು.[37]

**ಪದ್ಯ**

ಅತ್ಯಾಕೃತ್ಯಮಲೋ ವರೋ ಭವಯಮಃ ಕುರ್ವನ್ಮತಿಂ ತಾಪಸೇ
ತತ್ಸಾತ್ವಚಿಂತ್ಯಮತಿಶ್ರಿತಾ ತವ ಸಿತಃ ಸ್ತುತ್ಯೋರುವಾಣಿಃ ಪುನಃ
ಜಿಷ್ಣೂತ ಸ್ಫುಟಶೀರ್ತಿವಾರವಶಮಃ ಶ್ರೇಯೋsಭಿದೇ ಮಂಡನೇ
ಧೀರ ಸ್ಥಾಪಯ ಮಾಂ ಪುರೋ ಗುರುವರ ತ್ವಂ ವರ್ಧಮಾನೋರುಧೀಃ ||

---

[34] ಅ. ಚಿಂ. V. 8 ರ ವಿವರಣೆ. [35] ಅ. ಚಿಂ. V. 95 ಮತ್ತು ವಿವರಣೆ. ಮತ್ತು 'ವಾಗ್ಭಟಾಲಂಕಾರ' III.4. [36] 'ಕಾವ್ಯಾನುಶಾಸನ'ವನ್ನು ಬರೆದ ಎರಡನೆಯ ವಾಗ್ಭಟನು ಇಲ್ಲಿ ಪ್ರಸಕ್ತನಲ್ಲ. [37] ಅ. ಚಿಂ III. 179.



ಮೇಲೆ ಅನುಕ್ರಮವಾಗಿ ೧, ೨, ೩, ಹೀಗೆ ಓದಬೇಕಾದ ಅಕ್ಷರ ಕ್ರಮವನ್ನು ನಿರ್ದೇಶಿಸಲಾಗಿದೆ. ಇದರ ಪರಿಶೀಲನೆಯಿಂದ ಅಲಂಕಾರಚಿಂತಾಮಣೀಕಾರನು ಅಜಿತಸೇನನೇ ಹೊರತು ಜಿನಸೇನನಲ್ಲವೆಂಬುದೂ ಅವನ ಉದಾಹರಣೆಗಳು **ಭರತಯಶೋಭೂಷಣ**ವೆಂಬುದೂ ಸಿದ್ಧವಾಗುತ್ತದೆ. ಕಾವ್ಯರೂಪವಾದ ಉದಾಹರಣೆಗಳಲ್ಲಿ ಭರತೇಶಚಕ್ರಿಯ ಯಶೋಗಾನವನ್ನು ವರ್ಣಿಸುವ ಪದ್ಯಗಳೇ ಮುಕ್ಕಾಲು ಮೂರುವೀಸೆ ಪಾಲು. ಇವೆಲ್ಲವೂ ಪರಕೃತಿಗಳಿಂದಲೇ ಉದ್ಧೃತವಾದುವೆಂಬಂತಿಲ್ಲ. ಚಂದ್ರಪ್ರಭ, ಅನಂತನಾಥ, ನೇಮಿಜಿನೇಶ ಮುಂತಾದ ಇತರ ಸ್ತೋತ್ರಗಳು[39] ಮಾತ್ರ ಅನುವಾದಿತವಿರಬಹುದೆನಿಸುತ್ತದೆ. ನಮ್ಮ ಊಹೆ ಸರಿಯಾದರೆ ಭರತೇಶವರ್ಣನೆಗೆ ಪ್ರವೃತ್ತವಾದ ಅಲಂಕಾರಚಿಂತಾಮಣಿಯ ಉದಾಹರಣಪದ್ಯಗಳೆಲ್ಲವೂ ಅಜಿತಸೇನಕೃತ. ಇದಕ್ಕೆ ಅವನಿಗೆ ಯಾವುದು ಮಾದರಿಯಾಗಿತ್ತೆಂದು ಪರಿಶೀಲಿಸುವುದಕ್ಕೂ ಈ ಚಕ್ರಬಂಧವೇ ಅತ್ಯಂತ ಸಹಕಾರಿಯಾಗಿದೆ. ನಮಗೆ ತಿಳಿದಮಟ್ಟಿಗೆ ಯಶೋಭೂಷಣರೂಪೀ ಅಲಂಕಾರ ಗ್ರಂಥಗಳ ಆರಂಭವಾದುದು ಸುಮಾರು ಕ್ರಿ. ಶ. ೧೩೦೦ ರಲ್ಲಿದ್ದ ವಿದ್ಯಾಧರನ ‘ ಏಕಾವಲಿ ’ ಯಿಂದ. ಆದರೆ ಅದಕ್ಕೆ ಹೆಚ್ಚಿನ ಪ್ರೀತ್ಯಾದರ ಪ್ರಚಾರಗಳನ್ನು ದೊರಕಿಸಿದವನು ಸ್ವಲ್ಪ ಹೆಚ್ಚು ಕಡಿಮೆ ಅದೇ ಕಾಲದವನಾದ ಪ್ರತಾಪರುದ್ರಯಶೋಭೂಷಣಕಾರ ವಿದ್ಯಾನಾಥ. ನಿಗೂಢ ಸ್ವನಾಮೋಲ್ಲೇಖವುಳ್ಳ ಚಕ್ರಬಂಧವನ್ನು ನಾವು ಮೊದಲು ಕಾಣುವುದೂ ಪ್ರತಾಪರುದ್ರೀಯದಲ್ಲಿಯೇ. ಅಲ್ಲಿ ಬರುವ ಪದ್ಯ–‘ಲಕ್ಷ್ಮೀವೀಕ್ಷಿತವೈಭವಸ್ಯ ಜಗತಾಂ ನಾಥಸ್ಯ ಭದ್ರಶ್ರಿಯೋ. . .’

---

[39] ಅ. ಚಿಂ. ಪುಟ ೮೯, ೬೯, ೫೬, ೪೯, ೪೧. ಇತ್ಯಾದಿಗಳು. ಇವು ‘ಭೂಪಾಲಚತುರ್ವಿಂಶತಿ’ ಮುಂತಾದ ಸ್ತೋತ್ರಗಳಲ್ಲಿ ಸಿಕ್ಕಬಹುದು, ಡಾ. ಉಪಾಧ್ಯೆಯವರು ಹೇಳುವಂತೆ.

ಇತ್ಯಾದಿ[40]ಯ ವಿವರಣೆಯಲ್ಲಿ—"ಅತ್ರ ಚಕ್ರಬಂಧೇ ವೈಜನಾಥಕೃತಿವೀರರುದ್ರಯಶ" ಇತಿ ಸಂಭಾವ್ಯತೇ ಎಂದಿದೆ. ಒಂದು ವೇಳೆ ಇದೇ ಅಜಿತಸೇನನಿಗೆ ಮಾದರಿಯಾಗಿರಬೇಕಾಗಿಲ್ಲವೆಂದು ವಾದಿಸಬಹುದು. ಆದರೆ ಮುಂದೆ ಅರ್ಥಾಲಂಕಾರಗಳ ಲಕ್ಷಣ, ವಿಭಾಗ, ವರ್ಗೀಕರಣ, ಕಡೆಗೆ ಲಕ್ಷ್ಯಪದ್ಯಗಳು. ಹಾಗೆಯೇ ಶಯ್ಯೆ, ಪಾಕ, ಗುಣ, ದೋಷಾದಿಗಳ ಪ್ರತಿಪಾದನೆಯಲ್ಲಿ ಸಹ ಪ್ರತಾಪರುದ್ರೀಯಕ್ಕೂ ಅಲಂಕಾರಚಿಂತಾಮಣಿಗೂ ಪರಿಸ್ಫುಟವಾದ ಶಬ್ದಸಾಮ್ಯ ಮತ್ತು ಅರ್ಥಸಾದೃಶ್ಯಗಳಿವೆ. ಒಂದೆರಡು ಮಾದರಿಗಳನ್ನು ಮಾತ್ರ ಬರೆಯುತ್ತೇವೆ:—

| ಪ್ರತಾಪರುದ್ರೀಯ | ಅಲಂಕಾರಚಿಂತಾಮಣಿ |
|---|---|
| ೧. ರಸವತ್ಪ್ರೇಯಊರ್ಜಸ್ವಿಸಮಾಹಿತಭಾವೋದಯ ಭಾವಸಂಧಿ ಭಾವಶಬಲತಾ ಸುರಸಭಾವಾದಿರ್ವ್ಯಜ್ಯತೇ. ಉಪಮಾವಿನೋಕ್ತ್ಯರ್ಥಾಂತರನ್ಯಾಸ ವಿರೋಧ ವಿಭಾವನೋಕ್ತ ಗುಣನಿಮಿತ್ತವಿಶೇಷೋಕ್ತಿ ವಿಷಮ ಸಮ ಚಿತ್ರಾಧಿಕಾನ್ಯೋನ್ಯ ಕಾರಣಮಾಲೈಕಾವಲೀವ್ಯಾಘಾತ ಮಾಲಾದೀಪಕ ಕಾವ್ಯಲಿಂಗಾನುಮಾನಸಾರಯಥಾಸಂಖ್ಯಾರ್ಥಾಪತ್ತಿ ಪರ್ಯಾಯ ಪರಿವೃತ್ತಿ ಪರಿಸಂಖ್ಯಾ ವಿಕಲ್ಪಸಮುಚ್ಚಯಸಮಾಧಿ ಪ್ರತ್ಯನೀಕ ಪ್ರತೀಪವಿಶೇಷ ನಿಮೀಲಸಾಮಾನ್ಯಾ ಸಂಗತಿತದ್ಗುಣಾತದ್ಗುಣ ವ್ಯಾಜೋಕ್ತಿ ವಕ್ರೋಕ್ತಿ ಸ್ವಭಾವೋಕ್ತಿ ಭಾವಿಕೋದಾತ್ತೇಷು ಸಹೃದಯ ಹೃದಯಾಹ್ಲಾದಿ ಸ್ಫುಟಂ ಪ್ರತೀಯಮಾನಂ ನಾಸ್ತಿ. . . ಇತ್ಯಾದಿ. (ಪು.) ೨೪೫ | ೧. ಪ್ರೇಯೋರಸವದೂರ್ಜಸ್ವಿ ಸಮಾಹಿತಭಾವಿಕೇಷು ರಸಭಾವಾದಿಃ ಪ್ರತೀಯತೇ. ಉಪಮಾವಿನೋಕ್ತಿವಿರೋಧಾರ್ಥಾಂತರನ್ಯಾಸ ವಿಭಾವನೋಕ್ತ ನಿಮಿತ್ತವಿಶೇಷೋಕ್ತಿವಿಷಮಸಮಚಿತ್ರಾಧಿಕಾನ್ಯೋನ್ಯ ಕಾರಣಮಾಲೈಕಾವಲೀದೀಪಕವ್ಯಾಘಾತ ಮಾಲಾಕಾವ್ಯಲಿಂಗಾನುಮಾನ ಯಥಾಸಂಖ್ಯಾರ್ಥಾಪತ್ತಿಸಾರಪರ್ಯಾಯಪರಿವೃತ್ತಿಸಮುಚ್ಚಯ ಪರಿಸಂಖ್ಯಾ ವಿಕಲ್ಪಸಮಾಧಿಪ್ರತ್ಯನೀಕವಿಶೇಷಮೀಲನ ಸಾಮಾನ್ಯ ಸಂಗತಿತದ್ಗುಣಾತದ್ಗುಣವ್ಯಾಜೋಕ್ತಿ ಪ್ರತೀಪ ವಕ್ರೋಕ್ತಿಸ್ವಭಾವೋಕ್ತಿ ಭಾವಿಕೋದಾತ್ತೇಷು ವಿಪಶ್ಚಿಚ್ಚೇತೋರಂಜನಂ ಸ್ಫುಟಂ ಪ್ರತೀಯಮಾನಂ ನ ವಿದ್ಯತೇ . . . ಇತ್ಯಾದಿ. (ಪು. ೫೨) |
| ೨. ಉಪಮಾಲಕ್ಷಣ—<br>ಸ್ವತಃ ಸಿದ್ಧೇನ ಭಿನ್ನೇನ ಸಂಮತೇನ ಚ ಧರ್ಮತಃ \|<br>ಸಾಮ್ಯಮನ್ಯೇನ ವರ್ಣ್ಯಸ್ಯ ವಾಚ್ಯಂ ಚೇದೇಕದೋಪಮಾ \|\|<br>(ಪು. ೨೫೪) | ೨, ಉಪಮಾಲಕ್ಷಣ—<br>ವರ್ಣ್ಯಸ್ಯ ಸಾಮ್ಯಮನ್ಯೇನ ಸ್ವತಃ ಸಿದ್ಧೇನ ಧರ್ಮತಃ \|<br>ಭಿನ್ನೇನ ಸೂರ್ಯಭೀಷ್ಟೇನ ವಾಚ್ಯಂ ಯತ್ರೋಪಮೈಕದಾ \|\|<br>(ಪು. ೫೪) |
| ೩. ನ್ಯೂನೋಪಮೆಯ ಅಭಾವಕ್ಕೆ ಲಕ್ಷಣ.—<br>ಉದನ್ವಾನಿವ ಗಂಭೀರಃ ಸುವರ್ಣಾದ್ರಿರಿವೋನ್ನತಃ \|<br>ದಿಙ್ಮದೇಭ ಇವ ಕ್ಷೋಣೀಧೌರೇಯಃ ಕಾಕತೀಶ್ವರಃ \|\|<br>(ಪು. ೨೫೪) | ೩. ಹೀನೋಪಮೆಯ ಅಭಾವಕ್ಕೆ ಲಕ್ಷ್ಯ—<br>ಸಮುದ್ರ ಇವ ಗಂಭೀರಃ ಸುಮೇರುರಿವ ಸೂನ್ನತಃ \|<br>ದಿಗ್ದಂತೀವ ಚ ಷಟ್ಖಂಡಧೌರೇಯೋ ಭರತೇಶ್ವರಃ \|\|<br>(ಪು. ೫೫) |
| ೪. ಶಯ್ಯೆಯ ಲಕ್ಷಣ—<br>ಯಾ ಪದಾನಾಂ ಪರಾನ್ಯೋನ್ಯಮೈತ್ರೀ ಶಯ್ಯೇತಿ ಕಥ್ಯತೇ \|<br>(ಪು. ೪೯) | ೪. ಶಯ್ಯೆಯ ಲಕ್ಷಣ—<br>ಪದಾನುಗುಣ್ಯರೂಪಾ ಯಾ ಮೈತ್ರೀ ಶಯ್ಯೇತಿ ಕಥ್ಯತೇ \|<br>(ಪು. ೧೧೬) |
| ೫. ದ್ರಾಕ್ಷಾಪಾಕದ ಲಕ್ಷಣ—<br>ದ್ರಾಕ್ಷಾಪಾಕಃ ಸ ಕಥಿತೋ ಬಹಿರಂತಃ ಸ್ಫುರದ್ರಸಃ \|<br>(ಪು. ೪೯) | ೫ ದ್ರಾಕ್ಷಾಪಾಕದ ಲಕ್ಷಣ:—<br>ದ್ರಾಕ್ಷಾಪಾಕಃ ಸ ಭಣ್ಯೇತ ಬಾಹ್ಯಾಭ್ಯಂತಃ ಸ್ಫುರದ್ರಸಃ \|<br>(ಪು. ೧೧೭) |
| ೬. ಅಜಹಲ್ಲಕ್ಷಣಾ ಯಥಾ—<br>ಪಶ್ಯ ಕಾಕತಿನಾಥಸ್ಯ ಪಾದಪೀಠೀಮನಾರತಮ್ \|<br>ಸ್ಫುರದ್ರತ್ನಪ್ರಭಾಜಾಲೈರಲಂಕುರ್ವಂತಿ ಮೌಲಯಃ \|\|<br>(ಪು. ೫೭) | ೬. ಅಜಹಲ್ಲಕ್ಷಣಾ ಯಥಾ—<br>ಪುರೋಃ ಸಮವಸೃತ್ಯನ್ತರಾಶ್ರಿತಂ ಸಿಂಹವಿಷ್ಟರಮ್ \|<br>ಅಲಂಚಕ್ರುಃ ಕಿರೀಟಾನಿ ನಾನಾರತ್ನಮರೀಚಿಭಿಃ \|\|<br>(ಪು. ೧೧೯-೧೨೦) |

[40] ಪ್ರತಾಪರುದ್ರೀಯ, ಬಾಲಮನೋರಮಾ ಸಂಸ್ಕರಣ, ಪು. ೨೫೨.

ಇತ್ಯಾದಿ ನೂರಾರು ಬರುವ ಭಾಷಾಸಾಮ್ಯಗಳೂ ಭಾವಸಾಮ್ಯಗಳೂ ಅಲಂಕಾರ ಚಿಂತಾಮಣೀಕಾರನು ಪ್ರತಾಪರುದ್ರೀಯಕಾರನಿಗೆ ಋಣಿಯಾಗಿರುವುದನ್ನು ಎತ್ತಿ ತೋರಿಸುತ್ತವೆ. ಆದುದರಿಂದ ಈ ಅಜಿತಸೇನನು ಕ್ರಿ. ಶ. ೧೩೫೦ ಕ್ಕಿಂತ ಹೇಗೂ ಹಿಂದಿನವ ನಾಗಲಾರನು.

೮

ಎಷ್ಟು ಈಚಿನವನಿರಬಹುದೆಂದು ವಿಮರ್ಶಿಸುತ್ತಾ ಹೊರಟರೆ " ಅಃ =ರತ್ನತ್ರಯಹೇತುಃ

ಅಕಾರೋ ಬ್ರಹ್ಮವಿಷ್ಣ್ವೀಶ ಕಮಠೇಷ್ವಂಗಣೇ ರಣೇ |
ಗೌರವೇsನ್ತಃಪುರೇ ಹೇತೌ ಭೂಷಣೇ....ಇತ್ಯಭಿಧಾನಾತ್ " (ಅ. ಚಿಂ., ಪು. ೫೦)

ಎಂಬ ಕೋಶದ ಉಲ್ಲೇಖವು ಸಹಾಯಕವಾಗುತ್ತದೆ. ಈ ಪದ್ಯವು ಪೂರ್ಣವಾಗಿ ಇರುಗಪ ದಂಡಾಧಿನಾಥನ ನಾನಾರ್ಥರತ್ನಮಾಲೆಯಲ್ಲಿ ಈ ಪಾಠದಂತೆ ದೊರೆಯುತ್ತದೆ:—

ಅಕಾರೋ ಬ್ರಹ್ಮವಿಷ್ಣ್ವೀಶ ಕಮಠೇಷ್ವಂಗಣೇ ರಣೇ !
ಗೌರವೇsನ್ತಃಪುರೇ ಹೇತೌ ಭೂಷಣೇ ಽಂ ಘ್ರಾವುಮೇಜ್ಯಯೋಃ || [41]

ಇದು ಅಲ್ಲಿ ಏಕಾಕ್ಷರಕಾಂಡದ ಮೊದಲನೆಯ ಶ್ಲೋಕವೇ. ಇರುಗಪನು ತಾನು ಹರಿಹರರಾಜನ 'ಎರಡನೆಯ ಅಂತಃಕರಣ'ವೆಂದು ಹೊಗಳಿಕೊಂಡಿದ್ದಾನೆ.[42] ವಿಜಯನಗರ ಸಾಮ್ರಾಜ್ಯ ಧುರಂಧರನಾದ ಹರಿಹರನ ರಾಜ್ಯಕಾಲ ೧೩೭೯-೧೪೦೬. ಎಂದಮೇಲೆ ' ಅಲಂಕಾರ ಚಿಂತಾಮಣಿ 'ಯು ಸುಮಾರು ೧೪೨೦ ರ ವೇಳೆಗೆ ರಚಿತವಾಗಿರಬಹುದೆಂದು ತೋರುತ್ತದೆ. ನಮ್ಮ ಮುದ್ರಿತ ಪುಸ್ತಕದ ಕಡೆಗೆ ಬಂದ ಲಿಪಿಕಾರನ ಕಾಲನಿರ್ದೇಶವು ಕ್ರಿ. ಶ. ೧೪೭೧ ಎಂಬುದು ನಿಜವಾದರೆ ಅಜಿತಸೇನನ ಜೀವಿತಕಾಲದಲ್ಲೇ ಆ ಪ್ರತಿಯು ಸಿದ್ಧವಾಗಿರುವುದೆಂದು ನಿರ್ಣಯಿಸಬಹುದಾಗಿದೆ.

೯

ಕನ್ನಡಿಗರ ವಿಶೇಷ ಲಕ್ಷ್ಯವನ್ನು ಸೆಳೆಯುವಂತಹ ಒಂದು ' ಸಮಸ್ಯೆ 'ಯ ಉದಾಹರಣೆ ಈ ಅಲಂಕಾರಚಿಂತಾಮಣಿಯಲ್ಲಿ ಬಂದಿದೆ. ಸಂಸ್ಕೃತದಲ್ಲಿ ಎರಡು ಪ್ರಶ್ನೆಗಳು, ಕನ್ನಡದಲ್ಲಿ ಒಂದು ಪ್ರಶ್ನೆ. ಈ ಮೂರಕ್ಕೂ ಉತ್ತರವಾಗಬಲ್ಲ ಸಂಸ್ಕೃತ-ಕನ್ನಡ ಸಮವಾದ ಒಂದೇ ಉತ್ತರವನ್ನು ಕೊಡಬೇಕೆಂಬುದು ಸಮಸ್ಯೆ. ಈ ಸಂಸ್ಕೃತ ಕರ್ಣಾಟ ಜಾತಿಗೆ ಉದಾಹರಣೆಯಾಗಿ ಅಜಿತಸೇನನು ಒಂದು ಶ್ಲೋಕಾರ್ಧವನ್ನು ಕನ್ನಡದಲ್ಲಿಯೇ ಬರೆದಿದ್ದಾನೆ—

ಜಹಾತಿ ಕೀದೃಶೀ ಕಾಂತಂ ವಧೂಃ ಸಂಬುಧ್ಯತಾಂ ರಿಪುಃ |
ಏನೆಂದು ಕರೆವಂ ನಾಥಂ ಕಾಂತೆಯಂ ಸಂಬುಭುಕ್ಷೆಯಿಂ ||

ಮೊದಲ ಎರಡು ಸಂಸ್ಕೃತ ಪ್ರಶ್ನೆಗಳು—೧. ಎಂತಹ ವಧುವು ಕಾಂತನನ್ನು ತೊರೆಯುವಳು? ೨. ರಿಪುವನ್ನು ಸಂಬೋಧಿಸು. ಮೂರನೆಯದು ಶುದ್ಧ ಕನ್ನಡದಲ್ಲಿರುವ

---

[41] *Decan College Publication*, ನಾನಾರ್ಥರತ್ನಮಾಲಾ, Ed. B. R. Sharma, P. 2, line 25.

[42] ' ದ್ವಿತೀಯಮಂತಃಕರಣಂ ರಾಜ್ಞೋ ಹರಿಹರಸ್ಯ ಯಃ |
ರಾಜಕಾರ್ಯಂ ಪ್ರಜಾರಕ್ಷಾಂ ದ್ವಯಂ ಧತ್ತೇ ಕುಲವ್ರತಂ ||'

ಪ್ರಶ್ನೆ. 'ಊಟಮಾಡುವುದಕ್ಕೆ ಬಂದ ಗಂಡನು ಹೆಂಡತಿಗೆ ಏನೆಂದು ಹೇಳುವನು ?' ಮೂರಕ್ಕೂ ಉಭಯ ಭಾಷಾತ್ಮಕವಾದ ಉತ್ತರ—"**ನೀರ ತಾರೇ**" ಎಂದು. ರತಾನ್ನಿರ್ಗತಾ 'ನೀರತಾ.' ಇದು ಮೊದಲನೆಯ ಪ್ರಶ್ನೆಗೆ ಸಂಸ್ಕೃತ ಉತ್ತರ. 'ಅರೇ' ಇದು ಎರಡನೆಯ ಪ್ರಶ್ನೆಗೆ ಸಂಸ್ಕೃತ ಉತ್ತರ. ಮೂರನೆಯ ಪ್ರಶ್ನೆಗೆ 'ನೀರನ್ನು ತಾರೇ' ಎನ್ನುವುದು ಕನ್ನಡ ಉತ್ತರ.

ಇಂತಹ ಅನೇಕ ಚಮತ್ಕಾರಮಯವಾದ ಅಂಶಗಳು ಗ್ರಂಥದಲ್ಲಿವೆ ರಸದ ವಿಷಯವಾಗಿ ಅಪೂರ್ವವಾದ ಒಂದು ವ್ಯಾಖ್ಯೆಯೂ ಇದೆ. ಇವನ್ನು ಬೇರೊಂದು ಲೇಖನದಲ್ಲಿ ಪ್ರಸ್ತಾಪಿಸ ಲುದ್ದೇಶಿಸಿದೆ.

೧೦

ಈ ವಿಸ್ತೃತ ವಿಮರ್ಶೆಯ ಮಥಿತಾರ್ಥವಿಷ್ಟೆ—ಸಂಸ್ಕೃತದಲ್ಲಿ 'ಅಲಂಕಾರ ಚಿಂತಾಮಣಿ'ಯನ್ನು ಬರೆದವನು ಕನ್ನಡಿಗ. ಇವನು ಜಿನಸೇನನಲ್ಲ, ಅಜಿತಸೇನ. ಇತಿಹಾಸ ಪ್ರಸಿದ್ಧನಾದ ಅಜಿತಸೇನ ಬೇರೆ, ಈ ಅಜಿತಸೇನ ಬೇರೆ. ಅವನು ಹತ್ತನೆಯ ಶತಮಾನದವನು ; ಇವನು ಪ್ರಾಯಃ ಹದಿನೈದನೆಯ ಶತಮಾನದ ಆದಿಯಲ್ಲಿದ್ದವನು. ಗ್ರಂಥದಲ್ಲಿ ಅಧ್ಯಯನ ಯೋಗ್ಯವಾದ ಕೆಲವೊಂದು ವಿಶಿಷ್ಟ ವಿಷಯಗಳಿವೆಯಾದರೂ, ಇವನು ವಾಗ್ಭಟ ವಿದ್ಯಾನಾಥರಿಗೆ ತನ್ನ ಗ್ರಂಥ ಯೋಜನೆಯಲ್ಲಿ ಮತ್ತು ವಿಷಯನಿರೂಪಣೆಯಲ್ಲಿ ತುಂಬಾ ಋಣಿ. ಕೇವಲ ಜೈನ ತೀರ್ಥಂಕರಾದಿಗಳ ಪ್ರಶಸ್ತಿಪರವಾದ ಲಕ್ಷ್ಯಗಳಿರುವುದು ಇದರ ವೈಶಿಷ್ಟ್ಯ.

**ಕೆ. ಕೃಷ್ಣಮೂರ್ತಿ**

# ರಾಜಕಾರಣಪಟು ಶ್ರೀನಿವಾಸಶಾಸ್ತ್ರಿಗಳವರು

ರಾಷ್ಟ್ರದ ಇತಿಹಾಸ ಗ್ರಂಥಗಳಲ್ಲಿ ಪ್ರಧಾನ ವ್ಯಕ್ತಿಗಳಾಗಿ ಕಾಣುವವರು ದೈಹಿಕ ಪೌರುಷವನ್ನೋ ಅಥವಾ ಆಧ್ಯಾತ್ಮಿಕ ಪ್ರತಿಭೆಯನ್ನೋ ಮೆರೆದವರು ಮಾತ್ರ. ಇತಿಹಾಸ ಮಂದಿರದಲ್ಲಿ ಮೌನವಾಗಿದ್ದುಕೊಂಡು ಜ್ಞಾನರಾಜ್ಯವನ್ನು ವಿಸ್ತರಿಸಿದ ರಾಜನೀತಿ ಮತ್ತು ತತ್ವಚಿಂತಕರು ಗಣನೆಗೇ ಬರುವುದಿಲ್ಲ. ರಣರಂಗದಲ್ಲಿ ಹೋರಾಡಿ ನಾಡಿನ ಕೀರ್ತಿ ಗೌರವ ಗಳನ್ನು ಕಾಪಾಡಿದ ಯೋಧರಂತೆ, ರಾಜಕೀಯ ರಂಗದಲ್ಲಿ ಜ್ಞಾನಸಂಪತ್ತನ್ನು ವಿಸ್ತರಿಸಿದವರು ಇತಿಹಾಸದ ಮಹಾಪುರುಷರೇ. ಧರ್ಮ, ಸಂಸ್ಕೃತಿ, ಸಾಹಿತ್ಯ, ರಾಜನೀತಿ ಮುಂತಾದವುಗಳನ್ನು ತಮ್ಮ ಪ್ರತಿಭೆಯ ಬೆಳಕಿನಲ್ಲಿ ರೂಪಿಸಿದವರು ಮಾನವ ಕಲ್ಯಾಣವನ್ನು ಸಾಧಿಸಿಯೇ ಇರುವರು. ಅಂತಹ ಕೆಲವು ಪ್ರತಿಭಾಪುರುಷರ ಕಾಣಿಕೆಯಿಂದಲೇ ಭಾರತದ ನಾಗರಿಕತೆಯ ಬಹುಭಾಗ ನಿರ್ಮಾಣವಾಗಿರುವುದು.

ಭಾರತದ ಇತಿಹಾಸ ಬಹಳ ದೊಡ್ಡದು. ಕಾಲಚಕ್ರದ ಪರಿವರ್ತನೆಯೊಂದಿಗೆ ವಿಕಸಿತ ವಾದ ಭಾರತದ ಪ್ರಾಚೀನ ಪವಿತ್ರ ನಾಗರಿಕತೆಯು ಪ್ರಪಂಚವನ್ನೇ ಮುಗ್ಧವನ್ನಾಗಿ ಮಾಡಿರುವುದು. ಹಾಗೆಯೇ ಕೆಲವು ಶತಮಾನಗಳಲ್ಲಿ ಇತರ ರಾಷ್ಟ್ರಗಳ ಇತಿಹಾಸಗಳಂತೆ ಅದರ ನಾಗರಿಕತೆಯು ಮಲಿನವಾಗಿ ಸ್ವವ್ಯೂಹ ಕಲಹದ ಅಂಧಕಾರವು ರಾಷ್ಟ್ರ ಜೀವನವನ್ನು ಆಕ್ರಮಿಸಿತು. ಪ್ರಗತಿಪರ ಚಿಹ್ನೆಗಳು ವಿಜೃಂಭಿಸುತ್ತಿರುವ ಕಾಲದಲ್ಲಿಯೇ ಪ್ರಮಾದದ ಆಲಸ್ಯದ ಬೀಜಗಳು ಮೊಳೆತು ಇತಿಹಾಸದ ಉಜ್ವಲ ಶಾಂತಿಯನ್ನು ಮಸುಕನ್ನಾಗಿ ಮಾಡಿದ್ದೂ ಉಂಟು. ಮಹಮದೀಯರ ಆಳಿಕೆಯ ತರುವಾಯ ಬಂದ ಬ್ರಿಟಿಷ್ ರಾಜನೀತಿಯ ಸಂಪರ್ಕ ದಿಂದ ಸ್ವಲ್ಪ ಕಾಲದಲ್ಲಿಯೇ ಅನೇಕ ವ್ಯಕ್ತಿಗಳು ಸುಪ್ತವಾಗಿದ್ದ ತಮ್ಮ ಪ್ರತಿಭೆಯನ್ನು ಬೀರಿ, ರಾಷ್ಟ್ರದ ಇತಿಹಾಸವನ್ನು ತೇಜಃಪುಂಜವಾಗಿ ಮಾಡುತ್ತಾ ಬಂದರು. ಹತ್ತೊಂಬತ್ತನೆಯ ಶತಮಾನದಿಂದೀಚೆಗೆ ಬ್ರಿಟಿಷ್ ರಾಜನೀತಿಯ ಔದಾರ್ಯ ಮತ್ತು ವಿದ್ಯಾಪ್ರಸಾರಗಳು ಹಲವು ಮಹಾವ್ಯಕ್ತಿಗಳ ವಿಕಾಸಕ್ಕೂ ರಾಷ್ಟ್ರದ ಪ್ರಗತಿಗೂ ಸಾಧಕಗಳಾದುವು. ಇಂತಹ ಮಹಾ ವ್ಯಕ್ತಿಗಳಲ್ಲಿ ಶ್ರೀ ಶ್ರೀನಿವಾಸಶಾಸ್ತ್ರಿಗಳೂ ಒಬ್ಬರು.

ಇವರು ಕುಂಭಕೋಣದ ಪ್ರೌಢವಿದ್ಯಾಶಾಲೆಯಲ್ಲಿ ಚಿಕ್ಕ ವಯಸ್ಸಿನಲ್ಲೇ ಉತ್ತೀರ್ಣ ಹೊಂದಿ ಹದಿನೇಳು ವರ್ಷಗಳ ಕಾಲ ಮದರಾಸಿನಲ್ಲಿ ಉಪಾಧ್ಯಾಯ ವೃತ್ತಿಯನ್ನು ಅವಲಂಬಿಸಿ ದರು. ಸ್ವಾರ್ಥತ್ಯಾಗ, ಸಾಹಿತ್ಯಪ್ರೇಮ ಮತ್ತು ಮಾನವನ ದುಃಸ್ಥಿತಿಗಾಗಿ ಮರುಗುವ ಮನೋಧರ್ಮ—ಈ ಉದಾತ್ತ ಗುಣಗಳು ಪರಂಪರಾನುಗತವಾಗಿ ಅವರಲ್ಲಿ ಬಂದ ಲಕ್ಷಣಗಳು. ಎಷ್ಟೇ ಪ್ರತಿಭಾವಂತರಾದರೂ ವ್ಯಕ್ತಿಯ ಪ್ರತಿಭೆ ವಿಕಸಿಸಬೇಕಾದರೆ ಅಗತ್ಯವೆನಿಸುವ ಶಿಕ್ಷಣ ಸನ್ನಿವೇಶಗಳು ಇದ್ದೇ ಇರಬೇಕು. ಈ ಅವಕಾಶ ಶಾಸ್ತ್ರಿಗಳಿಗೆ ದೊರಕಿತು. ಪ್ರಕೃತಿದತ್ತವಾಗಿ ಬಂದಿದ್ದ ಪ್ರತಿಭೆ ಪ್ರಕಾಶಕ್ಕೆ ಬರಲು ನೆರವಾಗತಕ್ಕ ಜ್ಞಾನಾಕಾಂಕ್ಷೆ, ಶ್ರಮಸಹಿಷ್ಣುತೆ, ಉದ್ಯೋಗಶೀಲತೆ, ಶಾಂತಿಸಹನೆ—ಈ ಎಲ್ಲಾ ಹಿನ್ನೆಲೆಗಳೂ ಅವರಲ್ಲಿ ಬೆಳೆದು ಬಂದಿದ್ದವು. ಅವರ ಪ್ರತಿಭೆ ವಿಕಸಿಸಿ ಪ್ರಕಾಶಕ್ಕೆ ಬರುವುದು ನಿಧಾನವಾದರೂ ಮದರಾಸಿನ ಪ್ರಬಲ ವ್ಯಕ್ತಿ ಗಳಾದ ಶ್ರೀ ನಟೇಶನ್, ಶ್ರೀ ಕೃಷ್ಣಸ್ವಾಮಿ ಐಯ್ಯರ್ ಮತ್ತು ಶ್ರೀ ಗೋವಿಂದ ರಾಘವ ಮುಂತಾದವರ ನಿಕಟ ಸಂಬಂಧದಿಂದ ಬಲು ಬೇಗನೆ ಸಾರ್ವಜನಿಕ ಕ್ಷೇತ್ರಗಳಲ್ಲಿ ವೃದ್ಧಿ ಹೊಂದಲು ಅವಕಾಶವಾಯಿತು. ೧೯೦೫ರಲ್ಲಿ ಲಾರ್ಡ್ ಕರ್ಜನ್ ಮಾಡಿದ ಬಂಗಾಳದ ವಿಭಜನೆಯ ಪರಿಣಾಮವಾಗಿ ಆಂದೋಲನಗಳು ಮತ್ತು ರಕ್ತಪಾತ ಇಡೀ ರಾಷ್ಟ್ರವನ್ನೇ

ಅಲ್ಲಾಡಿಸಿದರೂ, ನಾಯಕರು ಉದ್ವೇಗಗೊಂಡರೂ—ಈ ಸನ್ನಿವೇಶ ಶಾಸ್ತ್ರಿಗಳ ಮನಸ್ಸನ್ನು ಮಾತ್ರ ಕದಲಿಸಲಿಲ್ಲ. ಅವರು ಗೋಖಲೆಯವರ ಅನುಯಾಯಿಗಳೂ ಮತ್ತು ಮಿತಶೀಲ ಪಕ್ಷದವರೂ ಆದುದರಿಂದ ಕ್ರಾಂತಿಕಾರಿ ಭಾವನೆಗಳು, ತೀವ್ರ ಹಿಂಸಾತ್ಮಕ ಮನೋವೃತ್ತಿ ಇವು ಅವರ ಮನಸ್ಸಿಗೆ ಒಪ್ಪಲಿಲ್ಲ. ಸಾರ್ವಲೌಕಿಕವಾದ ಮತ್ತು ಶಾಂತಿಪ್ರಧಾನವಾದ ಜೀವನವನ್ನು ಒಪ್ಪುವ ಪಕ್ಷ ಅವರದು. ಜಾತ್ಯತೀತವಾದ ದೃಷ್ಟಿಯಿಂದ ಕೂಡಿದ್ದರಿಂದ ಅವರು ಸರ್ವಸಮವಾದಿಗಳು. ಪವಿತ್ರಮಾನವೀಯತೆಯನ್ನು ವಿಧಿಬದ್ಧ ಸರ್ಕಾರದ ನೆರವಿನಲ್ಲಿ ಶ್ರದ್ಧಾಭಕ್ತಿ ಪುರಸ್ಸರವಾಗಿ ಕಾಪಾಡಿಕೊಳ್ಳುವುದು ಅವರ ಉತ್ಕಟ ಆಕಾಂಕ್ಷೆ.

ಆದುದರಿಂದ ಶಾಸ್ತ್ರಿಗಳು ಮಾಡರೇಟ್ ಪಕ್ಷದ ನಾಯಕರಾದ ಶ್ರೀ ಗೋಪಾಲಕೃಷ್ಣ ಗೋಖಲೆಯವರ ಆಹ್ವಾನವನ್ನು ಸ್ವೀಕರಿಸಿ ಉಪಾಧ್ಯಾಯ ವೃತ್ತಿಗೆ ರಾಜಿನಾಮೆಯಿತ್ತು ೧೯೦೭ ರಲ್ಲಿ ಪುಣೆಯಲ್ಲಿದ್ದ ಸರ್ವೆಂಟ್ಸ್ ಆಫ್ ಇಂಡಿಯಾ ಸಮಾಜಕ್ಕೆ ಸೇರಿದರು. ರಾಜಕೀಯ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆಗಾಗಿ ೧೯೧೩ ರಲ್ಲಿ ಮದರಾಸಿನ ನ್ಯಾಯವಿಧಾಯಕ ಸಭೆಯ ಸದಸ್ಯರಾದರು. ೧೯೧೫ ರಲ್ಲಿ ಗೋಖಲೆಯವರ ನಿಧನದ ಅನಂತರ ಸರ್ವೆಂಟ್ಸ್ ಆಫ್ ಇಂಡಿಯಾ ಸಮಾಜದ ಅಧ್ಯಕ್ಷರಾದರು. ಇದರಿಂದ ಅವರ ಪ್ರತಿಭೆ, ಮೇಧಾಶಕ್ತಿ ಮತ್ತು ರಾಜಕಾರಣಪಟುತ್ವ ವಿಕಾಸವಾಗುವುದಕ್ಕೆ ಅವಕಾಶವಾಯಿತು. ಕೆಲವು ಕಾಲದಲ್ಲೇ ಮೆಟ್ಟಲು ಮೆಟ್ಟಲಾಗಿ, ಹೆಚ್ಚು ಹೆಚ್ಚು ಖ್ಯಾತಿಯನ್ನು ಪಡೆದರು. ಬ್ರಿಟಿಷ್ ಸುಪ್ರಸಿದ್ಧ ರಾಜಕಾರಣಿಗಳ ಸಂಪರ್ಕವನ್ನು ಹೊಂದಿದರು. ರಾಜಕೀಯರಂಗದಲ್ಲಿ ಅಗತ್ಯವೆನಿಸಿದ ಸುಧಾರಣೆಗಳ ರಚನೆ ಮತ್ತು ಸಿದ್ಧಿಯಲ್ಲಿ ಮಹತ್ವದ ಪಾತ್ರವನ್ನು ವಹಿಸಿದರು. ಸಾಮ್ರಾಜ್ಯದ ಜಟಿಲ ಪ್ರಶ್ನೆಗಳ ಪರಿಶೀಲನೆಯಲ್ಲಿ, ಇಡೀ ಮಾನವಕೋಟಿಗೆ ಅನ್ವಯಿಸುವ ಮತ್ತು ಆಧಾರಭೂತವಾದ ಸಾರ್ವತ್ರಿಕ ನಿಯಮಗಳನ್ನು ರೂಢಿಸುವ ಪ್ರಯತ್ನಗಳಲ್ಲಿ ಮತ್ತು ಸಮಾಲೋಚನೆಗಳಲ್ಲಿ ಅವರ ರಾಜಕಾರಣ ಪರೀಕ್ಷಣದ ಬುದ್ಧಿ ಪ್ರಕಾಶಕ್ಕೆ ಬಂತು. ಅಂತರರಾಷ್ಟ್ರೀಯ ಸಭೆಗಳ ಸದಸ್ಯತ್ವ ಅವರಿಗೆ ದೇಶವಿದೇಶಗಳ ಪರ್ಯಟನೆಗೆ ಅವಕಾಶ ದೊರಕಿಸಿತು. ಆಸ್ಟ್ರೇಲಿಯಾ, ನ್ಯೂಜೀಲೆಂಡ್, ಕೆನಡಾ, ಮತ್ತು ದಕ್ಷಿಣ ಆಫ್ರಿಕಾ ಮುಂತಾದ ದೇಶಗಳಲ್ಲಿ ಪ್ರವಾಸಮಾಡಿದರು. ಭಾರತೀಯರ ಹಕ್ಕುಬಾಧ್ಯತೆಗಳನ್ನು ಮತ್ತು ಮಾನವೀಯತೆಯನ್ನು ಕಾಪಾಡುವುದಕ್ಕಾಗಿ ಇತರ ವಿದೇಶೀಯರೊಡನೆ ಸಂಪರ್ಕ ಬೆಳಸಿ, ಯುಕ್ತಾಯುಕ್ತ ಪರಿಜ್ಞಾನದಿಂದ ಕೂಡಿದ ಉನ್ನತ ಸಲಹೆಗಳನ್ನು ಕೊಟ್ಟರು. ಭಾರತೀಯರ ದಾರಿದ್ರ್ಯ ಮತ್ತು ದುಃಸ್ಥಿತಿಗಳನ್ನು ದೂರೀಕರಿಸಲು ಅವರು ಪಟ್ಟ ಶ್ರಮ, ಸಾಧಿಸಿದ ಆಕಾಂಕ್ಷೆಗಳು, ಶೌರ್ಯ, ದಕ್ಷತೆ, ಚಾತುರ್ಯ ಇವೆಲ್ಲವೂ ಮಾಡರೇಟ್ ಪಕ್ಷದ ಮತ್ತು ರಾಷ್ಟ್ರದ ಇತಿಹಾಸ ಮಂದಿರದಲ್ಲಿಯೇ ಒಂದು ಉಜ್ವಲ ಪ್ರಕರಣ.

ದಕ್ಷಿಣ ಆಫ್ರಿಕಾಖಂಡದಲ್ಲಿ ನೆಲಸಿದ್ದ ಭಾರತೀಯರ ದಾರುಣ ಕಷ್ಟನಿವಾರಣೆಗಳಿಗಾಗಿ ಶಾಸ್ತ್ರಿಗಳು ೧೯೨೭ ರಲ್ಲಿ ಅಲ್ಲಿಗೆ ಹೋಗಬೇಕಾಯಿತು. ಅದಕ್ಕೆ ಮಹಾತ್ಮಾ ಗಾಂಧೀಜಿಯವರ ಆಶೀರ್ವಾದ ಮುದ್ರೆ ಬಿತ್ತು. ಎರಡು ವರ್ಷಗಳಕಾಲ ಪ್ರವಾಸಮಾಡಿ, ಆಫ್ರಿಕನ್ನರ ಸಹವಾಸ ಬೆಳಸಿ, ಸರ್ಕಾರದೊಡನೆ ಯಶಸ್ವಿಯಾಗಿ ಹೋರಾಟವನ್ನು ನಡೆಸಿ ಭಾರತೀಯರ ಭಾರ ಸ್ವಲ್ಪ ಕಡಿಮೆಯಾಗುವಂತೆ ಮಾಡಿದರು. ಇವರ ಆಫ್ರಿಕಾಖಂಡದ ಪ್ರವಾಸ ರಾಷ್ಟ್ರದ ಇತಿಹಾಸ ಪುಟಗಳಲ್ಲಿ ಒಂದು ಮುಖ್ಯವಾದ ಅಧ್ಯಾಯ. ಭೌತಿಕ, ಮಾನಸಿಕ ಮತ್ತು ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ, ಲಲಿತಕುಶಲಕಲೆಗಳಲ್ಲಿ ಭಾರತೀಯರು ಉತ್ತಮ ಸಾಧನೆಗಳನ್ನು ನಡೆಸಿ ಇಡೀ ಪ್ರಪಂಚವನ್ನೇ ಮುಗ್ಧವನ್ನಾಗಿ ಮಾಡಿದ ಸತ್ಯದರ್ಶನವನ್ನು ಬಿಳೀ ಜನಾಂಗದ ಮುಂದೆ ತಂದು ಅವರ ಮಾನವೀಯತೆಯನ್ನು ವೃದ್ಧಿಗೊಳಿಸಿ ಅವರಿಗೆ ಕಪ್ಪು ಜನರಲ್ಲಿಯೂ, ಮತ್ತು ವಲಸೆಹೋಗಿದ್ದ ಭಾರತೀಯರಲ್ಲಿಯೂ ಇದ್ದ ಉಪೇಕ್ಷೆ ಉದ್ರೇಕಭಾವನೆಗಳನ್ನು ತಡೆಗಟ್ಟಿದರು. ಭಾರತೀಯರ ಹಕ್ಕುಬಾಧ್ಯತೆಗಳ ರಕ್ಷಣೆಗಾಗಿ ಲಂಡನ್‌ನಲ್ಲಿ ಸಮಾವೇಶಗೊಂಡ ಚಕ್ರಗೋಷ್ಠಿಯಲ್ಲಿ ವಾದಿಸಿ ಆಂಗ್ಲೇಯ ಜನಾಂಗದವರಲ್ಲಿದ್ದ ಸಾಮ್ರಾಜ್ಯ ದಾಹದ ಚಿತ್ರವನ್ನು ಕೊಟ್ಟು ಅವರ ಸಂಕುಚಿತ

ಮನೋಭಾವನೆಯನ್ನು ವಿವರಿಸಿ ಸಾಮ್ರಾಜ್ಯ ಅಂತರ್ಗತ ಸ್ವರಾಜ್ಯದ ಸ್ವರೂಪವನ್ನು ಭಾರತಕ್ಕೆ ದೊರಕಿಸಿಕೊಡುವುದಕ್ಕಾಗಿ ವಾದಿಸಿದರು. ಪ್ರಪಂಚದಾದ್ಯಂತವಾಗಿ ೧೯೩೦-೩೧ ರಲ್ಲಿ ಮತ್ತು ೧೯೩೫-೩೮ ರಲ್ಲಿ ಭಾರತದ ಬಗ್ಗೆ ಸಹಾನುಭೂತಿ ಹುಟ್ಟುವ ಹಾಗೆ ಉಪನ್ಯಾಸಗಳ ಮೂಲಕ, ಲೇಖನಗಳ ಮೂಲಕ, ರಾಷ್ಟ್ರನಾಯಕರೊಡನೆ ಚರ್ಚೆಯ ಮೂಲಕ ಶ್ರಮಿಸಿ ಇಡೀ ಪ್ರಪಂಚದ ಸಮಗ್ರ ದೃಷ್ಟಿ ಭಾರತದ ಕಡೆ ಹರಿಯುವ ಹಾಗೆ ಮಾಡಿದರು. ಭಾರತಕ್ಕೆ ಹಿಂದಿರುಗಿದನಂತರ ಸ್ವಲ್ಪ ಕಾಲದಲ್ಲಿಯೇ ಅವರ ಆರೋಗ್ಯ ಕೆಟ್ಟಿತು. ರಾಜಕೀಯದಲ್ಲಿ ಹೆಚ್ಚು ಶ್ರಮ ವಹಿಸಲು ಸಾಧ್ಯವಾಗಲಿಲ್ಲ. ಆದರೂ ಗಾಂಧೀಜಿಯವರೊಡನೆ ಬಂಧುವಿನಂತೆ ವರ್ತಿಸಿದರು. ಮಧ್ಯಸ್ಥಿಕೆಯನ್ನು ವಹಿಸಿ ಬ್ರಿಟಿಷರ ಮತ್ತು ಕಾಂಗ್ರೆಸ್‌ಪಕ್ಷದ ಪರಸ್ಪರ ವಿರುದ್ಧ ದೃಷ್ಟಿಗಳ ಸಮನ್ವಯಕ್ಕಾಗಿ ಪ್ರಯತ್ನಪಟ್ಟರು. ಬ್ರಿಟಿಷರ ಮತ್ತು ಕಾಂಗ್ರೆಸ್‌ಪಕ್ಷದ ಅಪಾರ ಪ್ರೀತಿ ಮತ್ತು ವಿಶ್ವಾಸವನ್ನು ಸಂಪಾದಿಸಿದರು.

ವಿಶ್ರಾಂತಿಯ ಕಾಲದಲ್ಲಿ ರೋಗರುಜಿನಗಳ ಬಾಧೆ ಇದ್ದರೂ ರಾಜಕೀಯದಲ್ಲಿ ಆಲಸ್ಯ ಹುಟ್ಟಿದರೂ ತಮ್ಮ ಅಪಾರ ಶಕ್ತಿಯನ್ನು ಇತರ ಕ್ಷೇತ್ರಗಳಲ್ಲಿ ಉಪಯೋಗಿಸಲು ಉತ್ತೇಜನ ಬಂತು. ಸಾಹಿತ್ಯದರ್ಶನ, ಮತ್ತು ಭಾರತ ಸಂಸ್ಕೃತಿಗಳಲ್ಲಿಯೂ ಹೆಚ್ಚು ಜ್ಞಾನಭಂಡಾರವನ್ನು ವಿಸ್ತರಿಸಿಕೊಳ್ಳಲು ಅವರಿಗೆ ಅನುಕೂಲವಾಯಿತು. ಒಂದುಕಡೆ ಅಂಧಕಾರ ತೊಲಗಿ ಧಾರ್ಮಿಕ ಮತ್ತು ಸಾಮಾಜಿಕ ರಂಗಗಳಲ್ಲಿ ಹೊಸ ಕಾಂತಿ ಮೂಡಿದ್ದನ್ನು ಕಂಡು ಹಿಗ್ಗಿದರು. ವಸಂತಋತುವಿನ ಆವಿರ್ಭಾವದಲ್ಲಿ ತರುಲತೆಗಳ ಜೀವರಸ ಉಕ್ಕಿ, ಹೊಸತಳಿರು ಹೂಗಳು ಉದಿಸಿ ಕಳಕಳಿಸುವಂತೆ ಮಾಡಿದ ಮತ್ತು ಭಾರತದ ಜನಜೀವನಾಡಿಯಲ್ಲಿ ಚೈತನ್ಯವನ್ನು ಅಧಿಷ್ಠಿಸಿ, ನವಚೈತನ್ಯದ ಮೂರ್ತಿಯಾಗಿ, ಸತ್ಯ ಅಹಿಂಸೆ ಪ್ರಭಾವಗಳ ಪ್ರಭೆಯನ್ನು ಬೆಳಗಿಸಿ ಸ್ವಾತಂತ್ರ್ಯ ಹೋರಾಟಕ್ಕಾಗಿ ಜನತೆಯನ್ನು ಸ್ಫೂರ್ತಿಗೊಳಿಸಿದ ಮಹಾನಾಯಕ ಗಾಂಧೀಜಿಯವರ ಪ್ರೇಮವಾತ್ಸಲ್ಯಗಳನ್ನುಗಳಿಸಿದರು.

ಗಾಂಧೀಜಿಯವರ ವಿಚಾರದಲ್ಲಿ ಬ್ರಿಟಿಷ್ ಜನತೆಯಲ್ಲಿದ್ದ ತಪ್ಪು ತಿಳಿವಳಿಕೆಗಳನ್ನು ಹೋಗಲಾಡಿಸಿ ಗಾಂಧೀಜಿಯವರ ವಿಶ್ವಮಾನವೀಯತೆ, ಬ್ರಿಟಿಷ್ ಜನತೆಯಲ್ಲಿ ಗಾಂಧೀಜಿಯವರಿಗಿದ್ದ ಅಪಾರ ಪ್ರೀತಿ, ನಿರ್ವ್ಯಾಜ ಕರುಣೆ, ವಿಶ್ವಾಸ ಇವುಗಳ ದಿವ್ಯದರ್ಶನವನ್ನು ಬ್ರಿಟಿಷ್‌ಜನಾಂಗದವರಿಗೆ ಕೊಟ್ಟು ಗಾಂಧೀಜಿಯವರಿಗೂ, ಬ್ರಿಟಿಷ್ ಜನರಿಗೂ, ರಾಜತಂತ್ರಜ್ಞರಿಗೂ ನಿಕಟ ಮತ್ತು ಮಧುರ ಬಾಂಧವ್ಯವನ್ನು ಬೆಳಸಿದರು.

ಶಾಸ್ತ್ರಿಗಳ ವಿಚಾರದಲ್ಲಿ ಗಾಂಧೀಜಿಯವರಿಗೆ ಪೂರ್ಣ ವಿಶ್ವಾಸವಿತ್ತು. ಯೆರವಾಡದಿಂದ ಶಾಸ್ತ್ರಿಗಳಿಗೆ ಬರೆದ ಪತ್ರದಲ್ಲಿ, 'Your Criticism soothes ; your silence makes me nervous ; time only deepens my love for you ; our differences appear to me to be superficial ; deep down, I feel and touch the meeting ground and that is precious." ಈ ಎರಡು ವ್ಯಕ್ತಿಗಳ ರಾಷ್ಟ್ರಪ್ರೇಮ ಉಜ್ವಲವಾದುದು ; ಆದರೆ ಸಾಧನೆಗಳು ಬೇರೆಯಾದುದರಿಂದ ಪರಸ್ಪರ ಭಿನ್ನಾಭಿಪ್ರಾಯಗಳು ಆಗಿಂದಾಗ್ಗೆ ತಲೆದೋರಿದವು. ನಿರಂತರ ಪರಿವರ್ತನೆ ಸತ್ಯ ಅಹಿಂಸೆ ಧರ್ಮಾನುಷ್ಠಾನ-ಇವುಗಳ ಮೂಲಕ ಸ್ವಾತಂತ್ರ್ಯಸಾಧನೆ ಗಾಂಧೀಜಿಯವರದು. ಪ್ರಚಲಿತ ಸ್ಥಿತಿಗತಿಗಳನ್ನು ಕಾಪಾಡಿಕೊಂಡು ಪ್ರಾಚೀನ ಸಂಸ್ಕೃತಿಯ ವೈಶಿಷ್ಟ್ಯದ ಪರಿಪಾಕವನ್ನು ಸವಿದು, ಆಂಗ್ಲೇಯ ಸಂಸ್ಕೃತಿಯ ಪರಿಚಯ ಹೊಂದಿ ಎರಡು ಹಿರಿಯ ಸಂಸ್ಕೃತಿಗಳ ಸಮನ್ವಯಕ್ಕಾಗಿ ಶ್ರಮವಹಿಸಿ, ಆಂಗ್ಲೇಯರ ಪ್ರೀತಿ ವಿಶ್ವಾಸಗಳನ್ನು ಸಂಪಾದಿಸಿಕೊಂಡು ಹೆಜ್ಜೆಹೆಜ್ಜೆಯಾಗಿ ಸ್ವಾತಂತ್ರ್ಯದ ಮೆಟ್ಟಲನ್ನು ಹತ್ತುವುದು ಶಾಸ್ತ್ರಿಗಳ ಆಕಾಂಕ್ಷೆ. ಗಾಂಧೀಜಿಗೆ ಸತ್ಯ ಅಹಿಂಸೆಗಳ ಮೂಲಕ ವ್ಯಕ್ತಿವಿಕಾಸ, ಪ್ರಗತಿಪರ ಸಾಧನೆ; ಶಾಸ್ತ್ರಿಗಳು ಸ್ಥಿತಿಪಾಲಕರು. ಇವೆರಡೂ ಪರಸ್ಪರ ಪೂರಕವೇ ಹೊರತು ಎಂದಿಗೂ ಮಾರಕವಾಗ

ಲಾರವು. ಆದ್ದರಿಂದಲೇ ಗಾಂಧೀಜಿಯವರು ಭಿನ್ನಪ್ರಕಾರದ ಅಭಿಪ್ರಾಯಗಳನ್ನು ಗ್ರಹಿಸಿ ಒಂದು ಸಮಗ್ರ ಸಮನ್ವಯದಲ್ಲಿ ಅವುಗಳನ್ನು ಕ್ರೋಢೀಕರಿಸಿ ಒಂದು ನೂತನ ಮಾರ್ಗಕ್ಕಾಗಿ ಹವಣಿಸಿದರು. ಕ್ರಾಂತಿಕಾಲ ವರ್ತನೆಯಿಂದ ಆಗುವ ಮಹಾಘಟನೆಗಳು, ಜಾತಿಮತಾಂಧತೆಗಳ ವಿರುದ್ಧ ನಡೆದ ಪ್ರದರ್ಶನಗಳ ಭೀಕರ ದೃಶ್ಯ, ಪ್ರಜಾಪ್ರಭುತ್ವದ ತಾರುಣ್ಯದಲ್ಲಿ ಕಾಣುವ ದಕ್ಷತೆಯಿಲ್ಲದ ತೇಜೋರಹಿತವಾದ ರಾಜ್ಯಭಾರ ನಿರ್ವಹಣೆಗಳಿಂದ ಶಾಸ್ತ್ರಿಗಳ ಮನಸ್ಸು ತಲ್ಲಣಿಸಿತು; ಬ್ರಿಟಿಷ್ ರಾಜ್ಯರೀತಿನೀತಿಗಳ ಪಾಲನೆ ಉತ್ತಮವೆನಿಸಿ ಅವರನ್ನು ಸ್ಥಿತಿಪಾಲಕರನ್ನಾಗಿ ಮಾಡಿತು.

೧೯೪೨ ರಿಂದ ೧೯೪೬ ರ ವರೆಗೆ ನಡೆದ ಸ್ವಾತಂತ್ರ್ಯದ ಹೋರಾಟ ಅವರಿಗೆ ದಾರುಣವಾದ ದುಃಖವನ್ನು ಕೊಟ್ಟಿತ್ತು. ರಾಷ್ಟ್ರದ ಆತ್ಮನಾಶವಾಗಬಹುದೆನ್ನುವ ಭೀತಿ ಅವರ ಮನಸ್ಸಿನಲ್ಲಿ ಅಂಕುರಿಸಿತು. ಖಾಯಿಲೆ ಉಲ್ಬಣವಾಗಿ ೧೭ನೆಯ ಏಪ್ರಿಲ್, ೧೯೪೬ ರಲ್ಲಿ ಕಾಲಾಧೀನರಾದರು. ಸ್ವಾತಂತ್ರ್ಯ ಸಂಗ್ರಾಮದ ಹೋರಾಟದಿಂದ ದೊರಕಿದ ಫಲವನ್ನು ಅನುಭವಿಸಿ ರಚನಾತ್ಮಕ ಕಾರ್ಯಗಳಲ್ಲಿ ಭಾಗವಹಿಸುವ ಭಾಗ್ಯ ಅವರದಾಗಲಿಲ್ಲ.

ಶಾಸ್ತ್ರಿಗಳು ಕಲಾಭಿಮಾನಿಗಳು; ತತ್ವವೇತ್ತರು, ಜಿತೇಂದ್ರಿಯರು; ನೆಮ್ಮದಿಯ, ಸೌಹಾರ್ದದ, ಜೀವನ; ರಾಜಕಾರಣದಲ್ಲಿ ನಿಷ್ಪಕ್ಷಪಾತ ಬುದ್ಧಿ. "ಜ್ಞಾನಿನಾ ಚರಿತುಂ ಶಕ್ಯಂ ಸಮ್ಯಕ್ ರಾಜ್ಯಾದಿ ಲೌಕಿಕಂ" ಎಂಬ ವಿದ್ಯಾರಣ್ಯರ ವಾಕ್ಯದ ಪ್ರತೀಕ. ಯಾವ ಪಕ್ಷಗಳ ರಚನೆ ಯಾವ ರೀತಿಯದಾದರೇನು? ಅವುಗಳಲ್ಲಿ ಧರ್ಮಶ್ರದ್ಧೆಯೊಂದಿದ್ದರೆ ಸಾಕು. ಶಾಶ್ವತವಾದ ಧರ್ಮದೃಷ್ಟಿಯಿಂದ, ಒಳ್ಳೆಯದು ಯಾವುದೆಂಬುದನ್ನು ನಿಶ್ಚಯಮಾಡಿ ಅದರಂತೆ ನಡೆದ ನಡವಳಿಕೆಯೇ ಧರ್ಮ. ಬಹುಲೋಕದ ಚಿರಕಾಲದ ಜೀವನ ದೃಷ್ಟಿಯಿಂದ ಗೊತ್ತಾದ ಹಿತವೇ ಸತ್ಯಹಿತ. ಅದರ ಅನುವರ್ತನೆಯೇ ಧರ್ಮ. ಸಾರ್ವಜನಿಕದಲ್ಲಿ ಸತ್ಯನಿಷ್ಠೆಗೆ, ನ್ಯಾಯವರ್ತನೆಗೆ ಮೂಲ ಪ್ರೇರಕವಾದುದು ಧರ್ಮಸ್ಫೂರ್ತಿ. ನಾನಾ ಪಕ್ಷಗಳ ರಚನೆ ಏನು, ಕಾರ್ಯಸಾಮರ್ಥ್ಯ ಎತ್ತ ಕಡೆ ಇದೆ, ನೀತಿನಿಷ್ಠೆ ಎಲ್ಲಿ ಹೆಚ್ಚಾಗಿದೆ, ವಿವೇಕವೆಲ್ಲಿದೆ, ಆವೇಶವೆಲ್ಲಿದೆ—ಈ ವಿಮರ್ಶೆ ಮಾನವನ ಅತಿಮುಖ್ಯವಾದ ಕರ್ತವ್ಯಾಂಶ ಎಂಬುದಾಗಿ ಶಾಸ್ತ್ರಿಗಳ ನಂಬಿಕೆ. ಶಾಸ್ತ್ರಿಗಳು ರಾಜಕೀಯವನ್ನೇ ಕಸುಬನ್ನಾಗಿ ಮಾಡಿಕೊಂಡಿರಲಿಲ್ಲ. ವಿಪ್ಲವ, ಆಂದೋಲನ, ಕ್ರಾಂತಿ, ಚುನಾವಣೆಗಳ ಗದ್ದಲದಿಂದ ತಲೆ ಕೆಡಿಸಿಕೊಂಡವರಲ್ಲ. ರಾಜನೀತಿಜ್ಞ ರೋಸ್ ಬರಿಯು ಪ್ರಸಿದ್ಧ ಸಾಹಿತಿ ಮತ್ತು ವಾಗ್ಮಿಯಾದ ಬರ್ಕನ ವಿಚಾರದಲ್ಲಿ ಹೇಳಿದ ಮಾತು ಶಾಸ್ತ್ರಿಗಳಿಗೆ ಅನ್ವಯಿಸುತ್ತದೆ—"ಕ್ರಾಂತಿದ್ವೇಷಿಯಾದುದರಿಂದ ರಾಜಕೀಯ ಸಾಮಾಜಿಕ ಸುಧಾರಕ; ಸುಧಾರಣಾಪ್ರೇಮಿಯಾದುದರಿಂದ ಕ್ರಾಂತಿದ್ವೇಷಿ." ರಾಜಕೀಯದಲ್ಲಿ ಕಂಡು ಬರುವ ಸನ್ನಿವೇಶ, ಸಮಸ್ಯೆ ಅವುಗಳ ಮೇಲೆ ಪ್ರಯೋಗಗಳನ್ನು ನಡೆಸಿ, ಪರಿಶೀಲಿಸಿ, ಪರಿಷ್ಕರಿಸಿ ಮನಸ್ಸಾಕ್ಷಿಗೊಪ್ಪುವಂತೆ ಸ್ನೇಹಿತರೊಡನೆ ವಿವೇಚಿಸಿ, ಸಮಸ್ಯೆಗಳ ಆಧಾರಭೂತವಾದ ಸಾರ್ವತ್ರಿಕ ನಿಯಮವೊಂದನ್ನು ರೂಢಿಸಿ, ಅದರ ಮೂಲಕ ಕಾರ್ಯಕಾರಣ ಸಮಂಜಸವಾಗುವಂತೆ ನಿವರಿಸುವುದು ಶಾಸ್ತ್ರಿಗಳ ಮನೋಧರ್ಮ. ಸನಾತನವೆಂಬ ಪವಿತ್ರ ದೃಷ್ಟಿಯಿಂದ ಅಥವಾ ಯಾವುದೋ ಆದರ್ಶ ನಂಬಿಕೆಯಿಂದ ಸಮಸ್ಯೆಗಳನ್ನು ವಿವೇಚಿಸುವ ದಾರಿ ಅವರದಲ್ಲ. ಅವರ ದಾರಿ ವೈಜ್ಞಾನಿಕವಾಗಿಯೇ ಇತ್ತು.

ಶಾಸ್ತ್ರಿಗಳು ಒಳ್ಳೆಯ ಸಾಹಿತಿಗಳು. ಪ್ರಪಂಚವನ್ನು ಹಲವಾರು ಸಲ ಸುತ್ತಿ ಬಂದಿದ್ದರಿಂದ ವಿವಿಧ ಜನಾಂಗಗಳ ನಡೆ. ನುಡಿ, ಆಚಾರ, ವ್ಯವಹಾರ, ಸಾಹಿತ್ಯ ಇವುಗಳ ಪರಿಚಯ ಅವರಿಗಿತ್ತು. ಇಡೀ ಪ್ರಪಂಚದ ನಾಗರಿಕತೆಗಳಲ್ಲಿ ಕಂಡುಬರುವ ಸಲ್ಲಕ್ಷಣಗಳನ್ನು ಅಳವಡಿಸಿಕೊಂಡು ಒಂದು ಸಮಗ್ರದೃಷ್ಟಿಯನ್ನು ಪೋಷಿಸುವುದು ಅವರ ಮನೋವೃತ್ತಿ. ಪ್ರಾಚ್ಯ ಪಾಶ್ಚಾತ್ಯಗಳ ರೀತಿನೀತಿ, ಸಂಸ್ಕೃತಿ ಮತ್ತು ನಾಗರಿಕತೆಗಳನ್ನು ಪಡೆದಿದ್ದರು. ಪ್ರತಿಯೊಂದು ಸಂದರ್ಭದಲ್ಲಿಯೂ ಇತರ ರಾಜನೀತಿಜ್ಞರೊಡನೆ ಸಂವಾದ ನಡೆಸುವಾಗಲೂ, ಅಂತರ

ರಾಷ್ಟ್ರೀಯ ವೇದಿಕೆಯ ಮೇಲೆ ಉಪನ್ಯಾಸ ಕೊಡುವಾಗಲೂ ಆರ್ಯಜನರ ವೈಭವದ ತುಂಬು ಜೀವನ, ಕಲಾಪೂರ್ಣ ನಾಗರಿಕತೆ, ನಿಪುಣತೆ, ಧರ್ಮಧ್ಯೇಯ ಸಾಧನೆಗಳು ಶಾಸ್ತ್ರಿಗಳ ಚಿತ್ತ ಭಿತ್ತಿಯ ಮುಂದೆ ಸುಳಿದಾಡುತ್ತಿದ್ದುವು.

ಶಾಸ್ತ್ರಿಗಳು ರಚಿಸಿದ ರಾಮಾಯಣದ ಮೇಲಿನ ಗ್ರಂಥದಲ್ಲಿ ಭಾರತದ ಪೂರ್ಣದರ್ಶನ ಮಾತ್ರವಲ್ಲ, ಶಾಸ್ತ್ರಿಗಳ ಸತ್ಯದರ್ಶನವೂ ಇದೆ. ಅವರ ಪಾಂಡಿತ್ಯ, ಪ್ರತಿಭೆ, ಕಲಾಭಿಜ್ಞತೆ, ತಾಯ್ನುಡಿಯ ಹೆಮ್ಮೆಯೊಂದೇ ಅಲ್ಲ, ನಾವು ಕಾಣುವುದು. ಅವರ ಶೈಲಿ ಸರಳವಾದುದು, ಪದಗಳನ್ನು ತೂಕಮಾಡಿ ಹಾಕುವಂತೆ ಬರೆಯುವುದು ಅವರ ಮನೋಧರ್ಮ. ಅವರ ಮಾತುಗಳು ನಿರರ್ಗಳವಾದ ಪ್ರವಾಹದಂತೆ ಹರಿಯುತ್ತವೆ. ತೆರೆದ ಮನಸ್ಸಿನಿಂದ ಬರುವ ವಾಕ್ಯಗಳು ನೇರವಾಗಿ ಹೃದಯವನ್ನು ಹೊಗುತ್ತವೆ. ಭಾವಾವೇಶದಲ್ಲಿ ಬರೆದಿರುವ ಮಾತುಗಳು ಗಂಭೀರವಾಗಿ ಭಾವಪೂರ್ಣವಾಗಿ ಓದುಗರ ಮನಸ್ಸನ್ನು ಕಲಕುತ್ತವೆ; ಅವರ ವಿಪುಲವಾದ ಬರವಣಿಗೆಯು, ಅವರ ವಿದ್ವತ್ಪೂರ್ಣವಾದ ಪ್ರತಿಭಾವಂತ ಮನಸ್ಸಿನ ಪರಿಚಯವನ್ನು ಮಾಡಿಕೊಡುತ್ತವೆ. ಸ್ನೇಹಿತರಿಗೆ ಬರೆದಿರುವ ಕಾಗದ ಪತ್ರಗಳಲ್ಲಿ ಚಿತ್ರಿಸಿರುವ ಮಾತುಗಳೇ ಒಂದು ಉನ್ನತ ಸಾಹಿತ್ಯವಾಗುತ್ತದೆ.

ಶಾಸ್ತ್ರಿಗಳು ಒಳ್ಳೆಯ ವಾಗ್ಮಿಗಳು, ವಾಕ್ಚತುರರು. ಭಾಷಣವನ್ನು ಮಾಡುವಾಗಲಾಗಲಿ, ಸ್ನೇಹಿತರೊಡನೆ ಸಂಭಾಷಣೆ ನಡೆಸುತ್ತಿರುವಾಗಲಾಗಲಿ ಅವರ ಸ್ಫುಟಸುಸ್ವರ, ಯಥಾಸ್ಥಾನ ವಾಕ್ಯಪ್ರಧಾನವಾದ ಮಾತುಗಳು ಕಣ್ಮನಸ್ಸುಗಳನ್ನು ಸೆರೆಹಿಡಿಯುತ್ತಿದ್ದುವು. ನಭೋಮಂಡಲ ದಷ್ಟು ವಿಶಾಲವಾದದ್ದು ಮತ್ತು ಸಮುದ್ರದಷ್ಟು ಆಳವಾದದ್ದು ಅವರ ಮಾನಸಿಕದೃಷ್ಟಿ. ಇಂತಹ ವಿಶಾಲವಾದ ರಚನೆಯಲ್ಲಿ ಸಂಕುಚಿತವಾದ ವೈಷಮ್ಯ ಮತ್ತು ಕುತ್ಸಿತ ಭಾವನೆಗಳಿಗೆ ಎಡೆಯಿರಲಿಲ್ಲ. ಅವರ ಜೀವನ ದೃಷ್ಟಿ ಎಷ್ಟು ದೊಡ್ಡದೋ, ಎಷ್ಟು ಶುಭ್ರವೋ, ಮಾತುಗಳೂ ಅಷ್ಟೇ. ಪ್ರಪಂಚದ ಚರಿತ್ರೆಯನ್ನರಿತು ರಾಜಕೀಯ ರಂಗದ ಜಾಡನ್ನು ಹಿಡಿದು ಭವಿಷ್ಯವನ್ನು ರೂಪಿಸಬಲ್ಲ ಮನಸ್ಸು ಅವರದು. ಅವರ ಕಲ್ಪನೆಯಲ್ಲಿ ಯಾವಾಗಲೂ ಉದಾರವಾದ ಸರ್ವಹಿತ ಸಾಧಕವಾದ ಭಾವನೆಗಳೇ ಹಾರಾಡುತ್ತಿದ್ದವು.

ಶಾಸ್ತ್ರಿಗಳು ಅತಿ ಉನ್ನತ ಉಪನ್ಯಾಸಕರು. ಉಪನ್ಯಾಸದ ಭಾಷೆ ಕೃತಕವಲ್ಲ, ಆತ್ಮೀಯ ವಾದ ಭಾಷೆ. ಭಾವಪೂರ್ಣವಾದುದು. ಕವಿಯ ಮನೋಧರ್ಮವನ್ನು ಪ್ರದರ್ಶಿಸತಕ್ಕ ಶಕ್ತಿ ಅವರಾಡುವ ಭಾಷಣಗಳಲ್ಲಿ ಕಾಣುತ್ತಿತ್ತು. ಅವರು ಒಳ್ಳೆಯ ವಾಗ್ಮಿಗಳು ಹೇಗೋ ಹಾಗೆಯೇ ಕಲೋಪಾಸಕರೂ ಹೌದು. ಅವರ ಮಾತಿನಲ್ಲಿಯೇ ಮಹೋನ್ನತ ಭಾವನೆಗಳು ಗೋಚರವಾಗು ತ್ತಿದ್ದುವು. ಕಿಷ್ಕಿಂಧಾಕಾಂಡದಲ್ಲಿ ಹನುಮಂತನನ್ನು ಶ್ರೀರಾಮಚಂದ್ರ ಪ್ರಶಂಸನ ಮಾಡುವಾಗ ಆಡಿದ ಮಾತು ಶಾಸ್ತ್ರಿಗಳಿಗೆ ಅನ್ವಯಿಸುತ್ತದೆ ಎಂದು ೧೯೧೪ ರಲ್ಲಿ ಅವರಿಗೆ ಮದರಾಸಿನಲ್ಲಿ ಕೊಟ್ಟ ಮಾನಪತ್ರದಲ್ಲಿ ಸೂಚಿಸಲಾಗಿದೆ. ಅವರು ಭಾವಜ್ಞರು, ಅಪಶಬ್ದರಹಿತ, ಸುಶಿಕ್ಷಿತ, ಸ್ನೇಹ ಯುಕ್ತ ಮೃದುವಾಕ್ಯ ಅವರದು. ಮಾತಾಡುವಾಗ ಮುಖದಲ್ಲಾಗಲಿ ಕಣ್ಣುಗಳಲ್ಲಾಗಲಿ, ಹಣೆಯಲ್ಲಾಗಲಿ ವಿಕಾರಚೇಷ್ಟೆಗಳಿಲ್ಲ. ವಿಶೇಷ ಶಬ್ದಾಡಂಬರಗಳಿಲ್ಲದೆ ಪದವರ್ಣಗಳಲ್ಲಿ ಸಂದೇಹ ತೋರದೆ ಆಡಿದ ನುಡಿಗಳು ಅತಿ ಮಂದವಾಗಿಯಾಗಲಿ ವೇಗವಾಗಿಯಾಗಲಿ ಇಲ್ಲದೆ ಗಂಭೀರ ವಾಗಿದ್ದುವು. ಎದೆಯಿಂದ ಹೊರಟುಬರುವ ಸ್ವರವು ಕಂಠದಲ್ಲಿಯಾಗಲಿ ಅತಿ ಉಚ್ಚವೂ ಅತಿ ನೀಚವೂ ಇಲ್ಲದೆ ಮಧ್ಯಮ ಸ್ಥಾಯಿಯಿಂದ ವರ್ತಿಸುತ್ತಿತ್ತು. ವ್ಯಾಕರಣ ಸಂಸ್ಕಾರದಿಂದ ಶಬ್ದಶುದ್ಧಿಹೊಂದಿರುವುದರಿಂದ ವಾಕ್ಯಗಳಲ್ಲಿ ಪದಗಳು ವ್ಯಕ್ತವಾಗಿಯೂ ವರ್ಣಗಳು ಸ್ಫುಟ ವಾಗಿಯೂ ಇರುತ್ತಿದ್ದುವು. ಮಾತುಗಳು ಅತಿ ತ್ವರಿತವೂ ಅಲ್ಲ, ಅತಿ ಮಂದವೂ ಅಲ್ಲ; ಮನಸ್ಸನ್ನಾ ಕರ್ಷಿಸುವ ಅತಿ ಮಧುರ ಮಾತುಗಳು. ವರ್ಣವ್ಯಂಜಕಗಳಿಂದ ಎದೆ, ಕಂಠ, ಶಿರಸ್ಸು ಈ ಸ್ಥಾನ ತ್ರಯಗಳಲ್ಲಿ ನೆಲೆಗೊಂಡಿರುವ ಉದಾತ್ತ ಅನುದಾತ್ತ ಸ್ವರಿತವೆಂಬ ಮೂರು ಸ್ವರಗಳಿಂದ ಕೂಡಿ ಆಶ್ಚರ್ಯವನ್ನು ಉಂಟುಮಾಡುವ ಮಾತುಗಳು ಯಾರ ಮನಸ್ಸನ್ನು ಕರಗಿಸುವುದಿಲ್ಲ!

ಶ್ರೀ. ಶ್ರೀನಿವಾಸಶಾಸ್ತ್ರಿಗಳು ಕಣ್ಮರೆಯಾಗಿ ಹದಿನೈದು ವರ್ಷಗಳಾದುವು. ಅವರ ಉಪನ್ಯಾಸಗಳನ್ನು ಕೇಳಿದ ವಿದ್ಯಾರ್ಥಿಗಳು ಮತ್ತು ಸಾರ್ವಜನಿಕ ಸಭಿಕರೇ ಧನ್ಯರು. ಅತಿ ಉನ್ನತ ಅಂತರರಾಷ್ಟ್ರೀಯ ವಾಗ್ಮಿಗಳನ್ನು ಸರಿದೂಗುವ ಶಕ್ತಿ ಶಾಸ್ತ್ರಿಗಳದಾಗಿತ್ತು. ಇಂತಹ ವಾಗ್ಮಿಗಳ ಪದೇ ಪದೇ ಪರಿಚಯದ ಅವಕಾಶ ಭಾರತೀಯರಿಗೆ ದೂರವಾಗುತ್ತಿದೆ ಎಂದರೆ ಅತಿಶಯೋಕ್ತಿಯಲ್ಲ. ಶ್ರೀ ಶಾಸ್ತ್ರಿಗಳಂತಹ ರಾಜಕಾರಣ ಪಟುಗಳು, ಸತ್ಯಕ್ಕೆ ಸಮೀಪರಾದವರು, ಜಟಿಲಸಮಸ್ಯೆಗಳನ್ನು ಸುಲಭರೀತಿಯಲ್ಲಿ ವಿವರಿಸುವ ಕಲಾಕೋವಿದರು, ವಿಶ್ವಬಂಧುಗಳು ಭಾರತದಲ್ಲಿ ಈಗಿನ ಪ್ರಚಲಿತ ಸ್ಥಿತಿಗತಿಯಲ್ಲಿ ಅತ್ಯವಶ್ಯವಾಗಿ ಬೇಕಾಗಿದೆ.

**ಎಂ. ವಿ. ಕೃಷ್ಣರಾವ್**

# ಹರಿಹರ ಕ್ಷೇತ್ರ

ಕನ್ನಡನಾಡಿನ ಅನೇಕ ಪ್ರಮುಖ ಪವಿತ್ರ ಪುಣ್ಯಕ್ಷೇತ್ರಗಳಲ್ಲಿ ಹರಿಹರವೂ ಒಂದು. ಈ ಊರು ಇಂದು ಭಾಷೆಯ ಆಧಾರದ ಮೇಲೆ ಪುನರ್‌ರಚಿತವಾದ ಮೈಸೂರು (ಕರ್ನಾಟಕ) ರಾಜ್ಯದ ಮಧ್ಯಪ್ರದೇಶದಲ್ಲಿದೆ. ಮೈಸೂರು ದೇಶದ ಸರ್ಕಾರದ ಕೇಂದ್ರನಗರವಾದ ಬೆಂಗಳೂರು ಪಟ್ಟಣದಿಂದ ಪೂನಾ ರೈಲಿನಲ್ಲಿ ಹೊರಟರೆ, ಅರಸೀಕೆರೆಯ ಮಾರ್ಗವಾಗಿ ೨೧೧ ಮೈಲು ದೂರದಲ್ಲಿದೆ. ಹರಿಹರದ ಈಚೆಗೆ ಒಂಬತ್ತೇ ಮೈಲುಗಳಲ್ಲಿ ದಾವಣಗೆರೆ ಎಂಬ ದೊಡ್ಡ ನಗರವಿದೆ.

ಹರಿಹರ ಶೀತಲ ಸಿಹಿನೀರಿನ ತುಂಗಭದ್ರಾನದಿಯ ದಡದಲ್ಲಿರುವ ಒಂದು ಸಣ್ಣ ಊರು. ತಾಲ್ಲೂಕಿನ ಮುಖ್ಯಸ್ಥಳ. ಆ ಊರಿನಲ್ಲಿ ನಿರ್ಮಾಣವಾಗಿರುವ ದೇವಾಲಯದಲ್ಲಿನ ಹರಿಹರ ದೈವದ ಸಾನ್ನಿಧ್ಯವಿಶೇಷದಿಂದ ಈ ಊರಿಗೆ ಆ ಹೆಸರು ಬಂದಿದೆ.

'ಹರಿಹರ' ದೇವಾಲಯದ ಹಿಂಬದಿಯಲ್ಲಿಯೇ ಪಾವನ ತುಂಗಭದ್ರೆ ಹರಿಯುತ್ತಾಳೆ. ಮಳೆಗಾಲದಲ್ಲಿ ಪ್ರವಾಹ ಹೆಚ್ಚಾಗಿ ಬಂದಾಗ ದೇವಸ್ಥಾನದವರೆಗೂ ತುಂಗಭದ್ರೆ ತನ್ನ ಕೈ ಚಾಚುವುದುಂಟು. 'ಗಂಗಾಸ್ನಾನ, ತುಂಗಾ ಪಾನ' ಎಂಬ ಜನಜನಿತವಾದ ಮಾತಿಗನುಗುಣ ವಾಗಿ ಇಲ್ಲಿ ಹರಿಯುವ ತುಂಗಭದ್ರೆಯ ಜಲ ಬಹು ರುಚಿಕರ. ಒಂಬತ್ತು ಮೈಲಿ ದೂರದಲ್ಲಿ ರುವ ಕೈಗಾರಿಕೆ-ವ್ಯಾಪಾರಗಳ ಕೇಂದ್ರವಾದ ದಾವಣಗೆರೆ ನಗರಕ್ಕೆ ತುಂಗಭದ್ರೆಯ ನೀರೇ ಗತಿ.

ಹರಿಹರ ಪುಣ್ಯಕ್ಷೇತ್ರವಾಗಿರುವುದರ ಜೊತೆಗೆ, ಹಿಂದಿನ ಮೈಸೂರು ಸಂಸ್ಥಾನದ ಗಡಿಪ್ರದೇಶವಾಗಿತ್ತು; 'ಮೈಸೂರು ರೇಲ್ವೆ'ಯ ಕೊನೆಯ ನಿಲ್ದಾಣವಾಗಿತ್ತು. ಅಲ್ಲಿ ಊರ ಹಿಂದೆಯೇ ಇರುವ ತುಂಗಭದ್ರಾ ನದಿಯ ಸೇತುವೆಯನ್ನು ದಾಟಿದರೆ 'ಉತ್ತರ ಕರ್ನಾಟಕ'ದ ಗಡಿ ಸಿಕ್ಕುತ್ತದೆ; ಧಾರವಾಡ ಜಿಲ್ಲೆ ಪ್ರಾರಂಭವಾಗುತ್ತದೆ. ಈ ಊರು ಈಗ ಕೈಗಾರಿಕೆಗೂ ಕೊಂಚ ಪ್ರಸಿದ್ಧವಾಗಿದೆ. ಕಿರ್ಲೋಸ್ಕರ್ ಕಂಪನಿಯ ಕಾರ್ಖಾನೆಯಿರುವುದು ಇಲ್ಲಿಯೇ. ಶಿವಮೊಗ್ಗ-ಚಿತ್ರದುರ್ಗ-ಧಾರವಾಡ-ಬಳ್ಳಾರಿ ಜಿಲ್ಲೆಗಳ ಗಡಿ ಪ್ರದೇಶವಾಗಿದೆ ಇಂದಿನ ಹರಿಹರ. ಧಾರವಾಡ ಬೊಂಬಾಯಿ ಪ್ರಾಂತಕ್ಕೂ ಬಳ್ಳಾರಿ ಮದ್ರಾಸ್ ಪ್ರಾಂತಕ್ಕೂ ಸೇರಿದ್ದಾಗ, ಮೈಸೂರು ಸರ್ಕಾರಕ್ಕೆ ಸೇರಿದ ಹರಿಹರ ಗಡಿ ಪ್ರದೇಶಕ್ಕೆ ಪ್ರಾಮುಖ್ಯತೆ ಹೆಚ್ಚಾಗಿತ್ತು. ಈಗ ಈ ನಾಲ್ಕೂ ಜಿಲ್ಲೆಗಳು ಒಂದೇ ಆಡಳಿತಕ್ಕೆ ಸೇರಿವೆ. ಹರಿಹರ ಇಂದೇನೂ ಅಷ್ಟು ದೊಡ್ಡ ಊರಲ್ಲ; ಆದರೆ ಹಳ್ಳಿಯೂ ಅಲ್ಲ. ಹತ್ತಾರು ಸಾವಿರ ಪ್ರಜಾಸಂಖ್ಯೆಯುಳ್ಳ ಸಾಮಾನ್ಯತರವಾದ ಒಂದು ತಾಲ್ಲೂಕು ಕೇಂದ್ರವಷ್ಟೆ. ಹರಿಹರಕ್ಕೆ ಇಂದು ಬರುವ ಜನ ಮುಖ್ಯವಾಗಿ ಹರಿಹರ ದೇವಾಲಯವನ್ನು ಸಂದರ್ಶಿಸುವ ಅಪೇಕ್ಷೆಯುಳ್ಳವರು. ಎಲ್ಲೋ ಕೆಲವರು—ಅನೇಕವೇಳೆ ವಿದ್ಯಾರ್ಥಿಗಳು—ಕಿರ್ಲೋಸ್ಕರ್ ಕಂಪನಿಯ ಕಾರ್ಖಾನೆಯನ್ನು ನೋಡಲೂ ಬರಬಹುದು. ಹರಿಹರವನ್ನು ಬೆಳಸಿ ಪ್ರವಾಸಕೇಂದ್ರವನ್ನಾಗಿ ಮಾಡಲು ಅವಕಾಶವಿದೆ. ಇಲ್ಲಿ ಹರಿಯುವ ತುಂಗಭದ್ರೆ ಅದಕ್ಕೆ ಅನುಕೂಲವಾಗಿದೆ.

ಹರಿಹರ ಸಾಮಾನ್ಯವಾದ ಒಂದು ಊರಾಗಿದ್ದರೂ, ಅದು ಪುಣ್ಯಕ್ಷೇತ್ರವಾಗಿರುವುದು ಅಲ್ಲಿನ ತುಂಗಭದ್ರಾ ನದಿ ಮತ್ತು ಹರಿಹರ ದೇವಾಲಯಗಳಿಂದ ಎಂಬುದು ಸ್ಪಷ್ಟ. ನದಿಯೇನೊ ಪ್ರಕೃತಿ ಸಹಜವಾಗಿ ತನ್ನ ದಾರಿಯಲ್ಲಿ ಈ ಊರ ಹಿಂದೆ ಹರಿಯಿತು. ಅದು ನರನಿರ್ಮಾಣ ವಲ್ಲ. ಆದರೆ ಮತ್ತೊಂದು ಪ್ರಮುಖ ಆಕರ್ಷಣೆಯಾದ ದೇವಾಲಯ ಈ ಪ್ರಶಸ್ತವಾದ ಸ್ಥಳದಲ್ಲಿ ನಿರ್ಮಾಣವಾಗಿ ಈ ಊರು ಪುಣ್ಯಕ್ಷೇತ್ರವೆನಿಸಿಕೊಂಡು ಭಕ್ತರನ್ನು ಆಕರ್ಷಿಸಿತು. ಇದಕ್ಕೆ

ಕಾರಣನಾದ ವ್ಯಕ್ತಿಯನ್ನು ನಾವು ಸ್ಮರಿಸಬೇಕು. ಅಲ್ಲದೆ ಆ ದೇವಾಲಯದ ವಿವರವನ್ನೂ ಕೊಂಚ ತಿಳಿಯಬೇಕು.

ಇದಕ್ಕೆ ಮುಂಚೆ ಹರಿಹರ ಎಂಬ ಹೆಸರಿನ ವಿಚಾರವಾಗಿಯೂ ಕೊಂಚ ಆಲೋಚನೆ ಮಾಡಬಹುದು. ಅನೇಕರಿಗೆ ಇದು ವಿಲಕ್ಷಣವಾಗಿಯೂ ತೋರಬಹುದು. ನಮ್ಮ ದೇಶದಲ್ಲಿ ಸಾಮಾನ್ಯವಾಗಿ ಹಿಂದೂ ಜನಾಂಗದಲ್ಲಿ ವಿಷ್ಣು ಇಲ್ಲವೆ ಶಿವ ಇವರ ಭಕ್ತರೇ ಹೆಚ್ಚು. ಈ ದೇವತೆಗಳೇ ಹರಿ-ಹರರು. ಹರಿಭಕ್ತರಿಗೂ ಹರಭಕ್ತರಿಗೂ ಬಹುವೇಳೆ ಅಸಹನೆಯಿಂದ ಕಲಹಗಳೂ ಸ್ಪರ್ಧೆಗಳೂ ನಡೆದುದುಂಟು ಎಂದು ನಾಡಿನ ಚರಿತ್ರೆ ಹೇಳುತ್ತಿದೆ. ಈ ಕಲಹ ಸ್ಪರ್ಧೆಗಳಿಂದ ಜನಕ್ಕೆ ಸಾವು-ನೋವು-ನಷ್ಟ ಕೂಡ ಆಗಿದೆ. ಪರಸ್ಪರ ಅಸಹನೆಯಿಂದಾಗುವ ಈ ಸಂಕಟವನ್ನು ನಿವಾರಿಸಲು ಅನೇಕರು ಪ್ರಯತ್ನಪಟ್ಟಿದ್ದಾರೆ. ಹರಿ-ಹರರು ಸಮ ಎಂದು ಕೆಲವರು ಹೇಳಿದರೆ, ಹರ ಹರಿಭಕ್ತ ಎಂದೂ, ಹರಿಹರರಲ್ಲಿ ಎಂದೂ ಕಲಹಸ್ಪರ್ಧೆ ಇಲ್ಲದಿರುವಾಗ, ಅವರ ಭಕ್ತರಲ್ಲಿ ಜಗಳವೇಕೆ ಎಂದವರೂ ಇದ್ದಾರೆ. ಹರಿಭಕ್ತರಾದವರು ನಾವು ಶಿವಭಕ್ತರೂ ಹೌದು ಎಂದೂ ಹೇಳಿದ್ದಾರೆ. ಶ್ರೀ ಪುರಂದರದಾಸರು ಇಂತಹ ಕೆಲವು ಕೃತಿಗಳನ್ನು ರಚಿಸಿರುವುದುಂಟು: ಉದಾ.—"ಜಂಗಮರು ನಾವು ಜಗದೊಳು—ಜಂಗಮರು ನಾವು ಲಿಂಗಾಂಗಿಗಳು—ಮಂಗಳವಂತರು ಭವಿಗಳೆಂತೆಂಬಿರಿ." ಅಂತೂ ಹರಿ-ಹರರ ಭಕ್ತರಲ್ಲಿ ಐಕಮತ್ಯವನ್ನು ಸಾಮರಸ್ಯವನ್ನು ತರುವ ಹಲವು ಪ್ರಯತ್ನಗಳಲ್ಲಿ, ಹರಿ ಮತ್ತು ಹರ ದೇವರುಗಳಿಂದ ಕೂಡಿದ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಿ ಮಾದರಿಯಾಗಿ ತೋರಿದುದುಂಟು. 'ಶಂಕರನಾರಾಯಣನ' ಗುಡಿಗಳೂ ಅಲ್ಲಲ್ಲಿ ಉಂಟು. ಈ ದೇವರ ಹೆಸರಿನಲ್ಲಿಯೇ ನಮ್ಮಲ್ಲಿ ಅನೇಕ 'ಹರಿಹರಪ್ಪ'ರೂ 'ಶಂಕರನಾರಾಯಣರಾಯರು'ಗಳೂ ಇದ್ದಾರೆ!

ಹರಿ-ಹರರ ಸಂಬಂಧವನ್ನೂ ಶ್ರೀರಾಮನ ಪಾರಮ್ಯವನ್ನೂ ಸೂಚಿಸುವ ಒಂದು ಘಟನೆಯನ್ನು ಪ್ರಸಿದ್ಧ ಹಿಂದೀಕವಿ ಭಕ್ತ ತುಳಸೀದಾಸ್ ಚಿತ್ರಿಸಿದ್ದಾನೆ.

ಮನುಷ್ಯನಾಗಿ ಹುಟ್ಟಿ ಮನುಷ್ಯನಂತೆಯೇ ಬಾಳುತ್ತಿದ್ದ ದಶರಥ ಪುತ್ರ ಶ್ರೀರಾಮಚಂದ್ರ ಸೀತೆಯನ್ನು ಕಳೆದುಕೊಂಡು ಕಾಡಿನಲ್ಲಿ ಪರಿತಪಿಸುತ್ತಿದ್ದಾಗ, ಪರಮೇಶ್ವರ ಪತ್ನಿಯಾದ ಪಾರ್ವತಿಗೆ ಶ್ರೀರಾಮ ದೇವರೇ ಅಲ್ಲವೇ ಎಂಬ ಅನುಮಾನ ಬಂದು ಅವನನ್ನು ಪರೀಕ್ಷಿಸುವ ಸಲುವಾಗಿ ಸೀತಾದೇವಿಯ ವೇಷದಿಂದ ಬಂದು ರಾಮನೆದುರಿಗೆ ಕಾಣಿಸಿಕೊಂಡಳಂತೆ. ಸೀತೆಯಂತೆ ಕಂಡ ಪಾರ್ವತಿಯನ್ನು ಶ್ರೀರಾಮ ಪಾರ್ವತಿ ಎಂದೇ ಸಂಬೋಧಿಸಿ ಪರಮೇಶ್ವರನ ವಿಚಾರವಾಗಿ ಕುಶಲ ಪ್ರಶ್ನೆಗಳನ್ನು ಕೇಳಿ, ತನ್ನ ವಿಚಾರವಾಗಿಯಾಗಲಿ, ಪಾರ್ವತಿಯ ಸೀತಾವೇಷದ ವಿಚಾರವಾಗಿಯಾಗಲಿ ಏನೂ ಕೇಳದೆ ಸುಮ್ಮನಿದ್ದನಂತೆ. ಪಾರ್ವತಿಗೆ ಇದರಿಂದ ನಾಚಿಕೆಯಾಗಿ ಶ್ರೀರಾಮನೇ ವಿಷ್ಣುವೆಂದು ನಂಬಿದಳಂತೆ. ಅದೇನೋ ಸರಿಹೋಯಿತು. ಆದರೆ ಪರಮೇಶ್ವರ ಮಾತ್ರ ತನ್ನ ರಾಣಿಯ ಈ ಚರ್ಯೆಯಿಂದ ಕುಪಿತನಾಗಿ ಗೌರಿಯನ್ನು ತಿರಸ್ಕರಿಸಿದನಂತೆ. ಈ ದುಃಖದಲ್ಲಿದ್ದ ಗೌರಿ ತಂದೆ ದಕ್ಷನ ಯಾಗಕ್ಕೆ ಆಹ್ವಾನವಿಲ್ಲದೆ ಹೋಗಿ ಅಲ್ಲಿಯೂ ಅವಮಾನ ಹೊಂದಿ, ವಿಷ್ಣುಪರೀಕ್ಷೆಯ ಪಾಪದ ಪ್ರಾಯಶ್ಚಿತ್ತಾರ್ಥವಾಗಿ ದೇಹತ್ಯಾಗ ಮಾಡಿ, ಮುಂದಿನ ದೇಹದಿಂದ ತಪಸ್ಸುಮಾಡಿ ಆ ಪಾಪವನ್ನು ಕಳೆದುಕೊಂಡು ಶುದ್ಧವಾಗಿ ಪುನಃ ಪರಮೇಶ್ವರನ ಪ್ರೇಮವನ್ನು ಗಳಿಸಿಕೊಂಡಳಂತೆ.

ಹೀಗೆ ಹರಿ-ಹರರ ಸಂಬಂಧದ ವಿಚಾರವಾಗಿ ಸ್ಥಾನದ ವಿಚಾರವಾಗಿ ಪುರಾಣಗಳಲ್ಲಿ ಕಾವ್ಯಗಳಲ್ಲಿ ಅಲ್ಲಲ್ಲೇ ಅನೇಕ ರೀತಿಯ ಚಿತ್ರಗಳು ವರ್ಣಿತವಾಗಿವೆ. ಬಾಹ್ಯ-ಲೌಕಿಕ ದೃಷ್ಟಿಯಿಂದ ವಿಚಾರಮಾಡುವಾಗ ಹರಿ-ಹರರ ಭಕ್ತರಲ್ಲಿದ್ದ ಕಲಹನಿವಾರಣೆಯೇ 'ಹರಿಹರ' ಪ್ರತಿಷ್ಠಾಪನೆಗೆ ಕಾರಣವೆಂದು ಊಹಿಸುತ್ತಾರೆ. ಆದರೆ ಕ್ಷೇತ್ರಮಹಿಮೆಯನ್ನು ವಿಚಾರಮಾಡಿದರೆ ಬೇರೆಯೇ ಕತೆ ಕಂಡುಬರುತ್ತದೆ. ಸುಪ್ರಸಿದ್ಧ ಹರಿದಾಸರಲ್ಲಿ ಒಬ್ಬರಾದ ಶ್ರೀ ವಿಜಯದಾಸರು ನಮ್ಮ ನಾಡಿನ ಬಹು ತೀರ್ಥಕ್ಷೇತ್ರಗಳನ್ನು ಕುರಿತು ಅನೇಕ ಸುಳಾದಿಗಳನ್ನು ರಚಿಸಿದ್ದಾರೆ. ಹರಿಹರ ಕ್ಷೇತ್ರ

ವನ್ನೂ ಕುರಿತು ಅವರು ಎರಡು ಸುಳಾದಿಗಳು ಸಿಕ್ಕಿವೆ. ಅವರ ಪ್ರಕಾರ ಹರಿಹರದ ಕಥೆ-ಮಹಿಮೆ ಹೀಗಿದೆ.

ಮಹಿಯೊಳು ಈ ಕ್ಷೇತ್ರ ಸುತ್ತು ಮೂರು ಯೋಜನ
ಸಹಜವೋ ಹರಿಹರನೆಂಬೋ ಪೆಸರು
ಗುಹಶಯನನಾದ ನಮ್ಮ ವಿಜಯ ವಿಠ್ಠಲರೇಯಾ

ಅಸುರ ಗುಹನೆಂದು ಪಸರಿಸಿ ತಪವನು
ಅಸುವ ದಂಡಿಸಿ ಮಹ ಪೆಸರಾಗೆ ನಿರುತದಲಿ
ಬಿಸಜಭವನ ಮೆಚ್ಚಿ ನಸುನಗುತ ಖಳಗೆ
ಅಸುರಾರಿ ಹರನಿಂದ ಅಸವಳಿಯಾದಂತೆ
ಕುಶಲವರವನೀಯೆ ವಸುಧಿಯೊಳಗೆ ಇತ್ತ
ಮಸದು ಮತ್ಸರಿಸಿ ಅಂಜಿಸಿದಾ ಲೋಕೇಶ್ವರರ
ಅಸಮವೀರನಾಗಿ ವಶವಲ್ಲದ ಸುಮಾನ
ಸರು [ಸುರರು] ಮೊರೆ ಇಡಲು
ಪಶುಪತಿ ಪ್ರಿಯ ಶ್ರೀ ವಿಜಯ ವಿಠ್ಠಲರೇಯಾ
ಬೆಸಸಿದ ಮಾತಿಗೆ ವಸುಧಿಯೊಳಗೆ ಮೆರೆದ

ಮೂರು ಯೋಜನ ಉದ್ದ ಹರಿಹರ ರೂಪದಲಿ ತೋರಿ
ಕ್ರೂರನ ಕೂಡ ಕಾಳಗವನು ಮಾಡಿ
ಸಾರಿಸಾರಿಗೆ ನಾನಾ ಶಸ್ತ್ರದಲಿ ಕಾದಿ
ಧಾರುಣಿಗೆ ಖಳನ ಬೀಳಗೆಡಹಿ
ಕಾರುಣ್ಯದಲಿ ಅವಗೆ ವರವಿತ್ತು ಕ್ಷೇತ್ರ ಗು
ಹಾರಣ್ಯವೆನಿಸಿ ಕರೆಸಿತಿದಕೊ
ವಾರಣಾಸಿ ಕ್ಷೇತ್ರಗಧಿಕವೆಂದೆನಿಸಿತು
. . . . . . . . . . .
ಕಾರುಣ್ಯನಿಧಿ ಹರಿಹರ ವಿಜಯವಿಠ್ಠಲ್ಲಾ
ಆರಾಧಿಸಲು ಮುಕ್ತಿದಾರಿಯಾ ತೋರುವಾ



. . . . . . . . . . .
ಹರಿಹರರಿಬ್ಬರು ಒಂದೇ ರೂಪವ ಧರಿಸಿ
ದುರುಳ ಗುಹಾಸುರನ ಕೊಂದರೆಂದೂ
ಮರುಳು ಮಾನವರು ತಿಳಿಯದೆ ನುಡಿವರು
ಹರಿಹರರಿಬ್ಬರು ಒಂದಾಹರೆ ?
. . . . . . . . . . .
ಕರುಣಾಸಿಂಧು ನಮ್ಮ ವಿಜಯವಿಠ್ಠಲರೇಯಾ
ಹರಿಹರ ರೂಪಧರಿಸಿದ ಕಾಣಿರೋ
ಗೋಪಾಲ ವಿಜಯವಿಠಲ ಹರಿಹರ
ರೂಪವು ತಾನಾದ ಅನೇಕರೂಪನೊ
. . . . . . . . . . .
ಸುರರೊಳಗೀತಾಗಿಂದಧಿಕ ದೇವರು ಇಲ್ಲಾ
ಹರಿಹರರೂಪಾ ಶ್ರೀ ವಿಜಯ ವಿಠಲರೇಯಾ
. . . . . . . . . . .
ತ್ರಿಶೂಲ ಡಮರುಗೆ ಭಸಿತರುದ್ರಾಕ್ಷಿಯು
ಪಶುವಾಹನನಾಗಿ ಇಪ್ಪದಿದೆ
ಅಸುರಾರಿಯಲ್ಲದೆ ಅನ್ಯರೂಪಗಳಲ್ಲ
ಹಸನಾಗಿ ತಿಳಿದು ಈತನ ಮಹಿಮೆ ಕೊಂಡಾಡಿ

. . . . . . . . .
ಪಶುಗಳಕಾಯ್ದ ನಮ್ಮ ವಿಜಯವಿಠಲ ಪ
ರಶುರಾಮಕ್ಷೇತ್ರದಲಿ ಹರಿಹರ ರೂಪನಾದ
ತುಂಗಮಹಿಮೆ ದೇವೋತ್ತುಂಗಾ ತುಂಗವಾಸ
ರಂಗ ವಿಜಯವಿಠಲ ಹರಿಹರ ಮೂರುತಿ [1]

ಹೀಗೆ ಮಹಾವಿಷ್ಣುವೇ ಹರಿಹರನ ರೂಪವನ್ನು ತಾಳಿ ಸಜ್ಜನ ಪೀಡಕನಾಗಿದ್ದ ಗುಹಾಸುರನನ್ನು ಸಂಹಾರ ಮಾಡಿದನು. ಈ ಗುಹಾಸುರ ಸಂಹಾರಕ ರೂಪವನ್ನೇ ಬ್ರಹ್ಮದೇವರು ದೇವಶಿಲ್ಪಿಯಾದ ವಿಶ್ವಕರ್ಮನಿಂದ ಮಾಡಿಸಿದರು ಎಂದೂ ಶ್ರೀ ವಿಜಯದಾಸರು ಹೇಳಿದ್ದಾರೆ—"ಪರಮೇಷ್ಠಿ ಬಂದು ಹರಿಹರ ರೂಪವ ಧರಿಸಿದ ದೇವನ ವಿಶ್ವಕರ್ಮನಿಂದ ನಿರವಾಣಗೈಸಿದ ಶೂಲ ಅಭಯಹಸ್ತ ಅರಿಶಂಖದಿಂದ ಚತುರ ಹಸ್ತಾದಲ್ಲಿ ಹರುಷವ ತಾಳಿ ಕೊಂಡಾಡಿ ಧನ್ಯನಾಗಿ ಸುರರಿಗರುಹಿದ ಇದರ ಮಹಿಮೆಯನ್ನು"[2]

ಇಂತಹ ಹರಿಹರ ಮೂರ್ತಿಗೆ ದೇವಾಲಯವನ್ನು ಕಟ್ಟಿಸಿದವನು ಪೋಲಾಳ್ವದಂಡನಾಥ. ಈತ ವಿಷ್ಣುಭಕ್ತ. "ಹರಿಚಾರಿತ್ರ" ಎಂಬೊಂದು ಷಟ್ಪದೀ ಗ್ರಂಥವನ್ನು ಬರೆದನೆಂದು ಹೇಳಲಾಗಿದೆ. ಆದರೆ ಈ ಗ್ರಂಥ ದೊರೆತಿಲ್ಲ. ಪೋಲಾಳ್ವ ದಂಡನಾಥ ಆಂಧ್ರದೇಶದ ನಾರಣಪುರದ ಅತ್ರಿರಾಜ; ತಾಯಿ ನವಿಲಾಡೆಯಕ್ಕ. ಈತ ಹೊಯ್ಸಳ ವೀರಬಲ್ಲಾಳನಲ್ಲಿಯೂ (೧೧೭೩-೧೨೨೦) ಮತ್ತು ಅವನ ಮಗ ವೀರನರಸಿಂಹ (೧೨೨೦-೧೨೩೫) ನಲ್ಲಿಯೂ ಅಮಾತ್ಯನಾಗಿದ್ದನು. ಈತನು ವಿಷ್ಣುಭಕ್ತನೂ ಮಹಾ ಪರಾಕ್ರಮಶಾಲಿಯೂ ಆಗಿದ್ದನು.[3]

ಈ ದೇವಾಲಯ ನಿರ್ಮಾಣದ ವಿಚಾರವಾಗಿ ಶಾಸನವೊಂದು ಹೀಗೆ ಹೇಳಿದೆ:

ಅಚ್ಯುತಭಕ್ತಿ ತನ್ನೊಳೆನಿಪಂ, ಪೋಲಾಳ್ವ ದಂಡಾಧಿಪಂ. ಸ್ವಸ್ತಿ ಶ್ರೀ ಜಯಾಭ್ಯುದಯ ಶಕವರ್ಷ ೧೧೪೫[4] ನೆಯ ಸ್ವಭಾನು ಸಂವತ್ಸರದ ಮಾಘಶುದ್ಧ ೧೧ ಬೃಹವಾರದಂದು ಚೋಳಪ್ರತಿಷ್ಠಾಚಾರ್ಯ ಶ್ರೀವೀರನರಸಿಂಹದೇವರ ಮಹಾಪ್ರಧಾನಂ ಪೋಲಾಳ್ವದಂಡಾಧಿನಾಥಂ ನೂರಱುದಿನ್ನೈದು ಹೊನ್ನಕಳಶದಿಂದಿಂ ಮೆಱೆವಂತಾಗಿ ಹರಿಹರ ದೇವರ್ಗೆ ದೇವಾಲಯಮಂ ಮಾಡಿಸಿದನ್ . . . .

ವಿನುತಂ ವೈಷ್ಣವ ಚಕ್ರವರ್ತಿ ನೆಗಳ್ದೀ ಪೋಲಾಳ್ವ ದಂಡೇಶನೊ
ಬ್ಬನೆ ಪುಣ್ಯಾಂಜನ ಸಿದ್ಧಿಯಂ ಪಡೆದನಿಂದಂತಲ್ಲದಿರ್ದಂದು ಭೋಂ
ಕೆನೆ ಕೈಸಾರ್ವುದೆ ಸುಸ್ಥಿರಂ ಹರಿಹರ ಪ್ರಾಸಾದ ನಿರ್ಮಾಣ ಧ
ರ್ಮನಿಧಾನಂ ಶತಶಾತಕುಂಭಕಳಶಶ್ರೀವಿಭ್ರಮಭ್ರಾಜಿತಂ ||

ಮುನ್ನಂ ಹೇರ್ಮಾಡಿರಾಯಂ ಹರಿಹರಗೃಹಮಂ ಮಾಡಿಸಲ್ವೇಳ್ಕುಮೆಂದಿ
ರ್ಪನ್ನಂ ಮುಂದೊರ್ಬ ಭಕ್ತಂ ಜನಿಯಿಸಿಯೆನಗಾವಾಸಮಂ ಮಾಡಿದಪ್ಪಂ
ನೀನಿಲ್ಲೆಂದಾತನಂ ಸ್ವಪ್ನದೊಳೆ ನಿಲಿಸಿ ದೇವಾಲ್ಯಮಂ ನೀನೆ ಲೇಸ
ಪ್ಪಂನಂ ಪೋಲಾಳ್ವ ಮಾಡೆಂದೊಸೆದು ಹರಿಹರಂ ಹೇಳ್ದು ತಾಂ ಮಾಡಿಕೊಂಡಂ ||

ದ್ವಾರಾವತಿಯೆನೆ ನೆಗಳ್ದ ಗು
ಹಾರಣ್ಯಮೆನಿಪ್ಪ ಹರಿಹರಕ್ಷೇತ್ರಚತು
ರ್ದ್ವಾರದೊಳೊಪ್ಪುವ ಲಕ್ಷ್ಮೀ
ನಾರಾಯಣವೆಸರ ಬಾನವಳ್ಳಿಯದೆಸಗುಂ ||

---

[1] "ಶ್ರೀ ವಿಜಯದಾಸರ ತೀರ್ಥಕ್ಷೇತ್ರ ಮಹಿಮಾ", ಪುಟ ೩೧೪-೩೨೧. [2] ಅದೇ, ಪುಟ ೩೧೬.
[3] 'ಕರ್ಣಾಟಕ ಕವಿಚರಿತೆ'—ಭಾಗ ೧, ಪುಟ ೩೪೪-೩೪೫. [4] ಎಂದರೆ ಕ್ರಿ. ಶ. ೧೨೨೪.

. . . ಸೇನಾನಾಥಾಗ್ರಣಿ ವಿಷ್ಣುಭಕ್ತತಿಳಕಂ ಪೋಲಾಳ್ವ ದಂಡಾಧಿಪಂ ||
ಗುರುಧರ್ಮದ್ವಿತಯಕ್ಕೆ ನೀನೆ ದಿಟದಿಂ ಪೋಲಾಳ್ವ ಕೇಳ್ಮಂನವಾ
ದರೊಳಿಂನಪ್ಪರೊಳಿಂದು ವರ್ತಿಪರೊಳಾರ್ಗುಂಟಾದುವೀ ಧರ್ಮವಾರ್
ಹರಿಚಾರಿತ್ರಮನೊಲ್ದು ಷಟ್ಪದದೆ ಪೇಳ್ದನ್ನಿಂನವೊಲ್ ನಿಂನವೊಲ್
ಧರೆ ಚೋದ್ಯಂ ಬಡುವಂತಿರಾರ್ ಹರಿಹರಶ್ರೀಗೇಹಮಂ ಮಾಡಿದರ್ ||

ಅಂತೂ ಈ ಹರಿಹರ ದೇವಾಲಯವನ್ನು ಪೆರ್ಮಾಡಿರಾಯನು ಕಟ್ಟಲು ಪ್ರಯತ್ನಪಟ್ಟು ಕೆಲಕಾಲದ ತರುವಾಯ ಹರಿಭಕ್ತನೂ ದಂಡಾಧಿಪನೂ ಮಂತ್ರಿಯೂ ಆದ ಪೋಲಾಳ್ವನು ಪೂರ್ಣವಾಗಿ ನಿರ್ಮಾಣ ಮಾಡಿಸಿದನು ಎಂದು ಈ ಶಾಸನದಿಂದ ತಿಳಿದು ಬರುತ್ತದೆ. ಕಾಲ ಅಲ್ಲೇ ಹೇಳಿರುವಂತೆ ಕ್ರಿ. ಶ. ೧೨೨೪. ಸೇವುಣ ಅಥವಾ ಯಾದವ ಮಹಾದೇವನ ದಂಡನಾಯಕನಾದ ಸಾಳ್ವ ತಿಕ್ಕನ ೧೨೪೦ ರಲ್ಲಿ ಈ ದೇವಸ್ಥಾನದಲ್ಲಿರುವ ಲಕ್ಷ್ಮೀನಾರಾಯಣ ಗುಡಿಯನ್ನು ಕಟ್ಟಿದ—ಹೊಯ್ಸಳರನ್ನು ಗೆದ್ದ ಗುರುತಿಗಾಗಿ, ಎಂದೂ ತಿಳಿದು ಬರುತ್ತದೆ. ಏಳು ನೂರುವರ್ಷಗಳಷ್ಟು ಹಿಂದಿನ ದೇವಾಲಯವಿದು ಎಂಬುದು ಇದರಿಂದ ಸ್ಪಷ್ಟವಾದಂತಾಯಿತು.

೧೭ನೆಯ ಶತಮಾನದಲ್ಲಿ ನಮ್ಮ ಅನೇಕ ದೇವಾಲಯಗಳು ಮಹಮದೀಯರ ಧಾಳಿಗೆ ಸಿಕ್ಕು ಧೂಳಿಪಟವಾದರೂ ಹರಿಹರ ದೇವಾಲಯ ನಾಶವಾಗಲಿಲ್ಲ. ಈ ದೇವಾಲಯದ ಮೇಲ್ಭಾಗವನ್ನು ಒಂದು ಮಸೀದಿ ಎಂಬ ರೀತಿಯಲ್ಲಿ ಕಂಡು ಇದನ್ನು ಒಂದು ಕಲಾಕೃತಿ ಎಂದು ಭಾವಿಸಿ ಗೌರವಿಸಿ ಕಾಪಾಡಿದರಂತೆ. ಈ ದೇವಾಲಯದ ಗರ್ಭಗುಡಿಯಲ್ಲಿ ಮೂಲವಿಗ್ರಹದ ಮೇಲುಗಡೆ ಒಂದು ಬತ್ತೇರಿ ಇದ್ದು 'ಸಾರ್ಸನಿಕ್' ರೀತಿಯ ಬಾಗಿಲುವಾಡವಿರುವುದನ್ನು ನೋಡಬಹುದು.

ಮೇಲೆ ಹೇಳಿದ ಶಾಸನ ಈ ಗುಡಿಯ ವರ್ಣನೆಯನ್ನೂ ಮಾಡಿದೆ. ಇದೊಂದು ಅದ್ಭುತವಾದ ದೇವಾಲಯವೆಂದು ಅಲ್ಲಿ ಹೇಳಿದೆ. ನೂರು ಕನಕ ಕಲಶಗಳಿಂದ ಶೋಭಿಸುವ ಚಿನ್ನದ ಶಿಖರಗಳಿಂದ ಮೆರೆಯುವ ಮೇರುಪರ್ವತದಂತೆ ಗಗನಚುಂಬಿಯಾಗಿದೆ. ಕಮಲಾಲಯದಂತೆ ನೈದಿಲೆಯಿಂದ ತುಂಬಿದ ಸರೋವರದಂತೆ ಇಲ್ಲಿ ಕೆತ್ತಿರುವ ವಿಗ್ರಹಗಳು, ರಂಗಸ್ಥಳದ ಕಂಬಗಳು ನಾಲ್ಕುಕಡೆಯಲ್ಲೂ ಹರಿಹರನ ಗುಡಿಗೆ ಭೂಷಣಪ್ರಾಯವಾಗಿವೆ.

ಹರಿಹರ ದೇವಾಲಯದ ಹೊರಬಾಗಿಲ ಚೌಕಟ್ಟು ತುಂಬ ಆಕರ್ಷಕವಾದುದು. ಶಿಲ್ಪ ನಿರಾಡಂಬರವಾಗಿ ಸರಳವಾಗಿದ್ದರೂ, ಬಹು ಮೋಹಕವಾಗಿ ಮನ ಮೆಚ್ಚಿಸುವಂತಹುದು. ಕಲ್ಲಿನಿಂದ ಕೆತ್ತಿದುದಾದರೂ, ಮರದಲ್ಲಿ ಮಾಡುವ ಕೆತ್ತನೆಯ ಕೆಲಸವನ್ನು ಹೋಲುವಂತಿದೆ ಇಲ್ಲಿಯ ಶಿಲ್ಪಕಲಾಚಾತುರ್ಯ. ವಿಗ್ರಹಗಳ ಕೆತ್ತನೆ ಇಲ್ಲಿ ವಿಶೇಷವಾಗಿಲ್ಲ.

ಬಾಗಿಲುವಾಡದ ಹಾಸುಗಲ್ಲಿನ ಮೇಲೆ ಕೆತ್ತಿರುವ ಲಕ್ಷ್ಮಿ ತುಂಬ ಸಣ್ಣದಾದರೂ ಬಹು ಸುಂದರವಾದುದು. ಕಮಲದಳದಲ್ಲಿ ಕೆತ್ತಿರುವ ಈ ಲಕುಮಿಯ ಮೂರ್ತಿ ಅನೇಕರ ಸ್ಥೂಲ ದೃಷ್ಟಿಗೆ ಅಗೋಚರವೆಂದೂ ಹೇಳಬಹುದು. ಆಕೆಯ ಕೋಮಲ ಕರಗಳಲ್ಲಿರುವ ಕಮಲ ಪುಷ್ಪವಂತೂ ಇನ್ನೂ ಸೂಕ್ಷ್ಮ. ಇನ್ನು ಆಕೆಯ ಇಕ್ಕೆಲಗಳಲ್ಲೂ ಕೆತ್ತಿರುವ ಆನೆಗಳಂತೂ, ಅವುಗಳ ಅರ್ಧಂಬರ್ಧ ಕಾಣುವ ತಲೆಗಳಿಂದಲೂ, ಎತ್ತಿದ ಸೊಂಡಲುಗಳಿಂದಲೂ ಊಹಿಸಿ ತಿಳಿಯಬೇಕಾಗಿದೆ.

ಇಲ್ಲಿಯ ಶಿಲ್ಪಕಲೆ ಹೊಯ್ಸಳರ ಆ ಕಾಲದ ವಿಶಿಷ್ಟರೀತಿಯನ್ನು ನೆನಪಿಗೆ ತರುತ್ತದೆ. ಮೀನಾಕ್ಷಿ ಮಧುರೆ ಸಾಂಚಿ ಉದಯಗಿರಿಗಳಲ್ಲಿ ಈ ಮೂರ್ತಿಯನ್ನು ದೊಡ್ಡದಾಗಿ ಚೆನ್ನಾಗಿ ಕಡೆದಿದ್ದಾರೆ. ಆದರೆ ಇಲ್ಲಿ ಆ ಮೂರ್ತಿ ಸಣ್ಣ ಆಕಾರ ಸೂಕ್ಷ್ಮತೆಗಳಿಂದಲೇ ಗಮನಾರ್ಹವಾಗಿದೆ ಎಂದು ಹೇಳಬಹುದು. ಇದನ್ನು ಶಿಲ್ಪಿಗಳು ಇಂದೂ ತುಂಬ ಮೆಚ್ಚಿಕೊಳ್ಳುತ್ತಾರೆ.

ಈ ಸೂಕ್ಷ್ಮ ಲಕ್ಷ್ಮಿಯ ಮೇಲುಗಡೆ ಏಳು ಸಣ್ಣ ಸಣ್ಣ ಗೋಪುರಗಳಿವೆ. ಎರಡು ಮೂರನೆಯ ಗೋಪುರಗಳ ಮಧ್ಯೆ ಯಕ್ಷನ ಸಣ್ಣ ವಿಗ್ರಹವೊಂದಿದೆ. ಈ ಯಕ್ಷ ಚಿಗುರೊಡೆ

[5] *Epigraphia Carnatica*, Vol. XI, ದಾವಣಗೆರೆ ೨೫, ಪುಟ ೫೩-೫೪.

ದಿರುವ ಮರದ ಕೆಳಗೆ ಪುಷ್ಪಭರಿತವಾದ ಕೊಂಬೆಯ ಅಡಿಯಲ್ಲಿದ್ದಾನೆ. ಐದು ಆರನೆಯ ಗೋಪುರಗಳ ಮಧ್ಯೆ ಇನ್ನೊಂದು ಇಂತಹದೇ ವಿಗ್ರಹವನ್ನು ಕೆತ್ತಲಾಗಿದೆ. ಸಿಂಹ ಲಲಾಟದ ಚಿತ್ರಗಳೆರಡು ಮೂರು ಮತ್ತು ನಾಲ್ಕನೆಯ ಗೋಪುರಗಳ ಮಧ್ಯೆ ಇವೆ. ಇದು ಹೊಯ್ಸಳರ ರಾಜ ಚಿಹ್ನೆ—ಧ್ವಸ್ತೀಕೃತವಾಗಿದೆ. ಶಿಲ್ಪಿಗಳ ಕಲಾಭಿಜ್ಞತೆ ಚೆನ್ನಾಗಿ ಇಲ್ಲಿ ಅರಿವಾಗುತ್ತದೆ. ಒಟ್ಟಿನಲ್ಲಿ ಈ ದೇವಾಲಯದ ಪ್ರವೇಶದ್ವಾರದ ಕಲಾಕೌಶಲ್ಯ ತುಂಬ ಮೆಚ್ಚುವಂತಹುದಾಗಿ, ಅಂದಿನ ಹೊಯ್ಸಳ ಶಿಲ್ಪಕಲಾ ಪರಾಕಾಷ್ಠೆಯ ದ್ಯೋತಕವೆನ್ನಬಹುದಾಗಿದೆ.

ಈ ದೇವಾಲಯದ ದೀಪಗಂಬವೇ ಒಂದು ದೊಡ್ಡ ಅದ್ಭುತ ಕಲಾಕೃತಿಯಾಗಿದೆ. ಒಂದರಮೇಲೊಂದು, ಕೆಳಗೆ ಅಗಲವಾಗಿ ಮೇಲೆ ಮೇಲೆ ಸಣ್ಣದಾಗಿ ಒಂಭತ್ತು ಜೊತೆ ದೀಪಗಳಿವೆ ಇಲ್ಲಿ. ಈ ದೀಪ ಯುಗ್ಮಗಳ ರಚನೆ ಮನಮೋಹಕವಾಗಿದೆ. ಒಂದು ಜೊತೆ ಹಿಂದಕ್ಕೂ, ಮತ್ತೊಂದು ಮುಂದಕ್ಕೂ ಚಾಚಿಕೊಂಡಿದ್ದು, ನೋಡಲು ತುಂಬ ಚೆಲುವಾಗಿವೆ. ದೀಪ ಹತ್ತಿಸಿದಾಗ ಇದರ ಸೌಂದರ್ಯ ಮತ್ತೂ ಆಕರ್ಷಕ. ಸಾಮಾನ್ಯವಾಗಿ ಎಲ್ಲ ಕಡೆಗಳಲ್ಲೂ ಇರುವಂತೆ ಇವು ಗುಂಡಾಗಿಲ್ಲದೆ, ಚೌಕಾಕಾರವಾಗಿದ್ದು, ವಿಗ್ರಹಗಳು ಯಾವುದೂ ಇಲ್ಲದೆ ಸರಳಸುಂದರವಾಗಿ ಮೆರೆಯುತ್ತಿವೆ.

ರಂಗಮಂಟಪದ ಮೇಲ್ಛಾವಣಿ ಮೂರು ಸಾಲುಗಳಲ್ಲಿ ಮೂರು ಮೂರರಂತೆ ಒಟ್ಟು ಒಂಭತ್ತು ಪದ್ಮಪುಷ್ಪಗಳ ಪ್ರತಿನಿಧಿಗಳಿಂದ ಸೊಗಸಾಗಿ ಅಲಂಕೃತವಾಗಿವೆ. ಈ ಹೂಗಳು ಸ್ವಾಭಾವಿಕವಾದ ತಮ್ಮ ಮೂಲಸೃಷ್ಟಿಗೆ ಬಹು ಸಮೀಪದಲ್ಲಿರುವಂತೆ ಭಾಸವಾಗುತ್ತದೆ. ಹೂಗಳೆಲ್ಲಾ ಚೆನ್ನಾಗಿ ಅರಳಿದಂತೆ ಕೆತ್ತಿರುವುದರಿಂದ ಆಹ್ಲಾದದಾಯಿಯಾಗಿವೆ.

ಮಹಾದ್ವಾರದಲ್ಲಿ ನಿಂತರೇ ವಿಶಾಲ ಗರ್ಭಗುಡಿಯಲ್ಲಿ ನಗುಮೊಗದಿಂದ ನಿಂತಿರುವ ಹರಿಹರ ಸ್ವಾಮಿಯ ದರ್ಶನ ಬಹು ಚೆನ್ನಾಗಿ ಆಗುತ್ತದೆ. ಇದೂ ಇಲ್ಲಿನ ಒಂದು ವೈಶಿಷ್ಟ್ಯವೇ ಎನ್ನಬಹುದು.

ಹರಿಹರ ದೇವಾಲಯದ ಮಹತ್ವವನ್ನು ಆ ಶಾಸನ ಹೀಗೆ ವರ್ಣಿಸಿದೆ:

**ಪುರು ಪುಚ್ಛಂ ಸಗರಂ ಭಗೀರಥ ನೃಪಾಲಂ ಕಾರ್ತವೀರ್ಯಾರ್ಜುನಂ**
**ಭರತಂ ನಂದ ಪುರೂರವಂ ಪೃಥು ದಿಲೀಪಂ ಮುಖ್ಯಮಾದಾದಿರಾ**
**ಜರೆ ಮುಂ ಮಾಡಿಸಲಾಱಿದಾ ಹರಿಹರ ಶ್ರೀಗೇಹಮಂ ಮಾಡಿದಂ**
**ಗಿರಿ ಚೆಂಬೊನ್ನಗಳಸಂಗಳಂ ತಳೆದವೊಲ್ ಪೋಲಾಳ್ವದಂಡಾಧಿಪಂ ||**
**ನೆಗಳ್ದಾ ಸೇತುಗೆ ವಾರಣಾಸಿಗೆ ಕುರುಕ್ಷೇತ್ರಕ್ಕೆ ಸಾಮರ್ಥ್ಯದಿಂ**
**ಮಿಗಿಲಾಗಿರ್ಪುದು ಧಾತ್ರಿಯೊಳ್ ಹರಿಹರ ಕ್ಷೇತ್ರಂ ಸಮಂತಲ್ಲಿ ಮೇ**
**ರುಗೆ ಮಾಱಿಂಡಲಮುಪ್ಪಿನಂ ಹರಿಹರ ಶ್ರೀಗೇಹಮಂ ಮಾಡಿದಂ**
**ಗಗನಂ ಪೊನ್ನಗಳಸಂಗಳಿಂ ಪುದಿವಿನಂ ಪೋಲಾಳ್ವದಂಡಾಧಿಪಂ ||**

ಹೀಗೆ ಮೆರೆದು ಸುಪ್ರಸಿದ್ಧ ಪುಣ್ಯಕ್ಷೇತ್ರವಾಗಿ ಉಳಿದು ಬಂದ ಹರಿಹರದ ಪ್ರಕೃತ ಸ್ಥಿತಿ ಅಷ್ಟೇನೂ ಹೇಳಿಕೊಳ್ಳುವಂತಿಲ್ಲ. ದೇವಾಲಯ ಎಷ್ಟು ನಿರ್ಮಲವಾಗಿರಬೇಕೊ, ಅದರ ಸುತ್ತಮುತ್ತಲಿನ ಪ್ರದೇಶ ಅದೆಷ್ಟು ರಮ್ಯವಾಗಿ ಪ್ರಶಾಂತವಾಗಿ, ಭಕ್ತಿ ಪ್ರಚೋದಕವಾಗಿ ದೈವಮಹಿಮೋದ್ಧೀರಕವಾಗಿ, ಪವಿತ್ರವಾಗಿ ಇರಬೇಕೊ ಅಷ್ಟಿಲ್ಲವೆಂದು ಹೇಳಲು ವ್ಯಸನವಾಗುತ್ತದೆ. ಈ ಪರಿಸ್ಥಿತಿ ಹೋಗಿ ವಾತಾವರಣ ಸುಧಾರಿಸಿದರೆ ಪೋಲಾಳ್ವನ ಆತ್ಮಕ್ಕೆ ಶಾಂತಿಯೂ, ಬರುವ ಭಕ್ತವರ್ಗಕ್ಕೆ ಸಂತೃಪ್ತಿಯೂ ಸಾಕ್ಷಾತ್ ಹರಿಹರ ಮಹಾದೇವನಿಗೆ ನಮ್ಮ ಮೇಲೆ ಮಹಾಪ್ರಸಾದವೂ ಉಂಟಾಗುವುದು. ಅಂತಹ ಕಾಲ ಬೇಗ ಬರಲಿ.

**ಕೆ. ಎಂ. ಕೃಷ್ಣರಾವ್**

# ಮಂತ್ರಗೋಪ್ಯ

ವೀರಶೈವ ಧರ್ಮಸಾಹಿತ್ಯಗಳ ಐತಿಹ್ಯವು ವಿಶಿಷ್ಟವಾದ ಒಂದು ನವೀನತೆಯಿಂದ ಮೆರುಗನ್ನು ಪಡೆದಿರುತ್ತದೆ. 'ಪಿಂಡಬ್ರಹ್ಮಾಂಡಯೋರೈಕ್ಯಂ' ಎಂಬ ಸೂತ್ರದ ಹಿನ್ನೆಲೆಯಲ್ಲಿ ವೀರಶೈವದ ದಿನದಿನದ ಆಚರಣೆ ಮತ್ತು ಅದನ್ನು ಬಳಸಿಕೊಂಡು ಬಂದಿರುವ ವಿಚಾರಧಾರೆ ಇವುಗಳ ಮಧುರವಾದ ಸಮರಸವನ್ನು ಆ ಐತಿಹ್ಯದಲ್ಲಿ ಕಾಣಬಹುದಾಗಿದೆ. ಪರಶಿವ-ಶಕ್ತಿ-ಶರಣ-ಸೃಷ್ಟಿ ಈ ನಾಲ್ಕರ ಬಗೆಗೆ ಆಳವಾಗಿ ಅವ್ಯಾಹತವಾಗಿ ವಿಚಾರಿಸಿ ಮಂಡಿಸಿರುವ ವೀರಶೈವ ಸಿದ್ಧಾಂತಗಳು, ಅದರಲ್ಲಿಯೂ ಅನುಭವಸಾಹಿತ್ಯದಲ್ಲಿ ಮೂಡಿಬಂದಿರುವ ಆಣಿ ಮುತ್ತುಗಳಂತಿರುವ ಮಾತುಗಳು ನಿತ್ಯ ನೂತನವಾಗಿರುತ್ತವೆ. ಈ ವಿಷಯಕವಾದ ವೀರಶೈವರ ಗ್ರಂಥವ್ಯಾಪ್ತಿಯು ವೈವಿಧ್ಯತೆಯಿಂದ ಮಾತ್ರವಲ್ಲ, ವಿಸ್ತಾರದಿಂದಲೂ ಗಮನಾರ್ಹವಾಗಿರುತ್ತದೆ. ಅವರು ರಚಿಸಿದ ಗ್ರಂಥಗಳನ್ನು, ವಿಶೇಷವಾಗಿ ಸಾಹಿತ್ಯದಲ್ಲಿ ಯುಗಗಳ ನಿರ್ಮಾಣಕ್ಕೆ ಕಾರಣವಾಗುವಂತೆ ಕಾಲಕಾಲಕ್ಕೆ ರಚಿಸುತ್ತ ಬಂದ ಗ್ರಂಥಗಳನ್ನು, ಅವಲೋಕಿಸುವುದಾದರೆ ಅವುಗಳಲ್ಲಿ ಒಂದು ವಿಧವಾದ ವಿಂಗಡಿಕೆಯನ್ನು ಗುರುತಿಸಬಹುದಾಗಿದೆ.

ಇವುಗಳಲ್ಲಿ ಆಧ್ಯಾತ್ಮಿಕ ಔನ್ನತ್ಯವನ್ನು ಪಡೆಯಲೆಳಸುವ ಸಾಧಕರಿಗೆ 'ಮಂತ್ರಗೋಪ್ಯ' ಎಂಬ ಹೆಸರಿನಿಂದ ರಚಿತವಾದ ಕೃತಿಗಳು ಒಳ್ಳೆ ಸಹಾಯಕವಾಗುತ್ತವೆ. ನೂರೊಂದು ವಿರಕ್ತರ ಕಾಲದಿಂದೀಚೆಗೆ 'ಕರಣಹಸಿಗೆ' 'ಮಿಶ್ರಾರ್ಪಣ' ಎಂಬ ಗ್ರಂಥಗಳ ಜೊತೆಗೆ ಮಂತ್ರ ಗೋಪ್ಯವನ್ನು ವಿಶೇಷವಾಗಿ ಮನನಮಾಡಿಕೊಳ್ಳುತ್ತಿದ್ದರೆಂಬುದು ಗಮನಿಸತಕ್ಕ ಸಂಗತಿಯಾಗಿದೆ. ಇಂತಹ ಅನುಭವಾತ್ಮಕ ಗ್ರಂಥಗಳನ್ನು ಅಭ್ಯಸಿಸಿ ಸರಿಯಾದ ಅನುವರ್ತನೆಯ ನಿಟ್ಟುಕೊಳ್ಳಬೇಕೆಂಬ ಉದ್ದೇಶದಿಂದ ಸುತ್ತೂರು ವೀರಸಿಂಹಾಸನ ಮಠದ ಶ್ರೀ ಘನಲಿಂಗ ದೇವನು "ಮಂತ್ರಗೋಪ್ಯವನೋದುವಣ್ಣಗಳ ಕುಟಿಲವಣ್ಣುಗಳ ಕುಮಂತ್ರಕ್ಕೆ ಸಿಕ್ಕಿಸಿ ಕಾಡಿಸಿತು ಮಾಯೆ" ಎಂದು ಎಚ್ಚರಿಸಿದ್ದಾನೆ.[1] ಶಿವಯೋಗದ ಗೂಢವನ್ನು ತಿಳಿಯಪಡಿಸುವ ಈ ಮಂತ್ರಗೋಪ್ಯ ಕೃತಿಗಳು ಹೆಚ್ಚಾಗಿ ಇರುವುದಿಲ್ಲ; ಆದರೂ ಇದ್ದ ಅವಕ್ಕೆ ಬಹಳ ಎತ್ತರವಾದ ಸ್ಥಾನವಿರುತ್ತದೆ. ಇವುಗಳಲ್ಲಿ ಒಂದನ್ನು ಹೊರತುಪಡಿಸಿ ಉಳಿದುವೆಲ್ಲ ೧೨ ನೆಯ ಶತಮಾನದಲ್ಲಿಯೇ ರಚಿತವಾಗಿರುತ್ತವೆ. ಲಿಂಗೈಕ್ಯ ಡಾಕ್ಟರ್ ಬಿ. ಎಸ್. ಗದ್ದಗೀ ಮಠ, ಎಂ.ಎ., ಬಿ.ಟಿ., ಪಿಎಚ್.ಡಿ., ಕರ್ನಾಟಕ ಯೂನಿವರ್ಸಿಟಿ, ಧಾರವಾಡ ಅವರು ನಮಗೆ ಬರೆದ ಒಂದು ಓಲೆಯಲ್ಲಿ "ನನ್ನ ಸಂಶೋಧನೆಯಲ್ಲಿ (೧) ಅಲ್ಲಮಪ್ರಭು, (೨) ಬಸವ, (೩) ಚೆನ್ನಬಸವ, (೪) ಸಿದ್ಧರಾಮ, (೫) ಅಕ್ಕಮಹಾದೇವಿ, (೬) ಮಡಿವಳಮಾಚಿದೇವ, (೭) ಸೊಡ್ಡಳಬಾಚರಸ, (೮) ಹಡಪದ ಅಪ್ಪಣ್ಣ, (೯) ಅಪ್ಪಣ್ಣಗಳ ಮಡದಿ ಲಿಂಗಮ್ಮ (೧೦) ಜಾತಿಗರ (ಅಂಬಿಗರ?) ಚೌಡಯ್ಯ, (೧೧) ಪುಲಿಗೆರೆಯ ಸೋಮೇಶ? ಇನ್ನೂ ಅನೇಕರು ಮಂತ್ರಗೋಪ್ಯವನ್ನು ಬರೆದಿರಬೇಕೆಂದು ಅನುಮಾನ ಬಂದಿದೆ."—ಎಂದು ತಿಳಿಸಿದ್ದಾರೆ. ಇದನ್ನು ಇನ್ನೂ ನಿಶ್ಚಿತಮಾಡಿಕೊಳ್ಳಬೇಕಾಗಿದೆ.

ಭಕ್ತಿಭಂಡಾರಿ ಬಸವಣ್ಣನು ಒಂದು ಮಂತ್ರಗೋಪ್ಯವನ್ನು ಬರೆದಿದ್ದಾನೆ. "ಇದು ಹಾಡಿನ ರೂಪವಾಗಿದೆ; ಇದರಲ್ಲಿ ವೀರಶೈವ ಸಿದ್ಧಾಂತವು ಸಂಗ್ರಹವಾಗಿ ಹೇಳಿದೆ" ಎಂದು ಕೀರ್ತಿಶೇಷ ಆರ್. ನರಸಿಂಹಾಚಾರ್ಯರು ಕವಿಚರಿತೆಯಲ್ಲಿ ತಿಳಿಸುತ್ತಾರೆ.[2] ಆದರೆ ಇದು

---

[1] ಘನಲಿಂಗದೇವರ ವಚನ (ಶರಣ ಸಾಹಿತ್ಯಮಾಲೆ—೬೫); (ಶಿವಾನುಭವ ಗ್ರಂಥಮಾಲೆ, ವ ೫). ವ. ಶಾ. ಸಾರ, ಭಾಗ ೧ (ಪೂರ್ವಾರ್ಧ) ವ. ೧೧, ಪುಟ ೨೫೬. [2] ಕ. ಚ. ಭಾಗ ೧, ಪುಟ ೧೭೭.

ಅಚ್ಚಾಗಿರುವುದಿಲ್ಲ. ತಾಳೆಗರಿಯ ಪ್ರತಿಗಳಲ್ಲಾಗಲಿ ಇಲ್ಲವೆ ಇತರ ಕೈಬರೆಹದ ಪ್ರತಿಗಳಲ್ಲಾಗಲಿ ಇದು ಇರುವಂತೆ ತೋರುವುದಿಲ್ಲ. ಕವಿಚರಿತೆಕಾರರಿಗೆ ಯಾವುದಾದರೂ ಒಂದು ಆಧಾರವಿದ್ದಿರಬೇಕು. ಇದು ಇನ್ನೂ ಸಂಶೋಧಿಸಲ್ಪಡಬೇಕಾದ ಸಂಗತಿಯಾಗಿದೆ.

ಸಮ್ಯಗ್‌ಜ್ಞಾನಿ ಚೆನ್ನಬಸವಣ್ಣನು 'ಮಂತ್ರಗೋಪ್ಯ' ಮತ್ತು 'ಪದಮಂತ್ರಗೋಪ್ಯ' ಎಂಬ ಹೆಸರಿನ ಎರಡು ಗ್ರಂಥಗಳನ್ನು ಬರೆದಿದ್ದಾನೆ. ಇವೆರಡೂ ಕೃತಿಗಳಿಗೆ ಕನ್ನಡ ವ್ಯಾಖ್ಯಾನಗಳಿರುತ್ತವೆ.[3] ಮಂತ್ರಗೋಪ್ಯಕ್ಕೆ 'ಹಿರಿಯ ಮಂತ್ರಗೋಪ್ಯ' ಎಂದೂ ಹೆಸರಿದೆ. ಪಾಠಾಂತರ ಟೀಕೆಗಳಿಂದೊಡಗೂಡಿದ ಇದನ್ನು ಪಂಡಿತ ಚಂದ್ರಶೇಖರಶಾಸ್ತ್ರಿ, ಚತ್ರದಹಳ್ಳಿ ಎಂಬವರು ಅಚ್ಚುಗೊಳಿಸಿ ಧಾರವಾಡದಲ್ಲಿ ಪ್ರಸಿದ್ಧಗೊಳಿಸಿದರು. ಇದಕ್ಕೆ ಟೀಕೆಯನ್ನು ಬರೆದವರು ಯಾರು ಎಂಬುದು ತಿಳಿದುಬಂದಿಲ್ಲ. ಪದ್ಯರೂಪವಾದ ಇದರಲ್ಲಿ ೨೭ ಹಾಡುಗಳೂ ಪ್ರಾರಂಭದಲ್ಲಿ "ನೋಡಲಿಲ್ಲ ನುಡಿಯಲಿಲ್ಲ ಕೂಡಲಿಲ್ಲ| ಅಪ್ರತಿಮಂಗೊಡಲುಯಿಲ್ಲ" ಎಂಬ ಪದ್ಯಾರ್ಧದ ಒಂದು ಪಲ್ಲವಿಯೂ ಇರುತ್ತದೆ. ಇದರಲ್ಲಿಯ ಪದ್ಯಗಳನ್ನು 'ಸೂತ್ರ' ಎಂದು ಕರೆಯಲಾಗಿದೆ. ಷಟ್ಸ್ಥಲದ ಮುಖಾಂತರವಾಗಿ ಲಿಂಗಾಂಗ ಸಾಮರಸ್ಯವನ್ನು ಬೋಧಿಸುವ ಈ ಕೃತಿಯಲ್ಲಿ ಶುದ್ಧ ಶಿವಯೋಗದ ತಿಳಿಯಾದ ವಿವರಣೆಯಿರುತ್ತದೆ.

ಎರಡು ವಿಧದ ಭಕ್ತಿಜ್ಞಾನ ತೂರ್ಯಾತೀತವಾದಲ್ಲಿ
ಕುರುಹುಗೆಟ್ಟ ನಿರ್ವಾಣ ಲಿಂಗವು ಮೂಲವು |
ಉನ್ಮನಿಯ ಸ್ಥಾನದಲ್ಲಿ ಉಲುಹು ಮಂತ್ರಗೋಪ್ಯವಾಗಿ
ಪರಮಲಿಂಗದ ಬೆಳಗುದೋರಲಾರು ಮೂಲವು ||[4]

ಎಂಬ ಪದ್ಯದಲ್ಲಿ ಮಂತ್ರಗೋಪ್ಯವೆಂದರೇನು, ಶಿವಯೋಗದಲ್ಲಿ ಅದರ ಸ್ಥಾನವಾವುದು, ಎಂಬುದನ್ನು ಸೂಚ್ಯವಾಗಿ ತಿಳಿಸಲಾಗಿದೆ. ಪರವಸ್ತುವು ಪ್ರಕಾಶರೂಪವಾಗಿದೆ. ಅದನ್ನು ಭಕ್ತಿ-ಜ್ಞಾನಗಳ ಮೂಲಕವಾಗಿ ಕಾಣಲು ಶಕ್ಯವಿದೆ. ವೈರಾಗ್ಯದ ಆಧಾರದಲ್ಲಿ ಆಳವಡಿಸಿಕೊಳ್ಳದ ಭಕ್ತಿ-ಜ್ಞಾನಗಳು ತೂರ್ಯಾವಸ್ಥೆಗೆ ನಿಲುಕಿಸಿ ಪರವಸ್ತುವಿನ ದರ್ಶನ ಸಾಕ್ಷಾತ್ಕಾರಗಳನ್ನು ಮಾಡಿ ಕೊಡಲಾರವು. ಅದಕ್ಕಾಗಿ ಭಕ್ತಿ-ಜ್ಞಾನ ವೈರಾಗ್ಯದ ಆಚರಣೆಗೆ ಒಂದು ಅತ್ಯುಚ್ಚವಾದ ಸ್ಥಾನವನ್ನು ನೀಡಲಾಗಿದೆ. ಇಂತಹ ಪರವಸ್ತುವನ್ನು ತನ್ನಿಂದ ಅನ್ಯವಾಗಿ ಹುಡುಕುವಂತಿಲ್ಲ; ತನ್ನಲ್ಲಿಯೇ ಅದನ್ನು ಗುರುತಿಸಬೇಕು. ಸಂಕಲ್ಪ ವಿಕಲ್ಪದ ಕೀಳುಪ್ರವೃತ್ತಿಯ ಮನವು ಮಾರ್ಪಟ್ಟು ಉನ್ಮನವಾಗಿ ತೋರಿದಾಗ ಅಲ್ಲಿ ಶಬ್ದಮುಗ್ಧಸ್ಥಿತಿಯೊದಗುತ್ತದೆ. ಮನಮಾರುತಗಳು ಸ್ತಿಮಿತಕ್ಕೆ ಬಂದು ನಿಂತಾಗ ಅಲ್ಲಿ ಉಲುಹಿಗೆ ಆಸ್ಪದವೆಲ್ಲಿರಬೇಕು? ಇಂತಹ ಅವಸ್ಥೆಯಲ್ಲಿ ಮಂತ್ರಮಯ ಮೂರ್ತಿಯು ಅಂತರಂಗದಲ್ಲಿ ಪ್ರಕಾಶರೂಪವಾಗಿ ಹೊಳೆಹೊಳೆಯುವದು. ಇದುವೆ ಇಲ್ಲಿ ಸೂಚಿತವಾಗಿರುವ ಮಂತ್ರಗೋಪ್ಯದ ರಹಸ್ಯವಾಗಿದೆ.

'ಪದಮಂತ್ರಗೋಪ್ಯ'ವೂ ಪದ್ಯಗಳ ರೂಪವಾಗಿರುತ್ತದೆ. 'ಸಿದ್ಧರಾಮ ಸಾಹಿತ್ಯ ಸಂಗ್ರಹ'ದಲ್ಲಿ ಉತ್ತಂಗಿ ಶ್ರೀ ಚೆನ್ನಪ್ಪನವರು ಇದನ್ನು ಟೀಕೆಯೊಂದಿಗೆ ಪ್ರಕಟಿಸಿರುವರು. ಶಿವಾನುಭವ ಮಾಸಪತ್ರಿಕೆಯಲ್ಲಿಯೂ ಮೂಲಗ್ರಂಥವನ್ನು ಅಚ್ಚುಗೊಳಿಸಲಾಗಿದೆ.[5] ಗ್ರಂಥದ ಪ್ರಾರಂಭದಲ್ಲಿ 'ಶ್ರೀಗುರು ಚೆನ್ನಬಸವೇಶ್ವರ (ದೇವರು) ಸ್ವಾಮಿಗಳು ನಿರೂಪಿಸಿದ ವಸ್ತುನಿರ್ದೇಶಪದ ಮಂತ್ರಗೋಪ್ಯ' ಎಂಬ ಅವತರಣಿಕೆಯಿರುತ್ತದೆ. ಶಿವಯೋಗಿ ಸಿದ್ಧರಾಮನಿಗೆ 'ಶಿವಯೋಗ ಸುಮಾರ್ಗ ಲಕ್ಷಣ'ವನ್ನು ಬೋಧಿಸಿದ ವಿಷಯ ಇದರಲ್ಲಿರುತ್ತದೆ.[6] ಎರಡನೆಯ ಚೆನ್ನಬಸವನು (ಸು. ೧೫೮೦) ಬರೆದ ಈ ಗ್ರಂಥದ ವಿವರಣದ ವಿಷಯವಾಗಿ ತಿಳಿಸುತ್ತ

---

[3] ಕ. ಚ. ಭಾಗ ೧, ಪುಟ ೧೭೯. [4] ಚೆ. ಬ. ಮಂತ್ರಗೋಪ್ಯ, ಪದ್ಯ—೮. [5] ಶಿವಾನುಭವ ಸಂಪುಟ ೧೪, ಸಂಚಿಕೆ ೧-೨; [6] ಕ. ಚ. ಭಾಗ ೧, ಪುಟ ೧೭೯.

ಕವಿಚರಿತೆಕಾರರು ಇದೇ ಗ್ರಂಥಕ್ಕೆ ಬೇರೊಂದು ಟೀಕೆಯಿರುವುದನ್ನೂ ನಿರವಿಸಿದ್ದಾರೆ. ಈ ಟೀಕಿನ 'ಸಮಾಪ್ತ ಮುದ್ರೆ'ಯಲ್ಲಿ ಪರಮ ಶಿವಯೋಗಿರಾಜ ಸಿದ್ಧರಾಮೇಶ್ವರನ ನೆವದಿಂದ ಈ ಗ್ರಂಥವು ಹುಟ್ಟಿತೆಂದೂ, "ಸ್ವಾನುಭವಪ್ರಸಿದ್ಧವಾದ ಪರಮಾಮೃತ ವಾಕ್ಯಗಳಿಂದ ಪದನಿಟ್ಟು ನಿರೂಪಿಸಿದ ಮಂತ್ರಗೋಪ್ಯ"ವೆಂಬ ಶಿವಶಾಸ್ತ್ರದಲ್ಲಿ ಸಂಪೂರ್ಣವಾಗಿಪ್ಪ ಶಿವಾನು ಭಾವಾರ್ಥಂಗಳನ್ನ ಕಾಣಬಹುದೆಂದೂ ತಿಳಿಸಲಾಗಿದೆ.[7] ಶಿವಾನುಭವದಲ್ಲಿ ಪ್ರಕಟವಾದ ಈ 'ಸಮಾಪ್ತ ಮುದ್ರೆ'ಯಲ್ಲಿ ಬಹಳ ವ್ಯತ್ಯಾಸವಿರುತ್ತದೆ. ಬಹುತರವಾಗಿ ಇದು ಎರಡನೆಯ ಚೆನ್ನಬಸವನು ಬರೆದ ಕೊನೆಯ ಮಾತು ಆಗಿರಬಹುದು. "...ಶಿವಶರಣಗಣಂಗಳು ಆರಿದಾನಂದಿಸಿ ನಿತ್ಯಸುಖಿಗಳಾಗಲಿ ಎಂದು ಬೋಧಿಸಿದಂಥ ಪದಮಂತ್ರಗೋಪ್ಯದಿಂದ ಸ್ತೋತ್ರವ ಮಾಡಿದ ಮಹಾಪ್ರಸಾದವ..,ಶರಣಗಣಂಗಳು ಶ್ರೋತ್ರಮುಖದಿಂದ ಕೇಳಿ, ಮನೋಮುಖದಲ್ಲಿ ಹಾರೈಸಿ, ಹೃದಯಮುಖದಿಂದ ತೃಪ್ತಿಯನೈದಿ, ನಿಷ್ಕಳಂಕ ಲಿಂಗದಲ್ಲಿ ಅಂಕುರಿಸಿ, ಶೂನ್ಯ ಲಿಂಗದಲ್ಲಿ ಪರಿಣಾಮಿಸಿ, ನಿರಂಜನಲಿಂಗದಲ್ಲಿ ಮತ್ತೆ ಎಂದಿನಂತೆ ಬಯಲಾದರು ನೋಡಾ ಸಂಗನಬಸವಣ್ಣನ ಮಹಾಪ್ರಸಾದ ಗುಹೇಶ್ವರಲಿಂಗದ ಬೆಳಗಿನೊಳಗೆ ಸಿದ್ಧರಾಮಣ್ಣ."[8] ಇಲ್ಲಿ 'ಲಿಂಗೈಕ್ಯ' ಪದದ ನಿರ್ವಚನವನ್ನು ಕಾಣಬಹುದಾಗಿದೆ.

'ಪದಮಂತ್ರಗೋಪ್ಯ'ದಲ್ಲಿ ೩೫ ಪದ್ಯಗಳಿರುತ್ತವೆ. ಇದರಲ್ಲಿ

೧. ಶಿವಯೋಗ ಸ್ಥಾಪನಾಸ್ಥಲ
೨. ಪ್ರಾಣಲಿಂಗ ಪೂಜಾವಿಧಾನಸ್ಥಲ
೩. ನವಲಿಂಗ ಪೂಜಾವಿಧಾನಸ್ಥಲ
೪. ಪರತತ್ವಲಿಂಗ ಪ್ರಕಾಶಸ್ಥಲ
೫. ಶಿವಾದ್ವೈತ ಶರಣಸ್ಥಲ
೬. ಮಹಾಲಿಂಗೈಕ್ಯಸ್ಥಲ
೭. ಜ್ಞಾನಶೂನ್ಯಸ್ಥಲ

ಎಂಬ ಏಳು ಸ್ಥಲಗಳಿರುತ್ತವೆ. ಒಂದೊಂದು ಸ್ಥಲದಲ್ಲಿ ೫ ಪದ್ಯಗಳೂ ಪ್ರಾರಂಭದ ಪದ್ಯಾರ್ಥದ ಒಂದೊಂದು ಪಲ್ಲವಿಯೂ ಇರುತ್ತವೆ.

ಮೊದಲನೆಯ ಸ್ಥಲದಲ್ಲಿ ಪರವಸ್ತುವಿಗೆ ಆಕಾರ ನಿರಾಕಾರ ಎಂಬ ಎರಡು ಸ್ವರೂಪ ಗಳುಂಟೆಂಬುದನ್ನು ತಿಳಿಸಿ "ಆಕಾರವಿಡಿದು ಅರ್ಚನೆ ಪೂಜನೆಮಾಡಿ ಏಕೋಭಾವದ ನಿಷ್ಠೆ ಯಿಂದಿರಲು ಆಕಾಶವು ನಿರಾಕಾರದಲ್ಲಿ ನಿಲುಕಡೆಯನ್ನು ಪಡೆಯುವದು. ಪರವಸ್ತುವಿನಿಂದ ತಾನು ಭಿನ್ನವಲ್ಲ ಎಂಬ ಅಹಂಗ್ರಹೋಪಾಸನೆಯಿಂದ ಸಾಧಕನು ಅನುಸಂಧಾನಗೆಯ್ಯುತ್ತಿರುವಾಗ ಉಂಟಾಗುವ ನಾದಬಿಂದು ಕಳೆಗಳ ಅನುಭವ ಶಿವಕಳೆಯಲ್ಲಿ ಕೀಲಿಸಲು ನಾದಬಿಂದು ಕಲಾ ತೀತವಾದ ಅವಸ್ಥೆಯನ್ನಾತನು ನಿಲುಕುವನು. ಇಂತಹ ಸಾಧನೆಯ ಕ್ರಮದಲ್ಲಿ ಆಧಾರದಿಂದ ಪಶ್ಚಿಮದವರೆಗಿನ ನವಚಕ್ರಂಗಳಲ್ಲಿಯ ನವಲಿಂಗಗಳ ಅನುಭವ ಪ್ರಕಾಶವು ಬೆಳಗಿ "ಘನಕೆ ಘನವಾದ ಏಕೋದೇವನದ್ವಿತೀಯ ಎಂಬುದು ಪ್ರತ್ಯಕ್ಷವಾಗುವದು" ಎಂಬ ಶಿವಯೋಗದ ಸಾರವನ್ನು ಇಲ್ಲಿ ನಿರೂಪಿಸಲಾಗಿದೆ. ಎರಡನೆಯ ಸ್ಥಲದಲ್ಲಿ—ನವಚಕ್ರಗಳೇ ಒಂಬತ್ತು ಕಮಲ ಗಳು : ಅಲ್ಲಿ ನಿಂತು ಕಾಣುವ ಅನುಭವವು ಆಳಿ ಆಳವಾಗುತ್ತ ಸಾಗಿದಂತೆ ಅದರ ಕುರುಹನ್ನು ಬಗೆಬಗೆಯಾಗಿ ಕಾಣಬಹುದು; ಸುತ್ತೆಲ್ಲ ಪುಷ್ಪದ ಪರಿಮಳವು ವ್ಯಾಪಿಸಿ ಪ್ರಕಾಶದ ಸ್ವರೂಪ ವನ್ನು ತೋರ್ಪಡಿಸುವದು; ಪ್ರಾಣಲಿಂಗದ ರಹಸ್ಯವು ಅವಗತವಾಗುವುದರ ಮುನ್ಸೂಚನೆ ಇದು ಎಂಬ ವಿವರ ಇಲ್ಲಿ ಬಂದಿರುತ್ತದೆ. ಮೂರನೆಯ ಸ್ಥಲದಲ್ಲಿ ಅಂತರಂಗದಲ್ಲಿ ಸಾಗುವ

---

[7] ಕ. ಚ. ಭಾಗ ೧, ಪುಟ ೧೬೩-೪ ; ಸಿ. ಸಾ. ಸಂಗ್ರಹ, ಪುಟ ೨೩೦-೧. [8] ಶಿವಾನುಭವ, ಸಂಪುಟ ೧೪, ಪುಟ ೯೧.

ನವಲಿಂಗ ಪೂಜೆಯ ವೈಭವವನ್ನು ತಿಳಿಸಲಾಗಿದೆ. ಅಲ್ಲದೆ ಸಹಸ್ರಾರದಲ್ಲಿ ವಿಶ್ರಾಂತಿಯನ್ನು ಪಡೆದು ಅಲ್ಲಿಂದ ಮೇಲೆ ಪಶ್ಚಿಮದ ಸ್ಥಾನಕ್ಕೆ ಏರಿದು ರೇಚಕ ಪೂರಕ ಕುಂಭಕಗಳನ್ನಾಚರಿಸಿದಾಗ ಓಂಕಾರನಾದವು ಉದಯಿಸುವುದು. ಆ ನಾದದ ನಿಶ್ಶಬ್ದಗಿಸಲ್ಲಿ ಮುಳುಗಲು ಶಿವನಿಳಯವೆನಿಸಿದ ಜ್ಯೋತಿರ್ಲಿಂಗದರ್ಶನವುಂಟಾಗುವುದೆಂಬ ತಿಳಿಯಾದ ಮಾತುಗಳು ಇಲ್ಲಿ ಬಂದಿರುತ್ತವೆ.

ಆರು ನೆಲೆ ಮಂಟಪದ ಮೂರು ಕೋಣೆಗಳೊಳಗೆ
ಬೇರೊಂದು ಸ್ಥಾನದಲಿ ಲಿಂಗವಿಹುದು |
ಆರು ನೆಲೆಯನು ದಾಂಟಿ ಮೂರು ಬಾಗಿಲ ಮುಚ್ಚಿ
ಏರಿ ಕಂಡೆನು ಮಹಾ ಘನಲಿಂಗವ ||[9]

ನಾಲ್ಕನೆಯ ಸ್ಥಲದಲ್ಲಿ ಅಂಗ-ಲಿಂಗ ಸಮರಸದ ಸೊಬಗು ಸಮೀಚೀನವಾದ ದೃಷ್ಟಾಂತಗಳಿಂದ ವರ್ಣಿತವಾಗಿದೆ. ಅಗ್ನಿಯು ಅಪ್ಪುವನ್ನು ನುಂಗುವುದು ಸಹಜ. ಆದರೆ ಅಪ್ಪುವೇ ಅಗ್ನಿಯನ್ನು ನುಂಗುವದೆಂದು ಹೇಳುವ ಮಾತು ಸೋಜಿಗವಾಗಿದೆ. ಇಂತಹ ಬೆಡಗಿನ ನುಡಿಗಳ ಸತ್ಯ ಅನುಭವಜ್ಞಾನಿಗೆ ಮಾತ್ರ ಸಿಲುಕುವದು. "ಅಪ್ಪು ತತ್ತ್ವವು ವಡಬಾಗ್ನಿಯನೊಳ ಕೊಂಡಿಪ್ಪಂತೆ ಮಹದಾನಂದಜಲಮಯವಪ್ಪ ಮಹಾಜ್ಞಾನಾಗ್ನಿ, ಸ್ವರೂಪವಾದ ಲಿಂಗೈಕ್ಯವ ನೊಳಕೊಂಡಿಹುದು" ಎಂಬೀ ಮೊದಲಾದ ವಿವರಣೆಯಲ್ಲಿ ಈ ಬೆಡಗನ್ನು ತೆರೆದಿರಿಸಲಾಗಿದೆ. ಅರ್ಥಸಂಪತ್ತಿಯಿಂದ ಬಳುಕುವ ಇಂತಹ ಹಲವಾರು ದೃಷ್ಟಾಂತಗಳ ವೈಭವವನ್ನೀ ಸ್ಥಲದಲ್ಲಿ ಕಾಣಬಹುದಾಗಿದೆ.

ಅಪ್ಪು ಅಗ್ನಿಯ ನುಂಗಿ ಉಪ್ಪು ಉದಕವ ನುಂಗಿ
ಹೆಪ್ಪು ತುಪ್ಪವ ನುಂಗಿದಾ ತೆರನೊಳು |
ಕಪ್ಪು ಕಣ್ಣನೆ ನುಂಗಿ ಒಪ್ಪು ಚಿತ್ರವ ನುಂಗಿ
ಅಪ್ಪಿ ಅಗಲದ ಇಪ್ಪ ನಿಜವು ತಾನೆ ||[10]

ಐದನೆಯ ಸ್ಥಲದಲ್ಲಿ ಹಿಂದಿನ ಸ್ಥಲದ ದೃಷ್ಟಾಂತಗಳ ರೀತಿಯಲ್ಲಿಯೇ ಲಿಂಗೈಕ್ಯನ ನಿಲವನ್ನು ನಿರೂಪಿಸಲಾಗಿದೆ. ಶಿವಯೋಗದ ಪರಾಕಾಷ್ಠೆಯನ್ನೇ ಕಾಣಬಹುದು ಈ ಸ್ಥಲದ ವಿವರಣೆಯಲ್ಲಿ: "ತನುವಿನಿಂದ ತೋರಿದ ನೆಳಲು ಆ ತನುವಿನೊಳಗೆ ಅಡಗಿದ ಹಾಗೆ, ಬಿಳಿದಾದ ಕಪ್ಪಡದೊಳಗೆ ಪಂಚವರ್ಣಿಗೆಯ ಬಣ್ಣವಡಗಿದ ಹಾಗೆ ಹಣ್ಣಿನೊಳಗೆ ಸ್ವಾದರಸಂಗಳು ವೇದಿಸಿಕೊಂಡು ಅದರ ನಿಜಸ್ವರೂಪವಾಗಿರುವ ಹಾಗೆ ಪ್ರಚಂಡವಾಯುವಿನೊಳಗೆ ಜ್ಯೋತಿಯ ರೂಪುಸ್ಪರ್ಶಂಗಳಳಿದು ವಾಯುವೇ ಆದಹಾಗೆ—ಚಿತ್ಕಲಾ ಶಾಂತಿ ಪ್ರಕಾಶದಿಂದ ತೋರುವ ಆ ಲಿಂಗದ ಸ್ವಯಂ ಪ್ರಕಾಶ ರೂಪಿನಿಂದಿಹ, ಚಿದಮೃತರಸಮಯಭರಿತನಾಗಿಪ್ಪ ಪರಬ್ರಹ್ಮದ ಚೈತನ್ಯ ಸ್ಫುರಣೆಯಿಂದ ಒಂದು ಸುಜ್ಞಾನಮೂರ್ತಿಯೇ ಆಗಿ ಪ್ರಕಾಶಿಸುತ್ತಿದ್ದ ಶರಣನು ಪರಂಜ್ಯೋತಿರ್ಲಿಂಗದೊಳಗೆ ಅಡಗಿ ಕೇವಲ ಪರಬ್ರಹ್ಮವೇ ಆದನು"—ಎಂಬ ಲಿಂಗೈಕ್ಯನ ನಿಲವಿನ ವರ್ಣನೆಯ ಸ್ವಾರಸ್ಯವನ್ನು ಕಾಣಬಹುದು.

ನಿಲವು ನೆಳಲನೆ ನುಂಗಿ ಸೀರೆ ಬಣ್ಣವ ನುಂಗಿ
ಫಲ ಪಕ್ವವ ನುಂಗಿದಾ ತೆರನೊಳು |
ಅಲೆವ ದೀಪದ ಬಯಲಗಾಳಿ ನುಂಗಿದ ತೆರದಿ
ಕಳೆಯಳಿದ ಕೂಡಲ ಚೆನ್ನ ಸಂಗಯ್ಯನು ||[11]

---

[9] ಚಿ. ಬ. ಪದಮಂತ್ರಗೋಪ್ಯ, ಪದ್ಯ ೧೩. [10] ಅದೇ, ಪದ್ಯ ೧೮. [11] ಅದೇ, ಪದ್ಯ ೨೫.

ಲಿಂಗೈಕ್ಯದ ಅವಿರಳವಾದ ಅವಸ್ಥೆಯಲ್ಲಿ ಅನುಭಾವಿಯು ಕಾಣುವ ಅನುಪಮವಾದ ಹಾಗು ನಾನಾ ಬಗೆಯ ದೃಶ್ಯಗಳನ್ನು ಆರನೆಯ ಸ್ಥಲದಲ್ಲಿ ಕಾಣಬಹುದಾಗಿದೆ. ಚರ್ಮಚಕ್ಷುವಿಗೆ ವಸ್ತುಗಳ ನಿಲವು ಸ್ಫುಟವಾಗಿ ತೋರುವ ತೆರದಿ ಜ್ಞಾನನೇತ್ರಕ್ಕೆ ಯಾವ ಯಾವ ವಸ್ತುಗಳ ಸ್ವರೂಪವು ಹೇಗೆ ಹೇಗೆ ಭಾಸವಾಗುವದೆಂಬ ಮನೋಹರವಾದ ವಿವರಣೆಯನ್ನೀ ಸ್ಥಲವು ನಿರೂಪಿಸುತ್ತಿದೆ. ಇಂತಹ ಅವಸ್ಥೆಯಲ್ಲಿ ಗೋಚರಿಸುವ ಅನುಭವದ ದೃಶ್ಯಗಳನ್ನು ನಿಃಸಂದಿಗ್ಧವಾದ ವಾಣಿಯ ವೈಖರಿಯಲ್ಲಿ ವಿವರಿಸುತ್ತಾನೆ ಲಿಂಗೈಕ್ಯನು :

ಮೇರುವಿನ ಊರೊಳಗೆ ಆರೈದು ನೋಡಲ್ಕೆ
ಭೇರಿನಾದದ ಪ್ರಭೆಯ ಬೆಳಗುದೋರೆ |
ಊರಳಿದು ಉಲುಹಡಗಿ ಭೇರಿನಾದವು ನಿಲಲು
ಆರು ಭೇದಿಸಿ ಕಾಣಲರಿದು ನೋಡಾ ||[12]

ಬ್ರಹ್ಮರಂಧ್ರದಲ್ಲಿ ಪರಂಜ್ಯೋತಿಯ ಅನುಸಂಧಾನಗೆಯ್ಯುತ್ತಿರುವಾಗ ಅನುಭವ ಗೋಚರವಾಗುವ ಶರಧಿನಾದದಿಂದ ಭ್ರಮರನಾದದವರೆಗಿನ ದಶನಾದಗಳ ಉಲಿವು ಬಗೆಬಗೆಯ ಪ್ರಕಾಶ ಪುಂಜಗಳ ಬಿಂದುಸಾಕ್ಷಾತ್ಕಾರ ಮತ್ತು ನಾದಬಿಂದು ಶ್ರವಣದರ್ಶನಗಳಿಂದೊದಗುವ ಅವಿರಳವಾದ ಅಪಾರವಾದ ಆನಂದದ ಕಳಾಸ್ವರೂಪವು ಅಲ್ಲಿಯೇ ವಿಶ್ರಾಂತಿಯನ್ನು ಪಡೆಯುವದು. ಆಗ ಪರಾ ಪಶ್ಯಂತೀ ಮಧ್ಯಮಾ ವೈಖರಿಯೆಂಬ ಶಬ್ದಜಾಲಂಗಳು ನಾದಬ್ರಹ್ಮದ ನೆನಹಿನಲ್ಲಿ ನಿಶ್ಚಲವಾಗುವವು ; ಎಂದರೆ ಸಹಸ್ರಾರದ ಶತಪತ್ರಕಮಲಕುಹರದೊಳಗಿನ ಚಿದಾಕಾಶ ಮಂಡಲದೊಳಗೆ ಶಬ್ದಮುಗ್ಧವಾದ ಬ್ರಹ್ಮಸಾಕ್ಷಾತ್ಕಾರದಲ್ಲಿ ಎಲ್ಲವೂ ಪರಿಣಮಿಸುವುದು. ಅಲ್ಲಿ ಆತ್ಮಚೈತನ್ಯ ನಿಃಶಬ್ದಬ್ರಹ್ಮ ಇವರಲ್ಲಿ ಬಿಚ್ಚಿ ಬೇರಾಗದ ನಿಲವಿಲ್ಲದೆ ಸಾಮರಸ್ಯದ ಇನಿದಾದ ಸೌಂದರ್ಯ ಮಾಧುರ್ಯಗಳು ಒಡಮೂಡುವವು. ಮತ್ತು ನಿರ್ವಯಲ ಸ್ಥಲದ ನಿಲವಿಗೆ ನಾಂದಿಯಾಗಿ ಅದು ಕಂಗೊಳಿಸುವುದು.

ಕೊನೆಯದಾದ ಜ್ಞಾನಶೂನ್ಯಸ್ಥಲದಲ್ಲಿ ನಿರೂಪಿತವಾದ ನಿರ್ವಯಲ ನಿಲವು ಮಾತು ಮನಂಗಳಿಗೆ ಅಗೋಚರವಾಗಿದೆ. "ಉಲುಹಡಗಿ ಉನ್ಮನಿಯ ಸ್ಥಾನದೊಳಗೆ ನೆನಹಳಿದು ಮನವಳಿದು ತಾನು ತಾನಾದ"[13] ನಿಲವದು. ಮೇಘದೊಳು (ಸುಷುಮ್ನಾನಾಳದಲ್ಲಿ) ಬಲಿದ ಬಾಗಿಲ ಬೀಗವನ್ನು (ಪಶ್ಚಿಮದ್ವಾರ) ತೆಗೆದು ಪ್ರವೇಶಿಸುವುದರಿಂದ 'ಆಗು ಹೋಗೆ'ಂಬುದು. ಹರಿದು ಹೋದ ಅನುಭವ ವೇದ್ಯವಾಗುವದು ; ಮಾತ್ರವಲ್ಲ, ಜಗದ ಆ ಆಗು ಹೋಗುಗಳನ್ನು ನಿಯಂತ್ರಿಸಿ ರೂಪಿಸಬಲ್ಲ ಸತ್ವ ಸಿದ್ಧಿಯೊದಗುವದು ಈ ನಿಲವಿನಲ್ಲಿ ನಿಂತ ಸಿದ್ಧ ಪುರುಷನಿಗೆ.

ಸೊಡರಿಲ್ಲದ ಬೆಳಗು ಕುಡಿವರಿದ ಪ್ರಭೆಯೊಳಗೆ
ಪಿಡಿದ ಕರ್ಪುರದುರಿಯು ಮರೆದೊರಗಿತು
ಗಡಣವಿಲ್ಲದ ಪ್ರಭೆಯ ಕುಡಿಯ ಬೆಳಗಿನ ನಡುವೆ
ಹಿಡಿ ಹಿಡಿಯೆ ಬಯಲಾದ ಕೂಡಲ ಚೆನ್ನ ಸಂಗಯ್ಯನು ||[14]

ಇಲ್ಲಿ ಇರುವನೆಂಬ ಪರಿಶುದ್ಧವಾದ ಪ್ರಜ್ಞಾನ ಘನಸ್ಥಿತಿಯೊದಗುವದು. ಜ್ಯೋತಿಯೊಡನೆ ಬೆರೆದು ಕರ್ಪುರ ಮರಳಿ ಸಾಕಾರದ ಹಿಡಿತಕ್ಕೆ ತಿರುಗದು. ಹಾಗೆ ಆ ಜ್ಯೋತಿಯೊಡನೆ ತಾನು ಬಯಲಾದಂತೆ ಆ ನಿರ್ವಯಲ ಸ್ಥಿತಿಯು.

'ಪದ ಮಂತ್ರಗೋಪ್ಯ'ವು ಶಿವಯೋಗದ ಅತಿ ಉಚ್ಚಾಧ್ರಾಯದ ಸಂಸಿದ್ಧಿಯನ್ನು ವಿವರಿಸುವ ಗ್ರಂಥವಾಗಿದೆ. ಆದಿಯಿಂದ ಅಂತ್ಯದವರೆಗೆ ಯೋಗದ ಶಬ್ದ ಸಂಪತ್ತಿಯಲ್ಲಿ

---

12 ಅದೇ, ಪದ್ಯ ೨೭. 13 ಅದೇ, ಪದ್ಯ ೩೧. 14 ಅದೇ, ಪದ್ಯ ೩೫.

ಅದು 'ಸಿಪ್ಪೆ ಹಣ್ಣನೆ ನುಂಗಿ ಇಪ್ಪಂತೆ' ಇರುವ ಶಿವಯೋಗದ ಔನ್ನತ್ಯವನ್ನು ವ್ಯಕ್ತಗೊಳಿಸುತ್ತದೆ. "ಆಕಾರ ಓಂಕಾರ ಸಾಕಾರ ಸನ್ಮತಂ ಏಕಾಕ್ಷರ ಪೂಜೆ ಗೋಪ್ಯ ಗೋಪ್ಯಂ"[15] "ಏಕಾಂತವಾಸದೊಳಗೇಕೀತೆರನ ಪೂಜೆ ಓಂಕಾರ ಮಂತ್ರದ ಗೋಪ್ಯ ಗೋಪ್ಯಂ"[16] "ಗುರು ಗೋಪ್ಯವ ನುಂಗಿದ ತೆರನು"[17] ಎಂಬೀ ಮುಂತಾದ ಮಾತುಗಳಲ್ಲಿ ಗೋಪ್ಯ, ಮಂತ್ರ ಗೋಪ್ಯವೆಂದರೇನೆಂಬುದನ್ನು ಸೂಚ್ಯವಾಗಿ ತಿಳಿಸಲಾಗಿದೆ. ಈ ಕೃತಿಗೆ ಒದಗಿರುವ ವಿವರಣೆ ಭಾವಾರ್ಥಗಳ ವ್ಯಾಖ್ಯಾನದಿಂದಾಗಿ ಮಂತ್ರಗೋಪ್ಯದ ಇಂಗಿತಾರ್ಥವು ಸ್ಫುಟಗೊಂಡು ಮೂಲಕರ್ತೃವಿನ ಮತ್ತು ವ್ಯಾಖ್ಯಾನಕಾರರ ಶಿವಯೋಗದ ಬಗೆಗಿನ ಆಳವಾದ ಅನುಭವವು ವಿದಿತವಾಗದಿರದು. ಶಿವಯೋಗಿಯಾದ ಸಿದ್ಧರಾಮೇಶ್ವರನಿಗೆ ಒಪ್ಪಿಗೆಯಾಗುವ ರೀತಿಯಲ್ಲಿ ಶಿವಯೋಗದ ಪರಿವಿಡಿಯಲ್ಲಿಯೇ ಮಂತ್ರಗೋಪ್ಯದ ಬೋಧೆ ನಡೆಯಬೇಕಾದುದು ಅಗತ್ಯವಾಗಿದೆ, ಯೋಗ್ಯವಾಗಿದೆ. ಈ ಪದಮಂತ್ರಗೋಪ್ಯದಲ್ಲಿ ತಿಳಿಯಪಡಿಸಿರುವ ಅನುಭವ ವಾಣಿಯು ಇದನ್ನು ತುಂಬಾ ಸಾಧಿಸಿದೆಯೆಂದು ಧಾರಾಳವಾಗಿ ಹೇಳಬಹುದು.

ಅಲ್ಲಮಪ್ರಭುದೇವರು ಪರ್ಯಟನದ ಕಾಲಕ್ಕೆ ಸೊನ್ನಲಿಗೆಗೆ ಬಂದು ಸಿದ್ಧರಾಮೇಶ್ವರನನ್ನು ಸಂಧಿಸಿದರಷ್ಟೆ! ಆಗ ಆತನು ಸಿದ್ಧರಾಮೇಶ್ವರನು ಸಾಧಿಸಿದ್ದ ರಾಜಯೋಗಕ್ಕಿಂತ ಶಿವಯೋಗವು ಶ್ರೇಷ್ಠವೆಂದೂ, ಅನಿಮಿಷಯ್ಯನಿಂದ ಪಡೆದುಕೊಂಡಿದ್ದ ಕರಸ್ಥಲದ ಅನುಸಂಧಾನದಿಂದ ತಾನು ಸಂಪಾದಿಸಿಕೊಂಡಿದ್ದ ಶಿವಯೋಗದ ಘನತೆ ಗಂಭೀರತೆ ಪ್ರಭಾವಾದಿಗಳನ್ನು ಕುರಿತು ಆಗಲೇ ಆ ಸಿದ್ಧರಾಮೇಶ್ವರನಿಗೆ ಪ್ರತ್ಯಕ್ಷಮಾಡಿಕೊಟ್ಟನೆಂದೂ ರಾಜಯೋಗದ ನಿಲವು ಮತ್ತು ಅದರಿಂದ ನಿಲುಕುವ ಸಿದ್ಧಿ ಇವಕ್ಕಿಂತ ಶಿವಯೋಗ ಸಾಧನೆಯಿಂದ ಹೊಂದುವ ಶಾಂತಿ ಸಮರಸಗಳು ಮಹೋನ್ನತವಾದವುಗಳೆಂಬುದನ್ನು ಆಗತಾನೆ ಮನಗಾಣಿಸಿಕೊಟ್ಟನೆಂದೂ ಪ್ರಸಿದ್ಧವಾಗಿವೆ. ತಾನು ದರ್ಶನವನ್ನು ನೀಡಿದವರಿಗೆಲ್ಲ ತನ್ನ ಸಂಪರ್ಕ ಸನ್ನಿವೇಶಗಳಲ್ಲಿ ಬಂದವರಿಗೆ ಅವರವರ ಒಲವು ನಿಲವುಗಳನ್ನು ತನ್ನ ಅಗಾಧವಾದ ಜ್ಞಾನದೃಷ್ಟಿಯಿಂದ ಗುರುತಿಸಿ, ಅವರು ಅಳವಡಿಸಿಕೊಂಡಿದ್ದ ಅನುಭವದ ನಿಲವೇ ಅಧಿಕವಲ್ಲ, ಕೊನೆಯದೂ ಅಲ್ಲ; ಅನುಭವವು ಯಾವಾಗಲೂ ಪ್ರಗತಿಪರವಾಗಿರುತ್ತದೆ; ಅದು ಉತ್ತರೋತ್ತರ ಸೂಕ್ಷ್ಮವೂ ಅಗಾಧವೂ ಅಪ್ರಮೇಯವೂ ಆಗುವುದೆಂಬುದನ್ನು ಉಪದೇಶಿಸುತ್ತಿದ್ದಂತೆ ಸಿದ್ಧರಾಮೇಶ್ವರನಿಗೂ ಅಂತಹ ಉಪದೇಶವನ್ನೇ ಅನುಗ್ರಹಿಸಿ ಸ್ಥಾವರದ ಮೋಹವನ್ನು ಬಿಡಿಸಿ ಅವನಿಗೆ ಇಷ್ಟದ ಅನುಸಂಧಾನದ ಸಕೀಲವನ್ನು ತಿಳಿಸಿಕೊಟ್ಟಿರಲು ಸಾಕು. ಆದರೆ ಇಷ್ಟಲಿಂಗದ ವ್ಯಾಪಕವಾದ ಅನುಭವದ ವೈಭವವನ್ನು ಬಸವಣ್ಣನ ದಾಸೋಹದ ನಡೆನುಡಿಗಳಿಂದ ಅರುಹಿಸಿಕೊಡಲು, ಅಜ್ಞರಾದ ಗುಡ್ಡರುಗಳಿಗಾಗಿ ಸಲ್ಲಿಸುತ್ತಿದ್ದ ಸೇವೆಗಿಂತ ಅರಿತ ಶರಣರಿಗಾಗಿ ಬಸವಣ್ಣನು ಕೈಕೊಂಡಿದ್ದ ಕೈಂಕರ್ಯದ ಹೃದಯವು ಅನುಭವದ ಹೊಂದಾಣಿಕೆಯಲ್ಲಿ ಅತ್ಯಗತ್ಯವಾದುದೆಂಬುದನ್ನು ಪ್ರತ್ಯಕ್ಷಗೊಳಿಸಲು; ಹಾಗೆಯೇ ಶಿವಯೋಗದ ಸುಲಭವಾದ ಸಾಧನೆಯಲ್ಲಿ ಷಟ್ಸ್ಥಲದ ಘನವಾದ ಪಾತ್ರವನ್ನು ಚೆನ್ನಬಸವಣ್ಣನಿಂದ ತಿಳುಹಿಸಿಕೊಟ್ಟು, ಆ ಮಹಾಸಾಧನೆಯಲ್ಲಿ ಆತನಿಗಾಗಿ ಮೀಸಲಾಗಿದ್ದ ಸ್ಥಾನವೊಂದರ—ಪ್ರಾಣಲಿಂಗಸ್ಥಲವೊಂದರ ಅರಿವನ್ನು ಮಾಡಿಸಿಕೊಡಲು; ಅಲ್ಲದೆ ನವೀನವೆನಿಸಿದ ಪ್ರಯೋಗದ—ಮಣಿಹದ ಈಡೇರುವಿಕೆಯಲ್ಲಿ ಆತನ ಪಾಲುಗಾರಿಕೆಯ ಫಲವನ್ನು ಜನರಿಗೆ ಕಾಣಿಸಿಕೊಡಲು ಪ್ರಭುದೇವರು ಆ ಸಿದ್ಧರಾಮೇಶ್ವರನನ್ನು ಕಲ್ಯಾಣದ ಬಾಗಿಲವರೆಗೆ ತಂದು ನಿಲ್ಲಿಸಿರಬೇಕು. ಯೋಗಮಾರ್ಗದ ವಿವಿಧಲಿಂಗಗಳನ್ನು ಆಚರಿಸಿ, ಕೊನೆಗೆ ಅನಿಮಿಷಯ್ಯನ ಅಂಗೈಯ ಲಿಂಗದ ಅನುಸಂಧಾನದಿಂದ ತಾನು ಅಂಗವಿಸಿಕೊಂಡಿದ್ದ ಶಿವಯೋಗರಹಸ್ಯವನ್ನು ಸಿದ್ಧರಾಮೇಶ್ವರನಿಗೆ ತಿಳಿಸಿಕೊಟ್ಟ ಪ್ರಥಮ ಗುರುವು ಅಲ್ಲಮಪ್ರಭುದೇವರು. ಯೋಗಸಿದ್ಧನಿಗೆ ಮನವರಿಕೆಯಾಗುವ ತೆರದಲ್ಲಿ ಬೋಧಮಾಡಬಲ್ಲ ಸಾಮರ್ಥ್ಯವುಳ್ಳ ಶಿವಯೋಗಸಿದ್ಧನಲ್ಲವೇ ಅವನು? ಸಿದ್ಧರಾಮೇಶ್ವರನಿಗೆ ಉಪದೇಶರೂಪನಾಗಿ

---

[15] ಅದೇ, ಪದ್ಯ ೬. [16] ಅದೇ, ಪದ್ಯ ೧೪. [17] ಅದೇ, ಪದ್ಯ ೩೪.

ಪ್ರಭುದೇವರು ರಚಿಸಿದ 'ಪರಮಯೋಗ ಮಂತ್ರಗೋಪ್ಯ' ಎಂಬ ಗ್ರಂಥವು ಇದನ್ನು ಸ್ಪಷ್ಟಗೊಳಿಸುವದು.

'ಪಂಚಾಕ್ಷರವೇ ಪರಮಯೋಗ' ಎಂಬುದು ಚೆನ್ನಬಸವಣ್ಣನ ಅಭಿಮತ.[18] ಶ್ರೇಷ್ಠನಾದ ಯೋಗ—ಶಿವಯೋಗದಾಚರಣೆಯಲ್ಲಿ ಗೌಪ್ಯವಾಗಿ ಅನುಸಂಧಾನಿಸಬೇಕಾದ ಸಾಧನೆಯ ಪರವಾಗಿಯೂ ಈ 'ಪರಮಯೋಗ' ಪದದ ಅರ್ಥವ್ಯಾಪ್ತಿಯಿರುತ್ತದೆ—ಎಂಬುದನ್ನು ಗಮನಿಸಬೇಕು. ಪರಮಯೋಗ ಮಂತ್ರಗೋಪ್ಯದಲ್ಲಿ ೨೭ ಪದ್ಯಗಳಿರುತ್ತವೆ. ಪ್ರಾರಂಭದಲ್ಲಿ "ರಾಮ ಕೇಳಾಜ್ಞಾನ| ಸೋಮ ಕೇಳನುಭಾವ ಸಿದ್ಧ| ರಾಮ ಕೇಳಾನಂದನಿಂದ ನಿಜವ" ಎಂಬ ಅರ್ಥಪದ್ಯದ ಒಂದು ಪಲ್ಲವಿಯಿರುತ್ತದೆ. ಈ 'ಮಂತ್ರಗೋಪ್ಯ'ಕ್ಕೆ ಎರಡು ವ್ಯಾಖ್ಯಾನಗಳಿರುತ್ತವೆ. ಒಂದು ವಿದ್ಯಾನಗರಿಯ ಕಲ್ಲುಮಠದ ಪ್ರಭುದೇವರು ಬರೆದದ್ದು. ಇನ್ನೊಂದನ್ನು ಬರೆದವರ ಹೆಸರು ತಿಳಿದುಬಂದಿಲ್ಲ. 'ಸದ್ಧರ್ಮದೀಪಿಕೆ'ಯ ಸಂಪಾದಕರಾದ ಶ್ರೀ ಚೆನ್ನಮಲ್ಲಿಕಾರ್ಜುನ ಅವರು ತಾತ್ಪರ್ಯ ಮತ್ತು ಇವೆರಡೂ ವ್ಯಾಖ್ಯಾನಗಳೊಡನೆ ಈ ಗ್ರಂಥವನ್ನು ಅಚ್ಚುಗೊಳಿಸಿ ಪ್ರಕಟಿಸಿದ್ದಾರೆ. 'ಸಿದ್ಧರಾಮ ಸಾಹಿತ್ಯ ಸಂಗ್ರಹ'ದಲ್ಲಿ ಕಲ್ಲುಮಠದ ಪ್ರಭುದೇವನ ವ್ಯಾಖ್ಯಾನದೊಡನೆ ಇದನ್ನು ಸಮಾವೇಶಗೊಳಿಸಲಾಗಿದೆ. ಕಲ್ಲುಮಠದ ಪ್ರಭುದೇವನು 'ಶಿವಜ್ಞಾನ ಸಾಧನ ಶಾಸನ'ವೆಂದು ಹೆಸರಿಸಲಾದ ತನ್ನ ಪೀಠಿಕಾಸೂತ್ರದಲ್ಲಿ ಅಲ್ಲಮಪ್ರಭುದೇವರ ಮತ್ತು ಈ ಮಂತ್ರಗೋಪ್ಯದ ಬಗೆಗೆ ತಿಳಿಸುತ್ತ, "ಯಮನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಈ ಐದು ಕರ್ಮಯೋಗಂಗಳು ; ಧ್ಯಾನಧಾರಣ ಸಮಾಧಿ ಈ ಮೂರು ಯೋಗಗಳು ತಮ್ಮ ಲಕ್ಷ್ಯದಲ್ಲಿ ಕೂಡುವ ಯೋಗಗಳು. ಇವುಗಳಲ್ಲಿ ಐದು ಪೂರ್ವಯೋಗಂಗಳ ಬಿಟ್ಟು ಉತ್ತರವಾದ ಧ್ಯಾನಧಾರಣ ಸಮಾಧಿಯೋಗಂಗಳು ಷಟ್‌ಸ್ಥಲ ಲಿಂಗಾಂಗಯೋಗಿಗಳಿಗೂ ಉಂಟು. ಅದೆಂತೆಂದೊಡೆ ಅಷ್ಟಾಂಗಯೋಗಿಗಳ ಲಕ್ಷ್ಯಾನುಸಂಧಾನದ ಪರಿಯಲ್ಲ ; ಷಟ್‌ಸ್ಥಲ ಜ್ಞಾನಿಗಳ ಧ್ಯಾನಧಾರಣ ಸಮಾಧಿಗಳ ಪರಿಯೇ ಬೇರೆ" ಎಂದು ಹೇಳಿ[19] ಶಿವಯೋಗಪರವಾಗಿ ಧ್ಯಾನ ಧಾರಣ ಸಮಾಧಿಗಳ ಅರ್ಥವನ್ನು ಕಂಡು, ಪದ್ಯಗಳನ್ನು ಅಂತು ವಿಂಗಡಿಸಿರುವನು. ಲಿಂಗಾಂಗ ಪರವಾಗಿ ಯೋಗದ ಉತ್ತರ ಭಾಗವನ್ನು ವಿವರಿಸುತ್ತ ಆತನು "ಗುರುಕರುಣದಿಂದ ಸಮ್ಯಕ್‌ಜ್ಞಾನಮಂ ಪಡೆದು ಆ ಗುರುಕರಣದಿಂದವೆ ಅಖಂಡ ಮಹಾಲಿಂಗಮಂ ಪ್ರತ್ಯಕ್ಷವಂ ಮಾಡಿಕೊಂಡು ಆ ಸಮ್ಯಕ್‌ಜ್ಞಾನದೃಕ್ಕಿನಿಂದ ಆ ಲಿಂಗಮಂ ನೋಡಿ ಶಿವಮಂತ್ರಯುಕ್ತವಾಗಿ ಧ್ಯಾನಿಸುವುದೇ **ಧ್ಯಾನಯೋಗವು**. ಆ ಸಮ್ಯಕ್‌ಜ್ಞಾನದಿಂದ ಷಟ್‌ಸ್ಥಲ ಲಿಂಗಾಂಗ ಸಂಯೋಗಾನುಭವಿಯಾಗಿ ಆ ಲಿಂಗ ಸುಖವನನುಭವಿಸುತಿರ್ಪುದೇ **ಧಾರಣಯೋಗ**. ಇಂತು ಲಿಂಗಾಂಗ ಸಂಗದಿಂದ ಲಿಂಗಸ್ವರೂಪವಾಗಿ ಲಿಂಗಸುಖವನರಿದನುಭವಿಸುತ್ತಿರ್ಪ ಅರಿವಡಗಿ ನಿಂದುದೇ **ಸಮಾಧಿ ಯೋಗ**"[20] ಎಂದು ತಿಳಿಸಿ ಕೊನೆಯಲ್ಲಿ ಈ ಮಂತ್ರಗೋಪ್ಯದ ರಹಸ್ಯವನ್ನು ವಿವರಿಸುವ ಉದ್ದೇಶವನ್ನು ಸ್ಪಷ್ಟಗೊಳಿಸಿರುವನು. ಮತ್ತು ತನಗೂ ಅನಾದಿ ಅಲ್ಲಮಪ್ರಭುವಿಗೂ ಅಭೇದವನ್ನು ಸೂಚಿಸಿ ಪೀಠಿಕಾಸೂತ್ರದ ಸಮಾಪ್ತಿಗೊಳಿಸುವನು. "ಅಂದು ಪ್ರಭುದೇವರು ಸಿದ್ಧರಾಮಯ್ಯ ದೇವರಿಗೆ ಉಪದೇಶಿಸಿದ ಷಟ್‌ಸ್ಥಲ 'ಮಂತ್ರಗೋಪ್ಯ'ವು ಇಂದು ಪರಿಯಂತರ ಗೋಪ್ಯವಾಗಿರ್ದಾ ಮಂತ್ರಗೋಪ್ಯಾರ್ಥಮಂ ಶಿವಶರಣರೆಲ್ಲರಿಗೆ ಗೋಪ್ಯವಾಗಿರಬಾರದೆಂದು ಅಂದಿನ ಚಿತ್‌ಪ್ರಭುಗುರು ತಾನೆ ಇಂದಿನ ಕಲ್ಲುಮಠದ ಪ್ರಭುವಿನಂಗದಲ್ಲಿ ಒಡೆದು ಮೂಡಿ ಥಳಥಳಿಸಿ ಚಿತ್ಪ್ರಭಾಕಳೆಯಿಂ ಬೆಳಗುತಿರ್ದು ತನ್ನಂದಿನ ಮಂತ್ರಗೋಪ್ಯದ ಇಪ್ಪತ್ತೇಳು ಪದಂಗಳಿಗೆ ಅರ್ಥಮಂ ತಾನೆ ಅರ್ಥಯಿಸಿದನೆಲ್ಲಾ ಶಿವಗಣಂಗಳರಿವಂತೆ."[21]

ಈ ಮಂತ್ರಗೋಪ್ಯದ ಪ್ರತಿಯೊಂದು ಪದ್ಯವು ಯೋಗದ ಪಾರಿಭಾಷಿಕ ಪದಗಳಿಂದ

---

18 ಚೆ. ಬ. ವಚನ ೩. ಪುಟ ೨೭. 19 ಪರಮಯೋಗ ಮಂತ್ರಗೋಪ್ಯ, ಪೀಠಿಕೆ ಪುಟ ೫ ; ಸಿ. ಸಾ. ಸಂಗ್ರಹ. ಪುಟ ೧೧೫. 20 ಅದೇ, ಪುಟ ೬ ; ಸಿ. ಸಾ. ಸಂಗ್ರಹ. ಪುಟ ೧೧೫. ತುಲನೆಗಾಗಿ ಸಟೀಕ ಶಿವಯೋಗ ಪ್ರದೀಪಿಕೆ, ಪಟಲ ೩-೪ ನೋಡಿರಿ. 21 ಅದೇ, ಪುಟ ೭ ; ಸಿ. ಸಾ. ಸಂಗ್ರಹ. ಪುಟ ೧೧೬-೧೬೬.

ವಿಭೂಷಿತವಾಗಿರುತ್ತದೆ. ಯೋಗದ ಪರಿಭಾಷೆ ಮತ್ತು ವೀರಶೈವ ಸಿದ್ಧಾಂತ ಇವುಗಳ ಜೋಕಿನಲ್ಲಿ ಈ ಪದ್ಯಗಳಲ್ಲಿ ನಿಗೂಢವಾದ ಅನುಭವವು ಸ್ಫುಟವಾಗಿ ವ್ಯಕ್ತಗೊಳ್ಳುವದು. ಕಲ್ಲಿಮಠದ ಪ್ರಭುದೇವರ ವ್ಯಾಖ್ಯಾನವು ವೀರಶೈವ ಸಿದ್ಧಾಂತದ ಹಿನ್ನೆಲೆಯಲ್ಲಿ ರೂಪುಗೊಂಡಿದ್ದರೆ, ಇದರ ಇನ್ನೊಂದು ವ್ಯಾಖ್ಯಾನವು ಯೋಗದ ಹಿನ್ನೆಲೆಯಲ್ಲಿ ಶಿವಯೋಗ ರಹಸ್ಯವನ್ನು ಸ್ಪಷ್ಟಗೊಳಿಸುವದು.

ಹಾಳ ಮೇಲಣ ಮಣಿಯ ಕಾಣಲಾರಳವಲ್ಲ
ಪೌಳಿ ಪೌಳಿಯ ಕೋಣೆ ಕೋಣೆಯೊಳಗೆ |
ಮೇಲುಗಿರಿ ಶಿಖರ ಪಶ್ಚಿಮ ದ್ವಾರವನು ಪೊಗಲು
ಕಾಣಬಾರದ ಕದಳಿಯುಂಟು ನೋಡಾ ||

ಖೇಚರತ್ವದ ನೆಲೆಯ (ನಿಲವ) ಭೂಚರರು ಬಲ್ಲರೆ
ವಾಚಾಳಕರ ಮಾತಿಗಿದು ಸಲ್ಲದು |
ಆಚಾರದನುಭಾವ ಭಕ್ತಿ ನೆಲೆಗೊಂಡಂಗೆ
ಸೂಚಿಸುವುದಾ ಮಹಾಪಂಮಪದವು ||

ಬ್ರಹ್ಮರಂಧ್ರದ ಕೊನೆಯ ವರ್ಣಾದಿ ವರ್ಣವನು
ನಿರ್ಮಲನು ನಿರ್ದೇಹಿ ತಾಂ ಬಲ್ಲನು |
ವರ್ಣವರಿದಾ ನಿತ್ಯ ನಿರ್ಮಳಂಗಲ್ಲದೆ
ಕರ್ಮಿ ಭೂಭ್ರಾಂಗಳಿಗಿದು ಸಲ್ಲದು ||[22]

ಶಿವಯೋಗದ ಸಾರವೇ ಹುದುಗಿದೆ ಈ ಮೂರು ಪದ್ಯಗಳಲ್ಲಿ. ಶಿವಯೋಗಿಯು ತನ್ನ ಅಂತರಂಗದಲ್ಲಿ ಕಾಣುವ ಅನುಸಂಧಾನದ ನಿಲವು, ಅಂತಿಮವಾದ ಅವಸ್ಥೆಯು ಬಹು ಮನೋಹರವಾಗಿ ಇವುಗಳಲ್ಲಿ ಒಡಮೂಡಿರುತ್ತದೆ. ಅಪರಾಪ್ರಕೃತಿಯ ಅಥವಾ ಅಧಃಸೃಷ್ಟಿಯ ಉರುಳಿನೊಳಗೆ ಸಿಲುಕಿ ಗಾಸಿಯಾಗುತ್ತಿರುವ ಸಂಸಾರ ಜೀವಿಗೆ ಪರಾಪ್ರಕೃತಿಯಲ್ಲಿ ಇಲ್ಲವೆ ಊರ್ಧ್ವಸೃಷ್ಟಿಯಲ್ಲಿ ವ್ಯವಹರಿಸುವುದರಿಂದ ದೊರೆಯುವ ಆನಂದಾನುಭೂತಿಯು ಎಂದೂ ಸಾಧ್ಯವಿಲ್ಲ. ಭಕ್ತಿಯ ಏರಪಾವಟಿಗೆಗಳ ಮುಖಾಂತರವಾಗಿ ಈ ಆನಂದವನ್ನು ಪಡೆದು ನಿರ್ಮಲನಾಗಿ ನಿರ್ದೇಹಿಯಾಗಿ ಬ್ರಹ್ಮರಂಧ್ರದ ಸಹಸ್ರದಳ ಕಮಲದಲ್ಲಿ ಭೃಂಗನೋಪಾದಿಯಲ್ಲಿ ಆತ್ಮನು ವಿಹರಿಸಬಲ್ಲನು. ಕರ್ಮದ ಕೋಟಲೆಯಿಂದ ಬಿಡುಗಡೆಯನ್ನು ಹೊಂದಿದ ಆ ಮುಕ್ತಾತ್ಮನು ಬ್ರಹ್ಮರಂಧ್ರ ಶಿಖಾ ಮತ್ತು ಪಶ್ಚಿಮವೆಂಬ ಶಕ್ತಿಯ ಕೇಂದ್ರಗಳಲ್ಲಿ, ಚಕ್ರಗಳಲ್ಲಿ ಕಾಣಬರುವ ಸಾಮರ್ಥ್ಯವನ್ನು ಅಳವಡಿಸಿಕೊಂಡು ವಿಶ್ವದ ಆಗುಹೋಗುಗಳನ್ನರಿತು ಅವನ್ನು ತನ್ನ ಸಂಕಲ್ಪ ಶಕ್ತಿಯ ನೆರವಿನಿಂದ ಒಂದು ಹದಕ್ಕೆ ತಿರುಗಿಸಿ ರೂಪಿಸುವ ಕಲಾಕೋವಿದನಾಗಬಲ್ಲನು. ಹಿಂದು-ಇಂದು-ಮುಂದುಗಳ ಸಮಸ್ತ ಕಾಲಕಲ್ಪನೆಯೆಲ್ಲವೂ ಅಡಗಿ ಅವನ ಸುಜ್ಞಾನ ದೃಷ್ಟಿಯ ಎದುರಿಗೆ ನಿತ್ಯ ನವೀನವಾದ ಇಂದು ಕಂಗೊಳಿಸಿ ಸೃಷ್ಟಿಯ ಗರ್ಭದಲ್ಲಿ ಸಂಕಲ್ಪವೇ ಸತ್ಕ್ರಿಯೆಯಾಗಿ ಮಾರ್ಪಡುವದು. ಶಿವಯೋಗ ಸಾಧನೆಯಲ್ಲಿ ಶಿವಯೋಗಿಯು ಇಂತಹ ಅನುಪಮವಾದ ಅದ್ಭುತವಾದ ಸಾಮರ್ಥ್ಯವನ್ನು ಅಳವಡಿಸಿಕೊಳ್ಳಬಲ್ಲನು.

ಅಲ್ಲಮಪ್ರಭುವು ಉಪದೇಶಿಸಿದ ಈ ಶಿವಯೋಗದ ಅನುಸಂಧಾನ ಮತ್ತು ಚೆನ್ನಬಸವಣ್ಣನು ಬೋಧಿಸಿದ ಷಟ್ಸ್ಥಲಾತ್ಮಕ ಲಿಂಗಾಂಗಯೋಗದ ಅನುಸಂಧಾನ ಇವುಗಳಿಂದ ಪ್ರಭಾವಿತನಾದ ಸಿದ್ಧರಾಮಯೋಗಿಯು ಈಗ ಸಂಪೂರ್ಣ ಶಿವಯೋಗಿಯಾಗಿಯೇ ಮಾರ್ಪಟ್ಟು ಶಿವಯೋಗದ ತನ್ನ ಅನುಭವವನ್ನೂ ನಿರೂಪಿಸಿರಲು ಸಾಕು. ಆತನೂ ಒಂದು

[22] ಪರಮಯೋಗ ಮಂತ್ರಗೋಪ್ಯ, ಪದ್ಯ ೨೪-೨೬.

ಮಂತ್ರಗೋಪ್ಯವನ್ನು ಬರೆದಿರುವನೆಂದು ಹೇಳುತ್ತಾರಷ್ಟೆ! ಕವಿಚರಿತೆಯಲ್ಲಿ ಈ ಗ್ರಂಥದ ಉಲ್ಲೇಖ ಮಾತ್ರವಿದೆ. ವಿವರವಾದ ಯಾವ ಮಾತುಗಳೂ ಅಲ್ಲಿ ಬಂದಿರುವುದಿಲ್ಲ.[23] ಸಿದ್ಧ ರಾಮೇಶ್ವರನ ಕೃತಿಗಳ ಬಗೆಗೆ ಅಭ್ಯಾಸಮಾಡಿದ ವಿಮರ್ಶಕರು ಈ ಗ್ರಂಥದ ಅಸ್ತಿತ್ವವನ್ನು ಮಾತ್ರ ತಿಳಿಸಿದ್ದಾರೆ. ಶ್ರೀ ಚೆನ್ನಪ್ಪನವರು ಉತ್ತಂಗಿ ಅವರು "ಮಂತ್ರಗೋಪ್ಯದ ಉಪ ದೇಶವನ್ನು ಹೊಂದಿದ ಸಿದ್ಧರಾಮನು ಪ್ರತಿಯಾಗಿ ತಾನೊಂದು ಮಂತ್ರಗೋಪ್ಯವನ್ನು ಬರೆದಿರಲಿಕ್ಕಿಲ್ಲ. ಈ ಗ್ರಂಥವು ದೊರೆಯದೆ ಇರುವುದರಿಂದ ಕವಿಚರಿತೆಕಾರರು ಯಾವ ಆಧಾರದ ಮೇಲಿಂದ ಇದನ್ನು ಹೇಳುವರೋ ತಿಳಿಯದು. ಹೀಗಾಗಿ ಪ್ರಭುದೇವರ ಮಂತ್ರಗೋಪ್ಯ ವನ್ನೇ ಸಿದ್ಧರಾಮನ ಮಂತ್ರಗೋಪ್ಯವೆಂದು ತಿಳಿಯುವ ಸಂಭವವಿರುವುದರಿಂದ, ಸದ್ಯಕ್ಕೆ ಅಂದರೆ ಅದು ದೊರೆಯುವವರೆಗೆ ಪ್ರಭುದೇವರ ಮಂತ್ರಗೋಪ್ಯವೇ ಸಿದ್ಧರಾಮನದೆಂದು ಗ್ರಹಿಸಬಹು ದಾಗಿದೆ"—ಎಂದು ತಿಳಿಸುತ್ತಾರೆ.[24] ಅವರ ಈ ಅಭಿಪ್ರಾಯವು ಸರಿಯಾದುದಲ್ಲ. ಯಾಕಂದರೆ ಇದರ ಕೈ ಬರೆಹದ ಪ್ರತಿಗಳು ಅಲ್ಲಲ್ಲಿ ಸಾಕಷ್ಟು ಸಿಗುತ್ತವೆ. ಮೇಲೆ ಕಾಣಿಸಿದ ಮಂತ್ರ ಗೋಪ್ಯಗಳ ಜೊತೆಗೆ ಇದರ ಒಂದು ಪ್ರತಿಯು ಮಹಾಲಿಂಗಪುರದ ಸಕ್ಕರಿ ಶಿವಬಸಪ್ಪ ಎಂಬವರಲ್ಲಿರುತ್ತದೆ. ಬೆಳಗಾವಿ ಜಿಲ್ಲೆಯ ಯಕ್ಕುಂಡಿ ವಿರಕ್ತಮಠದಲ್ಲಿರುವ ತಾಡವೋಲೆಗಳ ಭಾಂಡಾರದಲ್ಲ ಇದರ ಎರಡು ಪ್ರತಿಗಳಿರುತ್ತವೆ. ಡಾಕ್ಟರ ಫ. ಗು. ಹಳಕಟ್ಟಿಯವರು ಸಿದ್ಧ ರಾಮೇಶ್ವರನ ಮಂತ್ರಗೋಪ್ಯದಲ್ಲಿಯ ನೀಲಲೋಚನೆಯ ಬಗೆಗಿನ ಚರಿತೆಯನ್ನು ತಿಳಿಸುವ ಭಾಗವೆಂದು ಶಿವಾನುಭವದಲ್ಲ ಒಂದು ಅವತರಣಿಕೆಯನ್ನು ಉಲ್ಲೇಖಿಸಿದ್ದಾರೆ.[25] ಇದರಿಂದ ಇದು ಪ್ರಭುದೇವರ ಮಂತ್ರಗೋಪ್ಯಕ್ಕಿಂತ ಭಿನ್ನವಾದ ಗ್ರಂಥವಾಗಿದೆ; ಮತ್ತು ಕವಿಚರಿತೆ ಕಾರರು ಇದನ್ನು ನೋಡಿರಲೂ ಸಾಕು. ಇದನ್ನು ಪರಿಶೀಲಿಸುವ ಅವಕಾಶವು ನಮಗೆ ದೊರೆಯಲಿಲ್ಲ. ಈ ಗ್ರಂಥ ಪ್ರಕಟಿತವಾದರೆ ಶಿವಯೋಗಿ ಸಿದ್ಧರಾಮೇಶ್ವರನು ಪಡೆದು ಕೊಂಡಿದ್ದ ಅಮಿತವಾದ ಅನುಭವದ ಬಗೆಗೆ ಹೆಚ್ಚಿನ ತಿಳಿವಳಿಕೆಯುಂಟಾದೀತು.

ಇದು ಅಲ್ಲದೆ ಹಡಪದ ಅಪ್ಪಣ್ಣನೂ ಒಂದು 'ಮಂತ್ರಗೋಪ್ಯ'ವನ್ನು ಬರೆದಿದ್ದಾನೆ. ಇದನ್ನು ಹಾಗು ಆತನೇ ಬರೆದಿರುವ 'ಸ್ವರವಚನ' ಎಂಬ ಹೆಸರಿನ ಇನ್ನೊಂದು ಚಿಕ್ಕಗ್ರಂಥ ವನ್ನು ಕೂಡಿಸಿ 'ಹಡಪದ ಅಪ್ಪಣ್ಣನ ಸ್ವರ ವಚನಗಳು' ಎಂಬ ಅಂಕಿತದಲ್ಲಿ ಡಾಕ್ಟರ ಹಳಕಟ್ಟಿ ಯವರು ತಮ್ಮ ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಕಟಿಸಿದ್ದಾರೆ. ಈ ಮಂತ್ರಗೋಪ್ಯದ ೨೭ ಪದ್ಯಗಳಲ್ಲಿ 'ಜ್ಯೋತಿರ್ಲಿಂಗದಲ್ಲಿ ನಿತ್ಯಮುಕ್ತನಾದ ನಿಜಶರಣನ ಅನುವ'ನ್ನು ಕುರಿತು ವಿವೇಚಿಸ ಲಾಗಿದೆ. "ನಾದಬ್ರಹ್ಮದಿಂದ ನಮಃಶಿವಾಯ ಎಂಬ ಪಂಚಾಕ್ಷರ ಉದಯ" ಎಂಬ ಮಾತಿ ನಿಂದ ಮಂತ್ರದ ಉತ್ಪತ್ತಿಯನ್ನು ತಿಳಿಸಿ, ಮಂತ್ರದ ಒಡಲಲ್ಲಿ ಶಕ್ತಿಯು ಅಡಗಿರುವುದು. "ಕಡೆ ನಡುವಿಲ್ಲದ ಘನವು ಹಿಡಿಹಿನಲಿ ಬಂದಿರವು" "ನಾದಬ್ರಹ್ಮ ತಾನೋಂಕಾರ ಬಂದಾಗ" ಲೋಸುಗ "ಆಧಾರದೊಡಿಯಾಣ ಜಾಲೇಂದ್ರದಿಂ" ಮೊದಲಾಗಿ ಯತ್ನಿಸಿ, "ಶತಕೋಟಿ ಸೋಮಸೂರ್ಯರ ಬೆಳಗಿನೊಳಗೆ ಪಥವಿಡಿದು" ಬಂದು, ಆಜ್ಞೆಯನ್ನು ಕಾಣಬೇಕು. ಆಗ,

ನಡೆಗೆಟ್ಟು ನುಡಿಗೆಟ್ಟು ಒಡಲು ಹಾಳಾಯಿತು
ಅಡಿಮುಡಿಮಧ್ಯವದಕಿಲ್ಲವು|
ಕಡೆಗಣ್ಣು ಕೆಂಪಾಗಿ ನಡುಗಣ್ಣು ಬಿಳಿದಾಗಿ
ಒಡನಿಪ್ಪ ಕಾಳಿಕೆ ಬೆಂದು ಕಣ್ಗೆಂಡಿಯಾಯಿತು||[26]

ಎಂಬ ಅನುಭವವು ವೇದ್ಯವಾಗುವದು; ಸತ್ವ ರಜ ತಮವೆಂಬ ತ್ರಿಗುಣಾತ್ಮಕ ಪ್ರಕೃತಿಯ ವ್ಯವ ಹಾರವಡಗಿ ಮಾತು ಮೌನವಾಗಿ ಶಬ್ದಮುಗ್ಧಸ್ಥಿತಿಯೊದಗುವದು; ನಾನೆಂಬ ಒಡನಾಟ

---

[23] ಕ. ಚ. ಭಾಗ ೧, ಪುಟ ೧೮೩. [24] ಸಿ. ಸಾ. ಸಂಗ್ರಹ ಪ್ರಸ್ತಾವನೆ, ಪುಟ ೯೪. [25] ಶಿವಾನುಭವ ಸಂಪುಟ ೨೬, ಸಂಚಿಕೆ ೪, ಪುಟ ೭೨. [26] ಹ. ಅಪ್ಪಣ್ಣನ ಮಂತ್ರಗೋಪ್ಯ, ಪದ್ಯ ೧೫.

ದಿಂದಿಹ ಒಡಲು ನಷ್ಟವಾಗಿ ಅನಾದ್ಯನಂತವಾದ ಪರವಸ್ತುವಿನ ದಿವ್ಯಸ್ವರೂಪದ ಅರಿವು ಉಂಟಾಗುವದು. ಈ ಅನುಭವದೊಡನೆ ಮುನ್ನಡೆದು ಮೇರುವಿನ ತುದಿಯಲ್ಲಿ "ಪಶ್ಚಿಮನಾಳದೊಳು ಆರೈದು ನೋಡೆ ಅಮೃತವು ಇಪ್ಪ"ದು. ಆ

ಅಮೃತವಾರೋಗಣೆಯ ಯುವತಿಯರ ಸಹಿತುಂಡು
ಭವವ ದಾಂಟಿ ಭಾಗ್ಯನಾಗಿ ನಿಂದು |
ಭುವನಕ್ಕೆ ತಾನಾಗಿ ತಾನಿಲ್ಲದವನಾಗಿ
ಶಿವನೊಳಗೆ ಬೆರೆದು ಬೇರಿಲ್ಲ ಶರಣ ||[27]

ಎಂಬ ತಾದಾತ್ಮ್ಯದ ತಿಳಿವಳಿಕೆಯಿಂದ ಮುನ್ನಡೆಯುತ್ತ,

ನೀರು ನೀರನೆ ಕೂಡಿ ಮೇರೆದಪ್ಪಿದಪೊಲು
ನೀರು ಬಲಿದಾ ಆವಿಯಾದ ತೆರದಿ |
ಆವಿ ತಾ ಕರಗಿ ನೀರಾದಂತೆ ಲಿಂಗೈಕ್ಯ
ಓರಂತೆ ಒಂದಾದ ನಿಜ ಶರಣನು ||[28]

ಎಂಬ ಪರಮಪದವಿಗೆ ಅರ್ಹನಾಗುವನು. ದಹರಾಕಾಶದ ಬರಿಯ ಬಯಲಲ್ಲಿ ಶತಕೋಟಿ ಸೂರ್ಯರ ಪ್ರಭಾಪುಂಜದೊಲು ಬೆಳಗುವ ಜೋತಿರ್ಲಿಂಗವು ಸ್ವಲೀಲಾನಂದಕ್ಕೋಸುಗ ಒಂದು ಆಕಾರವ ತಾಳುವದು. ಅಂತರಂಗದಲ್ಲಿದ್ದುದು ಬಹಿರಂಗದಲ್ಲಿ, ಬಾಹ್ಯದಲ್ಲಿದ್ದುದು ಅಂತರಂಗದಲ್ಲಿ ವ್ಯಾಪಿಸಿದೆ, ಅಲ್ಲಿ ನಾನು ತಾನೆಂಬುದಕೆ ತೆರಹಿಲ್ಲ, ಎಲ್ಲೆಡೆಯಲ್ಲಿಯೂ ತಾನೇ ತಾನಾಗಿರುವದು ಆ ದಿವ್ಯ ಪರವಸ್ತುವು—ಎಂಬ ಸ್ವಯಂ ಪ್ರಜ್ಞೆಯಿಂದಾಗಿ ಅಖಂಡ ಸಾಮರಸ್ಯದ ನಿಲವು ಉಂಟಾಗುತ್ತಿದೆ. ಇಂತಹ ಅತ್ಯುನ್ನತವಾದ ಶಿವಯೋಗದ ನಿಲವಿನ ಪರಾಕಾಷ್ಠೆಯ ನಿರೂಪಣೆಯೊಡನೆ ಅಪ್ಪಣ್ಣನು ತನ್ನ ಮಂತ್ರಗೋಪ್ಯವನ್ನು ಪೂರ್ಣಗೊಳಿಸುತ್ತಾನೆ.

ಬಯಲ ಲಿಂಗವೆ ಒಂದು ನೆವಕೆ ರೂಪನೆ ತೊಟ್ಟು
ಭುವನದೊಳು ತನ್ನ ಲೀಲೆಯನೆ ನಟಿಸಿ |
ಭವವಿರಹಿತ ಬಸವಪ್ರಿಯ ಕೂಡಲ ಚೆನ್ನಬಸವನೊಳು
ಅವಿರತವಾಗಿ ತಾ ಬೆರೆದ ಶರಣ ||[29]

ಲಿಂಗೈಕ್ಯ ಡಾಕ್ಟರ ಜಿ. ಎಸ್. ಗದ್ದಗೀಮಠ ಅವರು ಹಡಪದ ಅಪ್ಪಣ್ಣ ಮತ್ತು ಆತನ ರಾಣಿ ಲಿಂಗಮ್ಮ ಇವರಿಬ್ಬರು ಬರೆದ ಎರಡು ಮಂತ್ರಗೋಪ್ಯಗಳನ್ನು ಸಂಶೋಧಿಸಿ ಪ್ರಕಟಿಸಿದ್ದಾರೆ.[30] ಅಪ್ಪಣ್ಣನ ಈ ಮಂತ್ರಗೋಪ್ಯದಲ್ಲಿ 'ಬಸವಪ್ರಿಯ ಕೂಡಲ ಚೆನ್ನಬಸವಣ್ಣ' ಎಂಬ ಅಂಕಿತವಿರುತ್ತದೆ. ಈ ಹಿಂದೆಯೇ ತಿಳಿಸಲಾದ ಅಪ್ಪಣ್ಣನ ಮಂತ್ರಗೋಪ್ಯದಲ್ಲಿ 'ಬಸವಪ್ರಿಯ ಕೂಡಲ ಚೆನ್ನಬಸವ' ಎಂಬ ಅಂಕಿತವಿರುವುದನ್ನು ನಾವು ಗುರುತಿಸಿದ್ದೇವೆ. 'ಚೆನ್ನಬಸವಣ್ಣ, ಚೆನ್ನಬಸವ' ಈ ಪದಗಳು ಒಬ್ಬ ವ್ಯಕ್ತಿಗೇ ಸಂಬಂಧಿಸಿರುವುದರಿಂದ ಅವುಗಳಲ್ಲಿ ಅರ್ಥ

---

[27] ಅದೇ, ಪದ್ಯ ೨೦. [28] ಅದೇ, ಪದ್ಯ ೨೫. [29] ಅದೇ, ಪದ್ಯ ೨೬. [30] ಜಯಕರ್ನಾಟಕ ೧೯೫೯, ಮೇ—ಬಸವ ಜಯಂತಿ ವಿಶೇಷ ಸಂಚಿಕೆ.

ವ್ಯತ್ಯಾಸವಿರುವುದಿಲ್ಲ. ಡಾಕ್ಟರ ಫ. ಗು. ಹಳಕಟ್ಟಿ ಅವರು ಪ್ರಕಟಿಸಿರುವ ಅಪ್ಪಣ್ಣನ ಸ್ವರ ವಚನ ನಂ. ೧ ರಲ್ಲಿ ಈ ಎರಡೂ ಅಂಕಿತಗಳಿರುತ್ತವೆ. ಅಲ್ಲದೆ, ಅವರೇ ಪ್ರಕಟಿಸಿರುವ ಅಪ್ಪಣ್ಣನ ವಚನಗಳಿಗೆ (ಶಿವಾನುಭವ ಗ್ರಂಥಮಾಲೆ ನಂ. ೧೬) 'ಬಸವಪ್ರಿಯ ಕೂಡಲ ಚೆನ್ನಬಸವಣ್ಣ' ಎಂಬ ಅಂಕಿತವೇ ಇರುತ್ತದೆ. ಅದರಿಂದ ಈ ನಾಲ್ಕೂ ಗ್ರಂಥಗಳಿಗೆ ಹಡಪದ ಅಪ್ಪಣ್ಣನೇ ಕರ್ತೃವೆಂಬುದು ನಿರ್ವಿವಾದವಾಗಿದೆ.

ಡಾಕ್ಟರ ಹಳಕಟ್ಟಿ ಮತ್ತು ಕವಿಚರಿತೆಕಾರರು 'ಬಸವಪ್ರಿಯ ಕೂಡಲ ಚೆನ್ನಸಂಗಮದೇವಾ' ಎಂಬುದು ಹಡಪದ ಅಪ್ಪಣ್ಣನ ವಚನಮುದ್ರಿಕೆ ಎಂದು ತಿಳಿಸಿರುವರು.[31]

ವಚನಶಾಸ್ತ್ರಸಾರದ ಮೂರು ಸಂಪುಟಗಳಲ್ಲಿ ಹಡಪದ ಅಪ್ಪಣ್ಣನವೆಂದು ಅನೇಕ ವಚನಗಳನ್ನು ಉದ್ಧರಿಸಲಾಗಿದೆ.[32]

'ಸದ್ಧರ್ಮದೀಪಿಕೆ'ಯ ಸಂಪಾದಕರಾದ ಶ್ರೀ ಚೆನ್ನಮಲ್ಲಿಕಾರ್ಜುನ ಅವರು ಪ್ರಕಟಿಸಿದ ಸರ್ವಪುರಾತನರ ವಚನಗಳಲ್ಲ ಈ ಅಂಕಿತವುಳ್ಳ ವಚನಗಳನ್ನು ಎರಡು ಗುಂಪುಗಳಲ್ಲಿ ಮುದ್ರಿಸಲಾಗಿದೆ. ಸಿಂಗಳದ ಸಿದ್ಧಬಸವರಾಜದೇವರು ಸಂಕಲಿಸಿ ಟೀಕಿಸಿದ ಬೆಡಗಿನ ವಚನಗಳಲ್ಲಿ ಹಡಪದ ಅಪ್ಪಣ್ಣನ ೪ ಬೆಡಗಿನ ವಚನಗಳಿಗೆ ವ್ಯಾಖ್ಯಾನ ಬರೆಯಲಾಗಿದೆ. ಆ ವಚನಗಳಿಗೆ ಸಹ ಇದೇ ಅಂಕಿತವಿರುತ್ತದೆ. ಶೂನ್ಯಸಂಪಾದನೆಗಳಲ್ಲಿಯೂ ಇದೇ ಅಂಕಿತವನ್ನು ತೋರಿಸಲಾಗಿದೆ ಅಪ್ಪಣ್ಣನ ವಚನಗಳಿಗೆ. ಡಾಕ್ಟರ್ ಹಳಕಟ್ಟಿ, ಆರ್. ನರಸಿಂಹಾಚಾರ್ಯ, ಶ್ರೀ ಚೆನ್ನಮಲ್ಲಿಕಾರ್ಜುನ, ಸರ್ವಪುರಾತನರ ವಚನ, ಇಲ್ಲವೆ ಬೆಡಗಿನ ವಚನಗಳ ಯಾವ ಅಂಕಿತಗಳ ಸೂಚಿಯಲ್ಲಿಯೂ 'ಬಸವಪ್ರಿಯ ಕೂಡಲ ಚೆನ್ನಬಸವ ಅಥವಾ ಚೆನ್ನಬಸವಣ್ಣ' ಎಂಬ ಅಂಕಿತವಿರುವುದಿಲ್ಲ. ಬೆಡಗಿನ ವಚನಗಳಲ್ಲಿ ವ್ಯಾಖ್ಯಾನಿಸಲಾದ ೪ ವಚನಗಳನ್ನು ಡಾಕ್ಟರ ಹಳಕಟ್ಟಿಯವರು ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಕಟಿಸಿರುವ ಹಡಪದ ಅಪ್ಪಣ್ಣನ ವಚನಗಳೊಡನೆ ಹೋಲಿಸಿ ನೋಡಿದಾಗ 'ಚೆನ್ನಬಸವ ಇಲ್ಲವೆ ಚೆನ್ನಬಸವಣ್ಣ' ಇದಕ್ಕೆ ಪ್ರತಿಯಾಗಿ 'ಚೆನ್ನಸಂಗಮದೇವಾ' ಎಂಬ ವ್ಯತ್ಯಾಸವನ್ನಷ್ಟೇ ಕಾಣುತ್ತೇವೆ. ಇದೇ ಮೇರೆಗೆ ಇನ್ನೂ ಹಲವಾರು ವಚನಗಳ ಕೂಲಂಕಷವಾದ ಪರಿಶೀಲನೆಯಿಂದ ಮುದ್ರಿಕೆಗಳಲ್ಲಿ ಮಾತ್ರ ವ್ಯತ್ಯಾಸವುಂಟಾಗಿರುವುದನ್ನು ಗುರುತಿಸಬಹುದಾಗಿದೆ. ಪ್ರತಿಮಾಡಿಕೊಳ್ಳುತ್ತಿದ್ದ ಲಿಪಿಕಾರರ ಅಜಾಗರೂಕತೆಯಿಂದ ಹೀಗೆ ವ್ಯತ್ಯಾಸವುಂಟಾಗಿರಲು ಸಾಕು. ಆದರೂ 'ಬಸವಪ್ರಿಯ ಕೂಡಲ ಚೆನ್ನಬಸವ ಅಥವಾ ಚೆನ್ನಬಸವಣ್ಣ' ಮತ್ತು 'ಬಸವಪ್ರಿಯ ಕೂಡಲ ಚೆನ್ನಸಂಗಮದೇವಾ' ಈ ಎರಡು ಅಂಕಿತಗಳು ಭಿನ್ನ ಭಿನ್ನವಾಗಿರುತ್ತವೆ. ಅವು ಇಬ್ಬರು ವಚನಕಾರರು ಇರಿಸಿಕೊಂಡ ಅಂಕಿತಗಳಾಗಿರುತ್ತವೆ ಎಂಬುದನ್ನು ಆ ವಚನಗಳ ವಿಷಯನಿರೂಪಣೆ ಶೈಲಿ ಇತ್ಯಾದಿಗಳಿಂದ ಮನಗಾಣಬಹುದು. ಶ್ರೀ ಚೆನ್ನಮಲ್ಲಿಕಾರ್ಜುನ ಅವರು 'ಬಸವಪ್ರಿಯ ಕೂಡಲ ಚೆನ್ನಸಂಗಮದೇವಾ' ಎಂಬದು ಬಸವೇಶ್ವರನ ಗುರು ಸಂಗಮೇಶ್ವರ ಅಪ್ಪಣ್ಣಗಳ ವಚನ ಮುದ್ರಿಕೆಯೆಂದು ಅಭಿಪ್ರಾಯ ಪಡುತ್ತಾರೆ.[33] ಇದರಿಂದ 'ಬಸವಪ್ರಿಯ ಕೂಡಲ ಚೆನ್ನಬಸವ ಇಲ್ಲವೆ ಚೆನ್ನಬಸವಣ್ಣ' ಎಂಬ ಅಂಕಿತವು ಹಡಪದ ಅಪ್ಪಣ್ಣನ ಕೃತಿಗಳಿಗೆ ಮಾತ್ರ ಇರುವುದೆಂಬುದರಲ್ಲಿ ಸಂದೇಹವಿಲ್ಲ.

---

31 ವ. ಶಾ. ಸಾರ, ಮೊದಲನೆಯ ಮುದ್ರಣ, ಪು.೩೫ ; ಎರಡನೆಯ ಮುದ್ರಣ, ಭಾಗ ೧, ಉತ್ತರಾರ್ಧ ಪು. ೨೯೨ ; ಶಿವಶರಣರ ಚರಿತ್ರೆಗಳು, ಭಾಗ ೪ ಪು. ೫೨ ; ಕ. ಚ. ಭಾಗ ೩, ಪು. ೩೪೦.

32 ವ. ಶಾ.—ಸಾರ, ಭಾಗ ೧ (ಪೂರ್ವಾರ್ಧ) ವಚನ/ಪುಟ ೧೩/೩೩, ೩/೯೩, ೧೦/೧೪೪, ೨೦/೨೧೧, ೧೮/೨೯೬, ೧೨-೧೩/೩೬೩, ೫/೩೬೯ (ಉತ್ತರಾರ್ಧ) ೭/೬೬, ೪/೬೬, ೧೦/೨೪೦, ಭಾಗ ೨ ೧ ಮತ್ತು ೪/೩೯೨, ಭಾಗ ೩ ೧೯೬/೪೨, ೨೯/೨೩೧.

33 ಸರ್ವಪುರಾತನರ ವಚನ, ಪುಟ ೨೧೨.

ಅಪ್ಪಣ್ಣನ ವಚನಗಳಿಂದ ಈ ಮಾತು ಇನ್ನೂ ದೃಢವಾಗುತ್ತದೆ.


11976

ಅಯ್ಯಾ, ಎನಗೆ ಬಸವಪ್ರಿಯನೆಂದರೂ ನೀನೇ,
ಕೂಡಲ ಚನ್ನಬಸವಣ್ಣನೆಂದರೂ ನೀನೇ
ಗುರುವೆಂದರೂ ನೀನೇ ಲಿಂಗವೆಂದರೂ ನೀನೇ,
ಜಂಗಮವೆಂದರೂ ನೀನೇ ಪ್ರಸಾದವೆಂದರೂ ನೀನೇ.
. . . . . . . . . . . . . .
ಇನ್ನು ಭಿನ್ನವಿಟ್ಟು ನೋಡಿದೆನಾದಡೆ
ಚೆನ್ನಮಲ್ಲೇಶ್ವರ ನೀವೇ ಬಲ್ಲಿರಿ.
ಎಮ್ಮ ಬಸವಪ್ರಿಯ ಕೂಡಲ ಚನ್ನಬಸವಣ್ಣನಲ್ಲಿ
ಏಕವಾದ ಕಾರಣ ಎನಗೆ ಭವವಿಲ್ಲ, ಬಂಧನವಿಲ್ಲ.
ಅದಕ್ಕೆ ನೀವೇ ಸಾಕ್ಷಿ. [34]

ಅಪ್ಪಣ್ಣ ಹಾಗು ಲಿಂಗಮ್ಮ ಇವರು ಹಾಡಿರುವ ಮಂತ್ರಗೋಪ್ಯಗಳಲ್ಲಿ ಒಂದು ನವೀನತೆ ಕಂಡು ಬರುತ್ತದೆ. ಇವುಗಳಲ್ಲಿ ಪ್ರತಿಯೊಂದರಲ್ಲಿ ೧೧ ಪದ್ಯಗಳ ಮೂರು ಮೂರು ವಿಭಾಗಗಳಿದ್ದು ಪ್ರತಿಯೊಂದು ವಿಭಾಗಕ್ಕೂ ಒಂದೊಂದು ಪಲ್ಲವಿಯಿರುತ್ತದೆ. ಈ ತರಹದ ಯೋಜನೆಯಿಂದ ಇವುಗಳಲ್ಲಿ ಮೂರು ಮೂರು ಸ್ಥಲಕಟ್ಟುಗಳನ್ನೇ ಗುರುತಿಸಬಹುದಾಗಿದೆ. ಈ ಪಲ್ಲವಿಗಳ ಪರಿಶೀಲನೆಯಿಂದ ಒಬ್ಬರು ಇನ್ನೊಬ್ಬರಿಗೆ ತಮ್ಮ ಅನುಭವದ ನಿಲವನ್ನು ತಿಳಿಸುತ್ತಿರುವರೇನೋ ಎಂಬಂತೆ ಭಾಸವಾಗುತ್ತದೆ. ಅಪ್ಪಣ್ಣನು 'ವನಿತೆ ಕೇಳು ನಿಶ್ಚಿಂತಳೆ ಕೇಳು, ನಿರ್ಭಿನ್ನಳೆ ಕೇಳು' ಎಂದು ಸಂಬೋಧಿಸಿದರೆ, ಲಿಂಗಮ್ಮನು 'ಪ್ರಾಣನಾಥನೆ ಕೇಳು, ವಲ್ಲಭನೆ ಕೇಳಯ್ಯ, ಚೈತನ್ಯಾತ್ಮನೆ ಕೇಳು' ಎಂದು ಬಿನ್ನವಿಸುತ್ತಾಳೆ. ಆದರೆ ಅಪ್ಪಣ್ಣನು ಶಿವಶಕ್ತಿಯ ಪರವಾಗಿ ಹೀಗೆ ಸಂಬೋಧಿಸುವನೆಂದೂ ಲಿಂಗಮ್ಮನು 'ಶರಣ ಸತಿ ಲಿಂಗಪತಿ' ಎಂಬ ಭಾವನೆಯ ಹಿನ್ನೆಲೆಯಲ್ಲಿ ಹೀಗೆ ಬಿನ್ನವಿಸುವಳೆಂದೂ ವಿಚಾರಾಂತ್ಯದಲ್ಲಿ ಹೊಳೆಯದೆ ಇರದು. ಅಪ್ಪಣ್ಣ ಮತ್ತು ಲಿಂಗಮ್ಮ ಈ ಸತಿಪತಿಗಳು ಪ್ರಥಮ ತರಗತಿಯ ಶಿವಯೋಗ ಸಂಪನ್ನರಾಗಿದ್ದರು; ಅವರಿಗೆ ಯೋಗಾನುಸಂಧಾನದಲ್ಲಿ ತುಂಬಾ ಗತಿಯಿದ್ದಿತು—ಎಂಬುದರಲ್ಲಿ ಸಂದೇಹವಿಲ್ಲ. ಅವರು ಹಾಡಿಕೊಂಡಿರುವ ಅನುಭವದ ವಚನಗಳಲ್ಲಿ ಯೋಗ ಶಿವಯೋಗಗಳ ಬಗೆಗಿನ ಹಲವಾರು ವಿಚಾರಗಳು ಹಾಸುಹೊಕ್ಕಾಗಿ ಬಂದಿರುತ್ತವೆ. ಆದರೆ ಮಂತ್ರಗೋಪ್ಯಗಳು ಈ ಮಾತನ್ನು ಇನ್ನೂ ದೃಢಗೊಳಿಸುತ್ತಿವೆ.

ಅಪ್ಪಣ್ಣನ ಮಂತ್ರಗೋಪ್ಯದ ಮೂರು ವಿಭಾಗಗಳಲ್ಲಿ ಶಿವಯೋಗ ಬಲ್ಲಿದನಾದ ಶರಣನ ನಿಜಾಚರಣೆಯನ್ನು ಕುರಿತಾದ ವಿವರಣೆ ಬರುತ್ತಿದೆ. ಅಷ್ಟಾವರಣ ಷಟ್ಸ್ಥಲಗಳನ್ನು ಯೋಗಶಾಸ್ತ್ರದಲ್ಲಿ ವರ್ಣಿತವಾದ ಶಕ್ತಿಯ ಕೇಂದ್ರಗಳಲ್ಲಿ ಕಂಡು, ಚಿತ್ತ ಬುದ್ಧಿ ಅಹಂಕಾರ ಮನ ಜ್ಞಾನ ಭಾವ ಕರಣಗಳ ಶುದ್ಧಿಯನ್ನು ಲಿಂಗಭಾವನೆ ಭರಿತವಾದ ಆಚರಣೆಯಿಂದ ಸಾಧಿಸಿಕೊಳ್ಳುವ ಶರಣನ ಜೀವನದ ರಹಸ್ಯವನ್ನು ಮೊದಲನೆಯ ಭಾಗದಲ್ಲಿ ಆತನು ತಿಳಿಸುತ್ತಾನೆ. 'ನಿರ್ಮಯಾನಂದ ನಿತ್ಯ' ನಾದ 'ಶಾಂತಿಯಾ ಪ್ರಭೆಯೇ' ತಾನಾದ ಆ ಶರಣನ ಸ್ಥಿತಿಯನ್ನು ಕುರಿತು ಆತನು ಹೀಗೆ ಹೇಳುತ್ತಾನೆ:

---

[34] ಹ. ಅ. ವಚನ (ಏಕಸ್ಥಲ) ೩ ಪು. ೬೩; ಅಪ್ಪಣ್ಣನ ವಚನ, ವಚನ ಮುದ್ರಿಕೆ ಇವುಗಳನ್ನು ಆತನ ಪುಣ್ಯಾಂಗನೆ ಲಿಂಗಮ್ಮನ ವಚನ, ಆಕೆಯ ವಚನಮುದ್ರಿಕೆಯಾದ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ, ಇವಕ್ಕೆ ಹೋಲಿಸಿದಾಗ ಅಲ್ಲಿ ಒಂದು ಸಾಮರಸ್ಯವನ್ನು ಕಾಣಬಲ್ಲೆವು. ಅಪ್ಪಣ್ಣನಿಗೆ ಗುರುವಾಗಿದ್ದ ಚೆನ್ನಮಲ್ಲೇಶ್ವರನ ಹೆಸರು ಆತನ ವಚನಗಳಲ್ಲಿ ೧೨ ಸಲ ಬಂದರೆ, ಲಿಂಗಮ್ಮನಿಗೂ ಗುರುವಾಗಿದ್ದ ಆತನ ಹೆಸರು ಆಕೆಯ ವಚನಗಳಲ್ಲಿ ೬ ಸಲ ಬರುತ್ತದೆ. ಇದರಿಂದ ಲೌಕಿಕ ಸಂಬಂಧದಂತೆ ಅವರ ಆಧ್ಯಾತ್ಮಿಕ ಸಂಬಂಧವೂ ಊರ್ಜಿತಾವಸ್ಥೆಯನ್ನು ಹೊಂದಿದ್ದಿತೆಂದು ವ್ಯಕ್ತವಾಗುತ್ತದೆ.

ಕುಂಡಲಿಯನಂಡಲೆದು ದಂಡನಾಳದ ತುದಿಯ
ಖಂಡ ಸುಷುಮ್ನೆಯೆನಿಪ ಉನ್ಮನೆಗಳ |
ಉಂಡೆಯಾಗಿಪ್ಪ ಬ್ರಹ್ಮರಂಧ್ರದೊಳು ಪೊಕ್ಕು ಅ
ಖಂಡಿತ ಪ್ರಸಾದವನುಂಡ ನಿಜಶರಣನು ||[35]

ಎರಡನೆಯ ಭಾಗದಲ್ಲಿ ಅಂಗಲಿಂಗವೆಂಬೆರಡಿಲ್ಲದೆ ಸಾಧಿಸುವ ಯೋಗವನ್ನು ಕುರಿತು ವಿವರಿಸಲಾಗಿದೆ. 'ಉತ್ತರದ ಬೀದಿಯನೇರಿ ಉರುವನ ಅಂಗಳವ ಮೆಟ್ಟಿ ನೆತ್ತಿಯ ಒಳಕಣ್ಣಿನಲಿ ನೀರನೆರೆದು ಚಿತ್ತ ಚಿತ್ತವನಪ್ಪಿ ಚಿಲ್ಲಿಂಗದ ಬೆಳಗಿನೊಳು ಸತ್ತು ಚಿತ್ತಾನಂದ ಸ್ವಯವಪ್ಪ ಶರಣನು'[36] ಲಿಂಗ ಅಥವಾ ಪರವಸ್ತು ಅಲ್ಲದೆ ಇನ್ನೇನು? ಇಂತಹ ಶರಣನು ತನ್ನ ಅಂತರಂಗದಲ್ಲಿ,

ಒಂದಲ್ಲ ಎರಡಲ್ಲ ಒಂಬತ್ತು ಕಮಲದಲಿ
ತುಂಬಿ ತುಂಬಿ ಬಂಡುಂಡು ತೂಗಾಡುತಾ |
ಕಂಬವೊಂದರ ಮೇಲೆ ಕವಲುವಟ್ಟೆಯನೂರಿ
'ಓಂ' ಎಂದು ಉಚ್ಚರಿಸಿ ಝೇಂಕರಿಸಿತು ||[37]

ಎಂಬ ಅನುಭವವನ್ನು ಮಂತ್ರಾನುಸಂಧಾನದ ಮೊರೆಯಲ್ಲಿ ಪಡೆಯುತ್ತಾನೆ. 'ನಾದಬಿಂದು ಕಳೆಯೇ ತಾನಾದ' ಆ ಶರಣನು ತನ್ನ ಅನುಸಂಧಾನದ ಪರಾಕಾಷ್ಠೆಯಲ್ಲಿ ನಾದಬಿಂದುಕಳಾತೀತವಾದ ಘನವು ವೇಧಿಸಿಯೆ ಒಳಹೊರಗೆ ತಾನಾದ ಪ್ರಬೋಧವನ್ನು ಪಡೆಯುವುದೇನರಿದಲ್ಲ! ಮೂರನೆಯ ಭಾಗದಲ್ಲಿ ಅಪ್ಪಣ್ಣನು 'ಉರಿಯು ಕರ್ಪುರದ ಸಂಯೋಗದಂತೆ' ಇರುವ ಯೋಗಾಂಗದ ಕುರುಹನ್ನು ವಿಶದಗೊಳಿಸುತ್ತಾನೆ. 'ಹೇಳುವರೆ ಹೆಸರಿಲ್ಲ, ಕೇಳುವರೆ ಕುರುಹಿಲ್ಲ. ಆಳು ಆಳ್ದರೆಂಬಾ ಉಭಯವಿಲ್ಲದ' ಆ ಶರಣನ ಸ್ಥಿತಿಯು ಅಚ್ಚರಿಯಿಂದ ಕೂಡಿಕೊಂಡಿದೆ.

ಹುಡಿ ಹತ್ತದಾ ಗಾಳಿ ನುಡಿ ಹತ್ತದಾ ಒಡಲು
ಕಾಡಿಗೆ ಹತ್ತದ ಕಣ್ಣಿನಂತೆ |
ಜಡಹತ್ತದ ಶರಣ ಒಡಲುವಿಡಿದಿಹನೆಂದು
ಅಡಿಮುಡಿಗೆ ತಂದು ತಾ ನುಡಿಯಬಹುದೆ? ||[38]

ಇಲ್ಲ, ಅದು ಸಾಧ್ಯವಿಲ್ಲ. ಅವನು ವಾಚಾಮಗೋಚರನಾಗಿರುವನು. 'ನೆಳಲಿನ ಸುಳುಹಿಗೆ ಹೊಳೆವ ಹೆಜ್ಜೆಗಳಿಲ್ಲ, ಬೆಳಗಿಗೆ ಕತ್ತಲೆಯ ಮೊತ್ತವಿಲ್ಲ, ಮಳೆ ಹೊಯ್ದರೆ ಮಾರುತ ಅಂಬರವು ನೆನೆವುದಿಲ್ಲ. ಅಳಿವು ಉಳಿವು ಶರಣನಲ್ಲಿ ಹೊಳೆವುದೆಂತು?' 'ನಿಷ್ಪತ್ತಿ ಲಿಂಗೈಕ್ಯನಾದ ಆ ಶರಣನು 'ಪುಷ್ಪ ಪರಿಮಳದಂತೆ, ದರ್ಪಣದ ಚಾಯದಂತೆ ಅಪ್ಪು ವಾರಿಯಂತೆ, ತುಪ್ಪ ಕಂಪಿನಂತೆ, ಸಿಪ್ಪೆ ಹಣ್ಣಿನಂತೆ' ಅವಿನಾಭಾವ ಸಂಬಂಧದಿಂದಿರುವನು.[39] 'ಚಿನ್ನ ಬಣ್ಣದಂತೆ ಕಣ್ಣು ಕಪ್ಪಿನಂತೆ ಹೊನ್ನ ಮುದ್ರೆಯಂತೆ ಭಿನ್ನವಿಲ್ಲದಿರುತಿಹ' ಆ ಶರಣನ ನಿಲವನ್ನು 'ತನ್ನಿಂದ ತಾನಾದ ತನ್ಮಯಾಲಿಂಗವು ಚಿನ್ಮಯಾ ಪರಿಪೂರ್ಣ ತಾನಾದ ಘನ'ವೆಂದು ಮನವಾರೆ ಬಣ್ಣಿಸಿರುವನಾ ಅಪ್ಪಣ್ಣನು.[40]

ಯೋಗದ ಗರ್ಭವನ್ನು ಒಗಿದು ಶಕ್ತಿಸಂಪನ್ನಳಾಗಿ ಮಹಾಘನದ ನಿಲವನ್ನು ಕಂಡು ಹರುಷವುಕ್ಕಿ ಹಾಡಿರುವಳು ಲಿಂಗಮ್ಮ ತನ್ನ ಮಂತ್ರಗೋಪ್ಯವನ್ನು. ಶಿವಶಕ್ತಿಯ ಸಾಕ್ಷಾತ್ಕಾರವೇ ಆಕೆಯ ಸಾಧನೆಗೆ ಪ್ರಥಮ ಸೋಪಾನವಾಗಿದೆ. ಅಂಗ-ಲಿಂಗದ ಆಧಾರಗಳನ್ನು ಲಕ್ಷ್ಯದಲ್ಲಿರಿಸಿಕೊಂಡ ಆಕೆ ಅಂಗದ ಆಧಾರದಿಂದ ಹೊರಟು ಪರವಸ್ತುವಿನ ಆಧಾರದವರೆಗೆ ಮಡಲಿಟ್ಟು ಹರಿದ ಆ ಶಿವಶಕ್ತಿಯ ಪ್ರಭೆಯನ್ನು ಸಹಸ್ರಾರದಲ್ಲಿ ಕಂಡಿರುವಳು.

---

[35] ಅಪ್ಪಣ್ಣನ ಮಂತ್ರಗೋಪ್ಯ, ೧—೯. [36] ಅದೇ, ೨—೩. [37] ಅದೇ, ೨—೭. [38] ಅದೇ, ಪದ್ಯ ೩-೪. [39] ಅದೇ, ಪದ್ಯ ೩-೫. [40] ಅದೇ, ಪದ್ಯ ೩-೮.

ಮತ್ತೆ ಮೂಲಾಧಾರವೊತ್ತಿ ನೋಡುತ್ತಿರಲು
ಸುತ್ತಲೆತ್ತೆತ್ತ ನೋಡಿದರು ತಾನೆಯಾಗಿ |
ನೆತ್ತಿಯ ಅಮೃತವ ತುತ್ತಿಟ್ಟು ದಣಿಯುಂಡು
ಮುಕ್ತನಾಗಿಯೆ ನಿಂದ ಮಹಾಘನವನು ||[41]

ನಿರುಕಿಸಿ, ಆಕೆ ಹರುಷ ಪುಲಕಿತಳಾಗಿದ್ದಾಳೆ. ಆ ಬಳಿಕ ನವಚಕ್ರಗತ ಮಹಾಘನವನ್ನು ಕುರಿತು ಹಾಡುತ್ತ 'ತಂಗಾಳಿ ಪರಿಮಳವನೊಡಗೂಡಿದಾ ತೆರದಿ ತನ್ನಂಗದೊಳಹೊರಗೆ ತೆರಪಿಲ್ಲದಿರ್ದ ಕಂಗಳ ಕಪ್ಪಿನಂತೆ ಹಿಂಗದೊಂದಾದಲ್ಲಿ ಲಿಂಗ-ಅಂಗವೆಂಬುದೊಂದು ಬೇರಿಲ್ಲ;'[42] ಯಾಕೆಂದರೆ 'ಬಯಲು ಬಯಲಾಗಿರ್ದ ಭಾವಕ್ಕೆ ಎರಡಾಗಿ, ಶಿವಶಕ್ತಿ ಎಂಬೆರಡು ಉಭಯ ವಳಿದು, ಸ್ಥಿರವಾಗಿ ನಿಂದು ತಾ ಪರದೊಳಗೆ ಆಡುತ್ತಾ, ಪರಿಮಳದೊಳು ಬೆರೆದ ಮಹಾ ಘನವನು[43] ಏನೆಂದು ಉಪಮಿಸುವುದು?' ತುಪ್ಪ ಕಂಪಿನಂತೆ ಪುಷ್ಪ ಪರಿಮಳದಂತೆ, ಕರ್ಪುರವು ಜ್ಯೋತಿಯೊಳು ಅಡಗಿದಂತೆ, ದರ್ಪಣವನೆ ನೋಡಿ ತನ್ನ ಒಪ್ಪವನೆ ಕಂಡಂತೆ, ನಿಷ್ಪತಿಯನೊಳಕೊಂಡು ನಿಂತಿದೆ ಆ ಪರಮ ಘನವು;[44] ಅದನ್ನು ಕಂಡು ಆಕೆಯ ಭಾವ 'ಆನು ನೀನೆನಲಿಲ್ಲ, ನೀನು ನಾನೆನಲಿಲ್ಲ, ತಾನು ತಾನಾಗಿ ತನ್ಮಯವಾಯಿತು;' ಕೊನೆಯದಾಗಿ ಆಕೆ 'ಬೆರಸಿ ಬೆರಗಾಗಿ ಬೆರೆದಿಪ್ಪ ಘನದ ಚರಿತ್ರದಿರವನ್ನು ಹಾಡಿಹರ್ಷಂದಳೆದಿದ್ದಾಳೆ.' ಕಂಗಳು ಕರ-ಮನ-ಭಾವದೊಳಹೊರಗೆಲ್ಲ ಸರ್ವಾಂಗದೊಳಗೆ ಬೆರೆದ ಆ ಮಹಾಘನವು'[45] 'ನೋಟ ದೊಳಗೆ ನಿಂದು ನೋಡುವನು ತಾನಾಗಿ, ಊಟವನು ಉಂಡು ತಾ ಪರಿಣಮಿಸಿ, ಕೂಟ ದೊಳಗೆ ಕೂಡಿ ಕುಂಭಕದೊಳಗಾಡಿ, ತ್ರಾಟಕವ ದಾಂಟಿ ಇಹುದು.'[46]ಎಂಬುದನ್ನು ಆಕೆ ಪ್ರತ್ಯಕ್ಷಗೊಳಿಸಿಕೊಳ್ಳುವಳು.

ಕಂಗಳಲ್ಲಿಯೆ ನಿಂದು ಕವಲುವಟ್ಟೆಯ ತಿಳಿದು
ಎನ್ನಂಗದೊಳಹೊರಗೆಲ್ಲ ತಾನೆಯಾಗಿ |
ಸಂಗ ಸಂಯೋಗದಲಿ ಹಿಂಗಿದ್ದ ನೆನವಿಲ್ಲ ಪ
ರಾಂಗದಲ್ಲಿಯೆ ನಿಂದ ಮಹಾಘನವನು ||[47]

ಹೀಗೆ ಆಕೆ ಬಗೆಬಗೆಯಾಗಿ ಕೊಂಡಾಡಿದರೂ ತೀರದೆ

ಜ್ಯೋತಿ ಜ್ಯೋತಿಯ ಮುಟ್ಟಿ ಪರಂಜ್ಯೋತಿಯಾದಂತೆ
ಅಂದಿಂದು ಪರಮಾತ್ಮನೊಳಗೆ ನೀನೆಯಿರ್ದು
ಚಿಜ್ಜ್ಯೋತಿಯಾದಂತೆ ಚಿತ್ಪ್ರಕಾಶವ ಬೀರಿ
ಪ್ರಜ್ವಲಿಸಿ ಪ್ರಭೆಯಾಗಿ ಪ್ರಕಾಶವಾದ ಘನವ ||[48]

ನೋಡಿ ನೋಡಿ ಹಾರೈಸಿ ಆದರ ನಿಲವಿಗೆ ವ್ಮೈಯಿಕ್ಕಿ ವ್ಮೈಮರೆಯುವಳು.

ಅಪ್ಪಣ್ಣ ಮತ್ತು ಲಿಂಗಮ್ಮ ಇವರ ಮಂತ್ರಗೋಪ್ಯಗಳ ತುಲನಾತ್ಮಕ ವಿವೇಚನೆ ಯಿಂದ ಇವುಗಳ ರಚನೆ, ಬಂಧ, ಶೈಲಿ, ಶಬ್ದಸಂಪತ್ತಿ, ವಿಚಾರಧಾರೆ, ಭಾವಲಹರಿ ಈ ಮುಂತಾದವು ಗಳಲ್ಲಿ ಒಂದು ವಿಧವಾದ ಹೊಂದಾಣಿಕೆಯಿರುವುದನ್ನು, ಒಂದು ಬಗೆಯ ಸಾಮರಸ್ಯ ಒದಗಿರುವು ದನ್ನು ಮನಗಾಣಬಹುದಾಗಿದೆ. ಸತಿಪತಿಗಳೊಂದಾದ ಭಕ್ತಿಯ ಭಾವನೆಯಲ್ಲಿ ಜ್ಞಾನದ ಕೆಚ್ಚಿನಲ್ಲಿ ವೈರಾಗ್ಯದ ರಕ್ಷಾಕವಚದೊಡನೆ ಆಧಾರ ಶುದ್ಧಿ—ಅನುಭಾವಸಿದ್ಧಿಯ ಮೆರುಗನ್ನು

---

41 ಲಿಂಗಮ್ಮನ ಮಂತ್ರಗೋಪ್ಯ, ೧-೯. 42 ಅದೇ, ಪದ್ಯ ೨-೯. 43 ಅದೇ, ಪದ್ಯ ೬-೩. 44 ಅದೇ, ಪದ್ಯ ೨-೧೦. 45 ಅದೇ, ಪದ್ಯ ೨-೧೧. 46 ಅದೇ, ಪದ್ಯ ೩-೩. 47 ಅದೇ, ಪದ್ಯ ೩-೫. 48 ಅದೇ, ಪದ್ಯ ೩-೯.

ಪಡೆದು ತೇಲಿಬಂದ ಈ ಮಂತ್ರಗೋಪ್ಯಗಳು ಶಿವಶರಣ ಸಾಹಿತ್ಯದಲ್ಲಿ, ಅವರ ಸಮರಸದ ಸಮನ್ವಯ ಜೀವನದಲ್ಲಿ ಒಂದು ಎತ್ತರದ ಸ್ಥಾನವನ್ನು ಪಡೆಯುತ್ತಿವೆ.

'ಮಂತ್ರಗೋಪ್ಯ' ಎಂದು ಈ ಕೃತಿಗಳಿಗಿರುವ ಹೆಸರು ಅಧ್ಯಾತ್ಮದೃಷ್ಟಿಯಿಂದ ಔಚಿತ್ಯ ಪೂರ್ಣವಾಗಿದೆ. ಪದ್ಯರೂಪವಾಗಿ ಸಾಮಾನ್ಯವಾಗಿ ಪ್ರತಿಂಯೊಂದರಲ್ಲಿ ೨೭ ಪದ್ಯಗಳಿರುವ ಈ ಮಂತ್ರಗೋಪ್ಯಗಳಲ್ಲಿ ಹೊಳೆದು ಬಂದಿರುವ ಅನುಭವಯುತವಾದ ಈ ವಿಚಾರಗಳು ಶಿವಶರಣರಲ್ಲಿ ಕಂಡುಬರುತ್ತಿವೆಯಾದರೂ ವಚನಗಳ ಸಾರವನ್ನೆ ಸಂಗ್ರಹಿಸಿ ಸೂತ್ರರೂಪವಾಗಿ ರಚಿಸಿ ನೆನಪಿನಲ್ಲಿ ರಿಸಿಕೊಳ್ಳಲೂ, ರಾಗ ತಾಲಬದ್ಧವಾಗಿ ಅವನ್ನು ಪಠಿಸುತ್ತ ಮನನಮಾಡಿಕೊಳ್ಳಲೂ ಅನುಕೂಲ ವಾಗುವಂತೆ ಯೋಜಿಸಿ ಕೊಟ್ಟಿರುವದು ಈ ಮಂತ್ರಗೋಪ್ಯಗಳ ಒಂದು ವೈಶಿಷ್ಟ್ಯವಾಗಿದೆ. ಮತ್ತು ಇವುಗಳಲ್ಲಿಯೂ ಒಂದು ಸ್ಥಲಕಟ್ಟಿನ ಸಂಯೋಜನೆಯಿರುತ್ತದೆ ಎಂಬುದು ಸ್ಪಷ್ಟವಿದೆ. ಅಂತಃಕರಣಗಳಲ್ಲಿ ತಿರುತಿರುಗಿ ಮಾಡುವ ಸ್ವರೂಪಚಿಂತನವನ್ನು ಕಾಪಾಡುವದೂ ಪರವಸ್ತು ವಿನ ನಿಲುವನ್ನು ತಿಳಿಸಿಕೊಡುವುದೂ, ಸರ್ವಕ್ಕೆಲ್ಲ ಆಧಾರಭೂತವಾಗಿರುವುದೂ ಯಾವು ದಿದೆಯೋ ಅದು ಮಂತ್ರವೆನಿಸುವುದು. ಸ್ವರೂಪ ಚಿಂತನವೂ ಪರವಸ್ತುವಿನ ಜ್ಞಾನವೂ ಮಂತ್ರ ವನ್ನು ಬೀದಿಗೆ ನಿಂತು ಕೂಗಿದರೆ ಆಗುವದಿಲ್ಲ. ತನ್ನೊಳಗೆ ಅದನ್ನು ಗೌಪ್ಯವಾಗಿ ಧ್ಯಾನಿಸಿದರೆ ಆಗುತ್ತದೆ. ಈ ದೆಸೆಯಿಂದಲೇ ಮಾತು ಮೌನವಾದಾಗ ಮಂತ್ರವೆನಿಸುವದು ಎಂದು ಹೇಳು ವದುಂಟು. ಮಂತ್ರಕ್ಕೆ ಮೂಲವಾದುದು ನಾದ. ನಾದವು ಪ್ರಾಣ ಮನ ಭಾವಗಳನ್ನು ಬಳಸಿ ಕೊಂಡು ರೂಪುಗೊಳ್ಳುತ್ತದೆ. ಶಿವ-ಶಕ್ತಿಮಯವಾದ ಮಂತ್ರವು ಅವ್ಯಕ್ತವಾದ ನಾದದೊಡನೆ ಮೂಲಾಧಾರದಿಂದ ಉಗಮಗೊಳ್ಳುತ್ತದೆ. ಹೀಗೆ ಉಗಮಗೊಂಡ ಅದು ಭಾವ ಮನ ಪ್ರಾಣ ಗಳಲ್ಲೆಲ್ಲ ವ್ಯಾಪಿಸಿಕೊಂಡು ಸ್ಪಂದನದಿಂದ ಶಬ್ದದ ಸ್ಥೂಲರೂಪಕ್ಕೆ ತಿರುಗುತ್ತದೆ. ಶಬ್ದವು ನಾದದ ತೀರಾ ಸ್ಥೂಲವಾದ ರೂಪವಾಗಿದೆ. ಆಧಾರದಿಂದ ನಾಭಿಯ ಮುಖಾಂತರವಾಗಿ ಮೇಲೆ ಮೇಲೆ ಏರುವ ನಾದವು ಹೃದಯಸ್ಥಾನಕ್ಕೆ ಹೃದಯದಿಂದ ಕಂಠಸ್ಥಾನಕ್ಕೆ, ಕಂಠದ ಮಾರ್ಗವಾಗಿ ಮುಖಕ್ಕೆ ಮುಟ್ಟಿದಾಗ ಶಬ್ದವಾಗಿ ಪರಿಣಮಿಸುವದು. ಪ್ರಾಣವ್ಯಾಪಾರದ ಗತಿಗನುಸರಿಸಿ ಮಾಡಿಕೊಳ್ಳುವ ಸ್ಪಂದನದಿಂದ ಗುರುತಿಸಲಾದ 'ಹಂಸ' ಮಂತ್ರದಿಂದ ಅಧ್ಯಾತ್ಮದಲ್ಲಿ ಒಂದು ಮಂತ್ರಶಾಸ್ತ್ರವೇ ಏರ್ಪಟ್ಟಿರುತ್ತದೆ. ಉಸಿರಿನ ಎಡೆಯಾಟಕ್ಕೆ ಅನುಸಾರವಾಗಿ ಮನವೂ ಸಹ ಒಂದೇ ಸಮನೆ ಏನಾದರೊಂದನ್ನು ಚಿಂತಿಸುತ್ತಿರುತ್ತದೆ. ಮನಸ್ಸಿನ ಈ ಕಾರ್ಯವು ಸಿಕ್ಕಾಬಟ್ಟೆಯಾಗಿ ಸಾಗದೆ ಒಂದು ಕ್ರಮಬದ್ಧವಾದ, ಒಂದು ತಾಲಲಯಬದ್ಧವಾದ ರೀತಿಯಲ್ಲಿ ಸಾಗುವದಾದರೆ ಅದರಲ್ಲಿ ಒಂದು ಅದ್ಭುತವಾದ ಸಾಮರ್ಥ್ಯವು ಮೂಡಿ ಕೊಳ್ಳುತ್ತದೆ. ಹರಿಯುವ ನೀರಿಗೆ ಆಣೆಕಟ್ಟನ್ನು ಕಟ್ಟಿ ವಿದ್ಯುತ್‌ಶಕ್ತಿಯನ್ನು ನಿರ್ಮಿಸಿ ಕೊಳ್ಳುವಂತೆ ಈ ಮನಸ್ಸಿನ ಸಾಮರ್ಥ್ಯವನ್ನು ಕಂಡುಕೊಳ್ಳಬೇಕು. ಮನಸ್ಸಿಗೆ ಆಗುವ ಅನಿಸಿಕೆಗಳು, ಅದರ ಮೇಲಾಗುವ ಪ್ರಭಾವ ಮುದ್ರೆಗಳು—ಅವು ಇಂದಿನ ಜೀವನಕ್ಕೆ ಸಂಬಂಧ ಪಟ್ಟವುಗಳಿರಲಿ, ಇಲ್ಲವೆ ಹಿಂದಿನ ಜನ್ಮಗಳಿಗೆ ಸಂಬಂಧಿಸಿದವುಗಳಿರಲಿ—ಯಾವ ಒಂದು ಉಗ್ರಾಣದಲ್ಲಿ ಕೂಡಿಬಿದ್ದು ಅಲ್ಲಿಯೇ ಉಳಿದು ಬಿಡುವವೋ ಅದಕ್ಕೆ ಭಾವ ಎಂದು ಹೇಳಲಾಗುತ್ತದೆ. ಮನಸ್ಸಿನ ಹಂಬಲು ಹರಿದಾಟಗಳಿಗೆ, ಚಿಂತನೆ ಭ್ರಾಂತಿಗಳಿಗೆ ಒಟ್ಟಾರೆ ಅದರಲ್ಲಿ ಮೂಡುವ ವಿಚಾರ ವೀಚಿಗಳಿಗೆಲ್ಲ ಈ ಭಾವವು ಮೂಲ ಮಾತೃಸ್ಥಾನವಾಗಿರುತ್ತದೆ. ಸಾಧನೆಯಿಂದ ಈ ಭಾವವೂ ಪರಿಶುದ್ಧವಾಗಬೇಕು. ಅಶುದ್ಧ ಇಂದ್ರಿಯ ಮನಗಳಿಂದ ಒದಗುವ ಮಾಲಿನ್ಯವನ್ನು ಕಂಡುಕೊಳ್ಳುವದೇನಸಾಧ್ಯವಾಗಲಿಕ್ಕಿಲ್ಲ. ಆದರೆ ಭಾವದಲ್ಲಿ ಸುಪ್ತವಾಗಿರುವ ಮಲಿನ ಸಂಸ್ಕಾರಗಳನ್ನು ಕಂಡುಕೊಂಡು ಅದನ್ನು ಪರಿಶುದ್ಧಗೊಳಿಸುವದು ಒಂದು ಮಹಾಸಾಧನೆಯೇ ಆಗಿದೆ.

ಉಸಿರಿನ ಎಡೆಯಾಟವೂ ಅಥವಾ ಶ್ವಾಸಗತಿಯೂ, ಇಂದ್ರಿಯಗಳ ಚಾಂಚಲ್ಯವೂ ಮನಸ್ಸಿನ ಸಂಕಲ್ಪ-ವಿಕಲ್ಪವೂ ಭಾವದ ಒಯಕೆಯೂ ಏಕಕಾಲಕ್ಕೆ ಯಾವ ಒಂದು

ಸಾಧನೆಯಿಂದ ನಿಗ್ರಹಿಸಲ್ಪಟ್ಟ ಶುದ್ಧ ಸಂಸ್ಕಾರವುಳ್ಳವುಗಳಾಗುವವೋ ಅದನ್ನು ನಿರೂಪಿಸುವದು ಮಂತ್ರಗೋಪ್ಯದ ಉದ್ದೇಶವಾಗಿರುತ್ತದೆ. ಶಿವಶರಣನು ಅರ್ಥಾತ್ ಸಾಧಕನು ಕರ-ಮನ-ಭಾವಗಳ ಏಕಕಾಲದ ಪರಿಶುದ್ಧಿಗಾಗಿ ಇರಿಸಿಕೊಂಡ ಲಿಂಗದಲ್ಲಿ ದೃಷ್ಟಿಯು ಸ್ಥಿರೀಕರಣ ಹೊಂದುತ್ತ ನಡೆದಂತೆ ಶ್ವಾಸಗತಿಯು ತಾಲಬದ್ಧವಾಗುವದು; ಶ್ವಾಸಗತಿಗೆ ಅನುಗುಣವಾಗಿ ಅನವರತವೂ ಮಂತ್ರೋಚ್ಚಾರವೂ ಎಚ್ಚರಗುಂದದಂತೆ ನಡೆಯುವುದರಿಂದ ಅಂದರೆ ಶ್ವಾಸದ ಆರೋಹಣ ಅವರೋಹಣ ಕ್ರಮದಲ್ಲಿ ಮಂತ್ರವನ್ನು ಸ್ಥಾಪ್ಸಮಾಡಿಕೊಳ್ಳುವುದರಿಂದ ಮನವು ಅಧೋಗತಿಯಿಂದ ಊರ್ಧ್ವಗತಿಯುಳ್ಳದೂ, ಚಾಂಚಲ್ಯವನ್ನು ಕಳೆದುಕೊಂಡು ಸ್ಥಿರವೂ, ಅಶಾಂತತೆಯನ್ನು ನೀಗಿಕೊಂಡು ಪ್ರಶಾಂತವೂ ಆಗಿ ಜ್ಞಾನೋದಯಕ್ಕೆ ಅವಕಾಶವನ್ನು ಮಾಡಿಕೊಡುವದು. ಇದರಿಂದಾಗಿ ಮನವು ಘನಮನವೆನಿಸಿಕೊಳ್ಳುವದು. ಘನಮನವು ಸಾಧಿಸಿದಾಗಲೆ ಜ್ಞಾನೋದಯಕ್ಕೆ ಮೊದಲಾಗುವದು. ಘನಮನವು ಅಥವಾ ಉನ್ಮನವು ಸಾಧಿಸಿತೆಂದರೆ ಭಾವಶುದ್ಧಿಗಾಗಿ ಪ್ರತ್ಯೇಕವಾಗಿ ಪ್ರಯತ್ನ ಮಾಡುವುದಿರುವುದಿಲ್ಲ.

ಉನ್ಮನದ ಸಾಧಕನು ಅಂತರ್‌ಬಾಹ್ಯ ಇಂದ್ರಿಯಗಳಲ್ಲಿ ಲಿಂಗಭಾವನೆಯನ್ನು ತುಂಬಿ ಅಲ್ಲಲ್ಲಿ ಮಂತ್ರದ ನೆನಹನ್ನು ದೃಢಗೊಳಿಸುತ್ತಾನೆ. ವೀರಶೈವದ ಷಟ್‌ಸ್ಥಲ ಭಕ್ತಿಯ ಅನುಭವದಿಂದ ಆಧಾರದಿಂದ ಆಜ್ಞೆಯವರೆಗಿನ ಶಕ್ತಿಯ ಕೇಂದ್ರಗಳಲ್ಲಿ ಹುದುಗಿದ ಅಸಾಮಾನ್ಯವಾದ ಶಕ್ತಿಯನ್ನು ಜಾಗ್ರತಗೊಳಿಸಿಕೊಂಡು, ಸಾಧಕನು ಸಹಸ್ರಾರ, ಶಿಖಾ ಮತ್ತು ಪಶ್ಚಿಮ ಎಂಬ ಕೇಂದ್ರಗಳಲ್ಲಿ ನಿಗೂಢವಾದ ಸಾಮರ್ಥ್ಯದತ್ತ ಗಮನವಿರಿಸಿಕೊಳ್ಳುವನು. ಅದನ್ನು ಅಂಗವಿಸಿಕೊಳ್ಳಲು ಆ ಸಾಧಕನು ನಿರವಯಸ್ಥಲದ ಕೇವಲ ಜ್ಞಾನಾವಸ್ಥೆಯ ಮೆಟ್ಟಲನ್ನೆ ಸಾಧನೆಗೆಯ್ಯುವನು. ಈ ನಿರವಯದ ಸಾಧನೆಯು ಸುಲಭವಾಗಲೆಂದು ಪರಂಜ್ಯೋತಿ ಸ್ವರೂಪವಾದ ಲಿಂಗಭಾವನೆ ಬೆರೆಸಿ ಉನ್ಮನಿಯ ಉನ್ನತವಾದ ನಿಲವನ್ನು ಕಾಣುವನಾತನು. ಅಲ್ಲಿ ಯಾವ ವಿಧವಾದ ಉಲುಹಿಗೂ ಅವಕಾಶವಿಲ್ಲದೆ, ನಾನು ನೀನು ಎಂಬುದಕ್ಕೆ ತೆರಹಿಲ್ಲದೆ ಕೇವಲ ತಾನೆ ತಾನಾದ ಅವಸ್ಥೆಯು ಬೆಳಗುವದು. ಒಳಹೊರಗು ಸುತ್ತೆಲ್ಲ ಸ್ವಯಂಪ್ರಭೆಯೇ ತೋರುವದು ಆ ಸಿದ್ಧನಿಗೆ ಸಾಧನೆಯ ಅಂತಿಮ ಅವಸ್ಥೆಯಲ್ಲಿ. ಮಂತ್ರಗೌಪ್ಯವ ಸಾಧಿಸುವಲ್ಲಿ ಸಾಧಕನಿಗೆ ಲಿಂಗಾನುಭವ ಮತ್ತು ಲಿಂಗೈಕ್ಯ ಈ ಎರಡೂ ಅವಸ್ಥೆಗಳು ಬಹಳ ಪ್ರಾಮುಖ್ಯವಾಗಿರುತ್ತವೆ; ಮಹತ್ವವುಳ್ಳವುಗಳೂ ಆಗಿರುತ್ತವೆ. ಇವುಗಳಲ್ಲಿ ಮೊದಲಿನದು ಷಟ್‌ಸ್ಥಲದ ಆಚರಣೆಯಲ್ಲಿ ಉತ್ತರೋತ್ತರವಾಗಿ ಬೆಳೆಯುವ ಭಕ್ತಿಯ ಅನುಭವದಲ್ಲಿ, ಇನ್ನೊಂದು ನಿರವಯಸ್ಥಲದ ನಿಲವಿನಲ್ಲಿ ಅವ್ಯಾಹತವಾಗಿ ಬೆಳಗುವ ಜ್ಞಾನಾನುಭೂತಿಯಲ್ಲಿ, ಆನಂದದ ಪರಮ ಪ್ರಕಾಶದಲ್ಲಿ ಕಾಣಿಸಿಕೊಳ್ಳುತ್ತದೆ. ಸನ್ನಿವೇಶದ ಸಮಗ್ರತೆ, ಸಾಧಕನ ಪಾತ್ರತೆ--ಸಾಧನೆಯ ತೀಕ್ಷ್ಣತೆ ಇವನ್ನು ಅವಲಂಬಿಸಿ ಲಿಂಗಾನುಭವ ಲಿಂಗೈಕ್ಯ ಅವಸ್ಥೆಗಳಲ್ಲಿ ತರಗತಿಗಳನ್ನು ಗುರುತಿಸಬಹುದು. ಈ ಕಾರಣದಿಂದಾಗಿ ಷಟ್‌ಸ್ಥಲದ ವಿವರಣೆಯಾಗಲಿ, ಲಿಂಗೈಕ್ಯ ಇಲ್ಲವೆ ನಿರವಯದ ವರ್ಣನೆಯಾಗಲಿ ಒಬ್ಬರದು ಇನ್ನೊಬ್ಬರದಕ್ಕಿಂತ ಭಿನ್ನವಾಗಿರಬಹುದು. ಆದರೂ ಅಲ್ಲಿ ಒಂದು ವಿಧವಾದ ಸಮನ್ವಯವನ್ನು ಒಂದು ವಿಧವಾದ ಸುಸಂಬದ್ಧತೆಯನ್ನು ಗುರುತಿಸಬಹುದು. ಇವೆಲ್ಲ ಪರಿಪೂರ್ಣವಾದ ಆ ಅವಸ್ಥೆ ಆ ನಿಲವುಗಳನ್ನು ಅಂಶಮಾತ್ರವಾಗಿಯಾದರೂ ತಿಳಿಸಲೆತ್ನಿಸುತ್ತಿವೆ ಅಷ್ಟೆ! ಗೌಪ್ಯವಾಗಿದ್ದ ಮಂತ್ರಮಯವಾದ ಇಂತಹ ಅನುಭವವು ಅಡಗಿರುವುದು ಮಂತ್ರಗೋಪ್ಯಗಳಲ್ಲಿ. ಇಂತಹ ಅನುಭವವು ತೆರೆದು ತೋರುವುದು ಮಂತ್ರಗೋಪ್ಯದ ಸಾಧಕನಿಗೆ. ಈ ದೆಸೆಯಿಂದ ಈ ಗ್ರಂಥಗಳನ್ನು ಮಂತ್ರಗೋಪ್ಯವೆಂದು ಕರೆದಿರುವುದು ತುಂಬಾ ಉಚಿತವಾಗಿದೆ.

**ವೀರಭದ್ರಪ್ಪ ಕೊಪ್ಪಳ**

# ಬೆಳಗುತ್ತಿಯ ಸಿಂದರು

“ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರಂ ಕರಹಾಟಪುರವರಾಧೀಶ್ವರಂ ಮಾಳತೀದೇವೀಲಬ್ಧವರಪ್ರಸಾದಾಸಾದಿತ ಸಮಸ್ತ ಮಹೀಮಂಡಳಂ ವಿಜಯಲಕ್ಷ್ಮೀಕರ್ಣ್ಣಕುಂಡಳಂ ನೀಳಧ್ವಜ ವಿರಾಜಮಾನದಾನಕಾನೀನ ನುಲ್ಲಳಿತೂರ್ಯ್ಯನಿರ್ಗ್ಘೋಷಣಂ ಗುಣರತ್ನಭೂಷಣಂ ಸಿಂದಕುಳಕಮಳಮಾರ್ತ್ತಂಡಂ ವಿಜಯದೋರ್ದ್ದಂಡಂ ಫಣಿರಾಜವಂಶ ಸುಜನಾವತಂಸಂ ಬ್ಯಾಘ್ರಮೃಗಲಾಂಛನಂ ವಿನಿಯೋಗಕಾಂಚಸಂ ಶೌರ್ಯ್ಯಪಾರಾಯಣಂ ವೈರಿನಾರಾಯಣಂ ಅರಸಂಕ ಕಱಗಸಂ ಬಿರುದಱಂಕುಸಂ ವೈರಿವನದಾವ ಸಿಂದರದೇವಂ ನಿಡುದೋಳಸಿಂದಂ . . . . .” ನಾಮಾದಿ ಸಮಸ್ತ ಪ್ರಶಸ್ತಿಗಳನ್ನು ಪಡೆದಿದ್ದ ಸಿಂದರು ಈಗಿನ ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಬೆಳಗುತ್ತಿಯ ಗ್ರಾಮದ ಸುತ್ತುಮುತ್ತಲಿನ ಪ್ರದೇಶಗಳ ಆಧಿಪತ್ಯ ವಹಿಸಿಕೊಂಡು ಸುಮಾರು ಮೂರು ಶತಮಾನಗಳವರೆಗೆ ಕರ್ನಾಟಕದ ಅರಸುಗಳ ಅಧೀನದಲ್ಲಿದ್ದ ಮಾಂಡಲಿಕರು.

ಈ ಸಿಂದರೇ ಅಲ್ಲದೆ ಕರ್ನಾಟಕದ ವಿವಿಧ ಭಾಗಗಳಲ್ಲಿ ಅಧಿಕಾರದಲ್ಲಿದ್ದ ಬಾಗಡಗೆಯ (ಈಗಿನ ಬಿಜಾಪುರ ಜಿಲ್ಲೆಯ ಬಾಗಲಕೋಟೆ) ಸಿಂದರು, ಯರಂಬರಗೆಯ (ಈಗಿನ ಯಲ್ಬುರ್ಗ) ಸಿಂದರು, ಕುರುಗೋಡಿನ (ಈಗಿನ ಬಳ್ಳಾರಿಜಿಲ್ಲೆಯಲ್ಲಿನ ಕುರುಗೋಡು) ಸಿಂದರು—ಇವರುಗಳು ಶಿಲಾಶಾಸನಗಳ ಮೂಲಕ ಪ್ರಸಿದ್ಧರಾಗಿರುವರು. ಇವರೆಲ್ಲರೂ ನಾಗವಂಶಕ್ಕೆ ಸೇರಿದವರೆಂದು ಅವರ ಶಾಸನಗಳಿಂದ ನಮಗೆ ತಿಳಿದು ಬರುತ್ತದೆ.

ಬಿಜಾಪುರ ಜಿಲ್ಲೆಯ ಭೈರನಮಟ್ಟಿ ಗ್ರಾಮದಲ್ಲಿ ದೊರೆತ ಶಾಸನವೊಂದರಲ್ಲಿ[1] ಈ ವಂಶದ ಬಗ್ಗೆ

ಧರಣೇಂದ್ರಾಹೀಶ್ವರಂ ಮಾನವಭವನುತ ಭೂಲೋಕಮಂ ನೋೞ್ಪೆನೆಂದಾ-
ದರಱಿಂ ತತ್ಸೈನ್ಯಮಂ ಪಿಂತಿರಿಸಿ ವನಿತೆಯುಂ ತಾನುಮಾದಕ್ಕಱಿಂದಂ
ಬರೆ ಗರ್ಭ್ಭಂ ತೋಱೆ ತದ್ವಲ್ಲಭೆಗೆ ಪಡೆದಹಿಚ್ಛತ್ರದೊಳು ಪುಟ್ಟಿದಂ ಭಾ-
ಸುರತೇಜೋದ್ಭಾಸಿ ಸಿಂಧೂನದಿಯ ಕುಱುವದೊಳು ಸಿಂದನೆಂಬಂ ಕುಮಾರ ||

ಎಂದು ಹೇಳಲಾಗಿದೆ. ಹೀಗೆ ಭೂಲೋಕದ ಮಾನವರನ್ನು ನೋಡಲು ಬಂದಾಗ ನಾಗರಾಜನಿಗೆ ಅಹಿಚ್ಛತ್ರದಲ್ಲಿ ಪುತ್ರೋತ್ಸವವಾಗಲು, ಇದರಿಂದ ಬೆಚ್ಚಳಿಸಿದ ನಾಗೇಂದ್ರನು ಆ ಕುಮಾರನನ್ನು

ಪಡೆದು ವಿಮೋಹಮಂ ಪುಲಿಗಹೀಶ್ವರನೀ ಶಿಶುವಂ ಸುರಕ್ಷಿತಂ
ನಡಪೆನೆ ಪನ್ನಗಾಧಿಪತಿಯೊಳು ಬೆಸವೆತ್ತು ಮಹಾಮಹೀಶನಂ
ನಡಪೆನೆ ಕುಮಾರಕಂ ಬಳೆದಿಳಾಧಿಕ ಶೌರ್ಯ್ಯದ ದೀರ್ಘಬಾಹುವಂ
ಪಡೆದನೊ ಸನ್ದದ ಸಿನ್ದವಿಷಯಾಧಿಪನುನ್ನತ ವೀರಶಾಸನ ||

ಹೀಗೆ ಪುಲಿಯ ಅಪೇಕ್ಷೆಯಮೇರೆಗೆ ನಾಗೇಂದ್ರನ ಕೃಪೆಯಿಂದಾಗಿ ಅವನ ಮಗನು ದೀರ್ಘಬಾಹುಗಳನ್ನು ಪಡೆದು ‘ನಿಡುದೋಳ್‌ಸಿಂದ’ ಎನಿಸಿಕೊಂಡನು. ಈ ನಿಡುದೋಳ ಸಿಂದನೇ ಸಿಂದವಂಶದ ಮೂಲಪುರುಷನೆಂದು ಭೈರನಮಟ್ಟಿಯ ಶಾಸನದಲ್ಲಿರುವ ಈ ಕೆಳಗಿನ ಪದ್ಯ ನಿರೂಪಿಸುತ್ತದೆ:

[1] *Epigraphia Indica*, Vol. III, p. 130.

ಭರದಿಂದಂ ನಿಡುದೋಳಸಿಂದ ವಿಭು ಕಯ್ಯಮುಚ್ಚಿ ಕಣ್ಣಂ ಕಡಂ-
ಬರಾಧೀಶಪ್ರಿಯದಿಂ ತನೂಭವನೆಯನೀಯಲು ಕೊಂಡು ತಾನಾ ಮನೋ-
ಹರೆಯೊಳು ಕ್ರೀಡಿಸುತ್ತಿಪ್ಪಿನಂ ತನಯರಾದಮ್ಮೂರ್ವರಾ ಮೂವರಿಂ
ಪರೆದತ್ಯುನ್ನತಸಿಂದವಂಶಮಹಿಭ್ರಿತ್ಸಂಜಾತರೀಲೋಕದೊಳು ||

ಈ ವಂಶದ ಮೂವತ್ತೊಂದುಮಂದಿ ಬಾಗಡಗೆಯಲ್ಲಿ ಅಧಿಕಾರ ನಡೆಸುತ್ತಿದ್ದು ಅವರ ಬಳಿಕ ಸಿಂದನೆಂಬುವನು ಆ ವಂಶದಲ್ಲಿ ಜನಿಸಿದನೆಂದು ಈ ಶಾಸನ ತಿಳಿಸುತ್ತದೆ. ಬಾಗಡಗೆಯ ಸಿಂದರು ಈ ವಂಶದ ಮೊದಲಿಗರೆಂದು ತೋರುತ್ತದೆ.

ಆದರೆ ಈ ಸಿಂದರಿಗೂ ಬೆಳಗವತ್ತಿಯ ಸಿಂದರಿಗೂ ಸ್ವಲ್ಪ ವ್ಯತ್ಯಾಸವಿದ್ದಂತೆ ಕಂಡು ಬರುತ್ತದೆ. ಬೆಳಗವತ್ತಿಯ ಸಿಂದರ ಮೂಲಪುರುಷನೂ ಸಹ ನಿಡುದೋಳಸಿಂದನೇ. ಆದರೆ ಇವನ ಬಗ್ಗೆ ಬೆಳಗವತ್ತಿಯವರ ಶಾಸನಗಳಲ್ಲಿ ಹೇಳಲಾಗಿರುವ ಕತೆಗೂ ಭೈರಸಮಟ್ಟಿ ಶಾಸನದಲ್ಲಿ ನಿರೂಪಿಸಲಾಗಿರುವ ಕತೆಗೂ ವ್ಯತ್ಯಾಸವಿದೆ. ಬೆಳಗವತ್ತಿ (ಬೆಳಗುತ್ತಿ) ಗ್ರಾಮದಲ್ಲಿಯೇ ದೊರೆತ ಶಾಸನದಲ್ಲಿ[2] ಈ ಕತೆಯನ್ನು ಹೀಗೆ ಹೇಳಲಾಗಿದೆ:—

ಶಿವಸಿಂಧುಪ್ರಿಯ ಸಂಗದಿಂದೊಗೆದನೋರ್ವ್ವಂ ಕುಮಾರಂ ಮಹೋ-
ತ್ಸವದಿಂದಂ ಗಿರಿಜಾಮನೋರಮಣನಂದನ್ವರ್ತ್ಥಮಪ್ಪಂತು ಸೈ-
ನ್ಧವನೆ . . . . . . ದಿಟನೊಲ್ದು ಪೆಸರಂ ತಾನಳ್ಕಱಿಂ ಧಾರಿಣೀ
ಧವನಾಗೆಂದುರಗಾಧಿರಾಜವಿಳಸಂ ದಕ್ಷಾಸಮೇತಂ ಭವಂ ||

ಈ ಪದ್ಯ ಹರಿಹರದ ಶಾಸನದಲ್ಲೂ[3] ಇತ್ತೀಚೆಗೆ ಧಾರವಾಡಜಿಲ್ಲೆಯ ಹಿರೇಕೆರೂರು ತಾಲ್ಲೂಕಿನ ಹಳ್ಳೂರಿನಲ್ಲಿ ನನಗೆ ದೊರೆತ ಶಾಸನವೊಂದರಲ್ಲಿಯೂ ಸ್ವಲ್ಪ ಮಾರ್ಪುಗೊಂಡಿದೆ. ಅದು ಹೀಗಿದೆ:

ಶಿವಸಿಂಧು ಸಂಗದಿಂದು
ದ್ಭವಿಸಿದನೊಬ್ಬ್ರ್ಕುಮಾರನಾತನ ಪೆಸರಂ
ಭವನಿಟ್ಟನೊಲ್ದು ಸೈ
ನ್ಧವನೆನ್ದುರಗಾಧಿರಾಜ ರಕ್ಷಾಸಹಿತಂ ||

ಹೀಗೆ ಶಿವ ಮತ್ತು ಸಿಂಧು ಇವರಿಗೆ ಜನಿಸಿದ ಕುಮಾರನಿಗೆ ಭವನು ಸೈನ್ಧವನೆಂಬ ಅನ್ವರ್ತ್ಥ ನಾಮವನ್ನಿಟ್ಟನಂತೆ. ಈ ಕುಮಾರನು ಬೆಳೆದ ರೀತಿಯೂ ಅದ್ಭುತವಾದದ್ದೇ! ತನ್ನ ಕುಮಾರನು ವೀರನೂ ಧೀರನೂ ಆಗಬೇಕಾದರೆ ಸಾಧಾರಣ ಮಾನವರಂತೆ ಬೆಳೆಯಬಾರದೆಂದು ಗೌರೀಪತಿಗೆ ತೋರಿತು.

ಪುಲಿವಾಲಂ ಕುಡಿದಲ್ಲದೆ
ಕಲಿಯಾಗಂ ಪುತ್ರನಿವನೆನ್ದು ಗೌರೀಪತಿ ತ-
ನ್ನೊಲವಿಂ ಪುಲಿಯಂ ನಿರ್ಮ್ಮಿಸೆ
ಪುಲಿವಾಲಂ ಕುಡಿದು ಬೆಳೆದನಾ ಶಿಶು ಧರೆಯೊಳು ||

ಹೀಗೆ ಬೆಳೆದ ತನ್ನ ಕುಮಾರನನ್ನು "ಆ ಪರಮೇಶ್ವರಂ ಶ್ರೀಮಾಳತೀದೇವಿಯ ಸಂಗ್ರಾಮಕ್ಕೆ ಸಹಾಯೆಯಾಗೆಂದು ಬೆಸಸಿ ನಿಡುದೋಳಸಿಂದನೆಂದೆರಡನೆಯ ಪೆಸರಂಕುಡೆ" ಅದನ್ನು ಪಡೆದ ನಿಡುದೋಳಸಿಂದನು,

---
[2] *Epigraphia Carnatica*, Vol. VII, Hl 50. [3] *Ibid*, Vol. XI, Dg. 43.

ಕರಹಾಟಂ ಯೋಗಪೀಠಂ ತನಗೆ ನೆಲೆಯೆನಲ್ಸಂದು ತದ್ಭೂವಿಪಾಳೋ
ತ್ಕರವಂ ಬೆಂಕೊಂಡು ಕೊಣ್ಡಂ ಭುಜಬಳದಿನಿಳಾಚಕ್ರಮಂ ತನ್ನ ನೃಪಾಳಂ
ಧರಣೀ ಪಾಳಕರ್ಕಳೊಳು ಬಲ್ದಿದನದಟನುದಾರಂ ಕುಲಖ್ಯಾತನೆನ್ದು
ರ್ವ್ವರೆ ನಿಚ್ಚಂ ಬಣ್ಣಿಸಲ್ಭೂಭುವನದೊಳೆಸೆದಂ ಸಿಂದವಂಶಾವತಾರಂ[4] ||

ಹೀಗಾಯ್ತು ಬೆಳಗುತ್ತಿಯ ಸಿಂದರ ವಂಶಾವತಾರ. ಇವರು "ಕರಹಾಟನಾಲ್ಸಾಸಿರವೊಳಗಾಗನೇಕ ದೇಶಂಗಳ" ನಾಳುತ್ತಿದ್ದು ಆ ವಂಶದೊಳನೇಕರು ರಾಜ್ಯಂ ಗೆಯ್ದರು.

"ರಿಪುನೃಪತಿಕರಿಕುಂಭಿಕುಂಭಸ್ಥಳವಿದಾರುಣಾರುಣಿತ ಕರವಾಳ ಶೋಭಿತ ದಕ್ಷಿಣ ದೋರ್ದ್ದಂಡಸುಭಯಬಳಗಂಡ ಅರಿನೃಪಸಂಹಾರಕಾರಣಕುಳಿಕದೃಷ್ಟಿವಿಷಕುಳತಿಳಕ ಸುವರ್ಣ್ನ ಛತ್ರತ್ರಯಭೂಷಣ ವಿಜಯಪಟುಘೋಷಣ ಭೋಗಾವತೀಪುರವರೇಶ್ವರನನಂತ ವಾಸುಗಿ ತಕ್ಷಕ ಫಣಿಪತಾಕೇಶ್ವರ ವ್ಯಾಘ್ರಲಾಂಛನ ಮನೋಜ ಸಿಂಧುವಿಷಯಾಧಿರಾಜ ಸಕಳ ಭುವನಭವನ ಪರನೃಪವನಿತಾಜನಕಂದ ಅಕಳಂಕಸಿಂದ ಸಿಂದಕುಳ ತಿಳಕ" ಎಂಬ ಭೈರನ ಮಟ್ಟಿಯ ಶಾಸನದಲ್ಲಿರುವ ಈ ಪ್ರಶಸ್ತಿಯನ್ನು ಆರಂಭದಲ್ಲಿ ಕೂಡಲಾಗಿರುವ ಪ್ರಶಸ್ತಿಯೊಡನೆ ಹೋಲಿಸಿ ನೋಡಿದಲ್ಲಿ ಇವೆರಡರಲ್ಲಿನ ವ್ಯತ್ಯಾಸವು ಬೆಳಗುತ್ತಿಯ ಸಿಂದರೂ ಬಾಗಡಗೆಯ ಸಿಂದರೂ ಬೇರೆ ಬೇರೆ ಶಾಖೆಗಳವರೆಂಬುದನ್ನು ಸ್ಪಷ್ಟಗೊಳಿಸುತ್ತದೆ. ಈ ಎರಡೂ ಮನೆತನಗಳ ಮೂಲಪುರುಷನು ಮಾತ್ರ ನಿಡುದೋಳ ಸಿಂದನೇ!

ಹೊಳಲಕೆರೆ ತಾಲ್ಲೂಕಿನ ಗುಂಡೇರಿ ಎಂಬ ಗ್ರಾಮದ ಬಳಿ ದೊರೆತ ಶಾಸನದಲ್ಲಿ[5] ನಮೂದಿಸಲಾದ ನನ್ನಿಯಸಿಂದ ಎಂಬುವನೂ ದಾವಣಗೆರೆ ತಾಲ್ಲೂಕಿನ ವಾಸನ ಎಂಬ ಗ್ರಾಮದಲ್ಲಿನ ಶಾಸನದ[6] ಜಾತರಸನೂ ಈ ಬೆಳಗುತ್ತಿಯ ಸಿಂದರ ಅನ್ವಯಕ್ಕೆ ಸೇರಿದವರೆಂದು ಶ್ರೀ ದಿನಕರ ದೇಸಾಯಿಯವರು ಅಭಿಪ್ರಾಯ ಪಟ್ಟಿದ್ದಾರೆ.[7] ಮೊದಲನೆಯ ಶಾಸನದಲ್ಲಿ ಆತನ ಹೆಸರು 'ಶ್ರೀ ಕೆರಸಿಗ ನನ್ನಿಯಸಿನ್ಧ' ಎಂದಿದೆ. ಶಾಸನದಲ್ಲಿ ನಮೂದಿಸಲಾದ ರಾಷ್ಟ್ರಕೂಟರ ದೊರೆಯಾದ ಅಕಾಲವರ್ಷ ದೇವ (ಮೂರನೆಯ ಕೃಷ್ಣ) ನಿಗಾಗಲಿ ಅವನ ಮಹಾಸಾಮನ್ತನಾದ ಸೂದ್ರಕಯ್ಯನಿಗಾಗಲಿ ಇವನ ಸಂಬಂಧವೆಂತಿಹುದೆಂದು ತಿಳಿಯದು. ಅವನ ಹೆಸರಿಗೆ ಸೇರಿರುವ 'ಸಿನ್ದ' ಎಂಬ ಪದದಿಂದಲೇ ಅವನು ಸಿಂದವಂಶಕ್ಕೆ ಸೇರಿದವನೆಂದು ಹೇಳುವುದಾದರೂ ಹೇಗೆ? ಜಾತರಸನ ಬಗ್ಗೆ ವಾಸನಗ್ರಾಮದ ಶಾಸನದಲ್ಲಿ "ಮಹಾಸಾಮನ್ತ ಮುಳ್ಗುನ್ದಸಿನ್ದ ಶ್ರೀಮತ್ ಜಾತರಸರ್" ಕಡಂಬಳಿಗೆ ಸಾಯಿರವನ್ನು ಆಳುತ್ತಿದ್ದರೆಂದು ಹೇಳಲಾಗಿದೆ. ಇಲ್ಲಿ 'ಮುಳ್ಗುನ್ದಸಿನ್ದ ಜಾತರಸರ್' ಎಂದಿರುವುದರಿಂದಲೇ ಇವನು ಸಿಂದ ವಂಶಕ್ಕೆ ಸೇರಿದವನೆಂದು ಹೇಳುವುದಾದರೂ ಹೇಗೆ? 'ಮುಳ್ಗುನ್ದಸಿನ್ದ' ಎಂದರೆ ಮುಳುಗುಂದ

---

[4] ಹೊನ್ನಾಳಿ ತಾಲ್ಲೂಕಿನ ಮಾದನಭಾವಿಗ್ರಾಮದ ಶಾಸನ ಇಷ್ಟೆಲ್ಲಾ ಕತೆಯನ್ನು ಸಂಕ್ಷೇಪಿಸಿ

ಸುರಸಿನ್ದುಗೆ ಭವಸಂಗಂ
ದೊರೆವೆತ್ತಿರಿ ಪುತ್ರನಾದನಾತನ ಪೆಸರಂ |
ಹರನಿಟ್ಟನೊಲ್ದು ಸೈನ್ಧವ
ವರನೆನ್ದುರಗಾಧಿರಾಜ ರಕ್ಷಾಸಹಿತಂ ||

ಕರಹಡವೆ ತನಗೆನೆಲೆಯಾ
ಗಿರಲಹಿತರ ನಲಿದು ಗೆಲಿದು ಭುಜಬಲದಿನ್ದಂ |
ಧರೆಗಧಿಪನಾದನೆನ್ದು
ರ್ವ್ವರೆ ಸಿನ್ಧುಕುಲಾವತಾರಂ ಸಲೆ ಪೊಗಳ್ಗುಂ || ಎಂದು ಹೇಳುತ್ತದೆ.

[5] *EP. carn.* Vol. XI, Hk 23. [6] *Ibid.*, Dg 114. [7] *Mahāmandaleśvarās Under the Calukyas of Kalyaṇi.*, Part I, Chapters II and III.

ದಲ್ಲಿ ಪ್ರಸಿದ್ಧನಾದವನೆಂದರ್ಥವಾಗದೇ? ಇಲ್ಲದಿದ್ದಲ್ಲಿ ಸಿಂದವಂಶಕ್ಕೂ ಮುಳುಗುಂದಕ್ಕೂ ಸಂಬಂಧವೇನು? ಮುಳುಗುಂದದ ಸಿಂದವಂಶವೆಂದಾದೀತೇ! ಹೇಗೇ ಆಗಲಿ, ಅವನು ಬೆಳಗುತ್ತಿಯ ಸಿಂದವಂಶದವನೆಂಬ ಅಂಶವನ್ನು ಮಾತ್ರ ಒಪ್ಪಿಕೊಳ್ಳಲಾಗದು.

ಇವರಿಬ್ಬರ ಬಳಿಕ ಶ್ರೀ ದಿನಕರ ದೇಸಾಯಿಯವರ ಅಭಿಪ್ರಾಯದಂತೆ ಕಯುವೀರರಸನು ಮೂರನೆಯವನು. ಶಿಕಾರಿಪುರ ತಾಲ್ಲೂಕಿನ ಮುತ್ತಿಗೆ ಎಂಬ ಗ್ರಾಮದ ಶಾಸನದಲ್ಲಿ[8] "ಸ್ವಸ್ತಿ ಸಮಸ್ತಪ್ರಶಸ್ತಿಸಹಿತಂ ಶ್ರೀಮನು ಮಹಾಮಂಡಳೇಶ್ವರಂ ಕಯುವೀರರಸರು ಪ್ರಿಥುವೀರಾಜ್ಯಂ" ಗೆಯ್ಯುತ್ತಿದ್ದರೆಂದು ಹೇಳಲಾಗಿದೆ. ಬೆಳಗುತ್ತಿಯ ಸಮೀಪದಲ್ಲಿ ಈ ಶಾಸನ ದೊರೆತಿರುವ ಕಾರಣ ಈ ಕಯುವೀರರಸನು ಬೆಳಗವತ್ತಿ ಮತ್ತು ನಾಗರಖಂಡ ಎಪ್ಪತ್ತು ಈ ವಿಭಾಗಗಳ ಅಧಿಕಾರಿಯಾಗಿದ್ದನೆಂದು ಶ್ರೀ ದೇಸಾಯರು ಊಹಿಸಿದ್ದಾರೆ.[9] ಮಿ. ಲೂಯಿ ರೈಸ್‌ರವರು ಈ ಬಗ್ಗೆ ಸಂದೇಹಗೊಂಡಿದ್ದರಾದರೂ ಇವರು ಮಾತ್ರ ಆ ಸಂದೇಹವನ್ನು ಹೇಗೋ ನಿವಾರಿಸಿಕೊಂಡಿರುವರಲ್ಲದೆ ಮಹಾಮಂಡಳೇಶ್ವರನೆಂಬ ಬಿರುದು ಪಡೆದಿರುವುದರಿಂದ ಈತನು ಪಶ್ಚಿಮ ಚಾಲುಕ್ಯರ ದೊರೆಯಾದ ಮೊದಲನೆಯ ಸೋಮೇಶ್ವರನ ಅಧೀನದಲ್ಲಿದ್ದನೆಂದೂ ಸಹ ಅಭಿಪ್ರಾಯಪಟ್ಟಿದ್ದಾರೆ. ಆದರೆ ಅವರ ಈ ಊಹೆ ಸರಿಯಾದದ್ದಲ್ಲ. ಕಯುವೀರರಸನು ಸಿಂದವಂಶದವನೆಂಬುದಕ್ಕೆ ಯಾವ ವಿಧವಾದ ಆಧಾರವೂ ಇಲ್ಲ. ಇದರ ಜೊತೆಗೆ ಇತ್ತೀಚೆಗೆ ನನಗೆ ದೊರೆತ ಶಾಸನವೊಂದನ್ನು ಅವಲೋಕಿಸಿದಲ್ಲಿ ಈ ಅಂಶದ ಬಗ್ಗೆ ಹೊಸ ಬೆಳಕು ಬೀಳಬಹುದು. ಈ ಶಾಸನ ಹಿರೇಕೆರೂರು ತಾಲ್ಲೂಕಿನ ಮೇದೂರು ಗ್ರಾಮದಲ್ಲಿ ದೊರೆಯಿತು. ದುರದೃಷ್ಟವಶಾತ್ ಬಹಳ ದೊಡ್ಡದಾಗಿರಬಹುದಾಗಿದ್ದ ಈ ಲಿಪಿಗಲ್ಲಿನ ಎರಡು ತುಂಡುಗಳು ಮಾತ್ರ ನನಗೆ ದೊರೆಯಿತು. ಈ ಶಾಸನ ಚಾಲುಕ್ಯರ ದೊರೆಯಾದ ತ್ರೈಲೋಕ್ಯಮಲ್ಲ (ಮೊದಲನೆಯ) ಸೋಮೇಶ್ವರನದು. ಮಹಾಮಂಡಲೇಶ್ವರ ಚಾವುಣ್ಡರಾಯರಸನು ಮಹಾಪ್ರಧಾನನಾಗಿದ್ದ ಸಮಯದಲ್ಲಿ 'ಕರಹಾಟಪುರವರಾಧೀಶ್ವರ ಮಾಳತೀದೇವೀಲಬ್ಧವರಪ್ರಸಾದ' ಮೊದಲಾದ ಬೆಳಗುತ್ತಿಯ ಸಿಂದರ ಪ್ರಶಸ್ತಿಗಳನ್ನು ಪಡೆದಿದ್ದ ಶ್ರೀಮತು ಅಯ್ಯಣದೇವ . . . ರು ಮಾಸೂರು ಪನ್ನೆರಡು ಮೊದಲಾದ ಭಾಗಗಳ ಆಡಳಿತಾಧಿಕಾರಿಗಳಾಗಿದ್ದರೆಂದು ಈ ಶಾಸನ ತಿಳಿಸುತ್ತದೆ. ಆದರೆ ಈ ಭಾಗದಲ್ಲಿ ಕಲ್ಲು ಒಡೆದು ಹೋಗಿದ್ದು ಅದರ ಇತರ ತುಂಡುಗಳು ಸಿಕ್ಕಿಲ್ಲವಾಗಿ ಈ ಬಗ್ಗೆ ಹೆಚ್ಚಿನ ಅಂಶಗಳು ಕಣ್ಮರೆಯಾಗಿವೆ. ಶಾಸನದಕಾಲ . . . ತ್ಸಂವತ್ಸರ ಭಾದ್ರಪದ ಅಮಾವಾಸ್ಯೆ ಆದಿತ್ಯವಾರ. ಶಕವರ್ಷವಿಲ್ಲದಕಾರಣ ಇದಕ್ಕೆ ಸರಿಹೋಗುವ ತಾರೀಕನ್ನು ನಿರ್ಧರಿಸಲಾಗದು. ತ್ರೈಲೋಕ್ಯಮಲ್ಲನ ಆಳ್ವಿಕೆಯ ಕಾಲದೊಳಗೆ ಸರ್ವಜಿತ್, ವಿಕೃತ, ಶುಭಕೃತ್ ಅಥವಾ ಶೋಭಕೃತ್ ಈ ನಾಲ್ಕು ಸಂವತ್ಸರಗಳಲ್ಲಿ ಬಂದಿರಬೇಕು. ಈ ಶಾಸನದಲ್ಲಿ ಸೂಚಿಸಲಾಗಿರುವ '. . . . ತ್ಸಂವತ್ಸರ' ಅದು ಹೇಗೇ ಇರಲಿ, ಈ ಶಾಸನ ನಮಗೆ ಬೆಳಗುತ್ತಿಸಿಂದರಲ್ಲಿ ಈವರೆಗೆ ತಿಳಿದಿಲ್ಲದ ಮೊದಲನೆಯ ಮಾಂಡಲಿಕನ ಹೆಸರನ್ನು ತಿಳಿಸುತ್ತದೆ. ಇವನಿಗೂ ಮೊದಲಿನವರ ಬಗ್ಗೆ ನಮಗೆ ತಿಳಿಯದು. ಇವನ ನಂತರದವರಾರೆಂಬ ಅಂಶವೂ ಇನ್ನೂ ಬೆಳಕು ಕಂಡಿಲ್ಲ.

ಹರಿಹರದ ಶಾಸನ ಮತ್ತು ಈವರೆಗೆ ದೊರೆತಿರುವ ಇತರ ಶಾಸನಗಳಿಂದಲೂ ಸಹ ನಮಗೆ ತಿಳಿದು ಬರುವ ಈ ಸಿಂದರ ವಂಶಾವಳಿಯಲ್ಲಿ ನಿಡುದೋಳಸಿಂದನ ಬಳಿಕದವನು ಪಿರಿಯ ಚಟ್ಟರಸ.

ಅಗಣಿತ ಪೌರುಷಾಭರಣನುದ್ಧತ ವೈರಿನೃಪಾಳಬೃಂದಸಂ-
ಯುಗ ವಿಜಯ ಪ್ರಚಂಡ ಭುಜದಂಡ ಸಮಾಹೃತ ರಾಜ್ಯಸಂಪದಂ
ಮೃಗೆಂಪುವಿಕ್ರಮಂ ಪರಬಳಾರ್ಣ್ಣವ ಕುಂಭಜನೆನ್ದು ಸನ್ತತಂ
ಪೊಗಳೆ ಧರಾತಳಂ ಪಿರಿಯ ಚಟ್ಟರಸಂ ಪೆಸರ್ವೆತ್ತನುರ್ಬ್ಬಿಯೊಳು ||

[8] *Ep. Carn.*, Vol. VII, Sk. 69. [9] *Op. Cit.*, Chapter IV.

ಈ ಪಿರಿಯ ಚಟ್ಟರಸನ ಪತ್ನಿ ದೋರಬ್ಬರಸಿ. ಇವರ ಮಗ ಜೋಗರಸ. ಅವನ ಮಗ ಚಟ್ಟರಸ. ಇವನ ಬಗ್ಗೆ ಶಾಸನ ಹೀಗೆ ಹೇಳುತ್ತದೆ:

ಸಿಡಿಲ ಪೊಡಪ್ಪಿರ್ನೊಳು ದೊರೆಗೆವಪ್ಪುದು ದಳ್ಳಿಪತೇಜದೇಳ್ಗೆ ಪಾ-
ಲ್ಗಡಲ ಗಭೀರ ವೃತ್ತಿಗೆಣೆಯಾದುದು ತನ್ನ ಗಭೀರವೃತ್ತಿ ನಾ-
ಲ್ವಡಿಕನಕಾಚಳಕ್ಕೆ ಮಿಗಿಲುಂನತಿ ಕಲ್ಪಮಹೀರುಹಕ್ಕೆ ನೂ-
ರ್ಮಡಿಮಿಗಿಲಾಯ್ತು ಭೋಗಪಸಕಂ ದೊರೆಯಾವನೊ ಚಟ್ಟಭೂಪನೊಳು ||

ತಳರೆ ತಳಚ್ಚರ್ವಂಗೆ ಕನಕಾಚಳವೊತ್ತುವವಂಗೆಲೇ ಮಿಯ
ತ್ತಳವುಲರ್ವ್ವಂಗೆ ತೀವಿತೆಗೆದಂಬು ತಡಂಬರಿವಂಗೆ ಕಂಟಕ
ಪ್ರಳಿಯಮವುಂಕುವಂಗೆ ಜವನಂ ಕಿಸುವಂಗೆ ಸಿಡಿಲ್ಸಿಡಿಲ್ದಿಟಂ
ಸೆಳೆದಪೆನೆಂಬವಂಗಳುರ್ವ್ವದಳ್ಳುರಿ ಚಟ್ಟಮನೆಂಬ ಜಿಟ್ಟಗಂ ||

ಶಿಕಾರಿಪುರ ತಾಲ್ಲೂಕಿನ ಗೊಗ್ಗ ಎಂಬ ಗ್ರಾಮದಲ್ಲಿನ ಶಾಸನದಲ್ಲಿ[10] ಚಾಳುಕ್ಯವಿಕ್ರಮವರ್ಷದ ೪೧ ನೆಯ ಹೇಮಳಂಬಿ ಸಂವತ್ಸರಕ್ಕೆ ಸರಿಹೋಗಬಹುದಾದ ಕ್ರಿಸ್ತಶಕ ೧೧೧೭ ರಲ್ಲಿ ಮಹಾಪ್ರಧಾನ ಗೋವಿಂದರಸರು ಬನವಾಸೆ ನಾಡನ್ನಾಳುತ್ತಿದ್ದಾಗ ಈ ಸಿಂದವಂಶದ ಪ್ರಶಸ್ತಿಗಳನ್ನು ಪಡೆದಿರುವ ಮಹಾಮಂಡಳಿಕ ಚಟ್ಟರಸನು ಒಬ್ಬ ಅಧಿಕಾರಿಯಾಗಿದ್ದ ಬಗ್ಗೆ ಉಲ್ಲೇಖವಿದೆ. ಇದರಿಂದಾಗಿ ಶ್ರೀ. ದೇಸಾಯರು ಇವನು ಸುಮಾರು ಕ್ರಿ. ಶ. ೧೧೧೭ ರಿಂದ ೧೧೨೫ ರವರೆಗೆ ಅಧಿಕಾರಿಯಾಗಿದ್ದು ಇವನ ತಂದೆಯಾದ ಜೋಗರಸನ ಕಾಲ ಕ್ರಿ. ಶ. ೧೧೦೮ ರಿಂದ ೧೧೧೭ ರವರೆಗೆಂದು ಊಹಿಸಿದ್ದಾರೆ.[11] ಆದರೆ ನನಗೆ ಮೇದೂರಿನಲ್ಲಿ ದೊರೆತ ಕ್ರಿ. ಶ. ೧೧೧೨-೧೧೧೩ ನೆಯ ವರ್ಷದ ಮತ್ತೊಂದು ಶಾಸನದಲ್ಲಿ ಸಿಂದವಂಶದ ಮಹಾಮಂಡಲೇಶ್ವರ ಮಾ . . . ಎಂಬುವನು ಚಾಲುಕ್ಯರ ದೊರೆಯಾದ ಅರಸಿಯ ವಿಕ್ರಮಾದಿತ್ಯನ ಕೈಕೆಳಗೆ ಎಡವೆಟ್ಟು ಎಪ್ಪತ್ತು ವಿಭಾಗವನ್ನು ಆಳುತ್ತಿದ್ದನೆಂದು ಹೇಳಲಾಗಿದೆ. ಈ ಮಾ . . . ಯಾರು? ಮಾಚರಸನಾಗಿರಬಹುದೇ? ಆದರೆ ಸಿಂದರ ಶಾಸನಗಳ ಪ್ರಕಾರ ಮಾಚರಸನು ಮೇಲ್ಕಂಡ ಚಟ್ಟರಸನ ಬಳಿಕ ಬಂದವನು. ಹಾಗಿದ್ದಲ್ಲಿ ಚಟ್ಟರಸನ ಶಾಸನಕ್ಕೂ ೫ ವರ್ಷಗಳ ಮುಂಚೆಯೇ ಹುಟ್ಟಿದ ಈ ಶಾಸನದ ಮಾ . . . ಯಾರು? ದುರದೃಷ್ಟವಶಾತ್ ಈ ಭಾಗದಲ್ಲಿ ಸರಿಯಾಗಿ ಲಿಪಿಗಲ್ಲು ಗೋಡೆಯೊಳಗೆ ಸೇರಿಸಲ್ಪಟ್ಟು ಅಕ್ಷರಗಳು ಸಂಪೂರ್ಣವಾಗಿ ಸವೆದು ಹೋಗಿವೆ. '**ಮಾ**' ಎಂಬ ಅಕ್ಷರ ಮಾತ್ರ ಸ್ಪಷ್ಟವಾಗಿದೆ. ಒಂದು ವೇಳೆ '**ಚ**' ಎಂದಿದ್ದಲ್ಲಿ ಚಟ್ಟರಸನೆಂದು ಊಹಿಸಬಹುದಾಗಿತ್ತು. ಹಾಗಿಲ್ಲ! '**ಜೋ**' ಎಂಬ ರೂಪವಿದ್ದಿದ್ದಲ್ಲಿ ಜೋಗರಸನೆಂದಾದರೂ ಯೋಚಿಸಬಹುದಾಗಿತ್ತು. ಹಾಗೂ ಇಲ್ಲ! ಇದು ಈ ಸಿಂದರ ವಂಶಾವಳಿಯಲ್ಲಿ ಹೊಸ ತೊಡಕನ್ನು ಉಂಟುಮಾಡಿದೆ.[12]

ಈ ಚಟ್ಟರಸನ ಬಳಿಕ ಮೊದಲನೆಯ ಈಶ್ವರಭೂಪನೂ ನಂತರ ಅವನ ಮಕ್ಕಳಾದ ಮಾಚರಸ, ಮಲ್ಲಿದೇವ ಮತ್ತು ಐಹರಸ (ಹರಸಂ?) ಇವರುಗಳು ಆಡಳಿತಕ್ಕೆ ಬಂದರು. ಇವರಲ್ಲಿ ಮಾಚರಸನು ಪ್ರಮುಖನೆಂದು ತೋರುತ್ತದೆ.

ಪಿಂದೆ[13] ತುರಗಮನೆ ಪಾಯಿಸಿ
ಸಂದಣಿಸಿದ ವೈರಿ ಬಲಮನಾಜಿಯೊಳ್ಸಲೆದಾ
ಟಂದೊದವಿ ತಂನಳ್ತಲ
ಗಿಂದಂ ಸಲಗಿಱಿದನುಱಿದೆಮಾಚನೃಪಾಳಂ || ಅದಲ್ಲದೆಯುಂ ||

---

[10] *EP. carn.*, vol. vii, SK. 316. [11] *OP. cit.*, chapter vii. [12] ಶ್ರೀ. ದೇಸಾಯರ ಪುಸ್ತಕದ ೬೪ ನೆಯ ಪುಟದಲ್ಲಿನ ವಂಶವೃಕ್ಷವನ್ನೂ, *Ep. carn.* ದಲ್ಲಿನ ಏಳನೆಯ ಸಂಪುಟದ ಪೀಠಿಕೆಯ ೩೫ ನೆಯ ಪುಟವನ್ನೂ ನೋಡಿರಿ. [13] 'ಒಂದೆ' ಎಂದು ಮತ್ತೊಂದು ಶಾಸನಪಾಠ.

ಕಲಿಯಂ ಮಾದಲಿ . . . ತಪಂದೆಯನೆಲೇ ಪೋಗೆನ್ದು ಸಂಗ್ರಾಮದಿಂ
ತೊಲಗಿರ್ಪ್ಪಂತೆಯೆಲುನ್ನತಾಂಶುಯುಗದೊಳು ವಕ್ಷಸ್ಥಳೋದ್ದೇಶದೊ
ಳ್ಸಲೆಪೂರ್ಬ್ಬಾಂಗದೊಳಾವಗಂ ತಱುಗಿ ತೋಱುತ್ತಿರ್ಪ್ಪ ಶಸ್ತ್ರಬ್ರಣಾ
ವಳಿವೀರಾಂಗನೆ ಕೂಡೆ ಕಣ್ಬೆಱೆದ . . . ತೊಪ್ಪುಗುಂ ಸಂತತಂ ||

ಮಾಚರಸನ ಬಳಿಕ ಆವನ ಮೊಮ್ಮಗ (ತಮ್ಮನ ಮೊಮ್ಮಗ)ನಾದ ಈಶ್ವರದೇವನು ಈ ಸಿಂದವಂಶದ ಅರಸುಗಳಲ್ಲಿಯೇ ಅತಿ ಪ್ರಮುಖನಾದವನು. ಇವನು ಬಹುಶಃ ಕ್ರಿ. ಶ. ೧೧೬೦ ರಲ್ಲಿ ಪಟ್ಟಕ್ಕೆ ಬಂದನೆಂದು ಶ್ರೀ. ದೇಸಾಯಿಯರು ಅಭಿಪ್ರಾಯಪಟ್ಟಿದ್ದಾರೆ. ಆದರೆ ನನಗೆ ದೊರೆತ ಹಿರೇಕೆರೂರು ತಾಲ್ಲೂಕಿನ ಕೊಡಮೊಗ್ಗಿ ಗ್ರಾಮದಲ್ಲಿನ ಕ್ರಿ. ಶ. ೧೧೫೮ ನೆಯ ವರ್ಷದ ಶಾಸನದಲ್ಲಿ ಈ ಈಶ್ವರದೇವನು ಎಡವಟ್ಟೆಪ್ಪತ್ತು ಮೊದಲಾದ ಭಾಗಗಳಲ್ಲಿ ಆಳುತ್ತಿದ್ದನೆಂದು ಉಕ್ತವಾಗಿದೆಯಾಗಿ ಇದಕ್ಕೂ ಮೊದಲೇ, ಸುಮಾರು ಕ್ರಿ. ಶ. ೧೧೫೫ ರ ವೇಳೆಗೇ ಇವನು ಅಧಿಕಾರಕ್ಕೆ ಬಂದಿರಬಹುದು. ಶಾಸನಗಳಲ್ಲಿ ಇವನ ವರ್ಣನೆ ಹೀಗಿದೆ:

ಈಂಗಡಲಂತೆ ಪೆಂಪುಮುಂದೀಶ್ವರ ಭೂಪನ ಕೀರ್ತಿಯ ಕ
ಳಂಕಗೆಡೆಗೊಂಡ ಚಂದ್ರಮನದೇಂಗಳಪೋಲ್ವನೆ ವೈರಿ ತುಂಗ ಸೌ
ಧಂಗಳೊಳುರ್ವ್ವಿಪರ್ವ್ವದ ಕಱುಂಕೆಗೆ ತಂನಯ ಲಕ್ಷ್ಮಿ ಮೆಚ್ಚುಗಂ
ಲಂಗಿಸಿದಾಗಳೊಂದಿನಿಸು ಪೋಲ್ವಡೆ ಪೋಲ್ಕೆಮದೇಳ್ಗೆಯೊಳು ||

ಕಾದಪೆನೆಂಬವಾ[ತ]ವಿನ್ರತಮಂತ್ರನಿಭಂಮಱೆಪೊಕ್ಕವಂಗೆ ತಾ
ನಾದರದಿಂದೆ ಬನ್ದುರದ. . . . ಕೊಟ್ಟಪೆನೆಂಬ ಮಾತು ಪು
ಣ್ಯೋದಯ ದೇವತಾವಚನದಂತುಟೆಯಾಶ್ವರ ಮಂಡಳೇಶ್ವರಂ
ಕಾದುವೆನೆಂ. . . . ಪುವಾಜಿಗೆ ಮಾರಣಮಂತ್ರಿ ಸನ್ನಿಭ ||

ಮದವದ್ವೈರಿನರೇಂದ್ರ ಸಿನ್ಧುರ ಘಟಾಸಹೋಗ್ರಪಂಚಾನನಂ
ಮದವದ್ಧೃಪ್ತ ವಿರೋಧಿ ಸೈನ್ಯಗಹನ ಪ್ರಧ್ವಂಸದಾವಾನಳಂ
ಮದವದ್ವಿಸ್ಯ. ಭೃತ್ಯಳಾಘ. ದಗದ್ದಂಬೋಳಿಲೀಳಾಸ್ಪದಂ
ಮದವಶ್ಛತ್ರುಬಳಂ. ಕಾರವಿಹಿರನ್ನಾನೀಶ್ವರೋರ್ವ್ವೀಶ್ವರಂ ||

ಇಂತೆಲ್ಲಾ ಹೊಗಳಿಕೆಯನ್ನು ಪಡೆದ ಈಶ್ವರದೇವನಿಗೆ ಅವನ ಮಾವನಾದ ಅಲ್ಲಮರಸನ ಸಂಪೂರ್ಣ ಬೆಂಬಲವಿದ್ದಿತು. ಕ್ರಿ. ಶ. ೧೧೫೫ ರಲ್ಲಿ ಎಡವಟ್ಟೆಪ್ಪತ್ತು ಮತ್ತು ಅದರ ಸುತ್ತಲಿನ ಕೆಲವೇ ಭಾಗಗಳನ್ನಾಳುತ್ತಿದ್ದ ಈಶ್ವರದೇವನು ಕ್ರಿ. ಶ. ೧೧೬೫ ರ ವೇಳೆಗೆ ಪ್ರಬಲಗೊಂಡಿದ್ದು ತನ್ನ ರಾಜ್ಯವನ್ನು ವಿಸ್ತರಿಸಿಕೊಂಡಿದ್ದನೆಂಬ ಅಂಶ ನಾನು ಸಿಡಸೇಗಿಲು ಎಂಬ ಗ್ರಾಮದಲ್ಲಿ ಸಂಪಾದಿಸಿದ ಶಾಸನ ಒಂದರಿಂದ ತಿಳಿದುಬರುತ್ತದೆ. ಅದರಲ್ಲಿ ಹೀಗೆ ಹೇಳಲಾಗಿದೆ: ಇನ್ತು ನೆಗಳ್ತೆವೆತ್ತ ತಮ್ಮ ಮಾವನಲ್ಲಮರಸಂ ತನ್ನ ರಾಜ್ಯಕ್ಕೆ ಮುಖ್ಯನಾಗಿ ನಡೆಯೆ ಪೂರ್ವ್ವ ಪುರುಷರಿಂದುಪಾರ್ಜ್ಜಿಸಿದ ನಾಡು ಬನವಸೆ ನಾಡೊಳಗಣ ಕಂಪಣ ಮಾಸವೂರು ೧೨ ಎಡೆವಟ್ಟ ಬಳ್ಳವೆ ೭೦ ನರಿಯಳಿಗೆ ೪೦ ಸಾನ್ತಳಿಗೆ ಸಾಯಿರದೊಳಗಡೆ ಮಲೆ ೭೦ ಮುದುವರ ೩೦ ಮಂದಲಿನಾಡೊಳಗೆ ಹೊಳಲೂರು ೧೨ ಸೊಣಂಬವಾಡಿ ನಾಡೊಳಗೆ ಮನು. ವೊಳಲು ೧೨ ಕೊಳ್ಳಿಗನೆಪ್ಪತ್ತು ಅರಕೆಱೆ ೧೨ ಜ್ರಾನ್ತಿ [೩೦] ಕುಂದೂರು ೭೦ ಅಯ್ವತ್ತಾರು ಬಾಡವುಂ ಅತ್ತಿಗೇರಿ ೧೨ ಪಡುಗಲು ೧೨ ಆಸನ್ದಿನಾಡೊಳಗಂ ಬಲ ೭೦ ಕಳಿಕಟ್ಟೆ ೧೨ ಮಿನ್ತಿನಿತು ಕಂಪಣಂಗಳಂ ದುಷ್ಟನಿಗ್ರಹ ಶಿಷ್ಟಪ್ರತಿಪಾಳನ ಪುರಸ್ಸರಂ ಹಳವುರದ ನೆಲೆವೀಡಿನಲು ಸುಖ ಸಂಕಥಾ ವಿನೋದದಿಂ ರಾಜ್ಯಂಗಯ್ಯುತ್ತಿರೆ . . . . ಇದರಿಂದ ಅವನ ಅಧಿಕಾರ ಶಿವಮೊಗ್ಗ, ಚಿತ್ರದುರ್ಗ ಮತ್ತು ಧಾರವಾಡ ಜಿಲ್ಲೆಗಳಲ್ಲೂ ಅಲ್ಪಸ್ವಲ್ಪವಾಗಿ ಬಳ್ಳಾರಿ ಜಿಲ್ಲೆಯಲ್ಲಿಯೂ ಪಸರಿಸಿತ್ತೆಂದು ಹೇಳಬಹುದು. ತನ್ನ ರಾಜ್ಯದ ಪ್ರತಿಪಾಲನೆಗಾಗಿ ಈಶ್ವರ

ದೇವನು ತನ್ನ ರಾಜಧಾನಿಯನ್ನು ಬೆಳಗವತ್ತಿಯಿಂದ ಹಳ್ಳವುರಕ್ಕೆ (ಹಿರೇಕೆರೂರು ತಾಲ್ಲೂಕಿನ ಹಳ್ಳೂರು) ಬದಲಾಯಿಸಿದನು.

ಈಶ್ವರದೇವನ ಬಳಿಕ ಸಿಂದರ ಪ್ರಾಬಲ್ಯ ಇಳಿಮುಖವಾಗತೊಡಗಿ ೧೩ ನೆಯ ಶತಮಾನದ ಅಂತ್ಯದ ವೇಳೆಗೆ ನಶಿಸಿಹೋಯಿತು. ಆರಂಭದಲ್ಲಿ ಚಾಲುಕ್ಯರ ಅಧೀನರಾಗಿದ್ದ ಈ ಸಿಂದರು ನಂತರ ಕ್ರಮವಾಗಿ ಹೊಯ್ಸಳರು, ಕಳಚುರ್ಯರು ಮತ್ತು ಯಾದವರು ಇವರ ಕೈಕೆಳಗಿದ್ದು ಕೊನೆಗೊಮ್ಮೆ ಇವರ ರಾಜ್ಯ ಯಾದವರ ರಾಜ್ಯದಲ್ಲಿ ಲೀನವಾಯಿತೆನ್ನಬಹುದು. ಆರಂಭದಿಂದ ಅಂತ್ಯದವರೆಗೂ ಮಾಂಡಲಿಕರಾಗಿದ್ದ ಇವರು ಗಾಳಿ ಬೀಸಿದಂತೆಲ್ಲಾ ತಮ್ಮ ಪಕ್ಷ ಬದಲಾಯಿಸುವ ಪರಿಸ್ಥಿತಿಯಿಂದಾಗಿ ಬಲದಲ್ಲಿ ಕ್ಷೀಣಿಸಿರಬೇಕು. ಇದಕ್ಕೆ ಮುಖ್ಯಕಾರಣ ಇವರು ಆಕ್ರಮಿಸಿಕೊಂಡಿದ್ದ ಸ್ಥಳ ಭೌಗೋಲಿಕವಾಗಿ ಆ ಸಮಯದಲ್ಲಿ ರಣರಂಗವಾಗಿದ್ದಿತು. ತುಂಗಭದ್ರಾ ನದಿಯ ಪಕ್ಕದ ಈ ಭಾಗದ ಆಕ್ರಮಣಕ್ಕಾಗಿ ಮೂರು ವಂಶಗಳ ರಾಜರುಗಳೂ ಹೋರಾಡುತ್ತಿದ್ದು ವಿಜಯ ಕೈಬದಲಿಸುತ್ತಿದ್ದಿತಾಗಿ ಇದರಿಂದ ಹಾನಿ ಉಂಟಾದುದು ಬೆಳಗುತ್ತಿಯ ಸಿಂದರಿಗೆ.

ಮೇಲೆ ಅಲ್ಲಲ್ಲಿ ಸೂಚಿಸಿರುವಂತೆ ಹೊಸ ಶಾಸನಗಳು ಬೆಳಕಿಗೆ ಬಂದ ಹಾಗೆಲ್ಲಾ ಈ ವಂಶದವರ ಚರಿತ್ರೆಯ ಬಗ್ಗೆ ನೂತನಾಂಶಗಳೂ ಹೊರಬೀಳುತ್ತವೆ. ಆ ಸುತ್ತುಮುತ್ತಲಿನ ಪ್ರದೇಶಗಳಲ್ಲಿ ಇನ್ನೂ ದೊರಕಬಹುದಾದ ಶಾಸನಗಳು ಇವರ ಬಗ್ಗೆ ಮತ್ತಷ್ಟು ವಿವರಗಳನ್ನು ನೀಡಬಹುದು.[14]

**ಬಾ. ರಾ. ಗೋಪಾಲ್**

---

[14] ಈ ಲೇಖನದ ಪ್ರಕಟಣೆಗೆ ಅನುಮತಿಯಿತ್ತ ಕೇಂದ್ರ ಶಿಲಾಶಾಸನದ ಮುಖ್ಯಾಧಿಕಾರಿಗಳಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

# ಕನ್ನಡ ಸಾಹಿತ್ಯದ ಹಾಗೂ ಭಾಷೆಯ ಹಳಮೆ

ಕಳೆದ 1940 ನೆಯ ಇಸವಿಯಲ್ಲಿ ನಾನು ಮುಂಬಯಿ ಪ್ರಾಂತದ ಕನ್ನಡ ಸಾಹಿತ್ಯ ಸಂಶೋಧನ ಸಮಿತಿಯ (Board of Research in Kannada Literature) ಆಶ್ರಯದಲ್ಲಿ ಧಾರವಾಡದಲ್ಲಿ ಮಾಡಿದ 'ಮೂರು ಉಪನ್ಯಾಸ'ಗಳ ಕೊನೆಯದಾದ 'ಕನ್ನಡ ಸಾಹಿತ್ಯದ ಪ್ರಾಚೀನತೆ'ಯನ್ನು ಕುರಿತ ಉಪನ್ಯಾಸದಲ್ಲಿ ಅದನ್ನು ಕ್ರಿಸ್ತಶಕದ (ಕ್ರಿ. ಶ.) 9 ನೆಯ ಶತಕದಿಂದ 3 ನೆಯ ಶತಕದ ಕೊನೆಯವರೆಗೆ ನೂಕಿರುತ್ತೇನೆ. ಇನ್ನು ಆ ನೂಕನ್ನು ಮತ್ತೂ ಎಷ್ಟು ಹಿಂದಿನವರೆಗೆ ಒಯ್ಯಲಾಗುತ್ತದೊ ನೋಡೋಣ.

I

**ಮುಂಭಾಗ**

೧ ಸ್ವಸ್ತಿ ಶ್ರಿ ಶಕ ವರಿಷ
೨ ನೂಱಿ ಪನ್ನೊನ್ದನೆಯ ೧೧೧
೩ ಅಂಗ್ಯಿರ ಸಂವತ್ಸರ
೪ ದ ಎಱೆಹವೆಮ್ಮಡಿ
೫ ಯಂ ರಾಜ್ಯದನ್ದು ಗೊ
೬ ಟ್ಟವಡ್ಡಿಯ ಗೋವುಣ್ಡು
೭ ಗಳಂ ನೆ ಲಾಂಛ್ಯೆಯರುಂ
೮ ಆನೆಯರು ಕುಡಿಗೋವು
೯ ಣ್ಡುಂ ಗೆಯ್ದುವದರ್ಕ್ಕೆ ಇವರ ಕೊ
೧೦ ಡಗ್ಗೆ ಸೆಲಬ್ಬೆಯರ ಕೊಡಗ್ಗೆ
೧೧ ಎಱೆಹಂಬಾಳಿಂ ಆನೆಯರ ಕೊ
೧೨ ಡಗ್ಗೆಂ ಕೊಡೆಕೆ ಎಡೆನಟ್ಟಕ್ಲಂ ಕೊ
೧೩. ಸಿಡಾ ಕೆಱೆ ತಗಡೂರ ಪುರು
೧೪ ಳ ಕೊಗೂಣ್ಣೆ ಎಡತಲೆಯ
೧೫ ಕೊತದ ಪುಳ್ಳಿಗನುಂ

**ಹಿಂಭಾಗ**

೧೬ ಕೆಂನ್ನೆಲ್ಲೆಯ ಬದ್ರ
೧೭ ಕ್ಷಿ ಐಯನೂಂ ಸಿಟ್ಟರೆ
೧೮ ಯ ಬೋರೆ ಅಚ್ಚಗಣ್ಡನುಂ ನ
೧೯ ಲ್ಲ್ಯವರು ಸಕ್ಷಿ ಉರ ಎ
೨೦ ಬ್ಬಿದಿಂಬರು ಸಕ್ಷಿ ತ
೨೧ ಣಾಪತ್ತಿ ಬೆಯಳ ಜೀಯ
೨೨ ನುಂ ಊರ ಪುರವಂನು.
೨೩ ಸಕ್ಷಿ ಕಮಱಿ ಸಕಿ
೨೪ ಗಂ ಬಡಗಿ ಮಾರಾಚರಿ ಜ
೨೫ ಲ ನಾಗಂ ಕೆರಗಾ ಬಿಟಿಗನು
೨೬ ವಿಸಗರ ಬೀಮನುಂ ಹೊಲೆ . . .
೨೭ ಅಷವಂ ಇವರ ಸಕ್ಷಿ.
೨೮ ಯಂಗ. ಭರಾ. ತಪ್ಪೆ
೨೯ . . . ದೇವರ ಭಿದಿನಿರಿಯ
೩೦ . . . ಇದ್ರ್ದ ಕೆಡ

ಮೇಲೆ ಕೊಟ್ಟಿರುವ ಮೈಸೂರು ಸೀಮೆಯ ನಂಜನಗೂಡು ನಂಬ್ರ (ನಂ) 199 ನೆಯ ಶಿಲಾಲೇಖವು[2] ಯಾವೊಬ್ಬ ಅರಸನ ಶಾಸನವೂ ಅಲ್ಲ. ಅದರಲ್ಲಿ ಕೆಲವು ಮಂದಿ ಹಳ್ಳಿಗರು ಒಂದು ಕೆರೆಯನ್ನು ಕಟ್ಟಿಸಿ, ಆ ಬಗ್ಗೆ ಸಾಕ್ಷಿಗಳನ್ನಿಟ್ಟು ಕೊರೆದಿರಿಸಿದ ಶಿಲಾಲೇಖ ತಾನೆ. ಅದರಲ್ಲಿ ಹೆಸರಿಸಿರುವ 'ಶಕವರಿಷ ನೂಱಿ ಪನ್ನೊನ್ದನೆಯ ೧೧೧ ಅಂಗ್ಯಿರ ಸಂವತ್ಸರ' ಎಂದರೆ ಶಾಲಿವಾಹನ ಶಕದ (ಶಾ. ಶ.) ೧೧೧ ನೆಯ ವರ್ಷ=ಕ್ರಿ. ಶ 189-190 ನೆಯ ಇಸವಿಯಾದರೆ, ನೇರಾಗಿ ಲೆಕ್ಕಿಸುತ್ತ ನೋಡಿದರೆ ಅಂಗೀರಸ ಸಂವತ್ಸರಕ್ಕಿಂತ ೩ ವರ್ಷಗಳ ಹಿಂದಣ ಶುಕ್ಲ ಸಂವತ್ಸರಕ್ಕೆ ತಾನೆ ಒಡಗೂಡುತ್ತದಲ್ಲದೆ, ಅಂಗೀರಸ ಸಂವತ್ಸರಕ್ಕಲ್ಲ. ಆಗಣ ಅಂಗೀರಸ ಸಂವತ್ಸರ ಒದಗಿದುದು ಕ್ರಿ. ಶ. 192-193 ನೆಯ ಇಸವಿಯಲ್ಲಿ. ಆದರೆ ಕೊಂಚ ನಿದಾನವಾಗಿ ಆಲೋಚಿಸಿ ನೋಡಿದರೆ, ಇದೊಂದು ಹಳ್ಳಿಗರ ಶಿಲಾಲೇಖ. ಈಗಲಾದರೂ ಹಳ್ಳಿಯ ಮಂದಿಗಳಲ್ಲಿ ಎಲ್ಲವರಲ್ಲವಾದರೆ ಕೆಲವರಾದರೂ ಸಂವತ್ಸರಗಳ ಹೆಸರುಗಳನ್ನು ಬಲ್ಲರು. ಆದರೆ ಆಯಾ ಸಂವತ್ಸರಕ್ಕೆ ಸರಿಹೋಗುವ

---

[1] *Kannada Institute, Karnataka University, Dharwar.* [2] *Epigraphia Carnatica* (E.C.) III. ನಂಜನಗೂಡು, ನಂ. 199.

11976



ಶಕವರ್ಷಗಳ ಸಂಖ್ಯೆಗಳನ್ನಾದರೂ ಅವರು ಸರ್ವಥಾ ಅರಿಯರು. ಹಳ್ಳಿಗಳಲ್ಲಿ ಆ ಸಂಖ್ಯೆಗಳನ್ನು ಬಲ್ಲವರೆಂದರೆ, ಆಯಾ ಹಳ್ಳಿಗಳಲ್ಲಿ ಅಥವಾ ಅವುಗಳ ಸರೆಯ ಹಳ್ಳಿಗಳಲ್ಲಿ ಇದ್ದಿರುವ ಜೋಯಿಸ ಮಹಾಶಯರು ಮಾತ್ರ, ಮಿಕ್ಕವರಲ್ಲ. ಪ್ರಸಕ್ತ ಲೇಖದ ಬಡಹಳ್ಳಿಯಲ್ಲಿ ಹೆಚ್ಚು ಬಲ್ಲವರು ಯಾರೂ ಇದ್ದಿರಲಿಲ್ಲ ಎಂಬುದಕ್ಕೆ ಇದೊಂದೇ ಸಾಕ್ಷಿ ಸಾಕು, ಈ ಲೇಖದ ಆದಿಯಲ್ಲಿ ಪದ್ಧತಿಪ್ರಕಾರ ಇರಬೇಕಾಗಿದ್ದ ದೇವತಾಸ್ತುತಿಪರವಾದ ಪದ್ಯವಿಲ್ಲ, ದೇವರ ಯಾವೊಂದು ಅಂಕಿತನಾಮವೂ ಇಲ್ಲ. ಅನುಮಾನವೇನೆಂದರೆ ಆ ಹಳ್ಳಿಯಲ್ಲಿ ಚಿಕ್ಕದೊಂದಾದರೂ ದೇವರ ಗುಡಿ ಕೂಡಾ ಪ್ರಾಯಶಃ ಇದ್ದಿರಲಾರದು, ಅಂದರೆ ಅದೆಷ್ಟು ಬಡಹಳ್ಳಿಯಾಗಿರಬೇಕು? ಅತಏವ ಇದರಲ್ಲಿರುವ ಸಂವತ್ಸರದ ಹೆಸರನ್ನು ಮಾತ್ರ ಒಪ್ಪಿಕೊಂಡು, ಅದರ ಶಕವರ್ಷಗಳ ಸಂಖ್ಯೆಯನ್ನು ಬಿಟ್ಟುಬಿಡಬೇಕು. ಹಾಗಾದರೆ ಈ ಶಿಲಾಲೇಖದ ಕಾಲವು ಕ್ರಿ. ಶ. 192-193 ನೆಯ ಆಂಗೀರಸ ಸಂವತ್ಸರವೆಂದಾಗುತ್ತದೆ.

ಹೀಗೆ ಆ ಕ್ರಿ. ಶ. 2 ನೆಯ ಶತಮಾನದ ಹಿಂದಣ ಕಾಲದಲ್ಲೂ ಶಿಲಾಲೇಖಗಳು ಹುಟ್ಟುತಿದ್ದುವು ಎಂದು ಬಯಲಾಗುವುದರಿಂದ, ಈ ಶಿಲಾಲೇಖದ ಕನಿಷ್ಠ ಪಕ್ಷಕ್ಕೆ ಎರಡಲ್ಲವಾದರೆ ಒಂದಾದರೂ ಶತಮಾನದ ಹಿಂದಿನಿಂದಲೇ ಶಾಸನಗಳು ಹುಟ್ಟತೊಡಗಿರಬೇಕು. ಹಾಗೂ ಯಾವ ಭಾಷೆಯಲ್ಲೂ ಸಾಹಿತ್ಯವಿದ್ದಿಲ್ಲದ ಮುಂಚೆ, ಆ ಭಾಷೆ ವ್ಯಾಕರಣಬದ್ಧವಾಗಿಲ್ಲದ ಮುಂಚೆ, ಭಾವಪ್ರಕಾಶನಕ್ಕೆ ಯೋಜಿಸಲ್ಪಡಲಾಗದ ಮುಂಚೆ ಸಾಹಿತ್ಯದಲ್ಲಿ ಪಳಗಿಸಲ್ಪಡಲಿಕ್ಕೆ ಬಂದಿಲ್ಲದ ಮುಂಚೆ ಆ ಭಾಷೆಯಲ್ಲಿ ಶಾಸನಗಳು ಪ್ರಾಯಿಕವಾಗಿ ಹುಟ್ಟಲಾರವು ಎಂದಿಷ್ಟು ಸ್ಪಷ್ಟವಿರುವುದರಿಂದ, ಈ ಶಾಸನದ ಕ್ರಿ. ಶ. 2 ನೆಯ ಶತಕಕ್ಕೆ ಹಿಂದಿನಿಂದಲೇ ಕನ್ನಡದಲ್ಲಿ ಪ್ರಗಲ್ಭವಾದ ಸಾಹಿತ್ಯವಲ್ಲವಾದರೆ ಸಾಮಾನ್ಯವಾದ ಸಾಹಿತ್ಯವಾದರೂ ಹುಟ್ಟಿರಬೇಕು, ಅತಏವ ಅಷ್ಟರಮಟ್ಟಿಗೆ ಭಾಷೆಯೂ ಅನುಕೂಲವಾಗಿರಬೇಕು, ಉಪಪನ್ನವಾಗಿದ್ದಿರಬೇಕು ಎಂದು ಸಹಜವಾಗಿ ಅನುಮೇಯಿಸಲಾಗುತ್ತದೆ. ಹಾಗಾದರೆ ಕನ್ನಡ ಸಾಹಿತ್ಯದ ಆರಂಭವನ್ನು ಕ್ರಿ. ಶ. ಮೊದಲನೆಯ ಶತಮಾನದ ಹಿಂದಕ್ಕೆ ತಳ್ಳಬೇಡವಾದರೆ, ಆ ಶತಮಾನದಲ್ಲಾದರೂ ಇರಿಸಬೇಕಾಗುತ್ತದೆ.

## II

ಇಂದಿಗೆ ೬೧-೬೨ ವರ್ಷಗಳ ಹಿಂದೆ ಕ್ರಿ. ಶ. 1897 ರಲ್ಲಿ Biblical Archaeological Association ನ ಪರವಾಗಿ ಐಗುಪ್ತ (Egypt) ದೇಶದ ತಗ್ಗಿನಲ್ಲಿಯ ಒಕ್ಸಿರ್ಹಿಂಖಸ್ (Oxyrhynchus) ಎಂಬಲ್ಲಿ ಕೆಯ್ಕೊಂಡ ಅಗೆತದಲ್ಲಿ ದೊರಕಿದ ಅನೇಕ ಪ್ರಾಕ್ಕಾಲೀನ ವಲ್ಕಲೇಖ (Papyri) ಕತ್ತರಿಗಳ ಮೇಲಣ ಬರೆಹಗಳು ಕ್ರಮಶಃ ಪ್ರಕಟವಾಗಿವೆ. ಅವಲ್ಲಿ 1903 ರಲ್ಲಿ ಪ್ರಕಟವಾದ ೩ ನೆಯ ಭಾಗದಲ್ಲಿ (vol. III)[3] ಇರುವ ಸಂ. 413 ನೆಯ ತೊಗಟೆಯ ಲೇಖದಲ್ಲಿ ಗ್ರೀಕ (Greek) ಭಾಷೆಯದೊಂದು ಚಿಕ್ಕ ಪ್ರಹಸನ (Farce) ಇದೆ, ಮತ್ತು ಆ ಪ್ರಹಸನದಲ್ಲಿ ಯಾವುದೋ ಒಂದು ಗ್ರೀಕೇತರ ಭಾಷೆಯ ಅನೇಕ ಶಬ್ದಗಳೂ ವಾಕ್ಯಗಳೂ ಇವೆ. ಅದರಲ್ಲಿ ಪ್ರಕಟವಾದ ಹಲವು ವರ್ಷಗಳ ಬಳಿಕ 1928 ರಲ್ಲಿ ನಾನು ಅದರದೊಂದು ಪ್ರತಿಯನ್ನು ಮುಂಬಯಿಯಿಂದ ಎರವಲಾಗಿ ತರಿಸಿಕೊಂಡು ಓದಿನೋಡಿ, ಬೆಂಗಳೂರಿನ 'ಪ್ರಬುದ್ಧ ಕರ್ಣಾಟಕ' ಪತ್ರಿಕೆಯ ಮರುವರ್ಷದ, ಅಂದರೆ 1929-1930 ರ XI ನೆಯ ಸಂಪುಟದ ೧-೨ ಸಂಚಿಕೆಗಳಲ್ಲಿ ಒಂದು ಲೇಖವನ್ನು ಬರೆದೆ. ಆ ಪ್ರಹಸನ ಮೈಸೂರು ಸರಕಾರದ Archaeological Report for 1926-1927 ನಲ್ಲಿಯೂ (ಪುಟ 11-21) ಪ್ರಕಟವಾಗಿದೆ.

1928 ರಲ್ಲಿ ನಾನು ಅದರ ಅಚ್ಚಾದ ಮೂಲಪ್ರತಿಯನ್ನು[3] ಓದಿನೋಡುತ್ತಲೆ ಅದರಲ್ಲಿ

---

[3] Egypt Exploration Fund Graeco-Roman Branch: The Oxyrhynchus Papyeri, Part III, edited with translations and notes by B. P. Grenfell and A. S. Hunt, published by the Oxford University Press (1903).

ಒದಗುವ ಆ ಗ್ರೀಕೇತರ ಶಬ್ದಗಳ ಭಾಷೆಯಾದರೊ ಅಚ್ಚ ಕನ್ನಡವೆಂದೇ ನಿಶ್ಚಯಿಸಿ, ಆ ಶಬ್ದ ಆ ವಾಕ್ಯಗಳಿಗೆಲ್ಲ ಸರಿಯಾದ ಕನ್ನಡ ರೂಪಗಳನ್ನು ಕಂಡು ಹಿಡಿದು ಮೇಲೆ ಹೇಳಿರುವ ನನ್ನ ಲೇಖನವನ್ನು 'ಪ್ರಬುದ್ಧ ಕರ್ಣಾಟಕ'ಕ್ಕೆ ಕಳುಹಿಸಿದೆ.

ಆ ಪ್ರಹಸನದ ತೀರ ಚಿಕ್ಕದಾದ ಕಥೆ ಹೀಗದೆ—ಆಫ್ರಿಕ ಖಂಡದ ಐಗುಪ್ತ ದೇಶದ ಯಾವೊಂದು ಬಂದರಿನಿಂದ (port) ಒಂದು ಹಾಯಿಹಡಗು ಮೂಡಲಾಗಿ ಪ್ರಯಾಣಕ್ಕೆ ಹೊರಡುತ್ತದೆ. ಅದರಲ್ಲಿರುವ ಮಂದಿ ಎಲ್ಲಾ ಗ್ರೀಕರೇ, ಹಡಗದ ನಾಯಕ (captain), ನಾವಿಕರು (sailors), ಒಬ್ಬ ಸೋದರ, ಅವನ ಸೋದರಿ, ಆ ಗ್ರೀಕೇತರ ಭಾಷೆಯನ್ನು ಬಲ್ಲವನೊಬ್ಬ, ಮತ್ತೊಬ್ಬ ವಿದೂಷಕ (buffoon), ಇವರಿಷ್ಟು ಮಂದಿಯನ್ನು ಗೊತ್ತು ಹಚ್ಚಲಾಗುತ್ತದೆ, ಇವರು ಪ್ರಯಾಣಿಕರಾಗಿದ್ದರು. ಇವರೆಲ್ಲರಲ್ಲಿ ಆ ಸೋದರಿಯೊಬ್ಬಳ ಮಾತ್ರ ಹೆಸರನ್ನು ಹೇಳಿದೆ, ಖಾರಿತಿಒನ್ (Charition) ಎಂದು. ಆ ಹಡಗು ಬಿರುಗಾಳಿಗೆ ಸಿಕ್ಕಿ, ಅವರಲ್ಲಿ ಆ ಸೋದರಿ ನಮ್ಮ ದಕ್ಷಿಣ ಕನ್ನಡ ಜಿಲ್ಲೆಯ ಕಡಲ ದಂಡೆಯಲ್ಲಿ ಒಗೆಯಲ್ಪಟ್ಟು, ಅಲ್ಲಿ ಬಳಿಯಲ್ಲಿರುವ ಸೋಮೇಶ್ವರ ದೇವಾಲಯದ ಆಶ್ರಯದಲ್ಲಿ ಉಳಿಕೊಂಡು ಅಲ್ಲಿಯ ಹೆಂಗಸರ ಜತೆಯಲ್ಲಿ ಕಾಲಕ್ಷೇಪಿಸುತ್ತಿದ್ದಳು. ಆ ಹೆಸರನ್ನು ಕರೆಯಲಿಕ್ಕೆ ಅನುಕೂಲಿಸುವಂತೆ ಸಣ್ಣಿಸಿ, ಅವರು ಅದಕ್ಕೆ ಇಲ್ಲಿಯ ಗೌರವವಾಚಿಯಾದ 'ಅಮ್ಮ' ಎಂಬುದನ್ನು ಕೂಡಿಸಿ, ಅವಳನ್ನು ಖಾರಿಮ್ಮ (Charimma) ಎನ್ನುತ್ತಾರೆ (ಪಂಕ್ತಿ ೧೬). ಕೆಲಕಾಲಾನಂತರ ಅವಳ ಸೋದರನೂ ಅವನ ಜತೆಗಾರರೆಲ್ಲರೂ ಅವಳನ್ನು ಹುಡುಕಾಡುತ್ತ ಬಂದು, ಆಕೆ ತಂಗಿದ್ದ ಆ ಸೋಮೇಶ್ವರ ದೇವಾಲಯದ ಬಳಿಯ ಕಡಲ ದಂಡೆಯಲ್ಲಿ ಹಡಗದಿಂದ ಇಳಿದು, ಆಕೆಯನ್ನು ಸಂಧಿಸಿ, ಅವಳೊಂದಿಗೆ ಅವರು ತಮ್ಮ ಊರಿಗೆ ತೆರಳುತ್ತಾರೆ. ಇಲ್ಲಿಂದ ಹೊರಡುವ ಹೊತ್ತಿಗೆ ಅವರಿಗೂ ಇಲ್ಲಿಯವರಿಗೂ ಪಾನಗೋಷ್ಠಿಯಾಗುತ್ತದೆ, ಅಲ್ಲಿಗೆ ಆ ಪ್ರಹಸನವೂ ಮುಗಿಯುತ್ತದೆ.

ಆ ಪ್ರಹಸನದ ಕಥಾಭೂಮಿ ನಮ್ಮ ಭಾರತ ದೇಶ ತಾನೆ ಎಂದು ಅದರಲ್ಲಿಯ ಈ ಕೆಲವು ಮಾತುಗಳಿಂದ ವ್ಯಕ್ತವಾಗುತ್ತದೆ–(೧) ಪಂಕ್ತಿ (ಪಂ.) ೨೧೫: 'to Indikon Pelagos' ='the Indian Ocean,' ಅಂದರೆ ಭಾರತೀಯ ಮಹಾಸಾಗರ; (೨) ಪಂ. ೯೦: 'Indon promoi'=Indian chiefs ಅಂದರೆ ಹಿಂದುಸ್ಥಾನದ ನಾಯಕರು; (೩) ಪಂ. ೭೭: Seo sarachis=ಶಿವ (=ಶಿವನೇ) ಸ(೦) ರಕ್ಷಿಸು' (ಗ್ರೀಕ ಭಾಷೆಯಲ್ಲಿ ಅನುಸ್ವಾರವಿಲ್ಲ); (೪) ಪಂ. ೭೮: 'Oumesare'=ಗ್ರೀಕ ಭಾಷೆಯ ಸಂಬೋಧನ ವಿಭಕ್ತಿಯ ಏಕವಚನವಾದ ಈ ಶಬ್ದದ ಆದ್ಯಕ್ಷರವಾದ ಸ-ಕಾರವು (S) ಬಿಟ್ಟು ಹೋಗಿದೆ, ಅದನ್ನು ಕೂಡಿಸುತ್ತಲೆ, ಇದು 'Souamesare' ಎಂದರೆ 'ಸೋಮೇಶ್ವರನೇ!' ಎಂದು ಅರ್ಥವುಳ್ಳ ಶಬ್ದವಾಗುತ್ತದೆ; ಇತ್ಯಾದಿ.

ನಮ್ಮ ಭಾರತ ದೇಶದಲ್ಲಿ ಇದರ ತಾತ್ಕಾಲಿಕ ಕಥಾಪ್ರದೇಶವಾದರೆ, ಕಂಡಿತವಾಗಿಯೂ ನಮ್ಮ ದಕ್ಷಿಣ ಕನ್ನಡ ಜಿಲ್ಲೆಯ ಉತ್ತರಾರ್ಧದಲ್ಲಿರುವ ಉಡುಪಿಯ ನೆರೆಕರೆಯ ಯಾವೊಂದು ಊರು, ಆ ಕನ್ಯೆಯನ್ನು ಹುಡುಕಾಡಿ ಬಂದವರು ಹಡಗದಲ್ಲಿ ಬಂದು ಅಲ್ಲಿ ಇಳಿದರೆಂಬ ಕಾರಣ, ಅದು ಸಮುದ್ರ ತೀರದಲ್ಲಿಯ[4] ಯಾವೊಂದು ಊರು ಎಂದು ಸ್ಪಷ್ಟವಾಗುತ್ತದೆ.

ಇದರಲ್ಲಿ (ಪಂ. ೮೧) 'Malpiniakouroukou koubi karako . . . ra' ಎಂದಿರು

---

[4] ಈ ಪ್ರಹಸನದಲ್ಲಿ (ಪಂ. ೯೧) ಈ ಎಡೆಯಲ್ಲಿ paral . . .' (ಮುಂದೆ ತ್ರುಟಿತವಾಗಿದೆ) ಎಂದಿರುವ ಶಬ್ದ ಗ್ರೀಕ್ ಭಾಷೆಯ paralios' ಅಥವಾ 'paralion' ಎಂಬ ಶಬ್ದವೆಂಬಲ್ಲಿ ಸಂಶಯವಿಲ್ಲ. ಆವೆರಡೂ ಶಬ್ದಗಳ ಅರ್ಥ ಒಂದೇ—'on the beach,' 'on the seashore' ಅಂದರೆ ಸಮುದ್ರದ ತೀರದಲ್ಲಿ ಎಂದು.

ವಲ್ಲಿ ಲುಪ್ತವಾದ ಅಕ್ಷರಗಳನ್ನು ಯಥಾಮತಿಯಾಗಿ ಸೇರಿಸಿ, ಆ ವಾಕ್ಯವನ್ನು ನಾನು 'ಮಲ್ಪಿನಾಯಕರುಕು ಕೂಬಿ ಕರಕೊ(ಂಡು) ಬಾ' ಎಂದು ತಿದ್ದಿರುತ್ತೇನೆ, ಅದರ ಅರ್ಥ— 'ಮಲ್ಪಿ ನಾಯಕರಿಗೆ ಕೂಗಿ ಕರಕೊಂಡು ಬಾ' ಎಂದು. ಮೂಲದಲ್ಲಿ ಕೊನೆಯ ಎರಡಕ್ಷರಗಳು 'ರಾ' ಎಂದಿವೆಯಲ್ಲವೇ? ಆ ಓದು ಬರೆದವರ ತಪ್ಪಾಗಿರಬೇಕು, ಏಕೆಂದರೆ ಗ್ರೀಕ ಅಕ್ಷರಗಳಲ್ಲಿ ರ-ಕಾರಕ್ಕೆ (r) ಒಂದು ಸುರುಳಿ, ಬಕಾರಕ್ಕೆ (b) ಒಂದರ ಕೆಳಗೆ ಮತ್ತೊಂದಾಗಿ ಎರಡು ಸುರುಳಿಗಳು ಇರುವುದರಿಂದ, ಅಜ್ಞಾತವಾದ ಪರಭಾಷೆಯ ಶಬ್ದವನ್ನು ತಮ್ಮ ಬರೆಹದಲ್ಲಿ ಬರೆದಿಡುವಲ್ಲಿ ಈ ಬಗೆಯ ಕೆಯ್ತಪ್ಪಾದರೆ ಅದೇನೂ ಸೋಜಿಗವಲ್ಲ.

ಈಗ 'ಮಲ್ಪಿನಾಯಕರು' ಎನ್ನುತ್ತಲೆ, ನಮ್ಮ ದಕ್ಷಿಣ ಕನ್ನಡ ಜಿಲ್ಲೆಯವರ ನೆನಮನಗಳಿಗೆ ಹೇಗೂ ತಟಕ್ಕನೆ ಭಾಸವಾಗುವುದೆಂದರೆ, ನಮ್ಮ ಜಿಲ್ಲೆಯ ಒಂದು ನಾಮಾಂಕಿತವಾದ ಪಟ್ಟಣವಾಗಿರುವ ಉಡುಪಿಯ ಬಳಿಯಲ್ಲಿ ಪಶ್ಚಿಮಕ್ಕಿರುವ ಮಲ್ಪೆ ಎಂಬ ಹೆಸರುವಾಸಿಯಾದ ಬಂದರು (port). ಆದರೆ ಈ ಪ್ರಹಸನದಲ್ಲಿಯ 'ಮಲ್ಪಿ' ಎಂಬುದು ಆ ರೇವು (port) ಆಗಿರಲಾರದು. ಏಕೆಂದರೆ ಕ್ರಿ. ಶ. 2 ನೆಯ ಶತಕದಲ್ಲಿ ಹುಟ್ಟಿರಬೇಕೆಂದು ಮುಂದೆ ತಿಳಿಯುವ ಈ ಪ್ರಹಸನದ ರಚನಕಾಲಕ್ಕಿಂತ ಹಿಂದಿನಿಂದಲೇ ಮಲ್ಪೆಯ ಬಂದರದ ತಾವು ಈಗ ಇದ್ದಿರುವಂತೆಯೇ ಆಗಲೂ ಇದ್ದಿರಬೇಕಾದರೂ, ಅದಕ್ಕೆ ಆಗಲೂ 'ಮಲ್ಪೆ' ಎಂದೇ ಹೆಸರಿತ್ತೆಂದು ನಂಬಲಾಗುವುದಿಲ್ಲ ಮಾತ್ರವಲ್ಲ, ಇದರ ಕಥಾಪ್ರದೇಶದ ಜಾಗವಾದ ಸಮುದ್ರತೀರದಲ್ಲಿ, ಅಲ್ಲಿ ಹತ್ತಿರಲೇ ಇದ್ದುವೆಂದು ಇದರಲ್ಲಿ ಹೇಳಿರುವ 'ಹೊಳೆ' ಎಂಬ ಅರ್ಥದ ಗ್ರೀಕ 'potamos' ಎಂಬ ಶಬ್ದದ ದ್ವಿತೀಯಾ ವಿಭಕ್ತಿಯ ಏಕವಚನವಾದ 'potamon' (ಪಂ. ೨೭) ಎಂಬಲ್ಲಿಯೂ, ಆಮೇಲಣ (ಪಂ. ೭೫) 'apuleukasar' ಎಂಬುದನ್ನು 'ಆ ಪುಳೆಕಸಾರ್' ಎಂದು ನಾನು ಓದಿ 'ಆ ಹೊಳೆ(ಯ ಬಳಿ)ಗೆ ಹೋಗು' ಎಂದು ಅರ್ಥವಿಸಿದುದು ಸರಿಯಾದರೆ ಅಲ್ಲಿಯೂ, ಹೀಗೆ ಎರಡು ಕಡೆಗಳಲ್ಲಿ ಹೇಳಲ್ಪಟ್ಟಿರುವ ಹೊಳೆಯೂ, 'Soumesare'=ಸೋಮೇಶ್ವರ ಎಂಬ ಹೆಸರಿನ ಶಿವಾಲಯವೂ ಮಲ್ಪೆಯಲ್ಲಿ ನಾಸ್ತಿ. ಅತಏವ ಇದರಲ್ಲಿರುವ 'ಮಲ್ಪಿ' ಎಂದರೆ ಸರ್ವಥಾ ಮಲ್ಪೆಯ ಬಂದರವಲ್ಲ. ಹಾಗಾದರೆ 'ಮಲ್ಪಿನಾಯಕರು' ಎಂಬುದನ್ನು ಹೇಗೆ ತಾನೆ ಅರ್ಥವಿಸಿಕೊಳ್ಳಬಹುದು? ನೋಡೋಣ. ಈಗ ಗ್ರೀಕ ಭಾಷೆಯಲ್ಲಿ ಅ-ಕಾರ ('a') ದಿಂದ ಮೊದಲಾಗುವ ಶಬ್ದಗಳ ಆದಿಯಲ್ಲಿ ಅರ್ಥಕ್ಕೆ ತೀರ ಅನುಪಯೋಗಿಯಾದ ಒಂದು ಮ-ಕಾರ('m') ವನ್ನು ಹಚ್ಚುವ ಬಳಕೆ ಇತ್ತು. ಅಂಥಾ ಮ-ಕಾರವನ್ನು ಕಳಚಿಬಿಡುತ್ತಲೆ, 'ಮಲ್ಪಿನಾಯಕರು' ಎಂದಿದ್ದ ಸಮಾಸಪದವು 'ಅಲ್ಪಿನಾಯಕರು' (alpiniakourou) ಎಂದಾಗುತ್ತದೆ. ಇಲ್ಲಿಯ 'ಅಲ್ಪಿ' ಎಂಬ ಪೂರ್ವಪದವಾದರೊ ಗ್ರೀಕರ ಬಾಯಿಯಲ್ಲಿ ರೂಪಗೆಟ್ಟ ನಮ್ಮತ್ತಣ 'ಅಲೂಪ' ಎಂಬ ಶಬ್ದವೇ ಸರಿ.

ಇವೆಲ್ಲವೂ, ಅಂದರೆ ಹೊಳೆಯ ಕರೆಯೂ, ಸಮುದ್ರದ ತೀರವೂ, ಸೋಮೇಶ್ವರ ಎಂಬ ಹೆಸರಿನ ಶಿವಾಲಯವೂ, ಈ ಪ್ರಹಸನದ ರಚನಕಾಲದಲ್ಲಿ ಅಲೂಪ ವಂಶದ ಅರಸರ ಆಳಿಕೆಯೂ ಒಡಗೂಡಿದ್ದ ಊರೆಂದರೆ ಉಡುಪಿಯಿಂದ ೪-೫ ಮೈಲುಗಳಷ್ಟರ ದಕ್ಷಿಣಕ್ಕಿರುವ ಆಗ ಪ್ರಾಯಶಃ ಉದಯಾವರ (ಆವರ=ಊರು, ಪುರ) ಎಂದು ಹೆಸರಿದ್ದ, ಈಗ ಉದ್ಯಾವರ ಎಂಬ ಒಂದೂರು. ಅದು ಸಮುದ್ರದೊಡನೆ ಸಂಗ್ರಮಿಸುವ ನದಿಯ ಕರೆಯಲ್ಲಿಯೂ ಸಮುದ್ರದ ತೀರದಲ್ಲಿಯೂ ಇದೆ, ಅಲ್ಲಿ ಬಳಿಯಲ್ಲೇ ಸೋಮೇಶ್ವರ ಎಂಬ ಶಿವಾಲಯವೂ ಇದೆ. ಆ ನದಿಯನ್ನು ದಾಟಿ ಉತ್ತರಮುಖವಾಗಿ ಹೋಗುತ್ತಲೇ ರಸ್ತೆಯ ಬಲಬದಿಯಲ್ಲಿ ಹಲವು ಶತಮಾನಗಳ ಹಿಂದೆ ಕೆಲವು ಶತಕಗಳವರೆಗೆ ಅಲ್ಲಿ ಆಳಿದ್ದ ಅಲೂಪ ವಂಶದ ಅರಸರ ರಾಜಧಾನಿಯ ಹಾಳುಬೀಳುಗಳ ಒಂದು ದಿನ್ನೆಯೂ ಇದೆ. ಹೀಗೆ ಈ ಪ್ರಹಸನದ ನಿಶ್ಚಿತವಾದ ತಾತ್ಕಾಲಿಕ ಕಥಾಪ್ರದೇಶವೆಂದರೆ ನಮ್ಮ ಜಿಲ್ಲೆಯ ಆ ಉದ್ಯಾವರ ತಾನೆ.

ಇನ್ನು ಈ ಪ್ರಹಸನದ ರಚನಕಾಲವನ್ನು ಕುರಿತು ನೋಡೋಣ. ಒಕ್ಸಿರ್ಹಿಂಖಸ್‌ನಲ್ಲಿ ಜರುಗಿಸಿದ ಅಗೆತದಲ್ಲಿ ಎತ್ತಿ ತೆಗೆದ ವಲ್ಕಲೇಖಗಳು ಪ್ರಾಯಶಃ ಐಗುಪ್ತ ದೇಶದ ಅಲೆಕ್ಸಂದ್ರಿಯ (Alexandria) ಎಂಬ ಆಗಣ ಕಾಲದಲ್ಲಿ ಸಾಹಿತ್ಯ, ವಿಜ್ಞಾನ, ತತ್ತ್ವಶಾಸ್ತ್ರ, ಸಂಸ್ಕೃತಿ ಹಾಗೂ ವಾಣಿಜ್ಯ ಇವೆಲ್ಲವುಗಳ ಪ್ರಖ್ಯಾತವಾದ ಕೇಂದ್ರವಾಗಿದ್ದ ಶಹರಿನಲ್ಲಿದ್ದ ಯಾವುದೊಂದು ಹಿರಿದಾದ ಸರಸ್ವತೀ ಭಂಡಾರದಲ್ಲಿಯ (library) ಗ್ರಂಥಗಳೇನೋ ಎಂದು ನನಗೆ ನೆನಪು ತೋರುತ್ತದೆ. ಅದು ಸರಿಯೆಂದಾದರೆ, ಅವೆಲ್ಲ ಗ್ರಂಥಗಳು ಅವುಗಳ ರಚನ ಕಾಲಕ್ಕೆ ಅನುಕ್ರಮವಾಗಿ ಅಲ್ಲಿ ಇರಿಸಲ್ಪಟ್ಟಿರಬೇಕೆಂದು ಬಗೆಯಬಹುದು. ಹಾಗಾದರೆ ಇದರೊಂದಿಗೆ ಆ ಅಗೆತದಲ್ಲಿ ದೊರೆತ ಎರಡು ಮಂದಿ ಗ್ರೀಕರ ಜಾತಕಗಳಿವೆ. ಅವರಲ್ಲಿ ಒಬ್ಬನು ರೋಮಾಯ ಸಾಮ್ರಾಜ್ಯದ (Roman Empire) ಚಕ್ರವರ್ತಿಯಾದ ಅಂತೋನಿನುಸ್ ಪಿಉಸ್ (Antoninus Pius) ಎಂಬವನ ಆಳಿಕೆಯ ೨ ನೆಯ ವರ್ಷದಲ್ಲಿ, ಮತ್ತೊಬ್ಬನು ಅದೇ ಆಳಿಕೆಯ ೧೩ ನೆಯ ವರ್ಷದಲ್ಲಿ ಜನಿಸಿದನೆಂದು ತಿಳಿಯುವುದರಿಂದ ಈ ಪ್ರಹಸನದ ರಚನಕಾಲವನ್ನು ಆ ಸಮ್ರಾಜನ ಆಳಿಕೆಯ ಮಧ್ಯಕಾಲಕ್ಕೆ ಹೊಂದಿಸಬಹುದು. ಅಂದರೆ ಆತನು ಕ್ರಿ. ಶ. 138 ನೆಯ ಇಸವಿಯಿಂದ 161 ನೆಯ ಇಸವಿಯ ವರೆಗೆ ಆಳಿದ್ದನು, ಅತಏವ ಇದನ್ನು ಕ್ರಿ. ಶ. 150 ನೆಯ ಇಸವಿಗೆ ಹೊಂದಿಸಬಹುದು.

ಈ ಪ್ರಹಸನದಲ್ಲಿಯ ಕನ್ನಡ ಶಬ್ದಗಳು ಹೀಗಿವೆ—(೧) 'arminthi' (ಪಂ. ೨೯)= '(ನಿಮ್ಮಲ್ಲಿ) ಯಾರು ಮಿಂದಿ(ರಿ)?' ಎಂಬುದಕ್ಕಿಂತ ಲೇಸಾಗಿ '(ನೀನು) ಹೊಳೆಯಲ್ಲಿ ಮಿಂದಿ' (+ನಾವಾದರೊ ಈಗ ಮಿಾಯಲಿಕ್ಕೆ ಹೋಗುತ್ತೇವೆ) ಎಂದು ನಾನು ಅರ್ಥವಿಸಿರುತ್ತೇನೆ. 'ಆರ್' ನಮ್ಮ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೇಗೂ 'ಹೊಳೆ' ಎಂದು ಅರ್ಥವೆಂದು ಇಲ್ಲಿ ಹೊಳೆಗಳ ಕರೆಯಲ್ಲಿಯ ಊರುಗಳ ಹೆಸರುಗಳಿಂದ ತಿಳಿಯುತ್ತದೆ, ಉದಾ. ಮೂಡಾರ್, ಬೋಳಾರ್, ಉಬಾರ್, ಇಇ. (ಕನ್ನಡ ಧಾತು 'ಆರ್'=ಮುಳುಗು, ಮುಳುಗಿಸು)

(೨) ಮೇಲೆ ಕಂಡಿರುವಂತೆ, 'apuleukasar'='ಆ ಪುಳೆಕ ಸಾರ್' ಅಂದರೆ 'ಆ ಹೊಳೆ (ಯ ಬಳಿ)ಗೆ ಹೋಗು' (ಪಂ. ೭೫) ಎಂದು ಅರ್ಥವಿಸಿರುತ್ತೇನೆ.

(೩) 'echousi' (ಪಂ. ೧೯೨)=(ಗ್ರೀಕಿನಲ್ಲಿ) They have, ಅವರೊಂದಿಗೆ ಇದೆ. ಇದು 'ಏ ಕೂಸೇ!' ಎಂಬಂತೆ ಧ್ವನಿಸುತ್ತದೆ. ಕನ್ನಡದಲ್ಲಿ 'ಕೂಸು' ಅಂದರೂ, ಮುಂದೆ (ಪಂ. ೨೦೧) ಬರುವ 'ಕೊಡಗೂಸು' ಎಂದರೂ ಕನ್ಯೆ ಎಂದು ಅರ್ಥ. ಆಕೆ ಈ ಪ್ರಹಸನದ ನಾಯಿಕೆಯಾದ ಖಾರಿತಿಒನ್ ಎಂದು ಬೇರೆ ಹೇಳಬೇಕೆಂದಿಲ್ಲ.

(೪) 'kraunou' (ಪಂ. ೧೯೮)—ಇದು 'ಕರೆವನೌ!' (=ಕರೆವನಪ್ಪಾ!) ಅಥವಾ 'ಕರೆವನೋ?' (=ಕರೆಯುವನೋ?) ಎಂಬಂತೆ ಕನ್ನಡದಲ್ಲಿ ಧ್ವನಿಸುತ್ತದೆ.

(೫) 'kotakos auab . . . i osara' (ಪಂ. ೨೦೧)=ಕೊಡಗೂಸಿನ ಬಳಿ ಔಸರ, ಅಂದರೆ 'ಆ ಕನ್ಯೆಯು ಬಳಿಗೆ ಸರಿ, ಅಥವಾ ಸೇರು' ಎಂದು ಅರ್ಥವಿಸಿರುತ್ತೇನೆ.

(೬) ವಿದೂಷಕನು 'Ah! lady help!' (ಪಂ. ೨೦೪) ಎಂದು ಗಾಬರಿಯಾಗಿ ಗ್ರೀಕಿನಲ್ಲಿ 'ai kuria boethi' ಎನ್ನುತ್ತಾನೆ. ಇದರ ಕೊನೆಯ ಶಬ್ದವಾದ boethi' ಎಂಬುದು ನಾಯಿಕೆಯೊಂದಿಗೆ ಇದ್ದ ಆ ಕನ್ನಡಿತಿಯರ ಕಿವಿಗೆ 'ಬಯ್ತಿ' ಅಂದರೆ 'ಬಯ್ಯುತ್ತಿ' ಎಂದು ಕೇಳಿಸಿತು. ಆಗ್ಗ ಅವರು ಪ್ರತ್ಯುತ್ತರವಾಗಿ 'alemaka' (ಪಂ. ೨೦೫)=ಅಲ್ಲ+ಎಮ್ಮ +ಅಕ್ಕಾ' ಅಂದರೆ 'ನಮ್ಮ ಅಕ್ಕಾ, (ಹಾಗೆ) ಅಲ್ಲ, (ನಾವು) ಬಯ್ಯಲಿಲ್ಲ' ಎನ್ನುತ್ತಾರೆ.

(೭) 'porde' (ಪಂ. ೨೧೨) ಎಂಬ ವಿದೂಷಕನ ಮಾತು ಇಲ್ಲಿಯವರಿಗೆ ಕನ್ನಡ ಭಾಷೆಯ 'ಪೊರಟೆ' ಅಂದರೆ 'ತಾನು ಹೋಗಲಿಕ್ಕೆ ಸಿದ್ಧನಾದೆ' ಎಂಬಂತೆ ಕೇಳಿಸುತ್ತದೆ. ಅದಕ್ಕೆ ಪ್ರತ್ಯುತ್ತರವಾಗಿ ಅವರು 'minei' (ಪಂ. ೨೧೩) ಎನ್ನುವರು. ಇದಕ್ಕೆ ಕನ್ನಡದಲ್ಲಿ 'ಮಿಾಣ+ಏ'?='ಮೀಣವೇ?' ಅಂದರೆ 'ಮಿಾಯೋಣಕ್ಕೆ ಹೋಗುವಿ ಏನು?' ಎಂದು

ಅರ್ಥವಾಗುತ್ತದೆ, ಆತಸಿಗಾದರೆ ಆ ಮಾತು ಗ್ರೀಕಿನಲ್ಲಿ 'me nei' ಅಂದರೆ 'ಹೋಗಬೇಡ' ಎನಿಸುತ್ತದೆ. 'porde' ಎಂಬ ಒಂದು ಗ್ರೀಕಭಾಷೆಯ ಶಬ್ದವಿದೆ. ಅದು ಟ, ಠ, ಡ, ಢ ಎಂಬ ಮೂರ್ಧನ್ಯ ಸ್ವರಗಳಿಲ್ಲದ ಗ್ರೀಕ ಭಾಷೆಯಲ್ಲಿ 'ಪೊರ್ದೆ' ಎಂದು ಉಚ್ಚರಿಸಲ್ಪಡುತ್ತದೆ, ಅದರ ಅರ್ಥವಾದರೆ ತೀರ ಅಶ್ಲೀಲ.

(೮) 'orkis' (ಪಂ. ೯೨). ಎಲ್ಲರೂ ಒಮ್ಮಿಗೇ ಘೋಷಿಸುವ ಈ ಪದದ ಅರ್ಥ ಗ್ರೀಕಿನಲ್ಲಿ 'ಕುಣಿ' ಎಂದು, ಕನ್ನಡದಲ್ಲಾದರೆ ಅದು 'ಒರಗಿಸು' ಅಂದರೆ 'ಮಲಗಿಸು' ಎಂದಾಗುತ್ತದೆ; ಏಕೆಂದರೆ ಆತನು ಹೊಟ್ಟೆತುಂಬ ಕುಡಿದು ಮತ್ತನಾಗಿದ್ದಾನೆ.

(೯) 'boulliti kaloumbai platagouldabi . . . .' (ಪಂ. ೭೪) ಎಂಬುದನ್ನು ನಾನು 'ಬಾ ಒಳ್ಳಿತು ಕಳುಂಬಯ್ ಪಾಲ್ ತಗುಳ್ದಪಯ್' ಎಂದು ಓದಿ, ಅದನ್ನು '(ಇತ್ತ) ಬಾ, ಒಳ್ಳೇ ಕಳ್ಳನ್ನು (ಅಂದರೆ ಮದ್ಯವನ್ನು) ಉಂಬಯ್ (=ಉಣ್ಣುವಿ, ಅಂದರೆ ಕುಡಿಯುವಿ), ಪಾಲ್ (=ಹಾಲನ್ನು) ತಗುಳ್ದಪಯ್ (=ತಳ್ಳಿಬಿಡುವಿ)' ಎಂದು ಅರ್ಥವಿಸಿರುತ್ತೇನೆ.

(೧೦) 'martha marithouma ed mai maitho . . . . . thamouna martha marithouma' (ಸಂ. ೭೯-೮೦) ಇಲ್ಲಿ ಲೋಪವಾದ ಅಕ್ಷರಗಳನ್ನು ನಾನು ಯಥಾಮತಿಯಾಗಿ ಸೇರಿಸಿ, 'martha' ಎಂಬಲ್ಲಿಯ ಅರ್ಥಕ್ಕೆ ತೀರ ನಿರುಪಯೋಗಿಯಾದ ಆದ್ಯ ಮ-ಕಾರವನ್ನು (m) ವಿಸರ್ಜಿಸಿ, ಅದನ್ನು 'ಅರ್ಥಮರಿತೊಂ ಇದ ಮೈ ಮೈತೋ (ರ್ದಪುದು ?) . . . . . ತಮುನ ಮರ್ಥಮರಿತೊಮ' ಎಂದು ಓದಿ, ಅದಕ್ಕೆ '(ತಮ್ಮುನ=) ತಮ್ಮ ಅರ್ಥ (ಅಂದರೆ ಮನೋಗತ, ಅಭಿಪ್ರಾಯ) ವನ್ನು ತಿಳಕೊಂಡೆ. ಇದು (ಅಥವಾ ಇದೊ!) ಮೈ ಮೈತೋ (ರ್ದಪುದು . . . ?)' ಎಂದು ಅರ್ಥವಿಸಿರುತ್ತೇನೆ.

ಇವೆಲ್ಲ ಕನ್ನಡ ಶಬ್ದಗಳ ಜತೆಗೆ 'ಸ(ಂ)ರಕ್ಷಿಸು' (ಪಂ. ೭೭), 'ಅರ್ಥ' (ಪಂ. ೭೯), 'ನಾಯಕ' (ಪಂ. ೮೧) ಮುಂತಾದ ಕೆಲವು ಸಂಸ್ಕೃತ ಶಬ್ದಗಳೂ ಈ ಪ್ರಹಸನದಲ್ಲಿ ದೊರೆವುದರಿಂದ, ಇದರ ರಚನೆಯ ಕ್ರಿ. ಶ. 2 ನೆಯ ಶತಮಾನಕ್ಕೆ ಹಿಂದಿನಿಂದಲೇ ಕನ್ನಡ ಭಾಷೆಯಲ್ಲಿ ಸಂಸ್ಕೃತ ಶಬ್ದಗಳು ಬಂದು ನೆಲಸಿರಬೇಕು ಎಂದು ಸ್ಪಷ್ಟವಾಗುತ್ತದೆ.

ಈ ಪ್ರಹಸನದ ರಚಕನಾದರೂ ಸರ್ವಥಾ ಇಲ್ಲಿಯ ಕನ್ನಡಿಗನಲ್ಲ, ಇದು ರಚಿತವಾದುದೂ ಇಲ್ಲಿ ನಮ್ಮ ಜಿಲ್ಲೆಯಲ್ಲಿ ಅಲ್ಲ, ಐಗುಪ್ತ ದೇಶದಲ್ಲಿ ಆತನ ಊರಿನಲ್ಲಿ ತಾನೆ. ಆತನೊಬ್ಬ ಇಲ್ಲಿಗೆ ನಮ್ಮ ಜಿಲ್ಲೆಗೆ ಬಂದು ಸಾಕಷ್ಟು ಕಾಲ ಇಲ್ಲಿ ನೆಲಸಿದ್ದು, ಇಲ್ಲಿಯ ಕನ್ನಡವನ್ನು ಸುಲಭವಾಗಿ ಆಡಬಲ್ಲ ಗ್ರೀಕನಾಗಿದ್ದಿರಬೇಕು. ಇದು ಯಥಾರ್ಥವೆಂಬುದಕ್ಕೆ ಸರಿಯಾಗಿ ಈ ಪ್ರಹಸನದಲ್ಲಿ ಕನ್ನಡವನ್ನು ಮಾತಾಡಬಲ್ಲವನೊಬ್ಬ ಗ್ರೀಕನಿದ್ದಾನೆ ಎಂಬ ಉದಾಹರಣೆ ಸಾಕು.

ಈ ಪ್ರಹಸನದಲ್ಲಿ ನೃತ್ಯವಿದೆ, ಅದು ಇಲ್ಲಿಯ ನಮ್ಮ ತ್ರಣ ಹೆಂಗಸರ ನೃತ್ಯ. ನರ್ತನಕ್ಕೆ ಹಾಡುಗಳು ಬೇಕು, ಹಾಡುಗಳೆಂದರೆ ಕಾವ್ಯ ಸಾಹಿತ್ಯ. ಮೊತ್ತಮೊದಲಿನ ಕವಿತೆಗಳೆಲ್ಲ, ಹೆಚ್ಚು ಕಡಿಮೆ ಎಲ್ಲವೂ ಭಾಷೆಗಳಲ್ಲಿ ಎಂಬಂತೆ, ಹಾಡುಗಳಾಗಿದ್ದುವು; ಹಾಡುಗಳನ್ನು ಬಿಟ್ಟು ಬೇರೆ ಕವಿತೆಗಳು ಇರಲಿಲ್ಲ. ಹಾಗಾದರೆ ಈ ಪ್ರಹಸನದ ಕ್ರಿ. ಶ. 2 ನೆಯ ಶತಮಾನದ ಹಿಂದಿನಿಂದಲೇ ತಕ್ಕಮಟ್ಟಿನ ಕಾವ್ಯಗಳಲ್ಲವಾದರೆ ಕವಿತೆಗಳಾದರೂ ಇದ್ದಿರಬೇಕು ಎಂದು ನಿರ್ಣಯಿಸಬಹುದು.

ಇನ್ನುಳ್ಳ ಎರಡು ಗ್ರಂಥಗಳು ಕನ್ನಡ ಭಾಷೆಯ ಹಳಮೆಯನ್ನು ಕುರಿತ ಹುಡುಕಾಟಕ್ಕೆ ಮಾತ್ರ ನೆರವಾಗಬಲ್ಲುವಲ್ಲದೆ, ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಕುರಿತ ಶೋಧನೆಗಲ್ಲ. ಆದಕಾರಣ ಸಾಹಿತ್ಯದ ಪ್ರಾಚೀನತೆಯನ್ನು ಕುರಿತ ಸಂಶೋಧನದಲ್ಲಿ ಇದಕ್ಕಿಂತ ಹಿಂದಕ್ಕೆ ಹೋಗತಕ್ಕಂತೆ ದಾರಿ ತೋರದುದರಿಂದ ಆ ಪ್ರಕರಣವನ್ನು ಇಲ್ಲಿಗೆ ಮುಗಿಸುತ್ತೇನೆ.

## III

ಮತ್ತೊಂದು ಗ್ರಂಥವಿದೆ. ಅದು ಐಗುಪ್ತದೇಶದ ಪ್ತೊಲೆಮಿ (Ptolemy) ಎಂಬೊಬ್ಬ ಗ್ರೀಕ ಭೂಗೋಲಶಾಸ್ತ್ರಜ್ಞನ (geographer) ಗ್ರಂಥ. 'ಆತನು ನಮ್ಮ ಭಾರತವರ್ಷಕ್ಕೆ ಎಂದೂ ಬಂದಿದ್ದವನಲ್ಲ. ಆಗಣ ಪೂರ್ವಕಾಲದಲ್ಲೂ ಆತನ ಊರಾದ, ಅಂದರೆ ಐಗುಪ್ತ ದೇಶದಲ್ಲಿಯ ಪ್ರಾಯಶಃ ಮೇಲೆ ಹೆಸರಿಸಿದ ಅಲೆಕ್ಸಂದ್ರಿಯದ (Alexandria) ದಾರಿಯಾಗಿ ನಮ್ಮ ಹಿಂದುಸ್ಥಾನಕ್ಕೆ ಸರಾಗವಾಗಿ ಬಂದು ಹೋಗುತ್ತಿದ್ದ ಅವೆಷ್ಟೋ ಹಡಗುಗಳ ನಾವಿಕರು ಸಾಂಯಾತ್ರಿಕರು ಮುಂತಾದವರೊಡನೆ ಮಾತನಾಡಿ ಆತನು ಸಂಗ್ರಹಿಸಿದ್ದ ಮಾತುಕಥೆಗಳು ಸುದ್ದಿಗಳು ಮೊದಲಾದ ಕೇಳುಮಾತುಗಳನ್ನು ಆಧರಿಸಿ, ಆತನು ಬಹಳ ಉಪಯೋಗಿಯಾದ ಒಂದು ಗ್ರಂಥವನ್ನು ಬರೆದಿಟ್ಟಿರುತ್ತಾನೆ. ಆ ಗ್ರಂಥದಲ್ಲಿ ಭರತಖಂಡದಲ್ಲಿಯ ಅನೇಕ ಊರುಗಳು, ದೇಶಗಳು, ನದಿಗಳು ಇವುಗಳ ಹೆಸರುಗಳೇ ಮೊದಲಾದ ವಿವರವು ದೊರೆಯುತ್ತದೆ. ಆ ಹೆಸರುಗಳಾದರೆ ಗ್ರೀಕ ಉಚ್ಚಾರದ ತೊಡಿಗೆಯಲ್ಲಿರುವುದರಿಂದ, ನಮ್ಮಿಗೆ ವಿಲಕ್ಷಣವೆನಿಸುತ್ತವೆ.

ಆತನ ಗ್ರಂಥದಲ್ಲಿ ಆಗ್ಗೆ ಉತ್ತರ ಭಾರತದ Ozene (ಒಜ಼ೆನೆ)ಯಲ್ಲಿ ಆಳುತ್ತಿದ್ದ ಅರಸನ ಹೆಸರು Tiastanes (ತ್ಯಸ್ತನೆಸ್) ಎಂದೂ, ಹಾಗೆಯೇ ಆ ಪೂರ್ವಕಾಲದಲ್ಲಿ ದಕ್ಷಿಣ ಭಾರತದಲ್ಲಿ ಆಳುತ್ತಿದ್ದ ಅರಸನ ಹೆಸರು Siro Polemaios (ಸಿರೊ ಪೊಲೆಮಾಇಒಸ್) ಎಂದೂ ಆತನ ರಾಜಧಾನಿಯ ಹೆಸರು Baithana (ಬೈಥನ) ಎಂದೂ ಹೇಳಿದೆ. ಇಲ್ಲಿ Ozene ಎಂದರೆ ಮಾಲವ (Malwa) ದೇಶದ ರಾಜಧಾನಿಯಾದ ಪ್ರಖ್ಯಾತವಾದ ಉಜ್ಜಯಿನೀನಗರ, Tiastanes ಎಂದರೆ ಆಗ್ಗೆ ಆಳುತಿದ್ದ ಚಷ್ಟನ (Chastana) ಎಂಬ ಶಕಜಾತಿಯ (Indo-Scythian) ಅರಸ; ದಕ್ಷಿಣ ಭಾರತದಲ್ಲಿ ಆಗ್ಗೆ ಆಳುತಿದ್ದ Siro Polemaios ಎಂದರೆ ಕುಂತಲದೇಶವೆಂದು ಆಗ್ಗೆ ಕರೆಯಲ್ಪಡುತ್ತಿದ್ದ ಕರ್ಣಾಟಕ ರಾಜ್ಯದ ಚಕ್ರವರ್ತಿಯಾದ ವಾಸಿಷ್ಠೀಪುತ್ರ ಶ್ರೀ ಪುಳುಮಾಯಿ. ಆತನ ರಾಜಧಾನಿಯಾದ Baithana ಎಂದರೆ ಬಹಳ ಪೂರ್ವಕಾಲದಿಂದ ಪ್ರತಿಷ್ಠಾನಪುರ ಎಂದು ಪ್ರಖ್ಯಾತವಾಗಿದ್ದ ನಗರ, ಅದರ ಆ ಹೆಸರು ಲೋಗರ ಮಾತಿನಲ್ಲಿ ಅಪಭ್ರಂಶಿಸಿ ಪೈಠಣ ಎಂದಾಯಿತು. ಗ್ರೀಕರ ಬಾಯಿಯಲ್ಲಿ ಪೈಠಣವು ಬೈಥನ ಎಂದಾಯಿತು.

ಇನ್ನು ಚಷ್ಟನನ ಹೆಸರುಳ್ಳ ಅಂಧೌ (Andhau) ಎಂಬಲ್ಲಿಯ ಶಾಸನಗಳು[6] ಹುಟ್ಟಿದ ವರ್ಷ ಶಾ. ಶ. ೫೨ ಅಂದರೆ ಕ್ರಿ. ಶ. 130-131 ನೆಯ ಇಸವಿ. ವಾಸಿಷ್ಠೀಪುತ್ರ ಶ್ರೀ ಪುಳುಮಾಯಿಯ ಆಳಿಕೆಯ ಕಾಲವೆಂದರೆ, ನನ್ನ ನಿರ್ಣಯಿಕೆಯ ಪ್ರಕಾರ,[7] ಕ್ರಿ. ಶ. 91-119 ನೆಯ ಇಸವಿ. ಅತಏವ ಅವರಿಬ್ಬರನ್ನು ಹೆಸರಿಸಿರುವ ಪ್ತೊಲೆಮಿಯ ಗ್ರಂಥದ ರಚನಕಾಲವು ಇವೆರಡೂ ಕಾಲಗಳಿಗೆ ಸರಿಬೀಳುವಂತೆ ಕ್ರಿ. ಶ. ಸು. 115 ನೆಯ ಇಸವಿ ಎಂದು ನಿಶ್ಚಯಿಸಬಹುದು.

ಪ್ತೊಲೆಮಿಯ ಗ್ರಂಥದಲ್ಲಿ ದಕ್ಷಿಣ ಹಿಂದುಸ್ಥಾನದಲ್ಲಿಯ ಕನ್ನಡ ನಾಡಿಗೆ ಸರಿಸಮನಾಗುವ ಭೂಪ್ರದೇಶವನ್ನು Ariake (ಅರಿಯಕೆ, ಆರಿಯಾಕೆ, ಇ.) ಎಂದಿರುತ್ತದೆ. ಆ ಹೆಸರಾದರೆ ಇಲ್ಲಿಯ ಯಾವ ಪ್ರದೇಶದ ಸಂಸ್ಕೃತ ಅಥವಾ ದೇಶಭಾಷೆಯ, ಅಂದರೆ ಬಹುತಕವಾಗಿ ಕನ್ನಡ ಭಾಷೆಯ, ಹೆಸರಿನ ಗ್ರೀಕರ ರೂಪಾಂತರವೊ ತಿಳಿಯದು. ಅದರಲ್ಲಿ ಈ ಕೆಲವು ಸ್ಥಳನಾಮಗಳಲ್ಲಿ ಅಚ್ಚ ಕನ್ನಡ ಶಬ್ದಗಳು ದೊರೆಯುತ್ತವೆ—

(೧) Nagarouris (ನಾಗರೂರಿಸ್)—ಈ ಊರಿನ ಹೆಸರು 'ನಾಗರೂರು' (=ನಾಗರ+ಊರು) ಎಂದಿರಬೇಕು, ನಗರೂರು ಎಂದಿರಲಾರದು ; ಏಕೆಂದರೆ 'ನಗರ' ಎಂದರೂ 'ಊರು' ಎಂದರೂ ಹೆಚ್ಚುಕಡಮೆ ಒಂದೇ ಅರ್ಥವಾಗುವುದರಿಂದ, ಆ ದ್ವಿರುಕ್ತಿಯ ಹೆಸರು ಸ್ಥಳನಾಮವಾಗಿರಲಾರದು. ಈ ಹೆಸರಿನ ಪರಪದವಾದ 'ಊರು' ಎಂಬುದು ಕನ್ನಡ ಶಬ್ದ.

[5] Mc Crindle: Ancient India as described by Ptolemy, pp. 175-179 (Calcutta, 1927).
[6] Epigraphia Indica, XVI, ಪುಟ 212 ರಿಂದ ಮುಂದೆ. [7] New Indian Antiquary, VIII, ಸಂಚಿಕೆಗಳು 4-6 (ಏಪ್ರಿಲ್—ಜೂನು 1946), ಪುಟಗಳು 67 ಮತ್ತು ಮುಂದೆ.

(೨) Kalligeris (ಕಲ್ಲಿಗೇರಿಸ್) ಅಂದರೆ ಈಗಣ ಕಲಕೇರಿ ಅಥವಾ ಕಲ್ಕೇರಿ. ಒಂದು ಕಲಕೇರಿ ಎಂಬ ಊರು ಧಾರವಾಡ ಜಿಲ್ಲೆಯಲ್ಲಿದೆ, ಕಲ್ಕೇರಿ ಎಂಬ ಮತ್ತೊಂದು ಊರು ಬಿಜಾಪುರ ಜಿಲ್ಲೆಯಲ್ಲಿದೆ. ಇದರ ಪೂರ್ವಪದವಾದ 'ಕಲ–ಕಲ್' ಎಂಬುದು 'ಕಲ್ಲು' ಎಂಬ ಅರ್ಥದ ಕನ್ನಡ ಶಬ್ದವಷ್ಟೇ, ಪರಪದವಾದ 'ಕೇರಿ' ಎಂಬುದೂ ಕನ್ನಡ ಶಬ್ದ; ಉತ್ತರ ಕರ್ಣಾಟಕದಲ್ಲಿ 'ಕೇರಿ' ಎಂದರೆ (ಕೆರೆ, ಕುಂಟೆ, ಕೊಳ,) ಎಂದು ಅರ್ಥ. (ನಮ್ಮ ದಕ್ಷಿಣ ಕನ್ನಡ ಜಿಲ್ಲೆಯಲ್ಲಾದರೆ 'ಕೇರಿ' ಅಂದರೆ 'ಬೀದಿ' ಎಂದು ಅರ್ಥ.)

(೩) Modogoulla (ಮೊಡೊಗುಲ್ಲ) ಅಂದರೆ ಹೈದರಾಬಾದು ಸೀಮೆಯ ರಾಯಚೂರು ತಾಲೂಕಿನಲ್ಲಿಯ ಈಗ 'ಮುದ್ಗಲ' ಎಂಬ ಊರು. ಈ ಹೆಸರಿನ ಅರ್ಥ 'ಮುದು+ಕಲ್' ಅಂದರೆ (ಬಹಳ) ಹಳೆಯ ಕಲ್ಲು ಎಂದು ನನಗೆ ಸೂಚಿಸುತ್ತದೆ. ಪರಪದವೂ 'ಕಲ್' ಎಂದಿರುವ ಊರುಗಳೂ ಪೂರ್ವಪದವು 'ಮುದು' ಎಂಬ ಅರ್ಥವುಳ್ಳ 'ಹಳೆ' ಎಂದು ಇರುವ ಹೆಸರಿನ ಊರುಗಳೂ ನಮ್ಮ ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯೂ ಇರುತ್ತವೆ; ಉದಾ 'ಆನೆಕಲ್' 'ಬೇಕಲ್,' 'ಸುರತ್ಕಲ್,' 'ಬೆಸಗ್ಗಲ್' ಇ.ಇ.ಇ., ಹಾಗೂ 'ಹಳೆಯಂಗಡಿ' 'ಹಳನಾಡು' ಇ.ಇ.

(೪) Petirgala (ಪೆತಿರ್ಗಲ)-ಈ ಹೆಸರನ್ನು ನಾನು ಬಿಜಾಪುರ ಜಿಲ್ಲೆಯ ಬಾಗೇವಾಡಿ ತಾಲೂಕಿನಲ್ಲಿರುವ ಹತ್ತಿರಕಿ(ೀ)ಹಾಳ ಎಂಬ ಊರಿನ ಹೆಸರಿನೊಂದಿಗೆ ಸಮೀಕರಿಸಿರುತ್ತೇನೆ. ಅದು ಸರಿ ಎನಿಸಿದರೆ, ಈ ಹೆಸರಿನಲ್ಲಿ 'ಹಳ್ಳ' (stream) ಎಂಬ ಅರ್ಥದ ಬಹಳ ಹಳೆಯದೊಂದು ಶಬ್ದ ದೊರೆಯುತ್ತದೆ. ಉತ್ತರ ಕರ್ಣಾಟಕದಲ್ಲಿ 'ಹಾಳ' ಎಂಬ ಪರಪದ ಉಳ್ಳ ಹೆಸರಿನ ಇನ್ನೂ ಕೆಲವು ಊರುಗಳಿವೆ.

ಇದೆಲ್ಲವನ್ನು ಪರಿಶೀಲಿಸುವಂದು ಪ್ಟೊಲೆಮಿಯ ಗ್ರಂಥವು ರಚಿತವಾದ ಕ್ರಿ. ಶ. 2 ನೆಯ ಶತಮಾನದ ಮೊದಲಿಗಿಂತ ೧-೨ ಶತಮಾನಗಳಿಗಿಂತ ಹಿಂದಿನಿಂದಲೇ ಕನ್ನಡ ಭಾಷೆ ಇದ್ದಿರ ಬೇಕೆಂದು ಸಿದ್ಧವಾಗುತ್ತದೆ.

## IV

ಇನ್ನು ಉಳಿಯಿತೆಂದರೆ, ನಾನು ಕಾಂಬಸ್ಟರಮಟ್ಟಿಗೆ ಒಂದೇ ಕಟ್ಟೆ. ಅದೊಂದು ನೂರು ನೂರು ಗಾಥೆಗಳುಳ್ಳ ೭ ಶತಕಗಳ, ಅಂದರೆ ಒಟ್ಟಾರೆ ೭೦೦ ಗಾಹೆಗಳುಳ್ಳ ಪ್ರಾಕೃತ ಭಾಷೆಯ ಕಾವ್ಯ. ಸಂಸ್ಕೃತದಲ್ಲಿ 'ಗಾಥಾ' ಎಂದು ಅದೊಂದು ದ್ವಿಪದಿ ಛಂದಸ್ಸಿನ ಹೆಸರು; ಆ ಹೆಸರು ಕನ್ನಡದಲ್ಲಿ 'ಗಾಹೆ' ಎಂದು ತದ್ಭವಿಸುತ್ತದೆ. ಹೀಗಾಗಿ ಆ ಕಾವ್ಯದ ಹೆಸರು 'ಗಾಥಾ ಸಪ್ತಶತಿ' ಎಂದು. ಆ ಕಾವ್ಯದ ನನ್ನೊಂದಿಗಿರುವ ಪ್ರತಿಯಲ್ಲಿ[8] ಅದರ ರಚಕನ ಹೆಸರು 'ಹಾಲ' ಎಂದು. ಆತನನ್ನು ಅದರ ರಚಕನೆನುವುದಕ್ಕಿಂತ ಯಥೋಚಿತವಾಗಿ ಸಂಗ್ರಾಹಕ (Compiler) ಎನ್ನಬಹುದು, ಏಕೆಂದರೆ ಅದರಲ್ಲಿ ಪ್ರಾಕೃತ ಭಾಷೆಯ ಅನೇಕ ಕವಿಗಳ ಗಾಹೆಗಳಿವೆ, ಜತೆಗೆ ಆತನವೂ ಇವೆ. ನನ್ನ ಪ್ರತಿಯ 'ಗಾಥಾನುಕ್ರಮಣಿಕಾ' ಎಂಬ ಮುಂಭಾಗದಲ್ಲಿ (ಪುಟ ೧-೧೨) ಆ ಕವಿಗಳಲ್ಲಿ ಅನೇಕ ಮಂದಿಯ ಹೆಸರುಗಳನ್ನು ಕೊಟ್ಟಿದೆ. ಏವಂ ಚ ಪ್ರಾಕೃತ ಸಾಹಿತ್ಯದಲ್ಲಿ ಈ ಸಪ್ತಶತಿ ಹಿರಿಯದೊಂದು ಕಾವ್ಯವೆಂದೇ ಅಲ್ಲ, ಜನಪ್ರಿಯವಾದ ಕಾವ್ಯವೆಂದೂ ಆದರಿಸಲ್ಪಡು ತ್ತದೆ. ಹಾಗಾದರೆ ಆ ಹಾಲನೆಂದರೆ ಯಾರು?

ಮೇಲೆ ಹೆಸರಿಸಿರುವ ಪೈಠಣ ಎಂಬ ಪ್ರತಿಷ್ಠಾನಪುರದಲ್ಲಿ ಸಾತವಾಹನ ವಂಶದ ವಾಸಿಷ್ಠೀ ಪುತ್ರ ಶ್ರೀ ಪುಳುಮಾಯಿ (ಕ್ರಿ. ಶ. 91-119) ಎಂಬೊಬ್ಬ ಚಕ್ರವರ್ತಿ ಆಳಿದ್ದನೆಂದು ಕಂಡಿರು ವೆವಷ್ಟೇ. ಅದೇ ವಂಶಪರಂಪರೆಯಲ್ಲಿ ಆತನಿಗಿಂತ ಏಳು (೭) ತಲಾಂತರಗಳ ಹಿಂದೆ ಹಾಲ

---

[8] 'ಶ್ರೀ ಸಾತವಾಹನವಿರಚಿತಾ ಗಾಥಾಸಪ್ತಶತೀ' ('ಕಾವ್ಯಮಾಲಾ', ನಂ ೨೧: ನಿರ್ಣಯಸಾಗರ ಛಾಪಖಾನೆ, ಮುಂಬಯಿ 1889).

ಎಂಬ ಹೆಸರಿನವನೊಬ್ಬ ಅರಸನಿದ್ದನು. ನನ್ನೊಂದಿಗೆ ಇರುವ ಪ್ರತಿಯಲ್ಲಿ ಅದನ್ನು 'ಶ್ರೀ ಸಾತವಾಹನವಿರಚಿತಾ' ಎಂದು ಹೇಳಿರುತ್ತದೆ. ಆದರೆ ನನ್ನ ಪ್ರತಿಯಲ್ಲಿ ಇಲ್ಲದೆ ಅದೇ ಗ್ರಂಥದ ಬೇರೊಂದು ಪ್ರತಿಯ ಕೊನೆಯಲ್ಲಿದೆ ಎಂದು ಅದರಲ್ಲಿ ('ಸಾತವಾಹನ'—ಪುಟ ೧) ಉದ್ಧರಿಸಿರುವ ಅದೊಂದು ಗಾಹೆಯಲ್ಲಿ ಆ ಕೃತಿಯನ್ನು ಕುರಿತು ಹೀಗದೆ—'ರಾಪಣ ವಿರಇಆಪ ಕುಂತಲ ಜಣವಲ ಇಣೇಣ ಹಾಲೇಣ ಸತ್ತಸಈ'—ಎಂದಿದೆಯಂತೆ. ಅದರ ಅರ್ಥ 'ಕುಂತಲ ದೇಶದ ಒಡೆಯನಾದ ಹಾಲ ಎಂಬ ಅರಸನಿಂದ ವಿರಚಿತವಾದ ಸಪ್ತಶತಿ' ಎಂದು. ನನ್ನ ಪ್ರತಿಯ ೧ ನೆಯ ಪುಟದಲ್ಲಿ ಆ ಹಾಲನನ್ನು ಶ್ರೀಮತ್ಕುಂತಲ ಜನಪದೇಶ್ವರ ಪ್ರತಿಷ್ಠಾನಪತ್ತನಾಧೀಶ ಶ್ರೀ ಸಾತವಾಹನನರೇಂದ್ರ (ವಿರಚಿತಾ ..... ಸಪ್ತಶತಿ)' ಎಂದಿದೆ. ಇಲ್ಲಿ ಕುಂತಲದೇಶವೆಂದು ಕರ್ಣಾಟಕ ರಾಜ್ಯದ ಪ್ರಾಚೀನ ಹೆಸರು.

ಆ ಹಾಲನಿಂದ ವಾಸಿಷ್ಠೀಪುತ್ರ ಶ್ರೀ ಪುಳುಮಾಯಿಯ ವರೆಗಣ ಪೀಳಿಗೆ ಹೀಗದೆ[9]—




ಇವರಲ್ಲಿಯ ೭ನೆಯವನಾದ ಗೌತಮೀಪುತ್ರ ಶಾತಕರ್ಣಿಯೇ ಕ್ರಿ. ಶ. 78 ನೆಯ ಇಸವಿಯ ಶಾಲಿವಾಹನ[10] ಶಕದ ಪ್ರವರ್ತಕನೆಂದೂ, ಆತನ ಆಳಿಕೆಯ (ನನ್ನ ನಿರ್ಣಯಿಕೆಯ ಪ್ರಕಾರ ಕ್ರಿ. ಶ. 60–91) ೧೯ ನೆಯ ವರ್ಷದಲ್ಲಿ, ಅಂದರೆ ಕ್ರಿ. ಶ. 78 ರಲ್ಲಿ ಅದು ಹುಟ್ಟಿತೆಂದೂ ಆತನ ಕಾಲಾನಂತರ ಆತನ ಮಗನಾದ ವಾಸಿಷ್ಠೀಪುತ್ರ ಶ್ರೀ ಪುಳುಮಾಯಿ ಪಟ್ಟವೇರಿ ಕ್ರಿ. ಶ. 91 ರಿಂದ 119 ರ ವರೆಗೆ ಆಳಿದನೆಂದೂ ನಾನು ಅನ್ಯತ್ರ[11] ನಿರ್ಣಯಿಸಿರುತ್ತೇನೆ.

ಈ ಮೇರೆಗೆ ಹಾಲನು ವಾಸಿಷ್ಠೀಪುತ್ರ ಶ್ರೀ ಪುಳುಮಾಯಿಯಿಂದ ೭ ತಲಾಂತರಗಳ ಹಿಂದೆ ಆಳಿದ್ದಿರಬೇಕು ಎಂದು ವ್ಯಕ್ತವಾಗುತ್ತದೆ, ಅಂದರೆ ಆತನು ಕ್ರಿಸ್ತಪೂರ್ವ (ಕ್ರಿ. ಪೂ.) ಮೊದಲನೆಯ ಶತಕದಷ್ಟಾದರೂ ಹಿಂದೆ ಆಳಿದ್ದಿರಬೇಕು. ಹಾಗಾದರೆ ಆತನದೆಂಬ ಗಾಥಾಸಪ್ತಶತಿ ಕ್ರಿ. ಪೂ. 1 ನೆಯ ಶತಕದಲ್ಲಿ ರಚಿಸಲ್ಪಟ್ಟಿರಬೇಕು.

---

[9] ವಿಷ್ಣುಪುರಾಣ ಚತುರ್ಥಾಂಶ, ಅಧ್ಯಾಯ ೨೪ : ೧೨-೧೩ : [10] 'ಶಾಲಿವಾಹನ' ಎಂಬುದರ ಪೂರ್ವಪದ ನೇರಾಗಿ 'ಸಾಲ' ಎಂದಿರಬೇಕು, ಆ ಶಬ್ದವು 'ಸಾಲವಾಹನ' ಎಂದಿರಬೇಕು. ಅದು ಲೋಕೋಕ್ತಿಯಲ್ಲಿ ತೀರ ತಪ್ಪಾಗಿ 'ಶಾಲಿ' ಎಂದಾಗಿ ಹೋಗಿದೆ. 'ಸಾಲವಾಹನ' ಎಂಬ ಹೆಸರು 'ಸಾತವಾಹನ' ಎಂಬುದರ ಪ್ರಾಕೃತ ಭಾಷೆಯ ರೂಪವೆಂದು ಹೀಗೆ ತಿಳಿಯುತ್ತದೆ- (೧) 'ಸಾತವಾಹನೇ 'ತ-ಸ್ಯ' 'ಲೋ' ಭವತಿ || (ಹೇಮಚಂದ್ರನ ಪ್ರಾಕೃತವ್ಯಾಕರಣ, VIII. 1.೨೧೧) (೨) ಶಾತವಾಹನೇ ತ-ವರ್ಗಸ್ಯ ಲ-ತ್ವಂ ಭವತಿ || (ತ್ರಿವಿಕ್ರಮನ ಪ್ರಾಕೃತವ್ಯಾಕರಣ ಸೂತ್ರ, I. 3.೪೧) [11] New Indian Antiquary, VIII, nos 4-6 : April-June 1946 ; ಮತ್ತು Journal of Oriental Studies, Vol. I. 2.

ಈ ಗ್ರಂಥದಲ್ಲಿ 'ದೇಶೀ' ಅಂದರೆ ಸಂಸ್ಕೃತ ಭಾಷೆಗೂ ಪ್ರಾಕೃತ ಭಾಷೆಗೂ ಹೊರಗಾದುವು ಎಂಬ ಈ ಕೆಲವು ಶಬ್ದಗಳಿವೆ—

(ಅ) (೧) '**ಅತ್ತಾ** ತಹ ರಮಣಿಜ್ಜಂ' (I.೮)=(ಸಂಸ್ಕೃತ) '**ಶ್ವಶ್ರು** ತಥಾ ರಮಣೀಯಮ್' (೨) 'ಗ್ರಾಮಣಿ ಘರಮ್ಮಿ **ಅತ್ತಾ**' (V.೬೯)=(ಸಂ.) 'ಗ್ರಾಮಣಿಗೃಹೇ **ಶ್ವಶ್ರು**' (೩) '**ಅತ್ತಾ** ಏ ಘರೇ ಕುವಿಆ' (VI. ೫೭)=(ಸಂ.) '**ಶ್ವಶ್ರೂ**ರಪಿ ಗೃಹೇ ಕುಪಿತಾ'; (೫) 'ಭಣಿಏ ಭಣಾಮಿ **ಅತ್ತಾ**'=(ಸಂ.) 'ಭಣಿತೇ ಭಣಾಮಿ **ಶ್ವಶ್ರೂ**'

ಇವುಗಳಲ್ಲಿ '**ಶ್ವಶ್ರೂ**' ಅಂದರೆ '**ಗಂಡನ ತಾಯಿ**' ಎಂಬ ಅರ್ಥದ **ಅತ್ತಾ** ಎಂಬ ಶಬ್ದವಾದರೂ **ಅತ್ತೆ** ಎಂಬ ಕನ್ನಡ ಶಬ್ದವೇ ಹೊರತು ಬೇರೆಯಲ್ಲ.

(ಆ) '**ತುಪ್ಪಾ**ಣಣಾ' (III. ೮೯)=ಸಂ. '**ಘೃತ**ಲಿಪ್ತಾನನಾ' ಇಲ್ಲಿ '**ತುಪ್ಪ**' ಎಂಬುದನ್ನು ಸಂಸ್ಕೃತದಲ್ಲಿ **ಘೃತ** ಎಂದು ಭಾಷಾಂತರಿಸಿರುವುದರಿಂದ, ಅದು 'ಘೃತ' ಎಂಬ ಅರ್ಥದ '**ತುಪ್ಪ**' ಎಂಬ ಕನ್ನಡ ಶಬ್ದ ತಾನೆ. (ಇ) ೧. '**ಪೊಟ್ಟ**ಪಡಿಏಹಿಂ' (I.೮೩)=(ಸಂ.) '**ಉದರ**ಪತಿತಾಭ್ಯಾಮ್'; ೨ '**ಪೊಟ್ಟಂ** ಚ ಪಿಟ್ಟಇ' (II.೭೧)=ಸಂ. '**ಉದರಂ** ಚ ತಾಡಯತಿ'

'**ಉದರ**' ಎಂಬ ಅರ್ಥದ '**ಪೊಟ್ಟ**' ಎಂಬ ಶಬ್ದವು ಈಗಣ ಕನ್ನಡದಲ್ಲಿ '**ಹೊಟ್ಟೆ**' ಎಂಬುದರ ಹಳಗನ್ನಡ ರೂಪವಾದ '**ಪೊಟ್ಟೆ**' ಎಂದೇ ಸರಿ.

(ಈ) '**ಫಲಹೀ**' (II. ೬೫)=ಸಂ. '**ಕಾರ್ಪಾಸ**' ಅಂದರೆ ಈಗಣ ಕನ್ನಡದಲ್ಲಿ '**ಹತ್ತಿ**' 'ಹತ್ತಿಯ ಹಳಗನ್ನಡ ರೂಪ '**ಪತ್ತಿ**' ಎಂದು, ಆ **ಪತ್ತಿ**ಯೇ ಪ್ರಾಕೃತಿಸಿ 'ಫಲಹೀ' ಎಂದಾಗಿದೆ.

(ಉ) ೧. 'ಜೆತ್ತಅಮೆತ್ತಂ **ತೀರಇ**' (I. ೧೭)='ಯಾವನ್ಮಾತ್ರಂ **ಶಕ್ಯತೇ**'; ೨. 'ಉಸ್ಸಸಿಉಂ ಪಿ ಣ **ತೀರಇ**' (III. ೫೮)=ಸಂ. 'ಉಚ್ಛ್ವಸಿತುಮಪಿ ನ ಶಕ್ನೋತಿ;' ೩. '**ಅಣ್ಣಹ ಣ ತೀರಇ**' (IV. ೪೯)=ಸಂ. 'ಅನ್ಯಥಾ ನ **ಶಕ್ಯತೇ**'.

ಈ ಉದಾಹರಣೆಗಳಲ್ಲಿಯ **ಶಕ್ಯ**ವಾಗು ಎಂಬ ಅರ್ಥದ '**ತೀರಇ**' ಎಂಬ ಕ್ರಿಯಾಪದವು ಕನ್ನಡ ಭಾಷೆಯ ಅದೇ ಅರ್ಥ ಉಳ್ಳ '**ತೀರ್**' ಎಂಬ ಧಾತುವಿಂದ ಹುಟ್ಟಿತೆಂದು ಪ್ರತ್ಯಕ್ಷವಿದೆ. ಆ ಬಗ್ಗೆ 'ಶಬ್ದಮಣಿದರ್ಪಣ'ದ (ಮಂಗಳೂರು, 1920) ೧೪೬ನೆಯ ಸೂತ್ರಕ್ಕೆ ಉದಾಹರಣೆಯಾಗಿ ಕೊಟ್ಟಿರುವ (ಪುಟ 212) ಕಂದಾರ್ಧವನ್ನು ಇಲ್ಲಿ ಉದಾಹರಿಸಬಹುದು—

ನಿನಗೆನಗೆ ತನಗೆ ತೀರ್ಗುವೆ
ಹನುಮಂತನ ಶಕ್ತಿಸಾಹಸಂ ರಿಪುವಿಜಯಂ ||

ಹೀಗೆ ಕ್ರಿ. ಪೂ. 1ನೆಯ ಶತಕದ ಈ ಪ್ರಾಕೃತ ಗ್ರಂಥದಲ್ಲಿ ಶುದ್ಧ ಕನ್ನಡವೆಂದು ಕಂಡಿತವಾಗಿ ಬಲ್ಲ ಈ ಕೆಲವೇ ಆದರೂ ಶಬ್ದಗಳು ದೊರೆವುದರಿಂದ, ಆ ಹಿಂದಣ ಶತಮಾನದಲ್ಲೂ ಕನ್ನಡ ಭಾಷೆ ಬಳಕೆಯಲ್ಲಿ ಇದ್ದಿತೆಂದು ಸುಲಭವಾಗಿ ಸಿದ್ಧವಾಗುತ್ತದೆ.

ಹಾಗಾದರೆ ಕನ್ನಡ ಭಾಷೆ ಆ ಕಾಲಕ್ಕೂ ಕೆಲವು ಶತಮಾನಗಳ ಹಿಂದಿನಿಂದಲೇ, ಅಂದರೆ ಹೆಚ್ಚಲ್ಲವಾದರೆ ಕನಿಷ್ಠ ಪಕ್ಷಕ್ಕೆ ಕ್ರಿ. ಪೂ. 2ನೆಯ ಅಥವಾ 3ನೆಯ ಶತಮಾನದಿಂದಲಾದರೂ ಅಸ್ತಿತ್ವದಲ್ಲಿ ಇದ್ದಿರಬೇಕೆಂದು ನಿಷ್ಕೃಷ್ಟವಾಗಿ ನಿರ್ಧರಿಸಬಹುದು.

**ಗೋವಿಂದ ಪೈ**

# "ಇೞ್" ಧಾತುವನ್ನು ಕುರಿತು

## I

ಕನ್ನಡ ನುಡಿಯ ಪ್ರಾಚೀನ ಅವಸ್ಥಾಂತರಗಳನ್ನರಿಯಲು ಹೆಚ್ಚು ವಿಶ್ವಸನೀಯವಾದ ಸಾಮಗ್ರಿಯನ್ನೊದಗಿಸುತ್ತವೆ ಶಾಸನಗಳು. ಇಂತಹ ಪ್ರಾಚೀನ ಶಾಸನಗಳಲ್ಲಿ ಕೆಲವು ಕಡೆ 'ಇೞ್ದೊನ್', 'ಇೞ್ದಳ್', 'ಇೞ್ದುದು', 'ಇೞ್ದು' ಮುಂತಾದ ವಿಲಕ್ಷಣ ರೂಪಗಳು ಕಾಣಿಸಿಕೊಳ್ಳುತ್ತವೆ. ಕೆಲವು ನಿದರ್ಶನಗಳು—

"ಸುರಲೋಕಸೌಖ್ಯದೆಡೆಯಾನ್ ತಾವೆಯ್ದ ಇೞ್ದಾಳ್ ಮನಂ"[1]
"ಉರಿವುತ್ತಿೞ್ದದಂ ಕಂಡು"[2]
"ತೆಂಕಣ್ಗೆ ದಿರಂ ಬಂದಿೞ್ದುದು"[3]
"ಪ್ರತಿಪಾಲಿಸುತ್ತೊಸದಿೞ್ದಳ್"[4]
"ರಾಜಾಭಿಮುಖನಾಗಿೞ್ದು"[5]
"ನರಪತಿ ಬೆನ್ನೊಳಿೞ್ದೊನ್"[6]
"ನಾನಾದೇಶಿಗಳುಮಿೞ್ದು ಕೊಟ್ಟರ್"[7]

ಮೇಲಿನ ಪದಗಳ ಅರ್ಥವನ್ನು ನಿಶ್ಚಯಿಸುವುದು ಕಷ್ಟವೇನೂ ಅಲ್ಲ. ಕ್ರಮವಾಗಿ ಇವುಗಳಿಗೆ ಇದ್ದನು, ಇದ್ದಳು, ಇದ್ದುದು, ಇದ್ದು ಎಂದರ್ಥ. ನಮ್ಮ ಆಸಕ್ತಿಯನ್ನು ಕೆರಳಿಸುವುದು ಈ ಪದಗಳ ರೂಪವೇ ಹೊರತು ಅರ್ಥವಲ್ಲ.

## II

ಮೇಲಿನ ರೂಪಗಳು 'ಇೞ್' ಧಾತುವಿನಿಂದ ಬಂದಂತಿವೆ. ದ್ರಾವಿಡ ಭಾಷೆಗಳಲ್ಲಿ ಇೞಿ (ಹೊಸಗನ್ನಡ-ಇಳಿ) ಎಂಬ ಧಾತುವಿದೆ. ಇದಕ್ಕೂ ಈ ನಮ್ಮ ಇೞ್ ಧಾತುವಿಗೂ ಏನೂ ಸಂಬಂಧವಿಲ್ಲ. ತಮಿಳಿನಲ್ಲಿ ಇೞು (=ಎಳೆ) ಎಂಬ ಧಾತುವಿದೆ. ಇದಕ್ಕೆ ಸಮಾನವಾಗಿ ಮಲಯಾಳದಲ್ಲಿ ಇೞುಕ್ಕ, ಕೋತದಲ್ಲಿ ಇಳ್ವ್-, ಕನ್ನಡದಲ್ಲಿ ಎೞೆ, ಕೊಡಗಿನಲ್ಲಿ ಈಳ್, ತುಳುವಿನಲ್ಲಿ ಇಗ್ಗುನಿ, ತೆಲುಗಿನಲ್ಲಿ ಈಡುಚು, ಗೋಂಡಿಯಲ್ಲಿ ಈಸಾನಾ, ಕುರುಖ್‌ನಲ್ಲಿ ಈಚ್ನಾ, ಮಾಲ್ತೋದಲ್ಲಿ ಇಚೆ ಎಂಬ ರೂಪಗಳಿವೆ. ಡಾ. ಬರೊ ಮತ್ತು ಡಾ. ಎಮೆನೋ ಅವರ ಕೋಶದಲ್ಲಿ ಕನ್ನಡದ ಎೞೆಯ ಜೊತೆಯಲ್ಲಿ ಇೞ್, ಎೞ ಎಂಬ ರೂಪಗಳನ್ನೂ ಕೊಡಲಾಗಿದೆ.[8] ಇವರಿಗೆ ಆಧಾರ ಬಹುಶಃ ಕಿಟ್ಟಲ್ ಅವರ ಕೋಶ. ಕಿಟ್ಟಲ್ ಅವರು ಇೞ್, ಈೞ್, ಎೞೆ, ಈರ್ ಎಂಬ ರೂಪಗಳನ್ನು ಕೊಟ್ಟು ಇೞ್ಕುಳಿಗೊಳ್, ಎೞಕುಳಿಗೊಳ್ ಎಂಬ ನಿದರ್ಶನಗಳನ್ನು ಕೊಟ್ಟಿದ್ದಾರೆ.[9] ದ್ರಾವಿಡ ಭಾಷೆಗಳಲ್ಲಿ ಎೞೆ ಧಾತುವಿಗೆ ಸಮಾನವಾಗಿರುವ ರೂಪಗಳನ್ನು ನೋಡಿದರೆ ಕನ್ನಡದಲ್ಲಿ ಮಾತ್ರ ಆದಿಯಲ್ಲಿ ಎ ಇದ್ದು, ಉಳಿದ ಭಾಷೆಗಳಲ್ಲೆಲ್ಲಾ ಇ (ಈ) ಇರುವುದು ಕಂಡುಬರುತ್ತದೆ. ಮೂಲದ್ರಾವಿಡದಲ್ಲಿ ಎ ಇತ್ತೇ ಅಥವಾ ಇ ಇತ್ತೇ ಎಂಬುದು ವಿಚಾರಾರ್ಹವಾದ ವಿಷಯ. ಮೂಲದ್ರಾವಿಡ ಭಾಷೆಯ ಧಾತುಗಳೆಲ್ಲ ಏಕಾಕ್ಷರಿಗಳು (monosyllabics) ಎಂಬುದನ್ನು ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಆದ್ದರಿಂದ ಈ ಧಾತು ಮೂಲದಲ್ಲಿ ಇಲ್ಲವೆ ಇ(ಈ)ೞ್ ಆಗಿರಬೇಕು, ಇಲ್ಲವೆ ಎೞ್ ಆಗಿರಬೇಕು. ಇ, ಉ, ಎ, ಒ ಗಳಿರುವ ಮೂಲದ್ರಾವಿಡದ ಧಾತುವಿನ ಮುಂದೆ ಇ ಅಥವಾ ಉ ಗಳಿಂದ ಆರಂಭವಾಗುವ ನಿಷ್ಪನ್ನಾತ್ಮಕ

---

[1] EC, II, 98, C. 700 A. D. [2] BKI, I, i. 11, 865 A. D. [3] EC, X, Mb. 38, c. 890 A. D. [4] EC, VII, Sk. 219, 918 A. D. [5] BKI, I. i. 36, 942 A. D. [6] EI, II, Atkur inscription, 950 A. D. [7] SII, IX. i. 172, 1106 A. D. [8] T. Burrow and M. B. Emeneau: *A Dravidian Etymological Dictionary*, p. 38. [9] Kittel : *A Kannada-English Dictionary*, p. 202.

ಪ್ರತ್ಯಯ (derivative suffix) ಬಂದರೆ ಆಗ ಎಲ್ಲ ಭಾಷೆಗಳಲ್ಲೂ ಇ, ಉ, ಎ, ಒ ಗಳೇ ಇರುತ್ತವೆ. ತಮಿಳಿನ ಇಟುಪ್ಪು (=ಎಳೆತ) ಎಂಬ ಉದಾಹರಣೆಯನ್ನು ತೆಗೆದುಕೊಂಡರೆ ಇಟ್-ಧಾತುವಿಗೆ-ಉಪ್ಪು ಎಂಬ ನಿಷ್ಪನ್ನಾತ್ಮಕಪ್ರತ್ಯಯ ಹತ್ತಿದಾಗಲೂ ಮೂಲದ್ರಾವಿಡದ ಇ ಎಂಬ ಸ್ವರವೇ ಉಳಿದಿದೆ. ದ್ರಾವಿಡ ಭಾಷೆಗಳಲ್ಲಿ ಇ, ಎ ಗಳೆರಡೂ ಬಂದಾಗ ಅವುಗಳಲ್ಲಿ ಮೂಲ ಯಾವುದು ಎಂಬ ತೀರ್ಮಾನದಲ್ಲಿ ಗೋಂಡಿ ಭಾಷೆಯನ್ನು ಬಳಸಿಕೊಳ್ಳಬಹುದು. ಮೂಲ ದ್ರಾವಿಡದ *ಇ- ಧ್ವನಿ ಗೋಂಡಿಯಲ್ಲಿ ಇ ಆಗಿಯೂ, *ಎ- ಧ್ವನಿಯು ಅ- ಧ್ವನಿಯಾಗಿಯೂ ಕಾಣಿಸಿಕೊಳ್ಳುತ್ತದೆ.[10] ಎಳೆ ಎಂಬರ್ಥದಲ್ಲಿ ಗೋಂಡಿಯಲ್ಲಿ ಈಸಾನಾ ಎಂದಿದೆ. ಎಂದರೆ ಮೂಲ ದ್ರಾವಿಡದ *ಇಟ್ (ಈಟ್) ಎಂಬ ಧಾತು ಉಳಿದೆಲ್ಲ ಭಾಷೆಗಳಲ್ಲಿ ಇ ಕಾರವನ್ನು ಉಳಿಸಿಕೊಂಡಿತು ; ಕನ್ನಡದಲ್ಲಿ ಮಾತ್ರ ಎಡೆ ಆಯಿತು.

ಪಂಪನಲ್ಲಿ ಒಂದೇ ಮೂಲದ ಇಟ್, ಎಡೆ ಎಂಬ ಎರಡು ಧಾತುಗಳಿಂದಲೂ ನಿಷ್ಪನ್ನವಾದ ರೂಪಗಳು ದೊರೆಯುತ್ತವೆ. ಉದಾಹರಣೆಗೆ—'ಎಡೆದು'[11], 'ಈಡ್ಕೊಳುತುಂ'[12], 'ಇಟ್ಟುಳಿಗೊಂಡಂ'[13], 'ಇಟ್ಟುಳಿಗೊಳಿಸಿ'[14]. ಆದಿಪುರಾಣದ 'ಇರ್ಕುಳಿಗೊಳ್' (8.25) ಎಂಬುದು ಈಚಿನರೂಪ. (ಶಬ್ದಾನುಶಾಸನದಲ್ಲಿ 'ಇರ್ಕ್ಕುಟಿಗೊಂಡಂ' ಎಂಬ ರೂಪವಿದೆ)[15] 'ಇಟ್ಟುಳಿಗೊಳ್' ಎಂದೇ ಪಂಪನ ಕಾಲಕ್ಕೆ ಇತ್ತೋ ಏನೋ ! ನಾಗವರ್ಮನ ಕಾದಂಬರಿ[16], ಶಾಂತಿನಾಥನ ಸುಕುಮಾರಚರಿತೆ[17], ರುದ್ರಭಟ್ಟನ ಜಗನ್ನಾಥವಿಜಯ[18]ಗಳಲ್ಲೂ ಇಟು್ ಅಥವಾ ಈಟು್ ಧಾತುವಿನಿಂದ ಹೊರಟ ರೂಪಗಳನ್ನು ಕಾಣಬಹುದು. ಕಿಟ್ಟೆಲ್ ಕೋಶದಲ್ಲಿ ಕೊಟ್ಟಿರುವ ಎಟಕುಳಿಗೊಳ್ ಎಂಬ ರೂಪಕ್ಕೆ[19] ಆಕರ ಗೊತ್ತಿಲ್ಲ. ಶಬ್ದಮಣಿದರ್ಪಣದಲ್ಲಿ 'ಈಟು್' ಮತ್ತು 'ಎಡೆ' ಎಂಬ ಎರಡು ಧಾತುಗಳನ್ನು ಕೊಟ್ಟಿದೆ. ಅವೆರಡಕ್ಕೂ ಒಂದೇ ಅರ್ಥವಿದ್ದರೂ ಅವು ಎರಡೂ ಬೇರೆ ಬೇರೆ ಧಾತುಗಳೆಂಬ ಭಾವನೆ ಅವನಿಗಿರುವಂತಿದೆ. ಒಂದನ್ನು ಧಾತು ಪ್ರಕರಣದಲ್ಲೂ ('ಎಡೆ—ಗಾಢಾಕರ್ಷಣೇ ತಂತುಮಾತ್ರೇ ಚ', ಪು. 232), ಮತ್ತೊಂದನ್ನು ಟ ಸಮೇತವಾದ ಪದಗಳನ್ನು ಹೇಳುವ ಸಂದರ್ಭದಲ್ಲಿಯೂ ('ಈಟ್ದುನೆಂದು ಸೆಳೆದಂ', ಪು. 19) ಹೇಳಿದ್ದಾನೆ. ಈಗ ನಮ್ಮ ಮುಂದಿರುವ ಸಮಸ್ಯೆ—'ಇಟ್ಟುಳಿಗೊಳ್' ಎಂಬ ರೂಪವನ್ನು ಹೇಗೆ ವಿವರಿಸುವುದು ?

'ಇಟ್ಟುಳಿಗೊಳ್' ಎಂಬುದು ಮೂಲತಃ 'ಇಟ್ಟುಳಿ' ಎಂದಿದ್ದು ಅದಕ್ಕೆ -ಕೊಳ್ ಎಂಬುದು ಬಳಿಕ ಹತ್ತಿದಂತೆ ಕಾಣುತ್ತದೆ. ಇಟ್ಟುಳಿ ಎಂಬುದಕ್ಕೆ ಕೇಶಿರಾಜನು ಕೊಡುವ ಪೋರ್ಕುಳಿ, ಓಡುಕುಳಿ ಮುಂತಾದ ರೂಪಗಳು[20] ಸಮಾನ. -ಕುಳಿ ಎಂಬುದನ್ನು ಕೇಶಿರಾಜನು ಒಂದು ಪ್ರತ್ಯಯವೆಂದು ಭಾವಿಸಿದರೂ—ಅದೊಂದು ಬದ್ಧರೂಪ (bound form) ವಾಗಿರುವುದರಿಂದ ಅವನು ಹೇಳುವುದು ಸರಿ— ಅದು ವಾಸ್ತವವಾಗಿ ಕೊಳ್ ಎಂಬ ಧಾತುವಿನಿಂದ

---

[10] Bh. Krishnamurti : Alternations i/e and u/o in South Dravidian (Language, XXXIV, p. 462) [11] ಆದಿಪುರಾಣಂ, 3-4 ; ಪಂಪಭಾರತ, 8-109 [12] ಆದಿಪುರಾಣಂ, 1-84— " ಖಚರೀಜನಾನನನವಾಂಭೋಜಂಗಳೊಳ್ ಕಂಪನೀಡ್ಕೊಳುತುಂ " [13] ಪಂಪಭಾರತ, 2-8 ; 7-68 [14] ಅದೇ, 2-11, ವ. [15] Kittel : *A Grammar of the Kannada Language*, P. 443. " ಉಪಾಧ್ಯಾಯನತ್ತಣಿಂ ವಿದ್ಯೆಯಂ ಇರ್ಕುಟಿಗೊಂಡಂ ". ಇಲ್ಲಿ ಟ ದ ಬದಲು ಕುಳವಿರಬೇಕು. [16] ಕರ್ಣಾಟಕ ಕಾದಂಬರೀ ಸಂಗ್ರಹ, 1-13. (ಹತ್ತನೆಯ ಶತಮಾನದ ಚಾವುಂಡರಾಯ ಪುರಾಣದಲ್ಲೂ ಈಡ್ಕೊಳ್ ಪ್ರಯೋಗವಿದೆ.— ಕರ್ಣಾಟಕ ಕವಿಚರಿತೆ, I, 1961, ಪು. 50). [17] ಸುಕುಮಾರಚರಿತೆ, 6-36 ; 9-45 [18] ಕಾವ್ಯಸಾರ, ಪು. 112. [19] ಪಂಪಭಾರತದ 'ಎಣಗೋಣ' (11-137, ವ), ಎಳೆಗೋಣ (12-30, ವ) ಎಂಬಲ್ಲಿನ 'ಎಳೆ(ಣೆ)' ಗೆ ಅಲುಗಾಡಿಸು ಎಂದರ್ಥ. ನೋಡಿ, ತಮಿಳಿನ ಇಳಕು (=ಅಲುಗಾಡು). ಅದೇ ಕಾವ್ಯದ ಎಟಿಲ್ (13-65, ವ), ಎಟಲಿಕ್ಕು (11-81), ಆದಿಪುರಾಣದ ಎಟಲ್ (4-25, ವ)—ಇಲ್ಲೆಲ್ಲಾ ನ್ಯಾಯವಾಗಿ ಕುಳವಿರಬೇಕು. ಕೇಶಿರಾಜ 'ಎಟಲ್' ಎಂಬ ಧಾತುವನ್ನು ಕೊಡುತ್ತಾನೆ ('ಎಟಲ್ ಆಲಂಬನೇ,' ಪು. 227). ಈ ರೂಪದ ವಿಷಯದಲ್ಲಿ ಕೇಶಿರಾಜನಿಗೂ ಸ್ವಲ್ಪ ಭ್ರಮೆ ಹುಟ್ಟಿರುವಂತಿದೆ. 'ಎಳಲ್' ಎಂದರೆ ಚಂಚಲವಾಗು ಅಥವಾ ಅಲುಗಾಡು ಎಂಬುದು ಮುಖ್ಯಾರ್ಥ. ತೂಗಾಡು, ಜೋಲಬೀಳು ಎಂದೂ ಅರ್ಥವಾಗಬಹುದು. [20] ಶಬ್ದಮಣಿದರ್ಪಣ (ಮದ್ರಾಸ್ ಆವೃತ್ತಿ), ಪು. 176.

ರೂಪಿತವಾದುದು. ಇಬ್+ಕೊಳ್+ಇ — ಇಲ್ಲಿ ಇ ಎಂಬ ಸಂವೃತಸ್ವರದ (close vowel) ಪ್ರಭಾವದಿಂದ ಅದರ ಹಿಂದಿನ ಒ ಎಂಬ ಅರ್ಧಸಂವೃತಸ್ವರವು (half close vowel) ಉ ಎಂಬ ಸಂವೃತಸ್ವರವಾಗಿ ಪರಿವರ್ತನೆ ಹೊಂದಿ ಇಬ್ಬುಳಿ ಎಂಬ ರೂಪವು ಸಿದ್ಧಿಸಿರುವಂತೆ ಕಾಣುತ್ತದೆ. ಇದನ್ನು 'close vowel mutation' ಎಂದು ವಿದ್ವಾಂಸರು ಕರೆದಿದ್ದಾರೆ.[21] ಲಂಚಂಗುಳಿ (ಲಂಚಂ+ಕೊಳ್+ಇ), ಮೀಂಗುಲಿ (ಮೀನ್+ಕೊಲ್+ಇ)—ಇವು ಈ ತತ್ವಕ್ಕೆ ಇನ್ನೂ ಕೆಲವು ನಿದರ್ಶನಗಳು.[22] ಪೋರ್ಕುಳಿ ಎಂಬುದು ಭಾವನಾಮವೂ ಆಗಿರುವಂತೆ ಇಬ್ಬುಳಿ ಎಂಬುದು 'ಸೆಳೆತ' ಎಂಬ ಅರ್ಥದ ಭಾವನಾಮವಾಗಿ ಅದಕ್ಕೆ ಕೊಳ್ ಎಂಬ ರೂಪವು ಹತ್ತಿದೆ. ಇಬ್ಬುಳಿಗೊಳ್ ಎಂಬುದನ್ನು ಕೊಲೆಗೊಳ್, ಒಳಗೊಳ್, ಎರ್ದೆಗೊಳ್ ಮುಂತಾದ ರೂಪಗಳೊಡನೆ ಹೋಲಿಸಬಹುದು[23]

ಕನ್ನಡಭಾಷೆಯ ಇತಿಹಾಸದಲ್ಲಿ ಪಂಪನ ಕಾಲಕ್ಕೆ ಮೂಲದಲ್ಲಿ ಎ, ಒ ಗಳು ಇರಬೇಕಾದ ಕೆಲವು ಕಡೆ ಇ, ಉ ಗಳು ಕಾಣಿಸಿಕೊಂಡಿದ್ದುವು. ಉದಾಹರಣೆಗೆ ಕಿಡು (<ಕೆಡು), ತುಡು (<ತೊಡು). ಒಂದು ಸ್ವಾರಸ್ಯದ ಸಂಗತಿಯೆಂದರೆ ಪಂಪನಲ್ಲಿ ಇಬ್ ಮತ್ತು ಎಬ್ ಎಂಬ ಎರಡು ರೂಪಗಳೂ ಒಟ್ಟಿಗೆ ಸಿಗುವುದು. 'ಇಬ್ಬ'[24] 'ಇಬ್ಬಿ'[25] (=ಸುಲಿಗೆ), 'ಎಬೆದು'[26] ಎಂಬ ರೂಪಗಳನ್ನು ನೋಡಬಹುದು. ಪಂಪನ ಕಾಲಕ್ಕೆ ಇವೆರಡು ಧಾತುಗಳೂ ಬಳಕೆಯಲ್ಲಿದ್ದು ಕ್ರಮೇಣ ಇಬ್ ಎಂಬುದು ಕನ್ನಡದಿಂದ ಮಾಯವಾಯಿತು. ಶಾಸನಗಳಲ್ಲಿ ಎಬೆಪ ಎಂಬ ರೂಪ ಕಾಣಿಸಿಕೊಳ್ಳುತ್ತದೆ.[27]

ಇಬ್ ಧಾತುವಿಂದ ನೇರವಾಗಿ ಹೊರಟ ರೂಪಗಳು ಬಲವಂತದಿಂದ ಕಿತ್ತುಕೊಳ್ಳುವ ಅರ್ಥವನ್ನು ಸೂಚಿಸಿದರೆ (ನೋಡಿ : ಇಬ್ಬಿ, ಇಬ್ಬುವರಿ), ಇಬ್ಕೊಳ್ ಧಾತುವಿಂದ ಹೊರಟ ರೂಪಗಳು ಮಾನಸಿಕವಾದ ಸೆಳೆತವನ್ನೂ, ಎಬೆ ಧಾತುವಿಂದ ಹೊರಟ ರೂಪಗಳು ಭೌತಿಕವಾದ ಸೆಳೆತವನ್ನೂ ಸೂಚಿಸುವಂತೆ ಕಾಣುತ್ತದೆ. ಭಾಷೆಯಲ್ಲಿ ಒಂದೇ ಮೂಲದಿಂದ ಹೊರಟ ಬೇರೆ ಬೇರೆ ರೂಪಗಳಿದ್ದರೆ ಅವುಗಳಲ್ಲಿ ಒಂದೊಂದಕ್ಕೂ ಸ್ವಲ್ಪಮಟ್ಟಿಗೆ ಭಿನ್ನವಾದ ಅರ್ಥದ ಛಾಯೆಯನ್ನು ಕಲ್ಪಿಸುವುದುಂಟು. ಉದಾಹರಣೆಗೆ ಕನ್ನಡದಲ್ಲಿ ಕೆದರು, ಚೆದರುಗಳಿಗೆ ಇರುವ ಸ್ವಲ್ಪ ಭಿನ್ನಾರ್ಥವನ್ನು ಗಮನಿಸಬಹುದು. ಹಾಗೆಯೇ ಪೈರು (<ಪಯಿರ್), ಹಸಿರು (<ಪಸಿರ್< ಪಯಿರ್)ಗಳಿಗೂ ಅರ್ಥವ್ಯತ್ಯಾಸವಿದೆ.

ಕನ್ನಡದ ಈಂಟು (=ಕುಡಿ, to sip) ಎಂಬಲ್ಲಿಯೂ ಮೇಲಿನ ಇ(ಈ)ಬ್ ಧಾತುವೇ ಇರುವಂತಿದೆ. ತಮಿಳಿನಲ್ಲಿ ಈಂಟು ಎಂದರೆ ಒಂದು ರೀತಿಯ ಕಾಡುಗಿಡ ಎಂದೂ ಸಂಗ್ರಹವಾಗು

---

[21] T. N. Sreekantaiya : The Mutation of i, u, e and o in Kannada (*Proceedings and Transactions of the Eighth All-India Oriental Conference*, Mysore, 1935), P. 783. [22] ಅದೇ [23] ಈ ಪ್ರಬಂಧವನ್ನು ಬರೆಯುವಲ್ಲಿ ನನಗೆ ದೊರೆತ ಪ್ರೊ. ತೀ. ನಂ. ಶ್ರೀಕಂಠಯ್ಯನವರ ಮಾರ್ಗದರ್ಶನವನ್ನು ಇಲ್ಲಿ ಕೃತಜ್ಞತೆಯಿಂದ ಸ್ಮರಿಸುತ್ತೇನೆ. [24] ಪಂಪಭಾರತ, 4-55 :

ಕನ್ನೆ ತನಂಗೆಯ್ಯಲ್ ಬಗೆ| ಗುನ್ನಾಣಂ ಮಿಗೆ ಮನಮುಮಿಬ್ಬುವರಿಯಲ್ ಬಗೆಗುಂ|
ಕನ್ನಡಿಕುಂ ತನ್ನಳಿಪಂ| ತನ್ನಲೆ ತಾನಿಂತು ಕನ್ನೆ ತಳವೆಳಗಾದಳ್ ||

(ಇಬ್ಬುವರಿ=ಸೆಳೆದುಕೊಂಡು ಹರಿ)

[25] ಆದಿಪುರಾಣ, 1-52—"ಕಳ್ವರಾಯಿಲವಮುಱಿಯೇಱು ಮಾರಿ ಪಸವಿಬ್ಬಿ ಬಱಿಂ ಪೆಱಿವುಂ ಭಯಂಗಳಿ ಕುಲಿತೆಗಳಿಲ್ಲ' [26] ಆದಿಪುರಾಣ, 3-4 ; ಪಂಪಭಾರತ 8-109. [27] EC, II, 133, 982 A. D. ಚನ್ನಬಸವಣ್ಣನವರ ವಚನಗಳಲ್ಲಿ 'ಎಳತಟ' ಎಂಬ ರೂಪ ಸಿಗುತ್ತದೆ "ಅನುಭಾವವಿಲ್ಲದವನ ಭಕ್ತಿ ಎಳತಟಗೊಳಿಸಿತ್ತು" (ಶ್ರೀ ಚನ್ನಬಸವಣ್ಣನವರ ವಚನಗಳು, 1932, ಪು. 63). ಇದು ಎಬೆ (ಬ) ಧಾತುವಿನಿಂದ ಬಂದಿರುವುದು ಸ್ಪಷ್ಟ. ಆದರೆ ಪ್ರತ್ಯಯದಂತಿರುವ 'ತಟ'ವನ್ನು ವಿವರಿಸುವುದು ಕಷ್ಟ.

ಅಥವಾ ದೊಡ್ಡದಾಗು[28] ಎಂದೂ ಅರ್ಥವಾಗುವುದೇ ಹೊರತು 'ಕುಡಿ' ಎಂದು ಅರ್ಥವಾಗುವುದಿಲ್ಲ. ಕನ್ನಡದ ಈಂಟುವಿಗೆ ಸಮಾನವಾಗಿ ಮಲಯಾಳದ ಇಱಂಬು, ಈಂಬುಗಳನ್ನು ಕಿಟ್ಟೆಲ್ ಅವರು ಸೂಚಿಸುತ್ತಾರೆ. ಮಲಯಾಳದ ಈಂಬುಕವು ತಮಿಳಿನ ಚೀಪ್ಪು, ಕನ್ನಡದ ಚೀಪು (ಸೀಪು)ಗಳಿಗೆ ಸಮಾನ. ಇಱಿಂಬುವಿಗೆ ಮನೆಯ ಛಾವಣಿಯ ಅಂಚು ಎಂಬ ಅರ್ಥವಿದೆಯೇ ಹೊರತು ಕುಡಿ ಎಂಬ ಅರ್ಥವಿಲ್ಲ. ಉಳಿದ ದ್ರಾವಿಡ ಭಾಷೆಗಳಲ್ಲೂ ಈಂಟುವಿಗೆ ಸಮಾನವಾದ ಪದಗಳು ಇಲ್ಲವಾದುದರಿಂದ ಅದರ ಮೂಲದಲ್ಲಿ ಈಱ್ ಎಂಬ ಧಾತುವೇ ಇರುವಂತೆ ಭಾಸವಾಗುತ್ತದೆ.

## III

ಮೇಲೆ ಚರ್ಚಿಸಿರುವ ಇೞ್ಕುಳಿ, ಎಱೆ ಮೊದಲಾದ ಧಾತುರೂಪಗಳಿಗೂ, ಈ ಲೇಖನದ ಪ್ರಾರಂಭದಲ್ಲಿ ಉದಾಹರಿಸಿರುವ ಇಱ್ದು ಮೊದಲಾದ ರೂಪಗಳಿಗೂ ಯಾವ ಸಂಬಂಧವೂ ಇಲ್ಲ. ಇಲ್ಲಿ ಕಾಣಬರುವ ಇಱ್-ಎಂಬುದರ ಮೂಲವೇ ಬೇರೆ. 'ಇಱ್ದು' ಎಂಬ ರೂಪ 'ಇದ್ದು' ಎಂಬ ಅರ್ಥದಲ್ಲಿ ಶಾಸನಗಳಲ್ಲಿ ಯಥೇಷ್ಟವಾಗಿ ದೊರೆಯುತ್ತದೆ. ಸಾಹಿತ್ಯ ಕೃತಿಗಳಲ್ಲಿ ಈ ಅರ್ಥದಲ್ಲಿ ಪ್ರಾಯಶಃ ಈ ರೂಪ ದೊರಕಲಾರದು. ಆದರೂ ವಡ್ಡಾರಾಧನೆಯ ಕೆಲವು ಪ್ರತಿಗಳಲ್ಲಿ 'ಇಱ್ದು' (=ಇದ್ದು) ವನ್ನು ನೋಡುತ್ತೇವೆ.

"ಕನ್ನಡದ ಬಾಗಿಲೊಳಾ ಬಾಳಸಡ್ಡಮಿಟ್ಟು ಪಿಡಿದಿರ್ದು†"[29]

(† ಪಾಠಾಂತರ—[ಳ್ದ] : ಕ, ಖ, ಗ ಪ್ರತಿಗಳಲ್ಲಿ)

"ಸಂನ್ಯಸನಂಗೆಯ್ದಿರ್ದ†ರಾಧಕರಪ್ಪ"[29]

(† ಪಾಠಾಂತರ—[ಳ್ದಾ] : ಕ, ಖ, ಗ ಪ್ರತಿಗಳಲ್ಲಿ)

ಕ, ಖ, ಗ ಪ್ರತಿಗಳ ಪಾಠಸಂಪ್ರದಾಯವೇ ಪ್ರಾಚೀನವಾದುದೆಂದೂ ಅದನ್ನೇ ಬಹುಮಟ್ಟಿಗೆ ಅನುಸರಿಸಿರುವುದಾಗಿಯೂ ಸಂಪಾದಕರು ಹೇಳಿಕೊಂಡಿದ್ದಾರೆ.[30] ಆದರೂ ಅದೇ ಪ್ರತಿಗಳಲ್ಲಿ ಇರ್ದು ಎಂಬ ರೂಪವನ್ನು ಯಾವ ಪಾಠಾಂತರವೂ ಇಲ್ಲದೆ ಕಾಣಬಹುದು.[31] ಹೀಗೆ ಒಂದೇ ಸಂಪ್ರದಾಯದ ಪ್ರತಿಗಳಲ್ಲಿ ಇಳ್ದು (ನ್ಯಾಯವಾಗಿ ಇಱ್ದು), ಇರ್ದು ಎಂಬ ರೂಪಗಳು ಒಟ್ಟಿಗೆ ಸಿಗುವುದಕ್ಕೆ ಸಮಾಧಾನ ಹೇಳುವುದು ಕಷ್ಟ. ವಡ್ಡಾರಾಧನೆಯ ಮೂಲ ಪ್ರತಿಯಲ್ಲಿ ಇರ್ದು ಎಂದೇ ಇದ್ದಿತೆಂಬುದರಲ್ಲಿ ಸಂದೇಹವಿಲ್ಲ. ಈ ಪಾಠವನ್ನೇ ಸಂಪಾದಕರು ಅಂಗೀಕರಿಸಿರುವುದು.

ಈಗ ಈ ಪ್ರಬಂಧದ ಆರಂಭದಲ್ಲಿ ನಾವು ನೋಡಿದ ಇಱ್ದು ಮುಂತಾದ ರೂಪಗಳು ಸಿದ್ಧಿಸುವ ಬಗೆಯನ್ನು ನೋಡೋಣ. ದ್ರಾವಿಡ ಭಾಷೆಗಳಲ್ಲಿ ಇರ್ ಎಂಬ ಧಾತುವಿದೆ. ತಮಿಳು—ಇರು, ಮಲಯಾಳಂ—ಇರಿಕ್ಕುಕ, ಕೋತ—ಇಗ್ (ಇರ್), ಕನ್ನಡ—ಇರ್ (ಇರು), ಕೊಡಗು—ಇರ್, ತುಳು—ಇಪ್ಪುನಿ (ಇತ್ತುನಿ), ತೆಲುಗು—ಇರವು (=ಸ್ಥಳ), ಕುಇ—ರೀಂದ (=ಭದ್ರವಾಗಿ ನಿಲ್ಲು).[32] ಕೇಶಿರಾಜ ತನ್ನ ಧಾತುಪ್ರಕರಣದಲ್ಲಿ 'ಇರು' (=ಸ್ಥಾಯಿಭಾವೇ) ಎಂಬ

---

[28] ಏಕಚಕ್ರಪುರದ ಕೋಟೆಯ ಸುತ್ತಣ ಅಗಳನ್ನು 'ಈಂಟು ಜಳಧಿಯೆನಿಪ ಅಗೞ ನೀಳ್ದಿಂ 'ಎಂದು ಪಂಪ ತನ್ನ ಭಾರತದಲ್ಲಿ (3-22) ವರ್ಣಿಸುತ್ತಾನೆ. ಇಲ್ಲಿಯ ಈಂಟು ಮಾತಿಗೆ ಸಂಪಾದಕರು ಅರ್ಥವನ್ನು ಹೇಳಿಲ್ಲ. ತಮಿಳಿನಲ್ಲಿ ಈಂಟು ಎಂದರೆ ಸಂಗ್ರಹಿಸು, ದೊಡ್ಡ ಮೊತ್ತದಲ್ಲಿರು ಎಂದೂ, ಈಂಟುನೀರ್ ಎಂದರೆ ಸಮುದ್ರ ಎಂದೂ ಅರ್ಥ (Tamil Lexicon, I, P. 377) ಇದೇ ಪಂಪಭಾರತದ ಈಂಟುಜಳಧಿ (=ದೊಡ್ಡ ಸಮುದ್ರ). ಕನ್ನಡದ ಇಡೀ, ಈಡುಗಳು ತಮಿಳಿನ ಈಂಟುವಿಗೆ ಸಮಾನ ಪದಗಳು. ಇಡಿಗಾಯ್ ಎಂದರೆ ಪೂರ್ತಿಕಾಯಿ ಅಥವಾ ದೊಡ್ಡಕಾಯಿ ಎಂದರ್ಥ. [29] ವಡ್ಡಾರಾಧನೆ (ಸಂ. ಡಿ. ಎಲ್. ನರಸಿಂಹಾಚಾರ್, 1959), ಪು. 19 ; ಪು. 30. [30] ಅದೇ, ಮೊದಲು ಮಾತು, ಪು. VIII—IX. [31] ಅದೇ, ಪು. 5 ; ಪು. 141. [32] *A Dravidian Etymological Dictionary*, ಪು 36-37.

ರೂಪದಲ್ಲಿ ಕೊಡುತ್ತಾನೆ.[33] ಈ ಧಾತುವಿನಿಂದ ಇರ್ದನ್, ಇರ್ದು, ಇದ್ದು ಮುಂತಾದ ಕ್ರಿಯಾ ವಾಚಿಗಳೂ ಇರವು ಮುಂತಾದ ನಾಮವಾಚಿಗಳೂ ಹೊರಟಿವೆ. ಈ ಇರ್ದನ್, ಇರ್ದು ಎಂಬ ರೂಪಗಳೇ ಶಾಸನಗಳಲ್ಲಿ ಇೞ್ದನ್, ಇೞ್ದು ಎಂದು ಕಾಣಿಸಿಕೊಳ್ಳುತ್ತವೆ. ಅದು ಏಕೆ ಎಂಬುದನ್ನು ತಿಳಿಯಲು ಕನ್ನಡಭಾಷೆಯ ಇತಿಹಾಸವನ್ನು ಗಮನಕ್ಕೆ ತಂದುಕೊಳ್ಳಬೇಕು.

ಪೂರ್ವದ ಹಳಗನ್ನಡ ಮತ್ತು ಹಳಗನ್ನಡಗಳಲ್ಲಿ 'ೞ' ಎಂಬ ಧ್ವನಿ (ಧ್ವನಿಮಾ) ಇದ್ದು ಅದು ನಡುಗನ್ನಡದಲ್ಲಿ ಮರೆಯಾಗಿಹೋಯ್ತು. ಈ ಧ್ವನಿಮಾ ಈಗಲೂ ದಕ್ಷಿಣ ಭಾರತದ ತಮಿಳು ಮಲಯಾಳಗಳಲ್ಲಿ ಉಂಟು.[34] ಇದು ಕನ್ನಡದಲ್ಲಿ, ಬಹುಶಃ ಹನ್ನೊಂದು ಹನ್ನೆರಡನೆಯ ಶತಮಾನಗಳಲ್ಲಿ, ಸ್ವತಂತ್ರವಾಗಿದ್ದಾಗ ಬಹುಕಡೆ ಕುಳ('ಳ')ವಾಗಿಯೂ, ಕೆಲವು ಕಡೆ 'ಣ' ವಾಗಿಯೂ, ದ್ವಿತ್ವದಲ್ಲಿದ್ದಾಗ ರೇಫ (ರ) ವಾಗಿಯೂ ಪರಿವರ್ತನೆ ಹೊಂದಿತು. ಉದಾಹರಣೆಗೆ—

ಇೞಿ>ಇಳಿ
ಎೞೆ>ಎಳೆ
ಗೞೆ>ಗಣೆ (ಬಹುಶಃ ಗೞೆ>ಗಳೆ>ಗಣೆ. ನೋಡಿ ಕೊಳ>ಕೊಣ)
ತೞ್ಗು>ತರ್ಗು (ಹೊಸಗನ್ನಡ—ತಗ್ಗು)
ಪೊೞ್ತು>ಪೊರ್ತು (ಹೊಸಗನ್ನಡ—ಹೊತ್ತು)

ಹರಿಹರನ (ಸು. ಕ್ರಿ. ಶ. 1230) ಕಾಲಕ್ಕೆ ಈ ಧ್ವನಿಮಾದ ಉಚ್ಚಾರಣೆಯು ಲುಪ್ತವಾಗಿ ಹೋಗಿ ಕೇಶಿರಾಜನ ಕಾಲಕ್ಕೆ (ಸು. ಕ್ರಿ. ಶ. 1260) ಅದು ಅನ್ಯಧ್ವನಿಮಾಗಳಾಗಿ ಪರಿವರ್ತನೆ ಯಾಗುವ ಕಾರ್ಯ ಮುಗಿದು ಹೋಗಿದ್ದಿರಬೇಕು. ಈ ಪರಿವರ್ತನೆ ಹತ್ತನೆಯ ಶತಮಾನದಲ್ಲಿ ಮಾತ್ರ ವಲ್ಲ, ಅದಕ್ಕೂ ಹಿಂದಿನಿಂದಲೇ ಆರಂಭವಾಗಿತ್ತೋ ಏನೋ! ಈ ಧ್ವನಿಮಾದ ಉಚ್ಚಾರಣೆ ಆ ಕಾಲದಿಂದಲೂ ಜನರಿಗೆ ಕ್ಲೇಶದಾಯಕವಾಗಿಯೇ ಇದ್ದಿರಬೇಕು. ಅದು ಎಲ್ಲಿ ಬರಬೇಕು ಎಲ್ಲಿ ಬರಬಾರದು ಎಂಬ ವಿಷಯದಲ್ಲಿ ವಿದ್ವಾಂಸರಿಗೆ ಖಚಿತಜ್ಞಾನವಿದ್ದಿತಾದ್ದರಿಂದ ಅವರಿಗೆ ಅದರ ಪ್ರಯೋಗದ ವಿಷಯದಲ್ಲಿ ಕ್ಲೇಶವಾಗಲಿ ಸಂದೇಹವಾಗಲಿ ಇದ್ದಿರಲಾರದು. ಅವಿದ್ಯಾವಂತರಾದ ವರು ಧ್ವನಿಗಳ ಶುದ್ಧತೆ ಅಶುದ್ಧತೆಗಳ ವಿಷಯದಲ್ಲಿ ಸಾಮಾನ್ಯವಾಗಿ ಅನಾಸಕ್ತರಾದ್ದರಿಂದ ಅವ ರಿಗೂ ಕ್ಲೇಶ ಸಂದೇಹಗಳ ಪ್ರಶ್ನೆಯೇ ಬಂದಿರಲಾರದು. ಇವರಿಬ್ಬರ ಮಧ್ಯೆ ಇರುವ ಸಾಮಾನ್ಯ ವಿದ್ಯಾವಂತರಿಗೇ ಈ ಧ್ವನಿಮಾ ಕಷ್ಟಕೊಟ್ಟದ್ದು. ಇವರು ತಾವು 'ೞ'ವನ್ನು ಸರಿಯಾಗಿ ಬಳಸದಿದ್ದರೆ ಎಲ್ಲಿ ವಿದ್ವಾಂಸರ ಅಪಹಾಸ್ಯಕ್ಕೀಡಾಗಬೇಕಾಗುವುದೋ ಎಂದು 'ೞ'ವನ್ನು ಅದು ಇಲ್ಲದ ಕಡೆಯೂ ಬಳಸಿಬಿಟ್ಟಿದ್ದಾರೆ. (ಹಳ್ಳಿಗರು ವಿದ್ಯಾವಂತರೊಡನೆ ಮಾತನಾಡುವಾಗ ತಮ್ಮ ಭಾಷೆ ಯನ್ನು 'ನಾಗರಿಕ'ಗೊಳಿಸುವ ಪ್ರಯತ್ನದಲ್ಲಿ ಅಲ್ಪಪ್ರಾಣಗಳನ್ನು ಮಹಾಪ್ರಾಣಗಳನ್ನಾಗಿ ಮಾಡುವಂತೆ!). ಶಾಸನಗಳನ್ನು ವಿದ್ವಾಂಸರೂ ಬರೆದಿದ್ದರೂ ಸಾಮಾನ್ಯ ವಿದ್ಯಾವಂತರು ಬರೆದ ಶಾಸನಗಳ ಸಂಖ್ಯೆಯೇ ಹೆಚ್ಚು. ಆದ್ದರಿಂದಲೇ ಶಾಸನಗಳಲ್ಲಿ ನಮಗೆ ಇೞ್ದಂ ಎಂಬ ರೂಪ ದೊರೆಯುವುದು, ಕಾವ್ಯಗಳಲ್ಲಿ ದೊರೆಯದೆ ಇರುವುದು.

---

[33] ಶಬ್ದಮಣಿದರ್ಪಣ (ಸಂ. ಡಿ. ಎಲ್. ನರಸಿಂಹಾಚಾರ್), ಪು. 225. [34] Bh.Krishna murti: *Proto-Dravidian* * ẓ (Indian Linguistics-Turner Jubilee volume), p. 260. ಡಾ. ಕೃಷ್ಣಮೂರ್ತಿಯವರು ಪರ್ಜಿ ಭಾಷೆಯಲ್ಲಿಯೂ ಈಗಲೂ 'ೞ' ಉಂಟು ಎಂದು ತಮ್ಮ ಲೇಖನದಲ್ಲಿ ಹೇಳಿದ್ದಾರೆ. ಪರ್ಜಿಯಲ್ಲಿ ಈ ಧ್ವನಿಯಿಲ್ಲ, ಅಲ್ಲಿ 'ṛ' ಎಂಬ ಚಿಹ್ನೆಯಿಂದ ಸೂಚಿಸುವ ಧ್ವನಿಯು ಪ್ರಾಚೀನ ದ್ರಾವಿಡದ ೞ ಧ್ವನಿಯ ಸ್ಥಾನದಲ್ಲಿ ಬಂದಿರುವ, 'retroflex flap' ಎಂಬ ಹೆಸರುಳ್ಳ, ಬೇರೊಂದು ಧ್ವನಿ ಯಿರಬಹುದೆಂದೂ, ೞಧ್ವನಿಯು ಈಗ ಇರುವುದು ತಮಿಳು ಮಲಯಾಳಗಳಲ್ಲಿ ಮಾತ್ರ ಎಂಬೂ ಪ್ರೊ. ತೀ. ನಂ. ಶ್ರೀಕಂಠಯ್ಯನವರು ತಿಳಿಸುತ್ತಾರೆ.

ನೇಮಿಲಿನ ಲೇಖನದಲ್ಲಿ 'ೞ'ವನ್ನು ಕುರಿತ ಸಮಗ್ರಚರ್ಚೆ ದೊರೆಯುತ್ತದೆ.

ಇರ್ ಧಾತುವಿನಿಂದ ಇರ್ದಂ, ಇರ್ದು ಬಂದಿವೆ. ಅರ್ದು ಎಂಬ ರೂಪ ಅೞ್ದುವಿನಿಂದ ಬಂದಂತೆ, ಎರ್ದು ಎಂಬ ರೂಪ ಎೞ್ದುವಿನಿಂದ ಬಂದಂತೆ, ಬರ್ದು ಎಂಬ ರೂಪ ಬೞ್ದುವಿನಿಂದ ಬಂದಂತೆ ಇರ್ದು ಎಂಬುದು ಇೞ್ದುವಿನಿಂದ ಬಂದಿದೆಯೆಂದು ಭ್ರಮಿಸಿದರು.[35]

ಅರ್ದು<ಅೞ್ದು
ಎರ್ದು<ಎೞ್ದು
ಬರ್ದು<ಬೞ್ದು
ಇರ್ದು<? = ಇೞ್ದು

ಹಾಗೆಯೇ ಪೆರ್ಚ್ಚು (<ಪೆರ್) ಎಂಬ ರೂಪ ಪೆೞ್ಚುವಿನಿಂದ ಬಂದಿದೆಯೆಂದು ಭ್ರಮಿಸಿರುವುದೂ ಉಂಟು.[36] ಉಳಿದ ರೂಪಗಳ ಸಾದೃಶ್ಯದ ಮೇಲೆ ಆಗುವ ಇಂತಹ ವ್ಯತ್ಯಾಸಗಳನ್ನು ಸಾದೃಶ್ಯ ಮೂಲ ವ್ಯತ್ಯಾಸಗಳೆಂದು ಕರೆಯುತ್ತಾರೆ. ಉಳಿದ ರೂಪಗಳ ನಿಷ್ಪತ್ತಿಯ ಸಾದೃಶ್ಯದಿಂದ ಈಗಿನ ರೂಪಗಳ ನಿಷ್ಪತ್ತಿಗಳನ್ನು ಬೇರೆಯಾಗಿ ತಿಳಿದುಕೊಂಡು ಬೇರೆ ರೂಪಗಳನ್ನು ಸೃಷ್ಟಿಸಿದರೆ ಅದನ್ನು ಭಾಷಾವಿಜ್ಞಾನದಲ್ಲಿ 'back formation' ಎಂದು ಕರೆಯುತ್ತಾರೆ.[37] ಕೆಲವು ಕಡೆ 'ಇೞ್ದು'ವಿನ ವಿಷಯದಲ್ಲಿ (ಸಕಾರಣವಾಗಿಯೇ) ಸಂದೇಹವು ಹುಟ್ಟಿ ಮಧ್ಯಮಮಾರ್ಗವನ್ನು ಅನುಸರಿಸಿ 'ಇೞ್ರ್ದ' ಎಂದು ಬಳಸಿಬಿಟ್ಟಿದ್ದಾರೆ.[38] ಈ ಸಂದೇಹವು ಸರಿಯಾದ ರೂಪವಾದ 'ನೆಗೞ್ದ' (>ನೆಗರ್ದ)ದ ವಿಷಯದಲ್ಲೂ ಬಂದು, ಅದನ್ನು 'ನೆಗೞ್ರ್ದ' ಎಂದೂ ಬರೆದಿರುವುದುಂಟು.[39]

ಭಾಷಾವಿಜ್ಞಾನದ ಮೇಲಿನ ತತ್ತ್ವವನ್ನನುಸರಿಸಿ ಹೊಸಗನ್ನಡದಲ್ಲಿ ನುಸಿ, ಕದಿ ಎಂಬ ಎರಡು ಧಾತುಗಳು ಹುಟ್ಟಿಕೊಂಡಿವೆ.

ಕುಸಿದು <ಕುಸಿ
ನುಸಿದು < ?=ನುಸಿ (ವಾಸ್ತವವಾಗಿ ಧಾತು—ನುಸುಳ್).
ಹೊದ್ದನು<ಹೊದೆದನು <ಹೊದೆ (ದಿ)
ಕದ್ದನು < ?=ಕದಿ (ವಾಸ್ತವವಾಗಿ ಧಾತು—ಕಳ್).[40]

ಇಂಗ್ಲಿಷಿನಲ್ಲೂ pise ಎಂದರೆ ಬಟಾಣಿ, Pisan ಎಂದರೆ ಬಟಾಣಿಕಾಳುಗಳು ಎಂದರ್ಥ. ಸಾಮಾನ್ಯವಾಗಿ 's' ಬಹುವಚನ ಪ್ರತ್ಯಯವಾಗಿರುವುದರಿಂದ pea ಎಂಬ ಹೊಸರೂಪವನ್ನು ಮಾಡಿಕೊಂಡರು (pea—ಏಕವಚನ, peas—ಬಹುವಚನ). ನಡು ಇಂಗ್ಲಿಷ್‌ಭಾಷೆಯಲ್ಲಿ redels ಎಂಬುದು ಏಕವಚನವೂ ಬಹುವಚನವೂ ಆಗಿದ್ದು, ಈಗ riddle ಎಂಬ ಹೊಸರೂಪ ಹುಟ್ಟಿಕೊಂಡಿದೆ (riddle—ಏಕವಚನ, riddles—ಬಹುವಚನ). ಸಾದೃಶ್ಯಮೂಲವ್ಯತ್ಯಾಸವೂ, ಅದರ ಒಂದು ಪ್ರಭೇದವಾದ 'back formation' ಎಂಬ ತತ್ತ್ವವೂ ಭಾಷೆಯ ಬೆಳವಣಿಗೆಯಲ್ಲಿ ಅತಿಮಹತ್ತ್ವದ ಪಾತ್ರವನ್ನು ವಹಿಸುತ್ತವೆ.

---

[35] IA, XX, p. 69. ಒಂಬತ್ತನೆಯ ಶತಮಾನದ ಈ ಪುಟ್ಟ ಶಾಸನದಲ್ಲಿ (ಶಂಬು ಎಂಬಾತ ವೇಳೆಗೊಂಡು ಮಡಿದ ವಿಷಯವನ್ನು ತಿಳಿಸುವ ಶಾಸನ), ಇೞ್ದು, ಇೞ್ದುಂ ಎಂಬ ರೂಪಗಳು ಐದು ಕಡೆ ಬರುತ್ತವೆ. ಹಾಗೇ ಇರ್ ಧಾತುವಿನಿಂದ ಹೊರಟ ಇರ್ಪುದು ಎಂಬ ರೂಪವೂ ಬರುತ್ತದೆ. ಇೞ್ಪುದು ಎಂಬ ರೂಪ ಶಾಸನಗಳಲ್ಲಿ ಅಷ್ಟಾಗಿ ಬಂದಂತಿಲ್ಲ. ತಪ್ಪು ತಿಳಿವಳಿಕೆ ಬಂದದ್ದು ಬಹುಶಃ ಇರ್ದು ರೂಪದ ವಿಷಯದಲ್ಲಿ ಮಾತ್ರ ಎಂದು ಕಾಣುತ್ತದೆ [36] KI, 13, 865 A. D.—"ಆದಿತ್ಯಭಟರರ ಸ್ಥಾನವುವ ರಕ್ಷಿಸಲ್ ಪೆೞ್ಚಿಸಲಿವರೆ ಸಮರ್ಥರ್"; EC, VIII, sb. 10, c. 800 A D.—"ಅತಿತುಮುಲ ಕಾಳೆಗ ಪೆೞ್ಚಿ" [37] Bloomfield: *Language* (1955), p. 412. [38] EI, XV, p. 332, 1028 A D.; EI, XIII, p. 43, 1112 A. D. (ಈ ಶಾಸನದಲ್ಲಿ ನೆಗೞ್ದ, ಇೞ್ದು ಎಂಬ ರೂಪಗಳು ಒಟ್ಟಿಗೆ ಸಿಕ್ಕುತ್ತವೆ.) [39] BKI, I. ii. 198, 1129 A. D. [40] R. Narasimhachar: *History of Kannada Language*, p. 140.

ನಮ್ಮ ಹಿಂದಿನ 'ಇೞ್ದು' ಎಂಬ ಕ್ರಿಯಾರೂಪ ಬರುವ ಇನ್ನೂ ಕೆಲವು ಸಂದರ್ಭಗಳನ್ನು ನೋಡೋಣ.—

"ಬಾದಿಪೊದ್ದಿಯೆಂಬೊಳ್ ಉತ್ತಮ ಗೋಸಾಸಮಿೞ್ದೊಳ್ ಅಶ್ವರಥಗೊಟ್ಟೊಳ್ ಹಸ್ತಿರಥಮಿೞ್ದೊಳ್ ಭೂಮಿದಾನಮುಂ ಉಭಯಮುಖಿಯುಂ ಕೊಟ್ಟಳ್"[41]

"ಗೋಸಾಸಮಿೞ್ದೋಂ"[42]

"ತುಳಾಪುರುಷಮಿೞ್ದು"[43]

"ತುಳಾಪುರುಷಮುಂ ಹಿರಣ್ಯಗರ್ಭಮುಮನಿೞ್ದಂದಿನ ಮಹಾದಾನದೊಳ್"[44]

ಇಂತಹ ಕಡೆ ಬರುವ ಇೞ್ದು ಎಂಬ ಪದಕ್ಕೆ ಅರ್ಥವೇನು? ಇದ್ದು ಎಂಬ ಅರ್ಥ ಇಟ್ಟುಕೊಂಡರೆ ಗೋಸಾಸವಿದ್ದವಳು, ತುಳಾಪುರುಷವಿದ್ದು ಎಂದು ಅರ್ಥವಾಗುತ್ತದೆ. ಹದಿನಾರು ಮಹಾದಾನಗಳಲ್ಲಿ ಗೋಸಹಸ್ರ, ತುಲಾಪುರುಷ, ಹಿರಣ್ಯಗರ್ಭಗಳು ಕೆಲವು ದಾನಗಳ ಹೆಸರುಗಳು. ಇಂತಹ ದಾನಗಳನ್ನು ಹೇಳುವ ಸಂದರ್ಭದಲ್ಲಿ ಬರುವ ಇೞ್ದರ್ ಎಂಬ ಪದಕ್ಕೆ ಅರ್ಥವನ್ನು ಹೊಂದಿಸುವುದಕ್ಕಾಗಿಯೋ ಏನೋ ಡಾ. ನರಸಿಂಹಯ್ಯನವರು abandoned, sacrificed ಎಂಬ ಅರ್ಥ ಕೊಟ್ಟಿದ್ದಾರೆ. ತಮಿಳಿನ ಇೞ್ (=ತ್ಯಾಗಮಾಡು) ಎಂಬ ಧಾತುವನ್ನು ಉದಾಹರಿಸಿ ಅದಕ್ಕೆ ಇರುವ to pull ಎಂಬ ಅರ್ಥವನ್ನು ನಮೂದಿಸಿದ್ದಾರೆ[45]. ಡಾ. ಗಾಯಿ ಅವರು ಬಹುಶಃ ಇವರನ್ನು ಅನುಸರಿಸಿ ಇೞ್ದು ಎಂಬುದಕ್ಕೆ ದಾನವಾಗಿ ಕೊಟ್ಟ ಎಂದು ಅರ್ಥ ಹೇಳುತ್ತಾರೆ.[46] ಇೞ್ದರ್, ಇೞ್ದು ಎಂಬ ರೂಪಗಳಿಗೆ ಇರ್ದರ್, ಇರ್ದು ಎಂಬ ರೂಪಗಳು ಸಮಾನವಿರಬಹುದೇ ಎಂದು ಪ್ರಶ್ನಾರ್ಥಕ ಚಿಹ್ನೆಯೊಡನೆ ಸೂಚಿಸುತ್ತಾರೆ. ಮುಂದೆ ನೋಡುವಂತೆ ಇಲ್ಲಿ ಪ್ರಶ್ನಾರ್ಥಕ ಚಿಹ್ನೆ ಅನಾವಶ್ಯಕ. ಆದರೆ ಇೞ್ ಎಂಬ ಧಾತುವಿಗೆ ದಾನವಾಗಿ ಕೊಡು ಎಂಬರ್ಥ ಇಲ್ಲವೇ ಇಲ್ಲ. ಅದರ ಬದಲು ಇಡ್, ಈಡ್, ಎಡೆ ಧಾತುಗಳಿಗೆ ಸುಲಿ, ಸೆಳೆ ಎಂಬರ್ಥಗಳಿವೆ. 'ಈ' ಧಾತುವಿನಿಂದ ಬಂದ ಇತ್ತು ಎಂಬುದನ್ನು ಹಿಂದಕ್ಕೆ ತಿರುಗಿಸಿದ್ದರೆ ಇೞ್ತು ಆಗಬೇಕಿತ್ತು. 'ಅಶ್ವರಥಗೊಟ್ಟೊಳ್, ಹಸ್ತಿರಥಮಿೞ್ದೊಳ್' ಎಂಬಲ್ಲಿ ನೋಡಿದರೆ ಇೞ್ದೊಳ್ ಎಂಬುದು 'ಇತ್ತೊಳ್'ನಿಂದ ಬಂದಿದೆ ಎಂದು ಸಂದೇಹಪಡಲು ಅವಕಾಶವಿದೆ. ಇವೆರಡಕ್ಕೂ ಮಧ್ಯದ ರೂಪವೆಂದು ಭ್ರಮಿಸಬಹುದಾಗಿದ್ದ ಇರ್ತೊಳ್ ಆಗಲಿ, ಇರ್ತುವಾಗಲಿ ಎಲ್ಲಿಯೂ ಸಿಗುವುದಿಲ್ಲ. ಆದ್ದರಿಂದ ಬಹುಶಃ ಇಂತಹ ಕಡೆಯಲ್ಲಿಯೂ ಇೞ್ದು ಎಂಬುದಕ್ಕೆ ಇರ್ದು ಎಂದೇ ಅರ್ಥಮಾಡಬೇಕಾಗುತ್ತದೆ. ಇದರ ಔಚಿತ್ಯವನ್ನರಿಯಲು ಆ ದಾನಗಳ ಸ್ವರೂಪವನ್ನು ತಿಳಿಯಬೇಕಾಗುತ್ತದೆ.

ತುಲಾಪುರುಷ ಎಂಬ ದಾನವನ್ನು ಮಾಡಬೇಕಾದ ವ್ಯಕ್ತಿ ತಕ್ಕಡಿಯಲ್ಲಿ ಇದ್ದು ಅಥವಾ ಕುಳಿತು ಅನಂತರ ತನ್ನ ತೂಕದ ಚಿನ್ನವನ್ನು ಬ್ರಾಹ್ಮಣರಿಗೆ ದಾನಮಾಡಿ, ಬಳಿಕ ಬಡಬಗ್ಗರಿಗೆ ದಾನಮಾಡಬೇಕು. ಹಿರಣ್ಯಗರ್ಭ† ದಾನವನ್ನು ಕೊಡಲು ಕಮಲಾಕಾರದ ಚಿನ್ನದ ಪಾತ್ರೆಯಲ್ಲಿ ದಾನಿಯು ಇದ್ದು ಅಥವಾ ಕುಳಿತು, ಅನಂತರ ಹೊರಗೆ ಬಂದು ಅದನ್ನು ಬ್ರಾಹ್ಮಣರಿಗೆ ದಾನಮಾಡಬೇಕು. ಗೋಸಹಸ್ರ ದಾನವನ್ನು ಮಾಡುವ ವ್ಯಕ್ತಿ ದಾನದ ದಿನಕ್ಕಿಂತ ಮುನ್ನ ಮೂರು ದಿನ ಬರಿಯ ಹಸುವಿನ ಹಾಲಿನ ಮೇಲೆ ಇದ್ದು (=ಜೀವಿಸಿ), ದಾನದ ದಿನ ಸುಗಂಧ ಲೇಪನ ಮಾಡಿರುವ ವೃಷಭ, ಚಿನ್ನದ ಕೋಡಣಸು ಬೆಳ್ಳಿಯ ಕಟ್ಟಿನ ಗೊರಸುಗಳುಳ್ಳ ಸಾವಿರ

---

[41] IA, XI, p. 124, 779. A. D. [42] BKI, I. i. 15, 873. A. D. [43] EI, XIII, p. 329, 925 A. D.; EC, XI, DG. 152, 980. A. D. [44] BKI, I. ii, 124, 1077. A. D. [45] A. N. Narasimhaiah : *A Grammar of the Oldest Kannada Inscriptions*, p. 285. [46] G. S. Gai : *Historical Grammar of Old Kannada*, p. 175. † ಚನ್ನಬಸವಣ್ಣನವರ ಈ ವಚನವನ್ನು ನೋಡಿ— 'ಪರಮೋಧರ್ಮ ಹಿರಣ್ಯಗರ್ಭೋಃ ಎಂದು ಹೊನ್ನಕಪಿಲೆಯ ಮಾಡಿಸಿ ಕಡಿಕಡಿದು ಹಂಚಿಕೊಂಬುವುದು. . . .''

ಹಸುಗಳನ್ನು, ಜೊತೆಗೆ ನಂದಿಕೇಶ್ವರನ ಚಿನ್ನದ ವಿಗ್ರಹವನ್ನು ಬ್ರಾಹ್ಮಣರಿಗೆ ದಾನಮಾಡಬೇಕು.[47] ('ಉಭಯಮುಖಿಯುಂ ಕೊಟ್ಟಳ್' ಎಂಬಲ್ಲಿನ ಉಭಯಮುಖಿ ಎಂದರೆ ಕರುಸಮೇತವಾದ ಹಸು ಅಥವಾ ಗರ್ಭವಿರುವ ಹಸು ಎಂದರ್ಥ. ಇದಕ್ಕೆ ಸಮಾನವಾದ ಅಚ್ಚಗನ್ನಡ ಪದ 'ಇಕ್ಕತ್ತಿಗೆಯ ಕವಿಲೆ'). ಹೀಗೆ ಇಟ್ಟು ಎಂದರೆ ಇದ್ದು, ಕುಳಿತು ಎಂದೂ, ವ್ರತದಲ್ಲಿ ಇದ್ದು ಎಂದೂ ಅರ್ಥಮಾಡಬಹುದು. 'ಗೋಸಹಸ್ರ ಕೊಟ್ಟೋನ್'[48] ಮುಂತಾದ ಕಡೆ ಅರ್ಥ ಸ್ಪಷ್ಟವೇ. 'ಹಸ್ತಿರಥಮಿಟ್ಟೊಳ್' ಮುಂತಾದ ಕಡೆ ಕೊಟ್ಟಳು ಎಂದು ಅರ್ಥ ಮಾಡಬೇಕಾಗುತ್ತದೆ. ಇಟ್ಟು ಎಂಬ ಪದಕ್ಕೆ ಇರ್ದು ಎಂಬುದು ಮುಖ್ಯಾರ್ಥ, ಕೊಟ್ಟು ಎಂಬುದು ಗೌಣಾರ್ಥ. (ಆದರೂ ಹಿಂದೆಯೇ ಸೂಚಿಸಿರುವಂತೆ ಇಂತಹ ಕೆಲವು ಕಡೆಗಳಲ್ಲಿ ಇಟ್ಟು ಎಂಬ ಪದ ಇತ್ತು ಎಂಬ ರೂಪದ back formation ಆಗಿರಬಹುದು ಎಂಬ ಊಹೆಯನ್ನು ಸಂಪೂರ್ಣ ತಳ್ಳಿಹಾಕುವಂತಿಲ್ಲ).

ಒಂದು ರೀತಿಯ ಧ್ವನಿವ್ಯತ್ಯಾಸದ ಪ್ರವೃತ್ತಿ ಭಾಷೆಯಲ್ಲಿ ಒಂದು ಕಡೆ ಆರಂಭವಾದರೆ ದೇಶ್ಯಪದ ಅನ್ಯದೇಶ್ಯಪದ ಎಂಬ ಭೇದಭಾವವಿಲ್ಲದೆ ಎಲ್ಲ ಕಡೆಗೂ ವ್ಯಾಪಿಸುತ್ತದೆ. ಇರ್ದು—ಇಟ್ಟುವಿನಲ್ಲಿ ಕಂಡು ಬರುವ back formation ಕಾರ್ಯ ಸಂಸ್ಕೃತದಿಂದ, ಕೆಲವು ಕಡೆ ಪ್ರಾಕೃತದ ಮೂಲಕ, ಕನ್ನಡಕ್ಕೆ ಬಂದಿರುವ ಪದಗಳಲ್ಲೂ ನಡೆದಿದೆ. ಸಂಸ್ಕೃತದ ವೃತ್ತಿ (=ಜೀವನೋಪಾಯ) ವ್ರಿತ್ತಿ[49] ಆಗಿ ವರ್ಣವಿಪರ್ಯಯದಿಂದ ವಿರ್ತಿ ಆಗಿ ಬಿ(ವಿ)ಟ್ಟಿ[50] ಆಗಿದೆ, ಅರ್ತಿ<ಅಟ್ಟಿ ಎಂಬ ಸಾಮ್ಯದ ಮೇಲೆ. ಅಮೃತವು ಅಮರ್ದು ಆಗಿ ಅಮಟ್ಟು[51] ಎಂಬ ರೂಪದಲ್ಲಿ ಒಂದೆರಡು ಕಡೆ ಕಾಣಿಸಿಕೊಳ್ಳುತ್ತದೆ[52], ನೆಗರ್ದು<ನೆಗಟ್ಟು ಎಂಬ ಸಾಮ್ಯದ ಮೇಲೆ. ಪೃಥಿವೀಪತಿಯು ಬಹುಶಃ ಪಿರ್ತುವೀಪತಿ ಆಗಿ ಪಿಟ್ಟುವಿಪತಿ[53] ರೂಪದಲ್ಲಿ ಒಂದೆಡೆ ಸಿಗುತ್ತದೆ. ಹೃದಯದ ತದ್ಭವ ಎರ್ದೆ. ಇದನ್ನರಿಯದೆ ಅದು ಎಡ್ದ[54]ಯಿಂದ ಬಂದಿರಬಹುದೆಂದು ಭಾವಿಸಿರುವಂತಿದೆ. ಇದು ಎಳ್ದೆ[55] ಎಂಬ ರೂಪದಲ್ಲಿಯೂ ಕಾಣಿಸಿಕೊಳ್ಳುತ್ತದೆ. ವೃದ್ಧಿ (ಹೊಸಗನ್ನಡ. ಬಡ್ಡಿ) ವಿರ್ದಿ[56]ಯಾಗಿ ಇನ್ನೆಲ್ಲೋ ಒಂದು ಕಡೆ ವಿಟ್ಟಿಯಾಗಿ ಕಾಣಿಸಿಕೊಂಡರೆ ಆಶ್ಚರ್ಯವಿಲ್ಲ. ಈ ಎಲ್ಲ ರೂಪಗಳಲ್ಲಿ—ಇಟ್ಟುವೂ ಸೇರಿಕೊಂಡು—ಯಾವುವೂ ಮುಂದೆ ಬಳಕೆಯಲ್ಲಿ ಬರಲಿಲ್ಲ. ಈ ರೂಪಗಳು 'ಟ'ದ ಪ್ರಯೋಗದ ವಿಚಾರದಲ್ಲಿ ಅತಿ ಎಚ್ಚರಿಕೆ ವಹಿಸ ಹೋಗಿ ಎಚ್ಚರ ತಪ್ಪಿದ್ದರ ಫಲಗಳು.[57]

---

[ಶ್ರೀ ಚನ್ನಬಸವಣ್ಣನವರ ವಚನಗಳು (1932), ಪು. 29] ಇಲ್ಲಿಯ ಹಿರಣ್ಯಗರ್ಭದಾನದ ವಿವರಣೆ ಗೋಸಹಸ್ರದಾನಕ್ಕೆ ಸರಿಹೊಂದುತ್ತದೆ. [47] P. V. Kane : *History of Dharmaśāstra*, II. ii, p. 869, 872, 874. [48] BKI, I. i. 6, C. 800 A. D. [49] EC, XI, cd. 34, 1123 A. D. [50] EC, I, No. 3, C. 890 A. D. [51] EI, XII, p. 281. [52] ತಮಿಳಿನಲ್ಲಿ ಅಮಿರ್ದ, ಅಮಿಟ್ಟಗಳು ಅಮೃತದ ತದ್ಭವಗಳು ಅಮಿಟ್ಟಂ ಎಂಬ ರೂಪ ಕುಟಿಳ್ ಕಾವ್ಯದಲ್ಲಿಯೇ ಕಾಣಿಸಿಕೊಳ್ಳುತ್ತದೆ (Tamil Lexicon, I, p. 104-5) [53] EC, X, GD. 4, C. 920 A. D. [54] BKI, I. i. 11, 865 A. D. [55] EC, II, 72, C. 1145 A. D.—"ಶುಭಕೀರ್ತಿಮುನಿಪನೊಳೀಂ ಗಳ ನುಡಿಯಲ್ಕೆ ವಾದಿಗಳ್ಗೆಂಟೆಳ್ದೆಯೇ". ಇದರೊಡನೆ ರನ್ನನ ಈ ಉಕ್ತಿಯನ್ನು ಹೋಲಿಸಬಹುದು—

ರತ್ನಪರೀಕ್ಷಕನಾಂ ಕೃತಿ | ರತ್ನಪರೀಕ್ಷಕನೆನೆಂದು ಫಣಿಪತಿಯ ಫಣಾ |
ರತ್ನಮುಮಂ ರನ್ನನ ಕೃತಿ | ರತ್ನಮುಮಂ ಪೇಟಿಲ್ ಪರೀಕ್ಷಿಪಂಗೆಂಟೆರ್ದೆಯೇ ||

(ಗದಾಯುದ್ಧ, 1-44)

[56] EC, III, TN. 129, 1136 A. D. [57] ಎಚ್ಚರವಿದ್ದೇ ಬೇಕೆಂದೇ 'ಟ' ವಿರುವ ರೂಪಗಳನ್ನು ಸೃಷ್ಟಿಸಿಕೊಂಡಿರುವುದೂ ಉಂಟು. ಪಂಪ ಭಾರತದ (11-47, ವ) 'ಸ್ವಚ್ಛಂದ ಮಿಟ್ಟು' (ಪಾಠಾಂತರ. ಸ್ವಚ್ಛಂದ ಮೃತ್ಯು) ಎಂಬಲ್ಲಿ ಮಿಟ್ಟು ಎಂಬುದು ಮಿರ್ತ್ತು (< ಸಂ. ಮೃತ್ಯು) ಎಂಬ ತದ್ಭವದ back

‘ೞ’ ವು ಸ್ವರಗಳ ಮಧ್ಯೆ ಇದ್ದಾಗ ಳಕಾರವಾಗಿಯೂ, ವ್ಯಂಜನ ಸಮೇತವಾಗಿ ಎಂದರೆ ದ್ವಿತ್ವವಾಗಿದ್ದಾಗ ರೇಫವಾಗಿಯೂ ಪರಿವರ್ತನೆ ಹೊಂದಿತು. ಎಂದರೆ ಆ ಧ್ವನಿಮಾ ಬೇರೆ ಬೇರೆ ಪರಿಸರಗಳಲ್ಲಿ ಬೇರೆ ಬೇರೆ ಧ್ವನಿಮಾಗಳಲ್ಲಿ ವಿಲೀನ ಹೊಂದಿತು. (ಇದನ್ನು ಧ್ವನಿಮಾವಿಲಯನ ಅಥವಾ phonemic merger ಎಂದು ಕರೆಯುತ್ತಾರೆ). ‘ೞ’ ದ ಉಚ್ಚಾರಣೆಯಲ್ಲಿ ಆದ ಈ ಮಾರ್ಪಾಟು ಹತ್ತು ಅಥವಾ ಹನ್ನೊಂದನೆಯ ಶತಮಾನದಲ್ಲಿ ಆರಂಭವಾಯಿತೆಂದು ಬಹಳ ಜನ ಒಪ್ಪಿಕೊಂಡಿದ್ದಾರೆ. ಇೞ್ದು ಮುಂತಾದ ರೂಪಗಳ ಸಹಾಯದಿಂದ ಈ ಧ್ವನಿಮಾವ್ಯತ್ಯಾಸದ ಮೂಲವನ್ನು ಇನ್ನೂ ಹಿಂದಕ್ಕೆ, ಎಂದರೆ ಏಳನೆಯ ಶತಮಾನದವರೆಗೂ ಕೊಂಡೊಯ್ಯಬಹುದು. ಆ ಹೊತ್ತಿಗೆ ‘ೞ’ ವು ಉಳಿದ ಧ್ವನಿಗಳಾಗಿ ಮಾರ್ಪಡದಿದ್ದರೂ ಅದು ಜನರಿಗೆ ಕ್ಲೇಶ ಸಂದೇಹಗಳನ್ನು ಒಡ್ಡಿತ್ತು ಎಂದು ಮಾತ್ರ ಖಚಿತವಾಗಿ ಹೇಳಬಹುದು.

**ಸಂಕೇತಗಳು—**

IA=Indian Antiquary
EI=Epigraphia Indica
EC=Epigraphia Carnatica
BKI=Bombay Karnatak Inscriptions
SII=South Indian Inscriptions
KI=Karnatak Inscriptions

**ಎಂ. ಚಿದಾನಂದ ಮೂರ್ತಿ**

---

formation ಎಂದು ಕಾಣುತ್ತದೆ. ಆದ್ದರಿಂದ ಮೇಲಿನ “‘ೞ’ ದ ಪ್ರಯೋಗದ ವಿಚಾರದಲ್ಲಿ ಅತಿ ಎಚ್ಚರಿಕೆ ವಹಿಸಹೋಗಿ ಎಚ್ಚರ ತಪ್ಪಿದ್ದರ ಫಲಗಳು” ಎಂಬ ಹೇಳಿಕೆ ಇಂತಹ ಎಲ್ಲ ರೂಪಗಳಿಗೂ ಎಲ್ಲ ಕಡೆಗಳಲ್ಲಿಯೂ ಪ್ರಾಯಶಃ ಅನ್ವಯವಾಗುವುದಿಲ್ಲ. ಇವು ಆ ಕಾಲಕ್ಕೆ ‘ೞ’ ವು ರೇಫವಾಗುತ್ತಿತ್ತೆಂಬುದಕ್ಕೆ ಖಚಿತ ನಿದರ್ಶನಗಳು. ಪಂಪನ ಕಾಲಕ್ಕೇ ಇದು ನಡೆಯುತ್ತಿತ್ತು. ಉದಾಹರಣೆಗೆ—ಬರ್ದುಕು (ಪಂಪಭಾರತ, 10-101) < ಬಾೞ್, ಬೞ್. ‘ೞ’ ಸಮೇತವಾದರೂಪವೂ ಉಂಟು. ನೋಡಿ—ಬೞ್ದಂ (ಪಂಪಭಾರತ, 12-170) < ಬಾೞ್, ಬೞ್.

# ಬಸವಣ್ಣನವರ ಭಾವಚಿತ್ರ

ಬಸವಣ್ಣನವರನ್ನು ನೆನೆದೊಡನೆಯೆ ನಮ್ಮ ಒಳಗಣ್ಣಿನೆದುರು ಮೂಡುವ ಚಿತ್ರ; ಸೆದುವಿನಯದಿಂದ ಸದಾಶಿವನ ಒಲುಮೆಗೆ ಪಾತ್ರವಾದ, ಅಂತರಂಗಶುದ್ಧಿ ಬಹಿರಂಗಶುದ್ಧಿಯನ್ನು ಪಡೆದ, ಸಕಲ ಜೀವಾತ್ಮರಿಗೆ ಲೇಸನೆ ಬಯಸುವ, ಬೆಳಗಿನೊಳಗಣ ಮಹಾಬೆಳಗನ್ನು ಕಂಡ ತೇಜಃಪುಂಜವಾದ ಮೂರ್ತಿ. ಬುದ್ಧಿಯ ಅಲಗನ್ನು ಝಳಪಿಸುವ ಚೆನ್ನಬಸವಣ್ಣ, ಕರ್ಮಯೋಗದ ಮರ್ಮವನ್ನರಿತ ಸಿದ್ಧರಾಮ, ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚೆಲುವ ಚೆನ್ನಮಲ್ಲಿಕಾರ್ಜುನನಿಗೊಲಿದ ಅಕ್ಕಮಹಾದೇವಿ, ಸ್ವಯಂಲಿಂಗವಾದ ವ್ಯೋಮಮೂರುತಿ ಅಲ್ಲಮಪ್ರಭು ಇವರ ಮಧ್ಯದಲ್ಲಿ, ಇನ್ನೂ ಅನೇಕ ಶಿವಶರಣಶರಣೆಯರ ಬಳಸಿನಲ್ಲಿ ಬಸವಣ್ಣ ಅನುಭವ ಮಂಟಪದ ಅದ್ವಿತೀಯ ವ್ಯಕ್ತಿಯಾಗಿ, ಮಾಣಿಕ್ಯದ ದೀಪ್ತಿಯಂತೆ ಕಂಗೊಳಿಸುತ್ತಾರೆ. ಎಲ್ಲೊ ದೂರದಲ್ಲಿ ದೀನವಾಗಿ ನಿಂತವರನ್ನು ಹತ್ತಿರದಲ್ಲಿ ಕರೆದು, ಕುಳ್ಳಿರಿಸಿ, ಮೈದಡವಿ ಮಾತನಾಡಿಸುತ್ತಾರೆ. ಅವರ ಜಾತಿ ಕುಲಗಳನ್ನು ಪರಿಗಣಿಸದೆ 'ಕಾಯಕವೆ ಕೈಲಾಸ'ವೆಂಬ ಮಂತ್ರೋಪದೇಶದಿಂದ ಅವರನ್ನು ಕರ್ತವ್ಯಪರಾಯಣರನ್ನಾಗಿ ಮಾಡುತ್ತಾರೆ. 'ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ: ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ' ಎಂದು ಈ ಜಗತ್ತಿನಲ್ಲಿಯ ಬದುಕಿನ ಹೆಚ್ಚಳವನ್ನು ನಮ್ಮ ಮನಸ್ಸಿನಲ್ಲಿ ಅಚ್ಚೊತ್ತಿ, 'ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯಾ' ಎಂದು ಹುರಿದುಂಬಿಸಿ, 'ದಯವೇ ಧರ್ಮದ ಮೂಲ' ಎಂಬುದನ್ನು ಬಿಂಬಿಸಿ, 'ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ' ಎಂದು ಎಚ್ಚರಿಕೆಕೊಟ್ಟು, 'ನಿಮ್ಮ ಶರಣರ ಮನೆಯ ಮಗ ನಾನಯ್ಯಾ' ಎಂಬ ಆತ್ಮೀಯತೆಯಿಂದ, 'ನಂಬಿ ಕರೆದೊಡೆ ಓ ಎನ್ನನೆ ಶಿವನು?' ಎಂದು ಧೈರ್ಯನೀಡಿ ಕಳಿಸುತ್ತಾರೆ ಬಸವಣ್ಣನವರು. ಅವರ ಮಾತಿನಲ್ಲಿ ಅದೆಂಥ ಮಾರ್ದವ, ಎಂಥ ಕರುಳಿನ ಕಕ್ಕುಲಾತಿ! ನುಡಿನುಡಿಯಲ್ಲಿ ಒಡಮೂಡಿರುವ ಆ ಅಂತಃಕರಣ ಅದೆಷ್ಟು ಪರಿಶುದ್ಧ! ಹೆಚ್ಚೇನು, ಅವರು ಮನದೆರೆದು ಮಾತನಾಡಿದರೆ ಅಲ್ಲಿ ಲಿಂಗವನ್ನೆ ಕಾಣುತ್ತೇವೆ.

ಬಸವಣ್ಣನವರ ಭಕ್ತಿಭಾಂಡಾರಕ್ಕೆ ಭಾವಶುದ್ಧಿಯೇ ಬಾಗಿಲು. 'ಭಾವಶುದ್ಧಿಯಿಲ್ಲದಂಗೆ ಭಕ್ತಿ ನೆಲೆಗೊಳ್ಳದು.' ಭಕ್ತಿ ಮನಸ್ಸನ್ನು ಪರಮಾತ್ಮ-ಭಾವದತ್ತ ಹೊರಳಿಸಿ, ಅದನ್ನು ಅಲ್ಲಿಯೇ ನೆಲೆಗೊಳಿಸುವ ಒಂದು ಮಹತ್ತರ ಸಾಧನೆ. ಭಕ್ತ ತನ್ನ ಮನಸ್ಸಿನ ನಿಶ್ಚಲತೆಯನ್ನು ಕಾಯ್ದುಕೊಳ್ಳಬೇಕಾದರೆ ತನ್ನ ಅವಗುಣಗಳೊಡನೆ ನಿರಂತರವೂ ಹೋರಾಡಬೇಕಾಗುತ್ತದೆ. ಈ ಹೋರಾಟದ ಒಳಗುದಿ, ಸುಖ, ಸಂವೇದನೆಗಳು ಅವರ ಭಾವಚಿಂತಾರತ್ನದಂತಿರುವ ವಚನಗಳಲ್ಲಿ ನಿಚ್ಚಳವಾಗಿ ಪಡಿಮೂಡಿವೆ. ಕೊಳದ ನಡುವೆ ಕಮಲ ಕಂಗೊಳಿಸುವಂತೆ ಬಸವಣ್ಣನವರ ಭಾವಶುದ್ಧಿ ನಮ್ಮ ಮನಸ್ಸನ್ನು ಆಕರ್ಷಿಸುತ್ತದೆ. ಹೆಜ್ಜೆಹೆಜ್ಜೆಗೆ ಅವರು ತಮ್ಮ ಮನಸ್ಸನ್ನು ಪರೀಕ್ಷಿಸಿಕೊಳ್ಳುತ್ತಲೇ ಇದ್ದರು:

> ಕೆಲಕ್ಕೆ ಶುದ್ಧನಾದೆನಲ್ಲದೆ, ಎನ್ನ ಮನಕ್ಕೆ ಶುದ್ಧನಾಗೆನೇಕಯ್ಯಾ?
> ಕೈಯ ಮುಟ್ಟಿ ಪೂಜಿಸುವರೆ, ಎನ್ನ ಕೈ ಶುದ್ಧವಲ್ಲವಯ್ಯಾ
> ಮನಮುಟ್ಟಿ ಪೂಜಿಸುವರೆ, ಎನ್ನಮನ ಶುದ್ಧವಲ್ಲವಯ್ಯಾ
> ಭಾವಶುದ್ಧವಾದೊಡೆ ಕೂಡಲಸಂಗಯ್ಯನು
> "ಇತ್ತ ಬಾ" ಎಂದೆತ್ತಿಕೊಳ್ಳನೇಕಯ್ಯಾ?

ವೈಯಕ್ತಿಕ ಭಾವಭಾವನೆಗಳಂತೆಯೇ ಸಾಮಾಜಿಕ ದೃಷ್ಟಿಯಿಂದಲೂ ಅವರ ವಚನಗಳಿಗೆ ಹೆಚ್ಚಿನ ಬೆಲೆಯಿದೆ. ಸಮಾಜದಲ್ಲಿ ಕಂಡುಬರುವ ಮೇಲು-ಕೀಳು, ಡಾಂಭಿಕತನ, ನಿಷ್ಕರುಣತೆ

11976



ಮೊದಲಾದ ದೋಷಗಳನ್ನೂ, ವ್ಯಕ್ತಿ-ಸಮಾಜಗಳ ರೀತಿ ನಡಾವಳಿಯಲ್ಲಿಯ ಅವಿನಯ, ಅಸಂಬದ್ಧತೆಗಳನ್ನೂ ಎತ್ತಿತೋರಿಸುವಾಗ ಅವರ ಮಾತು ಸಾಕಷ್ಟು ಹರಿತವಾಗುತ್ತದೆ:

"ಏನಿ ಬಂದಿರಿ ಹದುಳವಿದ್ದಿರೆ?" ಎಂದರೆ
ನಿಮ್ಮ ಮೈಸಿರಿ ಹಾರಿಹೋಹುದೆ?
"ಕುಳ್ಳಿರೆಂ"ದರೆ ನೆಲ ಕುಳಿಹೋಹುದೆ?
ಒಡನೆ ನುಡಿದರೆ ಶಿರ-ಹೊಟ್ಟೆಯೊಡೆವುದೆ?
ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿರ್ದಡೆ
ಕೆಡಹಿ ಮೂಗ ಕೊಯ್ಯದೆ ಮಾಬ್ಬನೆ ಕೂಡಲಸಂಗಮದೇವನು?

ಇದು ಸಾಮಾಜಿಕ ನೀತಿಯ ಪ್ರಥಮ ಪಾಠವಲ್ಲವೆ? ನಮ್ಮ ನಿತ್ಯದ ವ್ಯವಹಾರದಲ್ಲಿ ಇದನ್ನು ಎಷ್ಟುಸಲ ನೆನೆದರೂ ಸಾಲದು. ಪ್ರತಿಯೊಂದು ವಿಷಯದಲ್ಲಿಯೂ ಬಸವಣ್ಣನವರ ಮನಸ್ಸು ಎಷ್ಟು ಸೂಕ್ಷ್ಮವಾಗಿ ವರ್ತಿಸುತ್ತಿದೆಯೆಂಬುದನ್ನು ನೋಡಬೇಕು. ಸದಾ ಜಾಗ್ರತವಾದ ಅವರ ಮನಸ್ಸು ತನ್ನ ಕರ್ತವ್ಯದಲ್ಲಿ ಎಂದೂ ಉದಾಸೀನ ತಾಳದು. 'ಅನಂತಕೋಟಿ ಸನ್ಮಾನವ ಮಾಡಿದರೇನು? ನಿಮಿಷದ ಉದಾಸೀನ ಕೆಡಿಸಿತ್ತು!'—ಈ ಎಚ್ಚರಿಕೆಯನ್ನಿಟ್ಟುಕೊಂಡೇ ಆ ಜೀವ ಆದರ್ಶದ ದಾರಿದೀಪವಾಯಿತು. 'ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ; ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ.' ಪ್ರತಿಯೊಬ್ಬರೂ ತಮ್ಮನ್ನು ತಾವು ಸುಧಾರಿಸಿಕೊಂಡರೆ ಕೊನೆಗೆ ಲೋಕವೇ ಸುಧಾರಿಸುತ್ತದೆ. ತಿಳಿಯಾದ ಈ ಸಣ್ಣ ಮಾತಿನಲ್ಲಿ ಎಂಥ ಸಾರ್ವಕಾಲಿಕ ಸತ್ಯ ಹುದುಗಿದೆ? ಪ್ರತಿಯೊಬ್ಬರೂ ತಮ್ಮ ತಮ್ಮ ಮನಸ್ಸನ್ನು ತಾವು ಹಿಂಜಿ ನೋಡಿದಾಗ ಅದರ ಸಣ್ಣತನ ಕ್ಷುದ್ರತೆಗಳ ಅರಿವಾಗುತ್ತದೆ. 'ಎನ್ನ ಚಿತ್ತ ಅತ್ತಿಯ ಹಣ್ಣು ನೋಡಯ್ಯ' ಎಂಬ ಮಾತಿನಲ್ಲಿ ಬಸವಣ್ಣನವರು ಚಿತ್ತವನ್ನು ಅತ್ತಿಯ ಹಣ್ಣಿಗೆ ಹೋಲಿಸಿರುವುದು ಎಂಥ ಮನಶ್ಶಾಸ್ತ್ರಜ್ಞನನ್ನೂ ಮೆಚ್ಚಿಸಿ ಮೇಲ್ಮೆವಡೆಯುತ್ತದೆ. ಅತ್ತಿಯ ಹಣ್ಣು ಮೇಲೆ ನೋಡಲು ಕೆಂಪಗೆ ಚೆಂದವಾಗಿದ್ದು ಮೆತ್ತಗಿರುತ್ತದೆ. ಆದರೆ ಅದನ್ನು ಬಿಚ್ಚಿ ಒಳಗೆ ನೋಡಿದರೆ ಪೊಳ್ಳಿನ ತುಂಬ ಬೀಜಗಳೂ, ಹುಳಗಳೂ ತುಂಬಿರುತ್ತವೆ. ಅದರಲ್ಲೇನೂ ಹುರುಳಿರುವುದಿಲ್ಲ. 'ಈ ಪ್ರಪಂಚದ ಡಂಬಿನಲ್ಲಿ ಎನ್ನದೊಂದು ರೂಪು ಮಾಡಿ ನೀವಿರಿಸಿದಿರಯ್ಯಾ' ಎಂಬ ಹೇಳಿಕೆ ಎಷ್ಟೊಂದು ಯಥಾರ್ಥವಾಗಿದೆ! ಆದುದರಿಂದ ಕಾಯದಲ್ಲಿರುವ ಈ ಅವಗುಣಗಳನ್ನು ಕಳೆದು ಕೃಪೆಮಾಡಬೇಕೆಂದು ಕೂಡಲಸಂಗಮನಲ್ಲಿ ಅವರ ನಿತ್ಯಪ್ರಾರ್ಥನೆ. ತಮ್ಮ ತಪ್ಪುಗಳನ್ನೆಲ್ಲ ಒಂದೂ ಬಿಡದೆ ಅವರು ನಿವೇದಿಸಿಕೊಳ್ಳುತ್ತಾರೆ. ಮನುಷ್ಯ ಮಾಡಿದ ತಪ್ಪುಗಳನ್ನೆಲ್ಲ ದೇವರು ಎಣಿಸುತ್ತ ಕುಳಿತರೆ ಜಗತ್ತು ಹೇಗೆ ನಡೆದೀತು? ಎಂತಲೇ 'ಎನ್ನ ತಪ್ಪು ಅನಂತಕೋಟಿ; ನಿಮ್ಮ ಸೈರಣೆಗೆ ಲೆಕ್ಕವಿಲ್ಲಾ!' ಎಂಬ ಬಿಚ್ಚುನುಡಿ. ಆದರೆ ಇಷ್ಟೇ ಸಾಲದು. 'ಇನ್ನು ತಪ್ಪಿದೆನಾದರೆ ನಿಮ್ಮ ಪಾದವೇ ದಿಬ್ಯ' ಎಂಬ ದೃಢನಿರ್ಧಾರವೂ ಬೇಕು. 'ತುಡುಗುಣಿಯೆಂದೆನ್ನ ಹಿಡಿದು ಬಡಿಯದ ಮುನ್ನ ಒಡೆಯ ನಿಮ್ಮ ಬಯ್ಯುದಂತೆ ಮಾಡು'; ಕೊನೆಗೆ ಆರೋಪವೆಲ್ಲ ನಾಯಿಸಾಕಿದವನ ಮೇಲೆಯೇ ಅಲ್ಲವೆ?

ಇನ್ನೂ ನಾನಾಪರಿಯಲ್ಲಿ ಬಸವಣ್ಣನವರು ಈ ಮನಸ್ಸನ್ನು ಶೋಧಿಸಿ ನೋಡಿ ನಿರೂಪಿಸಿದ್ದಾರೆ. ಅವರ ಈ ಮನೋವಿಶ್ಲೇಷಣೆ ಅಚ್ಚರಿಗೊಳಿಸುವಂತಿದೆ. 'ಕಂಬಳಿಯಲ್ಲಿ ಕಣಕವನಾದಿದಂತೆ ಕಾಣಿರೇ, ಎನ್ನ ಮನ' ಎಂಬುದಂತೂ ಅತ್ಯಂತ ಔಚಿತ್ಯ ಪೂರ್ಣವಾದುದು. ಅದರಲ್ಲಿ ಸೇರಿರುವ ಗುಂಜಿಸೆಳೆಗಳನ್ನು ಎಷ್ಟೆಂದು ಆರಿಸಿ ತೆಗೆಯುವದು! ಅದು ಒಮ್ಮೆ ಮರನನೇರಿದ ಮರ್ಕಟನಂತೆ ಹಲವು ಕೊಂಬೆಗೆ ಹಾಯುತ್ತಿದ್ದರೆ, ಊಸರವಳ್ಳಿಯಂತೆ ಗಳಿಗೆಗಳಿಗೆಗೆ ತನ್ನ ಬಣ್ಣ ಬದಲಿಸುತ್ತದೆ. ಯಾವ ಸ್ಥಾನ ದೊರಕಿದರೂ 'ಅಂದಣವನೇರಿದ ಸೊಣಗನಂತೆ—ಕಂಡೊಡೆ ಬಿಡದು ಮುನ್ನಿನ ಸ್ವಭಾವವನು.' ಬಲುಬೇಗ ಅದು ವಿಷಯಕ್ಕೆ ಹರಿಯುತ್ತದೆ. 'ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ' ಸಂಸಾರ ವ್ಯಾಮೋಹ. 'ಈ ನಾಯಿತನವ ಮಾಣಿಸು, ನಿಮ್ಮ

ಧರ್ಮ' ಎಂದು ಅವರ ಹೃದಯ ಕೂಡಲಸಂಗಮದೇವರಲ್ಲಿ ಮೊರೆಯಿಡುತ್ತದೆ. 'ಕಂಗಳಲೊಬ್ಬನ ಕಾಂಬಳು; ಮನದಲ್ಲೊಬ್ಬನ ನೆನೆವಳು; ಈ ಮಾಸಿಸಗಳ್ಳಿಯ ನಂಬದಿರಯ್ಯಾ' ಎಂದು ತಮ್ಮ ಆತ್ಮಕ್ಕೆ ತಾವೇ ಹೇಳಿಕೊಳ್ಳುತ್ತಾರೆ. ಈ ಮನಸ್ಸನ್ನು ಹೇಗೆ ರೂಪಿಸಬೇಕೆಂಬುದನ್ನು ಅವರ ಒಂದು ಬಿನ್ನಹದ ವಚನ ಬಹಳ ಸುಂದರವಾಗಿ ನಿರೂಪಿಸುತ್ತದೆ.

**ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯಾ,**
**ಒರೆಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯಾ;**
**ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡಿಯಾಣಿಯ ಮಾಡಿ,**
**ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲುಹು,**
**ಕೂಡಲಸಂಗಮದೇವಾ!**

ಮೊದಲು ಕರಗಿಸಿ ದೋಷವನ್ನೆಲ್ಲ ಕಳೆದು, ಒರೆಗೆ ಹಚ್ಚಿ, ಮತ್ತೊಮ್ಮೆ ಪುಟಕ್ಕಿಟ್ಟು, ಕಡಿದು, ಬಡಿದು, ಕಾಂತಿಗೊಳ್ಳುವಂತೆ ಮಾಡಿ, ಕೊನೆಗೆ ಶರಣರ ಪಾದಕ್ಕೆ ತೊಡಿಗೆಯಾಗಿ ಮಾರ್ಪಡಬೇಕಂತೆ ಈ ಮನಸ್ಸು. ಇಲ್ಲಿ ಹೇಳುವ ರೀತಿಯೂ ಅಷ್ಟೇ ಮನೋಜ್ಞವಾಗಿದೆ. ಅವರ ಅನೇಕ ವಚನಗಳ ರೀತಿ ಹೀಗೆ ಗುಡಿಯ ಮೇಲೆ ಗೋಪುರವೇರಿಸಿ ಕಳಸವಿಟ್ಟಂತೆ ಸ್ವಯಂಪೂರ್ಣವಾಗಿರುತ್ತದೆ. ಅನುಭವ ಹಾಗೂ ಅದರ ಅಭಿವ್ಯಕ್ತಿ ಅನನ್ಯವಾದ ರೀತಿಯಲ್ಲಿ ಇಲ್ಲಿ ಹೊಂದಿಕೊಂಡಿವೆ.

ಅಂತರಂಗದ ಪ್ರಾಮಾಣಿಕತೆಯೇ ಬಸವಣ್ಣನವರ ವಚನಗಳ ಸ್ಥಾಯಿಭಾವವೆನ್ನಬಹುದು. 'ಎನ್ನಂತರಂಗವ ನೀವೇ ಬಲ್ಲಿರಿ' ಎಂದು ಸಂಗಮದೇವನಲ್ಲಿ ತಮ್ಮನ್ನು ಒಪ್ಪಿಸಿಕೊಂಡಿದ್ದಾರೆ. ಉಳಿದವರಿಗೆ ಅದರ ತಳಮಳ ತಿಳಿಯದು. ಶರಣರೇನೊ ಅವರನ್ನು ಬಾಯಿತುಂಬ ಹೊಗಳುತ್ತಾರೆ. ಆದರೆ ಸಾಧನೆಯ ದಾರಿಯಲ್ಲಿ ಅವರ ಹೊಗಳಿಕೆಯೇ ಹೊನ್ನಶೂಲವಾಗಿ, ಅವರ ಮನ್ನಣೆಯೇ ಮಸೆದಲಗಾಗಿ ಬಸವಣ್ಣನವರನ್ನು ಗಾಸಿಗೊಳಿಸುತ್ತವೆ. ಅದಕ್ಕೆ ಅವರು ಬೇಡುವದೇನನ್ನು? 'ನೀನೆನಗೊಳ್ಳಿದನಾದರೆ ಎನ್ನ ಹೊಗಳ್ತೆಗೆ ಅಡ್ಡಬಾರಾ ಧರ್ಮಿ' ಎಂದು. ಅವರ ಒಳದನಿ ಹಾಗೆ ಮಿಡಿಯುತ್ತದೆ. ಹೊಗಳಿಕೆ ಮನ್ನಣೆಗಳು ಅನೇಕ ಸಲ ಪ್ರಗತಿಗೆ ಮಾರಕವಾಗಿ ಪರಿಣಮಿಸುವುದುಂಟು. ಆದರ್ಶವಾದಿಗಳು ಈ ಮಾತನ್ನು ಮನವರಿಕೆ ಮಾಡಿಕೊಂಡಷ್ಟೂ ಒಳ್ಳೆಯದಲ್ಲವೆ? 'ಅಚ್ಚ ಶರಣರು ನಿಮ್ಮ ನಿಚ್ಚನಿಚ್ಚ ನೆನೆವರು, ಬಚ್ಚಬರಿಯ ಮಾತನಾಡುವೆನು' ಎಂದು ಒಮ್ಮೆ ಪರಿತಪಿಸಿದರೆ, ಇನ್ನೊಂದು ಪ್ರಸಂಗದಲ್ಲಿ ಇನ್ನೂ ದುಃಖೋದ್ವೇಗದಿಂದ ಕೇಳುತ್ತಾರೆ:

**ಅಕಟಕಟಾ! ಶಿವ, ನಿನಗಿನಿತು ಕರುಣವಿಲ್ಲ**
**ಅಕಟಕಟಾ! ಶಿವ, ನಿನಗಿನಿತು ಕೃಪೆಯಿಲ್ಲ.**
**ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ, ಪರಲೋಕ ದೂರನ?**
**ಏಕೆ ಹುಟ್ಟಿಸಿದೆ?**
**ಕೂಡಲಸಂಗಮದೇವಾ, ಕೇಳಯ್ಯಾ,**
**ಎನಗಾಗಿ ಮತ್ತೊಂದು ತರುಮರನಿಲ್ಲವೆ?**

ಮನುಷ್ಯನಾಗಿ ಹುಟ್ಟಿದ ಮೇಲೆ ಮಹತ್ತನ್ನು ಅರಿಯದೆ ಸಾಧಿಸದೆ ಹೋದರೆ ಪ್ರಯೋಜನವೇನು? ಹಾಗೆ ನೋಡಿದರೆ ತರುಮರಗಳೇ ಎಷ್ಟೋ ಲೋಕೋಪಕಾರಿ. 'ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿ'ದಾಗ ಬಸವಣ್ಣನವರ ಜೀವ ಈ ಪಾಡುಪಟ್ಟಿರಬಹುದು. ಆದರೂ 'ಅಕಟಕಟಾ! ಸಂಸಾರವು ವೃಥಾ ಹೋಯಿತ್ತಲ್ಲಾ' ಎಂಬ ಸಂಕಟದ ಸೊಲ್ಲಿನಲ್ಲಿ ಸಂಸಾರವನ್ನು ಸಾರ್ಥಕಗೊಳಿಸಬೇಕೆಂಬ ಧ್ವನಿ ಅಡಗಿಲ್ಲವೆ? ಆತ್ಮಜ್ಞಾನವಿಲ್ಲದೆ ಜೀವನ

ಮಾಡುವದೆಂದರೆ 'ಕಪ್ಪೆ ಸರ್ಪನ ನೆಳಲಲ್ಲಿಪ್ಪಂತೆ'ಯೇ ಸರಿ. ಮಾಯೆ ಮುಂದುಗೆಡಿಸಿ ಅಳಲಿಸಿ ಬಳಲಿಸಿ ಕಾಡುತ್ತಿರುವಾಗ ಕೂಡಲಸಂಗನ ಕೂಡುವ ಬಗೆ ಹೇಗೆ? 'ಇಂದಿಗೆಂತು, ನಾಳೆಗೆಂತು ಎಂದು ಬೆಂದೊಡಲ ಹೊರೆ'ಯುವದರಲ್ಲಿಯೇ ವೇಳೆ ಹೋಗುತ್ತಿದೆ. ಹೊನ್ನ ಹೆಣ್ಣು, ಮಣ್ಣು ತೋರಿ ಈ ಮಾಯೆ ಟೀವಕ ಟಿಂಬಕನಾಡಿಸುತ್ತದೆ ಜೀವಿಗಳನ್ನು. ಆದರೆ ಕಾಯದ ಕರ್ಮದ ಫಲಭೋಗ 'ಆಸತ್ತೆ, ಬೇಸತ್ತೆ, ಬಳಲಿದ್ದೆ, ಏಸು ಮಾಡಲಿ' ಎಂದರೆ ಬಿಡಲಾರದು. ಕೂಡಲ ಸಂಗನ ಶರಣರು ಬಂದು 'ಹೋ, ಹೋ, ಅಂಜದಿರು' ಎಂದು ಧೈರ್ಯವಿತ್ತರೆ ಸಾಕು, ಬದುಕುವದು ಸಾಧ್ಯ.

ಸಂಸಾರದ ದಂದುಗ ಹಿಂಗಿ ಮನದಲ್ಲಿ ಪರಿಣಾಮವಾಗಿ ಪರಮ ಸಂತೋಷದಲ್ಲಿರಬೇಕೆಂದು ಮನ ಬಯಸಿದರೂ, 'ತಾಳಮರಕ್ಕೆ ಕೈಯ ನೀಡಿ ಮೇಲೆ ನೋಡಿ ಗೋಣು ನೊಂದು'ದೆಷ್ಟೊ ಅಷ್ಟೆ. ಕೂಡಲಸಂಗಮದೇವ ಈವ ಕಾಲಕ್ಕಲ್ಲದೆ ಇಲ್ಲ. ಬರಿಯ ಭಕ್ತಿಯುಳ್ಳವರ ನೋಡಿ ನೋಡಿ ಬಯಸಿದರೇನು ಬಂತು? ಆದರೆ, 'ವಿಷಯವೆಂಬ ಹಸುರನ್ನು ಮುಂದೆ ತಂದು ಪಸರಿಸಿದರೆ ಪಶುವೇನ ಬಲ್ಲುದು, ಹಸುರೆಂದೆಳಸುವದು.' ಆದ್ದರಿಂದ 'ವಿಷಯರಹಿತನ ಮಾಡಿ, ಭಕ್ತಿರಸವ ದಣಿಯೆ ಮೇಯಿಸಿ, ಸುಬುದ್ಧಿಯೆಂಬ ಉದಕವನೆರೆದು ನೋಡಿ ಸಲಹು' ಎಂದು ಬೇಡುತ್ತದೆ—ಬಸವಣ್ಣನವರ ಮುಗ್ಧಮನಸ್ಸು. 'ಆರಿಗಾರೂ ಇಲ್ಲ; ಕೆಟ್ಟವಂಗೆ ಕೆಳೆಯಿಲ್ಲ; ಜಗದ ನಂಟ ನೀನೇ'—ಎಂಬ ಭಾವ ದೃಢವಾಗಿ ಬೇರೂರಿದೆ ಆ ಹೃದಯದಲ್ಲಿ. ಅಜ್ಞಾನ ಎಲ್ಲರಿಗೂ ಮುಸುಕು ಹಾಕುತ್ತದೆ, ನಿಜ. ಅದನ್ನು ಅರಿತು ನಡೆಯಬೇಕಾದುದು ಶರಣಮಾರ್ಗ. ಮನಸ್ಸನ್ನು ಬೆಳಗಿ ಕನ್ನಡಿಯಂತೆ ಇಟ್ಟುಕೊಂಡಾಗ ಮಾತ್ರ ಅದರಲ್ಲಿ ಬಿಂಬ ನಿಚ್ಚಳವಾಗಿ ಮೂಡೀತು. ಸಾಮಾನ್ಯ ಮಾನವನಿಗೂ ಶರಣನಿಗೂ ಇರುವ ಅಂತರವೇ ಇದು:

> **"ಉಂಬ ಬಟ್ಟಲು ಬೇರೆ ಕಂಚಲ್ಲ : ನೋಡುವ ದರ್ಪಣ ಬೇರೆ ಕಂಚಲ್ಲ ;**
> **ಭಾಂಡ ಒಂದೆ, ಭಾಜನ ಒಂದೆ : ಬೆಳಗೆ ಕನ್ನಡಿಯೆನಿಸಿತ್ತಯ್ಯಾ"**

ಆದ್ದರಿಂದ ಮಾನವ-ಶರಣರಲ್ಲಿಯ ಭೇದವನ್ನು ಬಸವಣ್ಣನವರು ಒಂದು ಕಿರುನುಡಿಯಲ್ಲಿ ಹಿರಿದಾಗಿ ಹೇಳಿದ್ದಾರೆ: 'ಅರಿದರೆ ಶರಣ; ಮರೆದರೆ ಮಾನವ.' ಮರೆಯುತ್ತ ಅಜ್ಞಾನದ ಕತ್ತಲೆಯಲ್ಲಿ ಕೊಳೆಯುವದು ಮಾನವಸ್ವಭಾವವಾದರೆ, ಅರಿಯುತ್ತ ಮನಸ್ಸನ್ನು ಬೆಳಕಿಗೆ ತೆರೆಯುತ್ತ ಸಾಗುವದು ಶರಣನ ದಾರಿ.

ತಾವು ಸಣ್ಣವರೆಂಬ ನಮ್ರಭಾವದ ಬಸವಣ್ಣನವರು ಜಗತ್ತಿಗೇ ದೊಡ್ಡವರಾದರು. "ಎನ್ನಿಂದ ಕಿರಿಯರಿಲ್ಲ; ಶಿವಭಕ್ತರಿಂದ ಹಿರಿಯರಿಲ್ಲ" ಎಂಬ ನಡೆ-ನುಡಿ ಅವರ ಉಸಿರಾಗಿದ್ದಿತು. 'ಕೀಳಿಂಗಲ್ಲದೆ ಹಯನ ಕಱೆವುದೆ?'—ಎಂದು ಅವರು ಮಾರ್ಮಿಕವಾಗಿ ಕೇಳಿದ್ದಾರೆ. ಆ ವಿನಯ ಒಳಗೂ ಹೊರಗೂ ಒಂದೇ. ಅಂಥ ಆಚರಣೆಯೇ ಅವರಿಗೆ 'ದಿಬ್ಯ'. ಯಾವ ಪದವಿಯನ್ನೂ, ಅಧಿಕಾರವನ್ನೂ ಅವರು ಬಯಸಿದವರಲ್ಲ. 'ನಿಮ್ಮ ಸದ್ಭಕ್ತರನರಿದಿಪ್ಪ ಮಹಾಪದವಿಯನೆ ಕರುಣಿಸಯ್ಯಾ' ಎಂದು ಅವರು ಕೋರಿದ್ದಾರೆ. ತಮ್ಮವರು ಇರಿಸಿಕೊಂಡು, ತರಿಸಿಕೊಂಡು, ಕೊರೆಯಿಸಿಕೊಂಡು, ಜರೆಯಿಸಿಕೊಂಡು ಭಕ್ತರಾಗಿರುವದು ಅವರಿಗೆ ಚೆನ್ನಾಗಿ ಗೊತ್ತು. ಅದೇನು ಸುಮ್ಮನೆ ಆಗುತ್ತದೆಯೆ? 'ಆನು ಭಕ್ತನೆಂಬ ಹುಸಿಯ ಮುಸಕವನೇನ ಬಣ್ಣಿಸುವೆನಯ್ಯ' ಎಂದು ಅವರೇ ನುಡಿದಿದ್ದಾರೆ. ಸಮಾಜದಲ್ಲಿ ಎಲ್ಲರೊಡನೆ ಕೂಡಿಕೊಂಡು ಸಮತಾಭಾವದಿಂದ ನಡೆಯುವಾಗ 'ಉತ್ತಮಕುಲ' ಎಂಬುದು 'ಕಷ್ಟತನದ ಹೊರೆಯಾಗಿ' ಅವರಿಗೆ ಪರಿಣಮಿಸಿತು. ಕಕ್ಕಯ್ಯ ಒಕ್ಕುದನಿಕ್ಕ, ದಾಸಯ್ಯ ಶಿವದಾನವನೆರೆಯ, ಮನ್ನಣೆಯ ಚೆನ್ನಯ್ಯ ಅವರನ್ನು ಮನ್ನಿಸ—ಎಂದ ಮೇಲೆ ಅವರ ಮನಸ್ಸು ನೊಂದುಕೊಳ್ಳದಿರುತ್ತದೆಯೆ? ಅದಕ್ಕಾಗಿ ಅವರ ಆತ್ಮ ಕೂಡಲಸಂಗನ ಅಡಿಯಲ್ಲಿ ಮಿಡಿಯುತ್ತದೆ—ಅಪೂರ್ವವಾದ ಆತ್ಮೀಯತೆಯಿಂದ:

"ಅಪ್ಪನು ನಮ್ಮ ಮಾದರ ಚೆನ್ನಯ್ಯ ;
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ ;
ಚಿಕ್ಕಯ್ಯನೆಮ್ಮಯ್ಯ, ಕಾಣಯ್ಯ ;
ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ ;
ಎನ್ನನೇತಕ್ಕರಿಯಿರಿ, ಕೂಡಲಸಂಗಯ್ಯ."

ಕೀಳುಕುಲದವರೆನಿಸಿಕೊಂಡ ಇವರನ್ನು ಬಸವಣ್ಣನವರು ಎದೆಗಪ್ಪಿಕೊಂಡಿರುವ ರೀತಿ ಉಚ್ಚಕೋಟಿಗೆ ಸೇರಿದ್ದಲ್ಲವೆ? ಶರಣರೆಲ್ಲರೂ ಅವರ ಶುದ್ಧಸಾತ್ವಿಕನೋಟಕ್ಕೆ 'ರತ್ನಮೌಕ್ತಿಕದಚ್ಚು'. 'ಅರಸರ ಮನೆಯಲ್ಲಿ ಅರಸಿಯಾಗಿಪ್ಪುದರಿಂದ ಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು' ಅವರಿಗೆ ಕರಲೇಸಾಗಿ ತೋರಿದ್ದರಲ್ಲಿ ಆಶ್ಚರ್ಯವೇನು?

ಶರಣರ ಸಂಗದಲ್ಲಿ ದೊರೆಯುವ ಅನುಭಾವದ ಸುಖ ಬೇರೆ ಎಲ್ಲಿ ದೊರೆಯಲು ಸಾಧ್ಯ? ಆದುದರಿಂದ ಶರಣರ ಬರವು ಅವರಿಗೆ ಪ್ರಾಣಜೀವಾಳ. ಗಣತಿಂಥಿಣಿಯೊಳಗಿಂದ ಹೊರಗೆ ಬಂದು ಜೀವಿಸುವದೆಂತು? 'ಜಲವ ತಪ್ಪಿದ ಮತ್ಸ್ಯ ಬದುಕುವದೇ ಸೋಜಿಗ'. ಅವರನ್ನಗಲಿದರೆ ಸಾಕು ಜಜ್ಜನೆ ಜರಿದು, ಬಿಬ್ಬನೆ ಬಿರಿದು ಹೋಗುತ್ತಾರೆ. ಅವರಿಗಾಗಿ 'ತನು ಮೀಸಲು, ಮನ ಮೀಸಲು, ನಯನ ಮೀಸಲು'. ಅವರನ್ನಗಲುವ ಧಾವತಿಯಿಂದ ಮರಣವೇ ಲೇಸೆನಿಸುತ್ತದೆ—ಆ ಮಹಾಜೀವಕ್ಕೆ. 'ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ' ಅವರು ಶರಣರ ಬರವನ್ನು ಬಯಸುತ್ತಾರೆ. ಅವರಿಗಾಗಿ ಎಂಥ ದಿವ್ಯನಿರೀಕ್ಷೆ!:

"ಗಿಳಿಯ ಹಂಜರವಿಕ್ಕಿ, ಸೊಡರಿಂಗೆಣ್ಣೆಯನೆರೆದು, ಬತ್ತಿಯನಿಕ್ಕಿ
ಬರವ ಹಾರುತ್ತಿದ್ದೆನೆಲಗವ್ವಾ
ತೆರಗೆಲೆ ಗಿರಕೆಂದೊಡೆ ಹೊರಗನಾಲಿಸುವೆ.
ಅಗಲಿದೆನೆಂದೆನ್ನ ಮನ ಧಿಗಿಲೆಂದಿತ್ತುಲಗವ್ವಾ!
ಕೂಡಲಸಂಗನ ಶರಣರು ಬಂದು, ಬಾಗಿಲ ಮುಂದೆ ನಿಂದು
'ಶಿವಾ' ಎಂದರೆ ಸಂತೋಷಬಟ್ಟೆನೆಲಗವ್ವಾ!"

ಏನು ಅಂತಃಕರಣ! ಏನು ಸಂತೋಷ! ಶರಣರು ಬಂದುಬಿಟ್ಟರೆ 'ಸಾಸವೆಯ ಮೇಲೆ ಸಾಗರವರಿ'ದಂತಾಗುತ್ತದೆ ಅವರ ಹರುಷಕ್ಕೆ! 'ಶರಣರ ಸಂಗದಲಿದ್ದು ಶಿವನ ಬೇಡುವ ಹಂಗೇಕಯ್ಯ' ಎನ್ನುತ್ತದೆ ಅವರ ಒಳದನಿ, ಯಾಕೆಂದರೆ, ಶಿವನಿಗಿಂತಲೂ ಶಿವಭಕ್ತನಧಿಕ.

ಇಷ್ಟರಿಂದಲೇ ಬಸವಣ್ಣನವರ ವ್ಯಕ್ತಿತ್ವದ ಸಂಪೂರ್ಣದರ್ಶನವಾದಂತಾಗದು. ಅವರ ಧೀರತ್ವವನ್ನೂ ಒಂದಿಷ್ಟು ನೋಡಬೇಕು. 'ನಮ್ಮ ಕೂಡಲ ಸಂಗನ ಶರಣರು ಧೀರರು'—ಎಂದು ಮೊದಲೇ ಉಗ್ಘಡಿಸಿದ್ದಾರೆ, ಅವರ ನಿಷ್ಠೆಯೇ ಈ ಕೆಚ್ಚಿಗೂ ಕಾರಣವೆನ್ನಿಸುತ್ತದೆ. "ಸ್ವರ್ಗ, ಮರ್ತ್ಯ ಪಾತಾಳದೊಳಗೆಲ್ಲ ಒಬ್ಬನೇ ದೇವ" ಎಂದು ದಿಟ್ಟತನದಿಂದ ಸಾರುತ್ತಾರೆ. ಅರಗು ತಿಂದು ಕರಗುವ ದೈವ, ಉರಿಯ ಕಂಡರೆ ಮುರುಟುವ ದೈವ, ಅವಸರ ಬಂದರೆ ಮಾರುವ ದೈವ, ಅಂಜಿಕೆಯಾದರೆ ಹೂಳುವ ದೈವ—ಹೀಗೆ 'ದೈವ ದೈವವೆಂದು ಕಾಲಿಡಲಿಂಬಿಲ್ಲ'ದ ಪರಿಸ್ಥಿತಿಯನ್ನು ಎಷ್ಟೊಂದು ವಾಸ್ತವವಾಗಿ ಚಿತ್ರಿಸಿದ್ದಾರೆ! 'ಎಲ್ಲಾ ಪುರಾಣಗಳು ಕರ್ಮಕ್ಕೆ ಮೊದಲು' ಎಂಬುದನ್ನೂ ಎತ್ತಿ ತೋರಿಸಿದ್ದಾರೆ. ನಿಜವಾದ ಶರಣನಿಗೆ ಏತರ ಅಂಜಿಕೆ? "ನ್ಯಾಯನಿಷ್ಠುರಿ; ದಯಾದಾಕ್ಷಿಣ್ಯಪರ ನಾನಲ್ಲ. ಲೋಕವಿರೋಧಿ ಶರಣನಾರಿಗೂ ಅಂಜುವವನಲ್ಲ; ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ" ಬರುವುದನ್ನೆಲ್ಲ ಎದುರಿಸುವ ಕೆಚ್ಚು ಕಡಮೆಯೆ? "ನಾಳೆ ಬಪ್ಪುದು ನಮಗಿಂದೆ ಬರಲಿ, ಇಂದು ಬಪ್ಪುದು ನಮಗೀಗಲೆ ಬರಲಿ". ಲಾಂಛನವ ಕಂಡು ನಂಬಿ ಅವರಂತರಂಗದ ವಿಚಾರವನ್ನು ಕೂಡಲಸಂಗಮದೇವನಿಗೇ ಬಿಟ್ಟುಗೊಟ್ಟ ಬಸವಣ್ಣನವರು 'ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ ಕೂಡಲಸಂಗಮದೇವ

ನೀ ಸಾಕ್ಷಿಯಾಗಿ ಚೀ ಎಂಬೆ' ಎಂದುದನ್ನೂ ನಾವು ನೆನೆಯಬೇಕು. ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆಲ್ಲ ಇರುವ ಎರಡಾಳಿನ ಭಾಷೆಯನ್ನು ಅವರು ಘೋಷಿಸುತ್ತಾರೆ ಕೇಳಿ: "ಕೊಲುವೆನೆಂಬ ಭಾಷೆ ದೇವನದು: ಗೆಲುವೆನೆಂಬ ಭಾಷೆ ಭಕ್ತನದು." ಎಂಥ ಧೀರೋದಾತ್ತಭಾವ! "ಕೂಡಲಸಂಗಮದೇವ, ನಿಮ್ಮುದರವ ಬಗಿದಾಸು ಹೊಗುವ ಭರವೆನಗೆ'—ಎಂಥ ಉತ್ಕಟತೆ! 'ಮರಣವೇ ಮಹಾನವಮಿ' ಎಂದು ಅದಕ್ಕೆ ಪವಿತ್ರತೆಯನ್ನು ಕೊಡಮಾಡಿದ ದೃಷ್ಟಿ ಜೀವನದ ಪೂರ್ಣದೃಷ್ಟಿ; ಪಕ್ವದೃಷ್ಟಿ.

ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ಮೂರುತಿ ತುಂಬಿ, ಮನದಲ್ಲಿ ನೆನಹು ತುಂಬಿ, ಕಿವಿಯಲ್ಲಿ ಕೀರುತಿ ತುಂಬಿ, ಕೂಡಲಸಂಗಮದೇವರ ಚರಣಕಮಲದಲ್ಲಿ ತುಂಬಿಯಾಗಿ ತುಂಬಿರುವ ಬಸವಣ್ಣನವರ ಆ ಸರ್ವಸಮರ್ಪಣ ಭಾವವನ್ನು ನೋಡಿ:

"ಎನ್ನ ಕಾಯವ ದಂಡಿಗೆಯ ಮಾಡಯ್ಯಾ;
ಎನ್ನ ಸಿರವ ಸೋರೆಯ ಮಾಡಯ್ಯಾ;
ಎನ್ನ ನರವ ತಂತಿಯ ಮಾಡಯ್ಯಾ;
ಎನ್ನ ಬೆರಳ ಕಡ್ಡಿಯ ಮಾಡಯ್ಯಾ;
ಬತ್ತೀಸರಾಗವ ಹಾಡಯ್ಯಾ; ಉರದಲೊತ್ತಿ ಬಾರಿಸು,
ಕೂಡಲಸಂಗಮದೇವಾ."

ಆ ದಿವ್ಯನಾದತರಂಗ ನಮ್ಮ ನರನರವನ್ನು ಸೇರಿ, ಹೃದಯದಲ್ಲಿ ತುಂಬಿ ವಿಶ್ವವ್ಯಾಪಿಯಾಗುತ್ತಿದೆ. ಸಮಾಜದ ಸರ್ವಾಂಗದಲ್ಲೂ ನವಚೈತನ್ಯವನ್ನು ತುಂಬಿ ಇಂದಿನ ಜೀವನಕ್ಕೆ ಹೊಸದೃಷ್ಟಿಯನ್ನೂ ಹೊಸ ಹಾದಿಯನ್ನೂ ತೋರಿಸಿಕೊಡುತ್ತಿದೆ. ವ್ಯಕ್ತಿ, ಸಮಾಜ, ವಿಶ್ವ ಹಾಗೂ ಅಧ್ಯಾತ್ಮ ಇವುಗಳನ್ನು ಸರಿಯಾದ ರೀತಿಯಲ್ಲಿ ಗುರುತಿಸಿ ಸಮನ್ವಯಗೊಳಿಸಿದ ಅನುಭವಮಂಟಪದ ಅರಿವಿನ ಅರವಟ್ಟಿಗೆ ಬಸವಣ್ಣನವರ ವಚನಗಳು. 'ಬಯಲ ರೂಪಮಾಡಬಲ್ಲ ಶರಣ, ಆ ರೂಪ ಬಯಲಮಾಡಬಲ್ಲ ಲಿಂಗಾನುಭಾವಿ.' ಈ ಉಭಯವನ್ನು ಕೂಡಲಸಂಗಮನಲ್ಲಿ ಒಂದಾಗಿಸಿದರು ಬಸವಣ್ಣನವರು. ಆ ಪರಮಸತ್ಯ, ಪರಂಜ್ಯೋತಿಸ್ವರೂಪನನ್ನು ಅವರು ಮುಟ್ಟಿ ನೆರೆದ ಸುಖವನ್ನು ಏನೆಂದು ಬಣ್ಣಿಸುವದು?—ಅವರ ಒಂದು ವಚನಮಾಣಿಕ್ಯವೇ ಆ ಭಾವವನ್ನು ಬೆಳಗಿಸಿ ತೋರುತ್ತದೆ:

"ಸಮಸ್ತ ಕತ್ತಲೆಯ ಮುಸುಕ ಕಳೆದಿಪ್ಪ ಇರುವ ನೋಡಾ!
ಬೆಳಗಾಗೆ ಬೆಳಗು ಸಿಂಹಾಸನವಾಗಿ
ಬೆಳಗು ಬೆಳಗ ಕೂಡಿದ ಕೂಟವ
ಕೂಡಲಸಂಗಯ್ಯ ತಾನೇ ಬಲ್ಲ!"

ಚೆನ್ನವೀರ ಕಣವಿ

# ಜಲಶಾಯಿ ವಿಷ್ಣು

## (ಒಂದು ಪ್ರತಿಮಾ ವಿಚಾರ)

**ನಾಮಸ್ಮರಣ**—ತನ್ನ ಇಷ್ಟದೈವತದ ನಾಮಸ್ಮರಣ ಮಾಡುತ್ತಿರಬೇಕೆಂದು ನಮ್ಮ ಜನದ ಶ್ರದ್ಧೆಯಾಗಿದೆ. ಬರಿಯ ನಾಮಜಪದಿಂದ ಆಗಬೇಕಾದುದೇನು? ಎಂಬ ಪ್ರಶ್ನೆಯೂ ಮಹತ್ವದ್ದಾಗಿದೆ. ಏಕೆಂದರೆ ನೆನೆಯುತಕ್ಕ ನಾಮದಲ್ಲಿ ಅಡಕವಾದ ಅರ್ಥವು ತಿಳಿಯದೆ, ಕಣ್ಣು ಮುಚ್ಚಿಕೊಂಡು ಬಾಯಿಂದ ನಡೆದ ಶಬ್ದೋಚ್ಚಾರಕ್ಕೆ ಏನು ಬೆಲೆ? ಆ ನಾಮ ನಿರ್ಮಿತಿಯ ಉದ್ದೇಶವೆ ಈ ವರ್ತನದಿಂದ ವ್ಯರ್ಥವಾದಂತಲ್ಲವೆ? ಎಂದರೆ, 'ಅರ್ಥದ ಮರ್ಮವನರಿಯದೆ' ಮಾಡಿದ ಧ್ಯಾನವು, ಆ ದೇವರ ನಾಮಾಭಿದಾನದ ನೆನಹು, ಮೂಲ (ಅರ್ಥ) ಸ್ವರೂಪದ ದರ್ಶನಕ್ಕೆ ಕಾರಣವಾಗಲಾರದು.

ಅರ್ಥದ ಗಂಧವೂ ಗೊತ್ತಾಗದೆ ಮಾಡುವ ನಾಮಸ್ಮರಣದಿಂದಲೂ ಲಾಭವುಂಟೆಂದು ಪ್ರತಿಪಾದಿಸುವುದೂ ಉಂಟು. ಆ ಶಬ್ದದಲ್ಲಿಯೇ ಒಂದು ಶಕ್ತಿಯಿರುತ್ತದೆ. ಆ ಶಬ್ದವನ್ನು (ನಾಮವನ್ನು) ಎಡೆಬಿಡದೆ ಉಚ್ಚರಿಸುವುದರಿಂದ ಆ ಶಕ್ತಿಯ ಮೂಲಕ ಧ್ಯಾನಸಿದ್ಧಿಯಾಗು ವುದು, ಎಂದು ಹೇಳುವುದುಂಟು. ಇದು ಏನೇ ಇದ್ದರೂ ಸತತವಾಗಿ ಒಂದೇ ಬಗೆಯ ಶಬ್ದ (ನಾದ)ದಿಂದ ಮನಸ್ಸಿಗೆ ಒಂದು ಬಗೆಯ ಬಧಿರತೆಯು ಬಂದು, ಅದು ಆ ನಾದದ ಆವರಣದಲ್ಲಿ ಮುಗ್ಧವಾಗುವುದು. ಈ ಮುಗ್ಧಸ್ಥಿತಿಯಲ್ಲಿ—ನಿದ್ರೆಯಲ್ಲ ಅಥವಾ ಜಾಗ್ರತಿಯೂ ಅಲ್ಲ—ಇಂತಹ ಒಂದು (ಮನೋ) ರಾಜ್ಯದಲ್ಲಿ ಆ ವ್ಯಕ್ತಿಯ ಪ್ರವೇಶವಾಗುವುದು. ಮನಸ್ಸಿನ ಅಂತರಾಳದಲ್ಲಿ ಧ್ಯಾನಕ್ಕೆ ಕುಳಿತ ವ್ಯಕ್ತಿಯ (ಸಾಂಸ್ಕೃತಿಕ ಮಟ್ಟದ ಮಾನದಿಂದ) ಸಂಕಲ್ಪ ಏನೊಂದು ರೂಪ-ಆಕಾರ ತಾಳಿ, ಅವನಿಗೆ 'ಸಾಕ್ಷಾತ್ಕಾರ'ವಾದಂತೆ ಬೋಧೆಯಾಗುತ್ತದೆ. ತಾಂತ್ರಿಕ ಗೂಢಮಾರ್ಗಗಳಲ್ಲಿ ಇದು ಒಂದು. ಇಲ್ಲಿ ಅದರ ಚರ್ಚೆ ಅಪ್ರಸ್ತುತ.

**ನಾಮವು : ಪ್ರತಿಮೆ**—ದೇವರ ನಾಮ ನಿರ್ಮಾಣದಲ್ಲಿ ಉದ್ದೇಶವು ಇದ್ದೇ ಇದೆ ಯೆಂದು ಗ್ರಹಿಸುವುದು ಸರಿಯೆ, ಎಂಬುದು ವಿಚಾರಾರ್ಹ ಪ್ರಶ್ನೆ. ಯಾವುದೇ ಮಾತು (ಶಬ್ದ) ವೊತ್ತ ಮೊದಲಬಾರಿ, ಕೆಲವೊಂದು ಅರ್ಥ-ಭಾವದ ಅಭಿವ್ಯಕ್ತಿಗಾಗಿಯೆ ಮೈದೋರುತ್ತದೆ. ಬಳಿಕ ರೂಢಿಯಲ್ಲಿ ಅದು ಅರ್ಥವಿಹೀನವಾಗಬಹುದು, ಬದಲಾಗಬಹುದು. ಅರ್ಥವು ತಿಳಿಯದೆಯೂ ಬಳಕೆಯಲ್ಲಿ ಉಳಿಯಬಹುದು. ಆದರೆ ಅದರ ಜನ್ಮಧಾರಣೆಯ ಕಾಲಕ್ಕೆ ಅರ್ಥಪ್ರತೀತಿಯಿಲ್ಲದ ಶಬ್ದವೇ ಹೊರಹೊಮ್ಮಲಾರದು. ಆದುದರಿಂದ ನಾಮಗಳು ಅವು ದೇವರವೇ ಇರಲಿ, ಯಾವುವೇ ಇರಲಿ, ಅರ್ಥಭಾವದ ಚಿತ್ರವನ್ನು ಕಣ್ಣೆದುರು ತಂದು ನಿಲ್ಲಿಸುವುದಕ್ಕಾಗಿಯೆ ತಲೆಯೆತ್ತುತ್ತವೆ. ಮನೋಭಾವವು ಮೈತಾಳಿ ಶಬ್ದರೂಪದಲ್ಲಿ ಅವತರಿಸುವುದು; ಅಥವಾ ಸಂಕೇತ—ಚಿತ್ರ, ಮೂರ್ತಿಗಳ ರೂಪದಲ್ಲೂ ಪ್ರಾದುರ್ಭವಿಸುವುದು. ಹೃದಯದಲ್ಲಿ ಉಂಟಾದ ವಿಚಾರ ಅಥವಾ ಭಾವನೆಯ ಊರ್ಮಿಯು, ಪ್ರಜ್ಞೆಯಿಂದ ಕ್ಷಣಾರ್ಧದಲ್ಲಿ ಅಳೆಯಲ್ಪಡುವುದು. ತನಗೆ ಆ ಮೊದಲೇ ತಿಳಿದ ಅಳತೆಗೋಲಿನಿಂದ ಅಳೆಯಲ್ಪಟ್ಟ ಆ ಊರ್ಮಿಗೆ, ಪೂರ್ವಪರಿಚಿತ ಸದೃಶ ವಸ್ತುವಿನ ಸಾಹಚರ್ಯದಿಂದ, ಸಹಜಸ್ಫೂರ್ತಿಯಲ್ಲಿ ನಾಮಕರಣವಾಗುವುದು. ನಿಮಿಷಮಾತ್ರ ದಲ್ಲಿ ನಡೆದು ಹೋಗುವ ಅಂತಃಪ್ರಜ್ಞೆಯ ಈ ಅನು-ಮಾನ ಕ್ರಿಯೆಯ ಮೂಲಕವಾಗಿಯೇ ಶಬ್ದಕ್ಕೂ (ಮೂರ್ತಿಗೂ) ಪ್ರತಿಮಾ ಎಂಬ ಹೆಸರು ಸಲ್ಲುತ್ತದೆ. ಹೃದಯಾಂತರಾಳದ ಭಾವ— ವಿಚಾರದ ಮಾನಚಿತ್ರ (ನಕ್ಷೆ): ಆ ಶಬ್ದ; ಆ ಮೂರ್ತಿ.

**ಜಲಶಾಯಿ : ಪ್ರತಿಮಾ.**—ಶ್ರೀವ್ಯಾಸರು ಮಹಾಭಾರತದಲ್ಲಿ ನಾರಾಯಣ ಧರ್ಮದ

ನಿರೂಪಣೆಯಲ್ಲಿ ದೇವರ ನಾಮಗಳನ್ನು ಕುರಿತು ಹೇಳಿದ ಒಂದು ಸ್ತೋತ್ರವಾಕ್ಯವು ಈ ವಿಚಾರದಲ್ಲಿ ಒಳ್ಳೆಯ ಮಾರ್ಗದರ್ಶಕವಾಗಿದೆ. ಭಕ್ತನು ನಾಮಸ್ಮರಣ ಕಾಲದಲ್ಲಿ **'ಗುಹ್ಯೈಃ ತಥ್ಯೈಃ ನಾಮಭಿಃ'** ದೇವರನ್ನು ನೆನೆಯಲು ಹೇಳಿದ್ದಾರೆ (ಮಹಾಭಾ. ಶಾಂ. ೩೪೭-ಕುಂಭಕೋಣಂ ಪ್ರತಿ). ಇದರಿಂದ ಈ ನಾಮ-ಪ್ರತಿಮೆಗಳಲ್ಲಿ ತಥ್ಯವಿದೆ, ಎಂದು ಊಹಿಸಲು ಅಡ್ಡಿತೋರುವುದಿಲ್ಲ. ಆದರೆ ಆ ತಥ್ಯ (ಅರ್ಥ)ವನ್ನು ನಿರ್ಧರಿಸುವುದು ಮಾತ್ರ ಬಹಳ ತೊಡಕಿನದಾಗಿದೆ; ಏಕೆಂದರೆ ಈ ತಥ್ಯವು ಗೂಢವಾಗಿ ಉಳಿದುಕೊಂಡಿದೆ. ಇದು ಹೀಗೆ 'ಗುಹ್ಯಾತ್ ಗುಹ್ಯತರ'ವಾಗಿ ಉಳಿಯತೊಡಗಿದ್ದರಿಂದಲೆ ಗುರೂಪದೇಶದ ಕಿವಿಮಾತಿನ ವ್ಯಾಪಾರದ ದಂದುಗಕ್ಕೆ ಪ್ರಾಶಸ್ತ್ಯವು ಪ್ರಾಪ್ತವಾಗಿದೆ!

ಜಲಶಾಯಿಯೊ? ಕ್ಷೀರಸಾಗರಶಯನನೊ?—ವಿಷ್ಣುವು ಇರುವುದು ನೀರಲ್ಲಿಯೊ? ಹಾಲಿನಲ್ಲಿಯೊ? 'ಕಡಲೊಡೆಯ' ನೆಂಬಲ್ಲಿ, ಅದು ಉಪ್ಪುನೀರೆ? ಎಂಬ ಸಂದೇಹ ಬೇರೆ! ವಿಷ್ಣು ಸಹಸ್ರನಾಮದೊಳಗಿನ ಅನೇಕ ಹೆಸರುಗಳಲ್ಲಿ ಜಲವಾಚಕಗಳ ಸಂಖ್ಯೆಯೇ ಹೆಚ್ಚು. 'ಅಪಾಂನಿಧಿ,' 'ವರುಣ,' 'ಕ' ಇತ್ಯಾದಿ ಹೆಸರುಗಳು ಅಲ್ಲಿವೆ. 'ಕುವಲೇಶಯಃ' ಎಂಬ ನಾಮಕ್ಕೆ ಶ್ರೀ ಶಂಕರಾಚಾರ್ಯರು 'ಕುವಲಂ ಜಲಂ; ತಸ್ಮಿನ್ ಶೇತೇ ಇತಿ' ಎಂದು ಭಾಷ್ಯಮಾಡಿದ್ದಾರೆ. ಇದರೊಡನೆ ವಿಷ್ಣುವಿನ ಅವತಾರವೆಂದು ಹೇಳಲಾಗುವ ಯಾದವ ಕೃಷ್ಣನು ಗೀತೆಯಲ್ಲಿ ಹೇಳಿದ ಈ ನಾಮಗಳನ್ನು ನೆನೆಯಬೇಕು. 'ಸ್ರೋತಸಾಂ ಅಸ್ಮಿ ಜಾಹ್ನವೀ,' 'ಸರಸಾಂ ಅಸ್ಮಿ ಸಾಗರಃ,' 'ವರುಣೋ ಯಾದಸಾಂ ಅಹಂ' ಇತ್ಯಾದಿ.

ಶ್ರೀ ವ್ಯಾಸರು ನಾರ: ಆಪ—ಈ ವಿವರದೊಡನೆ ಹೇಳಿದ ನಾರಾಯಣ ಶಬ್ದದ ನಿರ್ವಚನವನ್ನು ಲೆಕ್ಕಿಸಬೇಕು. "ನರಾಣಾಂ ಅಯನಂ ಖ್ಯಾತಂ ಅಹಂ ಏಕಃ ಸನಾತನಃ; ಆಪೋ ನಾರಾಃ ಇತಿ ಪ್ರೋಕ್ತಾಃ . . . ." ಶ್ರೀಮನ್ನಾರಾಯಣನೇ ಸಾಕ್ಷಾತ್ತಾಗಿ ನಾರದನಿಗೆ ಈ ರಹಸ್ಯಾರ್ಥವನ್ನು ಹೇಳಿದುದಾಗಿ ವ್ಯಾಸರು ಬರೆಯುತ್ತಾರೆ. ಅದು ಏನೇ ಇದ್ದರೂ **ನಾರ** ಎಂದರೂ **ನೀರು,** ನಿಜವಿದೆ. ಇಂತಿದು ನಾರಾಯಣ-ವಿಷ್ಣು ರಹಸ್ಯವು ನಿಶ್ಚಿತವಾಗಿ ಬೆಳಕಿಗೆ ಬರುವುದು. ಆದರೆ ಈ 'ನಾರ' ಎಂದರೆ ಯಾವ ನೀರು? ಎಂಬ ಪ್ರಶ್ನೆ ತಲೆಯೆತ್ತುವುದು.

ವಿಷ್ಣುಸಹಸ್ರನಾಮಗಳಲ್ಲಿ ಮಧು ಹಾಗೂ ಮಾಧವ ಎಂಬವೂ ಇವೆ. ಮಧುವಾಚಕವಾದ ಈ ಪದಾರ್ಥವು ಯಾವುದು? ಆಪ, ಪಯಸ್ ಮತ್ತು ಮಧು. ಈ ಬಗೆಯ ಹೆಸರುಗಳಿಂದ ವಿಷ್ಣು-ನಾರಾಯಣ ಪ್ರತಿಮೆಯ ನಿಶ್ಚಿತಸ್ವರೂಪವು ಸಂದಿಗ್ಧವಾಗಿಯೇ ಉಳಿಯುತ್ತಿದೆ. ಆದರೂ 'ರಸೋಹಂ ಅಪ್ಸು' ಎಂಬ ಗೀತಾವಾಕ್ಯದಿಂದ ಇದು ರಸ (ದ್ರವ್ಯ) ಎಂಬ ಮಾತು ಸ್ಪಷ್ಟವಾಗುವುದು. ಆದರೆ ಇದು ಯಾವ ರಸ? ಎಂಬ ಜಿಜ್ಞಾಸೆ ಉಳಿಯುತ್ತಲೇ ಇದೆ!

'ಕ್ಷೀರಾಬ್ಧಿಪುತ್ರೀ, ಭುವನೈಕಮಾತಾ, ಶ್ರೀವಿಷ್ಣುಪತ್ನೀ' ಎಂಬ ಮಂಗಲಾಷ್ಟಕದ ಸ್ತುತಿಯಲ್ಲಿ ಲಕ್ಷ್ಮೀಸೂಚಕವಾಗಿ ಹಾಲಿನ ಪ್ರತಿಮೆ ಬಳಸಲಾಗಿದೆ! ಇವಳು ಮಾಧವಿಯೂ ಅಹುದು! ಪತಿಪತ್ನಿಯರ ಈ ಸ್ವಾರಸ್ಯ ಕುತೂಹಲಜನಕವಾಗಿದೆ. ಈ ದಾಂಪತ್ಯ ಸಾಮರಸ್ಯದ ಪ್ರತೀಕ. ಆದುದರಿಂದ ಲಕ್ಷ್ಮೀ-ನಾರಾಯಣರನ್ನು ಆದರ್ಶ ದಂಪತಿಗಳೆಂದು ಬಗೆಯಲಾಗಿದೆ. ವಿವಾಹ ಸಮಯದಲ್ಲಿ 'ಶ್ರೀ ಲಕ್ಷ್ಮೀ-ನಾರಾಯಣ ಸ್ವರೂಪಿಣೇ ವರಾಯ' ಎಂದು ಹೇಳುವ ಮಂತ್ರವು ತುಂಬ ಮಾರ್ಮಿಕವಾಗಿದೆ.

ವಿಷ್ಣು ಮತ್ತು ನಾರಾಯಣ ಇವು ಬೇರೆ ದೇವತೆಗಳೆ, ಎಂಬ ಪ್ರಶ್ನೆ ಇಲ್ಲಿ ಅಪ್ರಸ್ತುತ. ಸಾಂಪ್ರದಾಯಿಕ ಶ್ರದ್ಧೆಯು ಇವೆರಡನ್ನೂ ಅಭಿನ್ನವಾಗಿ ಬಗೆಯುತ್ತದೆ. ಜಲಶಾಯಿ ವಿಷ್ಣು; ಆಪೋ ನಾರಾಃ; ಈ ವಿಧಾನಗಳು ಇವೆರಡೂ ದೇವತಾಸ್ವರೂಪವು ಮೂಲದಲ್ಲಿ ಒಂದೇ ಇರಬೇಕೆಂಬ ಗ್ರಹಿಕೆಗೆ ಪುಷ್ಟಿಕೊಡುತ್ತಿವೆ.

ವಿಷ್ಣು-ನಾರಾಯಣ-ಲಕ್ಷ್ಮೀ ಈ ಪ್ರತಿಮೆಗಳ ತಳಹದಿಯಲ್ಲಿ ಹಾಲು: ನೀರು: ರಸ: ಮಧು ಈ ಬಗೆಯ ದ್ರವ್ಯವೊಂದು ಇದ್ದುದು ಹೊರವಡುತ್ತದೆ. ರಸ-ದ್ರವ್ಯವು ವಿಶ್ವದ ಮೂಲ

ತತ್ವವಿರುವುದಾಗಿ ಉಪನಿಷದ್ವಾಕ್ಯಗಳಿಂದ ತಿಳಿಯುತ್ತದೆ. 'ಆಪೋ ವಾ ಇದಂ ಅಗ್ರ ಆಸುಃ' 'ತಜ್ಜಲಾನಿತಿ' ಇತ್ಯಾದಿ. ಆದಿ ನಾರಾಯಣನು ; ಆತನಿಂದ ಸೃಷ್ಟಿಯಾಯಿತು—ಎಂಬ ಪುರಾಣ ಸಂಕೇತದಲ್ಲಿ ಇದೇ ರಹಸ್ಯವು ಇರಬೇಕೆಂದು ತೋರುತ್ತದೆ. ದೇವತೆಗಳು ನೀರಿನಿಂದ ಆದರು ; ಸಮುದ್ರದಲ್ಲಿ ಇದ್ದರು ಎಂಬ ಮಾತು ಋಗ್ವೇದದಲ್ಲಿ ಬರುತ್ತದೆ. ಗೋಮಾತೆಯ ಒಡಲಲ್ಲಿ ಮೂವತ್ತುಮೂರು ಕೋಟಿ ದೇವತೆಗಳು ಇವೆ ಎಂಬ ಶ್ರದ್ಧೆಯ ಗೂಢಾರ್ಥವು ಇಲ್ಲಿ ಬೆಳಕಿಗೆ ಬರುತ್ತದೆ. ವಿಷ್ಣು-ನಾರಾಯಣ—ಲಕ್ಷ್ಮಿ ಮಾತ್ರವಲ್ಲ ಎಲ್ಲ ದೇವತೆಗಳು ನೀರು-ಹಾಲಿನ ತತ್ವದ ಮೇಲೆಯೆ ಅವಲಂಬಿಸಿರುವುದು ಗಮನಕ್ಕೆ ಬರುತ್ತಿದೆ.

'ಹೇ ಜಿಹ್ವೇ ರಸಸಾರಜ್ಞೇ ಸರ್ವದಾ ಮಧುರಪ್ರಿಯೇ, **ನಾರಾಯಣಾಖ್ಯ ಪೀಯೂಷಂ** ಪಿಬ ಜಿಹ್ವೇ ನಿರಂತರಮ್.' ಇಲ್ಲಿ ಉಕ್ತವಾದ ನಾರಾಯಣ ಹೆಸರಿನ ಪೀಯೂಷವು ಕೇವಲ ಲಕ್ಷಣಾರ್ಥದ್ದಾಗಿ ಇರುವಂತೆ ಎನಿಸುವ ಹಾಗಿದೆ. ಅದು ತೀರ ಸುಳ್ಳು ಅಲ್ಲ. ಆದರೆ ಲಕ್ಷಣಾರ್ಥವು ಪ್ರಾಪ್ತವಾದ ಶಬ್ದದ ಮೂಲಾರ್ಥವು ಲಕ್ಷಣಾರ್ಥಕ್ಕೆ ಆಧಾರ ಭೂತವಾದ ವಸ್ತು-ವರ್ಣ ವಾಚಕವಿರುವುದುಂಟು. ಆದಕಾರಣ ಅಮೃತದಂತೆ ಮಧುರ-ನಾರಾಯಣನಾಮ ಮೂಲದಲ್ಲಿ ಅಮೃತದಂತಹ ರಸಸ್ವರೂಪಿಯು ಇರಬೇಕೆಂದು ಊಹಿಸ ಬೇಕಾಗುತ್ತದೆ. 'ಹೇ ಜಿಹ್ವೇ ರಸಸಾರಜ್ಞೇ ಪಿಬ ನಿರಂತರಂ', ಎಂಬಲ್ಲಿ ಇರುವ ಪ್ರತಿಯೊಂದು ಮಾತುಗಳು ನಾರಾಯಣ ರಸದ ಮಾಧುರ್ಯದ (ಎಂದೊ ಒಂದು ಕಾಲದ) ಸವಿಯ ಸುಪ್ತಚೇತನ ದೊಳಗಿನ ನೆನಹಿನ ಉದ್ಗಾರಗಳು ಎನಿಸುವಂತಿವೆ. ವಿಶ್ವೋತ್ಪತ್ತಿಯ ಮೂಲ ದ್ರವ್ಯವು (ಆಪ, ಮಧು, ಪಯ ಹೀಗೆ) ರಸಸ್ವರೂಪಿಯಾಗಿದೆ ಎಂಬ ವೇದವಚನಗಳಿವೆ. ಆದಕಾರಣ 'ನಾರಾಯಣಾಖ್ಯ' ಪೀಯೂಷವನ್ನು ಕುಡಿಯಿರಿ ಎಂಬ ಉಪದೇಶದೊಳಗಿನ ಈ ಪೀಯೂಷ (ಆಪೋ ನಾರಃ) ಒಂದು ಪೇಯವೇ ಇರಬೇಕೆಂದು ನಿರ್ಧರಿಸಬಹುದಾಗಿದೆ.

ಇದು ನಿಜವಿದ್ದರೆ, ಈ ಆಪ : ನಾರ : ರಸವು—ಹಾಲು : ನೀರು ಯಾವುದು ಎಂಬುದರ ಸಂಶೋಧನವು ಆಗುವುದು ಅವಶ್ಯವಿಲ್ಲವೆ? ಈ ಆಪಃ ನಾರ ರಸದಿಂದ ದೇವತಾಸೃಷ್ಟಿಯಾಗಿದೆ ಎಂದು ವೇದಗಳು ಹೇಳುತ್ತವೆ. ಈ ಕಾರಣದಿಂದ ಭಾರತೀಯ ಸಂಸ್ಕೃತಿಯ ಉಗಮದಲ್ಲಿ ಈ 'ರಸ'ವು ಇರಬೇಕಾಯಿತು. ಭಾರತೀಯ ದೇವತಾ ವಿಚಾರ, ಧರ್ಮ, ತತ್ವಜ್ಞಾನ, ಸಾಹಿತ್ಯಾದಿ ಗಳಲ್ಲಿ ಈ ಹುಟ್ಟು-ಬೆಳವಿಗೆ ಈ ರಸ ತತ್ವವೆ ಪೋಷಣೆಯನ್ನಿತ್ತಂತೆ ತೋರುತ್ತದೆ.*

**ಶಂ. ಬಾ. ಜೋಶಿ**

---

* ಬಲ್ಲಿದರ ಪರಾಮರ್ಶೆಗಾಗಿ ಬೇಗನೆ ಪ್ರಕಟವಾಗುವ ಶೈವ ವೈಷ್ಣವ ಸಂಪ್ರದಾಯಗಳ **ಪೂರ್ವೋತ್ತರ** (ಹಾಲು ಮತದವರ ದರ್ಶನ) ಎಂಬ ಪ್ರಬಂಧದಿಂದ ಎತ್ತಿದ ಒಂದು ಅಂಶ.

# ಎರಡು ವಚನಗಳು

ಶಿವಶರಣರು ವಚನಗಳನ್ನು ರಚಿಸುವಲ್ಲಿ ಆ ಕಾಲದ ಸಾಮಾನ್ಯಜನರಿಗೂ ಅರ್ಥವಾಗುವಂಥ ನಾಣ್ನುಡಿಯನ್ನೇ ಬಳಸಿದ್ದಾರೆ. ಅನೇಕ ವಚನಗಳು ಸರಳವೂ ಸುಂದರವೂ ಆಗಿದ್ದು ಓದಿದಕೂಡಲೇ ಅರ್ಥವಾಗುತ್ತವೆ. ಇಂತಹವು ಮಾತ್ರ ಈಗ ಲೋಕಪ್ರಿಯವಾಗಿದ್ದು ಸಾಮಾನ್ಯ ಜನರ ವಿದ್ವಜ್ಜನರ ಅನುಭಾವಿಗಳ ನಾಲಗೆಯಮೇಲೆ ನಲಿಯುತ್ತಿವೆ. ಆದರೆ, ವಚನಶಾಸ್ತ್ರವನ್ನೂ ವಚನಕಾರರು ಕಂಡಂಥ ಅನುಭವವನ್ನೂ ಬೌದ್ಧಿಕವಾಗಿಯಾದರೂ ಗ್ರಹಿಸಿರದಿದ್ದರೆ ಅನೇಕ ವಚನಗಳ ಅರ್ಥ ಹೇಳುವುದು ಸಾಧ್ಯವಾಗುವುದಿಲ್ಲ. ಅಂದಿಗೆ ಬಳಕೆಯಲ್ಲಿದ್ದು ಈಗ ಒಳಕೆತಪ್ಪಿ ಅರ್ಥವಾಗದಿರುವ ನೂರಾರು ಮಾತುಗಳು ವಚನಗಳಲ್ಲಿವೆ. ಅಂದು ಜನತೆಯಲ್ಲಿದ್ದ ಸಂಜ್ಞೆಗಳು ರೂಢಿಯಲ್ಲಿದ್ದ ಗಾದೆಗಳು ಕತೆಗಳು ಆಚಾರವಿಚಾರಗಳು ಇಂದು ಇಲ್ಲವಾಗಿ ಅನೇಕ ವಚನಗಳ ಅರ್ಥವನ್ನು ಗ್ರಹಿಸುವುದೂ ಸಾಧ್ಯವಾಗಿಲ್ಲ. ಬೆಡಗಿನ ವಚನಗಳು, 'ಟೀಕಿನ ವಚನಗಳು' ಇದ್ದರೂ ಅವುಗಳನ್ನೂ ಈವರೆಗೆ ಬಹುಶಃ ಯಾರೂ ಶಾಸ್ತ್ರೀಯವಾಗಿ ಅಭ್ಯಾಸ ಮಾಡಿದಂತೆ ಕಾಣುವುದಿಲ್ಲ. ಮಾಡಿದವರಿದ್ದರೂ ಅಂಥವರ ಆಳವಾದ ಅನುಭವ ಪಾಂಡಿತ್ಯಗಳ ಪ್ರಯೋಜನ ಪುಸ್ತಕಗಳ ಮೂಲಕ ದೊರಕಿರುವುದಿಲ್ಲ. ಈ ವಿಚಾರಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಬಸವಣ್ಣನವರ ಎರಡು ವಚನಗಳ ತಾತ್ಪರ್ಯವನ್ನು ವಿವರಿಸಲು ಇಲ್ಲಿ ಪ್ರಯತ್ನಪಟ್ಟಿದೆ.

**ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ**
**ಹರದ ಕುಳ್ಳಿರ್ದ ನಮ್ಮ ಮಹದೇವ ಸೆಟ್ಟಿ.**
**ಒಮ್ಮನವಾದರೆ ಒಡನೆ ನುಡಿವನು ; ಇಮ್ಮನವಾದರೆ ನುಡಿಯನು**
**ಕಾಣಿಯ ಸೋಲ ; ಅದ್ದಗಾಣಿಯ ಗೆಲ್ಲ !**
**ಜಾಣ ನೋಡವ್ವಾ, ನಮ್ಮ ಕೂಡಲಸಂಗಮದೇವ !**

ಧರಣಿಯ ಮೇಲೆ ದೊಡ್ಡದಾದ ಅಂಗಡಿಯನ್ನಿಟ್ಟು ದಿನಸನ್ನು ಮಾರುವುದಕ್ಕೆಂದೇ ಕುಳಿತಿದ್ದಾನೆ ವ್ಯಾಪಾರಿಯಾದ ಮಹಾದೇವ ಸೆಟ್ಟಿ. ಒಂದು ಮನ (ಮಾನ) ದವಸ ಬೇಕೆಂದರೆ ಕೂಡಲೆ ನುಡಿಯುವನಂತೆ! ಎರಡು ಮನ (ಮಾನ) ಬೇಕೆಂದರೆ ನುಡಿಯುವುದೇ ಇಲ್ಲವಂತೆ! ಇದೆಂಥ ಜಾಣ್ಮೆ! ಕಾಣಿಯನ್ನು ಸೋಲುವನಂತೆ (ಸೋಲ=ಸೋಲುವುದು), ಅರ್ಧ ಕಾಣಿಯನ್ನು ಮಾತ್ರ ಗೆಲ್ಲುವುದಂತೆ (ಗೆಲ್ಲ= ಗೆಲ್ಲುವುದು, ಲಾಭಪಡೆಯುವುದು). ಎರಡು ನಷ್ಟ, ಒಂದು ಲಾಭ! ಇದು ಯಾವ ಸೀಮೆಯ ಚದುರು! "ಜಾಣ ನೋಡವ್ವಾ!" ಇವನೆಂಥ ಜಾಣನು? ಲೌಕಿಕರ ಕಣ್ಣಿಗೆ ಈ ಸೆಟ್ಟಿ ಕೇವಲ ಬೆಪ್ಪುತಕ್ಕಡಿ!

ಮೇಲುನೋಟಕ್ಕೆ ಈ ವಚನದಲ್ಲಿ ಅಸಂಬದ್ಧತೆ ಕಾಣುವುದೆಂಬುದನ್ನು ವಿವರಿಸಿ ಹೇಳಬೇಕಾಗಿಲ್ಲ.

ಈ ವಚನದ ತಾತ್ಪರ್ಯ ಹೀಗಿರಬಹುದಲ್ಲವೆ? ಶರೀರವೆಂಬ ಧರಣಿಯ ಮೇಲೆ ಅಥವಾ ಅಂತರಂಗವೆಂಬ ನೆಲದ ಮೇಲೆ ಜೀವನಿಗೆ ಅತ್ಯಂತ ಶ್ರೇಯಸ್ಕರವಾದ ಒಡವೆಗಳನ್ನು ಇಟ್ಟುಕೊಂಡಿದ್ದಾನೆ ಮಹಾದೇವ ಎಂಬ ಸೆಟ್ಟಿ. ಕೊಳ್ಳುವ ಜೀವನಲ್ಲಿ ಒಮ್ಮನ ಅಂದರೆ, ಕವಲೊಡೆಯದ ದೃಢವಾದ ನಿರಂತರ ಚಿತ್ತೈಕಾಗ್ರತೆ ಇದ್ದರೆ ನುಡಿಯುವನು; ಇಮ್ಮನ, ಅಂದರೆ, ಹರಿದಾಡುವ ಮನಸ್ಸಿನ ದೃಢವಿಲ್ಲದ ಭಕ್ತಿಯುಳ್ಳವನನ್ನು ಕಂಡು ನುಡಿಯುವುದಿಲ್ಲ. 'ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ, ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ.' ಈ ಮಹದೇವ ಸೆಟ್ಟಿ

ಏನನ್ನೂ ದಾನವಾಗಿ ಕೊಡುವುದಿಲ್ಲ. ತನ್ನಲ್ಲಿರುವ ಕಾರುಣ್ಯವೆಂಬ ಒಡವೆಯನ್ನು ಬಿಟ್ಟು ಕೊಡುವುದಿಲ್ಲ. ಭಕ್ತನೆನಿಸಿಕೊಂಡವನು ಸಮರ್ಪಿಸುವ ಅರೆಕಾಣಿಕೆ ಅವನಿಗೆ ಬೇಕಿಲ್ಲ, ತಾನು ತನ್ನ ಇಂದ್ರಿಯ ಮನಸ್ಸು ಬುದ್ಧಿ ಚಿತ್ತ ಅಹಂಕಾರ ಐಶ್ವರ್ಯಗಳೆಲ್ಲವನ್ನೂ ತನ್ನನ್ನೂ ತಾನೆ ಇಲ್ಲವಾಗಿ ಅವನಿಗೆ ಸಮರ್ಪಿಸಿದರೇ ಅದು ಪೂರ್ಣಕಾಣಿಕೆ. ಅದು ಮಾತ್ರ ಅವನಿಗೆ ಪ್ರೀತಿಕರವಾದುದು; ಅರ್ಧಕಾಣಿಕೆಗೆ ಅವನು ಒಲಿಯುವುದಿಲ್ಲ. ಇವನಿಗಿಂತ ಜಾಣರು ಇನ್ನಾರು?

ಬಸವಣ್ಣನವರು ತಮ್ಮ ಅಭಿಪ್ರಾಯವನ್ನು ಮನಮುಟ್ಟುವಂತೆ ಕೇಳುವರ ಮನದಲ್ಲಿ ಅಚ್ಚೊತ್ತಿದಂತೆ ನೆಲೆಯಾಗಿ ನಿಲ್ಲಲೆಂದು ಈ ಅಲಂಕಾರವನ್ನು ಬಳಸಿಕೊಂಡಿರುವ ಬಗೆಯನ್ನು ಕಂಡು ನಾವು 'ಜಾಣ ನೋಡಯ್ಯ ಬಸವಣ್ಣ' ಎನ್ನಬೇಕಾಗುತ್ತದೆ.

ಇನ್ನೊಂದು ವಚನ:

ಉಣಲುಡಲು ಮಾರಿಯಲ್ಲದೆ ಕೊಲಲು ಕಾಯಲು ಮಾರಿಯೆ?
ತನ್ನ ಮಗನ ಜವನೊಯ್ದಲ್ಲಿ ಅದೆತ್ತ ಹೋದಳಾ ಮಾಂಕವ್ವೆ?
ಈವರೆ ಕಾವರೆ ನಮ್ಮ ಕೂಡಲ ಸಂಗಯ್ಯನಲ್ಲದೆ ಮತ್ತೊಂದು ದೈವವಿಲ್ಲ.

ಬ. ವ. ೫೬೦.

ಮಾರಿ ಊರೂರಿನಲ್ಲಿಯೂ ಇರುವವಳೆ. ಬೀದಿಬೀದಿಯಲ್ಲಿ ಬಿಕ್ಕೆಬೇಡುತ್ತ ತಿರುಗುವವಳಾಕೆ. ಕುರಿ ಕೋಳಿ ಕೋಣ ಮೇಕೆಗಳನ್ನು ಕೊಡದಿದ್ದರೆ ಬಗೆಬಗೆಯ ಉಪದ್ರವಗಳನ್ನು ಕೊಡುವಳಂತೆ. ಆದರೆ ಅವಳು ಕೊಲಲೂ ಶಕ್ತಳಲ್ಲ, ಕಾಯಲೂ ಆರಳು. ತನ್ನ ಮಗನನ್ನೆ ಜವರಾಯ ಕೊಂಡು ಹೋದನಲ್ಲ! ಆಗ ಎತ್ತ ಹೋಗಿದ್ದಳು ಆ ಮಾರಿಕಾಂಬೆ? ಕೊಡಬೇಕಾದರೆ ಕಾಯಬೇಕಾದರೆ ನಮ್ಮ ಕೂಡಲ ಸಂಗಯ್ಯನಲ್ಲದೆ ಮತ್ತೊಂದು ದೈವವಿಲ್ಲ.

ವಚನವೇನೋ ಸುಲಭವಾಗಿ ಅರ್ಥವಾಗುತ್ತದೆ. ಆದರೆ ಈ ಮಾರಿ ಯಾರು? ಬ್ರಹ್ಮಶಿವನ 'ಸಮಯ ಪರೀಕ್ಷೆ'ಯಲ್ಲಿಯೂ ಈ ಮಾರಿಯ ಪ್ರಸ್ತಾಪ ಬಂದಿದೆ.

ದೇವತೆ ಪೆಱರನದೆಂತುಂ
ಕಾವಳು ಗಡ ತನ್ನ ಪೆಮ್ಮಗಂ ಜೋಕುವರಂ
ಸಾವಾಗ ಕಾಯಲಾಱದ
ಕೀವಿಲು ಪೇಪ್ಪೆಱಗೆ ಮಾಡಲಾರ್ಪಳೆ ಸುಖಮಂ

IX, ೧೧೦.

—ಈ ಪದ್ಯ ಮೇಲೆ ಹೇಳಿದ ಬಸವೇಶ್ವರ ವಚನದ ಪಡಿರೂಪೊ ಎನ್ನುವಂತಿದೆ.[1]

ಮಾರಿಕವ್ವೆಯು ಜೋಕುಮಾರನೆಂಬ ಮಗನನ್ನು ಪಡೆದಳೆಂದೂ ಅವನು ಮಡಿವಾಳರ ಮಗಳನ್ನು ಮೋಹಿಸಿ ಕೆಡಿಸಿ ಅವರಿಂದ ಕೊಲ್ಲಲ್ಪಟ್ಟನೆಂದೂ ನಾರಸಿಂಹಕೃತ ಅನುಭವಶಿಖಾಮಣಿಯಲ್ಲಿ ಹೇಳಿದೆ. ಭಾದ್ರಪದ ಶುದ್ಧ ಅಷ್ಟಮಿಯಂದು ಹುಟ್ಟಿದ ಜೋಕುಮಾರ ಅದೇ ಮಾಸದ ಹುಣ್ಣಿಮೆಯ ದಿನ ತೀರಿಕೊಳ್ಳುವನು. ತನ್ನ ಮಗನನ್ನು ಬದುಕಿಸಿಕೊಳ್ಳುವುದು ಮಾರಿಕವ್ವೆಯಿಂದ ಸಾಧ್ಯವಾಗಲಿಲ್ಲ. ಆದುದರಿಂದಲೆ ನಡೆವೆಣನಂತೆ ಕಾಣುವ ಸಪ್ಪೆಮೋರೆಯವನನ್ನು 'ಆಹಾ! ಜೋಕುಮಾರ!' ಎಂದು ಹಾಸ್ಯಮಾಡುವುದು ರೂಢಿಯಲ್ಲಿದೆ.

---

[1] ಬಸವೇಶ್ವರ ವಚನಗಳನ್ನು ಬ್ರಹ್ಮಶಿವನು ನೋಡಿರುವನೆನ್ನುವುದಕ್ಕೆ ಇದಲ್ಲದೆ ಇನ್ನೂ ಹಲವಾರು ಉದಾಹರಣೆಗಳನ್ನು ಕೊಡಬಹುದು. ಆದುದರಿಂದ ಈ ಕವಿ ಕ್ರಿ.ಶ. ಸುಮಾರು ೧೨೦೦ ರಲ್ಲಿದ್ದನೆಂದು ನಮ್ಮ ಅಭಿಪ್ರಾಯ.

ಜೋಕುವರಸು ಅಲ್ಪಾಯುವೆಂಬುದಕ್ಕೆ ಶ್ರೀಧರಾಚಾರ್ಯನ 'ಜಾತಕತಿಲಕ'ದ ಪದ್ಯ :

ಭವನಾಂತರದೊಳ್ ಸುಧಾಸಂ
ಭವನಿರೆ ಕಾಣದಿರೆ ಸೌಮ್ಯರಿರೆ ಪಾಪಗಣಂ
ನವಪಂಚಮದೊಳ್ ಪುಟ್ಟಿದ
ಕುವರಂ ಜೋಕೋರನಂತೆ ಪಲದಿವಸಮಿರಂ

ಅಧಿ—೬, ಪ—೭.

ಬಸವೇಶ್ವರ ವಚನಗಳು ಅರ್ಥವಾಗಬೇಕಾದರೆ ಜೋಕುಮಾರನ ಕಥೆಯಂಥ ಜಾನಪದ ಕಥೆಗಳೂ ಗೊತ್ತಿರಬೇಕಾಗುತ್ತದೆ.

ಇದೊಂದು ವಚನವನ್ನು ನೋಡಿ :

ವಿಪ್ರರ ಕರೆದು "ನೃಪರುಗಳು ಇಪ್ಪರೆ ತಮ್ಮ ಶಿಶುವಿನೊಡನೆ"ಂದು ಬೆಸಗೊಂಡರೆ,
"ಇಪ್ಪರು, ಇಪ್ಪರು, ತಾವು ಬಿತ್ತಿದ ಫಲಂಗಳ
ತಾವು ಉಣ್ಣದವರುಂಟೆ?"
ಎಂದು ಕಣ್ಣು ಕಾಣದೆ ಹೇಳಿದರು, ಅಣ್ಣಗಳು, ಕರ್ಮದ ಬಟ್ಟೆಯನು!
ಅಂತೆಂದ ಮಾತ ಶಿಶು ಕೇಳಿ
ಕೆಟ್ಟೋಡಿ ಬಂದು ಲಿಂಗದ ಬಟ್ಟೆಯ ಹೊಗಲು
ಅಟ್ಟಿ ಬಂದು ಖಂಡೆಯವ ಕಳೆದುಕೊಂಡು ಮಂಡೆಯನೊಡೆಯಲು
ಮಂಡೆಯೊಡೆದು ಭೂಮಂಡಲವಜಿಯೆ ನಾಲ್ಕು ಪುರವಾಗಲು
ಘಟಸರ್ಪನ ತುಡುಕಿ ನಾಗನಾಥನಾಗಿ
ಇಪ್ಪತ್ತೇಳು ಬಸತಿಯನೊಡೆಯನೆ?
ಆಗಳಂತೆ, ಎನ್ನ ಮಾಡಿದ ಕರ್ಮ ನಿಮ್ಮ ಕಯ್ಯಲು ಕೆಡಿಸುವರು.
ಮುನ್ನೊಬ್ಬ ಕೆಡಿಸಿಹೆನೆಂದು ಒಂದು ತುತ್ತನಿಟ್ಟು
ಮರಳಿ ಕಯ್ಯಿಡ ಹೋದರೆ ತುತ್ತು ಹುಳುಗುಪ್ಪೆಯಾಗದೆ?
ಶಿವಧರ್ಮವ ಕೆಡಿಸಿದವನು ಅಧರ್ಮಕ್ಕೆ ಳಿವನು
ಕೂಡಲಸಂಗಮದೇವ ಸಾಕ್ಷಿಯಾಗಿ,
ಮಕರಭೋಜನವಾಗನೆ ವಿನಾಶಕ್ತಿರಾಯನು?

ಮಗಳು ಅತ್ಯಂತ ಲಾವಣ್ಯವತಿಯೆಂದು ಆಕೆಯನ್ನು ವರಿಸಲು ಹವಣಿಸಿದ ಪಾಪಿಯೊಬ್ಬನ ಕಥೆ ಈ ವಚನದಲ್ಲಿ ಹುದುಗಿದೆ. ಶ್ರೀಶೈಲ ಮಾಹಾತ್ಮ್ಯದಲ್ಲಿನ ಕಥೆಯೋ ಶಿವಕೋಟ್ಯಾಚಾರ್ಯನ ವಡ್ಡಾರಾಧನೆಯಲ್ಲಿನ ಕಾರ್ತಿಕೇಯರ ಕಥೆಯೋ ಈ ವಚನದ ಪೂರ್ವಾರ್ಧದ ಕಥೆಗೆ ಮೂಲವಾಗಿರಬಹುದು. ವಚನದ ಉತ್ತರಾರ್ಧವನ್ನು ಅರ್ಥಮಾಡಿಕೊಳ್ಳುವುದು ಕಷ್ಟವಾಗುತ್ತದೆ. ನಾಗನಾಥ ಇರುವುದೆಲ್ಲಿ? ಇಪ್ಪತ್ತೇಳು ಬಸದಿಗಳು ಎಲ್ಲಿಯವು? ಅವನ್ನು ಒಡೆದವರು ಯಾರು? ಮಕರಭೋಜನವಾದ ವಿನಾಶಕ್ತಿರಾಯನಿಗೆ ಸಂಬಂಧಿಸಿದ ಪೂರ್ವಕಥೆ ಏನು? ಈ ಪ್ರಶ್ನೆಗಳಿಗೆ ನಿಷ್ಕೃಷ್ಟ ಉತ್ತರವೀಯುವುದು ಕಷ್ಟವಾಗುತ್ತದೆ.[2]

ಹೀಗೆ ಹಲವು ವಚನಗಳು ಹಲವು ರೀತಿಯ ಸಮಸ್ಯೆಗಳನ್ನು ತಂದೊಡ್ಡುತ್ತವೆ. ಶಿವಶರಣರ ವಚನಗಳ ಅಧಿಕೃತಪಾಠಗಳು ಗೊತ್ತಾಗಬೇಕು. ಅವುಗಳ ಅಭ್ಯಾಸ ಸಾಕಷ್ಟು ಪ್ರಮಾಣದಲ್ಲಿ ಸೂಕ್ತ ಶಾಸ್ತ್ರೋಕ್ತರೀತಿಯಲ್ಲಿ ನಡೆಯಬೇಕು ಎಂದೆನಿಸಿದರೆ ಈ ಲೇಖನದ ಉದ್ದೇಶ ಸಾರ್ಥಕವಾದಂತೆ.

ಎಚ್. ದೇವೀರಪ್ಪ

[2] ಸಿಂಹ ಕಂದರವೆಂಬ ನಗರ. ಖಚರನೆಂಬ ರಾಜ. ಆತನು ತನ್ನ ಸುತೆ ಅಮೃತಮತಿಗೆ ಭ್ರಮಿಸಿ, ಕೂಡಬಹುದೆ ಎಂದು ವಿಪ್ರರ ಕೇಳೆ, ತಾ ಬಿತ್ತಿ ಬೆಳೆದ ಫಲವನುಣ್ಣಬಹುದು ಎನೆ, ಖಚರನು ಸುತೆಯ ತುಡುಕಿ ಹಿಡಿಯಲು ಓಡಿಬಂದು ಲಿಂಗದ ಗರ್ಭವ ಹೊಗಲು, ಬೆಂಬತ್ತಿ ಬಂದು ಖಡ್ಗದಿಂದ ಹೊಯ್ಯಲು ಅಸ್ತಿಲಾಪುರ, ಮಜ್ಜಲಾಪುರ, ಶಿಖೀಶಲಾಪುರ, ರೋಹಿತಾಪುರವೆಂಬ ನಾಲ್ಕು ಆದವು—ಎಂದು ಬಸವೇಶ್ವರ ವಚನದ ಕಥಾಸಾರದಲ್ಲಿ ಹೇಳಿದೆ. ಆಕರವಾವುದೋ ಗೊತ್ತಾಗುವುದಿಲ್ಲ.

# ವೈಯಾಕರಣ ಚೋದ್ಯ

## I

ಸಾರವಿಚಾರಬಂಧುರಮತಿಪ್ರಸರಂ ಪರಿಪಕ್ವಶಾಸ್ತ್ರ ಸಂ
ಸ್ಕಾರನುಪೇತಕೌತುಕರಸಂ ವಿದಿತಾಗಮಲೋಕವೃತ್ತನ್+ಉ
ತ್ಸಾರಿತಮತ್ಸರಂ ಸುಜನವತ್ಸಲನ್+ಎಲ್ಲಿಯುಮಿನಾತನೆಂದು ಕೈ
ವಾರದೆ ಬಣ್ಣಿಕುಂ ವಿಬುಧಮಂಡಳಿ ಪಂಡಿತ ನಾಗವರ್ಮನಂ||

**ನಾಗವರ್ಮ**ನನ್ನು ಕುರಿತ ಈ ಮಾತು ಕೇವಲ ಪ್ರಶಂಸೆಯಲ್ಲ; ಅಕ್ಷರಶಃ ಸತ್ಯವೆನ್ನಬಹುದು. ವಿಮರ್ಶೆಮಾಡಿ ನೋಡಿದರೆ ಪ್ರಾಚೀನರಲ್ಲಿ ಎರಡನೆಯ ನಾಗವರ್ಮನಂತೆ ಕನ್ನಡ ನುಡಿಯ ವಿಷಯದಲ್ಲಿ ಬಹಳ ಮೇಲುಮಟ್ಟದ ಒಲವನ್ನು ತಳೆದು ತಿರುಳನ್ನು ತಿಳಿದು ಅದರ ಎಲ್ಲ ಬಗೆಯ ಉನ್ನತಿಗಾಗಿ ಬಯಸಿ ಕೊರೆಯನ್ನು ನೀಗಿ ಅರೆಯನ್ನು ತುಂಬಲು ಯತ್ನಿಸಿದವರು ವಿರಳವೆನ್ನಬಹುದು. ವಿಶಾಲಹೃದಯದ ಮೃದುಸ್ವಭಾವದ ಕೊಡುಗೈಯ ಆ ರಸಿಕಶಿಖಾಮಣಿಯ ಅಚ್ಚಳಿಯದ ಉಚ್ಚೋತ್ಸಾಹದ ಫಲವಾಗಿ ಕನ್ನಡನುಡಿಯಲ್ಲಿ ಬಹಳ ಹಿಂದೆಯೇ ವ್ಯಾಕರಣ, ಅಲಂಕಾರಶಾಸ್ತ್ರ, ನಿಘಂಟು, ಛಂದಶ್ಶಾಸ್ತ್ರ, ಪುರಾಣಕಾವ್ಯವೂ ಒಂದು—ಇಷ್ಟೂ ಕನ್ನಡಿಗರ ಸಾಹಿತ್ಯ ಭಂಡಾರವನ್ನು ತುಂಬಿದುವು. ತಮ್ಮ ವಾಙ್ಮಯದ ವೈಭವಕ್ಕೆ ಹಿಗ್ಗುವುದರಲ್ಲಿ ತೃಪ್ತರಾಗದೆ ಕನ್ನಡವನ್ನು ಕಡೆಗಣಿಸಿ ಬಹುಶಃ ತಿರಸ್ಕಾರಭಾವದಿಂದ ನೋಡುತ್ತಿದ್ದಿರಬಹುದಾದ ಕೇವಲ ಸಂಸ್ಕೃತಜ್ಞರು ಕೆಲವರ ಹೆಮ್ಮೆಗೆ ಉತ್ತರವಾಗಿ **ಭಾಷಾಭೂಷಣ**ದ ರಚನೆಯಾಗಿರಬೇಕು. ಪರಿಚಯವೇ ಇಲ್ಲದೆ ವಸ್ತುಗಳನ್ನು ತೆಗಳತಕ್ಕವರು ಈಗಲೂ ಉಂಟು, ಆಗಲೂ ಉಂಟು. ಅಂಥವರಿಗೆ ಕನ್ನಡ ನುಡಿಯ ಸಹಜವೂ ಸ್ವತಂತ್ರವೂ ವಿಶಿಷ್ಟವೂ ಆದ ಇಂಪು ಸೊಂಪುಗಳನ್ನು ಮನಮುಟ್ಟಿಸಿ ಕಣ್ದೆರೆಯಿಸಲು ಮೊದಲ ಯತ್ನ **ಭಾಷಾಭೂಷಣ**ದ ರಚನೆ. ತನ್ನ ವ್ಯಾಕರಣಕ್ಕೆ ನಾಗವರ್ಮನು ಈ ಹೆಸರನ್ನು ಇಟ್ಟುದು ಅದಕ್ಕೆ ಸಾಕ್ಷಿ. ಆ ಹೆಸರು ಎಷ್ಟು ಅರ್ಥಪೂರ್ಣವೋ ಅಷ್ಟೇ ಧ್ವನಿಪೂರ್ಣವೂ ಆಗಿದೆ. ಅದು ಕಾಕತಾಳೀಯವಾಗಿ ತೋರಿದಂತೆ ಇಟ್ಟ ಹೆಸರಾಗಿರಲಾರದು. ಇತರರ ತಪ್ಪು ಅಭಿಪ್ರಾಯವನ್ನು ತೊಡೆದುಹಾಕಿ ವಸ್ತುಸ್ವರೂಪವನ್ನು ತಿಳುಹಿ ಅವರ ಅರಿವನ್ನು ಎಚ್ಚರಿಸಲು ನಿರ್ಮಿತವಾದ ಕೃತಿ 'ಭಾಷಾಭೂಷಣ.' ಅದರಿಂದಲೇ ಜಟಿಲ ರೀತಿಯ ಸೂತ್ರರಚನೆಯ ತೊಡಕುಹಾದಿಯನ್ನು ಬಿಟ್ಟು ಸಾಮಾನ್ಯರೂ ಸುಲಭವಾಗಿ ತಿಳಿವಂತೆ ಸರಳಸರಣಿಯಲ್ಲಿ ಸಂಸ್ಕೃತದಲ್ಲಿ ಆತನ ವ್ಯಾಕರಣ ರಚಿತವಾಯಿತು. ಇದರಿಂದ ಹಲವರು ವ್ಯಾಸಂಗಶೀಲರಾಗಿರಬೇಕು—ಎಚ್ಚತ್ತಿರಬೇಕು.[1] ಆ ತರುವಾಯವೇ—ಕೂಡಲೇ ಸೌಧಾಗ್ರದ ಭವ್ಯದೀಪವು ಸೌಧವನ್ನೂ ಬೆಳಗಿ ಹಾದಿಗೂ ಬೆಳಕು ನೀಡುವಂತೆ ಕನ್ನಡದ ಸ್ವರೂಪವನ್ನು ಪ್ರಕಾಶಪಡಿಸಿ ಸಂಸ್ಕೃತಜ್ಞರನ್ನೂ ಹದುಳಗೊಳಿಸಲು 'ಕಾವ್ಯಾವಲೋಕನ'ದ ರಚನೆಯಾಗಿರುವುದು ಸಂಭಾವ್ಯ. 'ಕಾವ್ಯಾವಲೋಕನ'ದಲ್ಲಿಯ ಉದಾಹರಣ ಪದ್ಯಮಾಲಿಕೆ ನಾಗವರ್ಮನ ಸೀಮಾತೀತವಾದ ರಸಿಕತೆಗೆ ಒರೆಗಲ್ಲು—ಕನ್ನಡದ ಕನ್ನಡತನವನ್ನೂ ಸೊಬಗನ್ನೂ ತೋರಿಸಿ ಭಿನ್ನಭಾವದ ಹೆರವರನ್ನು ತಿದ್ದುವ ರನ್ನದ ಕನ್ನಡಿ 'ಕಾವ್ಯಾವಲೋಕನ'. ಅಪಾರವಾದ ಮೇಧಾಶಕ್ತಿಯೊಡನೆ ಕೂಡಿದ ನಾಗವರ್ಮನ ಬಹುಶ್ರುತತೆ ವಿಜ್ಞಾನ ವಾಗ್ಮಿತೆ ಕವಿತಾಸಾಮರ್ಥ್ಯ ಸಹೃದಯತೆ ಮುಂತಾದ ಸುಗುಣರಾಶಿಗೆ ವಿನಯಗಾಂಭೀರ್ಯಗಳು ಕೂಡಿ ಹೊನ್ನಹೂವಿಗೆ

---

[1] ನಾಗವರ್ಮನ 'ಶಬ್ದಸ್ಮೃತಿ' 'ಭಾಷಾಭೂಷಣ'ಗಳ ವಿಕಾಸ 'ಶಬ್ದಮಣಿದರ್ಪಣ,' 'ಶಬ್ದಾನುಶಾಸನ'ಗಳು—'ಪಂಪಭಾರತ'ದ ೧೩ನೆಯ ಆಶ್ವಾಸ 'ಗದಾಯುದ್ಧ'ದ ರೂಪುಗೊಂಡಂತೆ.

ಹದಗಂಪು ಕೂಡಿದಂತಾಯಿತು. ಆತನ ವ್ಯಕ್ತಿತ್ವದ ಮುಂದೆ ಹಲವರು ತಲೆಬಾಗಿ ಅಭ್ಯಾಸಶೀಲರಾಗಿ ಕನ್ನಡವನ್ನು ಕಲಿತಿರಬೇಕು. ಆದರೆ ಕೃತಕೃತ್ಯರಾಗಲಿಕ್ಕೆ ಮುಂಚೆ ಇಂದಿನಂತೆ ಅಂದೂ 'ಏನು ಮಹಾ! ಕನ್ನಡದ ಕೃತಿರಚನೆ ಬಲು ಸುಲಭ'ವೆಂದೆಂಬ ಅಭಿನಿವೇಶದ ಸುಳಿಯ ಹೊರಗೆ ಬರಲರಿಯದೆಯೆ ಕೃತಿರಚನೆಗೆ ಧಾರ್ಷ್ಟ್ಯದಿಂದ ಕೈಯಿಟ್ಟು ಮುಗ್ಗರಿಸಿರಬೇಕು. ಅಂಥವರನ್ನು ನೋಡಿ ನಗುತ್ತಲೇ ಕೇಶಿರಾಜನು—

ಗಮಕಸಮಾಸದಿಂ ಱಟಕುಳಕ್ಷಳದಿಂ ಶ್ರುತಿಸಹ್ಯಸಂಧಿಯಿಂ
ಸಮುಚಿತಮಾಗಿ ಬರ್ಪ ಸತಿಸಪ್ತವಿಯಿಂ ಸಮಸಂಸ್ಕೃತೋಕ್ತಿಯಿಂ
ವಮುಹಪಭೇದದಿಂ ವಿರಹಿತಾನ್ವಯ ಸಂಸ್ಕೃತಲಿಂಗದಿಂ ಪದೋ
ತ್ತಮ ಶಿಥಿಲತ್ವದಿಂ ಯತಿವಿಲಂಘನದಿಂದರಿದಲ್ತೆ ಕನ್ನಡಂ

ಎಂದು ಮೂದಲಿಸಿ ನಗುನಗುತ್ತಾ ತನ್ನ ಕಿಂದರಿಯನ್ನು ಬಾಜಿಸಿದ್ದಾನು. ಅಂತು ನಾಗವರ್ಮನು ಗುಣನಿಧಿ, ಅಭಿಮಾನನಿಧಿ, ಉಜ್ಜ್ವಲ ಭಾಷಾಸೇವಕ. ಪಂಡಿತೋತ್ತಮನಾದರೂ ವಿನಯಕ್ಕೆ ಆದರ್ಶಮೂರ್ತಿ. ಕಾವ್ಯಾವಲೋಕನದ ಮುಗಿವಿನಲ್ಲಿ ಆತನ ಎಲ್ಲೆಯಿಲ್ಲದ ವಿನಯದ ಸೀಮೆಯನ್ನೂ ನಾವು ಕಾಣಬಹುದು.

ಸರಭಸತೆಯಿಂ ಮತ್ತೊಂದಜ್ಞಾನದಿಂದುಚಿತೋಕ್ತಿಯೊಳ್
ಪೊರೆಯದಿದು ತಾನಿನ್ನೊಂದೇನಾನುಮಾದೊಡಮಿಲ್ಲಿ ಮ
ತ್ಸರವಿರಹಿತರ್ ಪೌರೋಭಾಗ್ಯವ್ಯಪೇತಮನಸ್ಕರ್ + ಅ
ಕ್ಕರಿಗರಧಿಕಪ್ರಜ್ಞರ್ ಕೆಯ್ಕೊಂಡು ತಿರ್ದುಗೆ ದೋಷಮಂ

ಎಂಬುದು ಅವನ ಪ್ರಾರ್ಥನೆ. ಆತನ 'ಶಬ್ದಸ್ಮೃತಿ'ಯ ರಚನೆ

ಪ್ರತಿಬುದ್ಧರಂ ಕುಱಿತ್ತೀ
ಸ್ಥಿತಿಯಿಂದಂ ಕಿಱಿದು ಮಾರ್ಗ ಸೂಚನೆಗೆಯ್ದೆಂ
ಮತಿವಂತರಱಿದು ಪೇೞ್ವುದು
ವಿತರ್ಕದಿಂ ಮತ್ತಮುಕ್ತಶೇಷಮನಿದಱೊಳ್

(ಕಾವ್ಯಾವ.—೪೩೧)

ಎಂಬ ನಿಷ್ಕೃಷ್ಟನಿರ್ದೇಶದಿಂದ. 'ಭಾಷಾಭೂಷಣ'ವೂ ಸ್ವಲ್ಪ ವಿಸ್ತಾರವಾದರೂ ಇದೇ ಭಾವದ ತಳಪಾಯವನ್ನು ಹೊಂದಿದುದು. ಇಷ್ಟನ್ನು ಹೇಳಿದುದು ಮುಂದೆ ಪ್ರಸ್ತಾವಿಸಲಿರುವ ವ್ಯಾಕರಣಕ್ಕೆ ಸಂಬಂಧಿಸಿದ ಕೆಲವು ವಿಷಯಗಳನ್ನು ನಾಗವರ್ಮನು ಎತ್ತಿ ಹೇಳದಿದ್ದರೂ ಅದು ಪೂರ್ಣಪರಿಜ್ಞಾನದಿಂದ ಉದ್ದೇಶಪೂರ್ವಕವಾಗಿರಬೇಕೆಂದು ತಿಳಿಸಲು ಮತ್ತು ಆತನಲ್ಲಿ ನಮಗಿರುವ ಅಪರಿಮಿತವಾದ ಗೌರವ ಪೂಜ್ಯತಾಭಾವಗಳ ಪ್ರಸ್ತಾವಕ್ಕಾಗಿ— 'ಪೌರೋಭಾಗ್ಯವ್ಯಪೇತಮನಸ್ಕ'ತೆ ನಮ್ಮಲ್ಲಿ ಉಂಟೆಂಬುದಕ್ಕಾಗಿ.

ಕೇಶಿರಾಜನೂ (ಬಹುಶಃ ಕವಿಸಮಯಾನುಸಾರವಾಗಿ)

ಅವಧರಿಪುದು ವಿಬುಧರ್ ದೋ
ಷವಿದಱೊಳೇನಾನುಮುಳ್ಳೊಡಂ ಪ್ರಿಯದಿಂ ತಿ
ರ್ದುವುದು ಗುಣಯುಕ್ತಮುಂ ದೋ
ಷವಿದೂರಮುಮಾಗೆ ಮೆಚ್ಚಿ ಕೈಕೊಳ್ವುದಿದಂ

ಎಂದೂ, "ಶಬ್ದಪಾರಮಾರ್ಗಮಶಕ್ಯಂ" ಎಂದೂ ವಿನಯದ ನುಡಿಗಳನ್ನು ಮುಂದಿರಿಸಿದನು. ಆದರೆ ತನ್ನ ಕಾಲದವರೆಗಿನ ಸಕಲ ಕನ್ನಡಗ್ರಂಥಗಳ ಪೂರ್ಣಪರಿಚಯದಿಂದ ಕೂಡಿ ಸಮಗ್ರ

11976



ಕನ್ನಡ ಸಾಹಿತ್ಯಕ್ಕೆ ಚಕ್ರವರ್ತಿಯೆನಸಿದ ನಾಗವರ್ಮನ ಅಮೋಘವಾದ ವಾಗ್ಭಂಡಾರವನ್ನು ಆತನ ಹೆಸರನ್ನೇ ಎತ್ತದೆ ಬಳಸಿಕೊಂಡ ಕೇಶವನಲ್ಲಿ ಸತ್ತ್ವಕ್ಕಿಂತ ರಜಸ್ಸು ಹೆಚ್ಚು.

ನಡೆದುದೆ ಮಾರ್ಗಂ ಪದವಿಡ
ಲೊಡರಿಸಿದುದೆ ಭಂಗಿ ಕೇಶವಂಗಿದಿರುಂಟೇ
ತೊಡಗಿದ ಕಜ್ಜದೊಳಾನೆಯ
ನಡು ಬಡವೇಂ ತಾನೆ ಲೋಕದೊಳ್ ಲಾಕ್ಷಣಿಕಂ

"ಒರ್ವನಿಂದಭಿನವಬ್ರಹ್ಮಂ ಗಡೆಂಬಂತೆ ತೋಱುವನಾತ್ಮೀಯವಚೋವಿಚಿತ್ರತರ ವಿದ್ಯಾವೇಶವಂ ಕೇಶವಂ" . . . ಇವು ಹೆಚ್ಚಿನ ಕಿಚ್ಚಿನ ನುಡಿಗಳು.[2] ಶಬ್ದಾನುಶಾಸನಕಾರನಂತೂ ಅದ್ಭುತ ಪಾಂಡಿತ್ಯದ ಮಹಾಮೇರು.[3] ಇಷ್ಟಾಗಿ ಈ ಮೂವರ ವ್ಯಾಕರಣಗಳಲ್ಲಿ ಅವಶ್ಯವಾಗಿ ಕಾಣಬೇಕಾಗಿದ್ದ ಕೆಲವು ಶಬ್ದಗಳ ಪ್ರಸ್ತಾವವಿಲ್ಲದಿರುವುದೂ . . . ಚೋದ್ಯವಾಗಿದೆ. ದಿಗ್ದರ್ಶನಕ್ಕಾಗಿ ಒಂದೆರಡು ವಿಷಯಗಳನ್ನು ಇಲ್ಲಿ ಸೂಚಿಸುತ್ತೇನೆ. 'ಶಬ್ದಪಾರಮಾರ್ಗಮಶಕ್ಯಂ!'

## II

'ವಿಕ್ರಮಾರ್ಜುನ ವಿಜಯ'ವನ್ನು ಒಮ್ಮೆ ಓದುತ್ತಿದ್ದಂತೆ ಈ ಮುಂದಿನ ಪದ್ಯದಲ್ಲಿನ ಶಬ್ದವೊಂದು ನನ್ನ ಅವಧಾನವನ್ನು ಸೆಳೆಯಿತು.

ಮಾಸಿದ ರೂಪು ನೋಡೊಡರೆಮಾಸಿದ ಚಿತ್ರದ ಪೆಣ್ಣ ರೂಪುಮಂ
ಮಾಸಿಸೆ ನಾಡೆ ಮಾಸದಿಕೆಯಂ ಪಡೆದಪ್ಪುದು ಕಂಡ ಕಣ್ಗಳೊಳ್
ಸೂಸುವ ಮಾಡ್ಕೆಯಿಂ ಪೊಱಗೆ ಪೊಣ್ಮುವುದಂದಮಿದೆಂತೊ ಕಾಯ್ದು ಕೆ
ಯ್ವೀಸುವ ಕಾವನಂದಂ+ಇವಳೇಂ ಕುಲನಾರಿಯೊ ವಾರನಾರಿಯೋ.

(ಪಂಪಭಾ. ೮-೬೩)

[ವಿರಾಟನಗರದಲ್ಲಿ ಸೈರಂಧ್ರಿಯ ವೇಷದಲ್ಲಿದ್ದ ದ್ರೌಪದಿಯನ್ನು ಕಂಡಾಗ ಕೀಚಕನಲ್ಲಿ ಹುಟ್ಟಿದ ಭಾವನೆ ಇದು: ಈಕೆಯ ರೂಪು ಯಾವುದೋ ಕಾರಣದಿಂದ ಮಾಸಿದೆ. ಆದರೆ ವರ್ಣಚಿತ್ರವೊಂದರಲ್ಲಿ ಕುಶಲ ಕಲಾವಿದನಿಂದ ಚಿತ್ರಿತವಾದ ಲೋಕಸುಂದರಿಯ ರೂಪವು ಧೂಳಿಮುಸುಕಿ ಮಲಿನವಾಗಿ ಅರ್ಧ ಮಾಸಿದ್ದರೂ ನೋಡಿದವರ ಮನಸ್ಸನ್ನು ಸೆಳೆಯುವ ಕ್ರಮವನ್ನು ಇದು ಮೀರಿ [ನನ್ನನ್ನು] ಆಕರ್ಷಿಸುತ್ತಾ ತಾನು ಮಾಸಿಯೇ ಇಲ್ಲವೆಂಬಂತೆ ತೋರುತ್ತಿದೆ. ಅಲ್ಲದೆ ತನ್ನನ್ನು ಕಂಡ ಕಣ್ಗಳ ಮೂಲಕ ಅಂತರಂಗವನ್ನು ಹೊಕ್ಕು ಕರಗಿಸಿ ಅಲ್ಲಿನ ಆರ್ದ್ರತೆಯಲ್ಲಿ ಮುಳುಗಿ ಚೊಕ್ಕವಾಗಿ ಮತ್ತೆ ಆ ಕಣ್ಗಳ ಮೂಲಕವೇ ಮೂಡಿ ಹೊರಬರುವಂತಿದೆ. ಅಹಹ! ಇದೇನು? ಕಾಮನು ಕೋಪದಿಂದ ಕೈವೀಸಿ ಕೆಣಕುವ ರೀತಿ! ಈಕೆ ಕುಲನಾರಿಯೋ ಬೆಲೆವೆಣ್ಣೋ?]

ಅಲ್ಲಿಯೇ ಬೇರೊಂದು ಕಡೆಯಲ್ಲಿ—ಕುಂತಿದೇವಿ ಕರ್ಣನನ್ನು ತಮ್ಮ ಕಡೆಗೆ ಮಾಡಿಕೊಳ್ಳಲು ಬಂದು ಭೇಟಿಮಾಡಿದಾಗ ಕರ್ಣನು ಹೇಳುವ ಮಾತಿದು:

ಭಯಮುಂ ಲೋಭಮುಮೆಂಬ ತಮ್ಮುತೆರಡುಂ ಪಾಪಕ್ಕೆ ಪಕ್ಕಾಗಿ ಪಾ
ಟಿಯನೊಕ್ಕಾಳ್ದನ ಗೆಯ್ದ ಸತ್ಕೃತಮುಮಂ ಪಿಂತಿಕ್ಕಿ ಜೋಳಕ್ಕೆ ತ
ಪ್ಪಿಯುಮಿಂ ಬಾಳ್ವುದೆ? ಪೂಣ್ದು ನಿಲ್ಲದಿಕೆಯಿಂ ಬಾಳ್ವಂತು ವಿಖ್ಯಾತಕೀ
ರ್ತಿಯವೋಲೀಯೊಡಲಚ್ಚೆ ಪೇಡೆನಗಮೇಂ ಕಲ್ಪಾಂತರ ಸ್ಥಾಯಿಯೇ

(ಪಂಪಭಾ. ೯-೮೪)

---

[2] ಕನ್ನಡವ್ಯಾಕರಣರಂಗದಲ್ಲಿ "ಮುಷ್ಟಾಮುಷ್ಟಿ ಖಡ್ಗಾಖಡ್ಗಿಗಳ" ಹವ್ಯಾಸಕ್ಕೆ ಹೋಗಿ ಈ ಕೇಶಿಯೇಕೋ ಪೆಟ್ಟು ತಿಂದಿದ್ದಾನೆ.

[3] ಸೂತ್ರ ವೃತ್ತಿ ವ್ಯಾಖ್ಯಾನಕಾರರ ಭಿನ್ನವ್ಯಕ್ತಿತ್ವದಿಂದ 'ಶಬ್ದಾನುಶಾಸನ'ದಲ್ಲಿ ಶಿಷ್ಟ ಪ್ರಯೋಗವಾಗಿ ತೋರದ ಕೆಲವು ಕೃತಕ ಉದಾಹರಣೆಗಳು ಕಂಡುಬರುತ್ತವೆ. ಅವುಗಳ ಪ್ರಸ್ತಾವಕ್ಕೆ ಇದು ಎಡೆಯಲ್ಲ.

[ಅಮ್ಮ, ಭಯ ಲೋಭ ಎಂಬ ಎರಡು ಪಾಪಗಳಿಗೆ ಗುರಿಯಾಗಿ ಒಡೆಯನ ಉಪಕಾರವನ್ನು ಮರೆಯ ಬೇಕೆ? ಉಪ್ಪಿನ ಋಣಕ್ಕೂ ಅನ್ನದ ಹಂಗಿಗೂ ವಿರೋಧವಾಗಿ ನಡೆದು ಕ್ರಮವನ್ನು ಮೀರಿ ನಾನು ಬಾಳ ಬೇಕೆ? ನಿಷ್ಕಲ್ಮಷವಾದ ಸ್ನೇಹದಿಂದ ಕೌರವನಿಗೆ ಎಂದೂ ನೆರವಾಗಿ ನಿಲ್ಲುವೆನೆಂದು ಮಾಡಿದ ಪ್ರತಿಜ್ಞೆಯಲ್ಲಿ ನೆಲೆನಿಲ್ಲದೆ ನಿಲ್ಲದಿಕೆಯಿಂದ (ಅಸ್ಥಿರತೆಯಿಂದ–ಚಂಚಲನಾಗಿ) ನಾನು ಬಾಳಬೇಕೆಂದರೆ ಪ್ರಖ್ಯಾತವಾದ ಕೀರ್ತಿಗಿಂತಲೂ ಶರೀರವೇ ಕಲ್ಪಾಂತರ ಸ್ಥಾಯಿಯೆಂದು ನೀನು ಹೇಳಿದ ಹಾಗಾಯಿತು!]

ಈ ಮೇಲಣ ಪದ್ಯದಲ್ಲಿ 'ನಿಲ್ಲದಿಕೆ' ಎಂಬ ಮಾತೊಂದು; ಈ 'ಮಾಸದಿಕೆ,' 'ನಿಲ್ಲದಿಕೆ' ಎಂಬ ಶಬ್ದಗಳ ನಿಷ್ಪತ್ತಿಕ್ರಮ ಅಪೂರ್ವ:

ಮಾಸು>ಮಾಸದ+ಇಕೆ.
ನಿಲ್>ನಿಲ್ಲದ+ಇಕೆ.

ಪ್ರಾತಿಪದಿಕ, ಧಾತು—ಇವುಗಳ ಮೇಲೆ ಭಾವಾರ್ಥದಲ್ಲಿ 'ಇಕೆ' ಪ್ರತ್ಯಯವು ಸೇರುವುದು ರೂಢಿಯಾದರೆ ವಿಶೇಷಣ ಕೃದಂತಗಳ ಮೇಲೆ 'ಇಕೆ' ಪ್ರತ್ಯಯವನ್ನು ಜೋಡಿಸುವುದೂ ಪಂಪನದೊಂದು ಸೋಜಿಗದ ರೀತಿಯಾಯಿತು. ಕರ್ಣಪಾರ್ಯನೂ ಬಹುಶಃ ಇದನ್ನು ಅನುಸರಿಸಿ ನೇಮಿನಾಥಪುರಾಣದಲ್ಲಿ 'ತುಟಿಲಸಂದಿಕೆ'ಯೆಂಬ ಶಬ್ದವೊಂದನ್ನು ಬಳಸಿದ್ದಾನೆ:

ನೇಸಱಿನೊಳದಂದೆನ್ನಂ
ಸಾಸಿಸುವಂ ಸುರಪಸೂನು+ಅಲ್ಲದೊಡಟಿವಂ
ಭಾಸುರವಸುವೊಕ್ಕು+ಇಂತಿದೆ
ಲೇಸೆಂದುಟಿದಿರಲೆ? ತುಟಿಲಸಂದಿಕೆಯಟಿಗುಂ

(ನೇಮಿನಾಥ ಪು. ೧೨-೭೩)

[ಈ ಸಂಜೆಯೊಳಗೆ ಅರ್ಜುನನು ನನ್ನನ್ನು ಕೊಲ್ಲುವನಂತೆ; ಇಲ್ಲವಾದರೆ ಅಗ್ನಿಪ್ರವೇಶಮಾಡಿ ಸಾಯುವನಂತೆ. ಮರೆಯಲ್ಲಿ ಅಡಗಿದ್ದುಬಿಟ್ಟು ಆತನು ತಾನಾಗಿ ಸಾಯುವಂತೆ ಮಾಡುವುದೆ ಲೇಸೆಂದು ನಾನು ಉಳಿದು ಬಿಡಲೆ? ಹಾಗೆ ಉಳಿದುಬಿಟ್ಟರೆ ನನ್ನ ಪರಾಕ್ರಮಕ್ಕೆ ಕುಂದುಂಟಾಗುವುದು.]

ಇದು ಸೈಂಧವನಮಾತು. ಪ್ರಕರಣ ಪ್ರಸಿದ್ಧವಾದ ಸೈಂಧವವಧದ ಸನ್ನಿವೇಶ.

ಇಲ್ಲಿ ತುಟಿಲ+ಸಂದ+ಇಕೆ—ಎಂಬಲ್ಲಿ ಯಥಾಪ್ರಕಾರ ವಿಶೇಷಣ ಕೃದಂತದ ಮೇಲೆ 'ಇಕೆ' ಸೇರಿ ಶೂರನ ಭಾವ ಶೌರ್ಯ—ಎಂಬಂತಾಗಿದೆ. ಈ ಕ್ರಮದಲ್ಲಿ ನಿಂದ ಸ್ಥಿತಿ—ನಿಂದಿಕೆ, ಬೆಂದ ಸ್ಥಿತಿ–ಬೆಂದಿಕೆ, ಬೇಡದನ ಭಾವ–ಬೇಡದಿಕೆ, ಕುಡದನ ಭಾವ–ಕುಡದಿಕೆ; ತೋರದಿಕೆ, ಬಾರದಿಕೆ ಮುಂತಾಗಿ ಸಿದ್ಧಿಸಲು ಶಕ್ಯವಾಗುತ್ತಿತ್ತು. ಸರಿಯಾದ ಭಾವನಾಮರೂಪಗಳು ಕನ್ನಡದಲ್ಲಿ ದೊರೆಯದೆ ಸಂಸ್ಕೃತಕ್ಕೆ ಶರಣಾಗಿ ಶಬ್ದಗಳನ್ನು ಕೈಕೊಂಡು ಬಳಸುವ ಕಷ್ಟ—ದೈನ್ಯ ತಪ್ಪುತ್ತಿತ್ತು. [ಅಭಾವ=ಇಲ್ಲದಿಕೆ, ಲೋಭ=ಕುಡದಿಕೆ, ಎಂದೂ ಕಾಣದ ಅವಸ್ಥೆ=ಕಾಣದಿಕೆ. ವಿದ್ಯಾಶೂನ್ಯತೆ=ಕಲ್ಲದಿಕೆ . . . .] ಅಂತು ಪ್ರಯೋಗ ಪಟುವಾದ ಪಂಪನ ಈ ಪ್ರಯೋಗವನ್ನು (Experiment) ವೈಯಾಕರಣರು ಗಮನಿಸಿದರೋ, ಅನವಸ್ಥಾ ದೋಷವೊದಗುವುದೆಂದು ಅಸಮಾಧಾನಪಟ್ಟರೋ, ತಮಗೆ ಅಸಮ್ಮತವಾದರೂ ಪಂಪನ ಮೇಲಣ ಗೌರವದಿಂದ ಸೂಚಿಸದೆ ಬಿಟ್ಟರೋ—ಇದು ಚಿಂತ್ಯ.[4]

---

[4] ಅಪ್ರಸಕ್ತವಾದರೂ ಮತ್ತೊಂದು ಮಾತನ್ನು ಇಲ್ಲಿ ಹೇಳುತ್ತಿದ್ದೇನೆ. ಕರ್ಣಪಾರ್ಯನು ನೇಮಿನಾಥ ಪುರಾಣದಲ್ಲಿ (೧೨—೧೦೮) ಹೀನತಿಕೆ—ಎಂಬ ಮಾತೊಂದನ್ನು ಬಳಸಿದ್ದಾನೆ. ಸಂಸ್ಕೃತದ ಹೀನತಾ—ಎಂಬ ಭಾವನಾಮದ ಮೇಲೆ ತಲೆಶಿರೋಭಾರವಾಗಿ ಈ 'ಇಕೆ' ಪ್ರತ್ಯಯ ಸೇರಿರಬೇಕು. ಉನ್ನತ, ಪನ್ನತ, ಆಯತ—ಮುಂತಾದ ಶಬ್ದಗಳ ಮೇಲೆ ಆದ ಉನ್ನತಿಕೆ, ಪನ್ನತಿಕೆ, ಆಯತಿಕೆಗಳ ಸೋಂಕು ಕವಿಯನ್ನು ಮರುಳು ಮಾಡಿರಬೇಕು.

## III

'ಪಂಪಭಾರತ'ದಲ್ಲಿಯೂ 'ಶಾಂತಿಪುರಾಣ'ದಲ್ಲಿಯೂ ಓದುಗರ ನೋಟಕ್ಕೆ ತಪ್ಪಿಸಿಕೊಳ್ಳುವುದು ಕಷ್ಟವೆಂಬಂತೆ ಹಲವೆಡೆ 'ಒಂದೊರ್ವರ್' ಎಂಬ ಮಾತು ಬಳಕೆಯಾಗಿದೆ. ಒಬ್ಬೊಬ್ಬರು, ಒಬ್ಬರನ್ನೊಬ್ಬರು, ಒಬ್ಬರಿಗೊಬ್ಬರು, ಪರಸ್ಪರ, ಅನ್ಯೋನ್ಯ—ಎಂಬ ರೀತಿ ಹೊರತು ಇದಕ್ಕೆ ತೊಡಕಾದ ಅರ್ಥವೇನೂ ಇಲ್ಲ. ಆದರೆ ಈ ಮಾತಿನ ರೂಪಸಾಧನೆಯ ಬಗೆಗೆ ಸ್ವಲ್ಪ ವಿಚಾರ ವ್ಯಾಕರಣಗಳಲ್ಲಿ ಅವಶ್ಯವಾಗಿತ್ತು. ಇದರ ಹೆಸರನ್ನೇ ಎತ್ತದಿರುವುದು ದಿಟವಾಗಿ ಸೋಜಿಗ:

"ಆಗಳೆರಡುಂ ಪಡೆಯ ನಾಯಕರ್+ಒಂದೊರ್ವರೊಳ್ ತಾಗಿ ಕಿಡಿಗುಟ್ಟಿದಂತೆ ಕಾದುವಾಗಳ್"
(ಪಂಪಭಾ. ೧೧-೭ ವ);

"ಆಗಳೆರಡುಂ ಬಲದ ಸೇನಾ ನಾಯಕರ್+ಒಂದೊರ್ವರೊಳ್ ಕಾದುವಾಗಳ್"
(ಪಂಪಭಾ. ೧೧-೫೮ ವ);

"ಕರ್ಣಶಲ್ಯ ಶಾರದ್ವತ . . . ಮೊದಲಾದತಿರಥ ಸಮರಥ ಮಹಾರಥಾರ್ಧರಥರೊಂದೆವಿಂದೆಯಿಲ್ಲದೆ+ಒಂದೊರ್ವರೊಳ್ ಸಂಧಿಸಿ ಗೊಂದಣಿಸಿ ನಿಂದಾಗಳ್" (ಪಂಪಭಾ. ೧೧-೧೪೭ ವ);

[ಭೀಮಾಶ್ವತ್ಥಾಮರು ಪರಸ್ಪರ ಬಾಣಾಘಾತದಿಂದ ನೊಂದು ಇಬ್ಬರೂ ಮೂರ್ಛಿತರಾಗಿ ಒರಗಿದಾಗ]

"ಆಗಳ್ ಧರ್ಮರಾಜನುಮಿತ್ತ ರಾಜರಾಜನುಂ+ಒಂದೊರ್ವರಂ ಕೆಯ್ಕೊಂಡು ತಂತಮ್ಮ ರಥಂಗಳ ನೇಱಿಸಿ ಕೊಂಡುಯ್ದರ್" (ಪಂಪಭಾ. ೧೨-೭೭);

"ತುರಗಾಧಿರೂಢರಾರ್ದನಿ
ಬರುವೋಳಿಯೊಳೊಂದೆ ದೆಸೆಯೊಳುತ್ಖಾತಾಸಿ
ಚಸ್ಫುರಿತ ಭುಜಪರಿಘರೊಂ
ದೊರ್ವರ ಸೆಣಸಿಂ ಲಗ್ಗೆಗೆಯ್ದು ಪಾಯಿಸೆ ಜವದಿಂ" (ಶಾಂತಿಪು. ೪-೧೫)

"ಅವರೊಂದೊರ್ವರನಿಸುವತಿ
ಜವದಿಂದೋರೊರ್ವರ ರಥದೊಂದೊರ್ವರ ನ
ಚ್ಚುವ ಕೇತನ ಮೊಂದೊರ್ವರ
ಕವಚಂ ಪೂಣ್ದುವು ನಿಶಾತಶರಕೋಟಿಗಳಿಂ" (ಶಾಂತಿಪು. ೪-೨೩)

"ನಮ್ಮೊಳಾರಾದೊಡಂ+ಒಂದೊರ್ವರಂ ಪ್ರತಿಬೋಧಿಸುವಂತು ಪೂಣ್ದು ಪೋದೆವು"
(ಶಾಂತಿಪು. ೪-೯೭).

"ಇರ್ವರುಮಂದೊಂದೊರ್ವರಂ ಮೂದಲಿಸಿ ತದ್ವಿಯಚ್ಚರ ವಿಮಾನಕ್ಕಡ್ಡಮಾಗಿ ನಿಂದಾಗಳ್"
(ಶಾಂತಿಪು. ೬-೩೨ ವ)

"ನೀನಿಂದು ವಂದನಾಭಕ್ತಿಗೆ ವಂದುದಱಿಂದಮೊಂದೊರ್ವರಂ ಕಂಡತಿಪ್ರೀತಿಯಾದುದು"
(ಶಾಂತಿಪು. ೭-೧೦೩ ವ).

"ದಾನ್ಯನುಂ ಭದ್ರನುಮೆಂಬೊರಿರ್ವರ್ ಕುಡಿಯರೊರ್ಮೆ ನಡೆವ ಭಂಡಿಗಳ್ ಶ್ರೀನದೀತೀರದಿಟ್ಟೆಡೆಯೊಳೊಂದೊಂಡಂ ಸೋಂಕಿ ಮುಱಿಯೆ ಮುನಿದಿರ್ವರುಮೊಂದೊರ್ವರನಿಱಿದು ಸತ್ತು" [ಪಾಠಾಂತರ]
(ಶಾಂತಿಪು. ೯-೪೬ ವ).

"ಅವರೊಂದೊರ್ವರೊಳೆಕ್ಕೆಯಿಂ ಸೆಣಸಿ ಕೊಳ್ ಕೊಳ್ಳೆಂದು . . . . . ಬೆಸದೊಳ್ ತಳ್ಪೊಯ್ದರ್"
(ಶಾಂತಿಪು. ೯-೧೬೯).

ಅಂತೆಯೇ 'ಒರೊರ್ವರ್' 'ಒರ್ವರೊರ್ವರ್'—ಎಂಬ ಶಬ್ದಗಳೂ ಅಂತಹವೇ ಸ್ಥಳಗಳಲ್ಲಿ ಈ ಇಬ್ಬರಿಂದಲೂ ಪ್ರಯುಕ್ತವಾಗಿವೆ:

"ಅಂತಿರ್ವರುಮೊರೊರ್ವರೊಳ್ ಬೀರಮುಮಂ ಬಿಂಕಮುಮಂ ಮೆಱೆದು"
(ಪಂಪಭಾ. ೧೧-೧೪೦ ವ).

"... ಅಂಕಕಾಱರ್ಕೆಕ್ಕೆಯಿಂ ಸೂಳ್ಪೞಿಟಿವಂತೊರ್ವರೊರ್ವರೊಳ್ ಕಾದೆ"
(ಪಂಪಭಾ. ೧೨-೭೬ ವ).

"ತೆಗೆನೆಱೆದು ಚಿತ್ರಮೂಲಾ
ದಿಗಳುಮನೋರೊಂದೆ ಸರಲೊಳೋರೊರ್ವರನಾ
ವಗಮೆಚ್ಚಂತಕಮುಖಮಂ
ಪುಗಿಸಿದನ್+ಆರಾಂಪೊರುಱಿದೆ ಹಲಿಯಂ ಕಲಿಯಂ"
(ಶಾಂತಿಪು. ೫-೫೬).

"... ಎರಡುಂ ಕೆಲಸದೊಳಂ ವಾಹನಾಭಿಯೋಗ್ಯ ಕಿಲ್ಬಿಷಿಕಾಪ್ಸರೋರಗ ಗಂಧರ್ವರೋರೊರ್ವರೊಳ್ ಸಂದಣಿಸೆ ..." (ಶಾಂತಿಪು. ೭-೬ ವ);

"ಅಂತಾನಾಲ್ವರುಮಂದೋರೊರ್ವರನಗಲ್ದಿರಲಾಱದೆ" (ಶಾಂತಿಪು. ೭-೬೯);

"ಅಂತು ಮಯ್ಯುದ್ದಿರ್ವರುಮೋರೊರ್ವರೊಳ್ ತೆಕ್ಕೆತೆಕ್ಕೆಯಿಂ ... ಪರಿಗ್ರಹಂಗಳಂ ತೊಱೆದು"
(ಶಾಂತಿಪು. ೭-೭೦ ವ)

ಇತ್ಯಾದಿ. ಮೇಲೆ ಹೇಳಿದ '**ಒಂದೊರ್ವರ್**' ಪ್ರಯೋಗ ಅಸಾಧಾರಣ, ವಿಲಕ್ಷಣ ಮತ್ತು ಗಮನಾರ್ಹ.

ಒರ್ವರ್+ಒರ್ವರ್>ಒರೊರ್ವರ್—ಎಂದು ದ್ವಿರುಕ್ತಿಯಲ್ಲಿ ಆಗಬೇಕಾದ ರೂಪ ಹೀಗಾಗಲು ಸಾಧ್ಯವೆಂತು? ಇದರ ಸೂಚನೆ ಅಭಿಯುಕ್ತಪ್ರಯೋಗವಾದುದರಿಂದ ಅವಶ್ಯವಾಗಿತ್ತು.

## IV

**ಬಿಸಿದು** ಎಂಬ ಗುಣವಾಚಕ ಹಳಗನ್ನಡದಲ್ಲಿ ಸಾಧಾರಣವಾಗಿ ಬಳಕೆಯಲ್ಲಿದ್ದ ಮಾತು. ಬಿಸುಗದಿರ, ಬಿಸುನೀರ್, ಬಿಸುನೆತ್ತರ್, ಬಿಸುಪು ಮುಂತಾದ ಹಲವು ಶಬ್ದಗಳು ಇದರಿಂದಲೇ ಸಾಧಿತ. ಮೂಲರೂಪದಲ್ಲ ಈ ಶಬ್ದ ಹಲವೆಡೆ ದೊರೆಯುತ್ತಿದ್ದರೂ ನಾಗವರ್ಮಾದಿಗಳು 'ಬಿಚ್ಚಸ' ಶಬ್ದಕ್ಕೆ 'ಬಿಸು'ವನ್ನು ಆದೇಶವಾಗಿ ಹೇಳಲು ಯತ್ನಿಸಿದುದು ದಿಟವಾಗಿ ಚೋದ್ಯ:

"ಉಸಿರದಿರೆ ಮನದೊಳಿರ್ದೆಯಂ
ಪಸರಿಸುಗುಂ ಮಱುಕಮದಱಿನೆನಗಿಂತುಟೆ ಎಂ
ದುಸಿರ್+ಉಸಿರ್ದೊಡೆ ಬಗೆ ತೀರ್ಗುಂ
ಬಿಸಿದುಂ ಬೆಟ್ಟಿತ್ತುಮುಸಿರದೇಂ ತೀರ್ದಪುದೇ"
(ಪಂಪಭಾ. ೪-೬೦)

"ಕೆಂದಳಿರ್ವಾಸು ಸೇಕದ ತೊವಲ್ಗೆಣೆಯಾಯ್ತು ... ಸೂಸುವ ಶೀತಳವಾರಿ ಮೆಯ್ಯನೆಯ್ತಂದಿರದತ್ತ ಬತ್ತಿದುವು ತಚ್ಛಶಿಕಾಂತಶಿಲಾತಳಂ ಸಿಡಿಲ್ದು+ಅಂದೊಡದತ್ತು+ಇದೇಂ ಬಿಸಿದೊ ಪೇಟದ ಬೆಂಕೆ ಮೃಗಾಂಕವಕ್ತ್ರೆಯಾ" (ಪಂಪಭಾ. ೫-೭).

ಇದಕ್ಕೆ ಹಿಂದೆಯೇ 'ಕವಿರಾಜಮಾರ್ಗ'ದಲ್ಲಿ ಇದರ ಬಹುವಚನರೂಪದಲ್ಲಿ ಪ್ರಯೋಗ ಸಂದಿದೆ:

"ಕುಸುಮಂಗಳೆಂಬ ಮಾತದು
ಪುಸಿ ದಹನಮಯಂಗಳಂಬುಗಳ್ ಮನಸಿಜನಾ
ಜಸಮುಟಿಯೆ ಸುಡುವುವೆರ್ದೆಯಂ
ಬಿಸಿಯುವಿವೆಂದಿಂತೆ ಪೇಡೆ ಧರ್ಮಾಪೋಹಂ"

(ಕವಿರಾ. ೩-೧೮೪)

'ವಡ್ಡಾರಾಧನೆ'ಯಲ್ಲಿ, "ಉಣ್ಣಂ ವಾದಂ—ಬಿಸಿದಪ್ಪ ಗಾಳಿಯುಮಂ, ಉಣ್ಣಂ—ಬಿಸಿದಪ್ಪುದಂ, ಸಿಳಾತಳಂ—ಯೋಗಪೀಠದ ಸಿಲೆಯ ಮೇಗುಮಂ, ಆದವಂಚ—ಬಿಸಿಲುಮಂ ಅತಿ ಉಣ್ಣಂ—ಆದಂ ಬಿಸಿದಪ್ಪುದಂ, ಸಹಿಊಣ—ಲೇಸಾಗಿ ಸೈರಿಸಿ . . ." ಎಂದು ಮುಂತಾಗಿ ಪ್ರಯೋಗವಿದೆ. (ವಡ್ಡರಾ. ಹೊಸ ಮುದ್ರಣ, ಪು ೧೧೦)

ವಾದಿವಿದ್ಯಾನಂದನ 'ಕಾವ್ಯಸಾರ'ದಲ್ಲಿ ಶೂದ್ರಕನದೆಂದು ಸೂಚಿತವಾದ ಒಂದು ಪದ್ಯದಲ್ಲಿ ಈ ಮಾತು ಕಾಣಿಸಿಕೊಳ್ಳುತ್ತದೆ:

"ಮದನಂ ಬೆಳ್ಮುಗಳಂಬಿನಿಂದಿಸೆ ಜಗಿಲ್ತಿರ್ದಂಬುಗಳ್ ಚಿತ್ತದೊಳ್
ಮೊದೆಯಂ ಬೈತವೊಲಾಗೆ ಮನ್ಮಥಶಿಖಿಜ್ವಾಲಾಳಿ ತಳ್ತೀಡೆ ಬೇ
ಯದೆ ಕಾಯ್ದೋಡಿನ ಜೋಳದಂತಲರ್ದೊಡಾ ಕಂಪುಂ ಮನಸ್ತಾಪಮುಂ
ಪುದಿದೆತ್ತಂ ಬರೆ ಸುಯ್ ಪೊದಬ್ದು ಬಿಸಿದುಂ ಕಮ್ಮಿತ್ತುಮಾಯ್ತೀಪಳಾ"

(ಕಾವ್ಯಸಾರ, ೫೮೮)

ಈ ಕೆಳಗಿನದು ಶ್ರವಣಬೆಳಗೊಳದ ೧೩೩ ನೆಯ ಶಾಸನದ ಒಂದು ಪ್ರಯೋಗ:

"ನುಡಿ ಸುರಾಚಳದಿಂದಚಳಂ ಪರಾಕ್ರಮಂ ಖರಕರತೇಜದಿಂ ಬಿಸಿದು . . . ಬಣ್ಣಿಸಲ್ ನೆಱೆವರಾರಳವಂ ಚಲದಂಕಕಾಱನಾ" (ಎಕ II. ೧೩೩-೨೮ ; ಕ್ರಿ. ಸ. 982).

'ಧರ್ಮಾಮೃತ'ದಲ್ಲಿನ ಪ್ರಯೋಗವೊಂದಿದು:

"ಪೆಱಗೀರ್ ಬಯಕೆಗಳಂ ತಾ
ನಱಿಪಿದೊಡಂ ತೀರದೆಂದು ಕಾಮಿನಿ ಮನದೊಳ್
ಮಱುಗಿ ಬಿಸಿದಪ್ಪ ತುಪ್ಪಮ
ನಱಿಯದೆ ಶಿಶು ನುಂಗಿದಂತೆ ಚಿಂತಿಸಿ ಮನದೊಳ್" (೮-೧೦)

'ಸಮಯಪರೀಕ್ಷೆ'ಯಲ್ಲಿ,

"ಕರಂ ಬಿಸಿದಾಗೆ ಕಾಸಿ ಕಳ್ಳನ ಕೆಡೆಯಿಕ್ಕಿ ಬಾಯೊಳೆರೆದರ್ಚಿಸಿ"[5] (೧೧-೮೨)

ಜಗದ್ದಳ ಸೋಮನಾಥನ 'ಕಲ್ಯಾಣಕಾರಕ'ದಲ್ಲಿ—"ಉಪ್ಪಂ ಪುಳಿಯಂ ಕಡು ಬಿಸಿದಪ್ಪುದುಮಂ ಬಯಸುತ್ತಿಪ್ಪ . . ."—ಪ್ರಯೋಗವಿದೆ. ಚಾವುಂಡರಾಯನ 'ಲೋಕೋಪಕಾರ'ದ ಒಂಬತ್ತನೆಯ ಆಶ್ವಾಸದಲ್ಲಿ

"ಕಿವಿಗಳೆಟಿಲ್ದು ತೂಱುವೊಡೆ ಮೆಯ್ ಬಿಸಿದಪ್ಪೊಡೆ[5] ದಿಟ್ಟಿ ನೆತ್ತಿಗೇ
ಱುವೊಡದಱಿಂದೆ ಕಣ್ ಗುಟಿದು ತೋಱಿದೊಡೆಚ್ಚುಗೆ ಪಟ್ಟಸೂತ್ರಭ
ಸ್ಮವನ್ . . ."

---

[5] ಹೊಸದಾಗಿ ಮುದ್ರಿತವಾಗಿರುವ ಪ್ರತಿಯಲ್ಲಿ ಈ ಪದ್ಯ ಕಂಡುಬರುತ್ತಿಲ್ಲ. ಇದು ಮೈಸೂರು ಪ್ರಾಚ್ಯ ಗ್ರಂಥಕೋಶಾಗಾರದ ಪ್ರತಿಯೊಂದರ ಪಾಠ.

ಎಂಬುದೊಂದು ನುಡಿ. ಅಂತು ಪ್ರಮಾಣಪುರುಷರ ಗ್ರಂಥಗಳಲ್ಲಿ ಈ ರೂಪಗಳೂ 'ಬಿಸುಗದಿರ್, ಬಿಸುನೀರ್, ಬಿಸಿಯುಸಿರ್, ಬಿಸುಗಣ್ಣೀರ್, ಬಿಸುಪು' ಮುಂತಾದ ರೂಪಗಳೂ ಈಚೆಗೆ ಬಳಕೆಯಲ್ಲಿ ಕಂಡುಬರುತ್ತಿದ್ದರೂ ನಾಗವರ್ಮ, ಕೇಶಿರಾಜ, ಭಟ್ಟಾಕಳಂಕರಿಗೆ ಈ 'ಬಿಸಿದಿ'ಗಿಂತ 'ಬೆಚ್ಚನೆ' ಪ್ರಿಯವಾದುದು ಆಶ್ಚರ್ಯ![6]

V

ಪಂಪಮಹಾಕವಿಯಿಂದ ಸ್ವಲ್ಪ ಈಚಿನವರೆಗೂ ಸಪ್ತಮೀ ವಿಭಕ್ತಿಯಲ್ಲಿ 'ಅಲ್' ಪ್ರತ್ಯಯವು ಅಪರೂಪವಾಗಿಯಾದರೂ ಬಳಕೆಯಲ್ಲಿದ್ದುದು ನಾಗವರ್ಮನೇ ಮುಂತಾದ ವೈಯಾಕರಣರಿಗೆ ಅಪರಿಚಿತವಾಗಿದ್ದಿರಲಾರದು. 'ಪಂಪಭಾರತ'ವೊಂದರಲ್ಲೇ ಈ ಪ್ರತ್ಯಯ ಹಲವು ಕಡೆ ಪ್ರಯೋಗವಾಗಿದೆ:

"ಜಾಣ್ಕೆಯಿಂದಾಗವೇಡ ಮನದಲ್ ನಿಮಗಯ್ಯ ವಿಧಾತೃಯೋಗದಿಂ" (೨-೯೧)

"ನಿಮ್ಮಯ್ಯಂ ಧೃತರಾಷ್ಟ್ರನ ಬೆಸದಲ್ ಮುನ್ನಮೆ ಮಾಡಮಂ ಸಮೆಸಿಟ್ಟಿನಲ್ಲಿಗೆ ಬಿಜಯಂಗೆಯ್ಯಿಮೆನೆ" (೩-೨ ವ).

'ತನ್ನಲೆ ತಾನಿಂತು ಕನ್ನೆ ತಳವಳಗಾದಳ್' (೪-೫೫)
'ಅಂಬುಗಳೊಂದೊಂದಱಲೊಂದು ಲಕ್ಕ ಒಲಮುಂದಪ್ಪ್ಕಡೆ'
[ಪಾಠಾಂತರ—ಒಂದೊಂದಱಿಂ] (೮-೧೦೦)

"ಆನೆಮ್ಮನಯ್ಯನಲ್ ಕೇಳ್ದಱಿವೆನಿದನ್" (೧೧-೮೭) (ಪಾಠಾಂತರ: ಕ. ಅಯ್ಯನೊಳ್).
"ಇಂದಿಂಗೊಂಬತ್ತು ದಿನಂ ದಲೆಮ್ಮ ಬೆನ್ನಲೆ ನಿಂದಿರ್" (೧೧-೧೯).

ಇದಕ್ಕೆ ಹಿಂದೆ 'ವಡ್ಡಾರಾಧನೆ'ಯಲ್ಲಿಯೂ—"ಲವಟುಗಳ ಕೆಯಲ್ ಪಗಲುಣಲು ಮಡಲುಂ ಪೆಱಲಾಗ" (ಪು. ೯೨-೩ ಹೊಸ ಮುದ್ರಣ); 'ನಿಚ್ಚಲೀ ಸವಣನಲ್ಲಿಗೆ ಪರಿವಳ್' (ಪು. ೧೧೭-೧೪)—ಎಂಬ ಪ್ರಯೋಗಗಳುಂಟು.

'ಸುಕುಮಾರ ಚರಿತ್ರೆ'ಯಲ್ಲಿ ಕೂಡ,

"ಪುಷ್ಪವಾಸನೆಯ ಮೆಲ್ಪಿನ ತಣ್ಪಿನ ಕಂಪಿನಲ್ ಪೊಂಪುಳಿವೋಗುತ್ತಿರ್ದ ತಂಡುಲಂಗಳಂ ಕಳಿದುಕೊಂಡು" (೧೧-೩೫ ವ.)

'ಕಟ್ಟಕಡೆಯಲ್ ಸ್ವಯಂಭೂರಮಣದ್ವೀಪವಿರ್ಕುಂ' (೧೧-೫೪ ವ.);

'ಮಣಿಮಾಡದ ನೆಲೆಯೊಳಿರ್ದಾತ್ಮೀಯಾತ್ಮಜಂಗೆ ಕೆಲದೊಳಿರ್ದ ಪರಿಚಾರಿಯರ ಕಯ್ಯಲ್ ಅಟ್ಟಿದಾಗಳ್ ಆಕೆಯುಮದಂ ಸುಕುಮಾರಸ್ವಾಮಿಯ ಕಯ್ಯಲ್ ಕುಡುವುದುಂ' (೧೦-೧೧೮ ವ).

ಶಾಸನ ಸಾಹಿತ್ಯದಲ್ಲಿಯೂ ಕೆಲವೆಡೆ ಇದರ ಬಳಕೆ ಸ್ಪಷ್ಟವಿದೆ:

'ಗುಂಡಿಲದಿಂ ಪಡುವ ಸೀಮೆಯಲ್' (ಎಕ. III. ಗುಂಡ್ಲುಪೇಟೆ, ೯೩-೩೨, ಕ್ರಿ.ಶ. 1049).

'ಗೊಂದವಿಂಡಿಯ ಪೊಱವೀಡಿನಲ್ ಸುಖದಿಂ ರಾಜ್ಯಂಗೆಯ್ಯುತ್ತಿರೆ' (ಎಪಿಗ್ರಾ. ಇಂಡಿಕಾ, ಪುಟ ೨೧೫—೬, ಕ್ರಿ. ಶ. 1072).

'ಕೊಂಕಣಮಂ ಸಾಧಿಸಿ ವಿಜಯಾದಿತ್ಯನಲ್ ಕಪ್ಪಂಗೊಂಡ ಗಣ್ಡಮಾರ್ತಣ್ಡನುಂ' (ಎಕ. VII, ಶಿಕಾರಿಪುರ, ೧೧೯-೬೨ ; ಕ್ರಿ. ಶ. 1181).

ಇಷ್ಟಾದರೂ ಈ 'ಅಲ್' ಪ್ರತ್ಯಯವನ್ನು ಸಪ್ತಮ್ಯರ್ಥದಲ್ಲಿ ದಿಗ್ವಾಚಿಗಳಿಗೆ ಮಾತ್ರ ಹತ್ತುವುದಾಗಿ ಹೇಳಿದ್ದಾರೆ. ನಾಗವರ್ಮನು ಭಾಷಾಭೂಷಣದಲ್ಲಿ 'ಪಾಲತಃ ಪ್ರಥಮಾ

[6] ಶಬ್ದಮಣಿದರ್ಪಣದಲ್ಲಿ ಕೊಟ್ಟ ಗುಣವಾಚಕಗಳ ಪಟ್ಟಿಯಲ್ಲಿ ಕೆಲವು ಪ್ರತಿಗಳಲ್ಲಿ 'ಬಿಸಿದು' ಸೇರಿದೆ. ಆತನೇ ಅದನ್ನು ಸೇರಿಸಿದ್ದರೆ ಬೆಚ್ಚನೆಗೆ ಆದೇಶವನ್ನೇಕೆ ಕರೆದನೋ ಕಾಣೆವು.

ದ್ವಿತೀಯಯೋಃ' 'ಸಪ್ತಮ್ಯಾಂಚ' ಎಂದು ೫೭, ೫೮ನೆಯ ಸೂತ್ರಗಳಲ್ಲಿ ಅಕಾರಾಂತ ದಿಗ್ವಾಚಿಗಳಿಗೆ ಮಾತ್ರ ಪ್ರಥಮಾ ದ್ವಿತೀಯಾ ವಿಭಕ್ತಿಗಳಲ್ಲಿಯೂ ಸಪ್ತಮಿ ವಿಭಕ್ತಿಯಲ್ಲಿಯೂ 'ಅಲ್' ಪ್ರತ್ಯಯವು ಹತ್ತುತ್ತದೆಂದು ಹೇಳಿ 'ಮೂಡಲ್, ತೆಂಕಲ್, ಪಡುವಲ್, ಬಡಗಲ್' ಎಂದೂ 'ಮೂಡಲಿರ್ದಂ, ತೆಂಕಲಿರ್ದಂ, ಇತ್ತಲಿರ್ದಂ, ಅತ್ತಲಿರ್ದಂ' ಎಂದೂ ಉದಹರಿಸಿದ್ದಾನೆ.

ಕೇಶಿರಾಜನೂ

ಅಲ್ಲಿಯೊಳೆಂಬಿವು ಮಿಕ್ಕೆಡೆ
ಗೆಲ್ಲಂ ದಿಗ್ವಾಚಿಯಪ್ಪದಂತಕ್ಕಲ್ ಮ
ತ್ತಲ್ಲಿಯುದಂತಕ್ಕೆತ್ವಂ
ಬಲ್ಲರ ಮತದಿಂ ವಿಕಲ್ಪವಿಧಿ ಸಪ್ತಮಿಯೊಳ್ (ಸೂ. ೧೧೯).

ಎಂದು ಹೇಳಿ,

"ಮೂಡಲಿರ್ದಪದದೊಳ್ ತಾರಾಮನೋವಲ್ಲಭಂ"

"ಅತ್ತಲ್ ದೇವೇಂದ್ರಂ ಮ
ತ್ತಿತ್ತಲ್ ಭುಜಗೇಂದ್ರನುತ್ತಲಾಶಾಧಿಪರೊಳ್
ಮುತ್ತಿರೆ ಭೇರಿಧ್ವನಿ ಪ
ರ್ವಿತ್ತೆತ್ತಲ್ ಮಸಗಿ ಘೋಷಶಿಕ್ಷಾದಕ್ಷಂ"

ಎಂದು ದಿಗ್ವಾಚಿಗಳ ಉದಾಹರಣೆಯನ್ನು ಮಾತ್ರ ಕೊಟ್ಟಿದ್ದಾನೆ.

ಭಟ್ಟಾಕಳಂಕನೂ "ಒಳಧಿಕರಣೇ" (ಸೂ ೨೨೨) ಎಂದು ಸಪ್ತಮಿಗೆ 'ಒಳ್' ಪ್ರತ್ಯಯವನ್ನು ನಿರ್ದೇಶಿಸಿ 'ಒಳಃ ಅಲ್ಲಿಃ' (ಸೂ ೨೭೭) ಎಂದು 'ಒಳ್'ಗೆ 'ಅಲ್ಲಿ' ಯನ್ನು ಮಾತ್ರ ಆದೇಶವಾಗಿ ನುಡಿದನು. ಮತ್ತು 'ಒಳ್ಕ್ರಶ್ಚಾತೋ ದಿಗರ್ಥಾತ್ ಅಲ್ಚ' (ಸೂ ೨೮೦) ಎಂದು ದಿಗ್ವಾಚಿಗಳಗೆ ಮಾತ್ರ 'ಅಲ್' ಆದೇಶವನ್ನು ತಿಳಿಸಿ 'ಮೂಡಲ್, ಬಡಗಲ್, ಅತ್ತಲ್—' ಮುಂತಾದ ಉದಾಹರಣೆಗಳನ್ನು ಕೊಟ್ಟನು. ಅಂತು ಈ 'ಅಲ್'ನ ಉಪೇಕ್ಷೆ ಏಕಾಯಿತೋ ಹೇಳಲಾಗದಿದೆ ಮೂವರಲ್ಲಿಯೂ.

## VI

ಸೋಜಿಗವಿನ್ನೊಂದು: ಆಮಂತ್ರಣ ಶಬ್ದಗಳು ಹಲವು ಕಡೆ ಹಲವು ಬಗೆಯಾಗಿರುವುದು ಸಾಮಾನ್ಯ ವಿಷಯ. 'ಲಾ, ಲೇ, ಲೋ, ಎಲಾ, ಎಲೆ, ಎಲೇ, ಎಲೌ, ಅಮ್ಮಿ, ಅಮ್ಮಾ, ಅಯ್ಯ, ರೀ, ಸ್ವಾಮಿ, ಏ, ಓ' ಮುಂತಾದುವು 'ಬಾರೆಲಾ, ಹೋಗಲಾ, ಬಾರಯ್ಯ, ಹೋಗಯ್ಯ . . . ಬನ್ನಿರಿ, ಸಿಲ್ಲಿರಿ, ಏನ್ರೀ, ಹೇಳ್ರೀ, ಅಲ್ರೀ . . . ಮುಂತಾಗಿ ಆರಂಭದಲ್ಲಿ, ಕ್ರಿಯಾಪದಗಳ ಕಡೆಗೆ, ಅವ್ಯಯಗಳ ಸಂಗಡ ಕೂಡ ಈ ಸುಡಿ ತುಣುಕುಗಳು ಅವಧಾನವನ್ನು ಸೆಳೆಯಲು ಸೇರುತ್ತವೆ. ಹಳಗನ್ನಡದಲ್ಲಿ ವಿಶೇಷವಾಗಿ 'ಎ, ಏ, ಇರ, ಇರಾ' ಪ್ರತ್ಯಯಗಳು ನಾಮವಾಚಕಗಳ ಜತೆಗೂ 'ಏನಿ, ಏನಿಂ, ಗಡಿಂ' ಮುಂತಾದ ವಿಶಿಷ್ಟರೂಪಗಳಲ್ಲಿ 'ಇ, ಇಂ' ಅವ್ಯಯಗಳ ಕಡೆಗೂ ಬಳಕೆಯಾಗಿರುವುದು ವಿದಿತ. ಪ್ರಾಚೀನರಲ್ಲಿ ಈ ಕ್ರಮದಲ್ಲಿ ಒಂದು ವಿಶಿಷ್ಟವಾದ ಶಬ್ದ ಏಕಬಹುವಚನಗಳ ಭೇದವಿಲ್ಲದೆ ಬಳಕೆಯಲ್ಲಿದ್ದಿತು. ಅದು 'ಆರ್' ಎಂಬ ಪ್ರಶ್ನಾರ್ಥಕ ಸರ್ವನಾಮ; ಅವ್ಯಯಗಳು ಮತ್ತು ಮಧ್ಯಮಪುರುಷ ಕ್ರಿಯಾಪದಗಳ ಜತೆಗೇ ಸೇರಿ ಪ್ರಯೋಗ ಹೊಂದುತ್ತಿದ್ದಿತು. ಈ ಮುಂದಿನ ಉದಾಹರಣೆಗಳು ಅದನ್ನು ಸ್ಪಷ್ಟಪಡಿಸಿಯಾವು.

(i) ಸರ್ವನಾಮದ ಜತೆಗೆ—

"ನೀವಾರ್ಗೇನೆಂಬಿರೆಲ್ಲಿಂ ಬಂದಿರ್" (ವಡ್ಡರಾ ಪು. ೮೪-೧೬).
"ನೀನಾರ್ಗೆ ನಿನ್ನಂ ಪಬಿಯಿಸುವವರಾರ್ಗೆ" (ಆದಿಪು. ೩-೫೫).

"ಕುಡುವಂ ಗುರು ಪಡೆವರ್ ಪೆಱ
ರೆಡೆಯೊಳ್ ಪೀವಾರ್ಗೆ+ಅದೇಕೆ ಕೆಡೆನುಡಿದಪಿರ್+ಇ
ಟ್ಟೆಡೆವೆರ್ಗಡೆತನದೊಳಿದೇ
ವಡೆವಿರ್ ನಿಮಗೆಮ್ಮ ಕಜ್ಜದೊಳ್ ಪೊರೆಯುಂಟೇ" (ಆದಿಪು. ೯-೧೦೭)

"ನೀನಾರ್ಗೇನೆಂಬೆಯೇಕೆ ಬಂದೆ" (ಪಂಪಭಾ. ೩-೧೪ ವ)
"ಈ ಮಱಲುಂದಿದರಾರ್ಗೆ' (ಪಂಪಭಾ. ೩-೧೫ ವ).
"ಆರ್ಗೆ ಸತಿ ನೀಂ ಪೆಸರೇಂ" (ಕಾದಂಬರಿ ಪೂರ್ವ. ೭೮೫).
"ನೀನಾರ್ಗೆಂದಾರುಮಱಿಯರಂಗಾಧಿಪತೀ" (ಗದಾಯುದ್ಧ ೫-೧೮).
"ನೀವಾರ್ಗೆ ಆವ ದೇಶದವರ್" (ಸುಕುಮಾರಚ. ೨-೪೮ ವ).
"ಈ ಕೂಸಾರ್ಗೆ ನೀವಾರ್ಗೆ" (ಸುಕುಮಾರಚ. ೭-೪೯).[7]

(ii) ಅವ್ಯಯಗಳ ಜತೆಗೆ—

"ಮೃಗಮದ ಪತ್ರರೇಖೆಗಳನೇಕೆಗೆ ತಾಳ್ದಿರದಾದುವೀ ಕದಂ
ಪುಗಳ್+ಉರಮೇಕೆ ಹಾರಮಣಿಯಿಲ್ಲದ ಬಿನ್ನನಿರ್ದುದು" (ಪಂಪಭಾ. ೪-೭೬).

"ಅಣಮೆಮೆಯಿಕ್ಕದೊಪ್ಪುಗುಮೆ ಕಣ್ಮಲರೆಂತುಗೆ ದೇವಸೌಂದರೀ
ಗಣದ ವಿಳಾಸಮಂಜಸುವವೊಲ್ ಪೆಡೆಯಂ ಮುಡಿಯಲ್ಲಿ ತೋರ್ಪನಾ
ಗಿಣಿಯರ ಕೆಯ್ತನೆಂತೊ' (ಆದಿಪು. ೪-೪೭).

"ಪಣಮನೀಯನಂ ಪ್ರಿಯಂ ನುಡಿದೆಂತುಂ
ಮಾಣೆ ಮತ್ತವನ ಪಂಬಲನೆಂತುಂ
ಕೇಣಕಾಜಿನನದೇಕೆಗೆ ಕಾವೈ
ನಾಣ ಪುತ್ತನಗೆಯಂ ನೀಂ ಬಗೆಯೈ" (ಕಾವ್ಯಾವ. ೪೮೪)

"ಅಲ್ಲಿಯಳಿ ಮಡಿಗುಮಲ್ಲದೆ
ಸಲ್ಲದು ಸಂಪಗೆಯೊಳೆಳಸಿದಳಿಯುಟಿದಲರ್ಗಿಂ
ನಲ್ಲಳಿರೆ ಪೆಱರದೇಕೆಗೆ[8]
ಮಲ್ಲಿಗೆಯಂ ಮುಡಿದು ಮುಡಿವುದೇ ಗೋರಟೆಯಂ"

". . . . . . . . . . . . . . . ಪೇಟ್
ಮೃಗಶಾಬೇಕ್ಷಣೆ ಪೇಟ್ದು ತಪ್ಪೆನೆನಗೇಂ ನೀಂ ಮುಚ್ಚುವೈ ಸ್ವೇಚ್ಛೆಯಾ
ಗೆಗೆ ಪೇಟ್ವಂ ನಿಜಕಾರ್ಯಸಿದ್ಧಿಯನೆನಲ್ ಕೇಳ್ದಾಕೆ ಪೇಡೆಂಬುದುಂ"
(ನೇಮಿನಾಥ ಪುರಾಣ, ೮-೫೩).

"ಅಲೆವ ನಿಡುಸುಯ್ಯಳಿಂ ಮುಖ
ನಲಿನ ರಜಸ್ಸಂಕುಲಂ ತೆರಳ್ದೊರ್ಬುಳಿಯಿಂ
ಕೆಲಸಾರ್ದ್ದಂತಿರಲೇಕೆ ಗೆ
ಲಲಾಟದೊಳ್ ತೊಡೆದ ರಕ್ತಚಂದನರಸಮಂ" (ಜಗವಿ. ೧೨-೯೨)

---

[7] ಈ ಎಡೆಗಳಲ್ಲಿನ ಆರ್ಗೆ ಎಂಬ ಮಾತು ಸಂಸ್ಕೃತದಲ್ಲಿನ 'ಕಸ್' ಎಂಬುದರ ರೂಪಾಂತರವೆಂದು ಅಭಿಪ್ರಾಯ ಭೇದವುಂಟು ಆದರೆ ಮುಂದಿನ ಹಲವು ಉದಾಹರಣೆಗಳನ್ನು ನೋಡಿದರೆ ಹಾಗಲ್ಲವೆಂದು ಸ್ಪಷ್ಟವಾಗುವುದು. [8] ಪೆಱರದೇಕೆಗೆ—ಎಂದು ಮುದ್ರಿತವಾಗಿದೆ. 'ಏಕೆಗೆ' ಇದ್ದೀತೆಂದು ನನ್ನ ಎಣಿಕೆ.

"ಯತಿಪತಿ ಸನ್ನಿಧಾನದೊಳಿ ದೀಕ್ಷೆಯನಾಂತಪನಿಂದು ನಮ್ಮ ಸ
ತ್ಪತಿ ಸೊಬಗಂ ಸುರೂಪನ್+ಇರವೆಂತು ಗೆ ಪೇಟ್ ನಮಗೆಂದು+ತತ್ಪುರೀ
ಸತಿಯೊಡನಾ ಮನೋಹರವನಾಂಗನೆ ವಿಹ್ವಳೆ ಸಂಭ್ರಮೋಕ್ತಿಯಿಂ
ಕತಿಯಿಸುವಂತೆ ಪೊಣ್ಮಿದುದು ಕೋಕಿಳಕೀರಮುದಾಳಿ ನಿಸ್ವನಂ" (ವರ್ಧಮಾನಪು. ೧೩-೧೪)

"ಮದನನ ಕೂಡಿ ತಾಮುಮೆನಗೇಕೆ ಗೆ[9] ಕಾಯ್ದಪುವೆನ್ನ ಕೂಡಿ ಪಾ
ಡಿದ ಮಱಿದುಂಬಿಯೆನ್ನ ಸವ ಮೇಳದ ಕೋಗಿಲೆಯೆನ್ನ ಕೆಯ್ಯೊಳೋ
ದಿದ ಗಿಳಿಯೆನ್ನ ಹಿಂದೆ ನಡೆಪಾಡಿದ ಹಂಸಿಗಳಿಂತಿವರ್ಕ್ಕೆ ತ
ಕ್ಕುದನುಸಿರ್ದೆನ್ನನೆನ್ನಿನಿಯನಂ ಕರೆ ನೀಂ ತಿಳಿ ನೀಂ ತಳೋದರೀ"
(ಅನಂತನಾಥಪು. ೮-೨೩)

ಈ ಮುಂದಿನ ಪ್ರಯೋಗಗಳು ಕ್ರಿಯಾಪದದ ಮಧ್ಯಮಪುರುಷ ವಿಧಿರೂಪದ ಏಕವಚನದ ಜತೆಗೆ ಬಳಕೆಯಾದುವು. ಪ್ರೀತಿ, ಆದರ, ವಿಶ್ವಾಸ, ಅವಧಾರಣ ಮುಂತಾದ ಧ್ವನಿಗಳಿಗೆ ಸಾಧನವಾದ ಈ ಅವ್ಯಯ ಇಲ್ಲಿ ಮಧುರವಾಗಿ ಕಾಣುತ್ತಿದೆ:

"ಅಂಬುಜಸೌರಭಂ ತನಗೆ ಗಾವಣಜೀವಣಮತ್ಯಪೂರ್ವಮಾ
ಸ್ಯಾಂಬುಜಗಂಧಮೆಂದಱಿಗಿ ಬಗ್ಗಿಸೆ ಬಗ್ಗಿಸೆ ಸೋಯೆ ಸೋಯೆ ನಿ
ನ್ನಂ ಬಲವರ್ಪುವಿನ್ನದಱಿಮೇಲೆ ಭಯಾಕುಳಲೋಲನೇತ್ರ ನೀ
ಲಾಂಬುಜಲಕ್ಷ್ಮಿಯಂ ಕೆಡಱೆ ಮಾಣವು ಕಾಣ ಗೆ ಮಾಯ್ದ ತುಂಬಿಗಳ್"
(ಶಾಂತಿಪು. ೮-೮೭)

"ಗಾಳಿಸು ಗೆಲ್ವನಂ ಹರಹು ಹೂಜೆಗನಂ ಸುಲಿ ಸುತ್ತುಗಾಱನಂ
ತಾಳಿಸು ತೇವನಂ ಕುಡದೆ ಕಾಡುವನಂ ರಸಬೋನವೆತ್ತು ಮಾ
ಕಾಳಿಗೆ ಡಾಳನಂ ನೆಗಪು ಟಕ್ಕಿಪನಂ ತುಟಿ ಮೇಕುದೋರ್ಪನಂ
ಮಾಳಬೆಗಿಕ್ಕು ಪೂಟು ಪುಸಿವನಂ ಪೊಸೆದಿಕ್ಕು ಗೆ ಪಚ್ಚೆಗಾಱನಂ" (ಲೀಲಾವತಿ. ೨-೧೦೭)

'ಬೀಸಿದೊಡೇಕೆ ನಂದುಗುವೊ ಕಿಚ್ಚದಱಿಂ ಕದಳೀದಳಂಗಳಿಂ
ಬೀಸದಿರಾದುದೇಂ ಪೊಸತೆ ಪೇಟಿದು ಪೂಗಣೆಯಿಂದೆ ಪೂಗಳಿಂ
ಪಾಸಿ ಬಟಿಲ್ದು ಬೀಟಿದಿರು ಕಾಣ ಗೆ ಶೀತಳಾಂಬುವಂ
ಸೂಸದಿರಕ್ಕ ರಾಗರಸದಿಂದವೆ ಮುನ್ನಿದು ಮಾಡಿತಲ್ಲವೇ' (ಲೀಲಾವತಿ. ೧೧-೫೦)

". . . ಇವಳ್ ಬಗೆಮೆಚ್ಚಿ ಬಿಚ್ಚತಂ
ಕೊಟಮನೊಲ್ದೊಡಚ್ಚೆ ಫಲಮಪ್ಪುದು ತಪ್ಪದೆ ಸೂಳೆ ಕೇಳ ಗೇ" (ಚಂದ್ರಪ್ರಭಪು. ೮-೫೨)

"ತೆಗೆದುರದೊಳಮರ್ಚಿ ಮುಖೇಂ
ದುಗಾಕೆ ಮಱೆಮಾಡಿ ಪಿಡಿದ ಲೀಲಾಬ್ಜಮನೊ
ಯ್ಯಗೆ ಕೆಲಕೆ ನೂಂಕಿದಂ ಪೋ
ಗು ಗೆ ಪೊಡೆವಡಲಕ್ಕ ನಿಮ್ಮ ಮಾವಂಗೆನುತುಂ" (ವರ್ಧಪು. ೫-೪೬)

"ನಗು ಗೇ ಬಾಲಕಿ . . . ಎನುತೊರ್ವಳುರ್ವಿಗೆ ಬಿಟ್ಟು . . .
ಮಧುಪಾನೋನ್ಮತ್ತೆ ತೂಗಾಡಿದಳ್" (ಸೂಕ್ತಿಸುಧಾರ್ಣವ. ಪು. ೩೨೫-೨೨)

'ಸಿರಿಗೀ ಬಾರ ಗೆ ಬಾಗಿಲೊಳ್ ಬೊಜಗರೀಗಳ್ ಬಂದು ನಿಂದಿರ್ದಪರ್'
(ಶಾಂತೀಶ್ವರಪುರಾಣ. ೧೧-೭೯)

---

[9] ಮುದ್ರಿತಪ್ರತಿಯಲ್ಲಿ 'ಈಕೆಗೆ' ಪಾಠವಿದೆ. ಅದು ಅಶುದ್ಧವಿರಬೇಕೆಂಬುದು ವಿಮರ್ಶಿಸಿದಾಗ ತಿಳಿಯಬಹುದಾಗಿದೆ.

ಇಂತಹ ಹಲವು ಉದಾಹರಣೆಗಳು ಇನ್ನೂ ಇದ್ದಾವು. ಪ್ರಮಾಣಪುರುಷರ ಪ್ರಚುರ ಪ್ರಯೋಗಗಳು ಹಲವಿದ್ದರೂ ಈ 'ಗೆ, ಗೇ' ವಿಚಾರದ ಹೆಸರನ್ನೇ ಮೂವರು ವ್ಯಾಕರಣ ಕಾರರೂ ಎತ್ತದಿರುವುದು ದಿಟವಾಗಿ ಚೋದ್ಯ. ಕೇಶಿರಾಜನು ಆಮಂತ್ರಣ ವಿಭಕ್ತಿಯ ಬಗೆ ಯನ್ನು ಪ್ರಸ್ತಾವಿಸುತ್ತಾ (ಅಧ್ಯಾಹಾರ್ಯವಾದ ಮಧ್ಯಮಪುರುಷ ಸರ್ವನಾಮವನ್ನು ಬಿಟ್ಟು) ಆಮಂತ್ರಣದ ನಾಮವಾಚಕಗಳ ಜತೆಗೆ ಕ್ರಿಯಾಪದವು ನಿಜಧಾತು ಸ್ವರೂಪದಲ್ಲಿರುತ್ತದೆಂದು ನುಡಿದುದಲ್ಲದೆ ಕಲವು ವೇಳೆ ಧಾತುವಿನ ಕಡೆಗೆ ಅಕಾರವು ಸೇರುತ್ತದೆಂದು ಸೂಚಿಸಿ,

> "ಬಾರ ಮರಾಳಿಕಾಗಮನೆ ನೋಡ ಚಕೋರ ವಿಲೋಲನೇತ್ರೆ . . .
> . . . ಎನಗುತ್ತರಮಂ ಕುಡ ಚಾರುವೇಣುವೀಣಾರವೆ . . ."

ಎಂದು ಮುಂತಾದ ಪದ್ಯವನ್ನು ಉದಾಹರಿಸಿರುವನು[10] (ಶಮದ. ಸೂ. ೧೨೫). ಈ ಅಕಾರ ವನ್ನು ಮರೆಯದೆ ನಿರೂಪಿಸಿದ ಕೇಶವನಿಗೆ ಮೇಲೆ ಸೂಚಿಸಿದ 'ಗೆ' ದೃಷ್ಟಿಗೆ ಬೀಳಲಿಲ್ಲವೆ? ಬಿದ್ದಿದ್ದರೂ ಮರೆತನೆ? ನೆನಪಿದ್ದರೂ ಭಾವವಿಶೇಷದಿಂದ ಹೇಳದೆ ಬಿಟ್ಟನೆ?—ಇದು ಯೋಚಿಸ ತಕ್ಕುದಾಗಿದೆ.

## VII

ಪಂಪಭಾರತದಲ್ಲಿ (ಆಶ್ವಾಸ ೧೧, ಪದ್ಯ ೮೭),

> "ಇದು ಚಕ್ರವ್ಯೂಹವಿಾವ್ಯೂಹವುನೊಡೆವದಟಂ ಪಾರ್ಥನಂತಾತನುಂ ಗೆಂ
> ಟಿದನೆವ್ಮೀ ನಾಲ್ವರುಂ ಭೇದಿಸಲಱಿಯೆವು—ಇದಂ ಕಂದ ನೀಂ ಬಲ್ಲ ಪೇಡೆಂ
> ಬುದುಂ . . ."

ಎಂಬೆಡೆ ಕಾಣುವ **ಗೆಂಟಿದರ್**—ಎಂಬುದು ಒಂದು ವಿಶಿಷ್ಟ ಶಬ್ದರೂಪ. ಹಳಗನ್ನಡದಲ್ಲಿ ಒಳ್ಳಿತು, ಒಳ್ಳಿತ್ತು . . . ಮೆಲ್ಲಿತು, ಒಲ್ಲಿತ್ತು, ಕೂರಿತ್ತು ಮುಂತಾದ 'ತು', 'ತ್ತು' ಕಡೆಗಿರುವ ಗುಣವಾಚಕಗಳು ಅಂತ್ಯಲೋಪ ಹೊಂದಿಯೂ ಅಲ್ಲಿ, ಇಲ್ಲಿ, ಎಲ್ಲಿ, ಮುಂತಾದ ಸ್ಥಾನವಾಚಕ ಗಳೂ ದಕಾರದೊಡಗೂಡಿ ಒಳ್ಳಿದರ್, ಮೆಲ್ಲಿದಳ್, ಒಲ್ಲಿದರ್, ಕೂರಿದಳ್, ಅಲ್ಲಿದರ್, ಇಲ್ಲಿದರ್, ಎಲ್ಲಿದರ್, ಅಲ್ಲಿದಳ್, ಇಲ್ಲಿದಳ್, ಎಲ್ಲಿದಳ್ ಮುಂತಾದ ರೂಪವಾಗುವುದು ಸಹಜ. ಇಲ್ಲಿ ದೂರಾರ್ಥದ '**ಗೆಂಟು**' ಸ್ಥಾನವಾಚಕವೆಂದು ಗಣಿಸಬಹುದಾದರೆ ಕಡೆಯ ಉಕಾರ ಇಕಾರ ವಾಗಲು ಅವಕಾಶ ತೋರಬೇಕು. ಉಕಾರಾಂತ ಧಾತುಗಳಿಗೆ ದಕಾರಾದಿ ಪ್ರತ್ಯಯಗಳು ಪರವಾದಾಗ ನಡುವೆ ಒದಗುವ ಇಕಾರಾದೇಶವನ್ನು ಇಲ್ಲಿಗೆ ಅನ್ವಯಿಸಿಕೊಳ್ಳಬೇಕಾಗಿದೆ. ಇದಕ್ಕೆ ಗಮಕವಿಲ್ಲ. ಮೂವರು ವ್ಯಾಕರಣಕಾರರೂ ಇದನ್ನು ಪ್ರಸ್ತಾಪಿಸಿಲ್ಲ.

ಹ್ರಸ್ವೈಕಾಕ್ಷರಪೂರ್ವವಾದ 'ಣನಲಯಳ' ವರ್ಣಗಳಿಗೆ ಸ್ವರಪರವಾದರೆ ದ್ವಿತ್ವವು ನಿಯತವಾಗಿ ಒದಗುತ್ತದೆಯೆಂದು ಹೇಳಿ ಕೆಲವು ವಿನಾಯಿತಿಗಳನ್ನು ಈ ಮೂವರು ವ್ಯಾಕರಣ ಕಾರರೂ ತಿಳಿಸಿದ್ದಾರೆ. ಆದರೆ 'ಪಂಪಭಾರತ'ದ "ಕೊಳ್ಳ ಕೊಳ್ಳೆಂದಂಗರಾಜನಸುರರನೆಚ್ಚಂ" ಎಂಬ ಪ್ರಸಿದ್ಧಪ್ರಯೋಗದಲ್ಲಿನ ಕೊಳ್‌ಧಾತುವಿನ 'ಳ್' ವಿಕಲ್ಪತೆ ವಿನಾಯಿತಿಯಲ್ಲಿ ಸೇರಿಡಲ್ಪ ಟ್ಟಿಲ್ಲ. ಕಳ್ಳದ—ಎಂಬ ನಿಷೇಧರೂಪ ವಿಶೇಷವೂ ಬೇರೆಡೆ ಕಾಣಿಸಿಕೊಳ್ಳುವುದು ಗಮನಾರ್ಹ ವಾಗಿದ್ದಿತು. 'ಶಾಂತಿಪುರಾಣ'ದಲ್ಲಿ (೪—೧೦೪) ಬೆಕ್ಕನರ್—ಎಂಬ ಶಬ್ದಪ್ರಯೋಗವಿದೆ. ಹಾಗೂ 'ಜನ್ಮಿಗ' ಎಂಬುದೊಂದು ಮಾತೂ (೪೦—೩೦೨) ಅಲ್ಲಿಯೇ ಕಾಣಿಸಿಕೊಳ್ಳುತ್ತದೆ. ಈ ಪ್ರಯೋಗಗಳ ಸಾಧುತ್ವಸಮರ್ಥನೆ ಅವಶ್ಯವಾಗಿತ್ತು. ಹೀಗೆ ಇನ್ನೂ ಹಲವು ಸಂಗತಿಗಳನ್ನು ಮುಂದಿಡಬಹುದು. ಆದರೆ ಪ್ರಕೃತ ಲೇಖನದ ಅಳತೆ ವಿಾರೀತು.

---

[10] ಇಲ್ಲಿ ಧಾತುವಿನ ಕಡೆಗೆ ಸೇರುವ ಅಕಾರ ಪ್ರೀತ್ಯತಿಶಯ, ಆದರ ಮುಂತಾದ ಭಾವವಿಶೇಷಗಳನ್ನು ಸೂಚಿಸುವ ಅವ್ಯಯವಾಗಬಹುದು. 'ಗೆ' ಕಾರವೂ ಅಂತೆಯೇ ಪ್ರೀತ್ಯಾದರ ಸೂಚಕವಾದ ಸಂಬೋಧನವೆನ್ನ ಬಹುದು.

## VIII

ಬೆಳೆಯುತ್ತಿರುವ ಭಾಷೆಯ ವಿಶಿಷ್ಟರೂಪಗಳ ಸಿದ್ಧಿಕ್ರಮವನ್ನೆಲ್ಲಾ ವ್ಯಾಕರಣವೊಂದರಲ್ಲಿ ವಿವರಿಸಿ ತೋರಿಸುವುದೆಂಬುದು ಸಾಹಸದ ಮಾತು. ಹಾಗೆ ತೋರಿಸದ ಮಾತ್ರಕ್ಕೆ ಆ ವೈಯಾಕರಣರಿಗೆ ಅಂತಹ ರೂಪಗಳ ಅರಿವಿಲ್ಲವೆಂದು ಭಾವಿಸಿ ನುಡಿಯುವುದೂ ಧಾರ್ಷ್ಟ್ಯವಾಗುತ್ತದೆ. ಸಂಸ್ಕೃತದಲ್ಲಿ ಪಾಣಿನಿಯಂಥವರ ವ್ಯಾಕರಣಕ್ಕೇ ವಾರ್ತಿಕಗಳು ಹುಟ್ಟಿದುವೆಂದಮೇಲೆ "ಶಬ್ದಪಾರಮಾರ್ಗಮಶಕ್ಯಂ" ಎಂಬುಕ್ತಿಯ ಸತ್ಯತೆ ಮನವರಿಕೆಯಾಗುತ್ತದೆ. ಕೇವಲ ಹಳಗನ್ನಡದಲ್ಲಿ ನಾಗವರ್ಮಾದಿಗಳು ಬಿಟ್ಟಿರಬಹುದಾದ ಕೆಲವು ವಿಷಯಗಳನ್ನು ದಿಗ್ದರ್ಶನ ಮಾಡಬಹುದಾದರೂ ಪ್ರಚಂಡ ರೀತಿಯಲ್ಲಿ ಹಬ್ಬಿ ಹರಡಲು ಮೊದಲಿಟ್ಟ ನಡುಗನ್ನಡದ ಕಾಲಕ್ಕೆ ಭಾಷೆಯು ಅನುಸರಿಸಿದ ಕ್ರಮವನ್ನು ಸಕಲವಾಗಿ ವಿವರಿಸಲು ದುಶ್ಶಕ್ಯವೆಂಬಂತಾಗಿದೆ. ನಡುಗನ್ನಡಕ್ಕಾಗಿ ಮೀಸಲಾದ ನಿರ್ದಿಷ್ಟ ವ್ಯಾಕರಣವೊಂದು ಹುಟ್ಟದಿರುವುದೂ ಇದಕ್ಕೆ ಸಾಕ್ಷಿ.

ವಿನಯಭೂಷಣನಾದ ನಾಗವರ್ಮನು ಭಾಷಾಸ್ವರೂಪವನ್ನು ಚೆನ್ನಾಗಿ ಬಲ್ಲವನಾದುದರಿಂದಲೇ "ಪ್ರತಿಬುದ್ಧರಂ ಕುಱಿತ್ತು . . . ಕಿಱಿದು" ಮಾರ್ಗಸೂಚನೆಮಾಡಿ, ಮತಿವಂತರು ವಿತರ್ಕದಿಂದ ಉಕ್ತಶೇಷವನ್ನು "ಅಱಿದು ಪೇೞ್ವುದು" ಎಂದು ಕೋರಿದನು. 'ಶಬ್ದಸ್ಮೃತಿ'ಯಲ್ಲಿ ಆತನೆಂದ ಮಾತು 'ಭಾಷಾಭೂಷಣ'ಕ್ಕೂ ಅನ್ವಯಿಸಬಹುದಾದುದೆಂದು ಸ್ಪಷ್ಟ—ಇಷ್ಟ. ಮಹನೀಯನಾದ ಆತನ 'ಭಾಷಾಭೂಷಣ'ವನ್ನು ಪ್ರತಿಮಾಡಿದ ಅಥವಾ ಅದಕ್ಕೆ ಟೀಕೆ ಬರೆದ ವಿದ್ವದ್ವರ್ಯನೊಬ್ಬ ಪಾಣಿನೀಯಕ್ಕೆ ವಾರ್ತಿಕಕಾರರು ವಾರ್ತಿಕಗಳನ್ನು ಸೇರಿಸಿದಂತೆ 'ಭಾಷಾಭೂಷಣ'ಕ್ಕೂ ತನ್ನ ವಾರ್ತಿಕಗಳನ್ನು ಸೇರಿಸಬಯಸಿದುದು ದೃಷ್ಟಿಗೆ ಬೀಳುತ್ತದೆ: "ಇರಾದೇಶೋ ದ್ವ್ಯರ್ಥಸ್ಯ" ಎಂದು 'ಎರಡು' ಎಂಬ ಸಂಖ್ಯಾವಾಚಕಕ್ಕೆ ಸಮಾಸದಲ್ಲಿ 'ಇರ್' ಆದೇಶವಾಗುತ್ತದೆಂದು ವಿವರಿಸುವ ೧೫೪ ನೆಯ ಸೂತ್ರದ ಕೆಳಗೆ 'ಅತ್ರ ಕ್ವಚಿತ್ ಸ್ವಭಾವೋ ವಕ್ತವ್ಯಃ'—ಎರಡ್ಮಾತು, ಎರಡ್ಮೊಱು, ಎರಡ್ಕೆಯ್—ಎಂಬ ಉದಾಹರಣೆಗಳೊಡಗೂಡಿದ ಜೋಡಣೆಯೊಂದು ಕಂಡುಬರುತ್ತದೆ. ಹಾಗೆಯೇ 'ರಡಾಭ್ಯಾಂ ವಸ್ಯ ಪಃ' ಎಂದು ರೇಫ ಡಕಾರಗಳಿಗೆ ಪರವಾದ ವಕಾರಕ್ಕೆ ಪಕಾರಾದೇಶವಾಗುತ್ತದೆಂದು ಹೇಳುವ ೨೧೨ ನೆಯ ಸೂತ್ರದ ಕೆಳಗೆ "ಓಕಾರಾದಪಿ ವಕ್ತವ್ಯಃ—ಓಪಂ, ಓಪರ್" ಎಂಬ ವಾರ್ತಿಕ ಸೇರಿಸಲ್ಪಟ್ಟಿದೆ. ಹೀಗೆಯೇ 'ಆಸಯನಾಗಮನಾರ್ಥೇ ವರ್ತಿನೋ ರೇಫಸ್ಯ' ಎಂಬ ೨೩೪ ನೆಯ ಸೂತ್ರದ ಕೆಳಗೂ "ಅತ್ರ ಳಕಾರ ಡಕಾರಯೋಃ ಣಡೌ ವಕ್ತವ್ಯೌ—ಕೊಂಡಂ" ಎಂಬ ಕೀಲಣೆಯಿದೆ.

ಈ 'ವಾರ್ತಿಕ'ಗಳ ಕೈವಾಡದ ಮಹಾಶಯನು ತನಗೆ ಎಲ್ಲೋ ಒಂದೆಡೆ ತೋಚಿದಾಗ ಸೇರಿಸಿದ 'ಸೂತ್ರ ಸೂಚನೆ'ಗಳಂತೆ ಸ್ವಲ್ಪ ಪ್ರಯತ್ನ ಪೂರ್ವಕವಾಗಿ ಅವಶ್ಯವಾದೆಡೆಗಳಲ್ಲಿ 'ವಾರ್ತಿಕ'ಗಳನ್ನು ಸೇರಿಸಿದ್ದರೆ ಸುವರ್ಣದ ಕುಂದಣದಲ್ಲಿ ರತ್ನಗಳನ್ನು ಹುದುಗಿಸಿದಂತಾಗಿ ಗ್ರಂಥವಿಶಿಷ್ಟವೆನಿಸುತ್ತಿತ್ತು. ಆತನಿಗೆ ಆ ಪ್ರವೃತ್ತಿ ಏಕೆ ಹುಟ್ಟಲಿಲ್ಲವೋ ಅದನ್ನು ಓದಿದ ಬೇರೆ ಯಾರಾದರೂ ಆದಕ್ಕೆ ಏಕೆ ಕೈಯಿಕ್ಕಲಿಲ್ಲವೋ ತಿಳಿಯಲಾಗದಿದೆ. ಬಹುಶಃ ನಾಗವರ್ಮನ ರಚನಾಶೈಲಿಯ ಮಟ್ಟವನ್ನು ಮುಟ್ಟುವುದು ಕಷ್ಟವೆಂದೋ ಅಥವಾ ಅಷ್ಟರಲ್ಲಿ 'ಶಬ್ದಮಣಿದರ್ಪಣ' 'ಶಬ್ದಾನುಶಾಸನ'ಗಳ ರಚನೆ ನಡೆದೋ ಆವಶ್ಯಕತೆ ಕಡಿಮೆ ತೋರಿದ್ದೀತು. ಅಂತು ಇಂತಹ ಚೋದ್ಯಗಳು ಹಲವು ನಮ್ಮ ದೃಷ್ಟಿಗೆ ಬೀಳುವುವೆಂದೂ ಕನ್ನಡ ನುಡಿಗೆ ಸಮಗ್ರವಾದ(?) ಒಂದು ಹೊಸ ವ್ಯಾಕರಣದ ಆವಶ್ಯಕತೆಯುಂಟೆಂದೂ ಅರಿಕೆಮಾಡಿ ವಿರಮಿಸುತ್ತೇನೆ.

**ಹೆಮ್ಮಿಗೆ ದೇಶಿಕಾಚಾರ್ಯ**

# ಕುಮಾರಲೋಧ್ರಸಮರ

ನಮ್ಮ ನಾಡಿನ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯಲ್ಲಿ ಹತ್ತನೆಯ ಶತಾಬ್ದದ ಉತ್ತರಾರ್ಧ ಹಲವಾರು ಮಹತ್ತರ ಘಟನೆಗಳಿಂದ ಕೂಡಿದೆ. ಈ ಕಾಲಾವಧಿಯಲ್ಲಿ ರಾಷ್ಟ್ರಕೂಟ ಚಕ್ರಾಧಿಪತ್ಯವು ಅಸ್ತಂಗತವಾಯಿತು. ರಾಷ್ಟ್ರಕೂಟರ ಪಕ್ಷಪಾತಿಗಳೂ ನಿಕಟ ಆಪ್ತವರ್ಗ ದವರೂ ಆದ ಗಂಗ ಅರಸರು ಕಳೆಗುಂದಿದರು. ರಾಷ್ಟ್ರಕೂಟರ ಮಾಂಡಲಿಕನಾಗಿದ್ದ ಚಾಲುಕ್ಯ ಕುಲದ ಇಮ್ಮಡಿ ತೈಲಪನು ತನ್ನ ಶೌರ್ಯ ಸಾಹಸಗಳನ್ನು ಮೆರೆಯಿಸಿ ಮತ್ತೆ ಚಾಲುಕ್ಯ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಈ ಸಂಕ್ರಮಣಕಾಲದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದ ಚಾರಿತ್ರಿಕ ವ್ಯಕ್ತಿಗಳ ಮತ್ತು ಅವರ ಕಾರ್ಯಕಲಾಪಗಳ ನಿರ್ದೇಶಗಳು ಶಾಸನಗಳಲ್ಲಿ ಹೇರಳವಾಗಿ ದೊರೆಯುತ್ತವೆ; ಸಾಹಿತ್ಯ ಕೃತಿಗಳಲ್ಲಿಯೂ ಕೆಲವೆಡೆಗಳಲ್ಲಿ ಹಣಿಕಿಕ್ಕುತ್ತವೆ. ಇಂತಹ ನಿರ್ದೇಶ ಗಳಲ್ಲಿ ಕೆಲವು ಸಂದಿಗ್ಧವಾಗಿ ಉಳಿದಿದ್ದು ಅವುಗಳಿಗೆ ಸರಿಯಾದ ಅರ್ಥವಿವರಣೆ ಹೇಳಲು ಸಂಶೋಧಕರು ಸಮರ್ಥರಾಗಿಲ್ಲ. ಈ ಪರಿಯ ಸಂದರ್ಭಗಳಲ್ಲಿ ಒಂದೆರಡನ್ನು ಎತ್ತಿಕೊಂಡು ಚರ್ಚಿಸುವುದಾಗಿ ಈ ಲೇಖನದಲ್ಲಿ ಉದ್ದೇಶಿಸಿದ್ದೇನೆ.

### ಇಂದ್ರವಲ್ಲಭನ ರಾಜಧಾನಿ

ಮುಮ್ಮಡಿ ಕೃಷ್ಣರಾಜನ ಅನಂತರ ಪಟ್ಟವೇರಿದ ಖೊಟ್ಟಿಗ ಮತ್ತು ಇಮ್ಮಡಿ ಕಕ್ಕಲನ ಆಳಿಕೆಗಳಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯವು ಕ್ಷೀಣಿಸಿ ನಾಮಶೇಷವಾಯಿತು. ಈ ಬೀಳುಗಾಲ ದಲ್ಲಿ ರಾಷ್ಟ್ರಕೂಟರ ಸಾಮಂತನಾದ ಗಂಗಕುಲದ ಇಮ್ಮಡಿ ಬೂತುಗನ ಮಗ ಮುಮ್ಮಡಿ ಮಾರಸಿಂಹನು ತನ್ನ ಚಕ್ರವರ್ತಿಗಳಿಗೆ ಬೆಂಬಲವಾಗಿ ನಿಂತು ಹಗೆಗಳೊಡನೆ ಒಹುವಾಗಿ ಹೋರಾಡಿದನು. ಆದರೆ ಆತನ ಪರಿಶ್ರಮಗಳು ಸಫಲತೆಯನ್ನು ಕಾಣಲಿಲ್ಲ. ರಾಷ್ಟ್ರಕೂಟರ ಆಳಿಕೆ ಕ್ರಿ.ಶ. ೯೭೩ ರಲ್ಲಿ ನಿರ್ಮೂಲನವಾಯಿತು. ಚಾಲುಕ್ಯ ಇಮ್ಮಡಿ ತೈಲಪನಿಗೆ ಸಾಮ್ರಾಜ್ಯ ಸ್ಥಿರವಾಯಿತು.

ಇಷ್ಟಾದರೂ ಮಾರಸಿಂಹನು ಹತಾಶನಾಗಲಿಲ್ಲ. ಆತನು ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಮಗನ ಮಗನೂ ತನ್ನ ಸೋದರಳಿಯನೂ ರಾಷ್ಟ್ರಕೂಟ ವಂಶದ ಕೊನೆಯ ಸಂತಾನವೂ ಆದ ನಾಲ್ಕನೆಯ ಇಂದ್ರರಾಜನಿಗೆ ರಾಷ್ಟ್ರಕೂಟ ಸಿಂಹಾಸನದ ಪಟ್ಟಗಟ್ಟಿದನು. ಈ ವಿಷಯ ಶ್ರವಣಬೆಳ್ಗೊಳದ ಒಂದು ಶಾಸನದಲ್ಲಿ (*Ep. Carnatica, Vol, II, no. 59*) ಉಕ್ತವಾಗಿದೆ. ಆದರೆ ಮುಂದೆ ಚಾಲುಕ್ಯ ತೈಲಪನ ಜಯಶೀಲ ಆಳಿಕೆ ನಡೆದಿರುವ ಸಮಯದಲ್ಲಿ ಈ ಇಂದ್ರರಾಜನ ಸ್ಥಿತಿಗತಿ ಏನಾಗಿದ್ದಿತು ಎಂಬ ವಿಚಾರ ಇದುವರೆಗೆ ಜ್ಞಾತವಾಗಿರಲಿಲ್ಲ.

ಈಚೆಗೆ ಮುಂಬಯಿ ಕರ್ನಾಟಕದ ಶಾಸನಗಳ ಸಂಪಾದನ ಕಾರ್ಯದಲ್ಲಿ ತೊಡಗಿರು ವಾಗ ನನಗೆ ಈ ವಿಷಯದ ಮೇಲೆ ಕೆಲವು ಶಾಸನಗಳಿಂದ ಪ್ರಕಾಶ ಲಭಿಸಿತು. ಇವುಗಳಲ್ಲಿ ಒಂದು ಶಾಸನ ಧಾರವಾಡ ಜಿಲ್ಲೆಯ ನವಲ್ಗುಂದ ತಾಲೂಕಿನ ಬೋಗನೂರು ಗ್ರಾಮದಲ್ಲಿದೆ. ಈ ಶಾಸನದಲ್ಲಿ ಕಾಲನಿರ್ದೇಶವಿಲ್ಲ. ಆದರೂ ಲಿಪಿವಿನ್ಯಾಸವನ್ನು ಸಮಾಲೋಚಿಸಿ ಇದನ್ನು ಸ್ಥೂಲವಾಗಿ ೧೧ನೆಯ ಶತಮಾನಕ್ಕೆ ಸೇರಿಸಬಹುದು. ಈ ಶಾಸನದಲ್ಲಿ 'ಇಂದ್ರವಲ್ಲಭನ ರಾಜಧಾನಿ ಬಂಕಾಪುರ' ಎಂಬ ಪದಪ್ರಯೋಗ ಬರುತ್ತದೆ. ಈ ಇಂದ್ರವಲ್ಲಭ ರಾಷ್ಟ್ರಕೂಟ ನಾಲ್ಕನೆಯ ಇಂದ್ರರಾಜನೆಂದೂಹಿಸಲು ಅವಕಾಶವಿದೆ. ಇದಕ್ಕೆ ಒಂದು ಕಾರಣ ಆತನಿಗೆ ಅನ್ವಯಿಸಿದ 'ವಲ್ಲಭ' ಎಂಬ ರಾಷ್ಟ್ರಕೂಟರ ವಿಶಿಷ್ಟ ಅಂಕಿತ.

ರಿಕ್ತವಾದ ರಾಷ್ಟ್ರಕೂಟ ಸಿಂಹಾಸನಕ್ಕೆ ತನ್ನ ಸೋದರಮಾವನಿಂದ ಅಭಿಷಿಕ್ತನಾದ ಇಂದ್ರರಾಜನು ಬಂಕಾಪುರದಲ್ಲಿ ಬಂದು ನೆಲಸಿರಬೇಕು. ಜೈನಕ್ಷೇತ್ರವೂ ಪ್ರಸಿದ್ಧ ಜೈನ ಯತಿಗಳ ಆವಾಸವೂ ಆಗಿದ್ದುದರಿಂದ ಈ ಊರು ಇಂದ್ರರಾಜನಿಗೆ ಆಕರ್ಷಣೆಯನ್ನು ನೀಡಿರಬೇಕು. ಇಂದ್ರರಾಜನ ನಿಧನಕಾಲ ಕ್ರಿ. ಶ. ೯೮೨ ಎಂದು ತಿಳಿಯುತ್ತದೆ. ಹೀಗೆ ಕ್ರಿ. ಶ. ೯೭೩ ರಿಂದ ೯೮೨ ರವರೆಗೆ ಸುಮಾರು ಹತ್ತು ಸಂವತ್ಸರಗಳ ಕಾಲ ಈ ಇಂದ್ರರಾಜ ರಾಜ್ಯ ವಿಲ್ಲದಿದ್ದರೂ ರಾಜಧಾನಿಯ ಪ್ರತಿಷ್ಠೆಯನ್ನು ಉಪಭೋಗಿಸುತ್ತ ತನ್ನ ಶೇಷಜೀವನವನ್ನು ಬಂಕಾಪುರದಲ್ಲಿ ಕಳೆದಿರಬೇಕು. ಇಂದ್ರರಾಜನ ವಾಸ್ತವ್ಯದಿಂದ ಈ ಊರಿಗೆ ಉಂಟಾದ ಗೌರವ ಐತಿಹ್ಯರೂಪದಿಂದ ಮುಂದಿನ ತಲೆಮಾರಿನ ಜನಗಳ ಸ್ಮೃತಿಪಥದಲ್ಲಿ ಬಾಳಿ ನಿಂತಿರಬೇಕು. ಈ ಮಾತಿಗೆ ಬೋಗನೂರ ಶಾಸನವು ಸಾಕ್ಷಿಯಾಗಿದೆ.

ಇಂದ್ರರಾಜನಂತಹ ಘನವ್ಯಕ್ತಿಯ ವಾಸ್ತವ್ಯವು ಬಂಕಾಪುರದ ಮೇಲೆ ಸಾಕಷ್ಟು ಪ್ರಭಾವವನ್ನು ಬೀರಿರಬೇಕು ಎಂಬ ವಿಷಯ ಬಂಕಾಪುರ ಮತ್ತು ಬೇರೆ ಗ್ರಾಮಗಳಲ್ಲಿ ದೊರೆತ ಕೆಲವು ಶಾಸನಗಳಿಂದ ಸ್ಫುಟವಾಗುತ್ತದೆ. ಕ್ರಿ. ಶ. ಸು. ೧೦೬೨ ರ ಬಂಕಾಪುರದ ಒಂದು ಶಾಸನ ಬಂಕಾಪುರದ ಇಂದ್ರೇಶ್ವರ ದೇವರಿಗೆ ಬಿಟ್ಟ ದತ್ತಿಯ ವಿಷಯವನ್ನು ವಿವರಿಸುತ್ತದೆ. ಕದಂಬ ಕೀರ್ತಿದೇವನ (ಕ್ರಿ. ಶ. ಸು. ೧೦೬೮—೧೦೭೭) ಬಂಕಾಪುರದ ಇನ್ನೊಂದು ಶಾಸನದಲ್ಲಿ ಬಂಕಾಪುರ ರಾಜಧಾನಿಯ ಇಂದ್ರೇಶ್ವರ ದೇವರ ನಿರ್ದೇಶ ಬರುತ್ತದೆ (Bombay-Karnatak Collection, Nos. 3-4 of 1933-34). ಈ ಇಂದ್ರೇಶ್ವರ ದೇವಾಲಯವು ಸ್ವಯಂ ಇಂದ್ರ ರಾಜನಿಂದಾಗಲಿ, ಆತನ ಸನ್ಮಾನಾರ್ಥ ಬೇರೆಯವರಿಂದಾಗಲಿ, ಬಂಕಾಪುರದಲ್ಲಿ ಸ್ಥಾಪನವಾದುದೆಂದೂಹಿಸಬಹುದು. ಇವಲ್ಲದೆ ಹಾವೇರಿ ತಾಲೂಕಿನ ಕೋಳೂರು ಗ್ರಾಮದಲ್ಲಿ ದೊರೆತ ಸುಮಾರು ಇದೇ ಕಾಲದ ಎರಡು ಶಾಸನಗಳಲ್ಲಿ ಬಂಕಾಪುರದ ಇಂದ್ರೇಶ್ವರ ದೇವರ ಉಲ್ಲೇಖ ಬರುತ್ತದೆ (*Ep. Indica, Vol. XIX, pp. 180 and 187*).

## ಕುಮಾರಲೋಧ್ರಸಮರ

ರನ್ನಕವಿಯ 'ಅಜಿತತೀರ್ಥಕರ ಪುರಾಣ ತಿಲಕ'ದ ಒಂದನೆಯ ಆಶ್ವಾಸದಲ್ಲಿ ಉಕ್ತವಾದ ಚಾರಿತ್ರಕ ವಿಷಯಗಳನ್ನೂ ಚಾಲುಕ್ಯ ಇರಿವಬೆಡಂಗ ಸತ್ಯಾಶ್ರಯನ ಲಕ್ಕುಂಡಿಯ ಶಾಸನ ದಲ್ಲಿನ (*Bombay Karnatak Inscriptions, vol. I, pt. I, No. 52*) ವಿವರಗಳನ್ನೂ ಪರಿಶೀಲಿಸಿದರೆ, ಅತ್ತಿಮಬ್ಬೆಯ ತವರುಮನೆಯವರೂ ಅತ್ತೆಯ ಮನೆಯವರೂ ಚಾಲುಕ್ಯ ಪಕ್ಷಪಾತಿಗಳಾಗಿದ್ದು ಇಮ್ಮಡಿ ತೈಲಪನ ರಾಜ್ಯಸ್ಥಾಪನ ಕಾರ್ಯದಲ್ಲಿ ಆತನಿಗೆ ಅತಿಶಯ ಸಹಾಯಮಾಡಿದರೆಂದು ಸ್ಫುಟವಾಗುತ್ತದೆ. 'ಅಜಿತ ಪುರಾಣ'ದ ಒಂದನೆಯ ಆಶ್ವಾಸದ 20 ನೆಯ ಪದ್ಯವು ಹೀಗಿದೆ.

> ಪಡೆವೆಂ ಪುತ್ರನನೊರ್ವನಂ ಪಡೆವೆನಾನೊಂದೇಸಿನಕ್ಕುಂ ಜಯಂ |
> ನುಡಿದೆಂ ಕೇಳ್ದಿರಿಮೆಂದು ಮುನ್ನ ಜಿಪಿ ತತ್ತದ್ವಿದ್ಯನಾಚಾರದೊಳ್ |
> ಗುಡಿಯಂ ಕಟ್ಟಿ ಕುಮಾರಲೋಧ್ರಸಮರ ಪ್ರಾರಂಭದೊಳ್ ಬಲ್ಮೆ ನೇ
> ರ್ಪಡೆ ಭೂವಲ್ಲಭನಂ ಮನಂಗೊಳಿಸಿದಂ ಶೌರ್ಯೋರ್ಜಿತಂ ಮಲ್ಲಪಂ ||

ಈ ಪದ್ಯದಲ್ಲಿ ಒಂದು ಐತಿಹಾಸಿಕ ಸಂನಿವೇಶವನ್ನು ಸಂದರ್ಭಿಸಲಾಗಿದ್ದು, ಅದರ ವಿವರಣೆ ಆವಶ್ಯಕ. ಇಲ್ಲಿ ಹೆಸರಿಸಿದ ಮಲ್ಲಪನು ಅತ್ತಿಮಬ್ಬೆಯ ತಂದೆಯಾದ ಮಲ್ಲಪ ದಂಡನಾಯಕನಾಗಿರಬೇಕು. ಈ ಮಲ್ಲಪ ಮತ್ತು ಈತನ ತಮ್ಮ ಪೊನ್ನಿಮಯ್ಯ ಇವರು ಚಾಲುಕ್ಯ ತೈಲಪನ ಪಕ್ಷವನ್ನು ವಹಿಸಿ ಆತನ ಗೆಲುವಿಗಾಗಿ ಹೋರಾಡಿದರು. ಪೊನ್ನಿಮಯ್ಯನಂತೂ ತೈಲಪನಿಗಾಗಿ ತನ್ನ ಪ್ರಾಣವನ್ನೇ ತೊರೆದ ಹುತಾತ್ಮ (ಅದೇ. ಆಶ್ವಾಸ, ಪದ್ಯ ೩೭). ಮಲ್ಲಪನು 'ಕುಮಾರಲೋಧ್ರಸಮರ ಪ್ರಾರಂಭ' ದಲ್ಲಿ ತನ್ನ ಪರಾಕ್ರಮದ ಧ್ವಜವನ್ನು ನಿಲ್ಲಿಸಿ, ಸಾಹಸ ಕಾರ್ಯದ ಘೋಷಣೆಮಾಡಿ, ಶಸ್ತ್ರವಿದ್ಯಾಕೌಶಲವನ್ನು ಪ್ರದರ್ಶಿಸಿ, ಪ್ರತಾಪಾತಿಶಯ

ದಿಂದ ಭೂವಲ್ಲಭನ ಮೆಚ್ಚುಗೆಯನ್ನು ಗಳಿಸಿದನೆಂದು ಈ ಪದ್ಯದಲ್ಲಿ ಹೇಳಿದೆ. ಈ ಭೂವಲ್ಲಭ ಬೇರೊಬ್ಬನಲ್ಲದೆ ಚಾಲುಕ್ಯ ಇಮ್ಮಡಿ ತೈಲಪರಾಜನಾಗಿರಬೇಕು.

ಇಷ್ಟು ಹೇಳಿದರೆ ಸಾಲದು. ಈ ಪದ್ಯದಲ್ಲಿ ಇನ್ನೂ ಕೆಲವು ಮಾತುಗಳು ಸಂದಿಗ್ಧವಾಗಿವೆ. ಅವುಗಳನ್ನು ಸ್ಪಷ್ಟಗೊಳಿಸಲು ಪ್ರಯತ್ನಿಸುವೆ. ಮುಖ್ಯವಾಗಿ ಗಹನವಾದ ಒಂದು ಬೃಹತ್ ಪದ 'ಕುಮಾರಲೋಧ್ರಸಮರ'. ಇದರ ಅಭಿಪ್ರಾಯವೇನು?

'ಕುಮಾರ' ಎಂದರೆ ರಾಜಕುಮಾರ. ಪಟ್ಟವೇರದ ರಾಜಪುತ್ರನನ್ನು ಸಂಕ್ಷೇಪವಾಗಿ ಕುಮಾರ ಎಂದು ಕರೆಯುವ ವಾಡಿಕೆ ಆ ಕಾಲದಲ್ಲಿ ಇದ್ದಿತು. ಈ ಕುಮಾರನಾದರೋ, ಅದೇ ಆ ಚಾಲುಕ್ಯ ರಾಜಪುತ್ರ ಇಮ್ಮಡಿ ತೈಲಪ. ಆತನಿಗೆ ಇನ್ನೂ ರಾಜಪದವಿ ಬಂದಿರಲಿಲ್ಲ. ಅದಾಗ ಆತನು ಚಾಲುಕ್ಯರ ಸ್ವತಂತ್ರ ರಾಜ್ಯಸ್ಥಾಪನೆಯ ಉದ್ಯೋಗವನ್ನು ಆರಂಭಿಸಿದ ಕಾಲ.

'ಲೋಧ್ರ' ಎಂಬುದು ವನಸ್ಪತಿ ವಿಶೇಷ, ಇಪ್ಪೆ. ಅದರ ಹೂವಿನ ಬಣ್ಣ ಕೆಂಪು. ಬಿಳಿ ಹೂವಿನ ಜಾತಿಯೂ ಇದೆ; ಅದು ಇಲ್ಲಿ ಅಭಿಪ್ರೇತವಲ್ಲ. ಇಂತು 'ಲೋಧ್ರಸಮರ' ಎಂದರೆ ರಕ್ತ ಸಂಗ್ರಾಮ, ಭೀಕರಕಾಳಗ; Sanguinary war ಎಂದ ಹಾಗೆ. 'ಕುಮಾರ ಲೋಧ್ರ' ಎಂಬುದು ಸ್ಥಳನಾಮವಾಗಿರಲಾರದು; ಏಕೆಂದರೆ ಇದು ಚೋದ್ಯವಾದ ಹೆಸರು.

ತೈಲಪನು ಸ್ವರಾಜ್ಯದ ಆಕಾಂಕ್ಷೆಯಿಂದ ತನ್ನ ಪಕ್ಷವನ್ನು ಬಲಗೊಳಿಸಲು ತೊಡಗಿದ ಪೂರ್ವದೆಸೆಯಲ್ಲಿ ಆತನ ವಲಯವನ್ನು ಸೇರಿದ ಮೊದಲಿಗರಲ್ಲಿ ಮಲ್ಲಪನು ಒಬ್ಬನು. ಈತನು ಜನಸಮುದಾಯದ ಮುಂದೆ ಪ್ರತಿಜ್ಞೆಗೈದು, ತನ್ನ ಉದ್ದೇಶವನ್ನು ಬಹಿರಂಗಪಡಿಸಿ ಆಯುಧಗಳ ಸಾಮರ್ಥ್ಯವನ್ನು ಪ್ರಕಟಿಸಿದನು. ತನ್ನ ಸಂಕಲ್ಪದಿಂದ ವಿಚಲಿತನಾಗದೆ, ಪ್ರಭುನಿಷ್ಠೆಯನ್ನು ಮುಂದುವರಿಸಿ, ಅನೇಕ ಸಂಗ್ರಾಮಗಳಲ್ಲಿ ಹೋರಾಡಿ ತೈಲಪನಿಗೆ ಜಯವನ್ನು ಸಂಪಾದಿಸಿ ಕೊಟ್ಟನು. ಇಂತು ಆ ಚಕ್ರವರ್ತಿಯ ಪ್ರೀತಿಪಾತ್ರನಾದನು. ಇದು ಆ ಪದ್ಯದ ಧ್ವನಿ.[1]

ಈ ಉದಾಹೃತ ಪದ್ಯದಲ್ಲಿ ಬರುವ "ಜಯಂ ಪಡೆವೆಂ, ನುಡಿದೆಂ ಕೇಳ್ದಿರಿಮೆಂದು ಮುನ್ನ ಋಷಿ ತತ್ತದ್ವಿದ್ಯನಾಚಾರದೊಳ್ ಗುಡಿಯಂ ಕಟ್ಟಿ . . . . ಬಲ್ಮೆ ನೇರ್ಪಡೆ" ಎಂಬೀ ಮಾತುಗಳನ್ನು ಆಲೋಚಿಸುವಾಗ ಮಲ್ಲಪನು ತೈಲಪನ ಅಂಕಕಾರನಾಗಿರಬೇಕೆಂಬ ಭಾವ ನನ್ನಲ್ಲಿ ಮೂಡಿತು. ಹಾಗೆ ಸ್ಪಷ್ಟವಾಗಿ ಹೇಳದೆ ಇದ್ದರೂ ಈ ವರ್ಣನೆಯಿಂದ ಊಹಿಸಲು ಅವಕಾಶವಿದೆ.

ಆ ಕಾಲದಲ್ಲಿ ಅಂಕಕಾರನ ಪದವಿ ದೊಡ್ಡದು. ಆತನೊಬ್ಬ ಮಹಾವೀರ; ಆಜನ್ಮ ಸ್ವಾಮಿನಿಷ್ಠೆಯಿಂದ ಬಾಳಿ, ವೀರತನದಲ್ಲಿ ಜೀವಿಸಿ, ವೀರಸ್ವರ್ಗವೇರಲು ಪ್ರತಿಜ್ಞಾಬದ್ಧನಾದ ಏಕಾಂಗ ತ್ಯಾಗಿ. ಅಂಕಕಾರನ ಒಡೆಯನಿಗೆ ತೆತ್ತಿಗ ಎಂಬ ಹೆಸರು ಇದ್ದಿತು. ಇಂತಹ ಇನ್ನೂ ಕೆಲವು ವೀರಸಂಪ್ರದಾಯದ ಜನವರ್ಗಗಳು ಹಿಂದೆ ನಮ್ಮ ನಾಡಿನಲ್ಲಿ ಊರ್ಜಿತವಾಗಿದ್ದುವು. ಈ ವರ್ಗಕ್ಕೆ ಸೇರತಕ್ಕವರು ಲೆಂಕರು ಮತ್ತು ಗರುಡರು.

---

[1] ಮೇಲ್ಕಂಡ ಪದ್ಯದ ಒಂದನೆಯ ಪಾದದ ವಿಚಾರದಲ್ಲಿ ಒಂದು ಮಾತು. ಇದರ ಭಾವ ಸ್ಪಷ್ಟವಾಗಿಲ್ಲ. "ಒಂದೇ ಬಾಣ ಪ್ರಯೋಗದಿಂದ (ಏಸಿನ್) ಒಬ್ಬ ಮಗನನ್ನು ಪಡೆವೆನು. ಪಡೆವನು; ಜಯವಾಗುವುದು (ಜಯಂ ಅಕ್ಕುಂ)" ಎಂಬ ತಾತ್ಪರ್ಯವನ್ನು ಮಿತ್ರರೊಬ್ಬರು ಸೂಚಿಸಿರುವರು ಈ ಕುರಿತು ಬರುವ ಶಂಕೆ ಹೀಗೆ. ಬಾಣ ಪ್ರಯೋಗಕ್ಕೂ ಪುತ್ರಲಾಭಕ್ಕೂ ಸಂಬಂಧವೇನು? ಆಮೇಲೆ, ಜಯವಾಗುವುದು ಹೇಗೆ? "ಒಂದೇ ಬಾಣಪ್ರಯೋಗದಿಂದ ಪುತ್ರನನ್ನು ಜಯವನ್ನು ಪಡೆವೆ" ಎಂದರೂ ಕಷ್ಟ. ನನಗೆ ತೋರುವಂತೆ ಇಲ್ಲಿ ವಾಚ್ಯಾರ್ಥಕ್ಕಿಂತ ಲಕ್ಷಣಾರ್ಥವೆ ಮುಖ್ಯವಾಗಿದೆ. ಒಂದೇ ಬಾಣಪ್ರಯೋಗದಿಂದ ಎಂದರೆ "ಒಂದೇ ಬಾರಿಗೆ ಸರ್ವಸಾಮರ್ಥ್ಯವನ್ನು ಪ್ರಕಟಿಸಿ" (ರೂಢಿಯ ಮಾತಿನಲ್ಲಿ 'ಒಂದೆ ಹೊಡೆತಕ್ಕೆ' ಎಂದ ಹಾಗೆ). ಇಲ್ಲಿಯ ಪುತ್ರನು ಭೌತಿಕ ಪುತ್ರನಲ್ಲ. ವಿಜಯನೆಂಬ ಪುತ್ರ. ಮೊದಲು ಪುತ್ರನೆಂದು ಹೇಳಿ ಅನಂತರ ಆ ಮಾತನ್ನು ಜಯವೆಂದು ಸ್ಪಷ್ಟೀಕರಿಸಿದೆ. ಒಮ್ಮೆ ಅನಿಸುವದು, 'ಸನಕ್ಕುಂ ಎಂಬ ಸ್ಥಳದಲ್ಲಿ 'ದಿನಕ್ಕುಂ' ಎಂದಿದ್ದರೆ ಚೆನ್ನಾಗುತ್ತಿತ್ತೆ? ಹಾಗಾದರೆ. "ಒಂದೆ ದಿನದ ಯುದ್ಧದಲ್ಲಿ ಜಯವನ್ನು ಪಡೆಯುವೆ, ಅದೊಂದು ಪುತ್ರಲಾಭ" ಎಂಬ ಧ್ವನಿ ಹೊರಡುತ್ತದೆ; 'ಪಡೆನೆಂ' ಎಂಬ ಪದದಿಂದ ಕೊನೆಗೊಳ್ಳುವ ಎರಡು ಸಮತೂಕದ ವಾಕ್ಯಗಳು ಸಿಕ್ಕುತ್ತವೆ.

ಅಂಕ ಎಂಬುದು ಅಂಕಕಾರನ ಸಂಕ್ಷಿಪ್ತರೂಪ. ಅಂಕಕಾರನ ಪ್ರತಿಜ್ಞೆಗೂ 'ಅಂಕ' ಎನ್ನುತ್ತಿದ್ದರು. ಈ ಪದಗಳು ಮತ್ತು ಈ ಸಂಪ್ರದಾಯ ತಮಿಳಿನಲ್ಲಿಯೂ ಆಂಧ್ರ ಮತ್ತು ಓಡಿಸ್ಸ ಪ್ರಾಂತಗಲ್ಲಿಯೂ ಬಳಕೆಯಲ್ಲಿದ್ದಂತೆ ನಿದರ್ಶನಗಳು ಸಿಕ್ಕುತ್ತವೆ. ತಮಿಳುನಾಡಿನಲ್ಲಿ ೧೨ ನೆಯ ಶತಮಾನದಲ್ಲಿ ಬಾಳಿದ ಒಬ್ಬ ದಂಡನಾಯಕನ ಹೆಸರು 'ಅಣಿಯಂಕ' ಎಂದಿತ್ತು. ಕಲಿಂಗದೇಶದ ಗಂಗವಂಶದ ರಾಜರಲ್ಲಿ 'ಅಣಿಯಂಕಭೀಮ' ಎಂಬ ಬಿರುದು ಪ್ರಿಯವಾಗಿದ್ದಿತು.

ಅಂಕಕಾರ ಸಂಪ್ರದಾಯದ ವಿಚಾರದಲ್ಲಿ ಈ ಮುಂದಿನ ಬಸವೇಶ್ವರ ವಚನಗಳಿಂದ ಕೆಲವು ಅಂಶಗಳನ್ನು ಗ್ರಹಿಸಬಹುದು. 'ಅಜಿತಪುರಾಣ'ದಿಂದ ಮೇಲೆ ಉದಾಹರಿಸಿದ ಮಾತುಗಳನ್ನು ಈ ವಚನಗಳೊಂದಿಗೆ ಹೋಲಿಸಿ ನೋಡಬಹುದು. ಈ ವಚನಗಳಲ್ಲಿ ಬಸವಣ್ಣನು ಕೂಡಲ ಸಂಗಮೇಶ್ವರನೇ ತನ್ನ ತೆತ್ತಿಗನಾಗಿ ನಚ್ಚಿದ ಸ್ವಾಮಿಯೆಂದು, ತಾನು ಆತನ ಸೇವೆಗೆ ತನ್ನ ಜೀವನವನ್ನು ಮುಡಿಪಾಗಿ ಧಾರೆಯೆರೆದ ಅಂಕಕಾರನೆಂದು, ಅಭಿಪ್ರಾಯವಿಟ್ಟುಕೊಂಡು ಮಾತನಾಡುತ್ತಿರುವನು.

ಆಲುತ್ತಲು ಹಱೆಯ ಹೊಯಿಸಿ ಅಂಕವ ಮಾಡಿದೆನೆಲ್ಲರ ಕಂಡು!
ಆನು ಬೇಡೆಂದರೂ ಮಾಣೆ, ಕಲಿತನವ ಮಾಡಿದೆನೆಲ್ಲರ ಕಂಡು!
ಅಲ್ಲಿ ಹೋಯಿತ್ತು ಗಳೆಯೆಂದರೆ
ಆಸೆ ಮಾಡೆನು, ಕೂಡಲ ಸಂಗಮದೇವಾ (ಬಸವನಾಳ ಸಂಪಾದಿತ, ಅಂಕ ೪೩೬)

ಕರ್ಮವೆಂಬ ಅಂಕದೊಡನೆ ತೊಡರಿದೆ;
ಬಿನ್ನಪವನವಧಾರು, ನಿಮ್ಮಾಳಿನ ಭಾಷೆಯ:
"ಕಡೆಗಳಕ್ಕೆ ನೂಂಕುವೆ, ಕೆಡಹುವೆನಂಕವ,
ಕರೆದರೋ ಎನಿಸಿದರೆ ನಿಮ್ಮಾಳಲ್ಲಾ"
ಶಿವಶರಣೆಂಬ ದಂಡೆಯ ಹೂಡಿ
ಗಣಮೇಳಾಪವೆಂಬಲಗಿನಿಂದಿಱಿವೆ,
ಕೂಡಲ ಸಂಗಮದೇವಾ[2] (ಅದೇ. ಅಂಕ ೬೯೯)

## ಕರ್ಕರ—ರಣಸ್ತಂಭ

ತೈಲಪನು ರಾಷ್ಟ್ರಕೂಟ ದೊರೆಗಳನ್ನು ಅಧಿಕಾರದಿಂದ ತೊಲಗಿಸಿ ಚಾಲುಕ್ಯರ ಆಧಿಪತ್ಯವನ್ನು ಪುನಃ ಪ್ರಸ್ಥಾಪಿಸಿದನು. ಆತನೀ ಭಗೀರಥ ಕೃತ್ಯವು ಚಾಲುಕ್ಯರ ಅನೇಕ ಶಾಸನಗಳಲ್ಲಿ ಸ್ತುತಿಯ ವಿಷಯವಾಗಿದೆ. ಈ ಘಟನೆಯನ್ನು ಕೆಲವು ವಿವರಗಳೊಂದಿಗೆ ವರ್ಣಿಸುವ ಶಾಸನಗಳಲ್ಲಿ ಮೊದಲಿನದು ಕೌಥೆಂ ತಾಮ್ರಶಾಸನ[3]. ಈ ತಾಮ್ರಶಾಸನದಲ್ಲಿ ಈ ಸಂದರ್ಭವನ್ನು ಹೀಗೆ ಪ್ರಶಂಸಿಸಿದೆ.

ಕಿಂಚ ರಾಷ್ಟ್ರಕೂಟಕುಲರಾಜ್ಯ ಸಂಬದ್ಧಾವುಭೌ |
ಔರ್ಜಿತ್ಯಾಚ್ಚ ರಣಾವಿವ ಪ್ರಚಲಿತೌ ಸಾಕ್ಷಾತ್ ಕಲೇಃ ಕ್ರಾಮತಃ |
ಕ್ರೂರೌ ಬದ್ಧಶರೀರಕೌ ಗುರುಜನದ್ರೋಹಪ್ರರೋಹಾವಿವ ||
ಕಾಲಾತ್ ಖಂಡಿತರಾಷ್ಟ್ರಕೂಟಕಕುಲಶ್ರೀವಲ್ಲಿಜಾತಾಂಕುರೌ |
ಲೂನೌ ಯೇನ ಸುಖೇನ ಕರ್ಕರರಣಸ್ತಂಭೌ ರಣಪ್ರಾಂಗಣೇ ||

---

[2] ಈ ವಚನಗಳ ಪಾಠದ ಬಗೆಗೆ ಒಂದು ಮಾತು. ಒಂದನೆಯ ವಚನದಲ್ಲಿ 'ಗಳೆ' ಎಂಬ ಸ್ಥಳದಲ್ಲಿ 'ಗಳ' (=ಗಡ) ಎಂದು ಮೂಲಪಾಠ ಇರಬಹುದೇ? ಕೊನೆಯ ಎರಡು ಪಂಕ್ತಿಯ ಅರ್ಥ ಸ್ಪಷ್ಟವಿಲ್ಲ. ಎರಡನೆಯ ವಚನದ ನಾಲ್ಕನೆಯ ಪಂಕ್ತಿ ಹಳಕಟ್ಟಿಯವರ ಪಾಠದಂತೆ 'ಕರೆದೊಡೋಸರಿಸಿದರೆ ನಿಮ್ಮಾಳಲ್ಲ' ಎಂದಿದೆ. ಇದು ನನಗೆ ಸಮರ್ಪಕವಾಗಿ ತೋರುತ್ತದೆ. ಬಸವನಾಳರ ೭೮೦ ಅಂಕದ ವಚನದಲ್ಲಿ ಬರುವ 'ಮುಟ್ಟಿ ಬಂದಿಱಿದರೆ ಓಸರಿಸುವನಲ್ಲ' ಎಂಬ ವಾಕ್ಯವನ್ನು ಹೋಲಿಸಿ ನೋಡಬಹುದು. ಎರಡೂ ಒಂದೇ ಸಂದರ್ಭದಲ್ಲಿ ಬರುವ ಮಾತುಗಳು. [3] *Ind. Ant.*, Vol. XVI, pp. 21 ff.

ಈ ಪದ್ಯದಲ್ಲಿ ಉಕ್ತನಾದ ಕರ್ಕರನು ರಾಷ್ಟ್ರಕೂಟ ಕೊನೆಯರಾಜ (೯೭೨-೭೩). ಈತನನ್ನು ಎರಡನೆಯ ಕರ್ಕರಾಜನೆಂದು ಇತಿಹಾಸಕಾರರು ಗುರುತಿಸುವರು. ಕಕ್ಕಲ ಎಂಬುದು ಈ ಹೆಸರಿನ ಇನ್ನೊಂದು ರೂಪ. ಸಮರಾಂಗಣದಲ್ಲಿ ಈ ಕಕ್ಕಲನ ಎರಡು ರಣಸ್ತಂಭಗಳನ್ನು ತೈಲಪನು ತುಂಡರಿಸಿದನೆಂದು ಈ ಪದ್ಯವು ಹೇಳುತ್ತದೆ. ಈ ರಣಸ್ತಂಭಗಳ ವರ್ಣನೆಯೂ ಇಲ್ಲಿ ಬರುತ್ತದೆ.

ಆದರೆ ಈ ಪದ್ಯದಲ್ಲಿ ಬರುವ 'ಕರ್ಕರ ರಣಸ್ತಂಭೌ' ಎಂಬ ಪದವನ್ನು ಯಥಾರ್ಥವಾಗಿ ಗ್ರಹಿಸದ ಕಾರಣದಿಂದ ಅನ್ವೇಷಕರು ಭ್ರಮಿಸಿದ್ದಾರೆ. ಏನೇನೋ ಅಭಿಪ್ರಾಯವನ್ನು ಕಲ್ಪಿಸಿಕೊಂಡು ವಿವರಣೆ ಮಾಡಿದ್ದಾರೆ. ಫ್ಲೀಟನು ಕರ್ಕರ ಮತ್ತು ರಣಸ್ತಂಭ ಎಂಬ ಹೆಸರಿನ ಎರಡು ವ್ಯಕ್ತಿಗಳನ್ನು ಮೊದಲುಬಾರಿ ಸೂಚಿಸಿದನು[4]. ಬಳಿಕ ರಣಸ್ತಂಭವೆಂದರೆ, ಕೀರ್ತಿಸ್ತಂಭ ಅಥವಾ ಜಯಸ್ತಂಭ ಎಂಬ ಅಭಿಪ್ರಾಯವನ್ನು ಇಟ್ಟುಕೊಂಡು ಯುದ್ಧರಂಗದಲ್ಲಿ ಸ್ಥಾಪಿಸಲಾಗಿದ್ದ ರಾಷ್ಟ್ರಕೂಟರ ಇಂಥ ಎರಡು ಕಂಬಗಳನ್ನು ಹೊಡೆದು ಕೆಡಹಿದನೆಂದು ಪ್ರತಿಪಾದಿಸಿದನು.[5] ಮಾತ್ರವಲ್ಲದೆ ಈ ಪ್ರತಿಪಾದನೆಯನ್ನು ಬೇರೆ ರಾಜರು ಸ್ಥಾಪಿಸಿದ್ದ ಇಂಥ ಸ್ತಂಭಗಳ ಉದಾಹರಣೆಯಿಂದ ಸಮರ್ಥಿಸಿದನು.

ಬಳಿಕ ಫ್ಲೀಟನು ಇಂತಹ ಇನ್ನೊಂದು ಸಂದರ್ಭವನ್ನು ಇದಿರಿಸಬೇಕಾಯಿತು. ಆತನು ಸಂಪಾದಿಸಿದ ಮಸಗೋಳಿಯ ಶಾಸನದಲ್ಲಿ[6] ತೈಲಪನನ್ನು ವರ್ಣಿಸುವ ಪದ್ಯ ಹೀಗಿದೆ.

ಪರಿಯಿಟ್ಟೇಕಾಂಗವೀರಂ ಮಸಗಿದ ಜವನಂ ಪೋಲ್ತು ತದ್ರಾಷ್ಟ್ರಕೂಟಾಂ
ಬರ ಭಾಸ್ವಚ್ಚಂದ್ರರಂ ಕಕ್ಕರನೃಪ ರಣಕಂಭಾವನೀಪಾಳರಂ ಸಂ-|
ಹರಿಸುತ್ತಂ ಜೇಯ ಬಾಪ್ಪೆಂಬಿನಮುವನಿತಳಂ ಕುಂತಳೋರ್ವೀಯಶೋಭಾ
ಸುರ ರಾಜ್ಯಶ್ರೀಯನತ್ಯಾಯತಿಯೊಳ ತಳೆದಂ ಲೀಲೆಯಿಂ ತೈಲರಾಜ ||

ಇದರಲ್ಲಿ ಬರುವ ಪೂರ್ವ ಸಂದರ್ಭೋಚಿತ ಭಾಗವನ್ನು "ಕಕ್ಕರನ ಕಂಬಗಳಾದ ರಾಜರನ್ನು ತೈಲಪನು ಸಮರದಲ್ಲಿ ಸಂಹರಿಸಿದನು (annihilated those kings, the pillars of Kakkara in war)" ಎಂದು ಫ್ಲೀಟನು ಅನುವಾದಿಸಿದನು.

ಈ ಅಭಿಪ್ರಾಯ ತನ್ನ ಹಿಂದಿನ ಅಭಿಪ್ರಾಯಕ್ಕೆ ವಿರುದ್ಧವಾಗಿದ್ದ ವಿಷಯವು ಅನಂತರ ಫ್ಲೀಟನ ಲಕ್ಷ್ಯಕ್ಕೆ ಬಂದು ಆತನು ಕೀಲಹಾರ್ನನೊಡನೆ ಅದನ್ನು ಚರ್ಚಿಸಿದನು. ಕೀಲಹಾರ್ನನ ಮಾತಿನಂತೆ ತನ್ನ ಅಭಿಪ್ರಾಯವನ್ನು ಮತ್ತೆ ತಿದ್ದಿಕೊಂಡು ಫ್ಲೀಟನು ಆ ವಾಕ್ಯವನ್ನು "ತೈಲಪನು ಕಕ್ಕರ ರಾಜನನ್ನು ಹಾಗೂ ರಣಸ್ತಂಭರಾಜನನ್ನು ಸಂಹರಿಸಿದನು" ಎಂದು ಅನುವಾದಿಸಿದನು.[7] ಅಡ್ಡದಾರಿ ಹಿಡಿದವನ ಪಾಲಿಗೆ ಕಲ್ಲು ಮುಳ್ಳು ಎನ್ನುವಂತೆ, ಫ್ಲೀಟನು ತಾನು ನಿರ್ಮಿಸಿದ ರಣಸ್ತಂಭರಾಜನನ್ನು ಜಯಪುರಪ್ರದೇಶದ ರಣಥಂಭೋರ ನಗರದೊಡನೆ ತಳಕುಹಾಕಲು ಪ್ರಯತ್ನಿಸಿದನು.

ಮುಂದೆ ಇಂತಹದೇ ಸಂದರ್ಭದಲ್ಲಿ ಹೆಚ್ಚು ವಿಚಾರಮಾಡದೆ ಫ್ಲೀಟ್ ಮತ್ತು ಕೀಲಹಾರ್ನರ ಅಭಿಪ್ರಾಯವನ್ನು ಬಾರ್ನೆಟ್ ಅನುಮೋದಿಸಿದನು.[8]

ಪಂಡಿತರಲ್ಲಿಯೂ ಒಂದೊಂದು ಸಲ ಅಂಧಾನುಸರಣ ಹೇಗೆ ನಡೆಯುತ್ತದೆ ಎಂಬುದಕ್ಕೆ ಇದೊಂದು ನಿದರ್ಶನ. ಗೊಂದಲಕ್ಕೆ ಎಡೆಕೊಡದೆ ಮೇಲೆ ಉದಾಹರಿಸಿದ ಕೌಠೆಂ ಶಾಸನದಲ್ಲಿನ ಪದ್ಯವನ್ನು ಶಾಂತವಾಗಿ ಓದಿದರೆ, ಅದರ ಭಾವ ಸರಲವಾಗಿ ಸ್ಪಷ್ಟವಾಗುತ್ತದೆ. ತೈಲಪನು ರಣಾಂಗಣದಲ್ಲಿ ಕರ್ಕರಾಜನ ಸಹಾಯಕ್ಕಾಗಿ ನಿಂತು ಆತನ ಆಧಾರಸ್ತಂಭದಂತಿದ್ದ ರಾಷ್ಟ್ರ

---

[4] Ibid., Vol. VIII p. 16. [5] *Bombay Gazetteer*, vol. I, Part II, p. 426 and note 2. [6] *Ep. Ind.* Vol. V, p. 16 and 20. [7] Ibid., Vol. VI, Addenda and corrigenda. [8] Ibid., Vol. XII, p. 144.

ಕೂಟ ಕುಲದ ಇಬ್ಬರು ಸೇನಾನಾಯಕರನ್ನು ಸಂಹರಿಸಿದನು ಎಂಬುದು ಅದರ ತಾತ್ಪರ್ಯ. ಈ ಸೇನಾನಾಯಕರು ಯಾರು ಎಂಬ ವಿಷಯ ಅಜ್ಞಾತವಾಗಿಯೇ ಉಳಿಯಬೇಕಾಗಿದೆ. "ಗುರುಜನದ್ರೋಹಪ್ರರೋಹಾವಿವ ಕಾಲಾತ್ ಖಂಡಿತರಾಷ್ಟ್ರಕೂಟಕಕುಲಶ್ರೀವಲ್ಲಿ ಜಾತಾಂಕುರೌ" ಎಂಬ ವರ್ಣನೆಯಿಂದ ಅವರು ಮೂಲ ರಾಷ್ಟ್ರಕೂಟವಂಶಕ್ಕೆ ಸಂಬಂಧಿಸಿದ ರಾಜಪುತ್ರರೆಂದು, ಈ ಸಂಬಂಧವು ಕಾಲಕ್ರಮದಲ್ಲಿ ಕಡಿದುಹೋಗಿತ್ತೆಂದು, ವಂಶದ್ರೋಹಿಗಳೆಂಬ ಅಪವಾದಕ್ಕೆ ಅವರು ಗುರಿಯಾಗಿದ್ದರೆಂದು, ಮುಂತಾದ ಮಾತುಗಳು ಅಸ್ಫುಟವಾಗಿ ಸೂಚಿತವಾಗುತ್ತವೆ. ಕೌಠೆಂ ಶಾಸನಕಾಲದಲ್ಲಿ (ಕ್ರಿ.ಶ. ೧೦೦೯) ಇಬ್ಬರಾಗಿದ್ದ ಈ ರಾಷ್ಟ್ರಕೂಟ ಸೇನಾನಾಯಕರು ಮನಗೋಳಿ ಶಾಸನದ ಸಮಯದಲ್ಲಿ (ಕ್ರಿ. ಶ. ೧೧೬೧) ಹಲವು ನರಪತಿಗಳಾಗಿ ಮಾರ್ಪಟ್ಟಿದ್ದ (ಉದಾಹರಿಸಿದ ಪದ್ಯವನ್ನು ನೋಡಿ) ಮನೋರಂಜಕ ಸಂಗತಿಯನ್ನು ನಾವು ಲಕ್ಷಿಸಬೇಕು.

"ಕರ್ಕರರಣಸ್ತಂಭೌ" ಎಂಬೀ ಪದದ ಯಥಾರ್ಥ ಅಭಿಪ್ರಾಯವನ್ನು ಮೊದಲು ಬಾರಿ ಗ್ರಹಿಸಿದವರು ಡಾ. ಅಳ್ತೇಕರ. ಇವರು ಈ ಪದಕ್ಕೆ ಕರ್ಕರನ ಸಹಾಯಕರಾದ ಇಬ್ಬರು ಸೇನಾಪತಿಗಳೆಂಬ ಸರಿಯಾದ ಅರ್ಥವನ್ನು ಮಾಡಿದ್ದಾರೆ[9]. ಆದರೆ ಈ ವಿಚಾರದ ಕುರಿತು ಹೆಚ್ಚಿನ ಜಿಜ್ಞಾಸೆಯನ್ನು ಮುಂದುವರಿಸಿ ಪೂರ್ವಪಂಡಿತರ ಅಭಿಪ್ರಾಯಗಳ ಅಸಮರ್ಪಕತೆಯನ್ನು ತೋರಿಸಿಕೊಟ್ಟಿಲ್ಲ. ವಿಷಯ ಸ್ಪಷ್ಟನೆಯ ದೃಷ್ಟಿಯಿಂದ ಹೀಗೆಮಾಡುವುದು ಆವಶ್ಯಕ. ಇಂತಹ ವಿವೇಚನೆಯಿಂದ ಚರ್ಚೆಗೆ ನಿರ್ಣಾಯಕ ಸ್ವರೂಪ ಉಂಟಾಗುತ್ತದೆ. ತಪ್ಪು ಅಭಿಪ್ರಾಯಗಳು ತ್ಯಾಜ್ಯವಾಗಿ ಸತ್ಯ ಅಭಿಪ್ರಾಯವು ನಿಲ್ಲುತ್ತದೆ. ಈ ಉದ್ದೇಶದಿಂದ ಈ ಸಮಸ್ಯೆಯನ್ನು ಸಾಂಪ್ರತ ಚರ್ಚಿಸಿದ್ದೇನೆ.

**ಪಾಂಡುರಂಗರಾವ ದೇಸಾಯಿ**

---

[9] *The Rāshṭrakūṭas and Their Times*, pp. 127 and 131.

# ಕೆಲವು ಅಪೂರ್ವ ನಕ್ಷತ್ರನಾಮಗಳು

ಪುರಾತನ ಕಾಲದಿಂದ ಮಾನವಕುಲ ಕಾಲಗಣನೆಗೆ—ಪಂಚಾಂಗಕ್ಕೆ—ಚಂದ್ರಗತಿಯನ್ನು ಕೆಲವು ದೇಶಗಳಲ್ಲಿ, ಸೂರ್ಯಗತಿಯನ್ನು ಕೆಲವು ದೇಶಗಳಲ್ಲಿ, ಚಾಂದ್ರಸೌರಗತಿಗಳನ್ನು ಕೆಲವು ದೇಶಗಳಲ್ಲಿ ಉಪಯೋಗಿಸಿಕೊಳ್ಳುತ್ತ ಬಂದಿದೆ. ಚಾಂದ್ರಮಾನ ಪದ್ಧತಿಯನ್ನು ಬಳಸುತ್ತಿದ್ದ ಜನಾಂಗಗಳೆಲ್ಲ ಹುಣ್ಣಿಮೆ, ಅಮಾವಾಸ್ಯೆಗಳ ತಿಂಗಳುಗಳನ್ನೇ ಆಧಾರವಾಗಿಟ್ಟುಕೊಂಡು ಪಂಚಾಂಗಗಳನ್ನು ರಚಿಸುತ್ತಿದ್ದರು. ಆದರೆ ವೇದಗಳ ಕಾಲದ ಋಷಿಗಳು ಇತರ ಯಾವ ಜನಗಳೂ ಆಚರಣೆಗೆ ತಂದಿರದಿದ್ದ ಒಂದು ವಿಶಿಷ್ಟ ಪದ್ಧತಿಯನ್ನು—ನಕ್ಷತ್ರಮಾನದ ತಿಂಗಳನ್ನು—ಆಚರಣೆಗೆ ತಂದರು. ನಕ್ಷತ್ರಮಾನದ ತಿಂಗಳು ಎಂದರೆ ಚಂದ್ರನು ನಕ್ಷತ್ರಮಂಡಲದಲ್ಲಿ ಒಂದು ನಕ್ಷತ್ರದ ಸಮೀಪದಿಂದ ಹೊರಟು ತಿರುಗಿ ಅದೇ ನಕ್ಷತ್ರದ ಆ ಸಮೀಪಸ್ಥಾನವನ್ನೇ ಸೇರುವ ಕಾಲಾವಧಿ. ಈ ಅವಧಿ ೨೭⅓ ದಿನಗಳದು. ಆದ್ದರಿಂದ ಅವರು ಚಂದ್ರಪಥವೃತ್ತವನ್ನು ಆಕಾಶದಲ್ಲಿ ಗುರುತಿಸುವ ಸೌಕರ್ಯಕ್ಕಾಗಿ ಆ ವೃತ್ತವನ್ನು ಇಪ್ಪತ್ತೇಳು, ಇಪ್ಪತ್ತೆಂಟು ಭಾಗಗಳನ್ನಾಗಿ ಮಾಡಿ ಒಂದೊಂದು ಭಾಗದಲ್ಲಿಯೂ ಕಂಡುಬಂದ ಕಾಂತಿಯುತ ನಕ್ಷತ್ರಕ್ಕೂ ಅಥವಾ ನಕ್ಷತ್ರಪುಂಜಕ್ಕೂ ಒಂದೊಂದು ಹೆಸರನ್ನಿಟ್ಟರು. ಈ ಇಪ್ಪತ್ತೇಳು ಅಥವಾ ಇಪ್ಪತ್ತೆಂಟು ಹೆಸರುಗಳಲ್ಲಿ ಕೆಲವು ಅತ್ಯಾಶ್ಚರ್ಯಕರ ರೀತಿಯಲ್ಲಿ, ಅಲೌಕಿಕ ರೀತಿಯಲ್ಲಿ, ಅರ್ಥಗರ್ಭಿತವಾಗಿವೆ. ಅಂಥವನ್ನು ವಾಚಕರ ಮುಂದಿಡುವುದು ಈ ಪುಟ್ಟ ಲೇಖನದ ಉದ್ದೇಶ.

ಈ ಆಯ್ಕೆಯಲ್ಲಿ ಮೊದಲನೆಯದು ಜ್ಯೇಷ್ಠಾ ನಕ್ಷತ್ರ. ನಕ್ಷತ್ರಗಳ ಗಾತ್ರ, ಭಾರಗಳನ್ನು ಅಳೆಯುವುದನ್ನು ವಿಜ್ಞಾನಿಗಳು ಕಲಿತದ್ದು ಸುಮಾರು ಮೂವತ್ತು ವರ್ಷಗಳಷ್ಟೀಚೆಗೆ. ಈ ಅಳತೆಗಳಿಂದ ಜ್ಯೇಷ್ಠಾ ನಕ್ಷತ್ರ ನಮ್ಮ ಕಣ್ಣಿಗೆ ಕಾಣಿಸುವ ನಕ್ಷತ್ರಗಳಲ್ಲೆಲ್ಲ ಗಾತ್ರದಲ್ಲಿ ಅತ್ಯಂತ ದೊಡ್ಡದೆಂದು ಕಂಡುಬಂದಿದೆ. ಅದರ ವ್ಯಾಸ ಸೂರ್ಯನ ವ್ಯಾಸದ ಮುನ್ನೂರೈವತ್ತರಷ್ಟು. ಈ ನಕ್ಷತ್ರಕ್ಕೆ ಜ್ಯೇಷ್ಠಾ, ಹಿರಿಯದು ಎಂಬ ಅನ್ವರ್ಥನಾಮವನ್ನಿಟ್ಟಿರುವುದು ಅಲೌಕಿಕವಾಗಿ ಕಾಣುತ್ತದೆಯಲ್ಲವೆ, ಅದರಲ್ಲಿಯೂ ಜ್ಯೇಷ್ಠಾ ನಕ್ಷತ್ರಕ್ಕಿಂತ ಪ್ರಕಾಶಮಾನವಾಗಿ ಹೊಳೆಯುತ್ತಿರುವ ಇತರ ಅನೇಕ ನಕ್ಷತ್ರಗಳು ರಾತ್ರಿಯಾಕಾಶವನ್ನು ಬೆಳಗುತ್ತಿರುವಾಗ? ಇದು ಕಾಕತಾಳೀಯ ನ್ಯಾಯವೇಕಾಗಿರಬಾರದು ಎಂದನ್ನಿಸಬಹುದು. ಹಾಗಾಗಿರುವುದು ಅಸಾಧ್ಯವೆನ್ನಲಾಗುವುದಿಲ್ಲ. ಆದರೆ ಈ ವಿಚಾರವಾಗಿ ತೀರ್ಮಾನಕ್ಕೆ ಬರುವುದಕ್ಕೆ ಮುಂಚೆ ಇನ್ನೊಂದೆರಡು ಉದಾಹರಣೆಗಳನ್ನು ಪರ್ಯಾಲೋಚಿಸೋಣ.

ಮೂಲಾ ನಕ್ಷತ್ರ ಅಂಥ ಎರಡನೆಯ ಉದಾಹರಣೆ. ನಮಗೆ ಕಾಣಿಸುವ ನಕ್ಷತ್ರಗಳೂ, ನಮ್ಮ ಕಣ್ಣಿಗೆ ಕಾಣಿಸದೆ ದೂರದರ್ಶಿನಿಗಳಿಗೆ ಕಾಣಿಸುವ ಇತರ ಕೋಟ್ಯನುಕೋಟಿ ನಕ್ಷತ್ರಗಳೂ ಆಕಾಶಗಂಗೆಯ—ಛಾಯಾಪಥದ—ವ್ಯೂಹಕ್ಕೆ ಸೇರಿವೆ. ಆಕಾಶಗಂಗೆಯನ್ನು ಒಂದು ನಕ್ಷತ್ರನಗರ ಎಂದು ಕರೆಯಬಹುದು. ಈ ಆಕಾಶಗಂಗೆಯ ಕೇಂದ್ರ ಮೂಲಾ ನಕ್ಷತ್ರ ಸಮೀಪದ ಪ್ರಾಂತದಲ್ಲಿದೆ ಎಂದು ಈಚೆಗೆ ಗೊತ್ತಾಗಿದೆ. ನಮ್ಮ ಸೂರ್ಯನಿರುವ ನಕ್ಷತ್ರವ್ಯೂಹದ ಅಂದರೆ ನಮ್ಮ ಸ್ಥಳೀಯ ನೀಹಾರಕದ ಕೇಂದ್ರದ ದಿಕ್ಕಿನಲ್ಲಿರುವ ನಕ್ಷತ್ರಕ್ಕೇ 'ಮೂಲಾ' ಎಂದು ಹೆಸರಿಟ್ಟಿರುವುದು ಆಶ್ಚರ್ಯವಾಗಿ ಕಾಣುತ್ತದೆ. ಇಲ್ಲಿ ನಮ್ಮ ಗಮನಕ್ಕೆ ವಿಶೇಷವಾಗಿ ತಂದುಕೊಳ್ಳಬೇಕಾದ ಸಂಗತಿ ಮೂಲಾ ನಕ್ಷತ್ರ ಅಷ್ಟೇನು ಎದ್ದುಕಾಣುವ ನಕ್ಷತ್ರವಲ್ಲ ಎಂಬುದು.

ಅಭಿಜಿತ್ ಎಂಬ ಹೆಸರೂ ವಿಸ್ಮಯಕಾರಿಯಾದದ್ದೇ. ನಕ್ಷತ್ರಗಳನ್ನು ಸ್ಥಿರನಕ್ಷತ್ರಗಳೆಂದು ಕರೆಯುವುದು ವಾಡಿಕೆಯಾಗಿದೆ. ಆದರೆ ವಾಸ್ತವವಾಗಿ ಎಲ್ಲ ನಕ್ಷತ್ರಗಳಿಗೂ ಚಲನೆ ಇದ್ದೇ ಇದೆ; ಕೆಲವು ಸೆಕಂಡೊಂದಕ್ಕೆ ಹತ್ತಿಪ್ಪತ್ತು ಮೈಲಿಗಳ ವೇಗದಲ್ಲಿ ಓಡುತ್ತವೆ, ಸೆಕಂಡೊಂದಕ್ಕೆ ನೂರಿನ್ನೂರು ಮೈಲಿಗಳಂತೆ ಓಡುವ ನಕ್ಷತ್ರಗಳೂ ಇವೆ. ಆದರೆ ಸೂರ್ಯನನ್ನುಳಿದು ಮಿಕ್ಕೆಲ್ಲ ನಕ್ಷತ್ರಗಳೂ ನಮ್ಮಿಂದ ಅಗಾಧ ದೂರಗಳಲ್ಲಿರುವುದರಿಂದ ನಮಗೆ ಅವುಗಳು ಚಲನರಹಿತಗಳಾಗಿ ತೋರುತ್ತವೆ. ಹೀಗಿದ್ದರೂ ಖಗೋಳಜ್ಞರು ತುಂಬ ಶ್ರಮಪಟ್ಟು ಅನ್ವೇಷಣೆ ನಡಸಿ ಅನೇಕ ನಕ್ಷತ್ರಗಳ ಚಲನವೇಗಗಳನ್ನು ಪತ್ತೆ ಹಚ್ಚಿದ್ದಾರೆ. ಇವುಗಳನ್ನೆಲ್ಲ ಪರಿಶೀಲಿಸಿ ನಮ್ಮ ಸೂರ್ಯ ಸೆಕಂಡಿಗೆ ಸುಮಾರು ೧೨ ಮೈಲಿಗಳ ವೇಗದಲ್ಲಿ ಅಭಿಜಿತ್ ನಕ್ಷತ್ರದ ದಿಕ್ಕಿನಲ್ಲಿ ಓಡುತ್ತಿದ್ದಾನೆಂದು ತೀರ್ಮಾನಿಸಿದ್ದಾರೆ. ಸೂರ್ಯನ ವಿಜಯಯಾತ್ರಾಭಿಮುಖವಾದ ದಿಕ್ಕಿನಲ್ಲಿರುವ ನಕ್ಷತ್ರಕ್ಕೆ ಕಡೆಯ ಪಕ್ಷ ೩೦೦೦ ವರ್ಷಗಳ ಹಿಂದೆಯೇ ಅಭಿಜಿತ್ ಎಂದು ನಾಮಕರಣ ಮಾಡಿದ್ದರು ಋಗ್ವೇದದ ಋಷಿಗಳು.

ನಮಗೆ ಕಾಣುವ ನಕ್ಷತ್ರಗಳೆಲ್ಲ ಆಕಾಶಗಂಗೆಯ ವ್ಯೂಹಕ್ಕೆ ಸೇರಿವೆ ಎಂದು ಹೇಳಿದ್ದಾಗಿದೆ. ಆದರೆ ಈ ವಿಶ್ವದಲ್ಲಿ ಆಕಾಶಗಂಗೆಯೇ ಅಲ್ಲದೆ ಇತರ ಕೋಟ್ಯನುಕೋಟಿ ಇಂಥ ಆಕಾಶಗಂಗೆಗಳು–ನೀಹಾರಕಗಳು–ಇವೆ. ಒಂದೊಂದು ನೀಹಾರಕವೂ ಆಕಾಶಗಂಗೆಯಂತೆಯೇ ಹಲವು ಸಾವಿರ ಕೋಟಿ ನಕ್ಷತ್ರಗಳ ವ್ಯವಸ್ಥೆ. ನಕ್ಷತ್ರಗಳಲ್ಲಿ ಹೇಗೆ ಅನೇಕವು ಬಿಡಿ ಬಿಡಿಯಾಗಿದ್ದರೂ, ಕೆಲವು ನಕ್ಷತ್ರಗುಚ್ಛಗಳಾಗಿ–ಉದಾಹರಣೆಗೆ ಕೃತ್ತಿಕಾಗುಚ್ಛ, ರೋಹಿಣೀಗುಚ್ಛ, ಆರ್ದ್ರಾಪುಂಜದಂಥವು–ಇವೆಯೋ, ಹಾಗೆಯೇ ಈ ವಿಶ್ವದಲ್ಲಿ ಬಿಡಿ ನೀಹಾರಕಗಳೂ ಇವೆ, ನೀಹಾರಕವೃಂದಗಳೂ ಇವೆ. ನಮ್ಮ ಆಕಾಶಗಂಗೆ ಬಿಡಿ ನೀಹಾರಕವಲ್ಲ, ನೀಹಾರಕವೃಂದವೊಂದಕ್ಕೆ ಸೇರಿದೆ. ಈ ನೀಹಾರಕವೃಂದದ ಕೇಂದ್ರ ಚಿತ್ರಾ ನಕ್ಷತ್ರದ ದಿಕ್ಕಿನಲ್ಲಿದೆ ಎಂದು ಆಧುನಿಕ ಖಗೋಳಜ್ಞರು ಕೇವಲ ಒಂದೆರಡು ವರ್ಷಗಳ ಹಿಂದೆ ತೀರ್ಮಾನಕ್ಕೆ ಬಂದರು. ವಿಚಿತ್ರ ರಚನೆಯ ನೀಹಾರಕ ವೃಂದದ ಮಧ್ಯಪ್ರಾಂತಕ್ಕೆ ಪರಿಜ್ಞಾನ ಪೂರ್ವಕವಾಗಿಯೇ ಚಿತ್ರಾ ಎಂದು ಹೆಸರಿಟ್ಟರೆಂದು ಹೇಳುವುದು ಅತಿಯಾಗಿ ಕಂಡೀತು. ಅಂತೂ ಆ ಕೇಂದ್ರದ ದಿಕ್ಕಿನಲ್ಲಿರುವ ನಕ್ಷತ್ರಕ್ಕೆ ನಮ್ಮ ಪೂರ್ವಿಕರಿಟ್ಟಿರುವ ಹೆಸರು ಚಿತ್ರಾ.

ಈಗ ಎತ್ತಿಕೊಳ್ಳಲಿರುವ ಎರಡು ಹೆಸರುಗಳನ್ನು ಅಪೂರ್ವವಾದದ್ದೆಂದು ಕರೆಯುವುದಕ್ಕಾಗುವುದಿಲ್ಲವಾದರೂ ಅವೂ ಅರ್ಥಗರ್ಭಿತವಾದವೇ. ಅವುಗಳಲ್ಲಿ ಒಂದು ವಿಶಾಖಾ ನಕ್ಷತ್ರ. ವಿಶಾಖಾ ಎಂದರೆ ಕವಲುಗಳಾಗಿ ಒಡೆಯುವುದು ಎಂದರ್ಥ. ಸುಮಾರು ಮೂರು ಸಾವಿರ ವರ್ಷಗಳ ಹಿಂದೆ ವಿಷುವದ್ವೃತ್ತವೂ, ಕ್ರಾಂತಿವೃತ್ತವೂ (ಆಕಾಶದಲ್ಲಿ ಸೂರ್ಯಪಥವೃತ್ತ) ವಿಶಾಖಾ ನಕ್ಷತ್ರಸ್ಥಾನದಲ್ಲಿ ಸಂಧಿಸುತ್ತಿದ್ದುವು; ಅಂದರೆ ಈ ನಕ್ಷತ್ರದ ಹತ್ತಿರ ಆ ವೃತ್ತಗಳು ಶಾಖೆಗಳಾಗಿ ಕವಲೊಡೆಯುತ್ತಿದ್ದುವು.

ವಿಷುವದ್ವೃತ್ತ ಕ್ರಾಂತಿವೃತ್ತಗಳು ವಿಶಾಖೆಯ ಹತ್ತಿರ ಸಂಧಿಸಿದರೆ, ಅದಕ್ಕೆ ಸರಿಯಾಗಿ ಎದುರಾಗಿ ಮತ್ತೊಂದು ಬಿಂದುವಿನಲ್ಲಿಯೂ ತಿರುಗಿ ಸಂಧಿಸಲೇಬೇಕಲ್ಲವೆ? ಹೀಗೆ ಇನ್ನೊಂದು ಕಡೆ ಕವಲೊಡೆಯುವ ಪ್ರಾಂತದಲ್ಲಿರುವ ನಕ್ಷತ್ರಗುಚ್ಛದ ಹೆಸರು ಕೃತ್ತಿಕಾ. ಕೃತ್ತ, ಕೃತ್ತಿಕಾ ಎಂಬ ಪದಗಳಿಗೆ ಕತ್ತರಿಸಿದ, ಕತ್ತಿ ಎಂಬ ಅರ್ಥಗಳಿವೆ.

ಇಲ್ಲಿ ಪರಿಶೀಲನೆಗೆ ತೆಗೆದುಕೊಳ್ಳಬೇಕೆಂದಿರುವ ಕಡೆಯ ಉದಾಹರಣೆ ನಕ್ಷತ್ರನಾಮವಲ್ಲ, ಗ್ರಹನಾಮ. ಆದರೆ ಗ್ರಹಗಳೂ ಆಕಾಶಕಾಯಗಳೇ ಆಗಿರುವುದರಿಂದಲೂ, ಹೆಸರು ಅಷ್ಟೇ ಅಪೂರ್ವವಾಗಿ ಕಾಣುವುದರಿಂದಲೂ, ಈ ಉದಾಹರಣೆ ಅನುಚಿತವಾಗಲಾರದೆಂದೆಣಿಸಿದೆ.

ಸೂರ್ಯನ ಪರಿವಾರಕ್ಕೆ ಸೇರಿರುವ ಗ್ರಹೋಪಗ್ರಹಗಳಲ್ಲೆಲ್ಲ ಗುರುವಿನದು ಗಾತ್ರದಲ್ಲಿಯೂ, ಭಾರದಲ್ಲಿಯೂ ಪ್ರಥಮಸ್ಥಾನ. ಗುರು ಎಂಬ ಪದದ ಅರ್ಥ ಭಾರ ಎಂದು. ಗ್ರಹಗಳ ಭಾರವನ್ನು ಗುಣಿಸುವುದು ನಕ್ಷತ್ರಗಳ ಗಾತ್ರ, ಭಾರಗಳನ್ನು ಗುಣಿಸುವುದರಷ್ಟು ಸಾಹಸದ ಕೆಲಸ

ವಲ್ಲವಾದರೂ, ಈ ವಿಧಾನ ಸುಮಾರು ಇನ್ನೂರು ವರ್ಷಗಳಿಗೆ ಹಿಂದೆ ತಿಳಿದಿರಲಿಲ್ಲ. ಅದರ ಕಾಂತಿಯನ್ನು ನೋಡಿ ಗುರುವೇ ಭಾರಗ್ರಹವಿದ್ದಿರಬೇಕೆಂದು ಊಹಿಸಿರಬಹುದು ಎಂದೆನ್ನಲಾಗುವುದಿಲ್ಲ. ಏಕೆಂದರೆ ಶುಕ್ರನ ಕಾಂತಿ ಗುರುವಿನದಕ್ಕಿಂತ ಉಜ್ಜ್ವಲವಾದದ್ದು. ಅದರ ಮಂದಗತಿಯಿಂದ ಈ ಅನ್ವರ್ಥನಾಮ ಪುರಾತನರ ಮನಸ್ಸಿಗೆ ಸುಳಿದಿದ್ದಿರಬೇಕೆಂದುಕೊಳ್ಳುವುದಕ್ಕೂ ಆಗುವುದಿಲ್ಲ. ಏಕೆಂದರೆ ಶನಿಯ ಗತಿ ಗುರುವಿನದಕ್ಕಿಂತ ಮಂದ. ಆದ್ದರಿಂದ ಶನಿಯೇ ಭಾರಗ್ರಹವೆಂದು ತೀರ್ಮಾನಿಸಬೇಕಾಗಿತ್ತು. ಆದರೆ ವಸ್ತುತಃ ಅಧಿಕತಮ ಭಾರದ ಗ್ರಹಕ್ಕೇ ಗುರು ಎಂಬ ಹೆಸರನ್ನಿಟ್ಟಿದ್ದಾರೆ.

ಇಲ್ಲಿ ಆರಿಸಿಕೊಂಡಿರುವ ಆಕಾಶಕಾಯಗಳಲ್ಲಿ ಎರಡನ್ನುಳಿದು—ಕೃತ್ತಿಕಾ ವಿಶಾಖೆಗಳನ್ನುಳಿದು—ಉಳಿದವುಗಳಿಗಿಟ್ಟಿರುವ ಅನ್ವರ್ಥನಾಮಗಳು ಅಚಿಂತ್ಯವಾಗಿ ನಮಗೆ ಕಾಣುತ್ತವೆ. ಒಂದೋ ಎರಡೋ ಆಗಿದ್ದರೆ ಇದು ಆಕಸ್ಮಿಕವೆಂದು ತಳ್ಳಿಹಾಕಬಹುದಾಗಿತ್ತು. ಐದಾರು ಅಂಥ ಹೆಸರುಗಳಿರುವಾಗ, ಆ ಹೆಸರುಗಳಲ್ಲಿರುವ ಧ್ವನಿತಾರ್ಥವನ್ನು ಪ್ರತ್ಯಕ್ಷ ಪ್ರಯೋಗಗಳಿಂದಾಗಲಿ ವೀಕ್ಷಣೆಗಳಿಂದಾಗಲಿ ಅವರು ಊಹಿಸಿದರೆಂದು ಹೇಳಲಾರೆವಾಗಿರುವಾಗ, ಆ ಋಷಿಗಳು ಒಂದು ಬಗೆಯ ಅಂತಃಪ್ರಜ್ಞೆಯನ್ನು, ಒಳನೋಟವನ್ನು, ಸಾಧಿಸಿದ್ದರೆಂದು ನಾವು ಕಲ್ಪಿಸಿಕೊಳ್ಳಬೇಕಾಗುತ್ತದೆ. ಈ ಸಂದರ್ಭದಲ್ಲಿ, ಆಧುನಿಕ ಯುಗದ ಋಷಿಗಳಲ್ಲೊಬ್ಬನೆಂದು ಹೇಳಬಹುದಾದ ಐನ್‌ಸ್ಟೈನ್‌ನ ಈ ವಾಕ್ಯ ನೆನಪಿಗೆ ಬರುತ್ತದೆ:

"ಯಥಾರ್ಥವನ್ನು ಗ್ರಹಿಸುವ ಶಕ್ತಿ ಕೇವಲ ಧ್ಯಾನಕ್ಕಿದೆ ಎಂದು ನಮ್ಮ ಪುರಾತನರು ಕಂಡ ಕನಸು ಒಂದು ದೃಷ್ಟಿಯಿಂದ ಸತ್ಯ ಎಂದು ನಾನು ತಿಳಿದಿದ್ದೇನೆ."

**ಆರ್. ಎಲ್. ನರಸಿಂಹಯ್ಯ**

# ನ್ಯಾಯಾಂಗದಲ್ಲಿ ದೇಶಭಾಷೆ

ಒಂದು ಶತಮಾನಕ್ಕಿಂತಲೂ ಮಿಕ್ಕಿ ನಮ್ಮಲ್ಲಿ ಆಚರಣೆಯಲ್ಲಿರುವ ಇಂಗ್ಲಿಷ್ ಭಾಷೆಯ ಶಾಸನಗಳು ಇಂದೋ ನಾಳೆಯೋ ರಾಷ್ಟ್ರೀಯ ಮತ್ತು ಪ್ರಾದೇಶಿಕ ಭಾಷೆಗಳಿಗೆ ಭಾಷಾಂತರ ವಾಗುವುದು ಈಗಿನ ಸರ್ಕಾರಿ ಧೋರಣೆಯನ್ನು ಅನುಲಕ್ಷಿಸುವಾಗ ಅನಿವಾರ್ಯವೆಂದು ತೋರುತ್ತದೆ. ಆದರೆ ಇಂಗ್ಲಿಷ್ ಭಾಷೆಯ ಶಾಸನಗಳಿಗೆ ತಾಯಿಬೇರು ಇರುವುದು ಇಂಗ್ಲೆಂಡ್ ಮತ್ತು ರೋಮ್‌ಗಳಲ್ಲಿ. ಅವುಗಳ ಅರ್ಥಪ್ರತಿಪಾದನೆ, ವ್ಯಾಖ್ಯೆ ಮತ್ತು ನಿದರ್ಶನಗಳು ಇನ್ನು ಮೂಲತಃ ನಮ್ಮ ದೇಶಕ್ಕೆ ಸಂಬಂಧಿಸಿದವುಗಳೆನ್ನಲು ಸಾಧ್ಯವಿಲ್ಲ. ದೇಶ ಸ್ವತಂತ್ರವಾಗಿ ಹಲವು ವರ್ಷಗಳು ಕಳೆದುವು. ಆದರೆ ದೇಶದ ಶಾಸನದ ಕಟ್ಟುಕಟ್ಟಳೆಗಳು ಪರದೇಶಗಳ ವರ್ಚಸ್ಸಿನಿಂದ ಇನ್ನು ವಿರಹಿತವಾಗಿಲ್ಲ. ರಾಷ್ಟ್ರೀಯ ಪರಂಪರೆಯದೆನ್ನುವ ಶಾಸನಕ್ಷೇತ್ರವು ನಮ್ಮಲ್ಲಿ ರೂಪುಗೊಂಡಿಲ್ಲ; ಮಾತ್ರವಲ್ಲ, ಸದ್ಯಕ್ಕೆ ರೂಪುಗೊಳ್ಳುವ ಚಿಹ್ನೆಗಳೂ ತೋರುತ್ತಿಲ್ಲ. ಇತರ ವಿಷಯಗಳಲ್ಲಿ ಹೇಗಿದ್ದರೂ, ಕಾಯಿದೆಯ ವಿಷಯದಲ್ಲಿ ನಮ್ಮ ರಾಷ್ಟ್ರೀಯ ಸರ್ಕಾರವು ಬ್ರಿಟಿಷ್ ಸರ್ಕಾರದ ಅಕ್ಷರಶಃ ಉತ್ತರಾಧಿಕಾರಿಯಾಗಿದೆ ಎನ್ನುವುದರಲ್ಲಿ ಸಂದೇಹವಿಲ್ಲ.

ಇಂಗ್ಲಿಷ್ ಭಾಷೆಯಲ್ಲಿ ಬರೆಯಲ್ಪಟ್ಟಿರುವ ನಮ್ಮ ಕಾಯಿದೆಗಳ ಅನುವಾದ ಅಥವಾ ಭಾಷಾಂತರವು ಸುಲಭಸಾಧ್ಯವೆನ್ನಲಾಗುವುದಿಲ್ಲ. ಅದೂ ಪ್ರಾದೇಶಿಕ ಭಾಷೆಗಳಲ್ಲಿ ಅವುಗಳನ್ನು ಅನುವಾದ ಮಾಡುವಾಗ ಅನೇಕ ಕ್ಲಿಷ್ಟ ಸಮಸ್ಯೆಗಳು ತೋರಿಬರದಿರಲಾರವು. ಇಂಗ್ಲಿಷ್ ಭಾಷೆಯ ಕಾಯಿದೆಗಳ ಪದಗಳೆಲ್ಲ ಹೆಚ್ಚಾಗಿ ಅನೇಕಾರ್ಥವುಳ್ಳವುಗಳು. ಅವುಗಳಿಗೆ ಸರಿಸಮ ನಾದ ಪ್ರಾದೇಶಿಕ ಭಾಷೆಯ ಶಬ್ದಗಳನ್ನು ಕಂಡುಹಿಡಿಯುವುದು ಅತೀವ ಗೊಂದಲದ ಕೆಲಸ. ಬರೇ ಅನುವಾದ ಅಥವಾ ಭಾಷಾಂತರ ಹೇಗಾದರೂ ನಿಘಂಟುಗಳ ಸಹಾಯದಿಂದ ನಡೆಯ ಬಹುದು. ಆದರೆ ನ್ಯಾಯಾಲಯದಲ್ಲಿ ಅವುಗಳನ್ನು ಪ್ರತಿಪಾದಿಸುವ ಮತ್ತು ಅವುಗಳಿಗೆ ನಿದ ರ್ಶನಯುಕ್ತ ವ್ಯಾಖ್ಯೆಯನ್ನು ನೀಡುವ ವಿಧಾನವು ಕೆಲವು ವರ್ಷಗಳಮಟ್ಟಿಗಾದರೂ ವಿಶೇಷ ಪ್ರಯಾಸವನ್ನುಂಟುಮಾಡದಿರಲಿಕ್ಕಿಲ್ಲ.

ಆದರೂ ಪ್ರಾದೇಶಿಕ ಭಾಷೆಯಲ್ಲಿ ಸರ್ಕಾರಿ ವ್ಯವಹಾರ ನಡೆಸುವ ಆರಂಭದ ಪ್ರಯೋಗ ಗಳು ನಮ್ಮ ಮೈಸೂರು ರಾಜ್ಯದಲ್ಲಿ ಕೆಲವೆಡೆ ನಡೆಯತೊಡಗಿವೆ. ಸರ್ಕಾರಿ ವ್ಯವಹಾರವನ್ನು ಪ್ರಾದೇಶಿಕ ಭಾಷೆಗೆ ಪರಿವರ್ತಿಸಲು ಭಾಷಾಂತರದ ಗೊಂದಲವು ಅಷ್ಟು ವಿಶೇಷವಾಗಲಿಕ್ಕಿಲ್ಲ. ಆದರೆ ಇದರ ಹಿಂದೆಯೇ ಪ್ರಾದೇಶಿಕ ಭಾಷೆಯ ಟೈಪ್‌ರೈಟರ್‌ಗಳ ತಯಾರಿಯೂ ಹೆಚ್ಚಿನ ಪ್ರಮಾಣದಲ್ಲಿ ಆಗಬೇಕಾಗಿದೆ. ಈಗಿನ ಕಚೇರಿಗಳ ಸರ್ವತೋಮುಖವಾದ ಕೆಲಸಗಳನ್ನು ಪೂರೈಸಲು ಈ ಶೀಘ್ರಲೇಖನ, ಯಂತ್ರಲೇಖನ ಉಪಕರಣಗಳು ಅಗತ್ಯವಾದವುಗಳು. ಹೀಗೆ ಸರ್ಕಾರಿ ವ್ಯವಹಾರವನ್ನು ಪ್ರಾದೇಶಿಕ ಭಾಷೆಯಲ್ಲಿ ನಡೆಸುವ ಪರಿಸ್ಥಿತಿಯನ್ನು ನಾವು ಮುಟ್ಟಿದ ಬಳಿಕ ತಾನೇ ಕಾಯಿದೆಯ ಮತ್ತು ನ್ಯಾಯಾಲಯದ ಭಾಷೆಯ ಪರಿವರ್ತನೆಗೆ ಕೈ ಹಾಕುವುದು ಉಚಿತವಿದೆ. ಎಲ್ಲವನ್ನೂ ಒಮ್ಮೆಲೇ ಸಾಧಿಸಹೊರಟರೆ ಎಲ್ಲವೂ ಅರ್ಧಂಬರ್ಧದಲ್ಲೇ ಉಳಿದು ವ್ಯವಹಾರಕ್ಕೆ ತೊಂದರೆಯಾಗುವುದರಲ್ಲಿ ಸಂಶಯವಿಲ್ಲ.

ನ್ಯಾಯಾಲಯಕ್ಕೆ ಸಂಬಂಧಿಸಿದ ಕಾಯಿದೆ ಮತ್ತು ವಿಶಿಷ್ಟಪದಗಳನ್ನು ಕನ್ನಡಭಾಷೆಗೆ ಪರಿವರ್ತಿಸುವಾಗ ಎಷ್ಟು ಕಷ್ಟವಾಗಬಹುದೆಂಬುದನ್ನು ನಾವು 'ಕೋರ್ಟು' ಎಂಬ ಪದವನ್ನು ಪರಿಶೀಲಿಸಿದರೆ ತಿಳಿಯದಿರದು. ಕೋರ್ಟು[1] ಎಂಬ ಪದ ನಮ್ಮಲ್ಲಿ ಆಧುನಿಕ ನ್ಯಾಯಾಲಯಗಳು ಆರಂಭವಾದಂದಿನಿಂದಲೂ ಬಳಕೆಯಲ್ಲಿದೆ. ನ್ಯಾಯಾಲಯವೆಂಬುದು ಅದರ ಸರಿಯಾದ

[1]Court

11976

ಭಾಷಾಂತರವೆನ್ನಲಾಗದು. ಆದರೂ ನಮ್ಮಲ್ಲಿ ಕೋರ್ಟು ಎಂಬ ಪದವು ಅಳಿದುಹೋಗಿ ನ್ಯಾಯಾಲಯ ಎಂಬ ಪದವು ಊರ್ಜಿತಕ್ಕೆ ಬರಬೇಕಾದರೆ ಎಷ್ಟುಕಾಲ ಬೇಕಾದೀತೆಂದು ಹೇಳಲು ಸಾಧ್ಯವಿಲ್ಲ. ಉದಾಹರಣೆಗೆ ಪೋಲೀಸು ಠಾಣೆ, ಪೋಲೀಸು ಕಚೇರಿ ಮುಂತಾದ ಅನುವಾದಿತ ಪದಗಳಿಗೆ ಪೋಲೀಸು ಸ್ಟೇಶನ್ ಎಂಬ ಮೂಲಪದವನ್ನು ತೊಡೆದು ಹಾಕಲು ಈವರೆಗೆ ಸಾಧ್ಯವಾಗಿಲ್ಲ ಎಂಬುದು ಗಮನಾರ್ಹವಾಗಿದೆ.

ಇನ್ನು ವ್ಯವಹರಣೆಗಳಲ್ಲಿ ಸ್ಥೂಲವಾಗಿ 'ಸಿವಿಲ್'[2] ಮತ್ತು 'ಕ್ರಿಮಿನಲ್'[3] ಎಂಬ ಎರಡು ವರ್ಗಗಳಿವೆ. 'ಸಿವಿಲ್' ಎಂಬ ಪದದ ಅರ್ಥ ಎಲ್ಲರಿಗೂ ಇಂದು ಗೊತ್ತಿದೆ. ಆದರೆ ಕನ್ನಡದಲ್ಲಿ ಸಿವಿಲ್ ವ್ಯವಹರಣೆಗಳಿಗೆ ಯಾವ ಹೆಸರನ್ನು ಅನುವಾದದ ಮೂಲಕ ಕೊಡಬಹುದು? ಕ್ರಿಮಿನಲ್ ವ್ಯವಹರಣೆಗಳಿಗೆ ಪಾತಕ ವ್ಯವಹರಣೆಗಳೆನ್ನಲಾಗುವುದೋ ಏನೋ! ಹೀಗೆಯೇ ವ್ಯವಹರಣೆಗಳಿಗೆ ಕೆಲವು ಭಾಗಗಳಲ್ಲಿ 'ಖಟ್ಲೆ'ಗಳೆಂದೂ, ಕೆಲವು ಭಾಗಗಳಲ್ಲಿ 'ವ್ಯಾಜ್ಯ'ಗಳೆಂದೂ ಇನ್ನೂ ಕೆಲವು ಭಾಗಗಳಲ್ಲಿ 'ನಂಬ್ರ'ಗಳೆಂದೂ ಹೇಳಲಾಗುತ್ತಿದೆ. ಇವುಗಳಲ್ಲಿ ಏಕರೂಪವಾದ, ಸರ್ವಸಾಮಾನ್ಯವಾದ ಪದವನ್ನು ಹುಡುಕಿ ಅದನ್ನು ಜನಪ್ರಿಯವನ್ನಾಗಿ ಮಾಡುವುದು ಕಷ್ಟದ ಕೆಲಸ.

ಸಿವಿಲ್ ವ್ಯವಹರಣೆಗಳಲ್ಲಿ ಕೈಫೇತು ಅಥವಾ ಕೈಫಿಯತ್ತು ಎಂದು ವಿವಾದದ ದೂರಿಗೆ ಹೇಳಲಾಗುವುದು. ಹಾಗೆಯೇ 'ಒರಿಜಿನಲ್ ಸ್ಯೂಟ್'[4] ಎಂಬುದಕ್ಕೆ ಕ್ರಮವ್ಯಾಜ್ಯ ಎಂಬ ಪದ ಸಮೂಹವೂ ಬಳಕೆಯಲ್ಲಿದೆ. ಇನ್ನು ವ್ಯಾಜ್ಯದಲ್ಲಿ ಅರ್ಪಿಸಲಾಗುವ ಮನವಿಗಳಿಗೆ 'ಅರ್ಜಿ'ಗಳೆಂದು ಕರೆಯುವುದು ಸಾಮಾನ್ಯವಾಗಿದೆ. ಹಾಗೆಯೇ 'ಇನ್ಸಾಲ್ವೆನ್ಸಿ'[5] ಎಂಬ ಪದಕ್ಕೆ ದಿವಾಳಿ ಎಂಬ ಪದವೂ ಒಪ್ಪುತ್ತದೆ. 'ಎವಿಡೆನ್ಸ್'[6] ಎನ್ನುವುದಕ್ಕೆ ರುಜುವಾತು, ಪುರಾವೆ, ಪ್ರಮಾಣ ಇತ್ಯಾದಿ ಪದಗಳು ಬಳಕೆಯಲ್ಲಿವೆ. ಹೀಗೆ ಇಂದು ಉಚಿತವೆಂದು ಕಂಡುಬರುವ ಕೆಲವು ನ್ಯಾಯಾಲಯದ ಶಬ್ದಗಳ ಭಾಷಾಂತರಿತ ಪದಗಳಲ್ಲಿ ಹೆಚ್ಚಿನವು ಕನ್ನಡದ ಮೂಲದಿಂದ ಬಂದವುಗಳಲ್ಲ.

ಇನ್ನು ಕೆಲವು ಸುಲಭವಾದ ಇಂಗ್ಲಿಷ್ ಶಬ್ದಗಳಿವೆ. ಅವುಗಳು ಎಲ್ಲರಿಗೂ ಅರ್ಥವಾಗುತ್ತವೆ. ಆದರೆ ಅವುಗಳನ್ನು ರಾಜ್ಯಭಾಷೆಗೆ ಪರಿವರ್ತಿಸುವ ಕೆಲಸ ಮಾತ್ರ ಸುಲಭವಲ್ಲ. 'ನೋಟಿಸ್'[7] ಎಂದರೆ ಒಂದೋ ವಕೀಲರಿಂದ ಇಲ್ಲವೇ ನ್ಯಾಯಾಲಯದಿಂದ ಬರುವ ಪರಿಪತ್ರ. ಆದರೆ ಇದನ್ನು ಕನ್ನಡದಲ್ಲಿ ಪರಿವರ್ತಿಸಲು ಯಾರೂ ಯತ್ನಿಸಿಲ್ಲ. ಹಾಗೆ ಯತ್ನಿಸಿದರೂ ಮೂಲಪದವು ಕೊಡುವಂಥ ಅರ್ಥವನ್ನು ಅಂಥ ಭಾಷಾಂತರಿತ ಪದವು ಕೊಟ್ಟೀತೆಂದು ಹೇಳಲು ಸಾಧ್ಯವಿಲ್ಲ. ಹಾಗೆಯೇ 'ಸಮನ್ಸ್'[8] ಎನ್ನುವ ಪದಕ್ಕೆ ಸಾಮಾನ್ಯ ಅರ್ಥ ಕರೆ ಯೆಂದಿದ್ದರೂ, ಇದನ್ನು ಕೋರ್ಟಿನ ಕರೆ ಅಥವಾ ನ್ಯಾಯಾಲಯದ ಕರೆ ಎಂದು ಸಾಮಾನ್ಯ ಜನರು ಬಳಕೆಯಲ್ಲಿ ಹೇಳುವುದು ಅಸಾಧ್ಯವೆಂದು ತೋರುತ್ತದೆ. 'ಇಂಜಂಕ್ಷನ್'[9] ಎಂದರೆ ನಿರ್ಬಂಧಿಸುವುದು ಎಂಬ ಅರ್ಥವುಳ್ಳದ್ದು. ಆದರೆ ಇದನ್ನು ತಾತ್ಕಾಲಿಕ ನಿರ್ಬಂಧ, ಶಾಶ್ವತ ನಿರ್ಬಂಧ ಇತ್ಯಾದಿಗಳೆಂದು ಸಾಹಿತಿಗಳು ಮಾತ್ರ ಕರೆಯಬಹುದಲ್ಲದೆ, ಜನರು ಅನುದಿನದ ವ್ಯವಹಾರದಲ್ಲಿ 'ಇಂಜಂಕ್ಷನ್' ಎಂದೇ ಕರೆಯಬಹುದು. ನ್ಯಾಯಾಲಯವು ರಚಿಸುವ ವಿವಾದಾಂಶಗಳಿಗೆ 'ಇಶ್ಶ್ಯೂಸ್[10] ಎಂದು ಹೆಸರು. ಇದನ್ನು ಸಬಬುಗಳೆಂದು ಯಾವುದೋ ಒಂದು ಹಿಂದಿನ ಭಾಷಾಂತರದಲ್ಲಿ ಹೇಳಲಾಗಿದೆ. ಮತ್ತು ಜನರಲ್ಲಿ ಇದನ್ನು 'ಪಾಯಿಂಟ್'ಗಳೆಂದು ಕರೆಯುವ ರೂಢಿಯೂ ಇದೆ. ಆದರೆ ಇದನ್ನು ವಿವಾದಾಂಶ ಅಥವಾ ವಿವಾದ ಪ್ರಶ್ನೆ ಅಥವಾ ವಿವಾದ ಸಮಸ್ಯೆಗಳೆಂದು ಇದ್ದಕ್ಕಿದ್ದಂತೆ ಭಾಷಾಂತರಿಸಿದರೆ ಅದು ಸಾರ್ಥಕವಾದೀತೆನ್ನಲು ಸಾಧ್ಯವಿಲ್ಲ. ಹಾಗೆಯೇ 'ಜಜ್‌ಮೆಂಟ್'[11] ಎಂಬ ಪದಕ್ಕೆ ತೀರ್ಪು ಎಂಬ ಪದವು ರೂಢಿಯಲ್ಲಿದ್ದರೂ 'ಡಿಕ್ರಿ'[12]ಯು

---

[2] Civil. [3] Criminal. [4] Original suit. [5] Insolvency. [6] Evidence. [7] Notice. [8] Summons. [9] Injunction. [10] Issues. [11] Judgement. [12] Decree.

ಡಿಕ್ರಿಯಾಗಿಯೇ ಕನ್ನಡದಲ್ಲೂ ಉಳಿದಿದೆ. ಮತ್ತೆ ಹಿಯರಿಂಗ್,[13] ಅಪೀಲು,[14] ರಿವಿಜನ್,[15] ಡಿಸ್ಮಿಸ್[16] ಮುಂತಾದ ಪದಗಳಿಗೆ ಸಮಾನಾರ್ಥ ಪದಗಳನ್ನು ಬಳಕೆಗೆ ಬೇಗನೆ ತರಲಾದೀತೆನ್ನಲು ಸಾಧ್ಯವಿಲ್ಲ. ವಕೀಲ ಅಥವಾ ಅಡ್ವೊಕೇಟ್ ಅಥವಾ ಪ್ಲೀಡರರನ್ನು ಕಕ್ಷಿಗಾರರು ನ್ಯಾಯವಾದಿಗಳೆಂದು ಸಂಬೋಧಿಸುವ ದಿನವೂ ಸಮೀಪದಲ್ಲಿಲ್ಲ.

ಇನ್ನು ಅಪರಾಧಗಳನ್ನು ಸೂಚಿಸುವ ಪದಗಳನ್ನು ಗಮನಿಸುವ ಇಂಗ್ಲೀಷ್ ಭಾಷೆಯ ಶಾಸನದಲ್ಲಿ ಕೊಲೆಯ ಅಪರಾಧಕ್ಕೆ 'ಮರ್ಡರ್,[17] ಹೊಮಿಸೈಡ್'[18] ಮುಂತಾದ ಪರಿಭೇದಗಳಿವೆ. ಈ ಪ್ರತಿಯೊಂದು ಪರಿಭೇದಕ್ಕೂ ರುಜುವಾತು, ಶಿಕ್ಷೆ ಮುಂತಾದವುಗಳ ಪ್ರಮಾಣದಲ್ಲಿ ತುಂಬಾ ಭೇದಗಳಿವೆ. ಪೆನಲ್ ಕೋಡಿನ ೩೦೨ ನೇ ಪ್ರಕರಣ 'ಮರ್ಡರ್' ಅಥವಾ ಉದ್ದೇಶಪೂರ್ವಕವಾದ ಕೊಲೆಯನ್ನು ವಿವರಿಸುತ್ತದೆ. ೨೯೯ ಮತ್ತು ೩೦೪, ೩೦೪-ಎ, ೩೧೪, ೩೧೬ ಪ್ರಕರಣಗಳು ಕೂಡಾ ಕೊಲೆಯ ಪರಿಭೇದಗಳನ್ನು ವಿವರಿಸುತ್ತವೆ. ಆದರೆ ೩೦೨ ನೇ ಪ್ರಕರಣದ ಕೊಲೆಗೆ ಮರಣಶಿಕ್ಷೆಯು ಪರಮಾವಧಿ ಶಿಕ್ಷೆಯಾಗಿದೆ. ಉಳಿದ ವಿಧದ ಕೊಲೆಗಳಿಗೆ ಜೀವಾವಧಿ ಶಿಕ್ಷೆಯೇ ಪರಮಾವಧಿ ದಂಡವಾಗಿದೆ. ಹೀಗೆಯೇ ವಂಚನೆ, ಕಳ್ಳತನ, ಅಕ್ರಮಪ್ರವೇಶ ಮುಂತಾದ ಅಪರಾಧಗಳಲ್ಲೂ ಅನೇಕ ಭೇದಗಳಿವೆ. ಆ ಭೇದಗಳಿಗೆಲ್ಲ ಹೊಸ ಪದಗಳನ್ನು, ಅದರಲ್ಲೂ ಜನಪ್ರಿಯವಾಗಬಲ್ಲ ಪದಗಳನ್ನು ಹುಡುಕಿ ಹಿಡಿದು, ಅವುಗಳನ್ನು ಚಲಾವಣೆಗೆ ತರುವುದು ಪ್ರಯಾಸದ ಕೆಲಸ. ಅಲ್ಲದೆ, ಫೋರ್ಜರಿ,[19] ಟ್ರೇಡ್‌ಮಾರ್ಕ್,[20] ಅಡಲ್ಟರಿ[21] ಇತ್ಯಾದಿ ಪದಗಳಿಗೆ ಸಮಾನಾರ್ಥಗಳು ಈವರೆಗೂ ಬಳಕೆಗೆ ಬಂದಿಲ್ಲವೆಂಬುದು ಗಮನಾರ್ಹವಾದ ಸಂಗತಿ.

ಹಣಕಾಸಿನ ವ್ಯವಹಾರಕ್ಕೆ ಸಂಬಂಧಿಸಿದ ನೆಗೋಶಿಯೆಬ್ಲ್ ಇನ್‌ಸ್ಟ್ರುಮೆಂಟ್ಸ್ ಆಕ್ಟ್[22] ಎಂಬ ಕಾಯಿದೆಯೊಂದಿದೆ. ಇದು ನಮ್ಮ ಎಲ್ಲ ಕೊಡ–ತೆಕ್ಕೊಳುವ ವ್ಯವಹಾರಗಳಿಗೂ ಅನ್ವಯಿಸುವುದು. ಡಿಮಾಂಡ್ ಪ್ರಾಮಿಸರಿ ನೋಟು[23] ಎನ್ನುವ ದಾಖಲೆಯು ಎಲ್ಲರಿಗೂ ತಿಳಿದುದೇ ಆಗಿದೆ. ಆದರೆ ಇದನ್ನು ಕನ್ನಡದಲ್ಲಿ ಹೇಳುವುದು ಹೇಗೆ? ಕೇಳಿದಾಗ ಕೊಡುವ ವಾಗ್ದಾನ ಪತ್ರವೆಂದೇ? ಅಥವಾ ಬರೇ ಸಾಲದ ವಾಗ್ದಾನ ಪತ್ರವೆಂದೇ? ಹಾಗೆಯೇ ಬಿಲ್ ಆಫ್ ಎಕ್ಸ್‌ಚೇಂಜ್,[24] ಡಿಮಾಂಡ್ ಡ್ರಾಫ್ಟ್,[25] ಚೆಕ್[26] ಮುಂತಾದ ಶಬ್ದಗಳನ್ನು ಕನ್ನಡಕ್ಕೆ ಇಳಿಸುವುದು ಹೇಗೆ? ಚೆಕ್ ಎಂಬ ಪದವನ್ನು ವೈಯ್ಯಾಕರಣಿಗಳು ಕೂಡಾ ರೂಪಭೇದವಿಲ್ಲದೆ ಕನ್ನಡದಲ್ಲಿ ಉಪಯೋಗಿಸುತ್ತಾರೆ. ಚೆಕ್ ಎಂಬ ಪದದ ಅರ್ಥ ಗೊತ್ತಿಲ್ಲದಿದ್ದವರೂ ಇಲ್ಲ. ಅದರಲ್ಲೂ ಬ್ಯಾರರ್[27] ಚೆಕ್, ಆರ್ಡರ್[28] ಚೆಕ್, ಕ್ರಾಸ್ಡ್[29] ಚೆಕ್ ಮತ್ತು ಅಕೌಂಟ್ ಪೇಯೀ[30] ಚೆಕ್ ಎಂಬ ಪರಿಭೇದಗಳಿವೆ. ಈ ಶಾಸನವನ್ನು ಕನ್ನಡಕ್ಕೆ ಪರಿವರ್ತಿಸುವಾಗ ನಿಘಂಟುಗಳ ಸಹಾಯದಿಂದ ಈ ಎಲ್ಲ ಪದಗಳಿಗೆ ಸಮಾನಾರ್ಥವುಳ್ಳ ಪದಗಳನ್ನೇನೋ ಕಂಡುಹಿಡಿಯಬಹುದೆನ್ನುವ. ಆದರೆ ಅವುಗಳು ಅಷ್ಟು ಚುಟುಕಾಗಿ, ಅಷ್ಟು ಅರ್ಥಗರ್ಭಿತವಾಗಿ ಇರಬಹುದೆಂದು ಆಶಿಸಲು ಸಾಧ್ಯವಿಲ್ಲ. ಕ್ರಾಸ್ಡ್ ಚೆಕ್ಕಿಗೆ ಅಡ್ಡಗೀಟುಹಾಕಿದ ಹಣಪಾವತಿ ಪತ್ರವೆಂದೋ ಆರ್ಡರ್ ಚೆಕ್ಕಿಗೆ ಆಜ್ಞೆಯ ಹಣಪಾವತಿ ಪತ್ರವೆಂದೋ ಭಾಷಾಂತರಕಾರರು ಹೆಸರಿಸಬಹುದು. ಆದರೆ ನೆಗೋಶಿಯೆಬ್ಲ್ ಎಂಬ ಶಬ್ದಕ್ಕೇ ಯೋಗ್ಯವಾದ ಕನ್ನಡ ಶಬ್ದವು ದೊರಕುವುದು ದುರ್ಲಭವೆನ್ನಬೇಕು. ಈ ಶಾಸನಕ್ಕೆ ಸಂಬಂಧಿಸಿದ ಪ್ರಾಮಿಸರಿ ನೋಟುಗಳನ್ನೂ, ರಶೀದಿಗಳನ್ನೂ ದೇಶಭಾಷೆಯಲ್ಲಿ ಬರೆಯುವ ಕ್ರಮವೇನೋ ಹಿಂದಿನಿಂದಲೂ ಬಂದಿದೆ. ಆದರೆ ಉಳಿದ ದಾಖಲೆಗಳನ್ನು ಇಂಗ್ಲಿಷ್ ಭಾಷೆಯಲ್ಲೇ ಬರೆಯಲಾಗುತ್ತದೆ. ಇವುಗಳೆಲ್ಲವನ್ನೂ ಭಾಷಾಂತರಿಸಲು ಸಾಧ್ಯವಾಗದೆಂದಲ್ಲ. ಆದರೆ ಇವುಗಳಲ್ಲಿ ಅಡಕವಾಗಿರುವ ಪ್ರತಿಯೊಂದು ಒಕ್ಕಣೆ ಮತ್ತು

---

[13] Hearing. [14] Appeal. [15] Revision. [16] Dismiss. [17] Murder. [18] Homicide. [19] Forgery. [20] Trade Mark. [21] Adultery. [22] Negotiable Instruments Act. [23] Demand Promissory Note. [24] Bill of Exchange. [25] Demand Draft. [26] Cheque. [27] Bearer. [28] Order [29] Crossed. [30] Account Payee,

ಶಬ್ದಗಳಿಗೆ ಕಾಯಿದೆಯ ಮಹತ್ವವಿದೆಯೆಂಬುದನ್ನು ನಾವು ಮರೆಯಲಾಗದು. ಉದಾಹರಣೆಗೆ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಪ್ರಚಲಿತವಾಗಿರುವ ಕನ್ನಡ ಪ್ರಾಮಿಸರಿ ನೋಟಿನ ಒಕ್ಕಣೆಯನ್ನು ಗಮನಿಸಬಹುದು :

**ತಾರೀಖು ರಲ್ಲು ತಾಲೂಕು ಗ್ರಾಮದಲ್ಲಿರುವ ರ ಮಗ ರಿಗೆ ಯಾ ಇವರಿಂದ ಅಧಿಕಾರ ಹೊಂದಿದವರಿಗೆ ತಾಲೂಕು ಗ್ರಾಮದಲ್ಲಿರುವ ರ ಮಗನು ಬರಕೊಟ್ಟ ಡಿಮಾಂಡ್ ಪ್ರಾಮಿಸರಿ ನೋಟಿನ ಕ್ರಮವೆಂತೆಂದರೆ :—**

**ನಾನು ನಿಮ್ಮಿಂದ ಇಂದು ಪಡೆದ ರೂಪಾಯಿ ಗೆ ಸಾಲಿಯಾನ ಶೇಕಡಾ ರ ಬಡ್ಡಿ ಕೂಡಿಸಿ ನಿಮಗೆ ಯಾ ನಿಮ್ಮಿಂದ ಅಧಿಕಾರ ಹೊಂದಿದವರಿಗೆ ಕೇಳಿದಾಗ್ಯೆ ಕೊಡುವರೇ ಈ ಮೂಲಕ ವಾಗ್ದಾನ ಮಾಡುತ್ತೇನೆ. ಇದರ ಪ್ರತಿಫಲವು ನನಗೆ ನಿಮ್ಮಿಂದ ನಗದಿಯಾಗಿ ಸಂಪೂರ್ಣ ಬಂತು ಎಂತ ಸಹಾ ಬರೆದುಕೊಟ್ಟ ಡಿಮಾಂಡ್ ಪ್ರಾಮಿಸರಿ ನೋಟಿಗೆ.**

ಮೇಲಿನ ಪ್ರಾಮಿಸರಿ ನೋಟಿನಲ್ಲಿ 'ನಿಮ್ಮಿಂದ ಅಧಿಕಾರ ಹೊಂದಿದವರಿಗೆ' ಎನ್ನುವುದು ಮುಖ್ಯ; ಹಾಗೆಯೇ 'ಇದರ ಪ್ರತಿಫಲವು . . . ಬಂತು' ಎನ್ನುವುದೂ ಮುಖ್ಯವಾದುದು. ಇವೆರಡು ಅಂಶಗಳಿಲ್ಲದ್ದಲ್ಲಿ ಕಾಯಿದೆ ಪ್ರಕಾರ ಈ ಪ್ರಾಮಿಸರಿ ನೋಟು ನಿಷ್ಪ್ರಯೋಜಕವಾಗುವುದು. 'ನಿಮ್ಮಿಂದ ಅಧಿಕಾರ ಹೊಂದಿದವರಿಗೆ' ಎನ್ನುವುದನ್ನು ಇಂಗ್ಲೀಷಿನಲ್ಲಿ ಬರೀ 'ಆರ್ಡರ್' ಎಂದು ಹೇಳಲಾಗುತ್ತದೆ. ಪ್ರತಿಫಲವೆಂದರೆ ನೋಟಿನ ಮೌಲ್ಯ. ಅದನ್ನು ಕೇವಲ ಅಂಕೆಗಳಲ್ಲಿ ಸೂಚಿಸಿಬಿಟ್ಟರೆ ಮಾತ್ರ ಸಾಲದು. ಅದು ಯಾವ ರೀತಿಯಲ್ಲಿ, ಎಂದು ಬಂತೆಂಬುದನ್ನು ಪ್ರತ್ಯೇಕವಾಗಿ ಬರೆಯಬೇಕು. ಹೀಗೆಯೇ ಚೆಕ್, ಡ್ರಾಫ್ಟ್, ಬಿಲ್ ಆಫ್ ಎಕ್ಸ್‌ಚೇಂಜ್ ಮುಂತಾದವುಗಳನ್ನು ಪರಿವರ್ತಿಸುವಾಗ ಕಾಯಿದೆಯ ದೃಷ್ಟಿಯಿಂದ ಮುಖ್ಯವಾದ ಪದಗಳನ್ನು ಸ್ಪಷ್ಟವಾಗಿ ಬಳಕೆಗೆ ತರುವುದಕ್ಕೆ ತುಂಬಾ ಸಮಯ ಬೇಕು.

ಇನ್ನು 'ಟಾರ್ಟ್ಸ್'[31] ಅಥವಾ 'ನಾಗರಿಕ ಅಕ್ರಮ'ಗಳ ಕಾಯಿದೆಗಳೂ ಜನರ ಅನುದಿನದ ಜೀವನದಲ್ಲಿ ಹಾಸು ಹೊಕ್ಕಾಗಿವೆ. ಇವುಗಳಲ್ಲಿ ಬೇರೆ ಬೇರೆ ಹಕ್ಕುಗಳಿವೆ. ಈಸ್‌ಮೆಂಟ್ಸ್[32] ಎಂದರೆ ದಾರಿಯ ಹಕ್ಕು, ನೀರಿನ ಹಕ್ಕು, ಬೆಳಕಿನ ಹಕ್ಕು ಮುಂತಾದವುಗಳನ್ನೊಳಗೊಂಡಿದೆ. ಆದರೆ ಅಷ್ಟು ಅರ್ಥಗರ್ಭಿತವಾದ ಸಮಾನಪದವು ಕನ್ನಡದಲ್ಲಿ ದೊರಕುವುದು ಕಷ್ಟಸಾಧ್ಯ. ಹಾಗೆ ದೊರಕದಿದ್ದರೆ ನಮ್ಮ ಪ್ರಸ್ತುತ ಕಾಯಿದೆಯ ಪರಂಪರೆಯನ್ನು ಈ ವ್ಯವಹರಣೆಗಳಿಗೆ ಅನ್ವಯಿಸುವುದು ಅಸಾಧ್ಯ. ಅದಕ್ಕಾಗಿಯೇ ಕನ್ನಡದಲ್ಲಿ ದಾಖಲೆಗಳನ್ನು ಬರೆಯುವಾಗಲೂ ಹೆಚ್ಚಾಗಿ 'ಈಸ್‌ಮೆಂಟ್ ಹಕ್ಕುಗಳು' ಎಂದು ನಮೂದಿಸಲಾಗುತ್ತದೆ. ಇನ್ನು 'ವೈಕೇರಿಯಸ್ ಲಯಬಿಲಿಟಿ,[33] ಇಂಜರಿ,[34] ಡ್ಯಾಮೇಜಸ್,[35] ಲೈಸನ್ಸ್'[36] ಇತ್ಯಾದಿ ನಾಗರಿಕ ಅಕ್ರಮಗಳ ವಿಶಿಷ್ಟ ಪದಗಳನ್ನು ಕನ್ನಡಕ್ಕೆ ಅನೂಚಾನವಾಗಿ ಪರಿವರ್ತಿಸುವುದು ಕ್ಲಿಷ್ಟವಾದ ಕೆಲಸವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಪುರಾವೆ ಕಾಯಿದೆಯ ಕನ್ಫೆಶನ್,[37] ಎಡ್ಮಿಶನ್,[38] ಪ್ರಿಸಂಪ್ಶನ್,[39] ಪ್ರಿವಿಲೆಜ್[40] ಮುಂತಾದ ಇಂಗ್ಲಿಷ್ ಪದಗಳು ಕನ್ನಡ ಭಾಷೆಗೆ ಸುಲಭವಾಗಿ ತಲೆಬಾಗುವುವುಗಳಲ್ಲ. ಅವುಗಳ ನಿಘಂಟಿನ ಆಧಾರದ ಅರ್ಥಕ್ಕೂ ವಾಸ್ತವಿಕ ಅರ್ಥಕ್ಕೂ ಅಜಗಜಾಂತರವಿದೆ. ರಾಜ್ಯಾಂಗ ಘಟನೆಯ ಭಾಷಾಂತರವೇನೋ ನಡೆದಿದ್ದರೂ, ಕಾಯಿದೆಯ ದೃಷ್ಟಿಯಿಂದ ಈ ಭಾಷಾಂತರ ಸಹಾಯಕವಾಗಿಲ್ಲವೆನ್ನಬಹುದು. ಏಕೆಂದರೆ ನ್ಯಾಯಾಲಯದಲ್ಲಿ ಆಯಾ ಶಬ್ದಕ್ಕೆ ಆಯಾ ಸಂದರ್ಭಾನುಸಾರವಾಗಿ ಅರ್ಥವಿದೆ. ಆ ಅರ್ಥವಿವರಣೆಯ ಕೆಲಸ ನ್ಯಾಯವಾದಿಗಳಿಂದ ನಡೆಯುತ್ತದೆ. ಈಗಿನಮಟ್ಟಿಗೆ ಹೇಳುವುದಾದರೆ, 'ಆರ್ಟಿಕಲ್'[41] ಎಂಬ ಶಬ್ದಕ್ಕೆ ನಿಬಂಧನೆ,

---

[31] Torts. [32] Easements. [33] Vicarious liability. [34] Injury. [35] Damages. [36] Licence. [37] Confession. [38] Admission. [39] Presumption. [40] Privilege. [41] Article.

ಪ್ರಕರಣ, ಮುದ್ದೆ ಇತ್ಯಾದಿ ವಿವಿಧಾರ್ಥಗಳುಳ್ಳ ಶಬ್ದಗಳನ್ನು ಕನ್ನಡದಲ್ಲಿ ಉಪಯೋಗಿಸಲಾಗುತ್ತದೆ ಎಂಬುದು ಗಮನಾರ್ಹ. ಹೀಗಿರುವಾಗ ಇಡೀ ರಾಜ್ಯಾಂಗ ಘಟನೆಯು ಕಾನೂನಿನ ದೃಷ್ಟಿಯಿಂದ ಉಪಯುಕ್ತ ಹಾಗೂ ಯೋಗ್ಯವಾಗುವಂತೆ ಭಾಷಾಂತರವಾದ ಸ್ಪಷ್ಟ ಹಾಗೂ ಏಕರೂಪವಾದ ಆವೃತ್ತಿಯೊಂದು ಸಿದ್ಧವಾಗಬೇಕಾದುದು ಅತ್ಯಾವಶ್ಯಕವಾಗಿದೆ.

ಸಾಹಿತ್ಯಪುಸ್ತಕಗಳನ್ನು, ವಿಜ್ಞಾನದ ಕೃತಿಗಳನ್ನು ಎಲ್ಲ ನಾವು ಭಾಷಾಂತರಿಸುವಾಗ, ನ್ಯಾಯಶಾಸನಗಳ ಕನ್ನಡೀಕರಣವು ಇಷ್ಟು ಕ್ಲಿಷ್ಟವಾಗಿ ಏಕಾಗಿ ತೋರುತ್ತಿದೆ ಎಂಬ ಸಂಶಯ ಉಂಟಾಗುವುದು ಇಲ್ಲಿ ಸಹಜವೇ ಆಗಿದೆ. ನ್ಯಾಯಶಾಸನಗಳಲ್ಲಿ ಬರೇ ಭಾಷೆಯ ಭಾಷಾಂತರ ಮಾತ್ರ ಸಾಲದು ; ಆ ಭಾಷಾಂತರದಲ್ಲಿ ಸ್ಪಷ್ಟತೆ, ಏಕರೂಪತೆ ಮತ್ತು ಪರಿಪೂರ್ಣತೆಗಳು ಬೇಕು. ಕಾನೂನುಗಳ ಬರೇ ನಿಘಂಟು ಆಧಾರದ ಭಾಷಾಂತರವು ತೊಡಲಾರದ ಆಭರಣವಾಗಿಯೇ ಉಳಿದೀತು ವಿನಾ ತಮ್ಮ ಮಾತೃಭಾಷೆಯ ಮೂಲಕ ಶಾಸನಗಳ ವಿಶಿಷ್ಟ ಅರ್ಥ ಮತ್ತು ಉದ್ದೇಶಗಳು ಜನ ಸಾಮಾನ್ಯರಿಗೆ ತಿಳಿಯಲಾರವು. ಮಾತ್ರವಲ್ಲ, ನ್ಯಾಯಾಲಯದಲ್ಲಿ ಅವುಗಳನ್ನು ಉಪಯೋಗಿಸ ತೊಡಗಿದರೆ ಅಂತ್ಯವಿಲ್ಲದ ಎಡರು-ತಡರುಗಳು ಉದ್ಭವಿಸುವುದು ಸ್ವಾಭಾವಿಕವಾಗಿದೆ. ನ್ಯಾಯವಾದಿಗಳಿಗೂ ನ್ಯಾಯಾಧೀಶರುಗಳಿಗೂ ಇಂಥ ಅರ್ಥಂಬರ್ಥ ಭಾಷಾಂತರಿತ ಕಾನೂನುಗಳು ವಿಶೇಷ ಗೊಂದಲಕ್ಕೀಡುಮಾಡದಿರಲಿಕ್ಕಿಲ್ಲ. ಏಕೆಂದರೆ ಈಗ ಇಂಗ್ಲಿಷ್ ಭಾಷೆಯ ಕಾನೂನುಗಳನ್ನು ಇಂಗ್ಲೀಷ್ ಭಾಷೆಯಲ್ಲಿ ಪ್ರತಿಪಾದಿಸುವಾಗಲೇ ಶಬ್ದಾರ್ಥ ಸಮಸ್ಯೆಗಳು, ವ್ಯಾಖ್ಯೆಯ ಸಮಸ್ಯೆಗಳು ಹೇರಳವಾಗಿ ಉಂಟಾಗುತ್ತವೆ. ವಿಶಿಷ್ಟ ಪದಗಳಿಗೆ ವ್ಯಾಖ್ಯೆಯನ್ನೀಯುವ ಆಧಾರ ತೀರ್ಮಾನಗಳು ಇಂಗ್ಲೀಷ್ ಭಾಷೆಯಲ್ಲೇ ಬರೆಯಲ್ಪಟ್ಟಿವೆ. ಕಾನೂನುಗಳ ಭಾಷಾಂತರವು ಆ ಆಧಾರ ತೀರ್ಮಾನಗಳ ಭಾಷಾಂತರಮಾಡುವುದನ್ನು ಅನಿವಾರ್ಯವಾಗಿ ಮಾಡಬಹುದು. ಇದು ತುಂಬಾ ಶ್ರಮದ ಕೆಲಸ.

ಕಾನೂನು ಭಾಷಾಂತರದ ವಿಷಯದಲ್ಲಿ ಇಂಗ್ಲೀಷ್ ಭಾಷೆಯ ಕಾನೂನುಗಳ ಬಳಕೆಯ ಮಾದರಿಯು ನಮಗೆ ಮಾರ್ಗದರ್ಶಕವಾಗಬಹುದು. ಇಂಗ್ಲಿಷ್ ಕಾನೂನಿಗೆ ರೋಮ್ ಸಾಮ್ರಾಜ್ಯದ ಕಾನೂನು ತಳಹದಿಯಾದುದರಿಂದ ಇಂಗ್ಲಿಷ್‌ನ ಕಾಯಿದೆ ಭಾಷೆಯಲ್ಲಿ ಲ್ಯಾಟಿನ್ ಭಾಷೆಯ ಪದಗಳು ಧಾರಾಳವಾಗಿ ಉಳಿದಿವೆ. ಇದೇ ರೀತಿ ನಮ್ಮ ದೇಶಭಾಷೆಗಳ ಕಾನೂನುಗಳಲ್ಲೂ ಇಂಗ್ಲಿಷ್ ಮತ್ತು ಲ್ಯಾಟಿನ್ ಭಾಷೆಯ ಪದಗಳನ್ನು ಉಳಿಸಿಕೊಂಡರೆ ಭಾಷಾಂತರದಿಂದುಂಟಾಗುವ ತೊಂದರೆಯು ಬಹುಮಟ್ಟಿಗೆ ಬಗೆಹರಿಯಬಹುದು. ಅದರ ಬದಲು ಉಗ್ರಭಾಷಾಭಿಮಾನದಿಂದಲೇ ಭಾಷಾಭಿಮಾನಿಗಳು ಈ ಕ್ಷೇತ್ರದಲ್ಲಿ ಇಂಗ್ಲಿಷ್ ಭಾಷೆಯ ಸ್ಥಾನಪಲ್ಲಟನ ಮಾಡಲು ಯತ್ನಿಸಿದರೆ ಅದರಿಂದುಂಟಾಗಬಹುದಾದ ಗೊಂದಲದ ಪರಿಸ್ಥಿತಿಯನ್ನು ಇಲ್ಲಿ ಪ್ರತ್ಯೇಕ ವರ್ಣಿಸಬೇಕಾಗಿಲ್ಲ. ಈ ಭಾಷಾಪರಿವರ್ತನೆಯ ತೊಂದರೆಗೆ ಪ್ರಥಮ ಈಡಾಗುವವರು ನ್ಯಾಯವಾದಿಗಳು ಮತ್ತು ನ್ಯಾಯಾಧೀಶರು. ಇವರಿಗೆ ಇಂಗ್ಲಿಷ್ ಭಾಷೆಯನ್ನು ತಮ್ಮ ಆಚಾರ ವಿಚಾರಗಳಿಂದ ಉಚ್ಚಾಟನೆಮಾಡಲು ತುಂಬಾ ಸಮಯ ಬೇಕಾದೀತು. ಹಾಗೆ ಅವರು ಮಾತೃಭಾಷೆಯನ್ನಪ್ಪಲು ಸಿದ್ಧರಾಗುವಾಗ ಅವರ ಮಟ್ಟಕ್ಕೆ ಯೋಗ್ಯವಾದಂಥ ದೇಶಭಾಷೆಯ ಶಾಸನ ಸಾಹಿತ್ಯಸಾಮಗ್ರಿಯೂ ತಯಾರಾಗಬೇಕು. ಮತ್ತೆ ಜನಕೋಟಿಗೆ ಈ ಪರಿವರ್ತನೆಯು ಯಾವ ಸತ್ಪರಿಣಾಮವನ್ನುಂಟುಮಾಡಬಹುದೆಂಬುದು ಮುಂದೆ ತಿಳಿಯಬೇಕಷ್ಟೆ. ವೈದ್ಯಕೀಯ ಪುಸ್ತಕಗಳನ್ನು ರೋಗಿಯು ಓದಿದೊಡನೆ ತಾನು ಸ್ವತಃ ವೈದ್ಯನಾಗಿ ಪರಿವರ್ತನೆಗೊಳ್ಳುವನೆಂದರೆ ಯಾರಾದರೂ ಒಪ್ಪುವರೆ ?

**ಸೇವ ನಮಿರಾಜ ಮಲ್ಲ**

# ಕಾಳಿದಾಸನ ಸಂದೇಶ

"ಈ ಜಗತ್ತು ಬಲು ಅಂದವಾಗಿದೆ ಮಗು" ಎಂದು ಮೊದಲ ಬಾರಿಗೆ ನನಗುಸಿರಿದವರು ಇಬ್ಬರು ; ಮೊದಲನೆಯದು ನಮ್ಮೂರ ಗುಡಿ–ಒಂದು ದಿವ್ಯ ಸಂಸ್ಥೆ. ಎರಡನೆಯವ ಒಬ್ಬ ಮಹಾಪುರುಷ ಕಾಳಿದಾಸಕವಿ. ಈಗಲೂ ನನಗೆ ಆತ ಹೇಳುವ ಮಾತು ಅದೇ. ಈ ತಿರೆ ಆವನ ತವರು ಮನೆ; ಆತ ಹೊಕ್ಕ ಮನೆ ಬೇರೆಯದು. ಇಲ್ಲಿನ ಇರಿಕೆ ಎಲ್ಲದರಲ್ಲೂ ಆತನಿಗೆ ಅಕ್ಕರೆಯುಂಟು ; ಆದರ ಸರಿಕೆಯಲ್ಲಿ ಆತ ಆಸಕ್ತ. ಎಷ್ಟಾದರೂ ಆತ್ಮಕ್ಕೆ ಹೊಕ್ಕ ಮನೆಯೇ ನೆಲೆ ; ಆಗಾಗ ಬಂದು ಹೋಗುತ್ತಾ, ಇಲ್ಲದಿದ್ದರೆ ನೆನೆಯುತ್ತಾ, ಮನಸ್ಸನ್ನು ತಣ್ಣಗಿರಿಸಿಕೊಳ್ಳುವುದಕ್ಕೆ ತವರುಮನೆ. ಇಳೆಯೆಂದರೆ ಕಾಳಿದಾಸನ ಕಾವ್ಯಕನ್ನಿಕೆಗೆ ತವರಿನಷ್ಟು ಮಮತೆ; ಆಕೆ ಕೈಹಿಡಿದಿರುವ ವರ ಮಾತ್ರ ಬೇರೆಡೆಯವ.

ವಾಲ್ಮೀಕಿ ಋಷಿಯನ್ನು ಬಿಟ್ಟರೆ ನಮ್ಮೀ ನೆಲವನ್ನು ತನ್ನ ಮಾತಿನಿಂದ ಅಂದಗೊಳಿಸುವವರಲ್ಲಿ ಕಾಳಿದಾಸನು ಮೊದಲಿಗನೆನ್ನಬೇಕು. ಆತನೇ ನಮ್ಮ ಪ್ರಥಮ ನಾಗರಿಕ ಕವಿ. ದಿಲೀಪ ಮಹಾರಾಜ ಸುದಕ್ಷಿಣೆಯೊಂದಿಗೆ ಗ್ರಾಮಗಳ ಮೂಲಕ ಹಾಯ್ದು ವಸಿಷ್ಠಮಹರ್ಷಿಯ ಆಶ್ರಮಕ್ಕೆ ರಥದಲ್ಲಿ ಹೋಗುತ್ತಿರುವಾಗ ಕವಿ ಬಣ್ಣಿಸುವ ನೋಟ ಇದಕ್ಕೆ ಸಾಕ್ಷಿ ; ಇಲ್ಲದಿದ್ದರೆ ಯಕ್ಷನ ಮೋಡವನ್ನು ಅನುಸರಿಸಿದರೂ ಆಯಿತು, ಅಥವಾ ಸುನಂದೆ ಇಂದುಮತಿಗೆ ಸ್ವಯಂವರ ಮಂಟಪದಲ್ಲಿ ರಾಜರನ್ನು ತೋರಿಸುವಾಗ ಆಡುವ ಮಾತನ್ನು ಕೇಳಿದರೂ ಆಯಿತು, ಇಲ್ಲ ಅಜ-ಇಂದುಮತಿಯರು ಪುರಪ್ರವೇಶ ಮಾಡುವಾಗ ಆ ಮೆರವಣಿಗೆಯ ಅತಿಶಯ ಸಂಭ್ರಮವನ್ನು ನಿರೀಕ್ಷಿಸಿದರೂ ಸರಿಯೇ. ಈ ವರ್ಣನೆಗಳೆಲ್ಲ ಆಧುನಿಕ ನಾಗರಿಕತೆಯ ಸೊವಡನ್ನು ಮನಸ್ಸಿಗೆ ತರುತ್ತವೆ ; ನಾಡುಗಳೂ ಕಾಡುಗಳೂ ನಗರಗಳೂ ಗ್ರಾಮಗಳೂ ಆಳುಗಳೂ ಅರಸರೂ ಹೀಗಿದ್ದರೆ ಚೆನ್ನು ಎನಿಸುತ್ತವೆ. ಕಾಳಿದಾಸನ ಮನಸ್ಸು ನಮ್ಮ ಮೇಲೊಂದುಸಲ ಬೀಸಿಹೋದರೆ ಅದು ನಾವು ಅನುಭವಿಸಬೇಕೆಂದಿರುವ ಐಹಿಕ ಜೀವನದ ಪರಿಮಳಗಳನ್ನೆಲ್ಲ ನಮ್ಮಲ್ಲಿ ಸುರಿದುಹೋಗುತ್ತಿದೆಯೋ ಎನಿಸುತ್ತದೆ; ಇಳಿವಯಸ್ಸಿನಲ್ಲೂ ಉತ್ಸಾಹವಮೂಡುತ್ತದೆ "ಸಿಪ್ರಾತರಂಗಾನಿಲಕಂಪಿತಾಸು ವಿಹರ್ತುಮುದ್ಯಾನ**ಪರಂಪರಾಸು**". ಜಗತ್ತಿನಲ್ಲಿ ಈ ಜೀವ ಬಾಳುತ್ತಿರುವುದೇ ಒಂದು ಸೋಜಿಗ, ಒಂದು ಸೊಗಸು ಎನ್ನುತ್ತದೆ ಕಾಳಿದಾಸನ ನುಡಿ.

ಈ ಮಾತಿನ ಜತೆಗೆ ಆತನ ಮತ್ತೊಂದು ಮಾತು ಅನುಕ್ಷಣದಲ್ಲೂ ಸೇರಿಕೊಳ್ಳುತ್ತಿರುತ್ತದೆ, ನಿನ್ನ ಬಾಳಿನ ನಿಲವು ಎಷ್ಟು ಎತ್ತರವಾಗುತ್ತದೋ ಎಷ್ಟು ನೇರವಾಗುತ್ತದೋ ಜಗತ್ತೂ ಅಷ್ಟು ರಮ್ಯವಾಗುತ್ತದೆ ಎಂಬುದು. ನಿನ್ನೆದೆಯಲ್ಲಿ ಒಲವಿದ್ದಷ್ಟೂ ಈ ಲೋಕ ಚೆಲುವು, ನಿನ್ನನ್ನು ನೀನು ಶುದ್ಧಿಸಿಕೊಂಡಷ್ಟೂ ಒಲವಿನ ಸೆಲೆ ನಿನ್ನ ಹೃದಯದಲ್ಲಿ ಹೆಚ್ಚುಹೆಚ್ಚಾಗಿ ಒಡೆಯುತ್ತಿರುತ್ತದೆ ಎಂದು ಪದೇಪದೇ ಎಚ್ಚರಿಕೆಯ ಮಾತನ್ನು ಕಾಳಿದಾಸ ಆಡುತ್ತಿರುತ್ತಾನೆ ತನ್ನ ಕಾವ್ಯದ ಉದ್ದಕ್ಕೂ. ಈ ಮಾತುಗಳು ಆತ ನಿಲ್ಲಿಸಿರುವ ಸ್ತ್ರೀಪುರುಷರ ಮೂರ್ತಿಗಳಲ್ಲಿ ಮೈಮೆವೆತ್ತು ನಿಂತಿವೆ. ಆತನ ಕಾವ್ಯಗಳತ್ತ ನಮ್ಮ ದೃಷ್ಟಿ ಹೊರಳಿದರೆ ಸಾಕು ಎಷ್ಟೊಂದು ಉದಾತ್ತ ವ್ಯಕ್ತಿಗಳು ನಮ್ಮ ಕಣ್ಣೆದಿರು ಬಂದು ನಿಲ್ಲುತ್ತಾರೆ! ಧರ್ಮಿಷ್ಠರಾಗಿರಿ ಪ್ರೇಮಿಷ್ಠರಾಗಿರಿ ನಿಮ್ಮ ಭೋಗ ಯಾವಾಗಲೂ ತ್ಯಾಗದ ಹಿಡಿತದಲ್ಲಿರಲಿ—ಈ ಪಲ್ಲವಿಯ ಮಹಾಗೀತಗಳಂತಿದ್ದಾರಲ್ಲವೆ ಆ ರಘುವಂಶದ ಅರಸರು ಮತ್ತು ಅರಸಿತಿಯರು ? ದಿಲೀಪನನ್ನು ಕುರಿತು ಕವಿ ಹೇಳುತ್ತಾನೆ: ಈ ಅರಸನನ್ನು ನೋಡಿ : "ಭಯಬಿಟ್ಟು ಪ್ರಾಣವನ್ನು ಕಾಪಿಟ್ಟುಕೊಂಡ, ಅರೋಗನಾಗಿ ಧರ್ಮಕಾರ್ಯಗಳಲ್ಲಿ ಆಸಕ್ತನಾದ, ಲೋಭವಿಲ್ಲದೆಯೇ ಐಶ್ವರ್ಯವನ್ನು ಗಳಿಸಿದ, ಏತಕ್ಕೂ ಅಂಟದೆ ಸುಖಪಟ್ಟ".

“ಜುಗೋಪಾತ್ಮಾನಮತ್ರಸ್ತೋ ಭೇಜೇ ಧರ್ಮಮನಾತುರಃ| ಅಗೃಧ್ನುರಾದದೇ ಸೋರ್ಥಮ ಸಕ್ತಸ್ಸುಖಮನ್ವಭೂತ್ ||” (೧-೨೧). ಯಾರೆಷ್ಟು ಸಲ ಎತ್ತಿಕೊಂಡು ಹೇಳಿದರೂ ಇದರ ಕಳೆ ಕುಂದದು, ಅಂಥ ನುಡಿಯಿದು. ಅಲ್ಲದೆ “ಜ್ಞಾನೇ ಮೌನಂ ಕ್ಷಮಾ ಶಕ್ತೌ ತ್ಯಾಗೇ ಶ್ಲಾಘಾ ವಿಪರ್ಯಯಃ| ಗುಣಾಗುಣಾನುಬಂಧಿತ್ವಾತ್ತಸ್ಯ ಸಪ್ರಸವಾ ಇವ || (೧-೨೨): “ಅರಿತಿದ್ದರೂ ಹೊರಗೆಡಹುವ ಇಚ್ಛೆಯಿಲ್ಲ, ಶಕ್ತಿಯಿದ್ದರೂ ತಾಳ್ಮೆವಂದಿಗ, ಕೊಡುಗೈಯಾಗಿ ಕೊಟ್ಟರೂ ಹೊಗಳಿಸಿಕೊಳ್ಳಬೇಕೆಂಬಾಸೆ ಸ್ವಲ್ಪವೂ ಇಲ್ಲ—ಹೀಗೆ ಈ ಪರಸ್ಪರ ವಿರೋಧಿಗಳಾದ ಗುಣಗಳು ಒಂದರಲ್ಲಿ ಇನ್ನೊಂದು ಸದಾ ಬೆರೆತಿರೋಣದರಿಂದ ಒಡಹುಟ್ಟುಗಳಂತೆಯೇ ಇದ್ದವು.” ಹೀಗೆ ಬಾಳಬೇಕಾದರೆ ದೈವಕೃಪೆಯಿರಬೇಕು, ಅಷ್ಟೆ. ದಿಲೀಪ ಒಂದು ಬಗೆಯ ಉದಾತ್ತ ಪುರುಷ ನಾದರೆ ರಘು ಮತ್ತೊಂದು ಬಗೆಯ ಮಹಾಪುರುಷ. ಧೀರ ಎಂದರೆ ರಾಮನನ್ನು ಬಿಟ್ಟರೆ, ಇವನೆ ಸರಿ ಎನ್ನಿಸುತ್ತದೆ ನಮಗೆ ಕಾಳಿದಾಸನ ಚಿತ್ರಣದಲ್ಲಿ. ತನ್ನಲ್ಲಿರುವ ಸರ್ವಸ್ವವನ್ನೂ ದಾನಮಾಡಬೇಕಾದರೆ ಅದು ನಿಜವಾದ ಎದೆಗಾರನಿಗೆ ಮಾತ್ರ ಸಾಧ್ಯ. ರಘು ಅಂಥ ಎದೆಗಾರ. “ಸ ಮೃಣ್ಮಯೇ ವೀತಹಿರಣ್ಮಯತ್ವಾತ್ ಪಾತ್ರೇ ನಿಧಾಯಾರ್ಘ್ಯಮನರ್ಘಶೀಲಃ | ಶ್ರುತ ಪ್ರಕಾಶಂ ಯಶಸಾ ಪ್ರಕಾಶಃ ಪ್ರತ್ಯುಜ್ಜಗಾಮಾತಿಥಿಮಾತಿಥೇಯಃ ||” (೫-೨). ವಿದ್ಯಾವಿಶದ ಮುಖನಾದ ವರತಂತುಶಿಷ್ಯ ಕೌತ್ಸ ಎಂಬ ವಟುವನ್ನು ಯಶೋಜ್ಜ್ವಲನಾದ ರಘು ಅರ್ಘ್ಯವನ್ನು ಮಣ್ಣಿನ ಕುಡಿಕೆಯಲ್ಲಿಟ್ಟುಕೊಂಡು ಇದಿರುಗೊಳ್ಳಲು ಎದ್ದು ಬರುತ್ತಾನೆ! ರಾಜನ ಕೈಯಲ್ಲಿರುವ ಮಣ್ಣುಕುಡಿಕೆಯನ್ನು ಕಂಡು ಕೌತ್ಸನ ಎದೆ ಕುಸಿದುಹೋಗಿರಬೇಕು. ಏಕೆಂದರೆ ಆತ ಬಂದಿರುವುದು ಗುರುದಕ್ಷಿಣೆಯನ್ನು ಯಾಚಿಸುವುದಕ್ಕಾಗಿ. ಬಡತನಕ್ಕಿಳಿಯುವುದು ಎಷ್ಟು ಕಷ್ಟವೆಂಬುದು ಐಶ್ವರ್ಯವಂತರಿಗೆ ಗೊತ್ತು. ಅವರ ದಾನವೂ ಒಂದು ವ್ಯಾಪಾರವೇ. ದೈವ ಭಕ್ತಿಯೂ ಅಂಥದೇ ಮತ್ತೊಂದು. ಕೈತಪ್ಪಿದ ಸಿರಿ ಮತ್ತೆ ಕೈಸೇರುತ್ತಾಳೆ ಎಂಬುದರಲ್ಲಿ ಅವರಿಗೆ ನಂಬಿಕೆಯಿಲ್ಲ. ಧೀರನಿಗೋ, ಸಿರಿ ಕರೆದಾಗ ಬರುವ ಹಾಜರುಭಾಷಿ. ರಘು ಅಂಥ ಧೀರಪುರುಷ. ಜೊತೆಗೆ ವಾತ್ಸಲ್ಯಪೂರ್ಣ, ಆದರೂ ನಿಸ್ಪೃಹ. ಈ ಚಿತ್ರವನ್ನು ನೋಡಿ: ಮಗ ವಯಸ್ಸಿಗೆ ಬಂದಿದಾನೆ, ಮದುವೆಯಾಗಿದೆ. ಇನ್ನು ರಾಜ್ಯೋಪಭೋಗಕ್ಕೆ ತನಗಿಂತ ಆತ ಸರಿ. ಈ ಭಾವ ಮನಸ್ಸಿನಲ್ಲಿ ಮೂಡಿದ ಕ್ಷಣವೇ ಮಗನಿಗೆ ಪಟ್ಟಗಟ್ಟಿ ತಾನು ದೂರದ ಕಾಡಿಗೆ ಹೊರಟುಹೋಗಲು ಮನಸ್ಸುಮಾಡುತ್ತಾನೆ. ತಂದೆ ಪುತ್ರವತ್ಸಲನಾದರೆ, ಮಗನೋ? ಅವನೂ ಪಿತೃವತ್ಸಲ; ತನ್ನನ್ನು ಅಗಲಿ ಹೋಗಬಾರದೆಂದು ಕಣ್ಣೀರಿಡುತ್ತಾನೆ. ಮಗನ ಕಣ್ಣೀರು ತಂದೆಯನ್ನು ಕರಗಿಸುತ್ತದೆ; ಊರ ಹೊರಗಿನ ಕೈದೋಟದಲ್ಲಿರಲು ಒಪ್ಪಿಕೊಳ್ಳು ತ್ತಾನೆ ರಘು. “ರಘುರಶ್ರುಮುಖಸ್ಯ ತಸ್ಯ ತತ್ ಕೃತವಾನೀಪ್ಸಿತಮಾತ್ಮಜಪ್ರಿಯಃ| ನ ತು ಸರ್ಪ ಇವ ತ್ವಚಂ ಪುನಃ ಪ್ರತಿಪೇದೇ ವ್ಯಪವರ್ಜಿತಾಂ ಶ್ರಿಯಂ” (೮–೧೩). “ಸ ಕಿಲಾ ಶ್ರಮಮಂತ್ಯಮಾಶ್ರಿತೋ ನಿವಸನ್ನಾವಸಥೇ ಪುರಾದ್ ಬಹಿಃ| ಸಮುಪಾಸ್ಯತ ಪುತ್ರ ಭೋಗ್ಯಯಾ ಸ್ನುಷಯೇವಾವಿಕೃತೇಂದ್ರಿಯಃ ಶ್ರಿಯಂ ||” (೮–೧೪). ಮಗನಲ್ಲಿ ತುಂಬ ಮಮತೆಯುಳ್ಳ ರಘು ಆತನ ಇಷ್ಟದಂತೆ ನಡೆದ (ಎಂದರೆ ಊರ ಸಮೀಪದಲ್ಲಿಯೇ ನೆಲಸಿದ); ಆದರೆ ಬಿಟ್ಟ ಪೊರೆಯನ್ನು ಹಾವು ಮರಳಿ ಹೇಗೆ ಮುಟ್ಟದೋ ಹಾಗೆಯೇ ತಾನು ತೊರೆದ ಭೋಗಲಕ್ಷ್ಮಿಯನ್ನು ತಿರುಗಿ ಸಹ ನೋಡಲಿಲ್ಲ. ಆತ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಊರ ಹೊರಗಣ ಒಂದು ನೆಲೆಯಲ್ಲಿದ್ದುಕೊಂಡು ದೃಢಚಿತ್ತನಾಗಿ ಸೊಸೆಯಂತಿರುವ ರಾಜ್ಯ ಲಕ್ಷ್ಮಿಯಿಂದ ಸೇವೆಗೊಳ್ಳುತ್ತಿದ್ದ.” ತಂದೆ ಇಂಥವನಾದರೆ ಮಗನೋ? ಆತನೂ ಮನೋಹರ ವ್ಯಕ್ತಿ. “ದುರಿತೈರಪಿ ಕರ್ತುಮಾತ್ಮಸಾತ್ ಪ್ರಯತಂತೇ ನೃಪಸೂನವೋ ಹಿ ಯತ್| ತದುಪಸ್ಥಿ ತಮುಗ್ರಹೀದಜಃ ಪಿತುರಾಜ್ಞೇತಿ ನ ಭೋಗತೃಷ್ಣಯಾ ||” (೮-೨) “ಸಾಮಾನ್ಯವಾಗಿ ರಾಜ ಪುತ್ರರು ಯಾವುದನ್ನು ಪಡೆಯಲು ಮಾಡಬಾರದುದನ್ನು ಮಾಡುತ್ತಾರೋ ಅಂಥ ರಾಜ್ಯ ದೈಸಿರಿ ತನಗೆ ತಾನೇ ತನ್ನೆಡೆಗೆ ಬಂದಿದ್ದರೂ ಅಜಮಹಾರಾಜ ಅದನ್ನು ತಂದೆಯ ಆಜ್ಞೆ ಎಂಬ

ದಾಗಿ ಸ್ವೀಕರಿಸಿದನೇ ಹೊರತು ಭೋಗತೃಷ್ಣೆಯಿಂದಲ್ಲ." ಭಾರತೀಯ ಇತಿಹಾಸವನ್ನು ಓದಿದರೆ ಈ ಶ್ಲೋಕದ ಮಹತ್ತ್ವ ಅರ್ಥವಾಗುತ್ತದೆ. ಇಲ್ಲಿಯಾಗಲಿ ಮತ್ತೆ ಇನ್ನೆಲ್ಲಿಯಾದರೂ ಕೂಡ, ರಾಜ್ಯಕ್ಕಾಗಿ ಎಷ್ಟೊಂದು ಅನಾಹುತಗಳು ನಡೆದಿಲ್ಲ, ನಡೆಯುತ್ತಿಲ್ಲ. ಆದರೆ ರಘುಕುಲದವರ ಚರಿತೆಯೇ ಬೇರೆ. ಈ ತಂದೆಮಕ್ಕಳನ್ನು ಮತ್ತೊಮ್ಮೆ ಒಟ್ಟಿಗೆ ನೋಡಿ ಕಣ್ತುಂಬಿಕೊಳ್ಳೋಣ: "ಯತಿಪಾರ್ಥಿವಲಿಂಗಧಾರಿಣೌ ದದೃಶಾತೇ ರಘುರಾಘವೌ ಜನೈಃ | ಅಪವರ್ಗಮಹೋದಯಾರ್ಥಯೋರ್ಭುವಮಂಶಾವಿವ ಧರ್ಮಯೋರ್ಗತೌ || (೮-೧೬). "ಯತಿ ವೇಷವಾಂತ ರಘು ಮತ್ತು ರಾಜಸುಡುಪಿನಲ್ಲಿರುವ ಅಜ ಇವರಿಬ್ಬರೂ ಪುರಜನರ ಕಣ್ಣಿಗೆ ನಿವೃತ್ತಿ ಮತ್ತು ಪ್ರವೃತ್ತಿ ರೂಪಗಳಾದ ಧರ್ಮದ್ವಯಗಳ ಅಂಶಗಳೇ ಮೂರ್ತಿವೆತ್ತು ತಿರೆಗಿಳಿದಂತೆ ಕಂಡರು." ಈ ವಂಶದಲ್ಲಿ ಹುಟ್ಟಿದ ಉದಾರದರ್ಶನರಾದ ದಶರಥ ಮಹಾರಾಜನನ್ನೂ ಆತನ ಪುತ್ರರನ್ನೂ ಕುರಿತು ವ್ಯಾಖ್ಯಾನಿಸ ಹೊರಟರೆ ಅದಕ್ಕೆ ಕೊನೆ ಮೊದಲುಂಟೇ? ಅವರನ್ನು ಮನಸಾ ಪ್ರಣಮಿಸಿ ಮುಂದುವರಿಯೋಣ.

ಇನ್ನು ಶಾಕುಂತಲದತ್ತ ತಿರುಗಿದರೆ, ಅಲ್ಲಿ ನಮ್ಮ ಕಣ್ಣಿಗೆ ಮೊದಲು ಬೀಳುವವನು ದುಷ್ಯಂತ. ಆತನನ್ನು ನಾವು ಈ ರಾಜರ ಮಟ್ಟಕ್ಕೆ ಸೇರಿಸುವಂತಿಲ್ಲ; ಆತನ ಬಣ್ಣ ಇವರ ಮುಂದೆ ಸ್ವಲ್ಪ ಕಡಮೆಯದೆಂದೇ ಹೇಳಬೇಕಾಗುತ್ತದೆ. ಆದರೂ ಪರಿಭಾವಿಸಲು ತಕ್ಕವ. ಆತನಿಗೆ ತಾಯನ್ನು ಕಂಡರೆ ತುಂಬ ಅಭಿಮಾನ, ಆದರೆ ಶಕುಂತಲೆಯ ಮೋಹ ಅದಕ್ಕಿಂತ ಮಿಗಿಲು. ಮರಳಿ ಆತ ನಮ್ಮ ದೃಷ್ಟಿಗೆ ಬೀಳಬೇಕಾದರೆ ಶಕುಂತಲೆಯ ಕಣ್ಣೀರಿನ ತೆರೆಯ ಹಿಂದೆ, ರಾಜನ ಆಸ್ಥಾನದ ದುರಂತ ಸನ್ನಿವೇಶದಲ್ಲಿ. ಆದರೆ ಕಣ್ವಾಶ್ರಮದ ದುಷ್ಯಂತನಿಗಿಂತ ಇಲ್ಲಿನವ ಸ್ವಲ್ಪ ಮೇಲು. ಸುಂದರ ತರುಣಿಯೊರ್ವಳು ತನ್ನವಳೆಂಬ ವಿಷಯದಲ್ಲಿ ಸಂದೇಹ ಬಂದಾಗ ಆಕೆಯನ್ನು ಪರಿಗ್ರಹಿಸಲು ಹಿಂಜರಿಯುವ ಈತನನ್ನು ನಮ್ಮ ಅಂತಃಸಾಕ್ಷಿ ಮೆಚ್ಚುತ್ತಾನೆ. ಎಷ್ಟಾದರೂ ಧರ್ಮಿಷ್ಠ; ನೈಷ್ಠುರ್ಯವನ್ನು ಮೆರೆಯದೆ ಧರ್ಮ ಸಾಗದು. ಶಕುಂತಲೆಗೆ ನಾವು ಮರುಗಿದರೂ ಈ ದುಷ್ಯಂತನು ನಮ್ಮ ಗರ್ಹಣೆಗೆ ಪಾತ್ರನಾಗುವುದಿಲ್ಲ. ಆಮೇಲೆ ಉಂಗುರದಿಂದ ನೆನಪು ಮೂಡಿದ ಬಳಿಕ ಆತ ಉದಾತ್ತಪುರುಷನಾಗುತ್ತಾ ಬರುವುದು ಹಂತ ಹಂತದಲ್ಲಿ ನಮ್ಮ ಗೋಚರಕ್ಕೆ ಬರುತ್ತದೆ. "ದಗ್ಧಂ ದಗ್ಧಂ ಪುನರಪಿ ಪುನಃ ಕಾಂಚನಂ ಕಾಂತ ವರ್ಣಂ" ಎಂಬ ಸೂಕ್ತಿ ಈತನಲ್ಲಿ ಅಕ್ಷರಶಃ ಸತ್ಯವಾಯಿತೋ ಎಂಬಂತೆ. ಅಲ್ಲದೆ ಮಾರೀಚಾಶ್ರಮಕ್ಕೆ ಹೋಗುವ ದಾರಿಯಲ್ಲಿ ದೇವಗಂಗೆಯ ಇಕ್ಕೆಲದಲ್ಲೂ ತಪಸ್ಸು ಮಾಡುತ್ತಿರುವ ದೇವರ್ಷಿಗಳನ್ನು ಕಂಡು ಬೆರಗಿನಿಂದ ಈತ ಹೇಳುವ ಮಾತು ನಮ್ಮ ಮನಸ್ಸಿಗೆ ತುಂಬ ಹತ್ತಿಕೊಳ್ಳುತ್ತದೆ: "ಪ್ರಾಣಾನಾಮನಿಲೇನ ವೃತ್ತಿರುಚಿತಾ ಸತ್‌ಕಲ್ಪವೃಕ್ಷೇ ವನೇ ತೋಯೇ ಕಾಂಚನಪದ್ಮರೇಣುಕಪಿಶೇ ಧರ್ಮಾಭಿಷೇಕಕ್ರಿಯಾ | ಧ್ಯಾತಂ ರತ್ನಶಿಲಾತಲೇಷು ವಿಬುಧಸ್ತ್ರೀಸಂನಿಧೌ ಸಂಯಮೋ ಯತ್ ಕಾಂಕ್ಷಂತಿ ತಪೋಭಿರನ್ಯಮುನಯಃ ತಸ್ಮಿಂಸ್ತಪಸ್ಯಂತ್ಯಮೀ ||" "ಕಲ್ಪವೃಕ್ಷವನದಲ್ಲೂ ಇವರಿಗೆ ಅನಿಲಾಹಾರವೇ ಯೋಗ್ಯವೆನಿಸುತ್ತದೆ, ಸ್ವರ್ಣ ಪದ್ಮಪರಾಗಗಳಿಂದ ಕದಡಿರುವ ಈ ಸುಗಂಧತೀರ್ಥದಲ್ಲೂ ಇವರಿಗೆ ವ್ರತಸ್ನಾನದಲ್ಲೇ ಆಸಕ್ತಿ, ರತ್ನಶಿಲಾತಲಗಳಲ್ಲಿ ದೇವಸ್ತ್ರೀಗಳ ಹತ್ತಿರ ಇವರಿಗೆ ಸಂಯಮದಲ್ಲೇ ಚಿಂತೆ, ಇತರ ತಪಸ್ವಿಗಳು ಯಾವುದು ತಮಗೆ ಬೇಕೆಂದು ತಪಸ್ಸು ಮಾಡುತ್ತಾರೋ ಅಂಥ ಭೋಗೈಶ್ವರ್ಯ ಸ್ಥಲದಲ್ಲೇ ಇವರು ತಪೋಮಗ್ನರಾಗಿದ್ದಾರೆ!" ಸ್ವರ್ಗದಲ್ಲೂ ಇವರಿಗೆ ಬೇಕಾದುದು ಸಂಯಮ. ಈ ಮಾತಿಗೆ ಪ್ರತ್ಯುತ್ತರವಾಗಿ ಮಾತಲಿ ಹೇಳುವ ಮಾತು ಮನಸಕ್ಕೆ ತುಂಬ ಯೋಗ್ಯವಾದುದು. "ಉತ್ಸರ್ಪಿಣೀ ಖಲು ಮಹತಾಂ ಪ್ರಾರ್ಥನಾ." "ಮಹಾತ್ಮರ ಕೋರಿಕೆ ಯಾವಾಗಲೂ ಏರಿಕೆಯಲ್ಲೇ ಇರುತ್ತದೆಯಲ್ಲವೆ?" ಇಲ್ಲಿದೆ ಕಾಳಿದಾಸನ ಸಂದೇಶದ ಹುರುಳು. "ಉತ್ಸರ್ಪಿಣೀ ಖಲು ಮಹತಾಂ ಪ್ರಾರ್ಥನಾ." ಬಿಡಿಸಿಬಿಡಿಸಿಕೊಂಡು ಮೇಲಮೇಲಕ್ಕೇರುವುದಲ್ಲವೇ ಮಹಾತ್ಮರ ಕೋರಿಕೆ!

ಆಲೋಚನಾಪರನೂ ಅಪವರ್ಗೋನ್ಮುಖನೂ ಆದ ಯಾವ ಪುರುಷನಾದರೂ ಸರಿಯೆ ಸ್ತ್ರೀಯಾದರೂ ಸರಿಯೆ, ತಮ್ಮ ತಮ್ಮ ದೈವವನ್ನು ತಾವುತಾವೇ ಕಲ್ಪಿಸಿಕೊಳ್ಳಬೇಕಾಗುತ್ತದೆ. ದೇವರು ಅಂಥವರಿಗೆ ಸಿದ್ಧವಸ್ತುವಲ್ಲ, ನಿರ್ಮಿಸಬೇಕಾದ ವಸ್ತು; ಅದು ಅವರವರ ಉತ್ಸರ್ಪಿಣೀ ಪ್ರಾರ್ಥನಾ ಫಲ, ಪ್ರತಿಭಾಪ್ರವೃತ್ತಿಯ ನಿರ್ಮಿತಿ. ಕಾಳಿದಾಸನ ಆತ್ಮಗತಿಯನ್ನು ನಾವು ರೇಖಿಸಬೇಕಾದರೆ ಆತನ ಕಾಡುಮೇಡುಗಳಲ್ಲಿ ತಿರಿದು, ಹೊಳಲುತೋಪುಗಳಲ್ಲಿ ತಂಗಿ, ಅರಮನೆಗಳಲ್ಲೂ ಪರ್ಣಶಾಲೆಗಳಲ್ಲೂ ಹಣಿಕಿ ನೋಡಿದ ಮಾತ್ರಕ್ಕೇ ಸಾಲದು; ಆತನೇರಿಕೆಯ ಏಕಾಂತ ವಿಶ್ರಾಂತಿಸ್ಥಾನವಾದ ದೈವಭಾವವನ್ನು ಕುರಿತು ಪರಿಚಿಂತಿಸಬೇಕಾಗುತ್ತದೆ. ಅದು ಆತ ಅನೇಕ ಪ್ರೀತಿಯುಕ್ತವಾದ ವಾಕ್ಯಗಳಲ್ಲಿ ಧ್ವನಿಸುತ್ತಿರುವ ಪಾರ್ವತೀ ಪರಮೇಶ್ವರರ ಭಾವನೆ.

ಪಾರ್ವತೀಪರಮೇಶ್ವರರೆಂದರೆ ಬಹಳ ಹಳೆಯ ಮಾತುಗಳವು. ಕಾಳಿದಾಸ ಇವಕ್ಕೆ ಹೊಸ ಅರ್ಥಗಳನ್ನೂ ರಾಗಭಾವಗಳನ್ನೂ ಹೇಗೆ ತಂದಾನು ಎಂದು ಯಾರಾದರೂ ಪ್ರಶ್ನಿಸ ಬಹುದು. ಪ್ರಪನ್ನಜನಕೂಟಸ್ಥರಾದ ನಮ್ಮಾಳ್ವಾರ್ ಅವರು ಒಂದು ಸುಂದರಗೀತದಲ್ಲಿ ತಮ್ಮ ದೈವವನ್ನು ಕುರಿತು ಮರ್ಮಸ್ಪರ್ಶಿಯಾದ ಮಾತೊಂದನ್ನು ಹೇಳಿದ್ದಾರೆ: "ತಂಡಾಮಂ ಶೆಯ್ದೆನ್ ಎಂಡಾನಾನಾನೇ" "ನನ್ನನ್ನು ತನ್ನ ಧಾಮವಾಗಿ ಮಾಡಿಕೊಂಡು ನಾನೆಣಿಸಿದಂತಾದನಲ್ಲ ನನ್ನ ದೇವರು" ಎಂದು. ಪಾರ್ವತೀಪರಮೇಶ್ವರರೂ ಕಾಳಿದಾಸನ ವಿಷಯದಲ್ಲಿ ಈ ಕೃಪೆ ಯನ್ನು ತೋರಿದಾರೆ ಎನ್ನಬೇಕು. ಸಾಧಕರೂ ಭಜಕರೂ ಹರಶಿವೆಯರನ್ನು ಕುರಿತು "ವಾಗರ್ಥಾ ವಿವ ಸಂಪೃಕ್ತೌ" ಎಂದು ಪರಿಭಾವಿಸುತ್ತಿದ್ದಾರೋ ಎಂಬುದು ಸಂದೇಹಕ್ಕೆ ತಕ್ಕ ವಿಚಾರ. ಕವಿಗೆ ಅವರು ಸ್ಪಷ್ಟವಾಗುವುದು ತನ್ನ ಕಲೆಯ ಈ ಮೂಲಸಾಮಗ್ರಿಗಳಲ್ಲಿ! ಕಲೆಯ ಮುಖ್ಯ ಗುಣ ಸ್ಪಷ್ಟತೆ. ಭಾವಗಳ ಗುಹೆಯಲ್ಲಿ ತಡಕಾಡುವ ಕವಿ ಕವಿಯಲ್ಲ. ಕಾವ್ಯರಹಸ್ಯವಿರುವುದು ದಿವ್ಯ ನವ್ಯಾನುಭೂತಿಗಳ ಸ್ಪಷ್ಟೀಕರಣದಲ್ಲಿ; ಈ ಸ್ಪಷ್ಟೀಕರಣದಲ್ಲಿಯೇ ಆ ಅನುಭೂತಿಗಳು ಬೇರೆಬೇರೆಯ ರೂಪಗಳನ್ನು ತಾಳುತ್ತವೆ. ಅವರವರು ಎಣಿಸಿದಂತೆ ಅವರವರ ದೇವರು. ಕಾಳಿದಾಸನ ಈಶ್ವರ ಕಲ್ಪನೆಯಲ್ಲಿ ನಮಗೆ ಆತನಲ್ಲಿ ಹೊರತು ಬೇರೆಡೆಯಲ್ಲಿ ಸಿಕ್ಕದ ತನಿಕಳೆಗಳು ಸಿಕ್ಕುವುದರಿಂದಲೇ ಆ ದೈವ ನಮ್ಮ ಕಣ್ಮನಗಳನ್ನು ಸೆರೆಹಿಡಿಯುತ್ತದೆ. ಕವಿ ತನ್ನ ಒಟ್ಟು ಜೀವನದ ಹುರುಪನ್ನೂ ಒನಪನ್ನೂ ಉಲ್ಲಾಸೋತ್ಸರ್ಪಗಳನ್ನೂ ಈ ದೇವರಲ್ಲಿ ರೇಖಿಸಿ ಹೋಗಿದ್ದಾನೆ ಎನಿಸುತ್ತದೆ ಅವನು ಪರಿಭಾವಿಸಿರುವ ಪರಮೇಶ್ವರ ಸ್ವರೂಪವನ್ನು ನೆನೆದರೆ.

ಜಗತ್ತಿನ ತಾಯ್ತಂದೆಯರಾದ ಇವರನ್ನು ಕುರಿತು ಒಂದು ಮಹಾಕಾವ್ಯವೇ ಈತನಿಂದ ಹೊರಹೊರಟಿದೆ. ಆದರೆ ಅದರ ವಿಮರ್ಶೆ ಈ ಬಂಧದ ಉದ್ದೇಶವಲ್ಲ. ಆ ಕಾವ್ಯಕ್ಕೆ ಉಮೆ ಅಧಿದೇವತೆ; ಈಶ್ವರನಲ್ಲ. ಕಾಳಿದಾಸನಿಗೆ ಉಮೆಯಲ್ಲಿ ಮಗಳಂತೆ ಪ್ರೀತಿ, ತಾಯಂತೆ ಸಲಿಗೆ; ಇಷ್ಟು ಮೃದುಳ ಸ್ವಭಾವದ ಹುಡುಗಿ ಆ ರುದ್ರ ಗಂಭೀರನ ಮನಸ್ಸನ್ನು ಒಲಿಸಿಕೊಂಡು ಆಳು ತ್ತಿದ್ದಾಳಲ್ಲ ಎಂದು ಬೆರಗಿನ ಭಾವ. 'ಕುಮಾರಸಂಭವ'ದ ಉಮೆಯನ್ನು ಯಾರು ತಾನೆ ಒಮ್ಮೆ ನೋಡಲು ಬಯಸುವುದಿಲ್ಲ? ಘೋರತಪಸ್ಸನ್ನು ಮಾಡುವಷ್ಟು ಕಲ್ಲುಮನಸ್ಸಿದ್ದರೂ ತನ್ನ ಎಳೆತನದ ಮುಗ್ಧ ಸರಳತೆಯನ್ನು ಸಿದ್ಧಿಯನ್ನು ಪಡೆದ ಮೇಲೂ ಉಮೆ ಕಳೆದುಕೊಳ್ಳುವು ದಿಲ್ಲ. ಆ ಮದುಮಗಳದು ತುಂಬ ಮಂಗಳಕರವಾದ ಮೂರ್ತಿ, ಕಣ್ಣಾ ನೆನಸುವಂಥದು. ಅಲಂಕಾರದ ಸಾಮಗ್ರಿಗಳು ಹತ್ತಿರವಿದ್ದರೂ ಆ ಹುಟ್ಟು ಚೆಲುವೆಯನ್ನು ಸಿಂಗರಿಸಲು ನಾಚಿ ಕುಳಿತ ಆ ಸುಮಂಗಲಿಯರಂತೆ ನಾವೂ ಒಂದು ಕ್ಷಣ ಈ ಮುಗ್ಧ ಸುಂದರ ಕನ್ಯೆಯನ್ನು ನೋಡಿ ಶಿವನತ್ತ ತಿರುಗೋಣ.

ಪರಮೇಶ್ವರನ ದೇವಗಾಂಭೀರ್ಯ ನಮ್ಮ ಹೃದಯಕ್ಕೆ ತಾಗುವುದು ಮೊದಲು ಮೇಘ ಸಂದೇಶದಲ್ಲಿ. ಈ ದೈವಭಾವ ಆ ಕಾವ್ಯದ ತುಂಬ ದಿವ್ಯ ಪರಿಮಳದಂತೆ ಹರಡಿದೆ; ಇದು ಇಲ್ಲಿದೆ ಅಲ್ಲಿಲ್ಲ ಎಂದು ಹೇಳುವಂತಿಲ್ಲದಷ್ಟು; ಆ ಯಕ್ಷಯಕ್ಷಿಯರ ಪ್ರಣಯಕ್ಕೆ ಈ ದಿವ್ಯದಂಪತಿಗಳ

ಪ್ರಣಯ ಪ್ರಭಾವಳಿಯಂತೆ ಸುತ್ತಿಕೊಂಡಿರುವಂತಿದೆ. ಇಲ್ಲಿನ ಪರಮೇಶ್ವರ ಬೇರೆ, ಕುಮಾರ ಸಂಭವದ ಪರಮೇಶ್ವರ ಬೇರೆ. ಕಾಳಿದಾಸ ಶಂಭುವಿನ ವಿಷಯದಲ್ಲಿ ಅಲ್ಲಿನಷ್ಟು ಸಲಿಗೆಯನ್ನು ಇಲ್ಲಿ ತೋರನು. ಇಲ್ಲಿ ಶಿವನನ್ನು ಕಂಡರೆ ಕವಿಗೆ ತುಂಬ ಬೆರಗು; ಆತನ ಅನುಗ್ರಹಕ್ಕೆ ಹಂಬಲಿ ಸುವವನು ಈತ. ಪರಮೇಶ್ವರ ಭಾವದಲ್ಲಿ ಇಲ್ಲಿ ಕಾಣುವ ದಿವ್ಯಕಲೆ ಈ ಕವಿಯ ನಾಟಕಗಳ ನಾಂದೀಶ್ಲೋಕಗಳಲ್ಲಿ ಮೂರ್ತಿವತ್ತಾಗಿ ಇನ್ನಿಲ್ಲದ ಚೆಲುವಿನಲ್ಲಿ ತುಂಬಿ ಹರಿವಂತೆ ನಮಗೆ ತೋರುತ್ತದೆ. ಅದರ ಪರಿಭಾವನೆಯಲ್ಲಿ ಅಡಗಿದೆ ಕಾಳಿದಾಸನ ಸಂದೇಶ.

ಈ ಮೂರು ನಾಂದೀಶ್ಲೋಕಗಳಲ್ಲಿ ವಿಕ್ರಮೋರ್ವಶೀಯದ್ದು ಬುದ್ಧಿಗ್ರಾಹ್ಯವಾದುದು, ಸೂತ್ರ ಭಾಷ್ಯ ಟೀಕೆ ತರ್ಕಗಳ ಸ್ವತ್ತು. ಇಲ್ಲಿನ ದೇವರ ಮುಂದೆ ನಮ್ಮ ಕರಣಗಳು ಆಸರೆ ಕಾಣದೆ ದೂರದಲ್ಲಿ ಕೈಕಟ್ಟಿಕೊಂಡು ನಿಲ್ಲುತ್ತವೆ; ಕರಣ ಬುದ್ಧಿ ಹೃದಯಗಳೆಲ್ಲವನ್ನೂ ಉತ್ಸವ ದಲ್ಲಿರಿಸುವ ಮೂರ್ತಿ ಮಿಕ್ಕೆರಡು ನಾಂದೀಶ್ಲೋಕಗಳಲ್ಲಿ ಕಂಗೊಳಿಸುತ್ತಾನೆ. ಅವುಗಳನ್ನು ಒಂದರ ಮಗ್ಗುಲಲ್ಲಿ ಇನ್ನೊಂದನ್ನಿಟ್ಟು ನೋಡಿದರೆ ಪರಮಾಶ್ಚರ್ಯಗೊಳ್ಳುತ್ತದೆ ಮನಸ್ಸು. ಒಂದರಲ್ಲಿ ಲೋಭಕಾಮಾಭಿಮಾನಗಳನ್ನು ಕಳೆದು ಅಂತಃಶುಚಿಯಾದ ತೇಜೋಮೂರ್ತಿ ಯನ್ನು ನೆನೆದು ಕವಿ ತನ್ನೊಳಗಿನ ಮಾಲಿನ್ಯವನ್ನು ನೀಗಲು ಯತ್ನಿಸುತ್ತಾನೆ, ಮುಂದಿನ ಬದುಕಿಗೆ ಒಳ್ಳೆಯ ದಾರಿ ಕಾಣಲೆಂದು; ಮತ್ತೊಂದರಲ್ಲಿ ಆ ಕೋರಿಕೆ ಕೈಗೂಡಿದಂತೆ ಇದ್ದೆಡೆ ಯಲ್ಲೆ ಶಿವಸಾನ್ನಿಧ್ಯವನ್ನು ಪಡೆದು ತನ್ನೆಲ್ಲ ಇಂದ್ರಿಯಗಳಿಂದಲೂ ಆತನನ್ನು ಮುಟ್ಟಿ ಮುಟ್ಟಿ ರುಚಿಗಂಡು ಆನಂದಿಸುವಂತಿದೆ. 'ಮಾಲವಿಕಾಗ್ನಿಮಿತ್ರ'ವನ್ನು ಬರೆದಾಗ ಕವಿ ಇನ್ನೂ ಎಳೆಯವ; 'ಶಾಕುಂತಲ'ವನ್ನು ನಿರ್ಮಿಸಿದಾಗ ಹಿರಿಯವ. ತಾರುಣ್ಯದಲ್ಲಿ ಸಂಯಮದ ಕೋರಿಕೆ, ಹರೆಯ ತೀರುವ ವೇಳೆಗೆ ಈ ಜಗತ್ತಿನ ವಿಚಿತ್ರ ಸೌಂದರ್ಯಕ್ಕೆ ಬೆರಗಾಗಿ ನಲಿವ ಆಸಕ್ತಿ! ನಮ್ಮ ಸಹಜ ಪ್ರವೃತ್ತಿಗೆ ತೀರ ವಿರುದ್ಧವಾಗಿದೆ ಮಹಾಕವಿ ಕಾಳಿದಾಸನ ಸಂದೇಶ.

ಈಗ ಈ ನಾಂದೀಶ್ಲೋಕಗಳನ್ನು ಸ್ವಲ್ಪ ವಿವರವಾಗಿ ನೋಡೋಣ. 'ಮಾಲವಿಕಾಗ್ನಿ ಮಿತ್ರ'ದ ಶ್ಲೋಕ ಹೀಗಿದೆ: "ಏಕೈಶ್ವರ್ಯೇ ಸ್ಥಿತೋಪಿ ಪ್ರಣತಬಹುಫಲೇ ಯಸ್ಸ್ವಯಂ ಕೃತ್ತಿವಾಸಾಃ! ಕಾಂತಾಸಮ್ಮಿಶ್ರದೇಹೋಪ್ಯವಿಷಯಮನಸಾಂ ಯಃ ಪರಸ್ತಾತ್ ಯತೀನಾಂ|| ಅಷ್ಟಾಭಿರ್ಯಸ್ಯ ಕೃತ್ಸ್ನಂ ಜಗದಪಿ ತನುಭಿರ್ಬಿಭ್ರತೋ ನಾಭಿಮಾನಃ| ಸನ್ಮಾರ್ಗಾ ಲೋಕನಾಯ ವ್ಯಪನಯತು ಸ ವಃ ತಾಮಸೀಂ ವೃತ್ತಿಮೀಶಃ ||" ಅರ್ಥ ಸ್ಪಷ್ಟ; ಮೂರ್ತಿ ಮೋಹಕ. "ಮಣಿದವರಿಗೆ ಬೇಕುಬೇಕಾದ್ದನ್ನು ಕೊಡಬಲ್ಲ ಅದ್ವಿತೀಯವಾದ ಸಿರಿಯುಳ್ಳವನು ತಾನಾದರೂ ತನಗೆ ಉಡಲೊಂದು ತೊಗಲೆ ಸಾಕು, ತನ್ನ ದೇಹ ಯಾವಾಗಲೂ ಹೆಂಗಸಿನ ದೇಹದೊಡನೆ ಬೆರೆತಿದ್ದರೂ ಮನೋನಿಗ್ರಹದಲ್ಲಿ ಯತಿಗಳನ್ನೂ ಮೀರಿದವನಿವನು, ಅಷ್ಟ ದೇಹಗಳಿಂದ ಈ ಲೋಕವನ್ನೆಲ್ಲ ಧರಿಸಿದ್ದರೂ ನಿರಭಿಮಾನಿ; ಅಂಥ ಈಶ್ವರ ನಿಮ್ಮ ಪರಿ ಭಾವನೆಗೆ ಸಿಕ್ಕಿ ಒಳ್ಳೆಯ ದಾರಿ ಗೋಚರಕ್ಕೆ ಬರುವ ಹಾಗೆ ನಿಮ್ಮೊಳಗಿನ ತಮಃಪ್ರವೃತ್ತಿಗಳನ್ನು ಪರಿಹರಿಸಲಿ." ತಾರುಣ್ಯದಲ್ಲಿ ಬಾಳ ಗುರಿ ದಿಕ್ಕುದಿಕ್ಕುಗಳಲ್ಲಿ ಕವಲೊಡೆಯುತ್ತದೆ. ಲೋಭ ಕಾಮಮೋಹಗಳು ಅಲ್ಲಿನ ದಾರಿಚೋರರು. ಅವುಗಳ ಹಿಡಿತದಿಂದ ತಪ್ಪಿಸಿಕೊಳ್ಳುವುದಕ್ಕೆ ದೈವಕೃಪೆಯಿದ್ದರೆ ಮಾತ್ರ ಸಾಧ್ಯ. ಏಕೆಂದರೆ ಹರೆಯದಲ್ಲಿ ಲೋಕಕ್ಕೆ ಬಣ್ಣಕೊಟ್ಟು ಆಕರ್ಷಕ ವಾಗಿ ಮಾಡುವ ಬಣ್ಣಗಾರಿಕೆ ಇವಕ್ಕೆ ಪ್ರಕೃತಿ ಕೊಟ್ಟಿರುವ ವರ. ಈ ವರದಿಂದ ಉಜ್ಜೃಂಭಿ ಸುವ ಈ ಆಸುರೀವೃತ್ತಿಗಳ ಹಾವಳಿಗೆ ಪ್ರತೀಕಾರವೇ ಇಲ್ಲವೇನೋ ಎನಿಸುತ್ತದೆ. ಜಾಣರು ವಿಶ್ವೇಶ್ವರನ ಧ್ಯಾನದಲ್ಲಿ ಎಡರುಗಳನ್ನು ನೀಗುತ್ತಾ ಒಳ್ಳೆಯ ದಾರಿಯಲ್ಲಿ ಸಾಗುತ್ತಾ ತಮ್ಮ ಬಾಳಿನ ಕೊನೆಯನ್ನು ಸುಖವಾಗಿ ಮುಟ್ಟಬಲ್ಲರು. ಇಂಥ ತಮಃಪ್ರಶಮನಕರವಾದ ಚಿತ್ತ ವೃತ್ತಿಯ ನಿರ್ಮಾಣಕ್ಕೆ ಚರ್ಮಾಂಬರನೂ ಉಮಾಪಾರ್ಶ್ವನೂ ಅಷ್ಟದೇಹಿಯೂ ಆದ, ಕಾಳಿ ದಾಸ ಕವಿ ಕಡೆದಿಟ್ಟಿರುವ, ಶ್ರೀ ಪರಮೇಶ್ವರಮೂರ್ತಿಗಿಂತ ಉತ್ತಮೋಪಕರಣ ಸನಾತನ ಸಂಪ್ರದಾಯದಲ್ಲಿ ಹುಟ್ಟಿ ಬೆಳೆದಿರುವ ನಮ್ಮಂಥವರಿಗಿಲ್ಲವೆನಿಸುತ್ತದೆ. "ಎಲ್ಲೆ ಯೌವನಗ್ರಸ್ತನೇ,

ಈಗ ನೀನು ನಿನ್ನೊಳಗನ್ನು ನೋಡಿಕೊಂಡು ಸರಿಪಡಿಸಿಕೊಳ್ಳಬೇಕಾದ ಸಮಯ ಬಂದಿದೆ; ಈ ದಿವ್ಯಮೂರ್ತಿಯ ಬೆಳಕಿನಲ್ಲಿ ನಿನ್ನ ದಾರಿಯನ್ನು ಕಂಡುಕೋ" ಎನ್ನುತ್ತದೆ ಕವಿವಾಣಿ.

ತಾರುಣ್ಯದಲ್ಲಿ ಇಂಥ ಸಂಯಮದ ಫಲವಾದರೂ ಎಂಥದು? ಪ್ರಕೃತಿ ವಿರುದ್ಧವಾದ ಈ ಪ್ರಯತ್ನ ತಾನೆ ಏಕೆ? ಇದಕ್ಕೆ ಉತ್ತರ, ಶಾಕುಂತಲದ ನಾಂದೀಶ್ಲೋಕದಲ್ಲಿ ಸಿಕ್ಕುತ್ತದೆ. ಮೊದಲ ನೋಟಕ್ಕೆ ಇದು ಬಣ್ಣವಿಲ್ಲದ ಬರಿ ಸ್ತುತಿಗೆಂದು ಮಾಡಿರುವ ಮಂಗಳ ಶ್ಲೋಕದಂತೆ ಕಾಣಬಹುದು. ಬಹುಕಾಲದವರೆಗೆ ಈ ಶ್ಲೋಕ ನನಗೆ ಹಿಡಿಸಿಯೂ ಇರಲಿಲ್ಲ. ಈಚೀಚೆಗೆ ನನಗೆನಿಸುತ್ತಿದೆ, ಕಾಳಿದಾಸ ಇದರಷ್ಟು ಗಂಭೀರವಾದ, ಏಕೆ, ಇದಕ್ಕೆ ಸರಿತೂಗುವ ಮತ್ತೊಂದು ಪದ್ಯವನ್ನು ಬರೆದಿಲ್ಲ ಎಂದು. ನೆನೆನೆನೆದಷ್ಟು ಮನಸ್ಸಿಗೆ ಮಂಗಳವನ್ನುಂಟುಮಾಡುವ ಶ್ಲೋಕ ವಿದು; ಆ ಅತ್ಯಂತ ಮನೋಹರವೂ ಗಂಭೀರ ಸುಂದರವೂ ಪೂಜ್ಯವೂ ಲೋಕಮೋಹಕವೂ ಆದ ನಾಟಕಕ್ಕೆ ತಕ್ಕ ನಾಂದೀಶ್ಲೋಕ. "ಯಾ ಸೃಷ್ಟಿಃ ಸ್ರಷ್ಟುರಾದ್ಯಾ ವಹತಿ ವಿಧಿಹುತಂ ಯಾ ಹವಿರ್ಯಾ ಚ ಹೋತ್ರೀ| ಯೇ ದ್ವೇ ಕಾಲಂ ವಿಧತ್ತಃ ಶ್ರುತಿವಿಷಯಗುಣಾ ಯಾ ಸ್ಥಿತಾ ವ್ಯಾಪ್ಯ ವಿಶ್ವಂ|| ಯಾಮಾಹುಸ್ಸರ್ವಭೂತಪ್ರಕೃತಿರಿತಿ ಯಯಾ ಪ್ರಾಣಿನಃ ಪ್ರಾಣವಂತಃ| ಪ್ರತ್ಯಕ್ಷಾಭಿಃ ಪ್ರಸನ್ನಸ್ತನುಭಿರವತು ವಸ್ತಾಭಿರಷ್ಟಾಭಿರೀಶಃ||" ಅರ್ಥ ತಿಳಿನೀರಿನಂತೆ ವಿಶದವಾಗಿದೆ; ಛಂದಸ್ಸು ಸಮುದ್ರದಂತೆ ನಿಂತೆಡೆಯಲ್ಲೇ ತುಂಬು ಹರ ವನ್ನೂ ಸೆಳವನ್ನೂ ಭಾವಕಲ್ಲೋಲಗಳನ್ನೂ ಮೆರೆಸುತ್ತದೆ. ಈಶ್ವರನ ಅಷ್ಟದೇಹಗಳನ್ನು ವರ್ಣಿಸುವ ಶ್ಲೋಕವಿದು. ದೇವರವು ಈ ದೇಹಗಳು ಎಂದವು ನಮಗೆಟುಕದೆ ಇರುವಂಥವಲ್ಲ, ಅವಕ್ಕೆ ತತ್ತ್ವಗಳ ಕವಚವಿಲ್ಲ, ಅವು ಗೋಚರಕ್ಕೆ ಬರಲು ಭಕ್ತನ ಮನೋವೃತ್ತಿಯೂ ಬೇಕಿಲ್ಲ. ಅಲ್ಪಮತಿಗಳಿಗೂ ಅವು ಮರೆಗೊಳ್ಳವು; ಏಕೆಂದರೆ ಅವು ಮನೋಬುದ್ಧಿಗಮ್ಯ ಮಾತ್ರವಲ್ಲ, ಇಂದ್ರಿಯಗಳಿಂದಲೂ ಗ್ರಹಣಮಾಡಿ ಅನುಭವಿಸತಕ್ಕವು. ಸೃಷ್ಟಿಕರ್ತನ ಮೊದಲ ಸೃಷ್ಟಿಯೆನಿ ಸುವ ನೀರು–ಶಿವನ ಎಂಟು ಮೈಗಳಲ್ಲಿ ಇದಕ್ಕೆ ಮೊದಲೆಣಿಕೆ–ಎಷ್ಟು ಮೋಹಕವಾದ ಪದಾರ್ಥ ಈ ನೀರೆಂಬುದು! ಈ ಜೀವ ಮೊದಲೆಲ್ಲಿ ಹುಟ್ಟಿತು ಎಂದರೆ ಕಡಲಲ್ಲಿ ಎನ್ನುತ್ತಾನೆ ವಿಜ್ಞಾನಿ. ನಮ್ಮುರವೇ ನೀರಿನಲ್ಲಿ ತೇಲುತ್ತಿದೆ ಎನ್ನುತ್ತಾನೆ ದೇಹವಿಜ್ಞಾನಿ. ನೀರ ಹರಹಿನಲ್ಲಿ ನಲಿಯದ ಕಣ್ಣೆಲ್ಲುಂಟು? ಅದರ ಒಂದಿಷ್ಟನ್ನು ಅಂಗೈಯಲ್ಲಿ ಹಿಡಿದು ಜಗದ ಮಂಗಳವನ್ನೆಲ್ಲ ನಮ್ಮೊಡಲಲ್ಲಿ ತುಂಬಿಕೊಳ್ಳಬಹುದು. ಅದಾದಮೇಲೆ, ವಿಧ್ಯುಕ್ತವಾಗಿ ಹೋಮಮಾಡಿದ ಹವಿಸ್ಸನ್ನು ಆಯಾ ಎಡೆಗೆ ಮುಟ್ಟಿಸುವ ವೈದಿಕಾಗ್ನಿ ಮತ್ತು ಹೀಗೆ ಹೋಮಿಸುವ ಯಜಮಾನ–ಅರ್ಥಾತ್ ತನ್ನಿಂದ ತನ್ನನ್ನು ಹೆಕ್ಕಿಕೊಂಡು ಸಮುದ್ಧೃತನಾಗಲೆಳಸುವ ಪುರುಷ, ಆ ಸಿದ್ಧಿಗಾಗಿ ಆತ ಬಳಸಿಕೊಳ್ಳುವ ಸಾಧನೋಪಕರಣಗಳು ಇವೂ ಶಿವಶರೀರಗಳೇ. ಲೋಕದ ಸಾಂಸ್ಕೃತಿಕ ಇತಿಹಾಸ ಇಂಥ ಪುರುಷರ ಚರಿತ್ರೆಯಿಂದ ಬೆಳಗುತ್ತಿದೆ. ಆತ್ಮ ಎಂದರೆ ಅದೊಂದು ಮೌಲ್ಯಗಳ ಸಂಸ್ಥೆ. ಆತ್ಮತೃಷೆ ಯಿಲ್ಲದವರಿಂದ ಈ ಲೋಕಕ್ಕೆ ಯಾವ ಉಪಕಾರವೂ ಇಲ್ಲ. ನಮ್ಮೀಗಿನ ನಾಗರಿಕತೆ, ಸಂಸ್ಕೃತಿ ಸಂಪನ್ನತೆ, ಸಂತೋಷಸಮೃದ್ಧಿ, ಇವುಗಳೆಲ್ಲದರ ಮೂಲದಲ್ಲಿದ್ದಾನೆ ಈ ಸಾಧಕ ಪುರುಷ ಮತ್ತು ಆತ ತನ್ನ ಸಿದ್ಧಿಗಾಗಿ ಬಳಸಿಕೊಳ್ಳುವ ಸಾಮಗ್ರಿಗಳೂ ಸಹ. ಆತ ಎಷ್ಟು ದೈವಸಂಪನ್ನನೋ ಅಷ್ಟೆ ದೈವಸಂಪತ್ತಿ ಅವನಿಗೊದಗುವ ಸತ್ತ್ವಗಳಿಗೂ ಇದೆ. "ಜಯೋಸ್ಮಿ ವ್ಯವಸಾಯೋಸ್ಮಿ" ಎಂಬ ಗೀತಾವಾಕ್ಯ ಈಗ ನೆನಪಿಗೆ ಬರುತ್ತದೆ. "ವಹತಿ ವಿಧಿಹುತಂ ಯಾ ಹವಿರ್ಯಾ ಚ ಹೋತ್ರೀ." ರಾಮ ಮಾತ್ರ ದೇವರಲ್ಲ ನಮಗೆ, ರಾಮದೂತ ಹನುಮಂತನೂ ಸಹ ದೇವರು—ಹಾಗೆಯೇ ರಾಮಸೇನೆ ಮತ್ತು ಸೇವಕರು, ಸೇತುವೂ ಕೂಡ. ಇನ್ನು ಚಂದ್ರ ಸೂರ್ಯರನ್ನು ಕುರಿತು ಏನೆಂದು ಹೇಳೋಣ. ಆತ್ಮಕಾಂಕ್ಷಿಗಳಿಗೆ ರವಿ ಉರಿಯುವ ತನ್ನ ಮಂಡಲದ ನಡುವೆ ಶೀತಳ ಕಮಲದಳವನ್ನು ತೋರಿಸಿ ತನ್ಮಧ್ಯದಲ್ಲಿ ಪುರುಷೋತ್ತಮನ ಸ್ಥಿತಿಯನ್ನು ದ್ಯೋತಿಸುತ್ತಾನೆ; ಭೌತಶಾಸ್ತ್ರಜ್ಞರಿಗೆ ತನ್ನ ತೇಜೋರಹಸ್ಯಗಳನ್ನು ಅನುಕ್ಷಣವೂ ಮೆರೆಸುತ್ತಾ ಬೆರಗುವಡಿಸುತ್ತಲೇ ಇದ್ದಾನೆ. ಚಂದ್ರನ ಮಂಕು ನಮಗಿನ್ನೂ ತಪ್ಪಿಲ್ಲ. ಇವೆರಡರ ಬೆಳಕಿನಲ್ಲೂ ನಮ್ಮ ಕಂಗಳು

ಈಶ್ವರತನುವನ್ನು ಮುಟ್ಟುತ್ತವೆ. ಆದುದರಿಂದಲೇ ಅವುಗಳಿಂದ ನಮಗೀ ಆನಂದ. ಮುಂದೆ ದಿವ್ಯವೂ ರಹಸ್ಯಮಯವೂ ಜ್ಯೋತಿರ್ಗರ್ಭವೂ ಸರ್ವವ್ಯಾಪಿಯೂ ಆದ ಆಕಾಶ. "ಶ್ರುತಿವಿಷಯ ಗುಣಾ." ಈ ಮಾತನ್ನು ಕೇಳಿ ಆಧುನಿಕ ವಿಜ್ಞಾನಿಗಳು ನಗಬಹುದು. ಆದರೆ ಕವಿ ವಿಜ್ಞಾನಿಯಲ್ಲ; ತತ್‌ತತ್‌ಕಾಲೀನ ವಿಜ್ಞಾನೋಪಾರ್ಜಿತ ಜ್ಞಾನ ಆತನ ಕಲಾಸಾಮಗ್ರಿ, ಅಷ್ಟೆ; ಬದನೆಕಾಯಿ ನಮ್ಮದಲ್ಲ, ಗೊಜ್ಜು ನಮ್ಮದು. ಆದರೆ ಗಾಳಿ ಹರಿಯುವುದಕ್ಕೂ ಆಕಾಶ ಬೇಕಲ್ಲ. "ಯಾ ಸ್ಥಿತಾ ವ್ಯಾಪ್ಯ ವಿಶ್ವಂ." ಅನೇಕಾಶ್ರಯವಾದ ಈ ಆಕಾಶ, ಯಾವುದರ ಆಸರೆಯಿಲ್ಲದೆ ಸ್ಥಾವರ ಸ್ಥಾವರವಲ್ಲವೋ ಜಂಗಮ ಜಂಗಮವಲ್ಲವೋ, ಅದೂ ಶಿವನ ದೇಹಗಳಲ್ಲೊಂದು, ಎಲ್ಲರಿಗೂ ಪ್ರತ್ಯಕ್ಷವಾದದ್ದು, ಎಲ್ಲರ ಅನುಭವಕ್ಕೂ ಕ್ಲೇಶವಿಲ್ಲದೆ ಬರತಕ್ಕದ್ದು. ಇನ್ನು ಈ ಮಣ್ಣಿನ ವಿಚಾರ ವಾಗಿ ಕವಿ ಏನು ಹೇಳುತ್ತಾನೆ? "ಯಾಮಾಹುಸ್ಸರ್ವಭೂತಪ್ರಕೃತಿರಿತಿ." ಮಿಕ್ಕೆಲ್ಲ ಉಕ್ತಿಗ ಳಂತೆ ಇದೂ ತಲಸ್ಪರ್ಶಿಯಾದ ಮಾತು. ನಮ್ಮ ಮೈ ಮತ್ತು ನಮ್ಮೊಂದಿಗಿರುವ ಸಮಸ್ತ ಪ್ರಾಣಿ ಗಳ ಮೈಗೂ ಸಹ ಮಣ್ಣೇ ಆಧಾರ. ಮಣ್ಣಿನಿಂದಲೇ ಹುಟ್ಟಿ ಮಣ್ಣಿಗೇ ಮರಳುತ್ತವೆ ನಮ್ಮೆಲ್ಲರ ದೇಹಗಳು. ನಮಗೂ ಮಿಕ್ಕ ಪ್ರಾಣಿಗಳಿಗೂ ಸೌಂದರ್ಯ ಈ ಶಿವತನುವಿನಿಂದ ಏರ್ಪಟ್ಟು ಹೋಗಿದೆ. ಇನ್ನೇಕೆ ವೈಮನಸ್ಯ ಜುಗುಪ್ಸೆಗಳು? ಮುಂದೆ ಈ ಗಾಳಿ—"ಯಯಾ ಪ್ರಾಣಿನಃ ಪ್ರಾಣವಂತಃ"—ಈ ಮಾತಿಗೆ ಏನು ಹೇಳೋಣ! ತಾಯ ಗರ್ಭದಿಂದ ಹೊರಕ್ಕೆ ಬಂದು ಮಗುವಿನ ಹೊಕ್ಕುಳ ಕುಡಿ ಕಡಿದು ಅದು ಆಕೆಯಿಂದ ಬೇರ್ಪಟ್ಟ ಕೂಡಲೆ ಈ ಗಾಳಿಯ ಕುಡಿಗಲ್ಲವೇ ಅದು ಅಂಟಿಕೊಳ್ಳುವುದು? ಪ್ರತಿಯೊಂದು ಸಲದ ನಮ್ಮ ಸಿರೆಳದಾಟದಲ್ಲೂ ನಮಗೆ ಶಿವನ ಮೈಸೋಂಕು ತಪ್ಪದು. ಈ ತೂಗುಯ್ಯಾಲೆಯಲ್ಲಿ ನಮ್ಮೆಲ್ಲರ ಪ್ರಾಣ ಜೀಕಿಡುತ್ತಿದೆ. ಈ ಗಾಳಿ, ಈ ನೀರು, ಈ ಬೆಳಕು, ಈ ಆಕಾಶ, ಇದರ ನಡುವೆ ಜಾಗರಿಸುತ್ತಿರುವ ಚೇತನ, ಬೆಲೆ ಗಳನ್ನು ರೂಢಿಸುವ ಸಾಹಸಿ, ಇವೆಲ್ಲ ನಮ್ಮೆಲ್ಲರಿಗೂ ಪ್ರತ್ಯಕ್ಷವಾಗಿ ದೊರೆಯುವ ಶಿವತನುಗಳು. ಈ ದಿವ್ಯಗಳ ಸಂಘಾತದಿಂದ ಒಬ್ಬ ವಿರಾಡ್ರೂಪಿ, ಸರ್ವಶಿವ, ನವ್ಯ ಪುರುಷ ಉದಿಸಿಬರುತ್ತಾನೆ ಈ ಮಹಾಕವಿಯ ಈ ನಾಂದೀಶ್ಲೋಕದಲ್ಲಿ. **ಪ್ರತ್ಯಕ್ಷಗಳಾದ** ಎಂಟುತನುಗಳಿಂದಲೂ ಕೂಡಿದ ಈಶ್ವರ "ಪ್ರತ್ಯಕ್ಷಾಭಿಃ ಪ್ರಪನ್ನಃ" ನಿಮ್ಮನ್ನು ಕಾಪಾಡಲೆಂದು ಕವಿವಾಣಿ ನಮ್ಮನ್ನು ಹರಸು ತ್ತದೆ.

ಹಿಂದೆ ಸೂಚಿಸಿದಂತೆ ಈ ಹರಕೆಯಲ್ಲಿ ಒಡೆದುಬರುವ ಧ್ವನಿಯಿದು: ಯೌವನದಲ್ಲಿ ನಿಮ್ಮ ಇಂದ್ರಿಯಗಳನ್ನೂ ಮನಸ್ಸನ್ನೂ ಬುದ್ಧಿಯನ್ನೂ ಹತೋಟಿಯಲ್ಲಿಟ್ಟುಕೊಂಡು ಹೃದಯವನ್ನು ಶುದ್ಧಿಸಿ ಅವು ಆನಂದಾಶ್ರಯಗಳಾಗುವಂತೆ ದೃಢಪ್ರಯತ್ನಮಾಡಿರಿ. (ಇಂಗ್ಲಿಷಿನಲ್ಲಿ ಹೇಳಬೇ ಕಾದರೆ, Make them sensitive to God's touch.) ಈ ಪ್ರಯತ್ನದ ಸಿದ್ಧಿಯನ್ನು ನಿಮ್ಮ ಹರೆಯ ತೀರುವ ವೇಳೆಗೆ ನೀವು ಪಡೆದು ಸುಖಿಸುತ್ತೀರಿ. ಆಗ ಈ ಜಗದ್ರೂಪಿಯಾದ ಆನಂದ ಸ್ವರೂಪನು ನಿಮ್ಮ ಕೈಗೆಟುಕುವಷ್ಟು, ಆತನನ್ನು ಸರ್ವೇಂದ್ರಿಯಗಳಿಂದಲೂ ಮುಟ್ಟಿಮುಟ್ಟಿ ನೋಡಿ ರುಚಿಗಂಡು ನಲಿಯುವಷ್ಟು, ಸನಿಯದಲ್ಲೆ ಸದಾ ಸನ್ನಿಹಿತನಾಗಿ ಸೌಖ್ಯಪ್ರದನಾಗು ತ್ತಾನೆ. ಕವಿಯ ಸಂದೇಶ ಸರಳ ಹಾಗೂ ಸ್ಪಷ್ಟ. ಹರೆಯ ತೀರುವ ವೇಳೆಗೆ ಪ್ರಸನ್ನವೂ ಗಂಭೀರವೂ ತೇಜಃಪೂರ್ಣವೂ ಸದಾಸಂಹೃಷ್ಟವೂ ಜಗಲ್ಲೀಲಾವಿನೋದಿಯೂ ಆದ ಮನಸ್ಸನ್ನು ಹೇಗೆ ಪಡೆಯಬಹುದೆಂಬ ಮಾರ್ಗವನ್ನು ತನ್ನ ಸ್ವಾನುಭವದಿಂದ ನೇರವಾಗಿ ತೋರಿಕೊಟ್ಟಿದ್ದಾನೆ ಕಾಳಿದಾಸ. ತಪಸ್ವಿಗಳು ಮಾತ್ರ ತಮ್ಮ ವೃದ್ಧಾಪ್ಯದಲ್ಲಿ ಇಂಥ ಮನಸ್ಸನ್ನು ಪಡೆಯಬಲ್ಲರು. ತಾರುಣ್ಯದಲ್ಲಿ ಈ ಲೋಕ ಸುಂದರವೆನಿಸುವುದೂ ಮುಪ್ಪಿನಲ್ಲಿ ಅದು ನೀರಸವೆನಿಸುವುದೂ ನಮ್ಮಂಥ ಲಘುಪ್ರವೃತ್ತಿಯ ಭವಿಗಳಿಗೆ ಆಗಿಬಂದದ್ದು. ಭರ್ತೃಹರಿಯ ವೈರಾಗ್ಯಶತಕದ ಮುಕ್ಕಾಲುಪಾಲು ಈ ವೃದ್ಧ ನಿಹತೇಂದ್ರಿಯರ ಗೋಳುಕರೆಯಿಂದ ತುಂಬಿದೆ. ಕಾಳಿದಾಸನ ಮಾತು ಬೇರೆ ತರದ್ದು. ಯೌವನದಲ್ಲಿ ಅಂತರ್ಮುಖನಾಗಿ ಆತ್ಮದ ಪಡೆಪಿನಲ್ಲಿ ಯತ್ನಗೊಳ್ಳು, ಅರಿಷಡ್ವರ್ಗವನ್ನು ಗೆಲ್ಲು; ವಾರ್ಧಿಕ್ಯದಲ್ಲಿ ಬಹಿರ್ಮುಖನಾಗಿ ಈ ಜಗತ್ತು ಎಷ್ಟೊಂದು ಚೆಲುವಿ

ನಿಂದಲೂ ಸ್ವಾರಸ್ಯದಿಂದಲೂ ತುಂಬಿದೆ ಎಂಬುದನ್ನು ಅರಿತು ಅದರ ಪ್ರತಿಯೊಂದು ಕ್ಷಣವನ್ನೂ ಅಮೃತದಂತೆ ಸೇವಿಸುತ್ತಿರು. ಆ ಶಿವಧ್ಯಾನಕ್ಕೆ ಈ ಶಿವಸ್ಪರ್ಶ ಫಲ. ಈ ದಿವ್ಯಶ್ಲೋಕಗಳನ್ನು ಪರಿಭಾವಿಸುತ್ತಾ, ಅವುಗಳಿಂದ ಮೂಡಿಬರುವ ದಿವ್ಯ ಧ್ವನಿಗಳನ್ನು ಏಕಾಂತವಾಗಿ ಆಲಿಸುತ್ತಾ ಮನಸ್ಸು ಆರ್ದ್ರವಾಗುತ್ತದೆ, ಕವಿಗೆ ಮಣಿಯುತ್ತದೆ; ಇನ್ನು ಕೆಲವು ವರ್ಷಗಳ ಮುಂಚೆ ಈ ಸಂದೇಶ ನಮಗೆ ಮುಟ್ಟಿದ್ದಿದ್ದರೆ ಈಗ ಈ ಜೀವ ಇನ್ನೆಷ್ಟು ಚೆನ್ನಾಗಿರುತ್ತಿತ್ತು ಎಂಬ ನಿರ್ವೇದವೂ ಮೂಡುತ್ತದೆ.

ಪು. ತಿ. ನರಸಿಂಹಾಚಾರ್

# ತಾಯ್ನುಡಿಯ ಬೋಧನೆಯ ಗೊತ್ತುಗುರಿಗಳು

ಆದಿಯಿಂದಲೂ ಮಾನವನು ತನ್ನ ಭಾವನೆಗಳನ್ನು ಅನೇಕ ಮಾಧ್ಯಮಗಳಿಂದ ಹೊರ ಹೊಮ್ಮಿಸಲು ಪ್ರಯತ್ನಮಾಡುತ್ತ ಬಂದಿದ್ದಾನೆ. ಚಿತ್ರಗಳನ್ನು ಬರೆಯುವುದರ ಮೂಲಕ, ಪ್ರತಿಮೆಗಳನ್ನು ನಿರ್ಮಿಸುವುದರ ಮೂಲಕ, ಭಿತ್ತಿಚಿತ್ರಗಳನ್ನು ಬಿಡಿಸುವುದರ ಮೂಲಕ, ಕುಂಚಗಳ ಕುಶಲತೆಯ ಮೂಲಕ, ಸಂಗೀತ ಮತ್ತು ನರ್ತನಗಳ ಮೂಲಕ ತನ್ನ ಭಾವನೆಗಳನ್ನು ಅಭಿವ್ಯಕ್ತಗೊಳಿಸುತ್ತ ನಡೆದಿದ್ದಾನೆ. ಅನಂತರ ಆ ಕಾರ್ಯವನ್ನು ಭಾಷೆಯ ಮೂಲಕವೂ ನೆರವೇರಿಸಿಕೊಳ್ಳುವುದನ್ನರಿತಿದ್ದಾನೆ. ದಿನಗಳೆದಂತೆಲ್ಲ ಭಾಷೆಯ ಪ್ರಾಧಾನ್ಯತೆ ಹೆಚ್ಚಾಗುತ್ತಿದ್ದು ಅದರ ಬಳಕೆಯು ನವುರಾದುದಾಗಿಯೂ ಕ್ಲಿಷ್ಟವಾದುದಾಗಿಯೂ ಪರಿಣಮಿಸಿದೆ. ಭಾಷೆಯ ಉಗಮದ ವಿಚಾರದಲ್ಲಿ ಅನೇಕ ತತ್ವಗಳು ಪ್ರತಿಪಾದಿತವಾಗಿದ್ದರೂ, ಅದು ಪರಸ್ಪರ ಸಂಪರ್ಕದಿಂದ ಬೆಳೆದು ಬಂದಿದ್ದು ನಿತ್ಯ ಪರಿವರ್ತನೆ ಹೊಂದುತ್ತಿರುವುದು ತಿಳಿದ ವಿಷಯ. ಆದುದರಿಂದಲೇ ಅದನ್ನು ಸಾಮಾಜಿಕ ಸಂಪರ್ಕದ ಒಂದು ಪರೀಕ್ಷೆಯೆಂದು ಕರೆದಿದ್ದಾರೆ.

### ಬಹುಭಾಷೆಗಳ ನಾಡು ಭಾರತ

ಅಂತೆಯೇ ಬಹುಕಾಲದಿಂದಲೂ ಭಾರತದಲ್ಲಿ ಅನೇಕ ಭಾಷೆಗಳು ಜನ್ಮತಾಳಿ ಸಾಮಾಜಿಕ ಸಂಪರ್ಕ ಪಡೆದು ಬೆಳೆದುಕೊಂಡು ಬಂದಿವೆ. ಭಾರತ ಏಕ ಆಡಳಿತದಲ್ಲಿರದ ಕಾಲದಲ್ಲಿ ಈ ಭಾಷೆಗಳು ತಮ್ಮ ಮಾರ್ಗವನ್ನೇ ಅನುಸರಿಸಿ ನಡೆದು ತಮ್ಮ ವ್ಯಕ್ತಿತ್ವವನ್ನುಳಿಸಿಕೊಂಡಿವೆ. ಬ್ರಿಟಿಷರ ಆಳಿಕೆಯಲ್ಲಿ ಇಂಗ್ಲಿಷ್ ಭಾಷೆ ಸಾರ್ವಜನಿಕವಾಗಲ್ಲದಿದ್ದರೂ, ಆಡಳಿತದ ಭಾಷೆಯಾಗಿ ಇಡೀ ಭಾರತವನ್ನೇ ವ್ಯಾಪಿಸಿತ್ತು. ಹಾಗಿದ್ದರೂ ಭಾರತೀಯ ಭಾಷೆಗಳು ನಿರಂತರವಾಗಿ ಬೆಳೆದುಕೊಂಡು ಬಂದಿವೆ. ಆದರೆ ಈಗಿನಷ್ಟು ಪ್ರಾಧಾನ್ಯತೆಯಿರಲಿಲ್ಲ; ಗೌರವ ಪುರಸ್ಕಾರಗಳೂ ದೊರೆತಿರಲಿಲ್ಲ. ಭಾರತ ಸ್ವತಂತ್ರವಾದ ಮೇಲೆ ಭಾರತೀಯ ಭಾಷೆಗಳ ಪ್ರಾಮುಖ್ಯತೆಯನ್ನು ಅರಿತುಕೊಳ್ಳಲಾಯಿತು. ೧೯೫೦ ರಲ್ಲಿ ಮೊದಲ ಬಾರಿಗೆ ಭಾರತ ರಾಜ್ಯಾಂಗದ ಒಂದು ಭಾಗವಾಗಿ ಭಾರತದ ಭಾಷೆಗಳ ಸ್ಥಾನವನ್ನು ನಿರ್ಧರಿಸಲಾಯಿತು. ಇದಕ್ಕಿಂತ ಮುಂಚಿತವಾಗಿ ಕೇಂದ್ರದಲ್ಲಿನ ಹಾಗೂ ಪ್ರಾಂತಗಳಲ್ಲಿನ ಮಂತ್ರಿಮಂಡಲಗಳು ಭಾಷೆಗಳ ಅಭಿವೃದ್ಧಿಯನ್ನು ವಿಚಾರಮಾಡಿದ್ದುವು. ೧೯೪೭ ರಿಂದೀಚೆಗೆ ಭಾರತೀಯ ಭಾಷೆಗಳಿಗೆ ಇಂಗ್ಲಿಷಿಗಿಂತ ಉತ್ತಮ ಸ್ಥಾನವನ್ನು ಕೊಡಲಾಗುತ್ತಿದೆ. ಇತ್ತೀಚೆಗೆ ಭಾಷೆಗಳನ್ನೇ ಆಧಾರವಾಗಿಟ್ಟುಕೊಂಡು ಭಾರತವನ್ನು ಭಾಷಾವಾರು ಪ್ರಾಂತಗಳಾಗಿ ವಿಂಗಡಿಸಲಾಗಿದೆ. ಒಂದು ಪ್ರದೇಶದಲ್ಲಿ ಹೆಚ್ಚು ಜನ ಮಾತನಾಡುವ ಭಾಷೆಯನ್ನು ಪ್ರಾದೇಶಿಕ ಭಾಷೆಯೆಂದು ಘೋಷಿಸಲಾಗಿದೆ. ಆದರೆ ಬೇರೆ ಬೇರೆ ಭಾಷೆಗಳನ್ನು ತಾಯ್ನುಡಿಯಾಗುಳ್ಳವರಿಗೆ ಸಾಕಷ್ಟು ಸೌಲಭ್ಯಗಳನ್ನೊದಗಿಸಲಾಗಿದೆ. ಅವರಿಗೆ ತಾಯ್ನುಡಿಯನ್ನು ಕಲಿಯುವ ಅನುಕೂಲಗಳನ್ನು ಕಲ್ಪಿಸಲಾಗಿದೆ. ಇವಲ್ಲದೆ ಆರ್ಷೇಯ ಭಾಷೆಗಳಾದ ಸಂಸ್ಕೃತ, ಅರ್ಯಾಬಿಕ್ ಮತ್ತು ಪರ್ಷಿಯನ್ ಭಾಷೆಗಳ ಅಧ್ಯಯನವು ಕೆಲವರಿಗೆ ಆವಶ್ಯಕ. ಭಾರತದ ರಾಜ್ಯಾಂಗವು ಹಿಂದಿಯನ್ನು "ಫೆಡರಲ್" ಭಾಷೆಯೆಂದು ತೀರ್ಮಾನಿಸಿರುವುದರಿಂದ ಅದರ ಅಭ್ಯಾಸವೂ ಬೇಕಾಗುತ್ತದೆ. ಇಂಗ್ಲಿಷ್ ಅಂತರರಾಷ್ಟ್ರೀಯ ಭಾಷೆಯಾಗಿರುವುದರಿಂದ ಅದರ ಪರಿಚಯವೂ ಅತ್ಯಾವಶ್ಯಕ. ಇಂತಹ ಸನ್ನಿವೇಶದಲ್ಲಿ ಪ್ರತಿಯೊಬ್ಬರೂ ತಾಯ್ನುಡಿ, ಅದು ಫೆಡರಲ್ ಭಾಷೆ ಅಥವಾ ತಾಯ್ನುಡಿಯಾಗಿಲ್ಲದೆ ಇದ್ದಾಗ ಪ್ರಾದೇಶಿಕ ಭಾಷೆ, ಆರ್ಷೇಯ ಭಾಷೆ ಮತ್ತು ಅಂತರರಾಷ್ಟ್ರೀಯ ಭಾಷೆ—ಹೀಗೆ ಒಟ್ಟು ನಾಲ್ಕು ಭಾಷೆಗಳನ್ನು ಅಭ್ಯಾಸ ಮಾಡಬೇಕಾಗುತ್ತದೆ.

## ವಿವಿಧ ಭಾಷೆಗಳ ಅಧ್ಯಯನದ ಗುರಿ

ಈ ರೀತಿ ನಾಲ್ಕು ಭಾಷೆಗಳನ್ನು ಕಲಿಯುವಾಗ ಎಲ್ಲವನ್ನೂ ಒಂದೇ ದೃಷ್ಟಿಯಿಂದ, ಒಂದೇ ರೀತಿಯ ಪ್ರಾಧಾನ್ಯತೆಯಿಂದ, ಒಂದೇ ಉದ್ದೇಶಕ್ಕಾಗಿ ಅಧ್ಯಯನ ಮಾಡಲು ಸಾಧ್ಯವಿಲ್ಲ. ನಮಗಿರುವ ಕಾಲಾವಕಾಶವನ್ನು ಗಮನಿಸಿದಾಗ ನಾವು ಭಾಷೆಗಳ ಅಧ್ಯಯನಕ್ಕಾಗಿ ಹೆಚ್ಚು ಕಾಲವನ್ನು ಕಳೆಯುತ್ತಿದ್ದೇವೆಂಬುದನ್ನು ವಿಷಾದದಿಂದ ಹೇಳಬೇಕಾಗಿದೆ. ಭಾಷೆಗಳಲ್ಲದೆ ಜೀವನದ ಆಗುಹೋಗುಗಳನ್ನು ನಿರ್ಧರಿಸುವ ಅನೇಕ ವಿಷಯಗಳನ್ನು ಕಲಿಯುವ ಹೊಣೆಗಾರಿಕೆ ನಮ್ಮ ಮೇಲಿದೆ. ಇಂತಹ ಸಂದರ್ಭದಲ್ಲಿ ನಾವು ಉಪಯೋಗಕ್ಕನುಗುಣವಾಗಿ ಭಾಷೆಗಳ ಅಧ್ಯಯನ ಮಾಡಬೇಕಾಗುತ್ತದೆ.

"ಪ್ರಚಾರ ದೃಷ್ಟಿಯಿಂದಲೂ, ವ್ಯಾಪ್ತಿ ಮತ್ತು ಅಭಿಮಾನಗಳ ದೃಷ್ಟಿಯಿಂದಲೂ ಇಂಗ್ಲಿಷಿಗೆ ಸರಿಸಮನಾಗಿ ನಿಲ್ಲುತ್ತಿರುವ ಭಾರತೀಯ ಭಾಷೆಯೆಂದರೆ ಹಿಂದಿಯೊಂದೆ. ಭಾರತದ ಸ್ವಾತಂತ್ರ್ಯ ಉದಯವಾದ ಮೇಲೆ ಇಂಗ್ಲಿಷಿಗೆ ಪ್ರಾಮುಖ್ಯತೆ ಕಡಿಮೆಯಾಗುತ್ತಲೂ, ಹಿಂದಿಯ ರಾಜಕೀಯ ಮತ್ತು ಸಾಮಾಜಿಕ ವರ್ಚಸ್ಸು ಹೆಚ್ಚುತ್ತಲೂ ಬರುತ್ತಿದೆ. ಅದನ್ನು ರಾಜಕೀಯ ರಾಷ್ಟ್ರಭಾಷೆಯನ್ನಾಗಿ ಮಾಡುವ ಯತ್ನವೂ ನಡೆಯುತ್ತಿದೆ." ಈಗಾಗಲೇ ಹಿಂದಿಯನ್ನು ಭಾರತದ ಫೆಡರಲ್ ಭಾಷೆಯೆಂದು ಗಣಿಸಲಾಗಿದೆ. ಇತರ ಪ್ರಾಂತ್ಯಗಳೊಡನೆ ಹಾಗೂ ಕೇಂದ್ರದೊಡನೆ ವ್ಯವಹರಿಸುವಾಗ ಹಿಂದಿಯ ಅಗತ್ಯ ಕಂಡುಬರುತ್ತದೆ. ಅದಕ್ಕೆ ಬೇಕಾದ ಹಿಂದಿಯ ಜ್ಞಾನ ಅತಿ ಹೆಚ್ಚಿನ ಮಟ್ಟದ್ದಾಗಿರಬೇಕಾಗಿಲ್ಲ. ವ್ಯವಹರಿಸುವಷ್ಟು ಶಕ್ತಿ ಬಂದರೆ ಸಾಕು. ಅದರಲ್ಲಿ ಎಲ್ಲರೂ ಪಾಂಡಿತ್ಯ ಗಳಿಸುವ ಆವಶ್ಯಕತೆಯಿಲ್ಲ. ಆದುದರಿಂದ ಹಿಂದಿಯನ್ನು ಈಗಿರುವಂತೆ ಕಡ್ಡಾಯದ ಮತ್ತು ಪರೀಕ್ಷೆಗಿಲ್ಲದ ಭಾಷೆಯಾಗಿ ಬೋಧನೆ ಮಾಡುವ ವ್ಯವಸ್ಥೆಯಾದರೆ ಸಾಕು.

ಆರ್ಷೇಯ ಭಾಷೆಗಳಾದ ಸಂಸ್ಕೃತ, ಅರ್‍ಯಾಬಿಕ್ ಮತ್ತು ಪರ್ಷಿಯನ್ ಭಾಷೆಗಳ ಅಧ್ಯಯನವೂ ಬೇಕಾಗಿದೆ. ಆದರೆ ಅವುಗಳ ಅಧ್ಯಯನ ಎಲ್ಲರಿಗೂ ಬೇಕಾಗಿಲ್ಲ. ಈ ಭಾಷೆಗಳನ್ನು ಸಾಂಸ್ಕೃತಿಕ ಭಾಷೆಗಳೆಂದೂ ಮತ್ತು ಪವಿತ್ರವಾದ ಭಾಷೆಗಳೆಂದೂ ಗಣಿಸಲಾಗಿದೆ. ಹಿಂದಿಯನ್ನು ಬಿಟ್ಟರೆ ಸಂಸ್ಕೃತ ಭಾರತದ ಎಲ್ಲ ಭಾಗಗಳಲ್ಲೂ ಉಪಯೋಗದಲ್ಲಿರುವ ಭಾಷೆ. ಆದರೆ ಅದನ್ನು ಎಲ್ಲಿಯೂ ಬಳಕೆಯ ಮಾತಾಗಿ ಉಪಯೋಗಿಸುತ್ತಿಲ್ಲ. ಸಾಂಸ್ಕೃತಿಕ ದೃಷ್ಟಿಯಿಂದ ಕೆಲವರಾದರೂ ಅದನ್ನು ಅಭ್ಯಸಿಸುವುದು ಅಪೇಕ್ಷಣೀಯ. ಆ ಭಾಷೆಯ ಪರಿಚಯದ ಅಗತ್ಯವೇನು? "ಆ ಭಾಷೆಯ ಪರಿಚಯವೂ ಬೇಕು; ಆದರೆ ವ್ಯವಹಾರಕ್ಕಲ್ಲ; ನೂತನ ಸಾಹಿತ್ಯ ನಿರ್ಮಾಣಕ್ಕೂ ಅಲ್ಲ, ಅದರಲ್ಲಿರುವ ಪ್ರಾಚೀನ ಸಾರಸ್ವತ ಖನಿಯನ್ನು ಆಯ್ದು ನಮ್ಮ ಜೀವನವನ್ನು ಅಲಂಕರಿಸಿಕೊಳ್ಳಲು ಮಾತ್ರ." ಎಂದರೆ ಸಂಸ್ಕೃತವನ್ನು ನಿತ್ಯ ಮಾತನಾಡುವುದಕ್ಕಾಗಿ ಅಭ್ಯಾಸ ಮಾಡಬೇಕಾಗಿಲ್ಲ. ಅದರಲ್ಲಿ ಸಾಹಿತ್ಯ ನಿರ್ಮಾಣವೂ ಬೇಕಾಗಿಲ್ಲ. ಅದರಿಂದ ಭಾರತದ ಇತರ ಭಾಷೆಗಳು ದಷ್ಟಪುಷ್ಟವಾಗಿ ಬೆಳೆಯಬೇಕಾಗಿದೆ ಅಷ್ಟೆ. ಆದುದರಿಂದ ಆಸಕ್ತಿಯುಳ್ಳವರಿಗೆ ಐಚ್ಛಿಕವಾದ ಅವಕಾಶವನ್ನು ಕಲ್ಪಿಸಿಕೊಟ್ಟರೆ ಸಾಕು.

ಇನ್ನು ಅಂತರರಾಷ್ಟ್ರೀಯ ಸಂಪರ್ಕವನ್ನು ಹೊಂದಲು, ವಿಶ್ವದ ಆಗುಹೋಗುಗಳಲ್ಲಿ ಪಾಲ್ಗೊಳ್ಳಲು ಆಧುನಿಕ ಪರಭಾಷೆಯೊಂದರ ನೆರವು ಬೇಕೇ ಬೇಕು. ಈಗಾಗಲೇ ಇಂಗ್ಲಿಷ್ ಆ ಕಾರ್ಯವನ್ನು ಮಾಡುತ್ತಿದೆ. ಆದುದರಿಂದ ಇಂಗ್ಲಿಷನ್ನು ಬಿಟ್ಟು ಬೇರೊಂದು ಭಾಷೆಯನ್ನು ಕಲಿಯುವ ಸಾಹಸ ಬೇಕಾಗಿಲ್ಲ. ಆದರೆ "ಇಂಗ್ಲಿಷಿಗೆ ಇನ್ನೂ ಪ್ರಾಧಾನ್ಯತೆ ಅನುಚಿತ; ಇಂಗ್ಲಿಷರು ಭಾರತದಿಂದ ಹಿಂದಿರುಗಿದಂದೇ ಇಂಗ್ಲಿಷಿಗಿದ್ದ ರಾಜಕೀಯ ವರ್ಚಸ್ಸು ಹೋಯಿತು; ನೂರಾರು ವರ್ಷಕಾಲ ಆ ಭಾಷೆ ಶಿಕ್ಷಣ ಮಾಧ್ಯಮವಾಗಿದ್ದರೂ ನಮ್ಮ ನಾಡಿನ ಜನಸಾಮಾನ್ಯರ ಜೀವನವನ್ನು ಉತ್ಕರ್ಷಗೊಳಿಸದುದೂ, ಆ ಕಾರ್ಯ ಮಾತ್ರ

ಭಾಷೆಯಿಂದ ಸಾಧ್ಯವೆಂಬುದು ಅರಿವಾಗಿಹೋಯಿತು." ವೈಜ್ಞಾನಿಕ ಬೆಳವಣಿಗೆ, ಆಧುನಿಕ ಅನ್ವೇಷಣೆ, ನೂತನ ಆಲೋಚನೆ-ಇವುಗಳಿಂದ ಒಂದಾಗುತ್ತಿರುವ ವಿಶ್ವದ ವಿಚಾರಗಳನ್ನು ತಿಳಿದುಕೊಳ್ಳುವ ಅತ್ಯುತ್ತಮ ಮಾಧ್ಯಮವಾಗಿ ಪರಿಣಮಿಸಿರುವ ಇಂಗ್ಲಿಷಿನ ಸಂಪರ್ಕ ಅನಿವಾರ್ಯ. ಆದರೂ ಅದರ ಸ್ಥಾನ ಮಾನ ಮಿತಿಯೊಳಗಿರಬೇಕಾಗುತ್ತದೆ. ಅದು ಇನ್ನು ಮುಂದೆ ಭಾರತದಲ್ಲಿ ಕೇವಲ ಒಂದು ಆಧುನಿಕ ವ್ಯವಹಾರ ಪರಭಾಷೆಯೊಂದಾಗಿ ಮಾತ್ರ ಉಳಿಯುತ್ತದೆ. ಅದಕ್ಕೆ ಈಗಿರುವ ಸ್ಥಾನ ತಪ್ಪಿಹೋಗುತ್ತದೆ. ಆದರೆ "ಅಂತರರಾಷ್ಟ್ರೀಯ ಸಂಬಂಧ, ಸಂಪರ್ಕಗಳನ್ನು ರೂಢಿಸಿಕೊಳ್ಳಲು ಇಂಗ್ಲಿಷ್ ಭಾಷೆಗೆ ಶಿಕ್ಷಣಕ್ರಮದಲ್ಲಿ ಸಾಕಷ್ಟು ಸ್ಥಾನವಿರಬೇಕಾಗುತ್ತದೆ."

## ತಾಯ್ನುಡಿಯ ಪ್ರಾಮುಖ್ಯತೆ

ಇವೆಲ್ಲಕ್ಕಿಂತ ಹೆಚ್ಚಾಗಿ ತಾಯ್ನುಡಿಯ ಪ್ರಾಮುಖ್ಯತೆ ಅತಿ ಹಿರಿದಾದುದು. ಅದು ಒಬ್ಬನ ವ್ಯಕ್ತಿತ್ವದ ಮೇಲೆ ತುಂಬಾ ಪರಿಣಾಮವನ್ನುಂಟುಮಾಡುತ್ತದೆ. ಆದುದರಿಂದ ಅದು ಪ್ರಥಮ ಭಾಷೆಯಾಗಬೇಕು ಮತ್ತು ಅದು ಶಿಕ್ಷಣ ಮಾಧ್ಯಮವಾಗಬೇಕು ಎಂಬ ಕೂಗು ಎಂದಿನಿಂದಲೂ ಇದೆ. ಈಗಾಗಲೇ ಆ ಕೂಗಿಗೆ ಸಾಕಷ್ಟು ಮನ್ನಣೆಯೂ ದೊರೆತಿದೆ. ಇದುವರೆಗೆ ತಾಯ್ನುಡಿಗೆ ಮನ್ನಣೆ ಮತ್ತು ಪುರಸ್ಕಾರಗಳನ್ನು ನೀಡದಿದ್ದುದರಿಂದ ಆಗಿರುವ ಹಾನಿಯನ್ನು ಕಂಡುಕೊಂಡಿದ್ದೇವೆ. ನಾಡಿನ ನಾಯಕರನೇಕರು ಈ ಕೆಳಗಿನ ಮಾತುಗಳಲ್ಲಿ ಈ ಅಭಿಪ್ರಾಯವನ್ನು ಅಭಿವ್ಯಕ್ತಗೊಳಿಸಿದ್ದಾರೆ.

"ಪರಭಾಷೆಯ ಮೂಲಕದ ಶಿಕ್ಷಣ ನಮ್ಮ ಮಕ್ಕಳ ಬುದ್ಧಿಶಕ್ತಿಯನ್ನು ಬರಡು ಮಾಡಿದೆ; ಅವರ ನರಗಳನ್ನು ದುರ್ಬಲಗೊಳಿಸಿದೆ; ಅವರನ್ನು ಗಿಳಿಗಳನ್ನಾಗಿ ಮಾಡಿದೆ."

—ಗಾಂಧೀಜಿ

"ದೇಶಭಾಷೆಯ ಶಿಕ್ಷಣದಿಂದ ಮಾತ್ರ ಪ್ರತಿಭೆ ವಿಕಾಸಗೊಳ್ಳುತ್ತದೆ."

—ಟಾಗೋರ್

"ಎಲ್ಲವನ್ನೂ ಪರಭಾಷೆಯ ಮೂಲಕ ಕಲಿಯಬೇಕಾಗಿರುವುದರಿಂದ ನಮ್ಮ ಪ್ರತಿಭಾ ಶಕ್ತಿ ವಿನಾಶವಾಗಿದೆ. ಬುದ್ಧಿಶಕ್ತಿ ಬರಡಾಗಿದೆ."

—ರಾಜೇಂದ್ರಪ್ರಸಾದ್

"ಶಿಕ್ಷಣವನ್ನು ಮಾತೃಭಾಷೆಯಲ್ಲಿ ನಡೆಸಿದ ಹೊರತು ಭಾರತೀಯರ ಪ್ರತಿಭಾಶಕ್ತಿ ಹೊರಹೊಮ್ಮುವುದಿಲ್ಲ."

—ಡಾ. ಅಮರನಾಥ ಝಾ

"ನಾಡಿನ ಹಿತಕ್ಕಾಗಿ ದೇಶಭಾಷಾ ಮಾಧ್ಯಮವನ್ನು ರೂಢಿಗೆ ತರಬೇಕು."

—ಸರ್ ಚಾರ್ಲ್ಸ್‌ವುಡ್

"ದೇಶಭಾಷಾಮಾಧ್ಯಮವನ್ನು ಕೂಡಲೆ ರೂಢಿಗೆ ತರುವುದು ಶ್ರೇಯಸ್ಕರ."

—ಸ್ಯಾಡ್ಲರ್ ಮತ್ತು ಹಾರ್ಟಾಗ್ ಸಮಿತಿಗಳು.

"ಭರತಖಂಡದ ಅಜ್ಞಾನಕ್ಕೆ ಪರಭಾಷಾಮಾಧ್ಯಮವೇ ಕಾರಣ."

—ಡಾ. ಅನಿಬೆಸೆಂಟ್

ನಾಯಕರ ಈ ಮಾತುಗಳನ್ನು ನೆನೆದಾಗ ನಮಗೆ ಮಾತೃಭಾಷೆಯ ಪ್ರಾಮುಖ್ಯತೆಯ ಅರಿವಾಗುತ್ತದೆ. ಈಗ ಮಾತೃಭಾಷಾ ಬೋಧನೆ ಒಬ್ಬ ಉಪಾಧ್ಯಾಯರ ಕೆಲಸವಲ್ಲವೆಂದೂ, ಅದು ಎಲ್ಲ ಉಪಾಧ್ಯಾಯರ ಕೆಲಸವೆಂದೂ ತಿಳಿದುಕೊಂಡಿದ್ದೇವೆ. ಅಂತೆಯೇ ತಾಯ್ನುಡಿಯ ಬೋಧನೆ ಯಾವುದೋ ಒಂದು ಗೊತ್ತಾದ ಗಂಟೆಗೆ ಮಿತಿಗೊಳ್ಳದೆ ಅದು ಇಡೀ ಶಾಲಾ

ಜೀವನವನ್ನೇ ಆವರಿಸಿಕೊಳ್ಳಬೇಕಾಗಿದೆ. ಈ ಸಂದರ್ಭದಲ್ಲಿ ಇಂಗ್ಲಿಷಿನ ವಿಷಯದಲ್ಲಿ ಹ್ಯಾಡೋ ವರದಿಯಲ್ಲಿ ಹೇಳಿರುವ ಮಾತುಗಳು ತುಂಬಾ ಮನನೀಯವಾಗಿವೆ.

"ವೇಳಾಪತ್ರಿಕೆಯಲ್ಲಿ ಗೊತ್ತುಪಡಿಸಿದಂತೆ ಕೆಲವು ಗಂಟೆಗಳಿಗೆ ಮಾತ್ರ ಅನ್ವಯಿಸುವಂತೆ ಇಂಗ್ಲಿಷ್ ಬೋಧನೆಯನ್ನು ಬೇರ್ಪಡಿಸಬಾರದು. ಪಠ್ಯವಸ್ತುವಿನ ಯಾವ ವಿಷಯದಲ್ಲಾಗಲಿ ವಿದ್ಯಾರ್ಥಿಗಳು ತಮ್ಮ ಅಭಿಪ್ರಾಯಗಳನ್ನು ಬಾಯ್ನುಡಿಯಲ್ಲಾಗಲಿ ಅಥವಾ ಬರವಣಿಗೆಯಲ್ಲಾಗಲಿ ಸಮಂಜಸವಾದ ಮತ್ತು ತಪ್ಪಿಲ್ಲದ ಭಾಷೆಯಲ್ಲಿ ವ್ಯಕ್ತಪಡಿಸಲು ತರಬೇತಿಯನ್ನು ಕೊಡಬೇಕು. ಆದುದರಿಂದ ಪ್ರತಿಯೊಂದು ವಿಷಯದ ಬೋಧನೆಯಲ್ಲಿಯೂ ಬಳಸುವ ಇಂಗ್ಲಿಷಿನ ಮೇಲೆ ಜಾಗರೂಕತೆಯಿಂದ ಕೂಡಿದ ಮೇಲ್ವಿಚಾರಣೆ ಅತ್ಯಾವಶ್ಯಕ."

ಈ ಮಾತುಗಳು ಯಾವ ಮಾತೃಭಾಷೆಗಾದರೂ ಅನ್ವಯವಾಗುವ ಮಾತುಗಳಾಗಿವೆ. ತಾಯ್ನುಡಿ ಇಡೀ ಶಾಲಾಜೀವನವನ್ನು ಆವರಿಸಿಕೊಳ್ಳಬೇಕಾಗಿದೆಯಲ್ಲದೆ ಅದರ ಮೇಲೆ ಸಕಾಲಿಕ ತನಿಖೆಯೂ ನಡೆಯಬೇಕು. ತಾಯ್ನುಡಿಯ ಪ್ರಾಮುಖ್ಯತೆಯನ್ನು ಸಾರಲು ಇನ್ನೂ ಅನೇಕ ಕಾರಣಗಳನ್ನು ಕೊಡಬಹುದು.

೧. ಆಲೋಚನೆ ಮತ್ತು ಭಾಷೆ ಇವೆರಡೂ ಬೇರ್ಪಡಿಸಲಾರದವುಗಳು. "ಕಾರಣ, ಆಲೋಚನೆ ಮತ್ತು ಅಂತರಂಗದ ವಾಣಿ—ಇವೆರಡೂ ಒಟ್ಟಿಗೆ ಬೆಳೆದು ಒಟ್ಟಿಗೆ ನಾಶವಾಗುತ್ತವೆ. ನಾವು ಒಂದನ್ನು ಬಿಟ್ಟು ಇನ್ನೊಂದನ್ನು ಕಲಿಯಲು ಸಾಧ್ಯವಿಲ್ಲ. ಮಾತೃಭಾಷೆ—ಮಗು ಆಲೋಚಿಸುವ ಮತ್ತು ಕನಸುಕಾಣುವ ಭಾಷೆಯಲ್ಲಿನ ತರಬೇತಿಯು ವಿದ್ಯಾಭ್ಯಾಸದ ಮೊಟ್ಟಮೊದಲನೆಯ ಸಾಧನವಾಗುವುದಲ್ಲದೆ ಸಂಸ್ಕೃತಿಯ ಸಂಕೇತವೂ ಆಗುತ್ತದೆ."

೨. ಇದು ನಾವು ಇನ್ನೊಬ್ಬರೊಡನೆ ಮಾತನಾಡುವುದರ ಮೂಲಕ ಮತ್ತು ಬರವಣಿಗೆಯ ಮೂಲಕ ಸಂಪರ್ಕವನ್ನು ಬೆಳೆಸಿಕೊಳ್ಳುವ ಮಾಧ್ಯಮ. ನಾವು ನಿತ್ಯದ ಜೀವನದಲ್ಲಿ ಅನೇಕರೊಡನೆ ಸಂಪರ್ಕವನ್ನಿಟ್ಟುಕೊಳ್ಳಬೇಕಾಗುತ್ತದೆ. ಈ ಕಾರ್ಯ ತಾಯ್ನುಡಿಯೊಂದರಿಂದಲೇ ಸಾಧ್ಯ. ನಾವು ನಮ್ಮ ಸಂಸ್ಕೃತಿಯನ್ನು ಬೇರೊಂದು ಪರಭಾಷೆಯ ಮೂಲಕ ಶಿಕ್ಷಣ ನೀಡುವುದರಿಂದ ಖಂಡಿತವಾಗಿಯೂ ಬೋಧಿಸಲು ಸಾಧ್ಯವಿಲ್ಲ. "ಉತ್ತಮ ಪ್ರಜೆಯಲ್ಲಿರಬೇಕಾದ ಸದ್ಗುಣಗಳಾದ—ಸ್ಪಷ್ಟವಾದ ಆಲೋಚನೆ, ಸ್ಪಷ್ಟವಾದ ಅಭಿವ್ಯಕ್ತಿ, ಆಲೋಚನೆ ಮತ್ತು ಅನುಭವಗಳಲ್ಲಿ ನಿಸ್ಪೃಹತೆ, ಮಾನಸಿಕ ಮತ್ತು ಉತ್ಪಾದಕತ್ವಜೀವನದ ಪರಿಪೂರ್ಣತೆ ಇವುಗಳನ್ನು ಬೋಧಿಸಬೇಕಾದರೆ ತಾಯ್ನುಡಿಯ ಮಾನಸಿಕ ಮತ್ತು ಬೌದ್ಧಿಕ ಅಂಶಗಳ ಕಡೆ ಗಮನಕೊಡಬೇಕು."

೩. "ಮಕ್ಕಳ ಮಾನಸಿಕ ಬೆಳವಣಿಗೆ, ಜ್ಞಾನದ ಬೆಳವಣಿಗೆ, ಅಭಿವ್ಯಕ್ತಗೊಳಿಸುವ ಸಾಮರ್ಥ್ಯದ ಬೆಳವಣಿಗೆ, ಕ್ರಿಯಾತ್ಮಕ ಮತ್ತು ಉತ್ಪಾದಕ ಶಕ್ತಿಯ ಬೆಳವಣಿಗೆ—ಇವುಗಳು ತಾಯ್ನುಡಿ ಬೋಧನೆಯನ್ನವಲಂಬಿಸುತ್ತವೆ."

## ತಾಯ್ನುಡಿಯ ಬೋಧನೆಯ ಗುರಿ

ತಾಯ್ನುಡಿಯ ಬೋಧನೆಯ ಗುರಿಗಳನ್ನು ಪ್ರಧಾನವಾಗಿ ನಾಲ್ಕು ಭಾಗಗಳಾಗಿ ವಿಂಗಡಿಸಬಹುದು.

೧. ಗ್ರಾಹಕತ್ವದ ಗುರಿಗಳು
೨. ಅಭಿವ್ಯಕ್ತಿಯ ಗುರಿಗಳು
೩. ಕಲಾಭಿನಂದನೆಯ ಗುರಿಗಳು
೪. ಉತ್ಪಾದಕತ್ವದ ಗುರಿಗಳು

ಗ್ರಾಹಕತ್ವದ ಗುರಿಗಳು ಆಡುವ ಮತ್ತು ಬರೆಯುವ ಭಾಷೆಯನ್ನು ಸಾಮರ್ಥ್ಯದಿಂದ ಅರ್ಥಮಾಡಿಕೊಳ್ಳುವುದಕ್ಕೆ ನೆರವು ನೀಡುತ್ತವೆ. ಅಭಿವ್ಯಕ್ತಿಯ ಗುರಿಗಳು ಮಕ್ಕಳು ತಮ್ಮ

ಅಭಿಪ್ರಾಯಗಳನ್ನು ಮತ್ತು ಆಸೆ ಆಕಾಂಕ್ಷೆಗಳನ್ನು ಸುಲಭವಾದ, ಸ್ಪಷ್ಟವಾದ ತಪ್ಪಿಲ್ಲದ, ನಿರರ್ಗಳವಾದ ಮತ್ತು ಶಕ್ತಿಪೂರ್ಣವಾದ ರೀತಿಯಲ್ಲಿ ವ್ಯಕ್ತಪಡಿಸಲು ಸಹಾಯಮಾಡುತ್ತವೆ. ಕಲಾಭಿನಂದನೆಯ ಗುರಿಗಳು ಮಕ್ಕಳಲ್ಲಿ ಸೌಂದರ್ಯೋಪಾಸನೆ ಮಾಡುವ ಮತ್ತು ಉತ್ತಮ ವಿಮರ್ಶೆಮಾಡುವ ಶಕ್ತಿಯನ್ನು ಗಳಿಸಿಕೊಡುತ್ತವೆ. ಉತ್ಪಾದಕತ್ವದ ಗುರಿಗಳು ಮಕ್ಕಳಲ್ಲಿ ಆಲೋಚನಾ ಶಕ್ತಿಯನ್ನು ರೂಢಿಸುವುದಲ್ಲದೆ ಭಾಷೆ ಮತ್ತು ಸಾಹಿತ್ಯದಲ್ಲಿ ನಿರ್ಮಾಣಮಾಡುವ ಶಕ್ತಿಯನ್ನುಂಟುಮಾಡುತ್ತವೆ. ತಾಯ್ನುಡಿಯ ಬೋಧನೆಯ ವಿವಿಧ ಗುರಿಗಳನ್ನು ಈ ರೀತಿ ವಿಶದೀಕರಿಸಬಹುದು.

## ಗ್ರಾಹಕತ್ವದ ಗುರಿಗಳು

೧. ಮಾತನಾಡಿದ ಭಾಷೆಯನ್ನು ಆಲಿಸುವುದಕ್ಕೂ ಮತ್ತು ಅರ್ಥಮಾಡಿಕೊಳ್ಳುವುದಕ್ಕೂ ಸಹಾಯಮಾಡುವುದು.

೨. ಬರೆದ ಭಾಷೆಯನ್ನು ಓದುವ ಮತ್ತು ಸರಿಯಾಗಿ ಅರ್ಥಮಾಡಿಕೊಳ್ಳುವ ಶಕ್ತಿಯನ್ನುಂಟುಮಾಡುವುದು.

೩. ಅರ್ಥವತ್ತಾಗಿ ಮತ್ತು ಸಾಕಷ್ಟು ವೇಗವಾಗಿ ಮೌನವಾಗಿ ಓದುವ ಕಲೆಗಾರಿಕೆಯನ್ನು ಕಲಿಸಿಕೊಡುವುದು.

೪. ಮಕ್ಕಳ ಪದಸಂಪತ್ತು, ನುಡಿಗಟ್ಟು ಮತ್ತು ಗಾದೆಗಳ ಮೇಲಿರುವ ವಿಷಯಜ್ಞಾನ-ಇವುಗಳು ಹೆಚ್ಚುವಂತೆ ಮಾಡುವುದು.

೫. ಸಂತೋಷಕ್ಕಾಗಿ, ವಿಚಾರ ಸಂಪತ್ತಿಗಾಗಿ ಮತ್ತು ವ್ಯಕ್ತಿತ್ವದ ನಿರೂಪಣೆಗಾಗಿ ಉತ್ತಮ ಸಾಹಿತ್ಯವನ್ನು ಓದುವ ಅಭ್ಯಾಸ ಮಾಡಿಸುವುದು.

೬. ಆರಿಸಿದ ಉತ್ತಮ ಗದ್ಯ ಮತ್ತು ಪದ್ಯ ಭಾಗಗಳನ್ನು ಕಂಠಪಾಠ ಮಾಡಿಸುವುದು.

೭. ವಿದ್ವಾಂಸರ ಸಾಹಿತ್ಯಜೀವನದ ಪರಿಚಯವನ್ನು ಮಾಡಿಕೊಳ್ಳಲು ಅವಕಾಶ ಕಲ್ಪಿಸಿ ಕೊಡುವುದು.

## ಅಭಿವ್ಯಕ್ತಿಯ ಗುರಿಗಳು

೧. ತಪ್ಪಿಲ್ಲದ, ಸ್ಪಷ್ಟವಾದ, ಶಕ್ತಿಪೂರ್ಣವಾದ ಮತ್ತು ನಿರರ್ಗಳವಾದ ರೀತಿಯಲ್ಲಿ ಅಭಿವ್ಯಕ್ತಗೊಳಿಸುವ ಶಕ್ತಿಯನ್ನು ಗಳಿಸಿಕೊಳ್ಳಲು ನೆರವು ನೀಡುವುದು.

೨. ತಪ್ಪಿಲ್ಲದ, ಸ್ಪಷ್ಟವಾದ, ಶಕ್ತಿಪೂರ್ಣವಾದ ಮತ್ತು ಅರ್ಥಪೂರ್ಣವಾದ ರೀತಿಯಲ್ಲಿ ಓದುವ ಶಕ್ತಿಯನ್ನು ಸಂಪಾದಿಸಿಕೊಳ್ಳಲು ಸಹಾಯಮಾಡುವುದು.

೩. ಸಾಕಷ್ಟು ವೇಗದಲ್ಲಿ ತಪ್ಪಿಲ್ಲದೆ, ಸ್ಪಷ್ಟವಾಗಿ, ಸುಂದರವಾಗಿ, ಆಹ್ಲಾದಕರವಾಗಿರುವಂತೆ ಬರೆಯುವ ಸಾಮರ್ಥ್ಯವನ್ನು ರೂಢಿಸಿಕೊಳ್ಳಲು ಅನುವಾಗುವುದು.

೪. ವಿಷಯವನ್ನು ಹಿಗ್ಗಿಸುವ ಮತ್ತು ಭಾವಾನುವಾದ ಮಾಡುವ ಕಲೆಗಾರಿಕೆಯನ್ನು ಅನುಷ್ಠಾನಕ್ಕೆ ತಂದುಕೊಳ್ಳುವಂತೆ ಮಾಡುವುದು.

೫. ಸಂಕ್ಷಿಪ್ತಗೊಳಿಸುವ ಮತ್ತು ಪ್ರಧಾನಾಂಶಗಳನ್ನು ವಿವರಿಸುವ ರೀತಿಯನ್ನು ಗೊತ್ತುಮಾಡಿಕೊಡುವುದು.

೬. ಶಬ್ದಸಂಪತ್ತು, ವಾಕ್ಯಭಾಗಗಳು, ನುಡಿಗಟ್ಟುಗಳು, ಗಾದೆಗಳು—ಇವುಗಳನ್ನು ಸಮಯೋಚಿತವಾಗಿ ಬಳಸಿಕೊಳ್ಳಲು ತರಬೇತಿ ಕೊಡುವುದು.

೭. ಓದುವ ಮತ್ತು ಸಹಾಯಕ ವಿಷಯಗಳನ್ನು ವಿಚಾರಶಕ್ತಿಯಿಂದ ಆರಿಸಿಕೊಳ್ಳುವ ಮತ್ತು ಉಪಯೋಗಿಸಿಕೊಳ್ಳುವ ಒಂದು ಹವ್ಯಾಸವನ್ನು ಇಟ್ಟುಕೊಳ್ಳಲು ಸಹಾಯ ಮಾಡುವುದು.

೮. ಪದ್ಯಗಳನ್ನು ಮತ್ತು ಗೀತೆಗಳನ್ನು ಭಾವ, ಪ್ರಾಸ, ಅನುಪ್ರಾಸ ಮತ್ತು ಲಯಬದ್ಧತೆಗಳೊಡನೆ ವಾಚನಮಾಡುವ ಶಕ್ತಿಯನ್ನು ಬೆಳಸಿಕೊಳ್ಳಲು ಸಹಾಯಮಾಡುವುದು.

೯. ಆಹ್ಲಾದಕರವಾದ, ಒಂದೇ ತೆರನಾದ ಮತ್ತು ಶಕ್ತಿಪೂರ್ಣವಾದ ರೀತಿಯಲ್ಲಿ ಸಂಭಾಷಿಸುವ ಕಲೆಗಾರಿಕೆಯನ್ನು ಪಡೆಯುವಂತೆ ಮಾಡುವುದು.

## ಕಲಾಭಿನಂದನಾ ಗುರಿಗಳು

೧. ತಾಯ್ನುಡಿಯ ಸಾಹಿತ್ಯದಲ್ಲಿ ಅಭಿರುಚಿ ಹಾಗೂ ಪ್ರೀತಿಯನ್ನು ಹುಟ್ಟಿಸುವುದು.

೨. ತಾಯ್ನುಡಿಯ ಹಾಗೂ ತಾಯ್ನುಡಿಯಲ್ಲಿನ ಸಾಹಿತ್ಯದ ಸಾಂಸ್ಕೃತಿಕ ಪರಂಪರೆಯನ್ನು ಬೆಳಸಿಕೊಂಡು ಬರಲು ವಿದ್ಯಾರ್ಥಿಗಳಿಗೆ ಸಹಾಯಮಾಡುವುದು.

೩. ತಾಯ್ನುಡಿಯ ಸಾಹಿತ್ಯದಲ್ಲಿನ ಉತ್ತಮ ಭಾಗಗಳನ್ನು ಒಂದೆಡೆ ಸೇರಿಸಿ ತಮ್ಮದೇ ಆದ ಸಾಹಿತ್ಯ ಸಂಕಲನಗಳನ್ನು ತಯಾರಿಸಿಟ್ಟುಕೊಳ್ಳಲು ನೆರವಾಗುವುದು. ಜಾನಪದ ಹಾಡುಗಳು ಮತ್ತು ಗೀತೆಗಳನ್ನು ಕಲಿತು ಆನಂದಿಸುವಂತೆ ಮಾಡುವುದು.

೪. ತಾಯ್ನುಡಿಯ ಸಾಹಿತ್ಯದಿಂದ ಉತ್ತಮವಾದ ಉಲ್ಲೇಖಗಳನ್ನು ಸಂಗ್ರಹಿಸಿಕೊಂಡು ಅವುಗಳನ್ನು ಸಮಯೋಚಿತವಾಗಿ ಮಾತಿನಲ್ಲಿ ಮತ್ತು ಬರವಣಿಗೆಯಲ್ಲಿ ಉಪಯೋಗಿಸಿಕೊಳ್ಳಲು ಮಾರ್ಗದರ್ಶನ ಮಾಡುವುದು.

## ಕ್ರಿಯಾತ್ಮಕ ಗುರಿಗಳು

೧. ತಮ್ಮದೇ ಆದ ಅಭಿಪ್ರಾಯ, ಆಸೆ ಆಕಾಂಕ್ಷೆಗಳನ್ನು ಬರವಣಿಗೆಯಲ್ಲಿ ಮತ್ತು ಮಾತಿನಲ್ಲಿ ವ್ಯಕ್ತಗೊಳಿಸುವ ಶಕ್ತಿಯನ್ನು ಗಳಿಸಿಕೊಳ್ಳಲು ಸಹಾಯಮಾಡುವುದು.

೨. ಘಟನೆಗಳು ಮತ್ತು ಸನ್ನಿವೇಶಗಳನ್ನು ಮಾತಿನಲ್ಲಿ ಹಾಗೂ ಬರವಣಿಗೆಯಲ್ಲಿ ವಿವರಿಸುವ ಸಾಮರ್ಥ್ಯವನ್ನು ದೊರಕಿಸಿಕೊಡುವುದು.

೩. ಘಟನೆಗಳನ್ನು ತಮ್ಮದೇ ಆದ ವೈಯಕ್ತಿಕವಾದ ಶೈಲಿಯಲ್ಲಿ ನಿಸ್ಪೃಹತೆಯಿಂದ ವರದಿಮಾಡುವ ಕಲೆಗಾರಿಕೆಯನ್ನು ಕಲಿಸಿಕೊಡುವುದು.

೪. ಕತೆಗಳನ್ನು ಹೇಳುವ ಮತ್ತು ಬರೆಯುವ ಶಕ್ತಿಯನ್ನು ರೂಢಿಸಿಕೊಳ್ಳಲು ಸಹಾಯ ಮಾಡುವುದು.

೫. ಮಕ್ಕಳ ಆಲೋಚನಾಶಕ್ತಿಯನ್ನು ಹೆಚ್ಚಿಸುವುದು.

೬. ನಿತ್ಯಜೀವನದಲ್ಲಿ ಪತ್ರವ್ಯವಹಾರ ಮಾಡುವ ಕುಶಲತೆಯನ್ನು ಕಲಿಸಿಕೊಡುವುದು.

೭. ತರಗತಿಯ ಹಾಗೂ ಶಾಲೆಯ ಹಸ್ತಪತ್ರಿಕೆಗಳನ್ನು ಸಂಪಾದಿಸುವ ಕಾರ್ಯ ನಿರ್ವಹಣೆಯಲ್ಲಿ ಸಹಾಯಮಾಡುವುದು.

ಈ ಎಲ್ಲ ಗುರಿಗಳನ್ನೂ ನಾವು ಗಮನದಲ್ಲಿರಿಸಿಕೊಳ್ಳೋಣ. ನಮ್ಮ ಮಕ್ಕಳು ಈ ಗುರಿಗಳನ್ನು ಸಾಧಿಸುವುದರಲ್ಲಿ ನೆರವಾಗಿ ಅವರ ಸ್ಥಿತಿ ಉತ್ತಮವಾಗುವುದನ್ನು ನೋಡಿ ನಲಿಯೋಣ. ತಾಯ್ನುಡಿಯ ಬೋಧನೆಗೆ ಒಂದು ನೂತನ ದೃಷ್ಟಿಯನ್ನು ಒಂದು ನೂತನ ಚೈತನ್ಯವನ್ನು ದೊರಕಿಸಿ ಕೊಡೋಣ. ತಾಯ್ನುಡಿ ಬಾಳಲಿ, ಆಳಲಿ. ತಾಯ್ನುಡಿಗೆ ಜಯವಾಗಲಿ.

**ಎಸ್. ಪರಮೇಶ್ವರಪ್ಪ**

## ಅಭ್ಯಾಸ ಸೂಚಿ


1. ಕನ್ನಡ ನುಡಿ ಬೋಧನೆ—ಬಿ. ವಿ. ರಮಣ
2. *Teaching of the Mother Tongue*—W. M. Ryborn
3. ಸ್ವತಂತ್ರ ಭಾರತದಲ್ಲಿ ಭಾಷೆಗಳ ಸ್ಥಾನಮಾನ—ಎನ್. ಎಸ್. ವೀರಪ್ಪ
4. *Report of All India Seminar on the Teaching of Indian Languages*
5. *English for the English*—G. Sampson.

# ಪಂಪನು ಬೆಳಗಿರುವ ಲೌಕಿಕದ ಒಂದು ಚಿತ್ರ

ಪಂಪಭಾರತದಲ್ಲಿ ಬರುವ ಪ್ರಸಂಗವೊಂದನ್ನು ಆಧಾರವಾಗಿಟ್ಟುಕೊಂಡು ಪಂಪನು ಬೆಳಗಿರುವ ಲೌಕಿಕದ ಸ್ವರೂಪವನ್ನು ಕುರಿತು ನಾಲ್ಕು ಮಾತು ಹೇಳುವುದು ಈ ಲೇಖನದ ಉದ್ದೇಶ. ಇದಕ್ಕಾಗಿ ಭೀಷ್ಮರಿಗೆ ಪಟ್ಟಗಟ್ಟಿದ ಸಂದರ್ಭವನ್ನು ಇಲ್ಲಿ ಆರಿಸಿಕೊಂಡಿದೆ.

ದುರ್ಯೋಧನನು ತನ್ನ ಕಡೆಯ ಸೇನಾನಾಯಕರನ್ನಾಗಿ ಭೀಷ್ಮರನ್ನು ಆರಿಸಿ ಅವರಿಗೆ ವೀರಪಟ್ಟವನ್ನು ಕಟ್ಟಿದನು. ಅಂತಹ ವೀರನಿಗೆ ವೀರಪಟ್ಟವನ್ನು ಕಟ್ಟಿ ತಾನು ತನ್ನ ಹಗೆಗಳನ್ನು ತನ್ನ ಮಂಚದ ಕಾಲಿಗೆ ಕಟ್ಟಿದುದಾಗಿ ದುರ್ಯೋಧನನು ಬೀಗಿದನು. ಆಗ ಕರ್ಣನು ದುರ್ಯೋಧನನಿಗೆ ಹೀಗೆ ಹೇಳಿದನು.

ಭಗವತಿಯೇಱುವೇಟ್ವ ತೆಱದಿಂ ಕಥೆಯಾಯ್ತುವರೇಱು ನೀನಿದಂ
ಬಗೆದಿವರಿನ್ನು ಮಾಂತಿಱುವರೆಂದು ವಿಮೋಹಿಸಿ ವೀರಪಟ್ಟಮಂ
ಬಗೆಯದೆ ಕಟ್ಟಿದೈ ಗುರುಗಳಂ ಕುಲವೃದ್ಧರನಾಜಿಗುಯ್ದು ಕೆ
ಮ್ಮಗೆ ಪಗೆವಾಡಿಯೊಳ್ ನಗಿಸಿಕೊಂಡೊಡೆ ಬಂದಪುದೇಂ ಸುಯೋಧನಾ

'ಭೀಷ್ಮರು ಈಗ ಮುದುಕರು. ಅವರ ಪೌರುಷವೆಲ್ಲ ಈಗ ಕಥೆಯ ಮಾತಾಗಿದೆ. ಇದು ನಿನಗೆ ಗೊತ್ತು. ಆದರೂ ವ್ಯಾಮೋಹದಿಂದ ವೀರಪಟ್ಟವನ್ನು ವಿಚಾರಮಾಡದೆ ಕಟ್ಟಿದ್ದೀಯೆ. ಇವರು ಗುರು ನಿಜ. ಕುಲವೃದ್ಧರೂ ಹೌದು. ಆದರೆ ಪ್ರಕೃತದಲ್ಲಿ ಇವರನ್ನು ಯುದ್ಧಕ್ಕೆ ನಾಯಕರನ್ನಾಗಿ ಮಾಡಿ ಕರೆದುಕೊಂಡು ಹೋದರೆ ಹಗೆಗಳು ನೋಡಿ ನಗುವುದಿಲ್ಲವೆ? ಇದರಿಂದ ಏನು ಬಂದ ಹಾಗಾಯಿತು?' ಇದು ಆ ಹೊತ್ತಿನಲ್ಲಿ ಕರ್ಣನ ಮನಸ್ಸಿನಲ್ಲಿ ಮೂಡಿದ ಭಾವನೆ. ಭೀಷ್ಮರ ವಿಷಯದಲ್ಲಿ ಅವನಿಗೆ ಅಗೌರವವೇನೂ ಇಲ್ಲ. ಆದರೆ ವೃದ್ಧರಾದ ಅವರು ವೀರಪಟ್ಟಕ್ಕೆ ಈಗ ಅರ್ಹರಲ್ಲವೆಂಬುದು ಮಾತ್ರ ಆತನ ಆಶಯ. ಕೌರವನು ಕೇವಲ ವ್ಯಾಮೋಹದಿಂದ ಇಂತಹ ಕಾರ್ಯಮಾಡಿದ್ದಾನೆಂದು ಆತನ ಭಾವನೆ. ಕರ್ಣನು ತನ್ನ ಮಾತನ್ನು ಮುಂದುವರಿಸುತ್ತಾನೆ.

ಕಟ್ಟಿದ ಪಟ್ಟಮೆ ಸರವಿಗೆ
ನೆಟ್ಟನೆ ದೊರೆ ಪಿಡಿದ ಬಿಲ್ಲೆ ದಂಟಿಂಗೆಣೆ ಕ
ಣ್ಗೆಟ್ಟ ಮುದುಪಂಗೆ ಪಗೆವರ
ನಿಟ್ಟೆಲ್ವಂ ಮುಱಿವೊಡೆನಗೆ ಪಟ್ಟಂಗಟ್ಟಾ

'ಈ ಕಣ್ಣು ಕಾಣದ ಮುದುಕನಿಗೆ ಹಣೆಯಲ್ಲಿ ಕಟ್ಟಿದ ಪಟ್ಟ ಹುಲ್ಲಿನ ಹಗ್ಗಕ್ಕೆ ಸಮಾನ. ಈತನ ಕೈಯಲ್ಲಿ ಬಿಲ್ಲು ಇರುವುದೂ ಒಂದೇ; ದಂಟು ಇರುವುದೂ ಒಂದೇ. ಹಗೆಗಳ ನಿಟ್ಟೆಲುವುಗಳನ್ನು ಮುರಿಯಬೇಕಾದರೆ ನನಗೆ ಪಟ್ಟಗಟ್ಟಬೇಕು' ಎನ್ನುವುದು ಕರ್ಣನ ಆಶಯ. ಇಲ್ಲಿ ಕರ್ಣನು ಭೀಷ್ಮರ ದೇಹದಾರ್ಢ್ಯವನ್ನು ಕುರಿತು ಪ್ರಶ್ನಿಸಿದ್ದಾನೆ. ತಲೆಯೂ ಕೈಯೂ ನಡುಗಿ, ಕಣ್ಣು ಕಾಣದೆ ತೊಳಲುವ ಇಂತಹ ಮುದುಕರಿಗೆ ಪ್ರತಿಯಾಗಿ ತನಗೆ ಪಟ್ಟಗಟ್ಟಿದರೆ ಶತ್ರುಗಳ ನಿಟ್ಟೆಲುವುಗಳನ್ನು ಮುರಿದೇನು ಎನ್ನುವ ಅಭಿಪ್ರಾಯ ಅವನದು. ಆರಿಸಿದ ನಾಯಕರ ವಿಷಯವಾಗಿ ವಿರೋಧಪಕ್ಷದವರ ಅಭಿಪ್ರಾಯಕ್ಕೆ ನಾಲಗೆಯಾಗಿ ಕರ್ಣನು ಆಡಿದ್ದಾನೋ ಎನಿಸುತ್ತದೆ. ಕರ್ಣನಲ್ಲಿ ಸ್ವಾಭಿಮಾನದ ಉಕ್ಕು ಬಲಿತಿರುವುದನ್ನು ಇಲ್ಲಿ ನೋಡುತ್ತೇವೆ. ಕೌರವನಿಗೆ ಕ್ಷೇಮವಾಗಬೇಕಾದರೆ ತನ್ನಂತಹವನಿಗೆ ಪಟ್ಟವಾಗಬೇಕು, ಇಂತಹ ಮುದುಕರಿಗಲ್ಲ ಎನ್ನುವುದು ಅವನ ಮಾತಿನ ಅರ್ಥ. ಒಟ್ಟಿನಲ್ಲಿ ಭೀಷ್ಮರು ನಾಯಕ ಪಟ್ಟಕ್ಕೆ ಅರ್ಹರಲ್ಲ.

ಏಕೆಂದರೆ ಅವರು ಮುದುಕರು, ಶರೀರದಲ್ಲಿ ದುರ್ಬಲರು ಎಂಬುದು ಕರ್ಣನ ವಾದಸರಣಿ. ಭೀಷ್ಮರಲ್ಲಿ ದೇಹದೌರ್ಬಲ್ಯ ಮಾತ್ರವಲ್ಲ, ಮನೋದೌರ್ಬಲ್ಯವೂ ಇದೆ ಎನ್ನುವುದನ್ನು ಈ ಮುಂದೆ ಹೇಳುತ್ತಾನೆ.

ಆದಿಯೊಳವರಂ ಪಿರಿದೊಂ
ದಾದರದಿಂ ನಡಪಿದಜ್ಜರಪ್ಪುದಱಿಂದಂ
ಕಾದರಿವರವರೊಳವರುಂ
ಕಾದರ್ ನೆರೆದಿವರೊಳೆಂತು ನಂಬುವೆ ನೃಪತೀ

'ತಂದೆ ಸತ್ತ ಮಕ್ಕಳು ಎಂದು ಹಿಂದಿನಿಂದ ಪಾಂಡವರನ್ನು ಭೀಷ್ಮರು ಸಾಕಿದ್ದಾರೆ. ಹೀಗಿರುವುದರಿಂದ ತಾನು ಸಾಕಿದ ಮೊಮ್ಮಕ್ಕಳನ್ನು ಹೇಗೆ ಕೊಲ್ಲುವುದೆಂದು ಇವರೂ, ತಮ್ಮನ್ನು ಸಾಕಿದ ಅಜ್ಜನನ್ನು ಕೊಲ್ಲುವುದು ಹೇಗೆಂದು ಅವರೂ, ಯುದ್ಧಮಾಡದೆ, ಒಬ್ಬರನ್ನೊಬ್ಬರು ಎದುರಿಸುವುದಿಲ್ಲ. ಹೀಗಿರುವಾಗ ಇವರನ್ನು ಹೇಗೆ ನಂಬುತ್ತೀಯೆ?' ಎನ್ನುವುದು ಕರ್ಣನ ಮನಸ್ಸಿನಲ್ಲಿ ತುಡಿಯುತ್ತಿರುವ ಭಾವ. ಇಲ್ಲಿ ಭೀಷ್ಮರು ಪೂರ್ವಪಕ್ಷಪಾತ ಗ್ರಹಗ್ರಸ್ತರಾಗಿದ್ದಾರೆ ಎಂದು ಕರ್ಣನು ಹೇಳುತ್ತಿದ್ದಾನೆ. ಹೀಗೆ ದೇಹ ಮತ್ತು ಮನಸ್ಸು, ಈ ಎರಡರಲ್ಲಿಯೂ ಸಬಲರಲ್ಲದ ಭೀಷ್ಮರು ನಾಯಕರಾದರೆ ನಮ್ಮ ಹಿತಚಿಂತನೆ ಸಾಧಿತವಾಗುತ್ತದೆಯೆ ಎಂದು ಕರ್ಣನು ಅಳುಕಿದ್ದಾನೆ.

ತುಂಬಿದ ಸಭೆಯಲ್ಲಿ ಆಯ್ಕೆಗೊಂಡ ನಾಯಕನ ವಿಷಯದಲ್ಲಿ ವಿರೋಧವನ್ನು ವ್ಯಕ್ತಪಡಿಸಿ ಒಬ್ಬನು ಮಾತನಾಡಿದರೆ, ಇನ್ನೊಬ್ಬನು ಅದನ್ನು ಖಂಡಿಸಿ ನಾಯಕನ ಪರವಾಗಿ ಮಾತನಾಡುವುದನ್ನು ನಾವು ಕಾಣುತ್ತೇವೆ. ದ್ರೋಣಾಚಾರ್ಯರು ಇಲ್ಲಿ ಅಂತಹ ವ್ಯಕ್ತಿಯಾಗಿದ್ದಾರೆ. ಅವರು ಕರ್ಣನ ಮಾತನ್ನು ಕೇಳಿ ಸಿಡಿದೆದ್ದು, ಗುಡುಗಿನಂತಹ ಧ್ವನಿಯಿಂದ ಉತ್ತರಕೊಡುತ್ತಾರೆ. ಕರ್ಣನು ಆಡಿದ ಮೊದಲನೆಯ ಆಕ್ಷೇಪಣೆಗೆಂಬಂತೆ ಮೊದಲು ಅವರು ಹೀಗೆ ಹೇಳುತ್ತಾರೆ.

ಸಿಂಗದ ಮುಪ್ಪುಂ ನೆಗೞ್ದೀ
ಗಾಂಗೇಯರ ಮುಪ್ಪುಮಿಂಟಿಕೆವಡೆಗುಮೆ ವನಮಾ
ತಂಗಂಗಳಿನಸುಹೃಚ್ಚತು
ರಂಗಬಲಂಗಳಿನದೆಂತುಮಂಗಾಧಿಪತೀ

'ಸಿಂಹವು ಮುದಿಯಾಯಿತು ಎಂದು ಕಾಡಿನ ಆನೆಗಳು ಅದನ್ನು ಕಡೆಗಣಿಸುವುದು ಹೇಗೆ ಶಕ್ಯವಲ್ಲವೋ ಭೀಷ್ಮರು ಮುದುಕರಾದರೆಂದು ಶತ್ರುಸೇನೆ ಅವರನ್ನು ಕಡೆಗಣಿಸುವುದು ಹಾಗೆ ಶಕ್ಯವಲ್ಲ,' ಎಂಬ ಅವರ ಅಭಿಪ್ರಾಯದಲ್ಲಿ ಭೀಷ್ಮರಿಗೆ ಬಂದ ಮುಪ್ಪು ಎಲ್ಲರಿಗೆ ಬಂದಹಾಗಲ್ಲ, ಅದು ಸಿಂಹಕ್ಕೆ ಬಂದಹಾಗೆ ತಿರಸ್ಕಾರದೂರವಾದದ್ದು ಎಂಬ ನಿಷ್ಠುರವಾದ ಸತ್ಯಪ್ರಕಟವಾಗಿದೆ. ಮುಂದೆ ಕರ್ಣನ ಎರಡನೆಯ ಆರೋಪಣೆಗೆ ದ್ರೋಣರು ಉತ್ತರಕೊಡುತ್ತಾರೆ.

ಕುಲಜರನುದ್ಧತರಂ ಭುಜ
ಬಲಯುತರಂ ಹಿತರನೀ ಸಭಾಮಧ್ಯದೊಳ
ಗ್ಗಲಿಸಿದ ಮದದಿಂ ನಾಲಗೆ
ಕುಲಮಂ ತುಬ್ಬುವವೊಲುಱಿದೆ ನೀಂ ಕೆಡೆ ನುಡಿವೈ

ಮುಪ್ಪಿನಲ್ಲಿ ವಯಸ್ಸಿನ ಮುಪ್ಪು, ಅರಿವಿನ ಮುಪ್ಪು, ಶೀಲದ ಮುಪ್ಪು ಎಂದು ಮೂರು ರೀತಿಯ ಮುಪ್ಪನ್ನು ಹೇಳುತ್ತಾರೆ. ವಯಸ್ಸಿನ ಮುಪ್ಪು ಎಲ್ಲರಿಗೂ ಬರತಕ್ಕದ್ದು, ಅದು ಅನಿವಾರ್ಯ. ಜ್ಞಾನದ ಮುಪ್ಪು ಕೆಲವರಿಗೆ ಬರುತ್ತದೆ. ಅದು ಕಲಿಕೆಯಿಂದ ಸಾಧ್ಯ. ಆದರೆ

ಶೀಲದ ಮುಪ್ಪು ಎಲ್ಲೋ ಒಬ್ಬಿಬ್ಬರಿಗೆ ಮಾತ್ರ ಬರುತ್ತದೆ. ಅದಕ್ಕೆ ಅನೇಕ ರೀತಿಯ ಸಂಸ್ಕಾರ ಅವಶ್ಯ. ಭೀಷ್ಮರು ಬಳ್ಳಿಯ ವಂಶದಲ್ಲಿ ಹುಟ್ಟಿದವರು. ಉಭಯಕುಲ ಪಿತಾಮಹರು. ವಯಸ್ಸಿನಲ್ಲಿ ಮುಪ್ಪಾದರೂ, ಮನಸ್ಸಿನಲ್ಲಿ ತರುಣರು. ಜ್ಞಾನದಲ್ಲಿ ಪರಿಣತರು. ಶೀಲದಲ್ಲಿ ಪರಿಪಕ್ವರು. ಇಂತಹ ಮೈಯೂ ಮನವೂ ಶುಚಿಯಾಗಿರುವ ಪಿತಾಮಹನ ಮಹಿಮೆಯನ್ನು ಅರಿಯದೆ ಕರ್ಣನು ಟೀಕೆಗೆ ಗುರಿಮಾಡಿದನು. ಕರ್ಣನ ಕೊಬ್ಬು ಎಷ್ಟು. ಆದ್ದರಿಂದಲೇ ಕುಲವನ್ನು ನಾಲಗೆ ಸೂಚಿಸುತ್ತದೆ ಎಂದು ಬಲ್ಲವರು ಹೇಳುತ್ತಾರೆ. ಕರ್ಣನು ಕುಲಹೀನನಾದ್ದರಿಂದ ಕುಲೀನನ ಮಹಿಮೆ ಅವನಿಗೆ ತಿಳಿಯದು ಎನ್ನುವುದು ಈ ಮಾತಿನ ಒಟ್ಟಿನ ತಾತ್ಪರ್ಯ. ದ್ರೋಣರು ಕುಲದ ಮಾತು ಎತ್ತಿ ಅವಹೇಳನಮಾಡಿದುದು ಕರ್ಣನ ಉದ್ರೇಕಕ್ಕೆ ಕಾರಣವಾಯಿತು. ಗುರುವಿನ ಕರ್ಣಕಠೋರ ವಾಕ್ಯಗಳಿಗೆ ಅವನು ಕಿನಿಸಿದನು. ಕೃಷ್ಣನಿಂದ ತನ್ನ ಜನ್ಮವೃತ್ತಾಂತವನ್ನು ಅರಿತಿದ್ದ ಕರ್ಣನು ಈಗ ದ್ರೋಣರ ಮೇಲೆ ಸಿಡಿನುಡಿಯ ಕಿಡಿಮಳೆಗರೆದನು. ಜ್ವಾಲಾಮುಖಿಯಿಂದ ಲಾವಾರಸ ಪ್ರವಾಹ ಹರಿದು ಬಂದಂತೆ ಉದ್ವೇಗ ಪೂರ್ಣವಾದ ಮಾತುಗಳು ಕರ್ಣನಿಂದ ಹೊಮ್ಮಿದುವು.

ಕುಲಮನೆಮುನ್ನಮುಗ್ಗಡಿಸಿರೇಂ ಗಳ ನಿಮ್ಮ ಕುಲಂಗಳಾಂತು ಮಾ
ರ್ಮಲೆವನನಟ್ಟಿ ತಿಂಬುವೆ ಕುಲಂ ಕುಲಮಲ್ತು ಚಲಂ ಕುಲಂ ಗುಣಂ
ಕುಲಮಭಿಮಾನಮೊಂದೆ ಕುಲಮಣ್ಮು ಕುಲಂ ಬಗೆವಾಗಳೀಗಳೀ
ಕಲಹದೊಳಣ್ಣ ನಿಮ್ಮ ಕುಲವಾಕುಲಮಂ ನಿಮಗುಂಟುಮಾಡುಗುಂ

ಎಲ್ಲಕ್ಕೂ ಮೊದಲು ಕುಲವನ್ನೇ ಉಗ್ಗಡಿಸುತ್ತೀರೇನು? ಎಂದು ಪಂಪನ ಕರ್ಣನು ಪ್ರಶ್ನಿಸಿದ್ದಾನೆ. ಸಾವಿರ ವರ್ಷಗಳು ಕಳೆದಿವೆ. ಆದರೂ ನಾವು ಈಗ ಅದೇ ಪ್ರಶ್ನೆಯನ್ನೇ ಕೇಳುತ್ತಿದ್ದೇವೆ. ರಾಜಿಕ, ಸಾಮಾಜಿಕ, ಧಾರ್ಮಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳಲ್ಲಿ ಇದೇ ಕುಲದ ಪ್ರಶ್ನೆ ಮತ್ತೆ ಮತ್ತೆ ಏಳುತ್ತಿದೆ. ಪಂಪನ ಕರ್ಣ ಈ ಪ್ರಶ್ನೆಗೆ ಸರಿಯಾದ ಉತ್ತರವನ್ನು ಕೊಟ್ಟಿದ್ದಾನೆ. ನಿಮ್ಮ ಕುಲ ಶತ್ರುಗಳನ್ನು ಅಟ್ಟಿ ತಿನ್ನುವುದಿಲ್ಲ. ನೀವು ಹೇಳುವ ಕುಲ ಕುಲವಲ್ಲ. ಛಲವೇ ಕುಲ. ಗುಣವೇ ಕುಲ. ಅಭಿಮಾನವೇ ಕುಲ. ಪರಾಕ್ರಮವೇ ಕುಲ. ಈ ಮಾತುಗಳು ಮಂತ್ರದಂತೆ ಇವೆ. ಜಪಯೋಗ್ಯವಾಗಿವೆ. ಕುಲ ಎನ್ನುವುದು ಹುಟ್ಟಿನಿಂದ ಬರುವುದಿಲ್ಲ. ಶೀಲದಿಂದ ಬರುತ್ತದೆ. ನಡೆನುಡಿಗಳ ಮೇಲೆ ಅದು ನಿರ್ಧಾರವಾಗುತ್ತದೆ. ಛಲ, ಗುಣ, ಅಭಿಮಾನ, ಅಣ್ಮು, ಇವು ಯಾರಲ್ಲಿವೆಯೋ ಅವನು ಕುಲೀನ, ಎನ್ನುವ ಮಾತು ರತ್ನದಂತಹ ಮಾತು. ಕರ್ಣನಂತಹವನು ಹೇಳಿರುವುದರಿಂದ ಈ ವಾಕ್ಯಮಾಣಿಕ್ಯ ಅಮೂಲ್ಯವಾಗಿದೆ. ಕರ್ಣನು ಮುಂದೆ ಈ ಕಲಹದಲ್ಲಿ ನಿಮ್ಮ ಕುಲ ಆಕುಲವನ್ನುಂಟುಮಾಡುತ್ತದೆ ಎಂದು ದ್ರೋಣರನ್ನು ಟೀಕಿಸಿದ್ದಾನೆ. ಈ ಟೀಕೆ ಮುಯ್ಯಿಗೆ ಮುಯ್ಯಿ ಎಂಬಂತಿದೆ. ನಿನ್ನ ಕುಲವನ್ನು ನಾಲಗೆ ಹೇಳಿತು ಎಂಬ ಆಚಾರ್ಯರ ಮಾತಿಗೆ ನಿಮ್ಮ ಕುಲ ಆಕುಲವನ್ನುಂಟು ಮಾಡುತ್ತದೆ ಎನ್ನುವ ಕರ್ಣನ ಪ್ರತಿಮಾತು ಸರಿಜೋಡಿಯಾಗಿ ಬಂದಿದೆ. ಇಂತಹ ವಾಗ್ಬಾಣಗಳ ಆಘಾತ ಪ್ರತ್ಯಾಘಾತಗಳಿಂದ ಇಬ್ಬರೂ ಮನನೊಂದಿದ್ದಾರೆ. ಒಟ್ಟಿನಲ್ಲಿ ಇಲ್ಲಿ ಪಂಪನು ಕುಲಕ್ಕೆ ಬರೆದ ಭಾಷ್ಯ ಯೋಗ್ಯವಾಗಿದೆ. 'ಮನುಷ್ಯಜಾತಿ ತಾನೊಂದೆ ವಲಂ' ಎಂದು ಬೇರೊಂದುಕಡೆಯಲ್ಲಿ ಅವನು ಹೇಳಿದ್ದುಂಟು. ದಾಸ್ಯ, ದಾರಿದ್ರ್ಯ, ಅಜ್ಞಾನಗಳ ಅಂಧಕಾರದಲ್ಲಿ ಮತಮೂಢರಾಗಿ ತೊಳಲುತ್ತಿದ್ದ ಪ್ರಪಂಚಕ್ಕೆ ಪಂಪನು ಜ್ಞಾನಭಾಸ್ಕರನಂತೆ ಮೂಡಿ ಇಂತಹ ಲೌಕಿಕದ ಆದೇಶವನ್ನು ನೀಡಿದ್ದಾನೆ. ಜಗತ್ತಿನ ಬಹು ಭಾಗದ ಜನ ಧರ್ಮಾಂಧರಾಗಿ ತೊಳಲಿದ ದಿನಗಳಲ್ಲಿ ಸಾವಿರ ವರ್ಷಕ್ಕೆ ಹಿಂದೆಯೇ ಕನ್ನಡ ಕವಿಯೊಬ್ಬನು ಮನುಷ್ಯಜಾತಿಯೆಲ್ಲವೂ ಒಂದು ಎಂದು ಘೋಷಿಸಿರುವುದು ನಮಗೆ ಹೆಮ್ಮೆಯ ವಿಷಯವಾಗಿದೆ. ಕರ್ಣನು ಈ ಸಂದರ್ಭದಲ್ಲಿ ಒಂದು ಪ್ರತಿಜ್ಞೆಯನ್ನು ಕೈಗೊಳ್ಳುತ್ತಾನೆ.

ಗಂಗಾಸುತಂ ಪೃಥಾಸುತ
ರಂ ಗೆಲ್ದೊಡೆ ತಪಕೆ ಪೋಪೆನವರ್ಗಳ ಕೆಯ್ಯೊಳ್
ಗಾಂಗೇಯನಟಿದೊಡಹಿತರ
ನಾಂ ಗೆಲೆ ತಳ್ತಿಱುವೆನನ್ನೆಗಂ ಬಿಲ್ವಿಡಿಯೆಂ

ತನ್ನ ಉದ್ರೇಕದಲ್ಲಿ ತನ್ನ ನಡೆನುಡಿಗಳ ಪರಿಣಾಮವೇನಾಗಬಹುದೆಂದು ನಿರೀಕ್ಷಿಸದೆ ಕರ್ಣನು ಮಾತನಾಡಿದಂತಿದೆ. ತನ್ನ ಈ ಪ್ರತಿಜ್ಞೆಯಿಂದ ತನ್ನ ಸ್ವಾಮಿಯ ಹಿತಕ್ಕೆ ಧಕ್ಕೆ ಒದಗುವುದೆಂಬುದನ್ನು ಕರ್ಣನು ಮರೆತಂತಿದೆ. ಕರ್ಣನನ್ನು ನಂಬಿಯೇ ಕೌರವನು ಸಂಧಿಯನ್ನು ತ್ಯಜಿಸಿ ಸಮರಕ್ಕೆ ಸಿದ್ಧನಾದನೆಂಬುದು ಸರ್ವವಿದಿತ. ಹೀಗಿರುವಲ್ಲಿ ಮೊದಲಿನಿಂದಲೂ ಯುದ್ಧವನ್ನು ಜಪಿಸುತ್ತಿದ್ದ ಕರ್ಣನು ಬೆಳಗಾದರೆ ಯುದ್ಧವೆಂಬ ಈ ಹೊತ್ತಿನಲ್ಲಿ ಶಸ್ತ್ರಸಂನ್ಯಾಸವನ್ನು ಕೈಗೊಂಡನು. ಭೀಷ್ಮರ ನಾಯಕತ್ವದಲ್ಲಿ ಅಸಹಕಾರವನ್ನು ವ್ಯಕ್ತಪಡಿಸಿ ಅವಿಶ್ವಾಸವನ್ನು ಸೂಚಿಸಿದನು. 'ಅನ್ನೆಗಂ ಬಿಲ್ ಪಿಡಿಯೆಂ' ಎಂದು ಪ್ರತಿಜ್ಞೆಮಾಡಿದನು.

ಈಗ ಈ ವಾದ ವಿವಾದ ಒಂದು ಘಟ್ಟಕ್ಕೆ ಬಂದಿತು. ಈ ಸಂದರ್ಭದಲ್ಲಿ ನಾವು ವಿಚಾರ ಮಾಡತಕ್ಕ ಕೆಲವು ಅಂಶಗಳಿವೆ. ಭೀಷ್ಮರ ವಿರೋಧವಾಗಿ ಕರ್ಣನೂ, ಪರವಾಗಿ ದ್ರೋಣರೂ ಮಾತನಾಡಿದರು. ಭೀಷ್ಮರ ಪೌರುಷ, ಮನೋನಿಗ್ರಹ ಮುಂತಾದ ವೈಯಕ್ತಿಕ ಸಂಗತಿಗಳು ಪ್ರಸ್ತಾಪಿತವಾದವು. ಕುಲದ ಮಾತು ಮೇಲೆ ತೇಲಿತು. ಅಸಹಕಾರದ ಮಾತು ಘೋಷಿತವಾಯಿತು. ಆದರೆ ನಾಯಕರಾಗಿ ಕುಳಿತ ಭೀಷ್ಮರು ಅಸಹಕಾರದ ಮಾತು ಬರುವವರೆಗೆ ಬಾಯಿ ಬಿಡಲಿಲ್ಲ. ಪರಮ ಸಂಯಮದಿಂದ ವಾದವಿವಾದಗಳನ್ನು ಮನಸ್ಸಿನಲ್ಲಿಯೇ ತೂಗಿ ನೋಡುತ್ತಿದ್ದರು. ತಮ್ಮ ವಿಷಯವನ್ನೇ ಕುರಿತು ಪಕ್ಷ ಪ್ರತಿಪಕ್ಷಗಳ ಖಂಡನಮಂಡನಗಳು ನಡೆಯುವ ವೇಳೆಯಲ್ಲಿ ಭೀಷ್ಮರು ತಟಸ್ಥರೋಪಾದಿಯಲ್ಲಿದ್ದರು. ನಾಯಕರಾದವರು ಹೀಗಿರಬೇಕು. ಹೆಚ್ಚು ಮಾತಿಗೆ ಹೋಗಬಾರದು. ವಾದವಿವಾದಗಳಲ್ಲಿ ನಡುನಡುವೆ ಬಾಯಿಹಾಕಿ ತಮ್ಮ ಅಧಿಕಾರ ಐಶ್ವರ್ಯಾದಿಗಳ ಪ್ರಭಾವದ ಮುದ್ರೆಯೊತ್ತಿ ಎದುರು ಪಕ್ಷದವರ ಉಸಿರು ಕಟ್ಟಬಾರದು. ಕಣ್ಣುಪಟ್ಟಿ ಕಟ್ಟಿ ಕಡಿವಾಣ ಹಾಕಿದ ಕುದುರೆಯಂತೆ ಅವರನ್ನು ತಮ್ಮ ನೇರಕ್ಕೆ ತಿದ್ದಿಕೊಳ್ಳಬಾರದು. ಅವರು ಸ್ವತಂತ್ರರಾಗಿ ಸ್ಥಿತಿಗತಿಗಳ ಪರಾಮರ್ಶೆಯನ್ನು ಮಾಡುವ ಅವಕಾಶವನ್ನು ಕೊಡಬೇಕು. ಎಲ್ಲಿಯವರೆಗೆ ವೈಯಕ್ತಿಕವಾದ ವಿಮರ್ಶೆ ಅಥವಾ ಅವಹೇಳನದ ಮಾತು ನಡೆಯುತ್ತಿರುತ್ತದೋ ಅಲ್ಲಿಯವರೆಗೆ ನಾಯಕನು ಸುಮ್ಮನಿರಬೇಕು. ಆಗರೆ ವ್ಯಕ್ತಿನಿಂದೆಯನ್ನು ನಿಲ್ಲಿಸಿ, ಸಂಘ ಸಂಸ್ಥೆಗಳ ಮೇಲೆ ಆರೋಪಣೆ ತಂದು, ಅವುಗಳನ್ನೇ ಮುರಿಯುವ, ಬುಡಮೇಲಾಗಿ ಮಾಡುವ ಚಳುವಳಿ ಆರಂಭವಾದಾಗ ನಾಯಕನು ಪ್ರವೇಶಿಸಬೇಕು. ಶಿಶುಪಾಲವಧೆಯ ಸಂದರ್ಭದಲ್ಲಿ ಕೃಷ್ಣನು ನಡೆದುಕೊಂಡ ರೀತಿಯನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಭೀಷ್ಮರು ತಮ್ಮನ್ನು ಕುರಿತ ಸ್ತುತಿಗಾಗಲಿ ನಿಂದೆಗಾಗಲಿ ಹಿಗ್ಗಲಿಲ್ಲ, ಕುಗ್ಗಲಿಲ್ಲ. ಆದರೆ ಕರ್ಣನು ಪ್ರತಿಜ್ಞೆಮಾಡಿದೊಡನೆಯೇ ಮಧ್ಯೆ ಪ್ರವೇಶಮಾಡಿ ಕರ್ಣನನ್ನು ಕುರಿತು ನಾಲ್ಕು ಮಾತು ಹೇಳಿದರು. ಭೀಷ್ಮರು ಇಲ್ಲಿಯವರೆಗೆ ತಳೆದಿದ್ದ ಮೌನ ಅವರ "ಆತ್ಮೋನ್ನತಿ"ಗೆ ಒಳ್ಳೆಯ ನಿದರ್ಶನವಾಗಿದೆ. ಮಾತು ಬೆಳ್ಳಿ, ಮೌನ ಚಿನ್ನ—ನಿಜ. ಆದರೆ ಇಲ್ಲಿ ಮೌನ ಬೆಳ್ಳಿ, ಮಾತು ಚಿನ್ನವೆಂಬಂತೆ ಭೀಷ್ಮರು ಮಾತನಾಡಿದ್ದಾರೆ.

ಕಲಿತನದುರ್ಕು ಜವ್ವನದ ಸೊರ್ಕು ನಿಜೇಶನ ನಚ್ಚು ಮಿಕ್ಕ ತೋ
ಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತೇನೆನಗುಂಟೆ ಭಾರತಂ
ಕಲಹಮಿದಿರ್ಚುವಂ ಹರಿಗನಪ್ಪೊಡೆ ಮೊಕ್ಕಳಮೇಕೆ ನೀಂ ಪಳಂ
ಚಲೆದಪೆಯಣ್ಣ ನೂಟ್ಬಡೆಯಲಪ್ಪುದು ಕಾಣ ಮಹಾಜಿರಂಗದೊಳ್

ಕರ್ಣನಿಗೆ ಹೇಳಿದ ಈ ಹಿತವಚನ ತುಂಬಾ ಮಾರ್ಮಿಕವಾಗಿದೆ. ಕರ್ಣ, ನಿನಗೆ ಇರುವ ಹಾಗೆ ನನಗೆ ಕಲಿತನದ ಉಕ್ಕು, ಯೌವನದ ಸೊಕ್ಕು, ನಿಜೇಶನ ನಚ್ಚು, ತೋಳ್ಬಲದ ಪೊಡರ್ಪು

ಉಂಟೇ ಎಂದು ಕೇಳಿದ್ದಾರೆ. ನಿನ್ನಲ್ಲಿ ಕಲಿತನವಿದೆ ಆದರೆ ಅದು ಉಕ್ಕಬಾರದು. ಯೌವನವಿದೆ ಆದರೆ ಸೊಕ್ಕಬಾರದು ಎಂಬಂತಹ ಉಪದೇಶ ಮನನೀಯವಾಗಿದೆ. ಗುಣದ ಅತಿಶಯವೇ ಒಂದು ದೋಷವಾಗುತ್ತದೆ ಎಂಬ ಸೂಚನೆ ಇಲ್ಲಿದೆ. 'ಸಾವಿರ ವರುಷ ಸಾಮುಮಾಡಿ ಸಾಯುವ ಮುದುಕಿಯ ಸೊಂಟ ಮುರಿದ' ಎಂಬಂತೆ ನಾವು ನಡೆಯಬಾರದು ಎಂಬ ಸೂಚನೆ ಜನ್ನನದ ನೊರ್ಕು ಎಂಬಲ್ಲಿದೆ. ನಮ್ಮ ಆವೇಶ ಹುಲ್ಲಿನ ಮೆದೆಗೆ ಬಿದ್ದ ಬೆಂಕಿಯಂತೆ ಆಗಬಾರದು. ಕಲ್ಲಿದ್ದಲಿನ ಬೆಂಕಿಯಂತೆ ಆಗಬೇಕು ಎಂಬ ಬುದ್ಧಿಯ ಮಾತು ಹಣೆಯಿಕ್ಕಿದೆ. ಹೀಗೆ ಸ್ವಲ್ಪ ಹೊಗಳಿ ಕರ್ಣನ ಗುಣವನ್ನು ಸೂಚಿಸಿ ಆ ಹೊಗಳಿಕೆಯಲ್ಲಿಯೇ ಆ ಗುಣದ ಆಧಿಕ್ಯದಿಂದಾದ ದೋಷವಾವು ದೆಂಬುದನ್ನು ಭೀಷ್ಮರು ಸೊಗಸಾಗಿ ಸೂಚಿಸಿದ್ದಾರೆ. ಪ್ರೋತ್ಸಾಹ ಸೂಚಕವಾಗಿ ಬೆನ್ನು ತಟ್ಟಿ ದಾಗ ಒಂದೊಂದು ಸಲ ಸ್ವಲ್ಪ ಬಲವಾಗಿ ಹೊಡೆದಹಾಗೆ ಈ ಮಾತುಗಳು ಇವೆ. ಮುಂದೆ ಭೀಷ್ಮರು ಕರ್ಣನಲ್ಲಿ ಇಲ್ಲದ, ಆದರೆ ತಮ್ಮಲ್ಲಿರುವ ವಸ್ತುಪರಿಸ್ಥಿತಿಜ್ಞಾನವೆಂಬ ಗುಣವಿಶೇಷ ವನ್ನು 'ಭಾರತಂ ಕಲಹಂ, ಇದಿರ್ಚುವಂ ಹರಿಗಂ' ಎಂಬಲ್ಲಿ ಮಾರ್ಮಿಕವಾಗಿ ಸೂಚಿಸಿದ್ದಾರೆ. ಇದು ಮಹಾಭಾರತದ ಯುದ್ಧ. ಸಣ್ಣಪುಟ್ಟಗಡಿಗಾಳಗವಲ್ಲ, ತುರುಗಾಳಗವಲ್ಲ, ಹೆಣ್ಣುಹುಯ್ಯಲು ಅಲ್ಲ, ಇಂತಹ ನೂರಾರು ಘರ್ಷಣೆಗಳ ಫಲವಾಗಿ ಹೊತ್ತಿದ ದೊಡ್ಡ ಉರಿ ಈ ಭಾರತದ ಯುದ್ಧ. ಇಷ್ಟು ವಿವೇಚನೆ ಇದ್ದವರು ಯಾರೂ ಶಸ್ತ್ರಸಂನ್ಯಾಸಕ್ಕೆ ತೊಡಗುವುದು ಎಂತಹ ಪ್ರಮಾದವೆನ್ನು ವುದನ್ನು ಅರಿಯದಿರಲಾರರು. ಈ ಅಭಿಪ್ರಾಯವನ್ನು 'ಭಾರತಂ ಕಲಹಂ' ಎಂಬ ಒಂದು ಮಾತಿನಲ್ಲಿ ಸೂಚಿಸಿದ್ದಾರೆ.

'ಇದಿರ್ಚುವನ್ ಹರಿಗನ್' ಎಂಬ ಮಾತಿನಲ್ಲಿಯೂ ಔಚಿತ್ಯವಿದೆ. ಎದುರಿನಲ್ಲಿ ಮೂರು ಲೋಕದ ಗಂಡನಾದ ಅರ್ಜುನನಿದ್ದಾನೆ ಎಂದು ಭೀಷ್ಮರು ಹೇಳಿದ್ದಾರೆ. ಈ ಮೂಲಕ ಪಂಪನು ತನ್ನ ಕಾವ್ಯನಾಯಕನಾದ ಅರ್ಜುನನ ಗೌರವ ಪ್ರತಿಷ್ಠೆಗಳನ್ನು ಎತ್ತಿಹಿಡಿದಿದ್ದಾನೆ. ಅರ್ಜುನನ ವಿಕ್ರಮ ಮತ್ತು ಅದರ ಫಲವಾಗಿ ದೊರೆತ ವಿಜಯ ಇದೇ ಕಾವ್ಯವಸ್ತು. ಸಮಯ ಸನ್ನಿವೇಶಗಳು ಒದಗಿ ಬಂದೆಡೆಗಳಲ್ಲೆಲ್ಲ ಅರ್ಜುನನ ಪೌರುಷ ಪರಾಕ್ರಮಗಳ ಮಾತನ್ನು ದೊಡ್ಡ ದನಿಯಲ್ಲಿ ಆಡಿತೋರುವುದು ಪಂಪನಿಗೆ ಪ್ರಿಯ. ಪ್ರಕೃತದಲ್ಲಿ ಆ ಕೆಲಸಕ್ಕೆ ಈ ಸನ್ನಿವೇಶ ಹಾಳತವಾಗಿ ಒದಗಿಬಂದಿದೆ. ಭೀಷ್ಮರು ಕರ್ಣನಿಗೆ ಅರ್ಜುನನ ವಿಷಯವನ್ನು ಹೇಳುತ್ತಿದಾರೆ. ಬೆಳಗಾದರೆ ಯುದ್ಧ ಎನ್ನುವ ಸನ್ನಿವೇಶ, ಪರಾಕ್ರಮದ ಮಾತು ಬಂದು ಛಲ ಕುಲ ಅಣ್ಮು ಕುಲ ಎಂದು ಕರ್ಣನೇ ಕುಲಕ್ಕೆ ವ್ಯಾಖ್ಯಾನಮಾಡಿದ ಸಂದರ್ಭ. ಈ ಎಲ್ಲ ದೃಷ್ಟಿಯಿಂದ ನೋಡಿದಾಗ 'ಇದಿರ್ಚುವನ್ ಹರಿಗನ್' ಎಂಬ ಮಾತು ಪರ್ಯಾಯವಾಗಿ ಹೇಗೆ ಅರಿಗನ ಸಾಹಸವನ್ನು ತೋರುತ್ತಿದೆ ಎಂಬುದು ಗೊತ್ತಾಗುತ್ತದೆ. ಅಷ್ಟೇ ಅಲ್ಲ, ಇನ್ನೂ ಒಂದು ವಿಶೇಷವಿದೆ ಇಲ್ಲಿ. ಈಕಡೆ ನಾನು ನಾಯಕನಾಗಿ ಯುದ್ಧಮಾಡುತ್ತೇನೆ. ಆಕಡೆ ಅರ್ಜುನನಿದ್ದಾನೆ. ಈಕಡೆ ನಾನು ಹೋದಮೇಲೆ ದ್ರೋಣರು ಯುದ್ಧಮಾಡುತ್ತಾರೆ. ಆಕಡೆ ಅರ್ಜುನನಿರುತ್ತಾನೆ. ದ್ರೋಣರು ಹೋದಮೇಲೆ ಕರ್ಣ ಶಲ್ಯಾದಿಗಳು ಈಕಡೆ ನಿಲ್ಲುತ್ತಾರೆ. ಆದರೆ ಆಕಡೆ ಅರ್ಜುನನಿದ್ದು ಈಕಡೆಯ ಎಲ್ಲರೂ ಹೋದಾಗ ಆತ ಅಲ್ಲಿ ಅಜೇಯನಾಗಿ ನಿಂತೇ ಇರುತ್ತಾನೆ. ಯುದ್ಧಮಾಡಿ ಏರ್ಪಿತ್ತು ಸೋಲುವ ನೋಯುವ ಸಾಯುವ ಸರದಿ ಈಕಡೆಯ ನಮ್ಮವರದು. ಗೆದ್ದು ಜಯಭೇರಿ ಹೊಡೆಯಿಸಿಕೊಳ್ಳುವ ಸರದಿ ಆ ವಿಕ್ರಮಾರ್ಜುನನದು. ಹೀಗಿರುವಾಗ ಅಹಮಹಮಿಕೆಯಿಂದ ನಾವೇಕೆ ಚಪಲರಾಗಿ ಮುನ್ನುಗ್ಗಬೇಕು ಎಂಬ ಅಂಶವನ್ನು ಬಹಳ ಸೂಚ್ಯವಾಗಿ ಇಲ್ಲಿ ಭೀಷ್ಮರು ಮನಗಾಣಿಸಿದ್ದಾರೆ. ಮುಂದಿನ ಮಾತು ಇನ್ನೂ ಸೊಗಸಾಗಿದೆ. 'ನೂಱ್ ಪಡೆಯ ಲಪ್ಪುದು ಕಾಣ ಮಹಾಜಿರಂಗದೊಳ್.' ಈ ದೊಡ್ಡ ಯುದ್ಧಭೂಮಿಯಲ್ಲಿ ನಾವು ನಮ್ಮ ಸರದಿಯನ್ನು ಕಾಯಬೇಕು. ಇದು ಕುರುಕ್ಷೇತ್ರಕ್ಕೆ ಮಾತ್ರ ಅನ್ವಯಿಸುವ ಮಾತಲ್ಲ. ಜೀವನವೂ ಒಂದು ಸಂಗ್ರಾಮವೇ. ಇಲ್ಲಿಯೂ ನಾವು 'ಕ್ಯೂ' ನಿಯಮವನ್ನು ಪರಿಪಾಲಿಸ ಬೇಕು. ಹಾಗಲ್ಲದೆ ಹಿಂದೆ ಇದ್ದವರು ಅನ್ಯರ ಪ್ರಭಾವಬಲದಿಂದ ಮುಂದೆ ಬಂದು ಸ್ವಶಕ್ತಿ

ಸಾಮರ್ಥ್ಯಗಳಿಂದ ಸಹಜವಾಗಿ ಮುಂದಿದ್ದವರನ್ನು ಹಿಂದೆ ತಳ್ಳಿದರೆ ಏನು ಪ್ರಯೋಜನ? ಅರ್ಹನಾಗಿ ಮುಂದೆ ಇದ್ದವನು ಹಿಂದೆ ಸರಿದಕಾರಣ ಅತೃಪ್ತನಾಗಿ ಆತ ಕಾರ್ಯ ವಿಮುಖನಾಗುತ್ತಾನೆ. ಹಿಂದೆ ಇದ್ದವನು ಅಕಾಲದಲ್ಲಿ ಅನಿರೀಕ್ಷಿತವಾಗಿ ಮುಂದೆ ಬಂದವನಾದುದರಿಂದ ಮಾಹಿತಿ ಸಾಲದೆ ಕಾರ್ಯ ಕೆಟ್ಟರೂ ಕೆಟ್ಟೀತು. ಒಟ್ಟಿನಲ್ಲಿ ಸಾರ್ವಜನಿಕ ಕಾರ್ಯವೋ ಸ್ವಾಮಿಕಾರ್ಯವೋ ಹಾಳಾಗುವುದರಲ್ಲಿ ಸಂಶಯವಿಲ್ಲ. ಆದುದರಿಂದ ಪ್ರತಿಯೊಬ್ಬರೂ ತಮ್ಮ ಅವಕಾಶ ಬರುವವರೆಗೆ ಅವರವರ ಸ್ಥಾನಗಳಲ್ಲಿದ್ದು ಆ ಅವಕಾಶ ಬಂದಾಗ ಸರಿಯಾಗಿ ಸೇವೆ ಸಲ್ಲಿಸುವುದಕ್ಕೆ ತಕ್ಕ ಶಕ್ತಿ ಸಾಮರ್ಥ್ಯಗಳನ್ನು ಪಡೆಯುವ ತಪಸ್ಸು ಮಾಡಬೇಕು. ಈ ಭಗವಂತನ ಸೃಷ್ಟಿಯಲ್ಲಿ ಯಾವುದೂ ನಿಷ್ಪ್ರಯೋಜಕವಲ್ಲ. ಎಂತಹ ಕಪ್ಪು ಮೋಡವೂ ಕ್ಷಣಕಾಲವಾದರೂ ವಿದ್ಯುದ್ವಿಲಸಿತವಾಗದೆ ಇರದು. ಪಡೆಯ ಕಡೆಕಡೆಯ ಬಡವರಿಗೂ ಹೋರಾಟದಲ್ಲಿ ಶೌರ್ಯ ಪರಾಕ್ರಮಗಳ ಪ್ರದರ್ಶನಕ್ಕೆ ಅವಕಾಶವಿದ್ದೇ ಇದೆ. ಆದರೆ ಆ ಅವಕಾಶಕ್ಕಾಗಿ ಕಾಯಬೇಕು, ಮೇಲೆ ಬೀಳಬಾರದು. 'ಮೊಕ್ಕಳಂ ಪಳಂಚಿ' ಅಲೆಯಬಾರದು ಇಂತಹ ಅಭಿಪ್ರಾಯಗಳು ಬಹಳ ಸೊಗಸಾಗಿ ಹುದುಗಿವೆ ಭೀಷ್ಮರ ಉಪದೇಶದಲ್ಲಿ.

ಕರ್ಣನು ಕುಲವನ್ನು ಕುರಿತು ಆಡಿದ ಘನವಾದ ಮಾತುಗಳನ್ನು ಕುರಿತು ಭೀಷ್ಮರು ಚಕಾರದ ಆಕ್ಷೇಪವೆತ್ತಲಿಲ್ಲ. ಆದರೆ ಕರ್ಣನು ಹೇಳಿದ ಆ ಕುಲದ ವ್ಯಾಖ್ಯಾನಕ್ಕೆ ಉದಾಹರಣೆಯೊಂದನ್ನು ಒದಗಿಸಿಕೊಟ್ಟರು ಅಷ್ಟೆ! ಕರ್ಣನು ಛಲ=ಕುಲ=ಕರ್ಣ, ಗುಣ=ಕುಲ=ಕರ್ಣ, ಅಭಿಮಾನ=ಕುಲ=ಕರ್ಣ, ಅಣ್ಮು=ಕುಲ=ಕರ್ಣ, ಇತ್ಯಾದಿಯಾಗಿ ತನ್ನ ಮನದ ಹಲಗೆಯ ಮೇಲೆ ವೀರಸಿದ್ಧಾಂತದ ಶಾಸನವೊಂದನ್ನು ಬರೆದುಕೊಂಡು ತನ್ನನ್ನೇ ಉದಾಹರಣೆಯಾಗಿಕೊಟ್ಟುಕೊಂಡು ಬೀಗಿದ್ದನು. ಭೀಷ್ಮರು ಮೆಲ್ಲನೆ ಕರ್ಣನ ಮನದ ಹಲಗೆಯ ವೀರಶಾಸನದ ಪ್ರದನ್ಸೂತ್ರದ ಬರಹವನ್ನು ಓದಿಕೊಂಡರು. ಛಲ, ಗುಣ, ಅಭಿಮಾನ, ಅಣ್ಮು, ಇವು ಕುಲವೆಂಬ ಮಾತನ್ನು ಒಪ್ಪಿಕೊಂಡರು. ಆದರೆ ಉದಾಹರಣೆಯನ್ನು ಹೊಡೆದು ಹಾಕಿದರು. ಇಂತಹ ಕುಲವಿರುವವನು ಅರ್ಜುನನೇ ಹೊರತು ಕರ್ಣನಲ್ಲವೆಂಬುದನ್ನು ಮನಗಾಣಿಸಿ ತಿದ್ದಿದರು. ಆ ತಿದ್ದಿದ ಬರಹವನ್ನು ಛಲ=ಕುಲ=ಅರ್ಜುನ, ಗುಣ=ಕುಲ=ಅರ್ಜುನ ಇತ್ಯಾದಿಯಾಗಿ ಓದಿಕೊ ಎಂದರು. ಎಷ್ಟು ಸುಂದರವಾಗಿ ಎಷ್ಟು ಅರ್ಥಪೂರ್ಣವಾಗಿ ಬಂದಿದೆ ಉಪದೇಶದ ರೀತಿ! ಯಾವಾಗಲೂ ನಾವು ಇನ್ನೊಬ್ಬರ ದೋಷದ ಕಡೆಗೆ ಬೆರಳುಮಾಡಿ ತೋರಬಾರದು. ನಾವು ನಮ್ಮ ಒಂದು ಬೆರಳನ್ನು ನೀಡಿ ಇನ್ನೊಬ್ಬರ ದೋಷದ ಕಡೆಗೆ ಎಲ್ಲರ ಗಮನವನ್ನೂ ಸೆಳೆದದ್ದೇ ಆದರೆ ನಮ್ಮ ಉಳಿದ ನಾಲ್ಕು ಬೆರಳುಗಳೂ ನಮ್ಮ ಕಡೆಗೇ ಮಡಿಸಿಕೊಂಡು ನಮ್ಮ ನಾಲ್ಕು ಅವಗುಣಗಳನ್ನೂ ತೋರುತ್ತವೆ ಎಂಬುದನ್ನು ನೆನಪಿಡಬೇಕು. ಕರ್ಣನು ಭೀಷ್ಮರ ಮುಪ್ಪಿನ ಕಡೆಗೆ ತನ್ನ ಒಂದು ಬೆರಳು ನೀಡಿದ್ದು ನಿಜ, ಆದರೆ ಪರಿಣಾಮವಾಗಿ ಆತನ ನಾಲ್ಕು ಬೆರಳುಗಳು ಆತನ ನಾಲ್ಕು ಅವಗುಣಗಳ ಕಡೆಗೆ ಮಡಿಚಿಕೊಂಡವು. ಕಲಿತನದ ಉಕ್ಕು, ಯೌವನದ ಸೊಕ್ಕು, ನಿಜೇಶನ ನೆಚ್ಚು, ಮಿಕ್ಕ ತೋಳ್ಬಲದ ಪೊಡರ್ಪು ಇವೇ ಆ ನಾಲ್ಕು ದೋಷಗಳು ಎಂಬ ಸೂಚನೆ ಇಲ್ಲಿದೆಯಲ್ಲವೆ? ಅವಿಭಕ್ತಕುಟುಂಬದ ಯಜಮಾನನಾದ ಮುತ್ತಾತನು ತನ್ನ ಮೊಮ್ಮಕ್ಕಳೋ ಮರಿಮಕ್ಕಳೋ ವಾದವಿವಾದಗಳಲ್ಲಿ ತೊಡಗಿದಾಗ ಪೂರ್ವಕಾಲದಲ್ಲಿ ಆ ತಾತ ಅವರನ್ನು ಸಮಾಧಾನಗೊಳಿಸುತ್ತಿದ್ದ ರೀತಿ ಇದಕ್ಕಿಂತ ಬೇರೆಯಾಗಿದ್ದಿರಲಾರದು. ಬಾಲಕರ್ಕಟಿಯ ತಂತುವಿಗೆ ನೋವಾಗದ ಹಾಗೆ ಅದನ್ನು ಊರೆಯ ಮೇಲಿರಿಸುವ ಉದ್ಯಾನವನ ಪಾಲಕನ ಕೆಲಸವನ್ನೇ ಭೀಷ್ಮರು ಮಾಡಿದ್ದಾರೆ. ಭೀಷ್ಮರಿಗೆ ಅನ್ನಿಸಿರಬೇಕು: ಅಜ್ಜನು ಮೊಮ್ಮಗನಿಗೆ ಕೆಮ್ಮುವುದನ್ನು ಕಲಿಸಿದಂತೆ ಕರ್ಣನು ಮಾಡಿದ ಮೇಲೆ ತಾನು ಸುಮ್ಮನಿರಬಾರದು ಎಂದು! ಅದರಿಂದಾಗಿ ಭೀಷ್ಮರೂ ಪ್ರತಿಜ್ಞೆಗೈಯುತ್ತಾರೆ. ಪ್ರತಿಜ್ಞೆಗೆ ಪೂರ್ವವಾಗಿ ಹಾಕಿಕೊಂಡ ಅವರ ಪೀಠಿಕೆ ಸ್ವಾರಸ್ಯಪೂರ್ಣವಾಗಿದೆ.

ಮುದುಪರ ಬಿಲ್ಬಲ್ಮೆಯುಮಿಱು
ವದಟುಂ ಬಗೆವಾಗಳಣ್ಣನೆಂದಂತುಟೆ ತ
ಪ್ಪದು ಕರಮೆ ತುಚ್ಛಮಕ್ಕುಂ
ಕದನದೊಳಿನ್ನೆನ್ನ ನುಡಿದ ನುಡಿಯಂ ಕೇಳಿಂ.

'ಅಪ್ಪ, ನಾವು ಮುದುಕರು, ನಮ್ಮ ಬಿಲ್ಲಿನ ಬಲ್ಮೆಯಾಗಲಿ ಇರಿಯುವ ಪರಾಕ್ರಮವಾಗಲಿ ಹಾಗೆಯೇ ಯೋಚನೆಮಾಡುವುದಾದರೆ ನಮ್ಮ ಅಣ್ಣ ಹೇಳಿದ ಹಾಗೆಯೇ ಯುದ್ಧದಲ್ಲಿ ತುಚ್ಛವೇ ಸರಿ. ಆದರೂ ನನ್ನ ನುಡಿಯನ್ನೂ ಸ್ವಲ್ಪ ಕೇಳಿ' ಎಂಬ ಭೀಷ್ಮರ ಮಾತಿನಲ್ಲಿ ಕರ್ಣನ ಅಹಂಭಾವಕ್ಕೆ ಪ್ರತಿಯಾಗಿ ತಮ್ಮ ವಿನಯದ ಮಾರ್ದವ ಇರುವುದು ಗೋಚರವಾಗುತ್ತದೆ. ಮಾತಿನಲ್ಲಿ ಒಂದು ವಿಧವಾದ ಕಾಕುವಿರುವಂತೆಯೂ ತೋರುತ್ತದೆ. ಈ ಮುಂದಿನದು ಭೀಷ್ಮರ ಪ್ರತಿಜ್ಞೆ!

ಪಿಡಿಯೆಂ ಚಕ್ರಮನೆಂಬ ಚಕ್ರಿಯನಿಳಾಚಕ್ರಂ ಭಯಂಗೊಳ್ವಿನಂ
ಪಿಡಿಯಿಪ್ಪೆಂ ಕರಚಕ್ರಮಂ ನರರಥಂ ತೂಳ್ದಾ ಕುರುಕ್ಷೇತ್ರದಿಂ
ಪಡುವೆಣ್ಗಾವುದು ಪೋಗೆ ಪೋಗಡಿಸುವೆಂ ನಿಚ್ಚಂ ಧರಾಧೀಶರಂ
ಪಡಲಿಟ್ಟಂತಿರೆ ಮಾಡ್ಪೆನೋವದೆ ಪಯಿಂಛಾಸಿರ್ವರಂ ಯುದ್ಧದೊಳ್.

'ಚಕ್ರವನ್ನು ಹಿಡಿಯುವುದಿಲ್ಲ ಎಂಬ ಚಕ್ರಿಯ ಕೈಯಲ್ಲಿ ಭೂಚಕ್ರ ಭಯಗೊಳ್ಳುವಂತೆ ಕರಚಕ್ರವನ್ನು ಹಿಡಿಯಿಸುತ್ತೇನೆ. ನರನ ರಥವು ಕುರುಕ್ಷೇತ್ರದಿಂದ ಪಶ್ಚಿಮಕ್ಕೆ ಎಂಟು ಗಾವುದದೂರ ಹೋಗುವಂತೆ ಹೊಡೆದು ಓಡಿಸುತ್ತೇನೆ. ಸ್ವಲ್ಪವೂ ಕರುಣೆದೋರದೆ ದಿನವೊಂದಕ್ಕೆ ಹತ್ತುಸಾವಿರ ಧರಾಧೀಶರನ್ನು ಸಂಹಾರ ಮಾಡುತ್ತೇನೆ' ಎಂದು ಭೀಷ್ಮರು ಪ್ರತಿಜ್ಞೆ ಮಾಡಿದರು. ಮೂರು ಅದ್ಭುತವಾದ ಪ್ರತಿಜ್ಞೆಯನ್ನು ಅವರು ಮಾಡಿದ್ದಾರೆ. ಇಲ್ಲಿ ಗಮನಿಸಬೇಕಾದ ಅಂಶಗಳು ಕೆಲವಿವೆ. ಕರ್ಣನ ಪ್ರತಿಜ್ಞೆಯ ಕೊನೆಯ ಮಾತು "ಪಿಡಿಯೆನ್" ಎಂಬುದು. ಅದೇ ಮಾತು ಭೀಷ್ಮರ ಪ್ರತಿಜ್ಞಾವಾಕ್ಯದ ಆರಂಭದಲ್ಲಿ ಬಂದಿದೆ. "ಅಲ್ಲಿಯವರೆಗೆ ಬಿಲ್ಲು ಹಿಡಿಯುವುದಿಲ್ಲ" ಎಂಬುದು ವಿನಾಶಾತ್ಮಕವಾದ ಅಸಹಕಾರದ ಪ್ರತಿಜ್ಞೆ. ಚಕ್ರವನ್ನು ಹಿಡಿಯುವುದಿಲ್ಲ ಎನ್ನುವವನ ಕೈಯಲ್ಲಿ ಚಕ್ರವನ್ನು ಹಿಡಿಸುತ್ತೇನೆ ಎಂಬುದು ರಚನಾತ್ಮಕವಾದ ಸಹಕಾರದ ಪ್ರತಿಜ್ಞೆ. ಇದೇ ನಾಯಕನ ಲಕ್ಷಣ. ಮಾಡುವುದಿಲ್ಲ ಎನ್ನುವವನ ಕೈಯಲ್ಲಿ ಅದನ್ನು ಮಾಡಿಸಿಯೆ ತೀರುತ್ತೇನೆ ಎಂಬ ನಿಲುವು ನಾಯಕನದಾಗಿರಬೇಕು. ಶಾಲೆಗೆ ಹೋಗುವುದಿಲ್ಲ, ಪುಸ್ತಕ ಓದುವುದಿಲ್ಲ, ಲೆಖ್ಖ ಮಾಡುವುದಿಲ್ಲ ಎಂಬ ವಿದ್ಯಾರ್ಥಿಯೊಬ್ಬನಿದ್ದರೆ ಆತನನ್ನು ಶಾಲೆಗೆ ಹೋಗುವಂತೆ ಮಾಡಿ ಪುಸ್ತಕ ಓದಿಸಿ ಲೆಖ್ಖ ಮಾಡಿಸಿ ಆತ ತೇರ್ಗಡೆಯಾಗುವಂತೆ ಮಾಡುವುದಾಗಿ ಹಟತೊಟ್ಟರೆ ಅದೀಗ ಉಪಾಧ್ಯಾಯರ ಅಸಾಧಾರಣವಾದ ದಕ್ಷತೆಗೆ ಉದಾಹರಣೆಯಾಗುತ್ತದೆ. ಚೆನ್ನಾಗಿ ಓದಿ ಬರೆದು ತಾನಾಗಿ ಮುಂದಾಗಿರುವ ವಿದ್ಯಾರ್ಥಿ ತೇರ್ಗಡೆಯಾಗುವುದು ಸರ್ವಸಾಮಾನ್ಯ. ಹಾಗೆಯೇ ಮುಂಚೂಣಿಯಲ್ಲಿ ಶಸ್ತ್ರ ಹಿಡಿದು ಹೋಗುವುದು ಯೋಧನಿಗೆ ಸಾಮಾನ್ಯ. ಆದರೆ ಶಸ್ತ್ರಹಿಡಿಯೆನೆನ್ನುವವನ ಕೈಯಲ್ಲಿ ಶಸ್ತ್ರವನ್ನು ಹಿಡಿಯಿಸುವುದಾದರೆ ಆ ಶ್ರೇಯಸ್ಸು ನಾಯಕನದೇ ಆಗುತ್ತದೆ. ಭೀಷ್ಮರು ಅಂತಹ ದಕ್ಷನಾಯಕರು ಎಂಬುದು ಅವರ ಪ್ರತಿಜ್ಞೆಯಲ್ಲಿ ಕಾಣಬರುತ್ತದೆ. ಪರಮಶಾಂತಮೂರ್ತಿಯಾಗಿ ನಿರಸ್ತ್ರನಾಗಿ ರಥ ನಡೆಸುತ್ತಿರುವ ಶ್ರೀಕೃಷ್ಣನಿಗೂ ಕೋಪಬರುವ ಹಾಗೆ ಪರೇರಿಕೆಯ ಯುದ್ಧಮಾಡಿ ಅರ್ಜುನನನ್ನು ಶರವರ್ಷದಲ್ಲಿ ಮುಳುಗಿಸಿ ಶ್ರೀಕೃಷ್ಣನನ್ನೂ ಅಸದೃಶವಾದ ರೀತಿಯಲ್ಲಿ ಘಾಯಗೊಳಿಸುತ್ತೇನೆ. ಆಗ ಆತ ಕೋಪೋದ್ರೇಕಯುತನಾಗಿ ಕರದ ಕಡಿವಾಣಗಳನ್ನು ಬಿಸುಟು ರಥದಿಂದ ಧುಮುಕಿ ಕರದಲ್ಲಿ ಚಕ್ರವನ್ನು ಹಿಡಿದು ನನ್ನ ಮೇಲೆ ವೀರಾವೇಶದಿಂದ ನುಗ್ಗಿಬರುವಂತೆ ಯುದ್ಧ ಮಾಡುತ್ತೇನೆ ಎಂಬುದು ಭೀಷ್ಮರ ಪ್ರತಿಜ್ಞಾವಚನದ ತಾತ್ಪರ್ಯ. ಮತ್ತೆ ಆ ಅರ್ಜುನನ ರಥ ಕುರುಕ್ಷೇತ್ರದಿಂದ ಪಶ್ಚಿಮಕ್ಕೆ ಎಂಟು ಗಾವುದ

ಹಿಂದಕ್ಕೆ ಹೋಗುವಂತೆ ಹೊಡೆದೋಡಿಸುತ್ತೇನೆ ಎಂದು ಭೀಷ್ಮರು ಎರಡನೆಯ ಪ್ರತಿಜ್ಞೆ ಮಾಡಿದ್ದಾರೆ. ನರನಾರಾಯಣರ ಅನ್ಯೋನ್ಯ ಸಹಕಾರದಿಂದ ನಡೆಯುವ ರಥ ಅದು! ರಥವನ್ನು ನಡೆಸುವ ಸಾರಥಿ ಅಶ್ವಹೃದಯ ರಥಕಲ್ಪಗಳನ್ನು ಅರಿತ ಮಹಾನುಭಾವ. ಒಳಗೆ ಕುಳಿತು ಯುದ್ಧ ಮಾಡುವವನು ಸವ್ಯಸಾಚಿ! ಎಡಬಲ ಪಾರ್ಶ್ವಗಳ ದೊಣೆಗಳೆರಡರಿಂದಲೂ ಏಕಕಾಲಕ್ಕೆ ಎರಡೂ ಕೈಗಳಿಂದ ಬಾಣಗಳನ್ನು ಎಳೆದು ಹೆದೆಗೇರಿಸಿ ಎದುರಾಳಿಗಳನ್ನು ಶರವರ್ಷ ಜರ್ಜರಿತ ಗಾತ್ರರನ್ನಾಗಿ ಮಾಡಬಲ್ಲ ಮಹಾವೀರ. ಉಳಿದ ಯಾರಿಗೂ ಈ ನರನಾರಾಯಣರ ಇಂತಹ ರಥವನ್ನು ಒಂದು ಅಂಗುಲ ಆಚೀಚೆಗೆ ಅಟ್ಟುವುದು ಸಾಧ್ಯವಿಲ್ಲವೆನ್ನುವಾಗ ಭೀಷ್ಮರು ತಾವೊಬ್ಬರೆ ಹಿಂದಕ್ಕೆ ಹಾಗೆ ಅಟ್ಟುವೆನೆಂದು ಪ್ರತಿಜ್ಞೆಮಾಡಿರುವುದು ಅವರ ಅನ್ಯಾದೃಶವಾದ ಪರಾಕ್ರಮಕ್ಕೆ ನಿದರ್ಶನವಾಗಿದೆಯಲ್ಲವೆ? ಎಷ್ಟು ದಿವಸ ತಾವು ಯುದ್ಧ ಮಾಡುವರೋ ಅಷ್ಟು ದಿವಸ ಒಂದು ದಿನಕ್ಕೆ ಹತ್ತುಸಾವಿರದಂತೆ ಧರಾಧೀಶರನ್ನು ಕೆಡಹಿಕೊಳ್ಳುವುದಾಗಿ ಅವರು ಪ್ರತಿಜ್ಞೆಮಾಡಿದ್ದಾರೆ. ಯಾರೊ ಟಾಟಾಳುವೋಟಾಳುಗಳನ್ನಲ್ಲ, ಧರಾಧೀಶರನ್ನು ಅವರು ಹೊಡೆದುರುಳಿಸುವರಂತೆ. ಹೀಗೆ ಈ ಮೂರು ಪ್ರತಿಜ್ಞೆಗಳೂ ಅವರ ಶೌರ್ಯಸಾಹಸಗಳಿಗೆ ತಗುವ ರೀತಿಯಲ್ಲಿದ್ದು ಅವರ 'ಭೀಷ್ಮ'ನಾಮಕ್ಕೆ ಪುಷ್ಟಿಕೊಡುವಂತಿವೆ. ರಚನಾತ್ಮಕ ಪ್ರತಿಜ್ಞೆ ಹೇಗಿರಬೇಕು ಎನ್ನುವುದಕ್ಕೆ ಇಲ್ಲಿ ಮಾರ್ಗದರ್ಶನವಿದೆ. ಭೀಷ್ಮರು ತಮ್ಮ ಇತಿಮಿತಿಗಳನ್ನು ಅರಿತು ಪ್ರತಿಜ್ಞೆಮಾಡಿದ್ದಾರೆ. ಭೀಮನನ್ನಾಗಲಿ ಅರ್ಜುನನನ್ನಾಗಲಿ ಕೊಂದುಬರುವುದಾಗಿ ಅವರು ಹೇಳಲಿಲ್ಲ. ಧರ್ಮರಾಯನನ್ನು ಸೆರೆಹಿಡಿದು ತರುವುದಾಗಿ ಹೇಳಲಿಲ್ಲ. ಅವರು ಧರ್ಮಾಧರ್ಮಗಳನ್ನು ಬಲ್ಲವರು. ಸ್ವ ಪರ ಬಲಾಬಲಗಳನ್ನು ತೂಗಿನೋಡಿದವರು. ಆದ್ದರಿಂದ ಈ ಪ್ರತಿಜ್ಞೆ ಅವರಿಂದ ಪ್ರಕಟಗೊಂಡಿತು. ಇನ್ನೂ ಒಂದು ಮಾತು. ಈ ಪ್ರತಿಜ್ಞೆಯಿಂದ ಕೌರವನಿಗೆ ಆದದ್ದೇನು? ಕೃಷ್ಣನ ಕೈಯಲ್ಲಿ ಚಕ್ರ ಹಿಡಿಸುತ್ತೇನೆಂದು ಪ್ರತಿಜ್ಞೆಮಾಡಿದರೆ ಅದರ ಆಗುಹೋಗುಗಳನ್ನು ಹೇಳಬಲ್ಲವರಾರು! ಭಯನಾಶಕನು 'ಭಯಕೃತ್' ಆದರೆ ಗತಿ! ಹಾಗೆಯೇ ಅರ್ಜುನನ ರಥ ಕುರುಕ್ಷೇತ್ರದಿಂದ ಹಿಂದೆ ಹೋದರೆ ಆದದ್ದೇನು? ಪಾಂಡವರುಳಿದು ಯಾವ ಧರಾಧೀಶರು ಎಷ್ಟುಮಂದಿ ಅಳಿದರೇನು! ಹಾಗೆ ನೋಡಿದರೆ ಈ ಪ್ರತಿಜ್ಞೆಯಿಂದ ಕೌರವನಿಗೆ ಹೆಚ್ಚಿನ ಲಾಭವಾದಂತೆ ಕಾಣಿಸುವುದಿಲ್ಲ. ಆದರೆ ಭೀಷ್ಮರು ಮಾತನ್ನು ಆಡಿದ ರೀತಿ, ಮಾತಿನ ಪೊಂಭಾವಣೆ, ಇವು ಆ ಸಮಯ ಸನ್ನಿವೇಶಗಳಲ್ಲಿ ಕೌರವಾದಿಗಳ ಮೇಲೆ ಅದ್ಭುತವಾದ ಪರಿಣಾಮವನ್ನುಂಟುಮಾಡಿದವು. ಇದು ರಾಜಕೀಯದ ಪ್ರತಿಜ್ಞೆ. ಇಂತಹ ಪ್ರತಿಜ್ಞೆಗಳು ಹೀಗೆಯೇ ಇರಬೇಕು. ಶತ್ರುಗಳಿಗೆ ಒಂದು ಅರ್ಥ, ಮಿತ್ರರಿಗೆ ಒಂದು ಅರ್ಥ, ಕೇಳುವವರಿಗೆ ಒಂದು ಅರ್ಥ, ಹೇಳುವವರಿಗೆ ಒಂದು ಅರ್ಥ ಇದ್ದರೇ ಅಲ್ಲಿ ಸೊಗಸು. ಇದೇ 'ಲೌಕಿಕ' ಬಲ್ಲವನ ರೀತಿ. ಕರ್ಣನು ತನ್ನ ಪ್ರತಿಜ್ಞೆಗೆ ಪೂರ್ವದಲ್ಲಿ ಕುಲವನ್ನು ಕುರಿತು ಮಾತನಾಡಿದಾಗ ಕೇಳುವವರ ಮನಸ್ಸಿನ ಮೇಲೆ ಪರಿಣಾಮವಾಗುವ ಸಲುವಾಗಿ ಕುಲ ಕುಲ ಕುಲ ಎಂದು ಮತ್ತೆ ಮತ್ತೆ ಅದೇ ಪದವನ್ನು ಪ್ರಯೋಗ ಮಾಡಿದ್ದಾನೆ. ಇಲ್ಲಿಯೂ ಅಂತಹುದೇ ಒಂದು ಪರಿಣಾಮದ ಸಲುವಾಗಿ ಚಕ್ರ ಚಕ್ರಿ ಚಕ್ರ ಚಕ್ರ ಎಂದು ಮಾತುಗಳನ್ನು ಹಾಕಿದ್ದಾನೆ. ಈ ಪದ್ಯವನ್ನು ಗಟ್ಟಿಯಾಗಿ ಓದುತ್ತಿದ್ದರೆ ಭೀಷ್ಮರು ಹೇಳುತ್ತಿದ್ದಂತೆಯೆ ಸುದರ್ಶನಚಕ್ರ ತನ್ನ ಕೊರಳನ್ನೇ ಕತ್ತರಿಸುತ್ತಿದೆಯೋ ಎಂಬ ಭ್ರಮೆ ಕರ್ಣನಂತಹವನಿಗೂ ಆಗಿ ಆತ ಕಳವಳಕ್ಕೀಡಾದಂತಿದೆ ಪದ್ಯದ ಶೈಲಿ. ಅಷ್ಟೇ ಅಲ್ಲ, ವಿಚಾರಮಾಡಿದರೆ ನಮಗೆ ಕರ್ಣನ ಪ್ರತಿಜ್ಞೆಗೂ ಭೀಷ್ಮರ ಪ್ರತಿಜ್ಞೆಗೂ ಎಷ್ಟು ಅಂತರವಿದೆಯೆಂಬುದು ತಿಳಿಯುತ್ತದೆ. ವಯಸ್ಸಿನ ಅಂತರ, ಅನುಭವದ ಅಂತರ, ಸಂಸ್ಕೃತಿಯ ಅಂತರ! ಹೀಗೆ ಅಂತರವಿರುವುದರಿಂದಲೇ ಅಲ್ಲವೆ ಒಬ್ಬನು ಕರ್ಣ, ಇನ್ನೊಬ್ಬನು ಭೀಷ್ಮ!

ಮುಂದೆ ಹತ್ತು ದಿನಗಳ ಯುದ್ಧಾನಂತರದಲ್ಲಿ ಭೀಷ್ಮರು ಶರಶಯನದಲ್ಲಿ ಮಲಗುತ್ತಾರಷ್ಟೆ, ಆಮೇಲೆ ದುರ್ಯೋಧನನು ಕರ್ಣನಿಗೇ ಏಕೆ ಪಟ್ಟಗಟ್ಟಬಾರದೆಂದು ಆಲೋಚಿಸುತ್ತಾನೆ. ಆದರೆ

ಈ ವೇಳೆಗೆ ಕರ್ಣನ ಮನಸ್ಸು ಸಂಪೂರ್ಣವಾಗಿ ಪರಿವರ್ತಿತವಾಗಿದ್ದಿತು. ಭೀಷ್ಮಾರ್ಜುನರ ಯುದ್ಧವನ್ನು ಸಾಕ್ಷಿಯಂತೆ ವೀಕ್ಷಿಸಿದ ಆತ 'ಭಾರತಂ ಕಲಹಂ' 'ಇದಿರ್ಜುವನ್ ಹರಿಗನ್' ಎಂಬ ಭೀಷ್ಮರ ಮಾತಿನ ನಿಜವನ್ನು ಸಾಕ್ಷಾತ್ಕರಿಸಿಕೊಂಡಿದ್ದನು. ಆದ್ದರಿಂದ ಈಗ ತಾನಾಗಿಯೇ ಮುಂದೆ ಬಂದು 'ಬೇಡ ಬೇಡ ಆಚಾರ್ಯರಿಗೇ ಪಟ್ಟವಾಗಲಿ' ಎಂದು ಹೇಳಿ ದ್ರೋಣರಿಗೆ ಕೌರವನು ಪಟ್ಟಗಟ್ಟುವಂತೆ ಮಾಡಿದನು. ಸಂತೋಷದಿಂದ ತಾನು ಅವರನ್ನು ಸೇರಿಕೊಂಡು ಅವರ ನಾಯಕತ್ವದಲ್ಲಿ ಹಗೆಗಳನ್ನು ಎದುರಿಸಿದನು. ದ್ರೋಣರು ಮಡಿಯುವುದಾಯಿತು. ಮುಂದೆ ತನ್ನದೇ ಸರದಿ. 'ಸೂಟ್ ಪಡೆಯಲಪ್ಪುದು ಕಾಣ' ಎಂಬ ಭೀಷ್ಮರ ಮಾತು ಎಷ್ಟು ಬೇಗ ಸನ್ನಿಹಿತವಾಯಿತು. ಕರ್ಣನಿಗೇ ಈಗ ಸೇನಾಪಟ್ಟ. ಪಟ್ಟಗಟ್ಟಿಸಿಕೊಂಡ ಕರ್ಣನು ಪಶ್ಚಾತ್ತಾಪದಿಂದ ದಗ್ಧನಾಗಿ ಪ್ರಾಯಶ್ಚಿತ್ತ ನಿಮಿತ್ತವಾಗಿ ಭೀಷ್ಮಾಚಾರ್ಯರ ಶರಶಯನದ ಬಳಿಗೆ ನಡೆದು ಆ ಮಹಾಮಹಿಮರಿಗೆ ಮೂರುಸಲ ಬಲವಂದು ಅವರ ಚರಣಕಮಲದ ಮೇಲೆ ತನ್ನ ತಲೆಯಿಟ್ಟು ಕ್ಷಮಾಯಾಚನೆ ಮಾಡಿ ದೀನನಾಗಿ ಹೀಗೆ ಹೇಳುತ್ತಾನೆ.

ಆಂ ಮಾತಱಿಯದೆ ಮುಳಿದುಂ
ನಿಮ್ಮಡಿಯಂ ನೋಯೆ ನುಡಿದೆನುಱಿದೆ ಏಳಿಸಲೇ
ನೆಮ್ಮಳವೆ ಮಱೆವುದಾ ಮನ
ದುಮ್ಮಚ್ಚಮನಜ್ಜ ನಿಮ್ಮನೆರೆಯಲ ಬಂದೆಂ.

'ನಾನು ಮಾತು ಗೊತ್ತಾಗದೆ ಕೋಪ ಮಾಡಿಕೊಂಡೆ. ನಿಮಗೆ ನೋವು ಆಗುವಂತೆ ಆಡಿದೆ. ನಿಮ್ಮಂತಹವರನ್ನು ಅಲ್ಲಗಳೆಯುವುದು ನಮ್ಮಿಂದ ಸಾಧ್ಯವೇ? ಮನಸ್ಸಿನ ಕೋಪವನ್ನು ಮರೆತುಬಿಡಿ. ಅಜ್ಜ ನಿಮ್ಮನ್ನು ಬೇಡುವುದಕ್ಕಾಗಿ ಬಂದಿದ್ದೇನೆ' ಎಂಬ ಅಭಿಪ್ರಾಯ ಬರುವ ಈ ಮಾತು ಕರ್ಣನ ಹೃದಯ ಪರಿವರ್ತನೆಯನ್ನು ಸೊಗಸಾಗಿ ರೂಪಿಸಿದೆ. ಆಗ ಕರ್ಣನು 'ಕೌಂತೇಯರು' 'ಗಾಂಗೇಯರು' 'ಅವರು' 'ಇವರು' ಎಂದೆಲ್ಲ ಹೇಳಿದ್ದುಂಟು. ಈಗ 'ಆ ಪಾಂಡುಸುತರ್' ಎನ್ನುತ್ತಾನೆ, 'ಅಜ್ಜ' ಎನ್ನುತ್ತಾನೆ! ಎಂತಹ ನಯದ ವಿನಯದ ಮಾತು ಇವು! ಯುದ್ಧದಲ್ಲಿ ತಮ್ಮಂತಹವರೂ ಗೆಲಲಾರದ ಪಾಂಡುಸುತರನ್ನು ನಮ್ಮಂತಹವರು ಗೆಲುವುದು ಅಚ್ಚರಿಯಲ್ಲವೆ? ಹೇಗೂ ನಾನು ನನ್ನ ಛಲವನ್ನೇ ಮೆರೆಯುತ್ತೇನೆ ಎಂಬ ಕರ್ಣನ ಮಾತು ಅವನ ವಿನಯಶ್ರೀಗೆ ಎಂತಹ ತೆರೆದ ಗವಾಕ್ಷವಾಗಿದೆ!

ಭೀಷ್ಮರು ಈಗ ಮಾತನ್ನಾಡಿ ಕರ್ಣನನ್ನು ಸಮಾಧಾನಪಡಿಸಿದ ಬಗೆ ಬಹಳ ಘನವಾಗಿದೆ, ಗಂಭೀರವಾಗಿದೆ. ಅಪಾರಸಿಂಧೂದ್ಭವನ 'ಅತ್ಯುನ್ನತಿ'ಗೆ ತಕ್ಕುವಂತಹ ರೀತಿಯಲ್ಲಿದೆ. ಇದು ಭೀಷ್ಮರ ಸಮಾಧಾನ ವಾಕ್ಯ:

ನುಡಿವುದಂ ಪತಿಭಕ್ತಿಯ ಪೆಂಪಿಂ ನೀಂ ನುಡಿದೈ ಪೆಱತಂದದಿಂ
ನುಡಿದೆಯಲ್ತೆ ಮದಾಯಮವೋಘಂ ಸೂಟ್ಪಡೆಯಲ್ಕೆನಗಕ್ಕುಮಿ
ನ್ನೆಡೆಯೊಳೆಂದೈ ಅದೆಂದುದದೇಂ ತಪ್ಪಾದುದೆ ನಮ್ಮೊವಜರ್ ಜಸಂ
ಬಡೆದ ಭಾರ್ಗವರಪ್ಪುದಱಿಂದಂ ನಂಟರುಮಂಗಮಹೀಪತೀ.

'ನೀನು ಏನು ಮಾತನ್ನಾಡಿದೆಯೋ ಅದನ್ನು ಸ್ವಾಮಿಭಕ್ತಿಯ ಅತಿಶಯದಿಂದ ಆಡಿದೆ. ಬೇರೆಯವರು ಹೀಗೆ ಆಡುವುದಕ್ಕೆ ಸಾಧ್ಯವಿಲ್ಲವೆಂಬಂತೆ ಮಾತನಾಡಿದೆ. ನನ್ನ ಆಯ ವ್ಯರ್ಥರಹಿತವಾದದ್ದು ನನಗೆ ಯುದ್ಧಮಾಡುವ ಅವಕಾಶಬೇಕು ಎಂದೆ. ಅದು ಎಂದದ್ದು ಅದೇನು ತಪ್ಪಾಯಿತೇ ನಮ್ಮ ಉಪಾಧ್ಯಾಯರು ಯಶಸ್ಸು ಪಡೆದ ಪರಶುರಾಮರಾದದ್ದರಿಂದ ನಾವು ಇಬ್ಬರೂ ನಂಟರು ಅಂಗರಾಜ' ಎನ್ನುತ್ತಾರೆ ಭೀಷ್ಮರು. ಕರ್ಣನ ಮನಸ್ಸಿನ ತುಮುಲದ ಅರಿವಿದೆ ಭೀಷ್ಮರಿಗೆ; ಕರ್ಣನ ಮನಸ್ಸನ್ನು ವಿಶ್ಲೇಷಿಸಿದ್ದಾರೆ ಭೀಷ್ಮರು. ಸ್ವಾಮಿಯ ಮೇಲಣ ಭಕ್ತ್ಯಾತಿಶಯದಿಂದ ಮಾತುಗಳು ಹಾಗೆ ಬಂದುವೇ ಹೊರತು ತಮ್ಮ ಮೇಲೆ ವೈಯಕ್ತಿಕವಾದ ಮುನಿಸು ಕರ್ಣನಿಗಿಲ್ಲವೆಂಬುದನ್ನು

ಅವರು ಬಲ್ಲರು. ಕರ್ಣನು ತನ್ನ ಯುದ್ಧದ ಸರದಿಗೆ ತಹತಹಪಟ್ಟದ್ದೆಷ್ಟೋ ಅಷ್ಟೇ ಹೊರತು ಮತ್ತಾವ ತಪ್ಪಾಗಲಿ ಅವನಲ್ಲಿಲ್ಲವೆಂಬುದನ್ನು ಅವರು ಅರಿತಿದ್ದರು. ಆದ್ದರಿಂದ ಈಗ ಹೀಗೆ ಮುದ್ದಾಗಿ ಹಿತವಾಗಿ ಸಮಾಧಾನಪಡಿಸುತ್ತಿದ್ದಾರೆ ಭೀಷ್ಮರು ಕರ್ಣನನ್ನು! ಕರ್ಣನು ಕೌಂತೇಯನೆನ್ನುವುದು ಭೀಷ್ಮರಿಗೆ ತಿಳಿಯದು. ಆದರೂ ಅವನನ್ನು ತಮ್ಮ ನಂಟನೆಂದು ಕರೆದು ಸಮಾಧಾನಪಡಿಸಬೇಕೆಂಬ ಆಸೆ ಅವರಲ್ಲಿ ಮೂಡಿದೆ. ಅದಕ್ಕಾಗಿ ಈಗ ತಮಗೂ ಕರ್ಣನಿಗೂ ಭೀಷ್ಮರು ಕಲ್ಪಿಸಿಕೊಂಡಿರುವ ನಂಟುತನ ಬಹಳ ಸೊಗಸಾಗಿದೆ. ತಾವಿಬ್ಬರೂ ಪರಶುರಾಮರ ಗರುಡಿಯಲ್ಲಿ ಶಸ್ತ್ರಾಸ್ತ್ರಗಳ ಅಭ್ಯಾಸವನ್ನು ಮಾಡಿದವರು. ತಮಗಿಬ್ಬರಿಗೂ ಅವರು ಗುರು. ಹಾಗೂ ಒಬ್ಬ ಗುರುವಿನ ಇಬ್ಬರು ಶಿಷ್ಯರು ನಂಟರು ಎಂಬ ಘನತತ್ತ್ವವನ್ನು ಪ್ರಕಟಿಸಿ ಭೀಷ್ಮರು ಕರ್ಣನನ್ನು ತಮ್ಮವನನ್ನಾಗಿ ಮಾಡಿಕೊಂಡಿದ್ದಾರೆ. ಈ ಹೊಸ ನಂಟುತನದ ಹಿಂದೆ ಹಿಮಾಲಯ ಸದೃಶವಾದ ಔದಾರ್ಯ ಹೇಗೆ ಹಬ್ಬಿದೆ ನೋಡಿ. ರಕ್ತ ಗಟ್ಟಿ, ನೀರು ತೆಳು ಎಂಬ ಮಾತಿದೆಯಷ್ಟೆ. ಪಂಪನು ನೀರು ಗಟ್ಟಿ, ರಕ್ತ ತೆಳು ಎಂದನು. ಕೌಂತೇಯರಲ್ಲಿ ಒಬ್ಬನೆಂದು ತಿಳಿದು ಕರ್ಣನನ್ನು ಆದರಿಸುತ್ತಿದ್ದರೆ ಈ ಔದಾರ್ಯದ ಎತ್ತರ ಬಿತ್ತರಗಳು ಕುಸಿದು ಕುಗ್ಗಿಬಿಡುತ್ತಿದ್ದವು. ಒಬ್ಬ ಗುರುವಿನ ಶಿಷ್ಯರು ಪರಸ್ಪರ ಬಂಧುಗಳೆಂಬ ಕಲ್ಪನೆ ಉಪಾಧ್ಯಾಯ ವೃತ್ತಿಯಲ್ಲಿರುವವರಿಗೆ ಎಷ್ಟು ಆಪ್ಯಾಯಮಾನವಾಗಿದೆ, 'ನಾನು ಮಾತುಗೊತ್ತಾಗದೆ ಮುಳಿದೆ' ಎನ್ನುವ ಕರ್ಣನ ಮಾತಂತೂ ವಿದ್ಯಾರ್ಥಿಗಳ ಬಾಯಲ್ಲಿ ಉಪಾಧ್ಯಾಯರು ದಿನವೂ ಕೇಳತಕ್ಕದ್ದೇ. ಮಾತು ಜ್ಯೋತಿರ್ಲಿಂಗ. ಶಬ್ದವೂ ಬ್ರಹ್ಮಸ್ವರೂಪ. ಮಾತುಬಲ್ಲವನಿಗೆ ಜಗಳವಿಲ್ಲ ಊಟಬಲ್ಲವನಿಗೆ ರೋಗವಿಲ್ಲ. ನಾವು ಎರಡನ್ನೂ ಅರಿಯೆವು. ನಮಗೆ ಎರಡೂ ಪ್ರಾಪ್ತವಾಗಿದೆ. ಆಗ ಕರ್ಣನು ಆಡಿದ ಅಹಂಕಾರದ ಮಾತು ಅವನು ಕುಲೀನನಲ್ಲವೆನ್ನಿಸುವ ಶಂಕೆಗೆ ಎಡೆಗೊಟ್ಟಿತು. ಈಗ ಕರ್ಣನು ಆಡಿದ ಮಾತು ಮತ್ತೆ ಶಂಕೆಗೆ ಅವಕಾಶವಿತ್ತಿದೆ. ಕುಲಹೀನನಲ್ಲವಲ್ಲವೆ ಎಂಬ ಶಂಕೆ ಈಗ. ಹೀಗೆ ನಯದ ವಿನಯದ ನೀತಿಯ ಧರ್ಮದ ತತ್ತ್ವದ ಮಾತು ಜನರನ್ನು ಆಕರ್ಷಿಸುತ್ತದೆ. ಮುಂದೆ ಭೀಷ್ಮರು ಕರ್ಣನಿಗೆ ಶಲ್ಯನನ್ನು ಸಾರಥಿಯನ್ನಾಗಿ ಮಾಡಿಕೊಂಡು ಯುದ್ಧಮಾಡುವಂತೆ ಸಲಹೆಯಿತ್ತು ಕರ್ಣನನ್ನು ಕಳುಹಿಸಿಕೊಟ್ಟರು.

ಅನುಗಾಲವೂ ಸಮಾಜಜೀವನದಲ್ಲಿ ಬೆರೆತು ಹೆಜ್ಜೆಹೆಜ್ಜೆಗೂ ದಾರಿ ತಪ್ಪುವೆವೋ ಎಂಬ ಅಳುಕಿನಿಂದ ಬೆಳಕಿಗಾಗಿ ಅತ್ತಿತ್ತ ಹೊರಳುತ್ತಿರುವ ನಮಗೆ ಪಂಪನು ಎಂತಹ ಲೌಕಿಕದ ದೀಪ ಹಚ್ಚಿದ್ದಾನೆ ಎಂಬುದನ್ನು ಹೇಳುವುದಷ್ಟೇ ಈ ಲೇಖನದ ಆಶಯ. ಕರ್ಣನು ಸೂರ್ಯನ ಮಗ, ಬೆಳಕಿನ ಮಗ. ಆ ಸೂರ್ಯನಿಗೂ ಮೋಡ ಮುಚ್ಚುವುದಿಲ್ಲವೆ? ಕರ್ಣನಿಗೂ ಮಮಕಾರದ ಮೋಡ ಕ್ಷಣಕಾಲ ಕವಿಯಿತು. ವಿವೇಕದ ಗಾಳಿ ಬೀಸಿ ಕವಿದ ಮೋಡ ಚದುರಿ ಕರ್ಣನು ನಿಜದ ಬೆಳಕಿನಲ್ಲಿ ಮತ್ತೆ ಹೊಳೆದನು.

ಪಂಪನು ಈ ಮೇಲಣ ಸಂದರ್ಭದಲ್ಲಿ ಎಂತಹ ಸುಂದರವಾದ ಸಂಸ್ಕೃತಿಯ ಪಾಠವನ್ನು ಕಲಿಸಿದ್ದಾನೆ! ನಾಯಕನ ಲಕ್ಷಣ ಯಾವುದು? ವಿರೋಧ ಪಕ್ಷಗಳ ಟೀಕೆ ಹೇಗಿರುತ್ತವೆ? ಮೌನದ ಮಹತ್ವವೇನು? ಕುಲದ ವ್ಯಾಖ್ಯಾನ ಯಾವುದು? ವಿನಾಶಾತ್ಮಕ ಪ್ರತಿಜ್ಞೆ ಯಾವುದು? ರಚನಾತ್ಮಕ ಪ್ರತಿಜ್ಞೆ ಯಾವುದು? ಗುಣದ ಆಧಿಕ್ಯವೇ ಹೇಗೆ ದೋಷವಾಗುತ್ತದೆ? ವಸ್ತು ಪರಿಸ್ಥಿತಿಯ ಜ್ಞಾನದ ಮಹತ್ತ್ವವೇನು? ಸರದಿಯನ್ನು ಏಕೆ ಕಾಯಬೇಕು? ಇತಿಮಿತಿಗಳನ್ನು ಅರಿತ ಪ್ರತಿಜ್ಞೆ ಹೇಗಿರುತ್ತದೆ? ರಾಜಕೀಯ ಪ್ರತಿಜ್ಞೆಯ ಸ್ವರೂಪವೆಂತಹುದು? ವಿಷಮ ಸಂದರ್ಭಗಳಲ್ಲಿ ನಾಯಕನು ಹೇಗೆ ಸಮಾಧಾನ ಮಾಡಬೇಕು? ಹೇಗೆ ಆತ್ಮೀಯತೆಯನ್ನು ಬೆಳೆಯಿಸಿಕೊಳ್ಳಬಹುದು? ಹೇಗೆ ಎದುರು ಪಕ್ಷದವರ ಮನಸ್ಸನ್ನು ಕ್ಷಕಿರಣದಂತೆ ಹೊಕ್ಕು ತಿಳಿಯಬೇಕು? ಒಂದೆ, ಎರಡೆ, ಮೂರೆ, ಹೀಗೆ ಹತ್ತಾರು ವಿಷಯಗಳ ಬೋಧೆ ಇಲ್ಲಿದೆ. ಕಥೆಯಲ್ಲಿ ಲೌಕಿಕವನ್ನು ಹುದುಗಿಸಿ ಹೇಳಿದ ರೀತಿ ಬಹಳ ಹೃದ್ಯವಾಗಿದೆ! ಲೌಕಿಕವನ್ನು ಹುದುಗಿಸಿ ಕಾವ್ಯಕ್ಕೆ ಎಂತಹ 'ಹುದುಗು' ತಂದಿದ್ದಾನೆ! ಸಾವಿರ ವರುಷದ

ಹಿಂದಿನ ಕನ್ನಡನಾಡಿನ ದೊರೆಯೊಬ್ಬನ ಆಸ್ಥಾನದಲ್ಲಿ ಕಣ್ಣಿಗೆ ಕಂಡ ಕಿವಿಗೆ ಬಿದ್ದ ತಾನೇ ಅನುಭವಿಸಿದ ನೂರು ತೆರನಾದ ರಾಜಿಕ ಸಾಮಾಜಿಕ ಧಾರ್ಮಿಕ ಸಾಂಸ್ಕೃತಿಕ ಕ್ಷೇತ್ರದ ಚಲನವಲನಗಳನ್ನೆಲ್ಲ ತನ್ನ ಕೃತಿಯಲ್ಲಿ ಪಂಪ ಕೂಡಿಸಿಕೊಟ್ಟಿದ್ದಾನೆ. ಪಂಪನ ಲೌಕಿಕ ಪ್ರಜ್ಞೆ ಅಸಾಧಾರಣವಾದದ್ದು ! ಆತ ಬೆಳಗಿದ ಲೌಕಿಕ ನಂದಾದೀಪದಂತೆ ಇದೆ. ಇಂತಹ ಲೌಕಿಕದ ಪಾಠ ಹೇಳಿದ ಪಂಪ ನಿಜವಾಗಿಯೂ 'ನಾಡೋಜ'ನೇ ಹೌದು.

**ಎಸ್. ವಿ. ಪರಮೇಶ್ವರಭಟ್ಟ**

# ಬಸವೇಶ್ವರನ ಜೀವಮಾನಾವಧಿ

ಬಿಜ್ಜಳನ ಆಳಿಕೆಯು ಹಲವು ಘಟ್ಟಗಳು ಬಸವೇಶ್ವರನ ಜೀವಮಾನದ ಕಾಲಾವಧಿಯು ಗಣನೆಗೆ ಮೈಲುಕಲ್ಲುಗಳಂತಿವೆ. ಶಾಸನಾಧಾರಗಳಿಂದ ಚರಿತ್ರೆಯೆನಿಸಿಕೊಂಡು ಹೆಚ್ಚು ವಿಶ್ವಸನೀಯವಾದ ಬಿಜ್ಜಳನ ಆಳಿಕೆ ಮತ್ತು ಬಾಳಿನ ಪರಮಾವಧಿಗಳನ್ನು ಕಂಡುಕೊಂಡು, ಆ ಸಿಟ್ಟಿನಲ್ಲಿ ಬಸವ-ಪುರಾಣ-ಕಥಾ-ಭೂಸಂಶೋಧನೆ ಮಾಡುವುದರಿಂದ, ಬಸವ-ಜೀವನ-ದೇವಾಲಯದ ಮುಡಿ-ನಡು-ಅಡಿಗಳನ್ನು ಅಚ್ಚಳಿಯದೆ ಬಿಡಿಸಲು ಸಾಧ್ಯವಾಗುವುದು. ಆದುದರಿಂದ ಬಿಜ್ಜಳನ ರಾಜಕೀಯಜೀವನದ ಉಗಮ-ಪ್ರಗತಿ-ಉಪಸಂಹಾರಗಳ ವಿಚಾರಣೆಗೆ ಆದ್ಯತೆಯು ಅಪರಿಹಾರ್ಯವೂ ಕ್ರಮಾಗತವೂ ಆಗಿದೆ.

ಬಿಜ್ಜಳನು ಮಹಾಮಂಡಲೇಶ್ವರನಾಗಿ ತನ್ನ ಆಳಿಕೆಯನ್ನು ಯಾವಾಗ ಪ್ರಾರಂಭಿಸಿರಬಹುದು? ಬಿಜ್ಜಳನ ತಂದೆಯಾದ ಪೆರ್ಮಾಡಿಯು ಬಿಜಾಪುರ ಜಿಲ್ಲೆಯ ಜಮುಖಂಡಿ ತಾಲೂಕಿನ ತದಲಬಾಗಿ ಎಂಬ ಊರಲ್ಲಿನ 20—4—1129 ನೇ ಇಸವಿಯ ಒಂದು ಶಾಸನ[1]ದಲ್ಲಿ ತನ್ನ ಆಳಿಕೆಯ 12 ನೇ ವರ್ಷದ ಗಣನೆ ಮಾಡಿರುವುದರಿಂದ ಆತನು ಕ್ರಿ. ಶ. 1118 ರಲ್ಲಿ ಆಗ್ಗೆ ಚಾಳುಕ್ಯ ಚಕ್ರವರ್ತಿಯಾಗಿದ್ದ ವಿಕ್ರಮಾದಿತ್ಯನ (1077?—1126/7) ಅಧೀನದಲ್ಲಿ ಆಳಿಕಯನ್ನು ಆರಂಭಿಸಿರಬೇಕು. ಅದೇ ಬಿಜಾಪುರ ಜಿಲ್ಲೆಯ ಇಂಗಳೇಶ್ವರ ಗ್ರಾಮದ ಕ್ರಿ. ಶ. 1128 9 ರ ಶಾಸನ[2]ವಿನ್ನೊಂದರಿಂದ ಪೆರ್ಮಾಡಿಯು ಚಾಳುಕ್ಯ ಚಕ್ರವರ್ತಿಯಾದ ಮುಮ್ಮಡಿ ಸೋಮೇಶ್ವರನ (ಕ್ರಿ. ಶ. 1126/7–1138/9) ಕೈಕೆಳಗೆ ಮಹಾಮಾಂಡಲಿಕನಾಗಿ ತರ್ದವಾಡಿ ನಾಡನ್ನು ಆಳುತ್ತಿದ್ದಂತೆ ತಿಳಿಯ ಬರುವುದು. [3]ಇಷ್ಟೇ ನಮಗೆ ಪೆರ್ಮಾಡಿಯ ಸಂಬಂಧವಾಗಿ ತಿಳಿಯಬಂದಿರುವ ವೃತ್ತಾಂತ ಸರ್ವಸ್ವ[3]. ಈತ ಎಲ್ಲಿಯವರೆಗೆ ಆಳಿದನೋ, ಎಂದಿನಿಂದ ಬಿಜ್ಜಳನು ತಂದೆಯ ರಾಜ್ಯಭಾರವನ್ನು ನಿರ್ವಹಿಸಿಕೊಂಡನೋ, ಎರಡೂ ತಿಳಿಯದಾಗಿದೆ. ಇದೊಂದು ಸಮಸ್ಯೆ. ಇದನ್ನು ಬಿಡಿಸಲು ಶ್ರೀಯುತ ಪಾಂಡುರಂಗ ದೇಸಾಯರ ಸಂಶೋಧನೆಯು ಸಹಾಯಕವಾಗಿದೆ. ಜತ್ ತಾಲೂಕಿನ ವಳಸಂಗವೆಂಬ ಗ್ರಾಮದ ಮಹಾದೇವ ಶಿವಾಲಯದ ಒಂದು ಗೋಡೆಯಲ್ಲಿ ಅವರಿಗೆ ಸಿಕ್ಕಿರುವ ಬಿಜ್ಜಳನ ಒಂದು ಶಾಸನದ ಪ್ರಕಾರ ಕ್ರಿ. ಶ. 28—12—1142 ರಷ್ಟು ಹಿಂದೆಯೇ, ಬಿಜ್ಜಳನು ಇಮ್ಮಡಿ ಪೆರ್ಮ್ಮ ಜಗದೇಕಮಲ್ಲನ (ಕ್ರಿ. ಶ. 1138/9—1150/1) ಮಹಾಮಂಡಲೇಶ್ವರನಾಗಿ ಕರಹಡ-4000 ಪ್ರಾಂತವನ್ನು ಆಳುತ್ತಿದ್ದಂತೆ ವೇದ್ಯವಾಗುವುದು. [4]ಇಷ್ಟು ಪೂರ್ವದ ಕಾಲದಲ್ಲಿ ಬಿಜ್ಜಳನು ಮಹಾಮಂಡಲೇಶ್ವರನಾಗಿದ್ದ ಸಂಗತಿಯು ಮೊದಲ ಬಾರಿಗೆ ಈ ಒಂದು ಶಾಸನದಿಂದಲೇ ಪ್ರಕಟವಾಗಿರುವುದು[4]. ಈ ಒಂದು ಆಧಾರದಿಂದಲೇ ಶ್ರೀ ಪಾಂಡುರಂಗ ದೇಸಾಯರು "ಒಂದೆರಡು ವರ್ಷ ಹಿಂದಕ್ಕೆ ತಳ್ಳಿ", ಕ್ರಿ. ಶ. 1140 ರಲ್ಲಿ ಬಿಜ್ಜಳನು ತನ್ನ ಆಳಿಕೆಯನ್ನು ಆರಂಭಿಸಿರಬೇಕೆಂದು "ಸ್ಥೂಲ"ವಾಗಿ ಊಹಿಸಿದ್ದಾರೆ. ಮುತ್ತಗಿಯ ಸಂಗಮೇಶ್ವರ ದೇವಾಲಯದಲ್ಲಿನ ಕ್ರಿ. ಶ. 1147 ರ ಒಂದು ಶಾಸನ[5]ದಲ್ಲಿ ಬಿಜ್ಜಳನನ್ನು "ಮಹಾಮಂಡಳೇಶ್ವರಂ **ಕುಮಾರ** ಬಿಜ್ಜಳ ದೇವರಸ" ಎಂದು ಕರೆದಿದೆ. ಕ್ರಿ. ಶ. 1147 ರಲ್ಲಿ "ಕುಮಾರ"ನೆಂದು ಕರೆಸಿಕೊಂಡ ಬಿಜ್ಜಳನು ಕ್ರಿ. ಶ. 1140 ಕ್ಕಿಂತ ಬಹಳ ಹಿಂದೆ ರಾಜ್ಯಭಾರ ಮಾಡಿರಬಹುದಾದ ಸಂಭವವು ಕಡಿಮೆ. ಆದ್ದರಿಂದ ಬಿಜ್ಜಳನು ಮಹಾಮಂಡಳೇಶ್ವರನಾಗಿ ಆಳಿಕೆಯನ್ನು ಆರಂಭಿ

---

[1] *B. K.*, No. 66 of 1938-39. [2] (*a*) *Bombay Gaz.*, Vol. I, Part II, p. 470. (*Dy. of Kan. Dist.* page 52). (*b*) *Inscriptions in Northern Karnatak*, etc., No. 7.
[3] *Dy of Kan Dist.* page 59. [4] 'ಕ. ಸಾ. ಪ. ಪತ್ರಿಕೆ,' ಸಂಪುಟ 36, ಸಂಚಿಕೆ 1-2, ಪುಟ 131.
[5] *Inscriptions in Northern Karnatak*, etc., No. 8.

ಸಿದ್ದು ಕ್ರಿ. ಶ. 1140 ರಲ್ಲಿ ಅಥವಾ ಇಮ್ಮಡಿ ಪೆರ್ಮಜಗದೇಕಮಲ್ಲನು ಚಾಳುಕ್ಯ ಚಕ್ರವರ್ತಿಯಾಗಿ ಪಟ್ಟಾಭಿಷಿಕ್ತನಾದ ಕ್ರಿ. ಶ. 1138/9[6] ರಲ್ಲಿ ಎಂದು ಒಹುಸುಟ್ಟಿಗೆ ಖಚಿತವಾಗಿಯೇ ಇಟ್ಟುಕೊಳ್ಳಬಹುದು. (ಆಗ ಬಿಜ್ಜಳನಿಗೆ ಬಹು ಹೆಚ್ಚೆಂದರೆ 20 ವರ್ಷ ವಯಸ್ಸಾಗಿದ್ದಿರಬಹುದು).

ಚಾಳುಕ್ಯ ಚಕ್ರವರ್ತಿಗಳ ಪಾದಪದ್ಮೋಪಜೀವಿಯಾಗಿದ್ದ ಬಿಜ್ಜಳನು ಸ್ವತಃ ಚಕ್ರವರ್ತಿ ಪದವಿಗೇರಬೇಕಾದರೆ ಅವನಿಗೆ ಹಲವು ಕಾಲ ಹಿಡಿದಿದೆ. ಅವನು 10—12 ವರ್ಷಗಳ ಆ ದೀರ್ಘಾವಧಿಯಲ್ಲಿ ತನ್ನ ಸ್ವಾಮಿಯ ಸಾಮ್ರಾಜ್ಯದ ದುರಾಕ್ರಮಣದ ದುಸ್ಸಾಧ್ಯ ಕಾರ್ಯವನ್ನು ನಿಧಾನವಾಗಿಯಾದರೂ ಕ್ರಮವಾಗಿ ಖಚಿತವಾಗಿ ಹಲವು ಹಂತಗಳಲ್ಲಿ ನೆರವೇರಿಸಿಕೊಂಡನು. ಮಹಾಮಾಂಡಲಿಕನಾಗಿದ್ದ ಬಿಜ್ಜಳನು ಚಕ್ರವರ್ತಿಯಾದ ಈ ಪರಿವರ್ತನೆಯನ್ನೂ, ಅದರ ಬಣ್ಣ-ಬದಲಾವಣೆಯನ್ನೂ ನಾವು ಬಿಜ್ಜಳನ ಶಾಸನಗಳಲ್ಲಿ ಸ್ಪಷ್ಟವಾಗಿ ಕಾಣಬಹುದು.

ಇಮ್ಮಡಿ ಪೆರ್ಮ್ಮ ಜಗದೇಕಮಲ್ಲನ ಆಳಿಕೆಯು ಕೊನೆಯಾದ ಮತ್ತು ಮುಮ್ಮಡಿ ತೈಲನ ಆಳಿಕೆಯು ಆರಂಭವಾದ ಒಂದು ವರ್ಷದ ಮೇಲಣ ಅಂದರೆ ಕ್ರಿ. ಶ. 1151/2 ರ ಬಿಜಾಪುರದ ಒಂದು ಶಾಸನ[7]ದಿಂದ, ಬಿಜ್ಜಳನು ತೈಲ III ನ ಅಧೀನದಲ್ಲಿ ಮಹಾಮಾಂಡಲಿಕನಾಗಿ, ತದ್ದವಾಡಿ–1000 ವನ್ನೂ, 26–11–1155 ರ ಶಿಕಾರಿಪುರದ 108 ನೇ ಶಾಸನ[8]ದಿಂದ ಬನವಾಸಿ–12000 ವನ್ನೂ ಆಳುತ್ತಿದ್ದಂತೆ ತಿಳಿಯುವುದು. ತೈಲ III ನ ಆಳಿಕೆಯ ಆರನೆಯ ವರ್ಷವಾದ 26–12–1155 ಅಥವಾ 23–1–1156 ರ ಶಿಕಾರಿಪುರದ 104 ನೇ ಶಾಸನ[9]ದಲ್ಲಿ ಆತನ ಮಹಾಮಂಡಲೇಶ್ವರನಾದ ಬಿಜ್ಜಳನು "ಸಕಳ ದೇಶಂಗಳಂ...ಆಳುತ್ತಮಿರೆ" ಎಂದಿರುವುದರಿಂದ ಆಗ್ಗೆ ಬಿಜ್ಜಳನು ತೈಲನ ರಾಜ್ಯಭಾರದಲ್ಲಿ ಹೆಚ್ಚುಕಡಿಮೆ ಆತನ ಸರ್ವಾಧಿಕಾರಿಯಂತಿದ್ದಿರಬೇಕೆಂದು ಶ್ರೀಮಾನ್ ಗೋವಿಂದ ಪೈಗಳು ಊಹಿಸಿದ್ದಾರೆ.[10] ಇದು ಸರಿಯೆಂದೂ ತೋರುವುದು. ಏಕೆಂದರೆ ಬಿಜ್ಜಳನು ತನ್ನ ಶಾಸನಗಳಲ್ಲಿ ತನ್ನ ಆಳಿಕೆಯ ವರ್ಷವನ್ನು—ಚಕ್ರವರ್ತಿಯಾಗಿ ಆಳಿದ ವರ್ಷವನ್ನು—ಈ ಕ್ರಿ. ಶ. 1156/7 ರಿಂದಲೇ ಎಣಿಸಲು ಪ್ರಾರಂಭಿಸಿರುವನು. ಅಣ್ಣಿಗೆರೆ ಶಾಸನ[11]ದಲ್ಲಿ 1157/8 ನ್ನು ಆತನ ಆಳಿಕೆಯ ಎರಡನೇ ವರ್ಷವೆಂದೂ, ಶಿಕಾರಿಪುರದ 162 ನೇ ಶಾಸನ[12]ದಲ್ಲಿ ಕ್ರಿ. ಶ. 1158/9 ನ್ನು ಮೂರನೆಯ ವರ್ಷವೆಂದೂ ಹೇಳಿರುವುದು ಈ ಸಂಬಂಧದಲ್ಲಿ ಗಮನಾರ್ಹವೇ ಆಗಿದೆ. ಕ್ರಿ. ಶ. 1158/9 ರ ಶಾಸನ[13]ವೊಂದರಲ್ಲಿ ಬಿಜ್ಜಳನು ಆ ಕಾಲಕ್ಕೆ ನಿರಂಕುಶವಾಗಿ ಮತ್ತು ಸ್ವತಂತ್ರವಾಗಿ ಆಳುತ್ತಿದ್ದ ರಾಜ್ಯದ ವಿಸ್ತೀರ್ಣವನ್ನು "ಧರೆಯಂ ಸಾಧಿಸಿದಂ ತೆಂಕಬ್ಧಿಯೆ, ಬಡಗ ಸೀಮೆ ಚಾಳುಕ್ಯ ಕಟಕ" ಎಂದು ವರ್ಣಿಸಿದೆ. ಆದ್ದರಿಂದ ಕ್ರಿ. ಶ. 1158/9 ರ ವೇಳೆಗೆ ಬಿಜ್ಜಳನು ತನ್ನ ಸಾಮ್ರಾಜ್ಯವನ್ನು ಪಶ್ಚಿಮದಲ್ಲಿ ಸಮುದ್ರದವರೆಗೂ, ಉತ್ತರದಲ್ಲಿ ಚಾಲುಕ್ಯ ರಾಜಧಾನಿಯಾದ ಕಲ್ಯಾಣದವರೆಗೂ ವಿಸ್ತರಿಸಿದ್ದನೆಂದು ಸ್ಪಷ್ಟವಾಗುವುದು. ಆ ವೇಳೆಗಾಗಲೇ ಆತನ ನಿಶಾತ ಖಡ್ಗಾಹಿಯು ಉಸ್ಮತ್ತರಿಪುವ್ರಾತಾಸುವಾತಾಶನದಿಂದ ತಣಿದಿತ್ತು.[14] ಆತನ ದೋರ್ದಂಡವು ಧರಣೀಚಕ್ರಕ್ಕಧಿಷ್ಠಾನವೆನಿಸಿತ್ತು[15]. ಅಲ್ಲಿಂದ ಇನ್ನು ಒಂದೆರಡು ಮೂರು ವರ್ಷವೆನ್ನುವುದರೊಳಗೇ ಅಂದರೆ ಕ್ರಿ. ಶ. 1162/3 ರಲ್ಲಿ ಸ್ವಯಂ ಚಕ್ರವರ್ತಿಯಾಗಿ ಚಾಳುಕ್ಯಸಾಮ್ರಾಜ್ಯಕ್ಕೆಲ್ಲ ಅಧೀಶನಾಗುವನು. ಅವನು ಕ್ರಿ. ಶ. 1156/7 ರಿಂದಲೇ ಚಕ್ರವರ್ತಿಯಂತೆ ಆಳಲಾರಂಭಿಸಿದನೆಂದು ಹೇಳಬಹುದಾದರೂ ಮುಮ್ಮಡಿತೈಲನು ಸಾಯುವ (ಕ್ರಿ. ಶ. 1162/3)[16] ವರೆಗೂ ತನ್ನನ್ನು ಚಕ್ರವರ್ತಿಯೆಂದು ಕರೆದುಕೊಳ್ಳಲೂ ಕೆಲವು ಶಾಸನಗಳಲ್ಲಿ[17] ಹಿಂತೆಗೆದಂತಿದೆ. ಕ್ರಿ. ಶ. 1162/3 ರಿಂದ ಮುಂದೆ

---

[6] *Dy. of Kan. Dist.* p. 52. [7] *Bombay Gaz.*, Vol. I, Part II, p. 472. [8] *Ep. Carn.* Vol. VII, part I,. [9] *Ep. Carn* Vol. VII, Part I.. [10] ಮೂರು ಉಪನ್ಯಾಸಗಳು ಪು. 64. [11] *Bomb. Gaz.* Vol. I, Part II, p. 474. [12] *Ep. Carn.* Vol. VII, Part I. [13] *Ep. Carn.* Vol. VII, Part I No. 123. [14] *Ep. Carn.* Vol. VII, Part I, No. 123 Line 13. [15] *Ep. Carn.* Vol. VII, Part I, No. 123. Line 13. [16] *Dy. of Kan. Dist.* p. 210. [17] ಮೂರು ಉಪನ್ಯಾಸಗಳು ಪು. 65 ನೋಡಿ.

ಮುಚ್ಚುಮರೆಯಿಲ್ಲದೆ ಬಿಜ್ಜಳನು ತನ್ನನ್ನು ಚಕ್ರವರ್ತಿಯೆಂದು ಮೆರೆದಿದ್ದಾನೆ—ಏಕೆಂದರೆ ಅವನು ಅಲ್ಲಿಯವರೆಗೆ ಚಕ್ರವರ್ತಿಯಂತಿದ್ದವನು, ಅಲ್ಲಿಂದಾಚೆಗೆ ಚಕ್ರವರ್ತಿಯೇ ಆಗಿಹೋಗಿದ್ದನು. ಈ ಅಂಶವು ಕ್ರಿ. ಶ. 1161/2 ರ ಮತ್ತು 1162/3 ರಲ್ಲಿನ ಕ್ರಮವಾಗಿ ಬಳ್ಳಿಗಾವೆ[18] ಮತ್ತು ಅಣ್ಣಿಗೇರಿ[19] ಶಾಸನಗಳಿಂದ ರುಜುವಾತಾಗುವುದೆಂಬುದನ್ನು ಫ್ಲೀಟರು ತೋರಿಸಿಕೊಟ್ಟಿದ್ದಾರೆ[20] ಮೇಲೆ ಹೇಳಿರುವ ಮೊದಲನೇ ಶಾಸನದಲ್ಲಿ ಬಿಜ್ಜಳನಿನ್ನೂ ತನ್ನನ್ನು ಮಹಾಮಂಡಳೇಶ್ವರನೆಂದು ಕರೆದುಕೊಂಡು, ಮರುವರ್ಷದ ಶಾಸನದಲ್ಲಿ "ಸಮಸ್ತ ಭುವನಾಶ್ರಯ ಪೃಥ್ವೀವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ" ಮುಂತಾದ ಚಕ್ರವರ್ತಿಗೆ ಸಲ್ಲಬೇಕಾದ ಎಲ್ಲ ಬಿರುದುಗಳನ್ನೂ ಬಳಸಿಕೊಂಡಿದ್ದಾನೆ.

ಅಷ್ಟೇ ಅಲ್ಲದೆ ಚಾಳುಕ್ಯ ಸಾಮ್ರಾಜ್ಯವನ್ನು ತಾನು ಆಕ್ರಮಿಸಿ ಆಪೋಶನಗೊಂಡುದನ್ನೂ ನಿರ್ಭೀತಿಯಿಂದ ಶಾಸನಗಳಲ್ಲಿ ಬರೆಸಿದ್ದಾನೆ. ಏಕಾಂತದ ರಾಮಯ್ಯನ ಜೀವನದಲ್ಲಿ ಸು. ಕ್ರಿ. ಶ. 1162 ರ ವೇಳೆಗೆ ನಡೆದಿರಬಹುದಾದ[21] ಒಂದು ಪವಾಡವನ್ನು ವರ್ಣಿಸಿ ಆ ಸಂಬಂಧವಾಗಿ "ಬಿಜ್ಜಳದೇವಂ ರಾಮಯ್ಯಂಗಳು ಮಾಡಿದ ಪರಮಸಾಹಸಕಂ ನಿರತಿಶಯಮಪ್ಪ ಮಾಹೇಶ್ವರಭಕ್ತಿಗಂ ಮೆಚ್ಚಿ" ಗೋಕಾವೆಯೆಂಬ ಗ್ರಾಮವನ್ನು ಅವರಿಗೆ "ಕಾಲಂ ಕರ್ಚಿ ಧಾರಾಪೂರ್ವಕಂ ಮಾಡಿಕೊಟ್ಟ"ನೆಂಬಲ್ಲಿ ಅಬ್ಬಲೂರು ಶಾಸನ (E) ವು[22] ಸಣ್ಣ ಕಳಚುರ್ಯವಂಶದಲ್ಲಿ ಹುಟ್ಟಿದ (ಹೆಸರಾಂತ) ಬಿಜ್ಜಳನು ಚಾಳುಕ್ಯರ ಸಾಮ್ರಾಜ್ಯವನ್ನು ಸ್ವಾಧೀನಪಡಿಸಿಕೊಂಡ ಸಾಹಸಕೃತ್ಯವನ್ನು ಕೊಂಡಾಡಿದೆ—

**ಕೊಡದೊಳಗೆ ಪುಟ್ಟಿ ಕಡಲಂ**
**ಕುಡಿದಂ ಘಟಯೋನಿ ; ಪುಟ್ಟಿಕಳಚೂರ್ಯರೊಳ್ ಅವ |**
**ಗಡಿಸದೆ ಚಳುಕ್ಯರನ್ವಯ**
**ಕಡಲಂ ಕುಡಿದುರ್ಕು ಸಜ್ಜನಂ ಬಿಜ್ಜಣನೊಳ್[23]**

ಅಂತು ಕ್ರಿ.ಶ. 1162 ರ ಹೊತ್ತಿಗೆ ಬಿಜ್ಜಳನು ಸಕಲಧಾತ್ರಿಯನ್ನೂ ಆಳುವ ಚಕ್ರವರ್ತಿಯಾಗಿದ್ದನೆಂಬುದು ನಿರ್ವಿವಾದವಾದ ಅಂಶ. ಕ್ರಿ. ಶ. ಸು. 1162 ರ ದಾವಣಗೆರೆಯ ಶಾಸನ[24]ದಲ್ಲೂ ಈ ಬಗ್ಗೆ ಬಿಜ್ಜಳನನ್ನು ಕೈವಾರಿಸಲಾಗಿದೆ. ಒಬ್ಬ ಸಾಮಾನ್ಯ ಮಂಡಳೇಶ್ವರನ ಹೊಟ್ಟೆಯಲ್ಲಿ ಹುಟ್ಟಿ ಮಂಡಳೇಶ್ವರನೇ ಆಗಿದ್ದ ಬಿಜ್ಜಳನು "ವೀರ"ದಿಂದ ಸಕಲಧಾತ್ರಿಗೂ ಒಡೆಯನಾದುದು ಪ್ರಶಂಸನಾರ್ಹವೇ ಹೌದು—

**ಕೊಡದಿನುದಯಿಸಿದಗಸ್ತ್ಯಂ**
**ಕಡಲಂ ಪೀರ್ದಂತೆ ಮಂಡಳೇಶ್ವರರಾಜ್ಯ |**
**ಕ್ಕೊಡೆಯನೆನೆ ಪುಟ್ಟಿ ವೀರದಿ**
**ನೆಡೆಗೊಂಡಂ ಸಕಳಧಾತ್ರಿಯಂ ಬಿಜ್ಜನೃಪಂ ||**

ಬಿಜ್ಜಳನು ಚಾಳುಕ್ಯ ಸಾಮ್ರಾಜ್ಯಕ್ಕೆಲ್ಲ ಚಕ್ರವರ್ತಿಯಾದ ಮೇಲೆ ವಂಶಪರಂಪರಾಗತವಾಗಿ ತನ್ನ ಹಿರಿಯರಿಗೂ ತನಗೂ ರಾಜಧಾನಿಯಾಗಿದ್ದ ಮಂಗಳವಾಡವನ್ನು ಬಿಟ್ಟು ಕಲ್ಯಾಣವನ್ನು ತನ್ನ ನೆಲೆವೀಡಾಗಿ ಮಾಡಿಕೊಂಡನು. ಕ್ರಿ. ಶ. 1161/2 ರ ಬಳ್ಳಿಗಾವೆಯ ಶಾಸನದ ಹೊತ್ತಿಗೂ ಆತನು ತನ್ನ ರಾಜಧಾನಿಯನ್ನಿನ್ನೂ ಕಲ್ಯಾಣಕ್ಕೆ ಸ್ಥಳಾಂತರಗೊಳಿಸಿರಲಿಲ್ಲವೆಂದು ತಿಳಿಯಬರುವುದು. ಏಕೆಂದರೆ ಆ ಶಾಸನದಲ್ಲಿ ಆತನ ರಾಜಧಾನಿಯು ಅಣ್ಣಿಗೇರಿಯೆಂದು ಹೇಳಿದೆಯೇ ಹೊರತು ಕಲ್ಯಾಣದ ಹೆಸರೆತ್ತಿಲ್ಲ. ಆತನು ತನ್ನ ಸ್ಥಿರಶಿಬಿರವನ್ನು ಕಲ್ಯಾಣಕ್ಕೆ ಯಾವ ಸಂವತ್ಸರದಲ್ಲಿ ಬದಲಾಯಿಸಿದನೆಂಬುದನ್ನು ನಿರ್ಧರಿಸಲಾಗದಿದ್ದರೂ ಅಣ್ಣಿಗೇರಿಯಲ್ಲಾದ

[18] *Elliot MS. Collection*, Vol. II, p. 67. [19] ಅದೇ, p. 67. [20] *Dy. Kan. Dt.* p. 59.
[21] *Ep. Ind.* Vol. V, P. 245. [22] *Ep. Ind.* Vol. V. P. 237. [23] *Ep. Ind.* Vol. V.
[24] *Ep. Carn.* Vol. XI. *Dg.* 42.

ಮೇಲೆ ಆತನು ಕಲ್ಯಾಣದಲ್ಲಿ ಆಳಿರಬಹುದು. ಅಥವಾ ಆ ವೇಳೆಗಾಗಲೇ ಕಲ್ಯಾಣದ ಜೊತೆಗೆ ಅಣ್ಣಿಗೇರಿಯನ್ನೂ, ಆ ಮಧ್ಯಂತರ ಕಾಲದಲ್ಲಿ, ರಾಜಧಾನಿಯನ್ನಾಗಿ ಬಳಸಿಕೊಂಡಿರಬಹುದು. ಕ್ರಿ. ಶ. 1158/9 ರ ವೇಳೆಗೆ ತನ್ನ ರಾಜ್ಯವನ್ನು ಉತ್ತರಕ್ಕೆ ಚಾಲುಕ್ಯಕಟಕವಾದ ಕಲ್ಯಾಣದವರೆಗೆ ಮಾತ್ರ ವಿಸ್ತರಿಸಿದ್ದ ಬಿಜ್ಜಳನು ಕ್ರಿ. ಶ. 1162/3 ರ ವೇಳೆಗೆ ಕಲ್ಯಾಣವನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿರಬಹುದು. ಕ್ರಿ. ಶ. 1165 ರ ವೇಳೆಗಂತೂ ಕಲ್ಯಾಣವು ಬಿಜ್ಜಳನ ರಾಜಧಾನಿಯಾಗಿತ್ತೆಂಬುದು ನಿರ್ವಿವಾದವಾದ ಅಂಶ: ಏಕೆಂದರೆ ಆ ವೇಳೆಯ ಬಾಳಂಬೀಡಿನ ಶಾಸನದಲ್ಲಿ[25] ಬಿಜ್ಜಳನ ರಾಜಧಾನಿ ಕಲ್ಯಾಣವೆಂದು ಉಕ್ತವಾಗಿದೆ. ಆದ್ದರಿಂದ ಬಿಜ್ಜಳನು ಮಹಾಮಂಡಲಿಕನಾಗಿರುವವರೆಗೂ ಮಂಗಳವಾಡವು ಆತನ ರಾಜಧಾನಿಯಾಗಿದ್ದುದರ ಜೊತೆಗೆ, ಅವನ ಕಾಲಕ್ಕೆ ಅದು ಬಳಸಂಚುಗಳ ಕೇಂದ್ರಕಾರ್ಯಾಲಯವೂ ಆ(ಯಿತು)ಗಿತ್ತು. ಚಾಲುಕ್ಯ ಸಾಮ್ರಾಜ್ಯವನ್ನು ಅವನು ಸ್ವಾಧೀನಪಡಿಸಿಕೊಳ್ಳಲು ಮಾಡಿದ ಸಂಚುಗಳೂ, ಹೂಡಿದ ಹಂಚಿಕೆಗಳೂ ಈ ಮಂಗಳವಾಡದಲ್ಲೇ ಮೊಳದೋರಿ ಎರಡೆಲೆಯಾಗಿ ಸನೆಕೊನೆಕೋಗಿ ಬಿಜ್ಜಳನಿಗೆ ವಾಂಛಿತಫಲಸರ್ವಸ್ವವನ್ನೂ ಕೊಟ್ಟಿತು.

ಹೀಗೆ ಚಕ್ರವರ್ತಿಯಾದ ಬಿಜ್ಜಳನು ಕ್ರಿ. ಶ. 1162/3 ರಿಂದ 1168/9 ರ ವರಿಗೆ ಆಳಿದ. ಕ್ರಿ. ಶ. 25-3-1168 ರ ಹೊತ್ತಿಗೆ ಬಿಜ್ಜಳನು ತನ್ನ ಮಗನಾದ ರಾಯಮುರಾರಿ ಸೋಯಿದೇವನಿಗೆ ರಾಜ್ಯಭಾರವನ್ನು ನಿರ್ವಹಿಸಿಕೊಟ್ಟಿದ್ದ ವೃತ್ತಾಂತವು ಶಿಕಾರಿಪುರದ ಒಂದು ಶಾಸನ[26]ದಲ್ಲಿ ಬಂದಿದೆ. ಆ ಶಾಸನದ ಪ್ರಕಾರ ಬಿಜ್ಜಳನು 25–3–1168 ರ ವೇಳೆಗೆ ಮಗನಿಗೆ ಪಟ್ಟಗಟ್ಟಿದ್ದು ಮುಗಿದು, ರಾಯಮುರಾರಿ ಸೋವಿದೇವನ ಆಳಿಕೆ ಪ್ರಾರಂಭವಾಗಿರುತ್ತದೆ. ಆದರೂ ಆ ಶಾಸನದ ಆರಂಭದಲ್ಲಿ ಬಿಜ್ಜಳಚಕ್ರವರ್ತಿಯ ಪ್ರಶಸ್ತಿಗಳನ್ನೆಲ್ಲ ಹೇಳಿ ಅಂತಹ ಬಿಜ್ಜಳನು "ಅದ್ವಿತೀಯ ಸ್ವಾಮಿತ್ವದಿಂ ವಸುಧಾವಳಯಮಂ ಸುಖದಿನೇಕಚ್ಛತ್ರದಿಂ ರಾಜ್ಯಂಗೆಯ್ವುತ್ತಿರ್ದಾತ್ಮ ರಾಜ್ಯಭರನಿರೂಪಣಂ ಮಾಡಿದಾ" ಎಂದಿದೆಯಾದುದರಿಂದಲೂ, ಅದೇ ಶಾಸನದಲ್ಲಿ ಸೋವಿದೇವನ ಆಳಿಕೆಯ ವರ್ಷವನ್ನು ಗಣಿಸದೆ "ಶ್ರೀಮತ್ಕಳಚುರ್ಯ ವರ್ಷದ ೧೬[27]ನೆಯ ಸರ್ವಧಾರಿ ಸಂವತ್ಸರ"ವೆಂದಿರುವುದರಿಂದ ಬಿಜ್ಜಳನು ಸೋವಿದೇವನಿಗೆ ಪಟ್ಟಗಟ್ಟಿ ರಾಜ್ಯಕೊಟ್ಟುದು ಅದೇ ವರ್ಷದಲ್ಲೆಂದೂ, ಮತ್ತು ಹಾಗೆ ಮಾಡಿ ಆ ವೇಳೆಗೆ ಒಂದು ವರ್ಷಕೂಡ ಮುಗಿದಿರಲಿಲ್ಲವೆಂದೂ ಅರ್ಥವಾಗುವುದು. ಇದೇ ಸೋಮೇಶ್ವರನ ಅಥವಾ ರಾಯಮುರಾರಿ ಸೋವಿದೇವನ (ಕ್ರಿ. ಶ. 18-9-1168 ರ ತೇದಿಯ) ಮತ್ತೊಂದು ಶಾಸನ[28]ದಲ್ಲಿಯೂ ತನ್ನ ಆಳಿಕೆಯ ವರ್ಷವನ್ನು ಗಣಿಸದೆ ಇರುವದಕ್ಕೆ ಕಾರಣ, ಆ ವೇಳೆಗೂ ಅವನು ಪಟ್ಟಕಟ್ಟಿಸಿಕೊಂಡು ಒಂದು ವರ್ಷ ಪೂರೈಸಿರಲಿಲ್ಲದುದೇ ಇರಬಹುದು. ಮುಂದೆ ಅವನು ಬರೆಸಿರುವ ಶಾಸನಗಳಲ್ಲಿನ ತನ್ನ ಆಳಿಕೆಯ ವರ್ಷದ ಗಣನೆಯ ಆಧಾರದಿಂದ ಸೋವಿದೇವನು ಕ್ರಿ. ಶ. 1167/8 ರಲ್ಲಿಯೇ ಪಟ್ಟಾಭಿಷಿಕ್ತನಾಗಿರಬೇಕೆಂದು ಖಚಿತವಾಗುವುದು. ಆದರೆ ಕ್ರಿ. ಶ. 29-9-1167 ರಲ್ಲೂ ಸ್ವಯಂ ಬಿಜ್ಜಳನೇ ರಾಜ್ಯವಾಳುತ್ತಿದ್ದನೆಂದು ಇಲಿಸೂರಿನ ಶಾಸನ[29]ದಿಂದ ತಿಳಿಯಬರುವುದು: ಕ್ರಿ. ಶ. 25-3-1168 ಎನ್ನುವಷ್ಟರೊಳಗೇ ಸೋವಿದೇವನು ಪಟ್ಟಾಭಿಷಿಕ್ತನಾಗಿದ್ದನೆಂದು ಶಿಕಾರಿಪುರದ 92 ನೇ ಶಾಸನ[30]ದಿಂದ ವ್ಯಕ್ತವಾಗುವುದು. ಆದುದರಿಂದ ಮೇಲಣ ಎರಡು ಶಾಸನಗಳ ಅಂತರದ 6 ತಿಂಗಳ ಅವಧಿಯಲ್ಲಿ, ಬಹುಮಟ್ಟಿಗೆ ಆ ಅವಧಿಯ ಉತ್ತರಾರ್ಧದಲ್ಲಿ ಬಿಜ್ಜಳನಿಂದ ಸೋವಿದೇವನು ರಾಜ್ಯವನ್ನು ನಿರ್ವಹಿಸಿಕೊಂಡಿರಬೇಕು.

ಹೀಗೆ ನಾವು ಬಿಜ್ಜಳನು ನಿವೃತ್ತನಾದ ಕಾಲವನ್ನು ನಿಷ್ಕರ್ಷಿಸಬಹುದೇ ಹೊರತು

---

[25] *Bombay Gaz.* Vol. I, Part II, P. 476, fn. 2. [26] *Ep. Carn.* Vol. VII Part I, No. 92. [27] ಇದು ಲಿಪಿಕಾರನ ಕೈತಪ್ಪು "೧೩ ನೆಯ" ಎಂದಿರಬೇಕಾಗಿತ್ತು. ಗೋವಿಂದಪೈಗಳ ಮೂರು ಉಪನ್ಯಾಸಗಳು, ಪುಟ 68 ನೋಡಿ. [28] Madras Epigraphic Report of 1937, No. 37. [29] ಮೂರು ಉಪನ್ಯಾಸಗಳು, ಪು. 69. [30] *Ep. Carn.* Vol. VII, Part I.

11976



ಆತನ ಜೀವನದ ಅಂತ್ಯಕಾಲವನ್ನು ಇಂಥದೇ ವರ್ಷವೆಂದು ಹೇಳಲು ಯಾವ ಶಾಸನಾಧಾರವೂ ಇಲ್ಲ. ಈ ಸಂಬಂಧದಲ್ಲಿ "ಬಿಜ್ಜಳರಾಯಚರಿತೆ"ಯ ಉಪಲಬ್ಧವಿರುವ ಹೇಳಿಕೆಯು ಅಸಂಬದ್ಧ. ಏಕೆಂದರೆ ಅದರಲ್ಲಿ[81] ಬಿಜ್ಜಳನು "ಕಲಿಯುಗ 4255 ಪ್ರಭವ ಕಾರ್ತಿಕಶುದ್ಧ ದಶಮಿ ರವಿವಾರ"ದಂದು ಸ್ವರ್ಗಸ್ಥನಾದಂತೆ ಹೇಳಿದೆ. ಮೇಲಣ ಕಲಿಯುಗದ ಗಣನೆಯು ಕ್ರಿ. ಶ. 1154ಕ್ಕೆ ಸರಿಹೋಗುವುದು. ಆದರೆ ಆ ಕಾಲಕ್ಕೆ ಬಿಜ್ಜಳನು ಉಚ್ಛ್ರಾಯ ಸ್ಥಿತಿಯಲ್ಲಿದ್ದನೇ ಹೊರತು ಸತ್ತಿರಲಿಲ್ಲವೆಂಬುದು ಶಾಸನಾಧಾರಗಳಿಂದ ಖಚಿತವಾಗಿದೆ. ಆದ್ದರಿಂದ ಬಿಜ್ಜಳರಾಯಚರಿತೆಯ ಆ ಕಾಲಗಣನೆಯ ವಿವರವು ಪ್ರತಿಮಾಡುವವರ ಕೈತಪ್ಪಿನಿಂದ ಅಸ್ತವ್ಯಸ್ತವಾಗಿರಬೇಕು. ಅದರ ಸರಿಯಾದ ಪಾಠಾಂತರ "ಕಲಿಯುಗ 4275" ಇರಬಹುದೇನೋ?! ಅದೊಂದು ಪಕ್ಷ ನಿಜವಾದರೆ ಬಿಜ್ಜಳನ ಸಾವು ಕ್ರಿ. ಶ. 1174ರ ವೇಳೆಗೆ ಸಮನಿಸಿರಬಹುದು.

ಬಿಜ್ಜಳನ ಸಾವಿನ ತೇದಿ ಸಮಗೆ ತಿಳಿಯಬರದಿದ್ದರೆ ಹೋಗಲಿ, ಆತನ ಸಾವಿಗೆ ಕಾರಣವೇನೆಂಬುದಾದರೂ ಅವುಗಳಿಂದ ತಿಳಿಯಬರುವುದೇ ಎಂದರೆ ಆ ಬಗ್ಗೆ ಬಿಜ್ಜಳರಾಯ ಚರಿತೆ ಮತ್ತು ಬಿಜ್ಜಳರಾಯ ಪುರಾಣ ಇವುಗಳಲ್ಲಿ ಏಕಾಭಿಪ್ರಾಯವಿಲ್ಲ. ಬಸವನು ಕೊಟ್ಟ ವಿಷಫಲದಿಂದ ಬಿಜ್ಜಳನು ಸತ್ತನೆಂದು ಬಿಜ್ಜಳರಾಯ ಚರಿತೆಯಲ್ಲಿ ಹೇಳಿದ್ದರೆ, ಬಿಜ್ಜಳರಾಯ ಪುರಾಣದಲ್ಲಿ ಆತನು ಯಮಧರಮುನಿಗಳಿಂದ ಸನ್ಯಾಸದೀಕ್ಷಾ ಗ್ರಹಣಮಾಡಿ ಸ್ವರ್ಗಸ್ಥನಾದನೆಂದು ಹೇಳಿದೆ. ಆದರೆ ಮೇಲಣ ಎರಡು ಗ್ರಂಥಗಳಲ್ಲೂ ಬಿಜ್ಜಳನು ಗತಿಸಿದ ಮೇಲೂ ಬಸವನು ಬದುಕಿದ್ದನೆಂದು ಹೇಳಿದೆ.

ಈ ಸಂಬಂಧವಾಗಿ ಬಸವಪುರಾಣಗಳ ಅಭಿಪ್ರಾಯವೇನೆಂಬುದು ಗಮನಾರ್ಹ.

ಬಸವನ ಜೀವನದ ಕಥೆಯನ್ನು ಯಥಾವತ್ತಾಗಿ ತಿಳಿಯಲು ಯಾವ ಗ್ರಂಥಗಳಿಗೆ ಆದ್ಯತೆಯನ್ನು ಕೊಡಬೇಕೆಂಬ ಗಣನಾ ಪ್ರಸಂಗ ಒದಗಿದಾಗ ಹರಿಹರನ ಬಸವರಗಳೆಯು "ಕನಿಷ್ಠಿಕಾತಿಷ್ಠತಿ". ಹರಿಹರನು "ಬಸವನಿಪ್ಪತ್ತೈದು ಸ್ಥಲದ ರಗಳೆ[82]"ಯನ್ನು ಬರೆದಿದ್ದನಾದರೂ ಅದರಲ್ಲಿ ನಮಗೀಗ ಸಿಕ್ಕುವುದು ಕೇವಲ ಹನ್ನೆರಡು ಸ್ಥಲಗಳೂ ಮತ್ತು ಹದಿಮೂರನೆಯ ಸ್ಥಳದ ಒಂದಿಷ್ಟು ಹರಕು ಮುರಿಕು ಮಾತ್ರ—ಅಂದರೆ 25 ಸ್ಥಲದ ಅರ್ಧ 12½ ಸ್ಥಳಗಳು ಮಾತ್ರ. ಈ ಸಂದರ್ಭದಲ್ಲಿ ರಾಘವಾಂಕ ಚಾರಿತ್ರಾಂತರ್ಗತ "ಹರಿಹರ ಮಹತ್ತ್ವ"ದಲ್ಲಿನ ಒಂದು ಘಟನೆ ಅರ್ಥಗರ್ಭಿತವಾಗಿರುವುದು: ಹರಿಹರನು ಬಸವನಿಪ್ಪತ್ತೈದು ಸ್ಥಲದ ರಗಳೆಯನ್ನು "ಮಾಡಿ" ವಿರೂಪಾಕ್ಷನೆಡೆಗೊಯ್ಯಲು, ಆ ಪಂಪಾವಿರೂಪಾಕ್ಷನು "ಇನಿದು ಮಿಗಿಲಾದುದೆಂದು ಹೊತ್ತಗೆಯನ್ನು ತೆಗೆದುಕೊಂಡು—ಚೆನ್ನೆಯಿತ್ತ ಪಾಲ್ಗುಡಿದಂತೆ—ಉ(ಅ?)ರೆ ಸುಂಗಿದ"ನಂತೆ. ಬಸವರಗಳೆಯನ್ನು "ಉರೆಸುಂಗಿದ" ನೆಂದರೆ ಅಸಮಂಜಸ; ಅದನ್ನವನು "ಅರೆಸುಂಗಿದ"ನಾಗಬಹುದು. ಆದ್ದರಿಂದಲೇ ಸಮಗೀಗ ಉಳಿದು ಬಂದಿರುವುದು ಪಂಪಾವಿರೂಪಾಕ್ಷನ ಉಚ್ಛಿಷ್ಟ ಪ್ರಸಾದವಾದ ಹನ್ನೆರಡೂವರೆ ಸ್ಥಳ ಮಾತ್ರ. ಬಹುಶಃ ಹರಿಹರನು ಜೀವಂತನಾಗಿದ್ದಾಗಲೇ ಅವನ ಬರೆದ ಇಪ್ಪತ್ತೈದು ಸ್ಥಲಗಳ ಬಸವರಗಳೆಯಲ್ಲಿ ಅರ್ಧ ವಿರೂಪಾಕ್ಷನ ದೇವಾಲಯದಲ್ಲೆಲ್ಲೋ ಕಳೆದುಹೋಗಿರಬೇಕು. ಹೀಗೆಂಬುದೇ ಮೇಲೆ ಹೇಳಿದ ಪವಾಡದ ತಾತ್ಪರ್ಯವಿರಬಹುದು.

"ಗುಣಾನ್ವಿತೆ ಮಾಯಿದೇವಿಯಂ ಶಿವನ ಲತಾಂಗಿಯೆಂದು ಪದೆದರ್ಚಿಸುತಿರ್ದನನೂನ-ನುರ್ವಿಯೊಳ್" ಎಂಬ ಕಥಾಸಂದರ್ಭಸಮಾರೋಪಣದಿಂದ ಪ್ರಾರಂಭವಾಗುವ ಬಸವರಗಳೆಯ ಹದಿಮೂರನೇ ಸ್ಥಲದ ಮೊದಲಲ್ಲಿ ಲೆಂಕರಸನೆಂಬ ಭಕ್ತನು ಅರಸಿ ಗಂಗಾದೇವಿಯರ ಮುತ್ತಿನೋಲೆಯನ್ನು ಕದಿಯಲು ಬಂದ ಪ್ರಸಂಗದಲ್ಲಿ ಬಸವನು ತೋರಿದ ಭಕ್ತಿಪರವಶತೆಯನ್ನೂ ಔದಾರ್ಯವನ್ನೂ ಸಂಗಮೇಶ್ವರನು ಕಂಡು ಜಂಗಮಾಕಾರದಿಂದ ಬಂದು

---

81 ಬಿಜ್ಜಳರಾಯಚರಿತೆ ಸಂ. (ಶ್ರೀ ಮಾಸ್ತಿ ವೆಂಕಟೇಶಯ್ಯಂಗಾರ್) ಪು. 92, ಪದ್ಯ 125.

82 ರಾಘವಾಂಕಚಾರಿತ್ರ, 14.120.

ನಡೆ ಬಸವ ಕೈಲಾಸಗಿಂಗೆ ಪುಷ್ಪಕದೊಳಗೆ
ಪೊಡವಿಯೊಳಗಿರವು ಸಾಲ್ವುದು ಬಾ ಮಗನೆ ನಿನಗೆ

ಎಂದು ಕರೆದಂತೆಯೂ, ಆಗ ಬಸವನು

ಸಂಗಯ್ಯ ಬಾಯೆಂದು ಕರೆವೆ ನೀನೆನ್ನುವಂ
ಪಿಂಗಲೀಯದು ಶರಣಗೋಷ್ಠಿ ಕೇಳೆನ್ನುವಂ

ಎಂದು ಬಿನ್ನೈಸಲು ಸಂಗಮೇಶ್ವರನು ಕೈಲಾಸಕ್ಕೆ ಹಿಂತಿರುಗಿದಂತೆಯೂ ಹೇಳುವ ಮೊದಮೊದಲ 37 ಪಂಕ್ತಿಗಳು ಮಾತ್ರ ಹರಿಹರನ ಇಪ್ಪತ್ತೈದುಸ್ಥಲದ ಬಸವರಗಳೆಯಲ್ಲಿನ 13 ನೇ ಸ್ಥಲಕ್ಕೆ ಸೇರಿದುವು, ಅಲ್ಲಿಂದ ಮುಂದೆ ನಮಗೆ ಹರಿಕುಮುರಿಕಾಗಿ ಸಿಕ್ಕುವ ಸುಮಾರು 47 ಪಂಕ್ತಿಗಳು[38] ಹರಿಹರ ಕೃತವಲ್ಲ. ಏಕೆಂದರೆ, **ಮೊದಲನೆಯದಾಗಿ,** ಹರಿಹರನ ಬಸವರಗಳೆ ಅಸಮಗ್ರವಾಗಿದೆಯಲ್ಲಾ ಎಂದು ಯಾರೋ ಕೊರಗಿ, ಬಸವನ ಜೀವನದಲ್ಲಿ ಆಮೇಲೆ ನಡೆದಿರಬಹುದಾದ ಘಟನೆಗಳನ್ನು ಒಂದಾದ ಮೇಲೊಂದರಂತೆ ಪಟ್ಟಿಹಾಕಿ ಸೇರಿಸಿರುವಂತೆ ತೋರುವುದು. ಹರಿಹರನು ಆ ರೀತಿ ಮಾಡಿರಲಾರ, ಮಾಡಿದ್ದರೆ ಹರಿಹರನು ಬಸವರಗಳೆಯನ್ನು ಮುಂದೆ ಇನ್ನೂ ಹನ್ನೆರಡೂವರೆ ಸ್ಥಳಗಳಷ್ಟು ಲಂಬಿಸುವ ಸಾಧ್ಯತೆ ಮತ್ತು ಸೂಕ್ತತೆಯಿರುತ್ತಿರಲಿಲ್ಲ; ಈ ರೀತಿ ಪಟ್ಟಿ ಮಾಡಲು ಅವನಿಗೆ 12-13 ಪಂಕ್ತಿ ಸಾಗಿತ್ತು. **ಎರಡನೆಯದಾಗಿ,** ಹರಿಹರಕೃತವಲ್ಲದ ಈ ಪಟ್ಟಿ ಮುಗಿದ ಮೇಲೆ

"ಇಂತು ಬಸವಂ ಮರ್ತ್ಯದೊಳಗೆ ಮಹಿಮೆಯ ಬೀಱಿ
ಸಂತತಂ ಕೆಲಕಾಲ ಶಿವಸುಖದೊಳೋಲಾಡಿ
ಶಿವದ್ರೋಹವಂ ಗೈದ ಬಿಜ್ಜಳನ ಕೊಲಿಸುತಂ
ಭವಹರನ ಶರಣಸದ್ಗೋಷ್ಠಿಯಂ ಸಲಿಸುತಂ
ಕಪ್ಪಡಿಯ ಸಂಗಮೇಶ್ವರನಲ್ಲಿ ಗೈತಂದು
ನಿಷ್ಠೆವಿಗೆ ತುತಿಗೈದು ಪೊಡಮಟ್ಟು ಕೈಮುಗಿದು
. . . . . . . . .
ಗಾಢದಿಂ ಶಿವನೊಳಗೆ ಬೆರೆದು ತಾ ಬಯಲಾದ"

ಎಂದಿದೆ. ಈ ಮೇಲಣ ಪಂಕ್ತಿಗಳಲ್ಲೆಲ್ಲೂ ಹರಿಹರನ ಕೈಗುಣ ಕಿಂಚಿತ್ತಾದರೂ ಕಾಣಬರುತ್ತಿಲ್ಲ. ಮೇಲಣ ಮೊದಲ ಆರುಸಾಲುಗಳಲ್ಲೇ ಪ್ರಾಸದ, ಛಂದಸ್ಸಿನ ಮೂರು ತಪ್ಪುಗಳಿವೆ. "ಹೆಚ್ಚು ತಪ್ಪುಗಳಿರುವುದರಿಂದ ಈ ಭಾಗವು ಹರಿಹರನದೋ ಅಲ್ಲವೋ ಎಂಬ ಅನುಮಾನಕ್ಕೆ ಆಸ್ಪದವಿದೆ ಎಂದಿರುವರು[34] ಶ್ರೀಯುತ ದಿವಂಗತ ವೆಂಕಣ್ಣಯ್ಯನವರು. ನಿಜ: ಅವರ ಅನುಮಾನ ಸಿದ್ಧಾಂತದ ಸತ್ತ್ವವುಳ್ಳುದು.

ಆದ್ದರಿಂದ ಹರಿಹರನ ಪ್ರಕಾರ ಬಸವೇಶ್ವರನ ಜೀವನದ ಕೊನೆಯ ಭಾಗದ ಸ್ವರೂಪವೇನೆಂದು ತಿಳಿಯಲವಕಾಶವೇ ಇಲ್ಲ.

ಹರಿಹರನನ್ನು ಬಿಟ್ಟರೆ ನಮಗೆ ಎರಡನೆಯ ವಿಶ್ವಾಸಪಾತ್ರನಾದ ಬಸವಪುರಾಣಕಾರನೆಂದರೆ ಪಾಲ್ಕುರಿಕೆ ಸೋಮನಾಥನೇ. ಆತನ ತೆಲುಗು ಬಸವಪುರಾಣ[35]ದಲ್ಲಿ ಹಳ್ಳಯ್ಯ ಮಧುವಯ್ಯಗಳ ಪ್ರಸಂಗವಾದೊಡನೆಯೇ ಬಸವನು "ಇನ್ನು ಈ ಊರಲ್ಲಿರಲಾಗದೆಂದು ನಿರ್ಣಯಿಸಿ, ಜಗದೇವ ಮಂತ್ರಿಯನ್ನು ಬರಿಸಿ, ಶಿವದ್ರೋಹಿಯಾದವ (ಬಿಜ್ಜಳ)ನನ್ನು ಸಂಹರಿಸುವ ಆತನ ಪ್ರತಿಜ್ಞೆಯನ್ನು ಅವನಿಗೆ ನೆನಪಾಗುವಂತೆ ಮಾಡಿ, ಆ ಊರಿನ ಭಕ್ತರೆಲ್ಲರೊಡನೆ ಕಲ್ಯಾಣ

---

[38] ಬಸವರಾಜದೇವರ ರಗಳೆ—ವೆಂಕಣ್ಣಯ್ಯನವರ ಸ್ಮಾರಕಗ್ರಂಥಮಾಲೆ 13—ಪು. 90—92, ಪಂಕ್ತಿ 40—87. [34] ಬಸವರಾಜದೇವರ ರಗಳೆ—ನಾಲ್ಕನೇ ಮುದ್ರಣ—ಪೀಠಿಕೆ, ಪುಟ xlii. [35] ಸಂ. ಬಂಡಾರು ತಮ್ಮಯ್ಯಗಾರು, ಕ್ರಿ. ಶ. 1952.

ವನ್ನು ಬಿಟ್ಟು, ಕಪ್ಪಡಿಸಂಗಮದ ಕಡೆಗೆ ಹೊರಟನು. ಕಪ್ಪಡಿಸಂಗಮದ ಮಾರ್ಗಮಧ್ಯದಲ್ಲಿರುವಷ್ಟರಲ್ಲಿಯೇ ಆದ ಬಿಜ್ಜಳನ ಕೊಲೆಯ ವಾರ್ತೆಯನ್ನು ಬಸವನು [36]ಕೇಳಿ, ಕಪ್ಪಡಿಸಂಗಮಕ್ಕೆ ಹೋಗಿ[36] [37]ಅಲ್ಲಿ ಸದ್ಗುರು ಸಂಗಯ್ಯ ದೇವನನ್ನು ಕಂಡನು.[37] ಹೀಗೆ ಕೂಡಲಿಗೆ ಬಂದು ಸಂಗಯ್ಯನನ್ನು ಕಂಡ ಬಸವೇಶ್ವರನು [38]ಆ ಕಪ್ಪಡಿಯ ಸಂಗಮದಲ್ಲೇ ಶಿವಶರಣಗೋಷ್ಠಿಯಲ್ಲಿ ಸುಖವಾಗಿದ್ದನು.[38] ಹೀಗಿದ್ದು ಬಸವನು ಪ್ರಾರ್ಥಿಸಲು ಸಂಗಮನಾಥನು ಕಾಣಿಸಿಕೊಂಡು ಆತನನ್ನು ತನ್ನೊಳಗುಮಾಡಿಕೊಂಡನು.[39]

ಬಸವನು ಕಪ್ಪಡಿಸಂಗಮದಲ್ಲಿ "ಇದ್ದ" (=ಉಂಡೆ) ನೆನ್ನುವ ಮೇಲಣ ಮಾತು ಗಮನಾರ್ಹವಾದುದು. ಅಲ್ಲಿ ಬಸವನು ಎಷ್ಟು ಕಾಲವಿದ್ದನೋ, ಯಾವಾಗ ಸಂಗಮನಲ್ಲೈಕ್ಯವಾದನೋ ಸ್ಪಷ್ಟಪಡುವುದಿಲ್ಲ. "ಉಂಡೆ"ನೆನ್ನುವ ಪದದಿಂದ ಆತ ಕಲ್ಯಾಣದಿಂದ ಕಪ್ಪಡಿಗೆ ಬಂದು ತಲುಪಿದ್ದಕ್ಕೂ, ಆಮೇಲೆ ಲಿಂಗೈಕ್ಯನಾದುದಕ್ಕೂ ಗಣನಾರ್ಹವಾದಷ್ಟು ಕಾಲದ ಅಂತರವಿದ್ದಿರಬೇಕು. ಇದಕ್ಕೆ ಬಸವಪುರಾಣದಿಂದಲೇ ನಮಗೆ ಸ್ಪಷ್ಟ ಆಧಾರ ದೊರಕದಿದ್ದರೂ ಕೆಲವು ಬಾಹ್ಯ ಪ್ರಮಾಣಗಳಿಂದ ಆ ರೀತಿಯ ತೀರ್ಮಾನಕ್ಕೆ ಬರುವುದು ಸಾಧ್ಯ.

ಮೊದಲನೆಯದಾಗಿ ನಾವು ಹರಿಹರನು ಹುಟ್ಟಿದ ವರ್ಷವನ್ನು ನಿಷ್ಕರ್ಷಿಸುವುದರಿಂದ ಬಸವನು ಲಿಂಗೈಕ್ಯವಾದ ತೇದಿಯನ್ನು ಕಂಡುಹಿಡಿದಂತಾಗುವುದು. ರಾಘವಾಂಕನು ರಚಿಸಿದ 'ಹರಿಹರಮಹತ್ತ್ವದ, ಸಾರವನ್ನು ಸಿದ್ಧನಂಜೇಶನು ತನ್ನ ರಾಘವಾಂಕಚಾರಿತ್ರದಲ್ಲಿ ಕೊಟ್ಟಿದ್ದಾನೆ. ಅದು ಈಗ ನಮಗೆ ಸಿಗದೇ ಇರುವ 'ಹರಿಹರಮಹತ್ತ್ವ'ದ ಯಥಾವತ್ತಾದ ಸಂಗ್ರಹಾನುವಾದನೆಂಬುದು ಖಚಿತ[40]. ಅದರ ಪ್ರಕಾರ ಹರಿಹರನ ಕಾರಣಿಕಾವತಾರವನ್ನು ವರ್ಣಿಸುತ್ತ ಕೈಲಾಸದಲ್ಲಿ ನಡೆದ ಒಂದು ಅವತರಣ ಪ್ರಸಂಗವು ಬಂದಿದೆ. ಅದು ಹೀಗಿದೆ:[41] "ಬಸವನು ಭೂತನವನ್ನಗಲಿ ಪುರಾತನವ್ರಾತವನ್ನೊಡಗೊಂಡು ಶಿವಸಭೆಯನ್ನು ಹೊಕ್ಕು ನಮಸ್ಕರಿಸಲು, ಪ್ರಸನ್ನನಾದ ಶಿವನು ಬಂದ ಬಸವಾದಿ ಪ್ರಮಥರನ್ನೆಲ್ಲ ಒಬ್ಬೊಬ್ಬರನ್ನಾಗಿ ಕರೆದು ಬಿಗಿಯಪ್ಪಿ ತನ್ನೊಡನೆ ಕುಳ್ಳಿರಿಸಿಕೊಂಡನು. ಆಗ ಅದೇ ಶಿವನೋಲಗದಲ್ಲಿದ್ದ "ಗಣಹರುಷ"ನೆಂಬೊಬ್ಬ ವಿಖ್ಯಾತನು ಶಿವನ ಬಳಿಗೆಯ್ದಿ ನಮಿಸಿ 'ಅಭವ, ಈ ಗಣಂಗಳು ಧಾರುಣಿಯೊಳಾಚರಿಸಿ ನಿನ್ನ ಮೆಚ್ಚುಗೆಯನ್ನು ಪಡೆದ ಪರಿಯನ್ನು ನನಗೆ ವಿವರಿಸಬೇಕು' ಎಂದು ಪ್ರಾರ್ಥಿಸಲು ಶಿವನು 'ಲೇಸಾದುದೀ ಪ್ರಶ್ನೆ! ನನ್ನ ಶರಣರ ಘನತೆಯನ್ನು ವಿಸ್ತರಿಸಲು ನೀನಲ್ಲದೆ ಸಮರ್ಥರು ಮತ್ತಾರಿದಾರೆ? ನೀನು ಭೂಲೋಕದಲ್ಲವತರಿಸಿ ಪ್ರಮಥರಮಲ ಚರಿತವನ್ನೆಲ್ಲವಾಸರದೆ ಪೇಳ್ವ ನವರಘಟಾಪ್ರಬಂಧದಿಂ ಶಾಸನಂಗೆಯ್ದು ಸರ್ವರನ್ನೂ ಧನ್ಯರನ್ನಾಗಿಸಿ ನನ್ನನ್ನು ಕೂಡು' ಎಂದನು. ಆ ನುಡಿಗೇಳಿ ಗಣಹರುಷನು ಶಿವನಿಗೆರಗಿ ಬೀಳ್ಕೊಂಡು ಭೂಲೋಕಕ್ಕವತರಿಸಿ, ಮಹಾದೇವ ಸರ್ವಾಣಿಯರ ಮಗನಾಗಿ ಜನಿಸಿ, ಹರಿಹರನೆಂದು ಪ್ರಸಿದ್ಧನಾದನು."

ಈ ಮೇಲಣ ಕಥಾಸಂದರ್ಭದಿಂದ, ಬಸವನು ಕೈಲಾಸವಾಸಿಯಾದೊಡನೆಯೇ ಹರಿಹರನು ಹುಟ್ಟಿದನೆಂದು ತಿಳಿಯಬೇಕಾಗುತ್ತದೆ. ಇದು ಹರಿಹರನ ನಚ್ಚಿನ ಶಿಷ್ಯನಾದ ರಾಘವಾಂಕನ ಅಭಿಪ್ರಾಯವಾದುದರಿಂದ ಈ ಮಾತಿಗೆ ಬಹಳ ಬೆಲೆಯುಂಟು.

ಹಾಗಾದರೆ ಹರಿಹರನು ಜನಿಸಿದ್ದು ಸುಮಾರು ಯಾವ ಸಂವತ್ಸರದಲ್ಲಿ? ಇದಕ್ಕುತ್ತರವು ರಾಘವಾಂಕಚರಿತ್ರಾಂತರ್ಗತವಾದ ಹರಿಹರಮಹತ್ತ್ವದಿಂದಲೇ ಒದಗುತ್ತದೆ. ಹರಿಹರನು

---

36 "ವಿನಿಯೆನಂತಯುನಟ ಸನಿಯೆಗೊಡಲಿಕಿ"—ತೆ. ಬ. ಪು. ಪು. 580. 37 "ಕನಿಯೆ ಸದ್ಗುರುವು ಸಂಗಯದೇವನಚಟ"—ತೆ. ಬ. ಪು ಪು. 580 38 "ಅಚಟ ಭಕ್ತುಲುದಾನುನು ಪರಮಾನುರಾಗ ಯುಕ್ತಿನಬ್ಬಸವಯ್ಯಯುಂಡೆ'—ತೆ. ಬ. ಪು. ಪು. 580. 39 ಕ. ಬ. ಪು. 61-62; ತೆಲುಗು ಬಸವಪುರಾಣ ಪು. 581-3. 40 "ಜ್ಯೋತಿರ್ಲಿಂಗದ ಮೂರು ಮುಖಗಳು"—ಗ್ರಂಥದ ಪೀಠಿಕೆ ಪು.. 9-10 ನೋಡಿ. 41 ರಾಘವಾಂಕಚಾರಿತ್ರ, 14 ನೇ ಸಂಧಿಯ ಮೊದಲಲ್ಲಿ.

ಹೊಯ್ಸಳಬಲ್ಲಾಳ[42]ನ ಆಸ್ಥಾನದಲ್ಲಿ ಕರಣಿಕನಾಗಿದ್ದಾಗ [48]‘ಪಾವನೇಶ್ವರವತ್ಸರದ ಮಾರ್ಗಶೀರ್ಷ ದಶಮೀ ವಿಧುವಾಸರದೊಳು’[43] ತೆರೆಯ ಪವಾಡವನ್ನು ತೋರಿದಂತೆಯೂ, ಅದೇ ದಿನ ಹೊಯ್ಸಳಬಲ್ಲಾಳನು ಕೊಂಡೆಯರಿಂದ ಪ್ರೇರಿತನಾಗಿ ಹರಿಹರನ ಧೀಮಂತಿಕೆಯನ್ನು ಪರೀಕ್ಷೆ ಮಾಡಲು ಲೆಕ್ಕವನ್ನು ಕೇಳಿದಾಗ ಹರಿಹರನು [44]ತಾನು ಕರಣಿಕನಾಗಿ ಸೇರಿದಂದಿನಿಂದ ಆ ಹೊತ್ತಿನವರೆಗಿನ—ಅಂದರೆ ಹನ್ನೆರಡು ವರ್ಷದ—ಲೆಕ್ಕ[44]ವನ್ನಲ್ಲಿ ಕೇಳಿದರಲ್ಲಿ ಹೇಳುವ ಸವಾಲನ್ನು ಹಾಕಿ ಸೂರ್ಯಗತಿಯನ್ನು ನಿಲ್ಲಿಸಿದ ಪವಾಡವನ್ನು ತೋರಿದಂತೆಯೂ ಹೇಳಿದೆ. ಮೇಲಣ ತೆರೆಯ ಪವಾಡ ನಡೆದ ಪಾವನೇಶ್ವರವತ್ಸರದ ಮಾರ್ಗಶೀರ್ಷ ದಶಮೀ ವಿಧುವಾಸರವು ಕ್ರಿ.ಶ. 1216ಕ್ಕೆ ಸರಿಹೊಂದುವುದು. ಆದ್ದರಿಂದ ಹರಿಹರನು ತೆರೆಯ ಪವಾಡವನ್ನು ತೋರಿದ್ದು ಕ್ರಿ.ಶ. 1216ರಲ್ಲಿಯೆಂದೂ ಕ್ರಿ.ಶ. 1204ರಲ್ಲಿ ಆತನು ವೀರಬಲ್ಲಾಳನ ಅಥವಾ ಬಲ್ಲಾಳ II ನ[B] ಆಸ್ಥಾನಕ್ಕೆ ಬಂದು ಸೇರಿರಬೇಕೆಂದೂ ಗೊತ್ತಾಗುತ್ತದೆ. ಹೀಗೆ ಹರಿಹರನು ವೀರಬಲ್ಲಾಳ ಅಥವಾ ಬಲ್ಲಾಳ II ನ[45] ಆಸ್ಥಾನಕ್ಕೆ ಒಂದು ಕರಣಿಕನಾಗಿ ಸೇರಿದ ಕ್ರಿ.ಶ. 1204ರ ಹೊತ್ತಿಗೆ ಎಷ್ಟು ವಯಸ್ಸಿನವನಾಗಿದ್ದಿರಬೇಕು ? ಸುಮಾರು 25 ವಯಸ್ಸಿನವನಾಗಿದ್ದಿರಬಹುದು. ಹರಿಹರನ ‘ಸಂಸಾರ ವ್ಯಾಮೋಹನಿರಸನ’ ರಗಳೆ[46]ಯಲ್ಲಿನ ಕೆಲವು ಪಂಕ್ತಿ[47]ಗಳಿಂದ ಆತನು, “ಸೇವಕಾವೃತ್ತಿ”ಗೆ ಸೇರುವ ಹೊತ್ತಿಗೆ ಜೀವನದಲ್ಲಿ ಬಹಳವಾಗಿ ತೊಳಲಿ ಬಳಲಿದ್ದನೆಂದೂ, ಅವನಿಗೆ ಮದುವೆ ಮಕ್ಕಳು ಆಗಿದ್ದುವೆಂದೂ ತಿಳಿಯಲು ಸೂಚನೆಗಳಿವೆ: ಹರಿಹರನಿಗೆ ಬಳಿಕ ಯೌವನವಾಗಲು ತಾಯ್ತಂದೆಗಳು ಕಂಡು, ದೈತೆಯಂ ತಂದೊಬ್ಬಳನ್ನು ಮದುವೆಮಾಡಿದರು. ಆ ಯೌವನಗರ್ವದಿಂದ, ಧನದ ಗರ್ವದಿಂದ, ತಾಯುಳ್ಳ ಪಿತನುಳ್ಳ ರೂಪುಳ್ಳ ಗರ್ವದಿಂದ, ದುರ್ಬೋಧರನ್ನು ಕೂಡಿಕೊಂಡು, ಸುತ್ತಲೂ ಸುಳಿದು ಲಲನೆಯರ ಮೋಹದ ಸುಳಿಗೆ ಸಿಕ್ಕಿದನು. ಹರಿಹರನ ಚೆನ್ನುಚರಿತ್ರೆ ಹೊನ್ನುವಿಳಾಸ ಎಲ್ಲವೂ ವಿಷಯಕ್ಕೆ ಹಾಳಾಯಿತು. ಬಳಿಕ ಆ ಕಾಮಿನಿಯರೆಲ್ಲ ನಡೆವೆಣನೆ ನುಡಿವೆಣನೆ ಬಾಳ್ವೆಣನೆ ಹೋಗೆಂದು ಬಡಿಯದಿರ್, ಬಾಲಮಂ ಸುಡು ನಾಯೆ ಛೀಯೆಂದು ಕಸವನ್ನು ಬಿಸುಡುವಂತೆ ಅವನನ್ನು ಹೊರಗಟ್ಟಿದರು. ಹರಿಹರನ ಜೀವನದಲ್ಲಿ ಕಷ್ಟಪರಂಪರೆಗಳು ಸಾಲಿಟ್ಟವು. ಪ್ರೀತಿಸಿದ ಹೆಣ್ಣುಗಳು ಕೈಬಿಟ್ಟವು, ಬಡತನ ವಡಿಯಿಟ್ಟಿತು, ಕೆಳಯರು ಕಾಲ್ತೆಗೆದರು, ತಂದೆತಾಯಿಗಳು ಸತ್ತರು, ಬಂಧುಬಳಗವು ಬಿಟ್ಟಿತು. ಆ ರಣರಣಕದಲ್ಲಿ ಹರಿಹರನು

ಮರುಳಂತೆ ಮರನಂತೆ ಬರಿಮನೆಗೆ ನಡೆತಂದು
ಎರವಾದಂತೆ ಸುರ್ರನೆ ಸುಯ್ದು ಮಿಗೆ ನೊಂದು
ಅರುವೆಗಪ್ಪಡವುಟ್ಟು ಹೆಂಡತಿಯಿರಲ್ ಕಂಡು
ಮರುಗಿ ಮುದವಳಿದು ಮನದಲ್ಲಿ ಥಾವತಿಗೊಂಡು
ಜೀವನೋಪಾಯವಂದಂದಿಗೇ ಸಾಲದಿರೆ
ಆವಾವ ತೆರೆದೊಳಂ ಮನೆವಾಳ್ತೆಗಿಲ್ಲದಿರೆ . . .
ಆರಂಭದೊಳು ನೋಡೆ ಅಲ್ಲಿಯಾಗದೆ ಮರುಗಿ
ದೂರಿಸುತೆ ವ್ಯವಹಾರದಿಂದೆ ತಿಟ್ಟನೆ ತಿರುಗಿ
ಸೇವಕಾವೃತ್ತಿಯಂ ಮಾಡಲ್ ಮನಂದಂದು[47]

---

[42] ಈ ನರಸಿಂಹ ಬಲ್ಲಾಳ II ನು ಕ್ರಿ.ಶ. 1191-1211 ರವರೆಗೆ ಆಳಿದ ವೀರಬಲ್ಲಾಳನಾದ ಮೇಲೆ ಆಳಿದವನು. [43] ರಾಘವಾಂಕ ಚಾರಿತ್ರ 14-58. [44] ರಾಘವಾಂಕ ಚಾರಿತ್ರ 14-49, 50. ಗುರುರಾಜ ಚಾರಿತ್ರ 13-20. [B] ಈತನ ಆಳಿಕೆಯ ಕಾಲ ಕ್ರಿ.ಶ. 1191-1211. See Dy. of Kan Dt. p. 64. [45] ಈತನನ್ನೇ ‘ನರಸಿಂಹಬಲ್ಲಾಳ’ನೆಂದು ಸಿದ್ಧನಂಜೇಶನು ತಪ್ಪು ತಿಳಿದಿರಬೇಕು. ಹರಿಹರನು ಪ್ರಸಿದ್ಧಿಗೆ ಬಂದುದು ವೀರಬಲ್ಲಾಳನಾದ ಮೇಲೆ ಪಟ್ಟಾಭಿಷಿಕ್ತನಾದ ನರಸಿಂಹಬಲ್ಲಾಳ II ನ ಕಾಲದಲ್ಲೇ. ಆದುದರಿಂದ ತಪ್ಪು ತಿಳುವಳಿಕೆಗೆ ಅವಕಾಶವೂ ಉಂಟು. ರಾಘವಾಂಕಚಾರಿತ್ರ 14-47. ನೋಡಿ. [46] ಶಿವಾನುಭವಗ್ರಂಥಮಾಲೆ 49. ಪುಟ 61-70. [47] ಹರಿಹರನ ರಗಳೆಗಳು ಭಾಗ 7 ಪುಟ 64-65.

ಬಲ್ಲಾಳ II ನ ಆಸ್ಥಾನಕ್ಕೆ ಕ್ರಿ.ಶ. 1204 ರಲ್ಲಿ ಕರಣಿಕನಾಗಿ ಸೇರಿರಬೇಕು. ಆದ್ದರಿಂದ ಹರಿಹರನಿಗೆ 1204 ರ ಹೊತ್ತಿಗೆ ಕನಿಷ್ಠಪಕ್ಷ 25 ವರ್ಷ ವಯಸ್ಸಾಗಿರಬೇಕು. ಹಾಗಾದರೆ ಆತನು ಕ್ರಿ. ಶ. 1180 ರ ಸುಮಾರಿಗೆ ಜನಿಸಿರಬೇಕು. ಈ ಕ್ರಿ. ಶ. 1180 ರ ಸರಿಸುಮಾರಿಗೆ ಬಸವೇಶ್ವರನು ಕೈಲಾಸವಾಸಿಯಾಗಿರಬೇಕು.

ಈ ಮೇಲಣ ವಾದಕ್ಕೆ ಉಪಷ್ಟಂಭಕವಾಗಿ ಇನ್ನೊಂದು ಪ್ರಬಲವಾದ ಮತ್ತು ವಿಶ್ವಸನೀಯವಾದ ಆಧಾರವಿದೆ: ಕೆಳದಿಯ ಬಸವರಾಜಕೃತ ಶಿವತತ್ತ್ವರತ್ನಾಕರ[48]ದಲ್ಲಿ ಬಸವನ ಜೀವನದ ಅಂತಿಮಘಟ್ಟವನ್ನು ಕುರಿತು

"ಸಂಸ್ಥಾಪಯನ್ನಶೇಷೇಣ
ಶಿವಧರ್ಮಾನ್ ಕ್ಷಿತಾವಿಹ
ಚತುರ್ವಿಂಶತಿ ವರ್ಷಾಣಿ
ಭಕ್ತಿಸಾಮ್ರಾಜ್ಯಮನ್ವಭೂತ್"

ಎಂದು ಹೇಳಿದ್ದಾನೆ. ಹಾಗಾದರೆ ಬಸವೇಶ್ವರನು ಭಕ್ತಿಸಾಮ್ರಾಜ್ಯವನ್ನು ಆರಂಭಿಸಿದುದು ಯಾವಾಗ? ಹರಿಹರನ ಬಸವರಗಳೆಯಲ್ಲಿ[49] ಬಸವೇಶ್ವರನು 16 ವರ್ಷದ ಯುವಕನಾಗಿದ್ದಾಗ "ಜನನದ ಬಳಿವಿಡಿದೆಂತಕ್ಕ ಬಂದ ಜವ್ವನಂ ಶಿವಪೂಜೆಯುಲ್ಲಿ ಸವೆಯವೇಳ್ಕುಂ. ಇಂತಲ್ಲಲ್ಲ; ಶಿವಭಕ್ತಿಯುಂ ಕರ್ಮಮುಂ ಎಂದುವೊಂದಾಗಿರದು—ಎಂದೊಲ್ಲದೆ ಪರಮವೈರಾಗ್ಯಯುಕ್ತಂ ಶಿವಲಿಂಗಾರ್ಚನಾಯತ್ತಚಿತ್ತಂ ಕರ್ಮಲತೆಯಂತಿರ್ದ ಜನ್ನಿವಾರಮಂ ಕಳೆದು ಬಿಸುಟು, ಹೋತಿನ ಗಂಟಲಂ ಬಿಗಿವಂತಿರ್ದ ಮೌಂಜಿಯಂ ಪರಿದು ಬಿಸುಟು . . . ಕಪ್ಪಡಿಯ ಸಂಗಮಮಂ ಪೊಕ್ಕು . . . . . ಕೂಡಲಸಂಗಮೇಶ್ವರ ಶ್ರೀಪಾದಕಮಳ ಮಧುಕರಾಯಮಾನನಾಗಿರ್ದಂ." ಅಂದಿನಿಂದ ಬಸವನ ಜೀವನದಲ್ಲಿ ವಿಪ್ರಕರ್ಮಮಾರ್ಗನಿರಸನವಾಗಿ ಭಕ್ತಿಸಾಮ್ರಾಜ್ಯ ಪ್ರಾರಂಭ ವಾಗಿರಬೇಕು.

ಎಂದ ಮೇಲೆ ಬಸವನಿಗೆ ಹದಿನಾರನೆಯ ವಯಸ್ಸಾದುದು ಯಾವ ಇಸವಿಯಲ್ಲಿ? ಲಕ್ಕಣ್ಣನು[50] "ಸಿದ್ಧಾರ್ಥಿ ಸಂವತ್ಸರದ ಕಾರ್ತಿಕಶುದ್ಧ ಪೌರ್ಣಮಿಯ ಸೋ(ಸೌ?)ಮವಾರದ ಮಧ್ಯರಾತ್ರಿಯಲ್ಲಿ" ಬಸವನು ಉದಯವಾದನೆಂದು ಹೇಳಿದ್ದಾನೆ. ಮೇಲಣ ಸಂವತ್ಸರವು ಕ್ರಿ. ಶ. 1140 ಕ್ಕೆ ಸರಿಹೋಗುವುದು. ಲಕ್ಕಣ್ಣನ ಈ ಹೇಳಿಕೆಯನ್ನು ಅಲ್ಲಗಳೆಯಲು ಸಮಂಜಸ ವಾದ ಆಕ್ಷೇಪಣೆ ಯಾವುದೂ ಇಲ್ಲ. ಪ್ರೌಢದೇವರಾಯ II ನ ಆಸ್ಥಾನದಲ್ಲಿದ್ದು ವಿಜಯನಗರ ಸಾಮ್ರಾಜ್ಯಕ್ಕೇ ದಂಡನಾಯಕನಾಗಿ ಮಹಾವಿದ್ವಾಂಸನಾಗಿ ಲೌಕಿಕ ವಿಚಕ್ಷಣನೆನಿಸಿಕೊಂಡು ಮೆರೆದ ಆ ಲಕ್ಕಣ್ಣನು ಬಸವನ ಜನನದ ವರ್ಷದ ಬಗ್ಗೆ ಸುಳ್ಳನ್ನಾಗಲಿ ತಪ್ಪನ್ನಾಗಲಿ ಬರೆಯು ತ್ತಾನೆನ್ನುವುದು ಒಪ್ಪಲಾಗದ ಮಾತು. ಅದುವರೆಗೆ ಪರಂಪರಾಗತವಾಗಿ ಬಂದಿದ್ದ ಆ ಕಾಲ ಗಣನೆಯನ್ನೇ ತಾನೂ ಕೊಟ್ಟಿರಬಹುದು. ಅಲ್ಲಿಗೆ ಬಸವೇಶ್ವರನು ಬಾಗೇವಾಡಿಯನ್ನು ಬಿಟ್ಟು ಕೂಡಲಸಂಗಮಕ್ಕೆ ಹೋದದ್ದು ಕ್ರಿ. ಶ. 1156 ರಲ್ಲಿ. ಕ್ರಿ. ಶ. 1156 ರಿಂದ 24 ವರ್ಷಗಳ ಕಾಲ ಭಕ್ತಿಸಾಮ್ರಾಜ್ಯವನ್ನನುಭವಿಸಿದನೆಂದರೆ ಕ್ರಿ. ಶ. 1180 ರ ಸುಮಾರಿನಲ್ಲಿ ಲಿಂಗೈಕ್ಯನಾಗಿರ ಬೇಕು. ಕೆಳದಿಯ ಬಸವರಾಜನಾದರೂ ಬಹಳ ವಿಷಯಗಳನ್ನು ತಿಳಿದವನು. ಶಿವತತ್ತ್ವರತ್ನಾ ಕರದಂತಹ ಒಂದು ವಿಶ್ವಕೋಶವನ್ನೇ ರಚಿಸಿ ಚಿರಸ್ಮರಣೀಯನಾಗಿದ್ದಾನೆ. ಇಂಥವನು ಹೇಳುವ ಮಾತುಗಳಿಗೆ ನಾವು ಸ್ವಲ್ಪಬೆಲೆಯನ್ನು ಕೊಡಬೇಕಾದುದು ಸೂಕ್ತವೇ.

ಕಲ್ಯಾಣವು ಹಾಳಾದ ಮೇಲೆ ಬಸವನು ಲಿಂಗೈಕ್ಯನಾದನೆಂಬುದು ಬಸವಪುರಾಣಗಳಲ್ಲಿ ಸಿಗುವ ಒಂದು ಸಾಮಾನ್ಯವಾದ ಹೇಳಿಕೆಯಾಗಿದೆ. ಬಿಜ್ಜಳನು ರಾಜ್ಯಸನ್ಯಾಸಮಾಡಿದ ಕೂಡಲೇ

---

[48] ಕಲ್ಲೋಲ 4—ತರಂಗ 9—ಪದ್ಯ 42. [49] ಬ. ರಾ. ದೇ. ರಗಳೆ, ಎರಡನೆಯ ಸ್ಥಲ. [50] ಶಿವತತ್ತ್ವ ಚಿಂತಾಮಣಿ, 30—11.

ಕಲ್ಯಾಣವು ಹಾಳಾಗಲಿಲ್ಲ—ಅದೊಂದು ಚಾರಿತ್ರಕ ಸತ್ಯ. ಆದರೆ ಬಸವನು ಲಿಂಗೈಕ್ಯನಾದುದು ಕಲ್ಯಾಣ ಹಾಳಾದ ಮೇಲೆ ಎಂಬುದು ವೀರಶೈವ ಪುರಾಣಗಳಿಂದಲೂ ವಚನಗಳಿಂದಲೂ ತಿಳಿಯಬರುವ ಅಂಶ. ಬಸವೇಶ್ವರನದೇ ಆದ ಒಂದು ವಚನದಿಂದಲೂ ಇದು ಖಚಿತವಾಗುತ್ತದೆ:

"ಅರಸುವಿಚಾರ, ಸಿರಿಯುಶೃಂಗಾರ ಸ್ಥಿರವಲ್ಲ ಮಾನವ:
ಕೆಟ್ಟಿತ್ತು ಕಲ್ಯಾಣ ಹಾಳಾಯಿತ್ತು ನೋಡಾ!
ಒಬ್ಬ ಜಂಗಮುದಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು:
ಸಂದಿತ್ತು ಕೂಡಲಸಂಗಮದೇವ ನಿಮ್ಮ ಕವಳಿಗೆಗೆ.'[51]!

ಈ ಮೇಲಣ ವಚನದಲ್ಲಿ ಬಸವೇಶ್ವರನು ಅರಸು ವಿಚಾರ, ಮತ್ತು ಸಿರಿಯುಶೃಂಗಾರ ಇವೆರಡೂ ಸ್ಥಿರವಲ್ಲವೆಂದು ಐಹಿಕ ಅಧಿಕಾರ ಮತ್ತು ಭೋಗಭಾಗ್ಯಗಳ ನಶ್ವರತೆಯನ್ನು ಪ್ರಸ್ತಾಪಿಸಿ ಅವೆರಡಕ್ಕೂ ಒಂದೊಂದು—ಅವಶ್ಯವಾಗಿ ನಂಬಬೇಕಾದ—ಚಾರಿತ್ರಕ ನಿದರ್ಶನವನ್ನು ಕೊಟ್ಟಿರುವನು.

ಅರಸುವಿಚಾರ ಸ್ಥಿರವಲ್ಲವೆನ್ನುವುದಕ್ಕೆ ತಮ್ಮ ಕಣ್ ಮುಂದೆಯೇ ಬಿಜ್ಜಳನ ಸಂಚಿನಿಂದ ಸಾಮ್ರಾಜ್ಯಭ್ರಷ್ಟನಾದ ಮುಮ್ಮಡಿ ತೈಲನ ಶೋಚನೀಯವಾದ ಕಥೆಯನ್ನು ನಿದರ್ಶನವಾಗಿ ಕೊಟ್ಟಿರುವರು. ಎರಡನೆಯದಾಗಿ ಸಿರಿಯುಶೃಂಗಾರ ಸ್ಥಿರವಲ್ಲವೆನ್ನುವುದಕ್ಕೆ ಚಾಳುಕ್ಯರಿಗೆ ವಿಕ್ರಮಾದಿತ್ಯ VI ನ ಕಾಲದಿಂದಲೂ ರಾಜಧಾನಿಯಾಗಿದ್ದು ಮುಮ್ಮಡಿ ಸೋಮೇಶ್ವರನ ಕಾಲಕ್ಕೆ ಬಿಲ್ಹಣನ ವಿಕ್ರಮಾಂಕ ಚಾರಿತ್ರದಲ್ಲಿ 'ಕಲ್ಯಾಣವನ್ನು ಮೀರಿಸುವ ನಗರವು ಈ ಪ್ರಪಂಚದಲ್ಲಿ ಹಿಂದಿರಲಿಲ್ಲ, ಈಗಿಲ್ಲ, ಮುಂದೆಯೂ ಇರಲಾರದು' ಎಂಬ ಖ್ಯಾತಿಗೆ ಸಂದು; ಬಿಜ್ಜಳನ ಕಾಲಾವಧಿಯಲ್ಲಿ ಅತ್ಯುಚ್ಛ್ರಾಯ ಸ್ಥಿತಿಗೆ ಬಂದು ಸಿರಿಮತ್ತುಶೃಂಗಾರಗಳ ತವರಾಗಿದ್ದ ಕಲ್ಯಾಣಪಟ್ಟಣವೂ ಹಾಳಾಯಿತೆಂದು ಹೇಳಿರುವರು.

ಆದರೆ ಮುಮ್ಮಡಿ ತೈಲಪನ ಆಳಿಕೆ ತೆಗೆಯಬೇಕಾದರೆ "ಒಬ್ಬ ಜಂಗಮದಭಿಮಾನ" ಕಾರಣವಾಯಿತೆಂಬ ಮಾತಿನಿಂದ ನಮಗೆ ಬಸವೇಶ್ವರನು ಏನು ಹೇಳಬೇಕೆಂದಿದ್ದನೋ ಅದರ ತಾತ್ಪರ್ಯ ಗ್ರಾಹ್ಯವಾದರೂ, ಅದರ ವಿವರ ವೇದ್ಯವಾಗುವುದಿಲ್ಲ. ಬಹುಶಃ ಆ ಚಾಳುಕ್ಯರಾಯನ ಆಳಿಕೆ ತೆಗೆದುದಕ್ಕೆ ಒಬ್ಬ ಜಂಗಮುದ ಶಾಪವೇ ಕಾರಣವೆಂಬ ಅಂದಿನ ಜನಜನಿತವನ್ನೇ ಬಸವನೂ ಪ್ರತಿನಿಧಿಸಿ ನುಡಿದಿರಬೇಕು.

ಆ ಚಾಳುಕ್ಯರಾಯನ ಆಳಿಕೆ "**ಒಬ್ಬ ಜಂಗಮ**"ದ ಅಭಿಮಾನದಿಂದ ತೆಗೆಯಿತ್ತೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಆ ಪ್ರಸಂಗವು ಹಳ್ಳಯ್ಯ ಮಧುವಯ್ಯ **ಎಂಬಿಬ್ಬರ** ಪ್ರಸಂಗ ವೆನ್ನುವುದಸಂಭಾವ್ಯ. ಶ್ರೀಮಾನ್ ಗೋವಿಂದಪೈಗಳು ತೈಲIII ನು ಕಲ್ಯಾಣದಲ್ಲಿ ಆಳುತ್ತಿದ್ದಾಗ ಆತನಿಂದ **ವೀರಶೈವರಿಗೆ** ತೊಂದರೆಯಾಯಿತೆಂದೂ, ಆಗ ಮಂಗಳವಾಡದಲ್ಲಿ ಆಳುತ್ತಿದ್ದ ಬಿಜ್ಜಳನ ಬಳಿಯಿದ್ದ ಬಸವೇಶ್ವರನು ಬಿಜ್ಜಳನನ್ನು ತೈಲನ ಮೇಲೇರಿ ಹೋಗುವಂತೆ ಪ್ರೇರಿಸಿ ಆ ಚಾಳುಕ್ಯನ ಆಳಿಕೆಯನ್ನು ತೆಗೆಯಿಸಿದನೆಂತಲೂ ಊಹಿಸಿದ್ದಾರೆ[52]. ಇಲ್ಲಿ ವೀರಶೈವರಿಗೆ ಸಾಮೂಹಿಕವಾಗಿ ತೈಲನಿಂದ ಹಿಂಸೆಯಾದಾಗ "ಒಬ್ಬ ಜಂಗಮ"ದಿಂದ ಚಾಳುಕ್ಯನ ಆಳಿಕೆ ತೆಗೆಯಿತ್ತೆಂಬ ಮಾತು ಹೇಗೆ ಸರಿಹೋಗುವುದು? ಆ "ಒಬ್ಬ ಜಂಗಮ"ವು ಬಸವನಂತೂ ಆಗಲೇ ಅರನು. ಏಕೆಂದರೆ ಆತನು ತನ್ನನ್ನು ಭಕ್ತನೆಂದು ಕರೆದುಕೊಳ್ಳಲೂ ಹಿಂತೆಗೆದಿರುವಾಗ ತಾನೊಬ್ಬ ಜಂಗಮವೆಂದು ಹೇಗೆ ಸಂಭಾವಿಸಿಕೊಂಡಾನು?

ಆ ಮಾತಿಗೆ ಪಾಂಡುರಂಗದೇಸಾಯರು ಇನ್ನೊಂದು ವಿಧವಾದ ವಿವರಣೆ ಕೊಡುವರು: ಬಸವೇಶ್ವರನಿಗೆ ಬಿಜ್ಜಳನೊಡನೆ ಹಗೆತನ ಉಂಟಾಗಲು ಬಸವನು ಮಂಗಳವಾಡದ ಬಿಜ್ಜಳನ ಓಲಗವನ್ನು ಬಿಟ್ಟು, ಕಲ್ಯಾಣದಲ್ಲಿದ್ದ ತೈಲ III ನ ಬಳಿ ಬಂದು ದೂರಿಕೊಂಡನೆಂದೂ, ಆಗ

---

[51] ಬಸವೇಶ್ವರನ ಷಟ್‌ಸ್ಥಲದ ವಚನ, 626. [52] ಮೂರು ಉಪನ್ಯಾಸಗಳು, ಪು. 91.

ದುರಾಕ್ರಮಣೋದ್ಯುಕ್ತನಾಗಿದ್ದ ಬಿಜ್ಜಳನ ಮೇಲೆ ಸೇಡು ತೀರಿಸಿಕೊಳ್ಳಲು ಕಾಲ ಕಾಯು ತ್ತಿದ್ದ ತೈಲIIIನು "ಬಸವೇಶ್ವರನ ಮತ್ತು ಶಿವಭಕ್ತ ಜಂಗಮರ ಅಭಿಮಾನ ಹಿಡಿದು" ಬಿಜ್ಜಳನ ಮೇಲೆ ದಂಡಕ್ರಮವನ್ನು ತೆಗೆದುಕೊಳ್ಳಲು ಅಣಿಯಾಗುತ್ತಿದ್ದ ಸಮಯಕ್ಕೆ ಸರಿಯಾಗಿ ಬಿಜ್ಜಳನೇ ತೈಲನ ಮೇಲೇರಿ ಹೋಗಿ, ಚಾಲುಕ್ಯ ರಾಜಧಾನಿಯನ್ನು ಕೈವಶಮಾಡಿಕೊಂಡಿರ ಬೇಕು. ಇದರಿಂದ ಕಲ್ಯಾಣದಲ್ಲಿ "ಕೆಲಕಾಲ" ಅಸ್ಥಿರತೆ ಮತ್ತು ಅರಾಜಕತೆಯ ಆವರಣವು ಹರಡಿರಬೇಕು—ಎಂದು[58]. ಇಲ್ಲಿ ಪಾಂಡುರಂಗರಾಯರೂ ಗೋವಿಂದಪೈಗಳ ಜಾಡನ್ನೇ ಹಿಡಿದು, ತೈಲನು "ಬಸವೇಶ್ವರನ ಮತ್ತು ಶಿವಭಕ್ತ ಜಂಗಮರ ಅಭಿಮಾನ ಹಿಡಿದು" ಬಿಜ್ಜಳನಿಂದ ರಾಜ್ಯ ಕಳೆದುಕೊಂಡ ಎಂದು ದಾರಿ ತಪ್ಪಿರುವರು. ಈ ವಿವರಣೆಯೂ "ಒಬ್ಬ ಜಂಗಮದಭಿಮಾನದಿಂದ" ಎಂಬುದಕ್ಕೆ ಸರಿಹೋಗುವುದಿಲ್ಲ.

ಆ ಬಸವವಚನಕ್ಕೆ ಈ ಎಲ್ಲ ವಿವರಣೆ ಕೊಡುವಾಗ ಶ್ರೀಮಾನ್ ಗೋವಿಂದಪೈಗಳೂ ಶ್ರೀ ಪಾಂಡುರಂಗದೇಸಾಯರೂ, "ಆ ವಚನದಲ್ಲಿ ಬಸವೇಶ್ವರನು ಕಲ್ಯಾಣ ನಾಶಕ್ಕೂ ಚಾಳುಕ್ಯ ರಾಯನ ಆಳಿಕೆಯ ಮುಗಿತಾಯಕ್ಕೂ ಗಂಟಿಕ್ಕಿರುವ"ನೆಂದು ತಪ್ಪಾಗಿ ಕಲ್ಪಿಸಿಕೊಂಡಿದ್ದಾರೆ. ಆದ್ದರಿಂದಲೇ ಅವರಿಬ್ಬರೂ, ಶಾಸಗಳಿಂದಿರಲಿ, ಪುರಾಣಗಳಿಂದಲೂ ಸಮಗೆ ಸಿಗದ, ಅವಾಸ್ತವಿಕ ವಿಷಯಗಳನ್ನು ಊಹಿಸಿ ಬಸವೇಶ್ವರನು ತೈಲನ ಮೇಲೆ ಬಿಜ್ಜಳನನ್ನೂ ಅಥವಾ ಬಿಜ್ಜಳನ ಮೇಲೆ ತೈಲನನ್ನೂ ಎತ್ತಿ ಕಟ್ಟುವ, ಧರ್ಮಪ್ರಸಾರಕ್ಕಾಗಿ ಸೈನ್ಯಶಕ್ತಿಯನ್ನು ಅವಲಂಬಿಸಿ ಮಂಗಳವಾಡ ಮತ್ತು ಕಲ್ಯಾಣಗಳ ಮಧ್ಯೆ ಅಲೆದಾಡುವ ತುಚ್ಛವೃತ್ತಿಯಲ್ಲಿ ತೊಡಗಿದ್ದನೆಂದು ಆಪಾದಿಸಿದಂತಾಗಿದೆ. ಆ ವಚನದಲ್ಲಿ ಕಲ್ಯಾಣ ಹಾಳಾದುದಕ್ಕೂ ಚಾಳುಕ್ಯರಾಯನ ಆಳಿಕೆಯ ಮುಗಿತಾಯಕ್ಕೂ ಬಸವೇಶ್ವರನು ಗಂಟಿಟ್ಟಿಲ್ಲ. ಅವೆರಡೂ ಬೇರೆಬೇರೆ ಕಾಲದಲ್ಲಿ ನಡೆದ ಪ್ರತ್ಯೇಕವಾದ ಘಟನೆಗಳು. ಅರಸು ವಿಚಾರವು ಅಸ್ಥಿರವೆನ್ನಲು "ಚಾಳುಕ್ಯರಾಯನ ಆಳಿಕೆ ತೆಗೆಯಿತ್ತೆ"ಂಬುದೂ, ಸಿರಿಯು ಶೃಂಗಾರ ನಶ್ವರವೆನ್ನಲು "ಕಲ್ಯಾಣ ಹಾಳಾಯಿತ್ತೆ"ಂಬುದೂ ಪ್ರತ್ಯೇಕ ನಿದರ್ಶನಗಳು.

ಪಾಂಡುರಂಗ ದೇಸಾಯರು "ಕೆಟ್ಟಿತ್ತು ಕಲ್ಯಾಣ ಹಾಳಾಯಿತ್ತು ನೋಡಾ" ಎಂಬು ದಕ್ಕೆ ವ್ಯಾಖ್ಯಾನ ಮಾಡುತ್ತ ಬಸವೇಶ್ವರನ ಪ್ರೇರಣೆಯಿಂದ ಬಿಜ್ಜಳ ಮತ್ತು ತೈಲ III ಇವರಿಬ್ಬ ರಿಗೂ ನಡೆದ ಯುದ್ಧವೊಂದರ ಪರಿಣಾಮವಾಗಿ ಕಲ್ಯಾಣದಲ್ಲಿ "ಕೆಲಕಾಲ" "ಅಸ್ಥಿರತೆ ಮತ್ತು ಅನಾಯಕತೆಯ ಆವರಣ ಹರಡಿರಬೇಕು" ಎಂದಿರುವರು. ಆದರೆ ಆ ವಚನದಲ್ಲಿ ಬಸವೇಶ್ವರನು ಸಿರಿಯು ಶೃಂಗಾರಗಳ ಅಸ್ಥಿರತೆಯನ್ನು ಮನಮುಟ್ಟುವಂತೆ ಹೇಳಲು ಹೊರಟು, ತಾತ್ಕಾಲಿಕ ವಾಗಿ ಹಾಳಾಗಿದ್ದು ಮತ್ತೆ ಅಭಿವೃದ್ಧಿಗೆ ಬಂದ ಕಲ್ಯಾಣವನ್ನು ನಿದರ್ಶನವನ್ನಾಗಿ ಕೊಟ್ಟಿರ ಲಾರರು. ಹಾಗೆ ಊಹಿಸುವುದರಿಂದ ಬಸವನ ಕಲಾಕೌಶಲ್ಯಕ್ಕೆ ಬೆಲೆ ಕಟ್ಟುವುದರಲ್ಲೂ ಅನ್ಯಾಯ ಮಾಡಿದಂತಾಗುತ್ತದೆ. 'ಕೆಟ್ಟಿತ್ತು ಕಲ್ಯಾಣ'ವೆಂದಷ್ಟಕ್ಕೇ ಬಿಡದೆ ಮತ್ತೆ ಅದನ್ನು ಒತ್ತಿ "ಹಾಳಾಯಿತ್ತು ನೋಡಾ" ಎಂದು ಉದ್ಗಾರವೆತ್ತಬೇಕಾದರೆ ಅದು ಕಲ್ಯಾಣದಲ್ಲಾದ ತಾತ್ಕಾಲಿಕವಾದ ಸಣ್ಣಪುಟ್ಟ ಕೇಡು ಅಥವಾ ಹಾಳನ್ನು ಸೂಚಿಸದೆ ಆ ವೈಭವಯುತ ಮಹಾ ನಗರಿಗೆ ಅಡಸಿದ ಕಟ್ಟಕಡೆಯ ಸರ್ವನಾಶವನ್ನೇ ಧ್ವನಿಸುತ್ತದೆ; ಹೀಗಲ್ಲದೆ ಬಿಜ್ಜಳನು ತೈಲನನ್ನು ಸೋಲಿಸಿ ಚಕ್ರವರ್ತಿಯಾದಾಗ ಕಲ್ಯಾಣದಲ್ಲಾದ ತಾತ್ಕಾಲಿಕ ಶೋಭೆಯನ್ನಲ್ಲ.

ಹೀಗೆ ಕಲ್ಯಾಣವು ಅಂತಿಮವಾಗಿ ರಾಜಧಾನಿಗೆ ಯೋಗ್ಯವಾದ ಸಿರಿ ಮತ್ತು ಶೃಂಗಾರ ಗಳನ್ನು ಕಳೆದುಕೊಂಡು ಹಾಳಾದುದನ್ನು ಕುರಿತು ಬಸವನು ಹಾಡಿರಬೇಕಾದರೆ ಅದನ್ನು ನೋಡಿರ ಬೇಕು. ಅಥವಾ ಆ ಘಟನೆ ನಡೆದ ಮೇಲೂ ಅವನು ಜೀವಿಸಿರಬೇಕೆಂಬುದು ಸ್ಪಷ್ಟ. ಆದುದ ರಿಂದ ಬಸವೇಶ್ವರನು ಕಲ್ಯಾಣವು ಹಾಳಾದ ಮೇಲೆ ಲಿಂಗೈಕ್ಯನಾಗಿರಬೇಕು.

ಬಿಜ್ಜಳನ ಕಾಲದವರಿಗೂ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಲ್ಯಾಣವು ಅವನ ಕಾಲಾ

---

[58] ಕ. ಸಾ. ಪ. ಪತ್ರಿಕೆ, ಸಂಪುಟ 37, ಸಂಚಿಕೆ 1-2, ಪು. 93.

ನಂತರ ನಿಧಾನವಾಗಿಯಾದರೂ ಖಚಿತವಾಗಿ ಅವನತಿಯ ಪಥದಲ್ಲಿ ಸಾಗಿತು. ಸೋವಿದೇವ—ಸಂಕಮರ ಆಳಿಕೆಯ ಅವಧಿಯ ಅವರ ಶಾಸನಗಳಲ್ಲಿ ಅದರ ಪ್ರಸ್ತಾಪ ಅಪರೂಪವಾಯಿತು. ಏಕೆಂದರೆ, ಅವರು ಮಂಗಳವಾಡವನ್ನೇ ಬಹುಮಟ್ಟಿಗೆ ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಕಲ್ಯಾಣವನ್ನು ಕೈಬಿಡುತ್ತ ಬಂದರು. ಕ್ರಿ. ಶ. 1180-1183 ರವರೆಗೆ ಆಳಿದ ಕಲಚುರ್ಯ ಆಹವಮಲ್ಲನ ಶಾಸನಗಳಲ್ಲಿ ಇದರ ನಿರ್ದೇಶವೇ ದೊರೆಯುವುದಿಲ್ಲ.[54] ಕಳಚುರ್ಯರಿಂದ ಮತ್ತೆ ತನ್ನ ರಾಜ್ಯವನ್ನು ಕಸಿದುಕೊಂಡು ಕ್ರಿ. ಶ. 1184 ರಲ್ಲಿ ಚಾಲುಕ್ಯ ಚಕ್ರವರ್ತಿಯೆನಿಸಿಕೊಂಡ ಸೋಮೇಶ್ವರ IV ನೂ ತನ್ನ ಹಿರಿಯರ ಹಲವು ತಲೆಮಾರಿನಿಂದ ನೆಲೆವೀಡಾಗಿ ಬಂದಿದ್ದ ಕಲ್ಯಾಣವನ್ನು ಬಿಟ್ಟು ಧಾರವಾಡ ಜಿಲ್ಲೆಯ ಅಣ್ಣಿಗೇರಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಳ್ಳುತ್ತಾನೆ. ಆಮೇಲೆ ಅವನಿಗೆ ಜಯಂತೀಪುರ ಅಥವಾ ಬನವಾಸಿಯು ರಾಜಧಾನಿಯಾಗಿರುವುದೇ ಹೊರತು ಕಲ್ಯಾಣವಲ್ಲ. ಹೀಗೆ ಪಡುವಣ ಚಾಳುಕ್ಯ ತ್ರೈಲೋಕ್ಯಮಲ್ಲ ಸೋಮೇಶ್ವರ I ನ ಕಾಲ (1042-1068) ದಿಂದ ಹಿಡಿದು ಬಿಜ್ಜಳನ ಆಳಿಕೆಯು ಕೊನೆಯಾದ ಕ್ರಿ. ಶ. 1168 ರವರೆಗೆ ಬಂದು ಶತಮಾನದ ಶತೈಶ್ವರ್ಯದಿಂದ ರಾಜಧಾನಿಯಾಗಿದ್ದ ಕಲ್ಯಾಣದ ಸಿರಿ ಮತ್ತು ಶೃಂಗಾರವು ಬಿಜ್ಜಳನ ಮಕ್ಕಳ ಕಾಲಕ್ಕೆ ಸಂಪೂರ್ಣವಾಗಿ ಕೆಟ್ಟು ಹಾಳಾಯಿತು.[55] ಇದನ್ನೇ ಬಸವೇಶ್ವರನು ಕಂಡು "ಸಿರಿಯು ಶೃಂಗಾರ ಸ್ಥಿರವಲ್ಲ ಮಾಸವ! ಕೆಟ್ಟಿತ್ತು ಕಲ್ಯಾಣ ಹಾಳಾಯಿತ್ತು ನೋಡಾ" ಎಂದು ಹೇಳಿರುವುದು. ಆದ್ದರಿಂದ ಬಸವೇಶ್ವರನು ಕ್ರಿ. ಶ. ಸು. 1180 ರವರೆಗೆ ಬದುಕಿದ್ದು ಆ ಸಮಯಕ್ಕೇ ಲಿಂಗೈಕ್ಯನಾಗಿರಬೇಕು. ಈ ದೃಷ್ಟಿಯಿಂದ "ಅರಸು ವಿಚಾರ, ಸಿರಿಯು ಶೃಂಗಾರ ಸ್ಥಿರವಲ್ಲ, ಮಾಸವ" ಎಂಬ ವಚನವು ಬಸವಣ್ಣನವರ 'ಹಂಸಗೀತೆ.'

ಶ್ರೀಮಾನ್ ಗೋವಿಂದಪೈಗಳು ಬಸವೇಶ್ವರನು ತನ್ನ ವಚನದಲ್ಲಿ ಚಾಲುಕ್ಯರಾಯನ ಆಳಿಕೆ ತೆಗೆದುದನ್ನು ಹೇಳಿರುವಂತೆ, ಬಿಜ್ಜಳನ ಆಳಿಕೆ ಮುಗಿದುದನ್ನು ಹೇಳದಿರುವುದರಿಂದ ಬಿಜ್ಜಳನು ಸಾಯುವ ಮುಂಚೆ ಮಾತ್ರವಲ್ಲ, ಅವನ ಆಳಿಕೆಯು ಮುಗಿಯುವ ಮುಂಚೆಯೇ ಬಸವೇಶ್ವರನು ಕ್ರಿ. ಶ. 1167 ರ ಪೂರ್ವಭಾಗದಲ್ಲಿಯೇ ಕಾಲವಾಗಿರಬೇಕೆಂಬ ನಿರ್ಣಯಕ್ಕೆ ಬಂದಿದ್ದಾರೆ.[56] ಇದು ಸಮಂಜಸವಾಗಿ ತೋರದು. ಏಕೆಂದರೆ ಮೊದಲನೆಯದಾಗಿ ಬಸವೇಶ್ವರನು ಬಿಜ್ಜಳನ ಆಳಿಕೆ ತೆಗೆದುದನ್ನು ಪ್ರಸ್ತಾಪಿಸದೆ ಹೋಗಿರಬಹುದು. ಅಥವಾ ಬಸವೇಶ್ವರನು ಅದರ ಪ್ರಸ್ತಾಪವನ್ನು ತನ್ನ ವಚನಗಳಲ್ಲೆಲ್ಲೂ ಮಾಡಿಯೇ ಇಲ್ಲವೆಂಬುದಕ್ಕೆ ಆಧಾರವಾದರೂ ಏನಿದೆ? ಅವನ ವಚನಗಳೆಲ್ಲ ನಮಗೆಲ್ಲಿ ಸಿಕ್ಕಿವೆ? ಇಷ್ಟು ಶಿಥಿಲವಾದ ಆಧಾರದಿಂದ ಮಾಡಿದ—ಬಸವನ ಜೀವಿತದ ಪರಮಾವಧಿಯು ಕ್ರಿ. ಶ. 1167 ಎಂಬ—ನಿರ್ಧಾರವನ್ನು ಒಪ್ಪಿಕೊಂಡಲ್ಲಿ ಕಲ್ಯಾಣ ಹಾಳಾದ ವಾರ್ತೆಯನ್ನು ತನ್ನ ವಚನದಲ್ಲಿ ಪ್ರಸ್ತಾಪಿಸಿರುವುದನ್ನೂ, ಬಿಜ್ಜಳನ ಸಾವಾದ ಮೇಲೆ ಬಸವನು ಕಪ್ಪಡಿಸಂಗಮಕ್ಕೆ ಬಂದು—ಅಲ್ಲಿದ್ದು—ಆಮೇಲೆ ಲಿಂಗೈಕ್ಯನಾದನೆಂಬ ಬಸವಪುರಾಣಗಳಲ್ಲಿನ ಪರಂಪರಾಗತವಾದ ಬಂದು ಹೇಳಿಕೆಯನ್ನೂ ಶ್ರೀಮಾನ್ ಗೋವಿಂದ ಪೈಗಳ ಮೇಲಣ ನಿರ್ಧಾರದೊಡನೆ ಸಮನ್ವಯಗೊಳಿಸಲಾಗುವುದಿಲ್ಲ. (ಬಸವನು-ಕ್ರಿ. ಶ. 1167 ರಷ್ಟು ಮುಂಚಿತವಾಗಿ ಸತ್ತನೆಂಬುದನ್ನು ಸ್ಥಾಪಿಸಲು ಶ್ರೀ ಗೋವಿಂದ ಪೈಗಳು ಮೇಲೆ ಕೊಟ್ಟಿರುವ ಶಿಥಿಲತಮ ಕಾರಣಕ್ಕಿಂತ ಶಿಥಿಲತರವಾದ ಕಾರಣವೊಂದನ್ನು ಕಾಣದಾದರೆಂಬಂಶವೇ—ಬಸವೇಶ್ವರನು ಕ್ರಿ. ಶ. 1167 ಆದ ಮೇಲೂ ಬದುಕಿದ್ದನೆಂಬುದಕ್ಕೆ ಬಂದು ಪ್ರಬಲವಾದ ಆಧಾರವಾಗಿ ಪರಿಣಮಿಸುತ್ತದೆ.

ಹೀಗೆ ಬಸವನ ಜೀವಿತದ ಅಂತ್ಯವನ್ನು ನಿಶ್ಚೈಸಿದ ಮೇಲೆ, ಆದಿಯನ್ನು ಸಂಶೋಧಿಸುವುದು

---

[54] ನೋಡಿ ಕ. ಸಾ. ಪ. ಪತ್ರಿಕೆ. ಸಂಪುಟ 37. ಸಂಚಿಕೆ 1-2 ಪು. 115. [55] ಬಿಲ್ಲಮನು ಕಲ್ಯಾಣವನು ಕೊಂಡಂದಿನಿಂದ ಅದರ ಜೀವಕಳೆಗೆ ಇತಿಶ್ರೀಯಾಗಿರಬೇಕು (ಮೂರು ಉಪನ್ಯಾಸಗಳು, ಪುಟ 73). [56] ಮೂರು ಉಪನ್ಯಾಸಗಳು ಪು. 92.

ಸುಲಭ. ಈ ಕಾರ್ಯವನ್ನು ಮಾಡಲು ಬಸವೇಶ್ವರನ **ಅಣ್ಣನ** ಪೀಳಿಗೆಯ ವಿವರವನ್ನು ಕೊಡುವ ಏಕೈಕ ಪ್ರಾಚೀನಾಧಾರವಾದ ಅರ್ಜುನವಾಡದ ಶಿಲಾಲೇಖ[57]ವು ಬಹಳ ಅನರ್ಘವಾದುದು. ಈ ಶಿಲಾಲೇಖದ ಕಾಲ ಕ್ರಿ. ಶ. 1260. ಈ ಶಾಸನೋಕ್ತ ದಾಸಿಯಾದ ಚೌಡರಸನು 12-4-1260 ನೇ ಸೋಮವಾರ ಸೂರ್ಯಗ್ರಹಣದಂದು ಶ್ರೀ ಬಸವರಾಜನನ್ವಯದ ತಪಚಕ್ರವರ್ತಿ ವೀರಬ್ರತಿ ಹಾಲಬಸವನನ್ನು ಕುರಿತು ಕವಿಳಾಸತೀರ್ಥದ ಮಹಿಮೆಯನ್ನು ಕೇಳುವನು. ಅದಕ್ಕೆ ಉತ್ತರವಾಗಿ ಹಾಲಬಸವಿದೇವನು "ಕವಿಳಾಸತೀರ್ಥಂ ನಾಲ್ಕು ಯುಗದ ಪುರಾಣೋಕ್ತದಿಂ ಬಂದ ಕ್ಷೇತ್ರ"ವೆಂದೂ ಅಲ್ಲಿನ ದೇವರನ್ನು ಸಮಸ್ತಗಣೇಶ್ವರರೂ ಕೃತ—ತ್ರೇತ—ದ್ವಾಪರ—ಕಲಿಯುಗಗಳಲ್ಲಿ ಆರಾಧಿಸಿ, ಸಾಲೋಕ್ಯಾದಿ ದಿವ್ಯಪದವಿಗಳನ್ನು ಪಡೆದರೆಂದೂ, ಆ ಕವಿಳಾಸಪುರವು ಆ ದೇವರಿಗೆ ಮಾಂಧಾತನು ಬಿಟ್ಟ ಧರ್ಮವೆಂದೂ ಮುಂತಾಗಿ ಬಹಳ ಪುರಾತನ ವಿಚಾರಗಳನ್ನೆಲ್ಲಾ ಹೇಳುವನು. ಮತ್ತು ಅದೇ ಶಾಸನದಲ್ಲಿ ಹಾಲಬಸವಿದೇವನನ್ನು ಪ್ರಶಂಸಿಸುತ್ತ "ಸಲೆ ಮೂಜಗದೊಳಗೆ ಮೆಱೆವ ಮಾನವದೇವಂ ಗೆಲಿದಂ ಅಶನಬೆಸನಮಂ, ಛಲರಧಿಕಂ ಹಾಲಬಸವಿದೇವ ಮುನೀಶಂ" ಎಂದು ಕೊಂಡಾಡುವುದರಿಂದ ಆತನು ಕ್ರಿ. ಶ. 1260 ರ ವೇಳೆಗೆ ಮಹಾಮಾಹೇಶ್ವರನಷ್ಟೇ ಅಲ್ಲದೆ, ವೃದ್ಧಮಾಹೇಶ್ವರನೂ ಆಗಿದ್ದಂತೆ ತೋರುವುದು. ಶಾಸನ ಬರೆದ 1260 ರ ಹೊತ್ತಿಗೆ ಹಾಲಬಸವಿದೇವನಿಗೆ 65 ವರ್ಷ ವಯಸ್ಸೆಂದಿಟ್ಟುಕೊಳ್ಳಬಹುದು. ಅಂದರೆ ಆತನು ಹುಟ್ಟಿದ್ದು ಕ್ರಿ. ಶ. 1195 ರಲ್ಲಿ. ಈ 1195 ರ ಹೊತ್ತಿಗೆ ಆತನ ತಂದೆಯಾದ ಕಲಿದೇವನಿಗೆ ಸುಮಾರು 20 ವರ್ಷವಾಗಿರಬೇಕು. ಆದ್ದರಿಂದ ಕಲಿದೇವನು ಹುಟ್ಟಿದ್ದು ಕ್ರಿ. ಶ. 1175 ರಲ್ಲಿ. ಈ 1175 ರ ಹೊತ್ತಿಗೆ ಆ ಕಲಿದೇವನ ತಂದೆಯಾದ ಕಾವರಸನಿಗೆ ಸುಮಾರು 20 ವರ್ಷವಾಗಿರಬೇಕು. ಆದ್ದರಿಂದ ಕಾವರಸನು ಹುಟ್ಟಿದ್ದು ಕ್ರಿ. ಶ. 1155 ರಲ್ಲಿ. ಈ 1155 ರ ಹೊತ್ತಿಗೆ ಕಾವರಸನ ತಂದೆಯಾದ ದೇವರಾಜನಿಗೆ ಪ್ರಾಯಶಃ 20 ವರ್ಷ ವಯಸ್ಸಾಗಿರಬೇಕು. ಆದ್ದರಿಂದ ಆ ದೇವರಾಜನು ಹುಟ್ಟಿದ್ದು ಕ್ರಿ. ಶ. 1135 ರಲ್ಲಿ. ಅರ್ಜುನವಾಡದ ಶಾಸನದ ಪ್ರಕಾರ ಈ ದೇವರಾಜನ ತಮ್ಮನೇ ಬಸವೇಶ್ವರನಾಗಿರುವುದರಿಂದ ಆ ಬಸವೇಶ್ವರನು ಕ್ರಿ. ಶ. 1135 ಆದ ಮೇಲಲ್ಲದೆ ಮೊದಲು ಹುಟ್ಟಿರಲಾರ. ಹಾಗಾದರೆ 1135 ಆದ ಮೇಲೆ ಯಾವಾಗ ಹುಟ್ಟಿದ? ಇದನ್ನು ಖಚಿತವಾಗಿ ಹೇಳಲು ನಮಗೆ ಲಕ್ಕಣ್ಣದಂಡೇಶನ ಶಿವತತ್ತ್ವಚಿಂತಾಮಣಿಯು ಬಸವನ ಜನನದ ಕಾಲವನ್ನು ಸಂವತ್ಸರ, ಮಾಸ, ಪಕ್ಷ, ತಿಥಿ, ವಾರ, ನಕ್ಷತ್ರ ಸಹಿತವಾಗಿ ಕೊಟ್ಟು ಸಹಕರಿಸುವುದು. ಆ ಪ್ರಕಾರ ಅದು ಕ್ರಿ. ಶ. 27-10-1140 ಕ್ಕೆ ಸರಿಯಾಗುವುದು. ಆದ್ದರಿಂದ ಬಸವನ ಜನನದ ವರ್ಷ ನಿಸ್ಸಂಶಯವಾಗಿ ಕ್ರಿ. ಶ. 1140.

ಆದ್ದರಿಂದ ಬಸವೇಶ್ವರನು ಭೂಮಿಗವತರಿಸಿ ಲಿಂಗೈಕ್ಯನಾದ ಕಾಲಾವಧಿಯ ಆದಿ ಅಂತ್ಯಗಳನ್ನು ಕ್ರಿ. ಶ. 1140-1180 ಎಂದು ನಿರ್ಧರಿಸಬಹುದು. ಆತನು ಬಾಗೇವಾಡಿಯಲ್ಲಿ ಷೋಡಶಪ್ರಾಯದವರೆಗೂ ಇದ್ದು ಆಮೇಲೆ ಕೂಡಲಸಂಗಮೇಶ್ವರನಿರುವ ಕಪ್ಪಡಿಸಂಗಮಕ್ಕೆ ಹೋದನೆಂದು ಹರಿಹರನು[58] ಹೇಳುವುದರಿಂದ ಬಸವನು ಕಪ್ಪಡಿಸಂಗಮಕ್ಕೆ ಕ್ರಿ. ಶ. 1156/7 ರಲ್ಲಿ ಬಂದಿರಬೇಕು. ಬಂದು ಕೂಡಲಸಂಗಮೇಶ್ವರ ಪಾದಕಮಲ ಮಕರಂದ ಮಧುಕರಾಯಮಾನನಾಗಿ "ಹೊಸ ಪುಷ್ಪಮಂ ತಿಳಿಯಗ್ಘವಣಿಯಂ ತಂದು ಓಜೆಯಿಂ ಪೂಜೆಗೈದು ಪ್ರಸಾದಕಾಯಕನಾಗಿ" ಸುಖವಾಗಿದ್ದ. ಅಷ್ಟೇ ಅಲ್ಲದೆ "ದಿನದಿನಕೆ ಘಳಿಗೆ ಘಳಿಗೆಗೆ ಭಕ್ತಿ ಮಿಗಿಲಾಗೆ ಅನುದಿನಂ ನೇಹವಿಮ್ಮಡಿಸಿ ನೂರ್ಮಡಿಯಾಗೆ ಸಂಗನಾಮಂಗಳಂ ಪುರಜನಕೆ ಕಲಿಸುತಂ" ಇದ್ದನೆಂದು ಹರಿಹರನು[59] ಹೇಳಿರುವುದರಿಂದ ಬಸವೇಶ್ವರನು ಕಲ್ಯಾಣ ಅಥವಾ ಮಂಗಳವಾಡಕ್ಕೆ ಹೊರಡುವ ಮುಂಚೆ ಕಪ್ಪಡಿಸಂಗಮದಲ್ಲಿ ಕೆಲವಾರು ವರ್ಷವಿದ್ದನೆಂದು ಊಹಿಸಬಹುದು.

---

[57] *Ep. Ind.* Vol 21, p. 9; Edited by Dr. S. Sreekanta Sastry. [58] ಬಸವರಾಜದೇವರ ರಗಳೆ, ಎರಡನೆಯ ಸ್ಥಲ, ಪು. 10-11. [59] ಬಸವರಾಜದೇವರ ರಗಳೆ, ಮೂರನೆಯ ಸ್ಥಳ, ಪು. 18.

ಸಿಂಗಿರಾಜನ ಅಮಲಬಸವಚಾರಿತ್ರದಿಂದ ಬಸವೇಶ್ವರನು ಕೂಡಲಸಂಗಮದಲ್ಲಿ ಎಷ್ಟು ಕಾಲ ಪರ್ಯಂತವಿದ್ದನೆಂದು ಊಹಿಸಲು ಸಾಕಷ್ಟು ಸಾಮಗ್ರಿ ದೊರೆಯುತ್ತದೆ. ಕೂಡಲ ಸಂಗಮದಲ್ಲಿ ಬಸವೇಶ್ವರನಿಗೆ ಜಂಗಮಮುಖವೇ ಲಿಂಗಮುಖವೆಂಬ ತತ್ತ್ವ ಸಾಕ್ಷಾತ್ಕಾರ ವಾದಂತೆಯೂ,[60] ಶಿವನನ್ನು ಒಂದೆರಡು ಸಲ ಮಾತಾಡಿಸಿದ ಪವಾಡವನ್ನು ಮೆರೆದಂತೆಯೂ[61] ಅದರಲ್ಲಿ ಹೇಳಿದೆ. ಇಷ್ಟು ಮಹಿಮಾಶಾಲಿಯಾದ ಬಸವಸಿದ್ಧ ಕಪ್ಪಡಿಸಂಗಮಕ್ಕೆ "ಗುರುಹಿರಿಯ ರಾಚಾರಯುತರು, ಸಮ್ಯಜ್ಞಾನನಿರತಶೀಲಾಗಮಮಹಾವ್ರತಪರಾಯಣರು ಚರಲಿಂಗ ಮುಖವಿಡಿದು ಬರತೊಡಗಿತು, ಇರತೊಡಗಿತು, ಅರ್ಚಿಸಿಕೊಳಲ್ ತೊಡಗಿತು, ಬೆರಸಿರಲ್ ತೊಡಗಿತು, ಅನುಭವ ತೊಡಗಿತು, ಆದ್ಯರಾಚರಿತವೇಳಲ್ ತೊಡಗಿತು, ಅಖಿಳ ಶಿವಪೌರಾಣ ಶರಧಿಮಥಿಸಲ್ ತೊಡಗಿತು, ಆನಂದಭಕ್ತಿರಸ ಸರಿವಳೆಗಱೆಯ ತೊಡಗಿತು."[62]

ಇಷ್ಟೆಲ್ಲ ಆನಂದಭಕ್ತಿಸಾಮ್ರಾಜ್ಯಕ್ಕೆ ಕೇಂದ್ರಬಿಂದು ಸ್ವರೂಪಿಯಾಗಿ ಬಸವನು ಕಪ್ಪಡಿ ಸಂಗಮದಲ್ಲಿರಲು ಒಂದುಸಲ 'ಕಪಿಲಷಷ್ಠಿ' ಶುಭಮುಹೂರ್ತವು ಬಂದಿತೆಂದೂ[63], ಆಗ ಕೂಡಲ ಸಂಗಮದಲ್ಲಿ ನೆರೆದ ಜಾತ್ರೆಯಲ್ಲಿ ಬಸವೇಶ್ವರನು ಪವಾಡವೊಂದನ್ನು ಮೆರೆದಾಗ ಅಲ್ಲಿನ ಜನರೆಲ್ಲ ಆತನನ್ನು ನಡೆಲಿಂಗವಾಗಿ ಮೆಚ್ಚಿದಂತೆಯೂ, ಆಗ ಬಸವನ ಆ ಮಹತ್ತ್ವವನ್ನು ಕರ್ಣಾಕರ್ಣಿಕೆಯಿಂದ ಕೇಳಿದ (ಬಿಜ್ಜಳನ ಮಂತ್ರಿಯಾದ) ಬಲದೇವದಂಡಾಧಿಪನು ಬಸವನನ್ನು ಕರೆತಂದು ಹೆಣ್ಣುಕೊಟ್ಟು ಅವನಿಗೆ ಬಿಜ್ಜಳನ ಆಸ್ಥಾನದಲ್ಲಿ ಕರಣಿಕವೃತ್ತಿಯನ್ನು ಕೊಡಿಸಿ ದಂತೆಯೂ ಹೇಳಿದೆ.

ಕಪಿಲಷಷ್ಠಿಯು ಎಷ್ಟೋ ವರುಷಗಳಿಗೊಮ್ಮೆ ಬರುವ ಬಹಳ ಅಪುರೂಪವಾದ ಸುಯೋಗ. 12-9-1161 ರಂದು ಕಪಿಲಷಷ್ಠಿಯೊಂದು ಒದಗಿಬಂದಿತ್ತೆಂದು ಹುಲುಗೂರಿನ ಶಾಸನ[64]ದಿಂದಲೂ, ಮಣಿಗವಳ್ಳಿಯ ಶಾಸನ[65]ದಿಂದಲೂ ನಮಗೆ ತಿಳಿಯಬರುತ್ತದೆ. ಬಸವನು ಕಪ್ಪಡಿಸಂಗಮದಲ್ಲಿದ್ದಾಗ ಒದಗಿದ ಕಪಿಲಷಷ್ಠಿಯು ಇದೇ ಇರಬೇಕು. ಆದ್ದರಿಂದ ಬಸವೇಶ್ವರನು ಕಪ್ಪಡಿಯ ಸಂಗಮದಲ್ಲಿ ಕ್ರಿ. ಶ. 1156/7 ರಿಂದ 1161/2 ರ ವರೆಗೆ, 5 ವರ್ಷಗಳ ಕಾಲ ಇದ್ದು ಆಮೇಲೆ ಕ್ರಿ. ಶ. 1161/2 ರಲ್ಲಿ ಬಿಜ್ಜಳನಾಸ್ಥಾನದಲ್ಲಿ ಕರಣಿಕವೃತ್ತಿಗೆ ಸೇರಿರಬೇಕು.

ಕ್ರಿ. ಶ. 1156 ಕ್ಕೆ ಹಿಂದೆ ಬಸವೇಶ್ವರನು ಬಿಜ್ಜಳನ ಆಸ್ಥಾನದಲ್ಲಿದ್ದ ಮಾತು ಹಾಗಿರಲಿ, ಆ ವೇಳೆಗೆ ಕೂಡಲಸಂಗಮಕ್ಕೂ ಬಂದಿರಲಿಲ್ಲವೆಂದೂ, ಕ್ರಿ. ಶ. 1161/2 ರ ವರೆಗೂ ಅವನು ಶೈವೋದ್ಧಾರಕ್ಕಾಗಿ ಅವತರಿಸಿದ ಕಾರಣಪುರುಷನೆಂದು ಜಗತ್‌ಪ್ರಸಿದ್ಧನಾಗಿರಲಿಲ್ಲವೆಂದೂ ತಿಳಿಯಲು ನಮಗೆ ವಿಪುಲವಾದ ಆಧಾರಗಳಿವೆ. ಇವುಗಳಲ್ಲಿ ಒಂದು ಅಬ್ಬಲೂರಿನ ಏಕಾಂತದ ರಾಮಯ್ಯನ ಶಾಸನ: ಈ ಶಾಸನದಲ್ಲಿ ಅದು ಲಿಖಿತವಾದ ಕಾಲ ಉಕ್ತವಾಗಿಲ್ಲ. ಅಬ್ಬಲೂರು ಶಾಸನದ ಕಲ್ಲಿನಮೇಲೆ ಬೇರೆಬೇರೆ ರಾಜರ ಆಳಿಕೆಯಲ್ಲಿ ಬರೆದ ಬರವಣಿಗೆಗಳಿವೆ. ಒಂದೊಂದು ಬರವಣಿಗೆಯನ್ನೂ ಆ ಶಾಸನದ ಒಂದೊಂದು ಭಾಗವೆಂದೂ, ಇಡಿಯಾಗಿ ಆ ಮೂರು ಬರವಣಿಗೆಗಳನ್ನೂ ಒಂದೇ ಶಾಸನವೆಂದೂ ಇಟ್ಟುಕೊಳ್ಳೋಣ. ಈ ಅಬ್ಬಲೂರುಶಾಸನದ ಮೊದಲನೆಯ ಭಾಗದಲ್ಲಿ ಬಿಜ್ಜಳನೂ, ಎರಡನೆಯ ಭಾಗದಲ್ಲಿ ಚಾಲುಕ್ಯಸೋಮೇಶ್ವರIV (1182-1189)ನೂ, ಮೂರನೆಯ ಭಾಗದಲ್ಲಿ ಕದಂಬಕಾಮದೇವ (1181-1203)ನೂ ಏಕಾಂತದ ರಾಮಯ್ಯನಿಗೆ ದಾನಗಳನ್ನು ಕೊಟ್ಟಂತೆ ಹೇಳಿದೆ. ಇದರಲ್ಲಿ ಮೊದಲನೆಯ ಭಾಗವಾದ ಬಿಜ್ಜಳನ ಶಾಸನ ಎಂದಿನದಿರಬೇಕು, ಅಥವಾ ಅದರಲ್ಲಿ ಉಕ್ತವಾಗಿರುವ ಘಟನೆ ಎಂದು ನಡೆದಿರ ಬೇಕೆಂಬುದು ವಿಚಾರಣೀಯ. ಈ ಭಾಗದಲ್ಲಿ ಬಿಜ್ಜಳನಿಗೆ "ಶನಿವಾರಸಿದ್ಧಿ, ಗಿರಿದುರ್ಗಮಲ್ಲ" ಎಂಬ ಬಿರುದುಗಳನ್ನು ಹೇಳಿದೆ. ಈ ಬಿರುದುಗಳ ಸಂಬಂಧವಾಗಿ ಶ್ರೀ ಪಾಂಡುರಂಗದೇಸಾಯರು

---

[60] ಸಿಂ ಪು. 5—118 ರಿಂದ 6—5 ರ ವರೆಗೆ. [61] ಸಿಂ. ಪು. 5—109 ; 6—13, 14, 15, 16, 17, 18.
[62] ಸಿಂ. ಪು. 6—9. [63] ಸಿಂ. ಪು. 6—11. [64] *Madras Epigraphic Report of* 1944-45, No. 28.
[65] *Ep. Ind.* Vol V, P. 9, No. 3. Line (in the inscription) 64.

ಸಂಶೋಧಿಸಿ "ಈ ಬಿರುದುಗಳು ಬಿಜ್ಜಳನ ಪೂರ್ವಜರ ಪ್ರಶಸ್ತಿಯಲ್ಲಿ ದೊರೆಯುವುದಿಲ್ಲ. ಮಾತ್ರವಲ್ಲ, ಸ್ವತಃ ಬಿಜ್ಜಳನ ಮೊದಮೊದಲಿನ ಶಾಸನಗಳಲ್ಲಿಯೂ ಇವು ದೃಷ್ಟಿಗೋಚರವಾಗುವುದಿಲ್ಲ. . . . 1157 ನೆಯ ಕ್ರಿ. ವರ್ಷದ ಚಿಕ್ಕಲಗಿ ಶಾಸನದಲ್ಲಿ ಬಿಜ್ಜಳನಿಗೆ ಈ ಬಿರುದುಗಳು ಉಕ್ತವಾಗಿಲ್ಲ. ಆದರೆ 1158 ನೆಯ ಕ್ರಿ. ವ. ದ ಶಿಕಾರಿಪುರ 18 ನೇ ಅಂಕದ ಶಾಸನದಲ್ಲಿ ಇವು ಬಿಜ್ಜಳನಿಗೆ ಹೇಳಲ್ಪಟ್ಟಿವೆ. ಆದುದರಿಂದ ಕ್ರಿ. ವ. ಸು. 1157/8 ರಲ್ಲಿ ಬಿಜ್ಜಳನು ಇವುಗಳನ್ನು ಧರಿಸಿರಬೇಕು ಎಂದು ತೋರುತ್ತದೆ[66]" ಎಂದಿರುವರು. ಆದ್ದರಿಂದ ಬಿಜ್ಜಳನು ಆ ಬಿರುದುಗಳನ್ನು ಹೊಂದಿದ್ದಂತೆ ಹೇಳುವ ಅಬ್ಬಲೂರು ಶಾಸನದ ಪ್ರಥಮ ಭಾಗವು ಕ್ರಿ. ಶ. 1157/8 ರ ಸಮಯಕ್ಕೆ ಅಥವಾ ಆಮೇಲೆ ಲಿಖಿತವಾಗಿರಬೇಕು. ಲಿಖಿತವಾದುದು ಕ್ರಿ. ಶ. 1157/8 ರಿಂದ ಎಷ್ಟು ವರ್ಷಗಳಾದ ಮೇಲೆ ಎನ್ನಲು ಇದೇ ಅಬ್ಬಲೂರು ಶಾಸನದ ಪ್ರಥಮ ಭಾಗದಲ್ಲೇ ಸೂಚನೆಗಳಿವೆ: ಏಕಾಂತದ ರಾಮಯ್ಯನಿಗೆ ಜಯಪತ್ರವನ್ನು ಕೊಟ್ಟ ಬಿಜ್ಜಳನ ಪರಾಕ್ರಮವನ್ನು ವ್ಯಾವರ್ಣಿಸುತ್ತ—"ಚಳುಕ್ಯರನ್ವಯ ಕಡಲಂ ಕುಡಿದುರ್ಕು ಸಜ್ಜನಂ ಬಿಜ್ಜಣನೊಳ್" ಎಂದು ಒಂದು ಕಂದಪದ್ಯದಲ್ಲಿ ಹೇಳಿದೆ. ಇದರಿಂದ ಲಿಖಿತಕಾಲಕ್ಕಾಗಲೇ ಬಿಜ್ಜಳನು ಚಾಳುಕ್ಯ ಸಾಮ್ರಾಜ್ಯವನ್ನೆಲ್ಲ ಆಕ್ರಮಿಸಿಕೊಂಡಿದ್ದಸಂದರ್ಭವು ಗಮ್ಯವಾಗುವುದು. ಕ್ರಿ. ಶ. 1158/9 ರ ಶಿಕಾರಿರದೊಂದು ಶಾಸನದ ಹೊತ್ತಿಗೆ ಬಿಜ್ಜಳನು ತನ್ನ ರಾಜ್ಯವನ್ನು ಉತ್ತರಕ್ಕೆ "ಚಾಳುಕ್ಯ ಕಟಕ"ದವರಿಗೆ ಮಾತ್ರ ವಿಸ್ತರಿಸಿದ್ದವನು, ಈ ಅಬ್ಬಲೂರಿನ ಶಾಸನದ ಹೊತ್ತಿಗೆ ಚಳುಕ್ಯರನ್ವಯ ಕಡಲನ್ನೇ ಸಂಪೂರ್ಣವಾಗಿ ಆಪೋಶನಗೊಂಡಿರುತ್ತಾನೆ. ಇದಕ್ಕೆ ಸ್ವಲ್ಪ ಕಾಲಬೇಕು. ಆದ್ದರಿಂದ ಅಬ್ಬಲೂರು ಶಾಸನದ ಪ್ರಥಮ ಭಾಗವು ಕ್ರಿ. ಶ. 1158/9 ಆದ ಮೇಲೇ ಲಿಖಿತವಾಗಿರಬೇಕೆಂಬುದಂತೂ ಖಚಿತ. ಎಷ್ಟು ಕಾಲವಾದ ಮೇಲೆ ಎಂಬುದೇ ಸಮಸ್ಯೆ! ಕ್ರಿ. ಶ. 1160/1 ರೊಳಗೆ ಲಿಖಿತವಾಗಿರಬೇಕೆಂಬುದು ಮಾತ್ರ ಸಾಧ್ಯ. ಹೇಗೆಂದರೆ: ಹರಿಹರನು ಏಕಾಂತದ ರಾಮಯ್ಯನ ಮೇಲೆ ಬರೆದಿರುವ ರಗಳೆಯಲ್ಲಿ ಇದಕ್ಕೆ ಕೆಲವು ಸೂಚನೆಗಳು ದೊರೆಯುತ್ತವೆ. ಅದರಲ್ಲಿ—ಏಕಾಂತದ ರಾಮಯ್ಯನು ಪವಾಡವನ್ನು ತೋರಲು ಕತ್ತರಿಸಿಕೊಂಡ ತಲೆಯನ್ನು ಅಗ್ಘಣಿ ಹೊನ್ನಿ ತಂದೆಯು ಚಿನ್ನದ ಹರಿವಾಣದಲ್ಲಿಟ್ಟು ಹೊತ್ತುಕೊಂಡು ವೀರವೃಂದದ ನಡುವೆ ನಡೆತಂದು

"ಪುಲಿಗೆರೆಯ ಪಟ್ಟಣವನೊಲವಿಂ ಪೊಕ್ಕು . . . .
ಸೋಮನಾಥನ ಪದಕ್ಕೇರಿಸುತ ಪೊಡಮಟ್ಟು . . . .
ಅಣ್ಣಿಗೆರೆಯಮೃತನಾಥನ ಚರಣಮಂ ಕಂಡು . . . .
ಕೆಂಭಾವಿಯೊಳ್ ಭೋಗನಾಥನಲ್ಲಿಗೆ ಬಂದು . . . .
ಕಪ್ಪಡಿಯ ಸಂಗಮೇಶ್ವರನಲ್ಲಿಗೈತಂದು
ಒಪ್ಪವಾ ರಾಮತಂದೆಯ ಶಿರಂ ಶರಣೆಂದು
ಆವ್ವಂದದೊಳು ನಾಗನಾಥನಲ್ಲಿಗೆ ಬಂದು . . . .
ಸೊನ್ನಲಿಗೆಯೊಳು ಜಗದ್ಗುರು ಸಿದ್ಧರಾಮಂಗೆ
ನಿನ್ನ ಪ್ರಸಾದವೀಯೆನುತ ಕರುಣಂಬಡುಗೆ"

ಎಂದು ಶಿವಪುರಗಳಲ್ಲೆಲ್ಲ ಏಳುದಿನ ಪರ್ಯಂತ ರಾಮನ ತಲೆಯನ್ನು ಮೆರೆಸಿ, ಮತ್ತೆ ಅಬ್ಬಲೂರಿಗೆ ಹಿಂತಿರುಗಿದಂತೆ ಹೇಳಿದೆ. ಹೊನ್ನಿತಂದೆಯು ಸೊನ್ನಲಿಗೆಗೆ ಹೋಗಿ ಸಿದ್ಧರಾಮನನ್ನು ಕಂಡಂತೆ ಹೇಳಿದೆ. ಆದರೆ ಕಪ್ಪಡಿ ಸಂಗಮಕ್ಕೆ ಹೋದಾಗ ಬಸವೇಶ್ವರನ ಸುದ್ದಿಯನ್ನೇ ಎತ್ತುವುದಿಲ್ಲ. ಇದಕ್ಕೆ ಎರಡು ಕಾರಣಗಳನ್ನು ಹೇಳಬಹುದು: ಒಂದನೆಯದಾಗಿ ಆತನು ಆ ವೇಳೆಗೆ ಬಿಜ್ಜಳನಾಸ್ಥಾನದಲ್ಲಿದ್ದಿರಬೇಕು, ಅಥವಾ ಎರಡನೆಯದಾಗಿ ಕೂಡಲಸಂಗಮದಲ್ಲೇ ಅಪ್ರಸಿದ್ಧನಾಗಿರಬೇಕು.

---

[66] ಕ. ಸಾ. ಪ. ಪತ್ರಿಕೆ, ಸಂಪುಟ 37, ಸಂಚಿಕೆ 1-2, ಪುಟ 97.

ಮೇಲಣ ಕಾರಣಗಳಲ್ಲಿ ಮೊದಲನೆಯದು ಅಸಂಭವ. ಏಕೆಂದರೆ ಅದೇ ಅಬ್ಬಲೂರು ಶಾಸನದ ಪ್ರಥಮಭಾಗದಲ್ಲಿ ಏಕಾಂತದ ರಾಮಯ್ಯನ ಅವತಾರ ಕಾರಣವನ್ನು ವಿವರಿಸುತ್ತ—ನಾರದನೊಂದು ಸಲ ಕೈಲಾಸಕ್ಕೆ ಹೋಗಿ "ಓಹಿಲ, ದಾಸಿ, ಚೆನ್ನ, ಸಿರಿಯಾಳ ಹಲಾಯುಧ, ಬಾಣ, ಉದ್ಭಟ, ಮಳಯೇಶ್ವರ, ಕೇಶವರಾಜ, ಮುಂತಾದವರು ಭೂಲೋಕವನ್ನು ಬಿಟ್ಟಲ್ಲಿ ಬಂದಿರುವುದರಿಂದ, ಅಲ್ಲಿ ಜೈನ ಬೌದ್ಧರುಪಟಳ ಅಧಿಕವಾಗಿದೆ" ಎಂದು ದೂರಿದನಂತೆ. ಆಗ ಶಿವನು ವೀರಭದ್ರನನ್ನು ನೋಡಿ "ನೀನು ಮನುಷ್ಯ ಲೋಕದಲ್ಲಿ ನಿನ್ನಂಶದಿಂದ ಒಬ್ಬನನ್ನು ಹುಟ್ಟಿಸಿ ಪರಧರ್ಮಗಳನ್ನು ನಿಯಾಮಿಸು" ಎಂದನಂತೆ. ಒಂದು ಪಕ್ಷ ಆ ಶಾಸನವು ಲಿಖಿತವಾದ ವೇಳೆಯಲ್ಲಿ ಬಸವನು ಬಿಜ್ಜಳನಾಸ್ಥಾನದಲ್ಲಿದ್ದಿದ್ದರೆ ಆತನು ಶೈವ ಸಮುದ್ಧರಣಕಾರಣಕ್ಕಾಗಿ ಅವತರಿಸಿದ ಮಹಾಪುರುಷನೆಂಬ ಜನಜನಿತ ಕೀರ್ತಿಯು ದೇಶ ವಿದೇಶಗಳಲ್ಲಿ ಹರಡಿತ್ತೆನ್ನುವಾಗ ಬಿಜ್ಜಳನ ರಾಜ್ಯದ ಎಲ್ಲೆ ಕಟ್ಟಿನೊಳಗೇ ಇದ್ದ ಅಬ್ಬಲೂರಿನಲ್ಲಿ ಅದು ಹಬ್ಬಿರುತ್ತಿರಲಿಲ್ಲವೇ? ಶೈವೋದ್ಧಾರದ ಸಂಬಂಧವಾಗಿ ಬಸವನನ್ನು ಗಣನೆಗೆ ತಾರದ ಈ ಬಗೆಯಾದ ಕಲ್ಪನೆ ಜನತೆಯಲ್ಲಿದ್ದಿರಬೇಕಾದರೆ, ಆ ಕಾಲಕ್ಕೆ ಬಸವನಿನ್ನೂ ಬಿಜ್ಜಳನಾಸ್ಥಾನಕ್ಕೆ ಹೆಜ್ಜೆಯಿಟ್ಟಿರಲಿಲ್ಲವೆನಿಸುತ್ತದೆ. ಅಷ್ಟೇ ಅಲ್ಲ, ಅವನು ಆಗ್ಗೆ ಕಪ್ಪಡಿ ಸಂಗಮದಲ್ಲೇ ಇದ್ದರೂ, ಅವನಿನ್ನೂ ಸುಪ್ರಸಿದ್ಧನಾಗಿರಲಿಲ್ಲವೆಂದೇ ಫಲಿತವಾಗುವುದು. ಆತನು ಪ್ರಸಿದ್ಧಿಗೆ ಬಂದುದು 'ಕಪಿಲಷಷ್ಠಿ' ಬಂದ ಕ್ರಿ. ಶ. 1161/2 ಆದ ಮೇಲೆ ತಾನೆ! ಆದ್ದರಿಂದ ಅಬ್ಬಲೂರಿನ ಶಾಸನದ ಪ್ರಥಮ ಭಾಗದಲ್ಲಿ ನಡೆಯಿತೆಂದು ಹೇಳಿರುವ ಘಟನೆಯು ನಡೆದದ್ದು ಮತ್ತು ಅದನ್ನು ಶಿಲಾಲಿಪಿಯಲ್ಲಿ ಇಟ್ಟಿದ್ದು ಕ್ರಿ. ಶ. 1159/60 ಅಥವಾ 1160/61 ರಲ್ಲಿ ಎಂದೂ, ಆ ವರ್ಷಗಳಲ್ಲಿ ಬಸವೇಶ್ವರನು ಬಿಜ್ಜಳನಾಸ್ಥಾನದಲ್ಲಿಗಿನ್ನೂ ಬಾರದೆ ಕಪ್ಪಡಿಯ ಸಂಗಮ ಕ್ಷೇತ್ರದಲ್ಲಿ ಎಲೆಯ ಮರೆಯ ದೋರಗಾಯಾಗಿದ್ದನೆಂದೂ ನಂಬಲು ಆತಂಕವಿಲ್ಲ.

ಬಸವರಾಜದೇವರ ರಗಳೆಯಲ್ಲಿ ಬಸವನು ಕಪ್ಪಡಿಸಂಗಮದಿಂದ ಬಿಜ್ಜಳನಿದ್ದ ಮಂಗಳವಾಡಕ್ಕೆ ಹೋದಂತೆ ಹೇಳಿದೆ. ಕ್ರಿ. ಶ. 1161/2 ರ ವೇಳೆಗೆ ಬಿಜ್ಜಳನು ಮಂಗಳವಾಡದಲ್ಲಿ ಆಳುತ್ತಿದ್ದನೇ ಹೊರತು ಕಲ್ಯಾಣದಲ್ಲಲ್ಲ. ಅವನು ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡುದು ತೈಲIII ನು 1162/3ರಲ್ಲಿ ಸತ್ತಮೇಲೋ[67] ಅಥವಾ ಸಿಂಹಾಸನಚ್ಯುತನಾದ ಮೇಲೋ ತಾನೇ ಚಕ್ರವರ್ತಿಯಾಗಿ ಚಾಳುಕ್ಯಸಿಂಹಾಸನವನ್ನು ಬಹಿರಂಗವಾಗಿ ಏರಿದಾಗ. ಆಗ ಬಸವನೂ ಬಿಜ್ಜಳನ ಜೊತೆಯಲ್ಲಿ ಮಂಗಳವಾಡದಿಂದ ಕಲ್ಯಾಣಕ್ಕೆ ಹೋಗಿರಬೇಕು. ಹೀಗೆ ಬಸವೇಶ್ವರನು ಮಂಗಳವಾಡದಲ್ಲಿದ್ದುದಕ್ಕೂ ಅಲ್ಲಿಂದ ಕಲ್ಯಾಣಕ್ಕೆ ಹೋದುದಕ್ಕೂ ಅತ್ಯಲ್ಪಕಾಲಾವಧಿಯ ಅಂತರವಿದ್ದುದರಿಂದಲೇ ಹರಿಹರನಾದಮೇಲೆ ಬಂದ ಪಾಲ್ಕುರಿಕೆ ಸೋಮೇಶ್ವರನೇ ಮುಂತಾದ ಬಸವಪುರಾಣಕಾರರು ಬಸವನು ಕಪ್ಪಡಿಯಿಂದ ನೇರವಾಗಿ ಕಲ್ಯಾಣಕ್ಕೇ ಹೋದಂತೆ ಭ್ರಮಿಸಿದರು. ಈ ಭ್ರಮೆ ವಿಪರ್ಯಸ್ತವಾಗಿ ಮಂಗಳವಾಡವೇ 'ಕಲ್ಯಾಣ'ವೆನಿಸಿಕೊಂಡಿತೆಂಬುದಕ್ಕೂ ಆಸ್ಪದವಾಯಿತು. ಬಸವನಿಗೆ ಬಿಜ್ಜಳನು ಪ್ರಧಾನಪಟ್ಟಗಟ್ಟಲು ಮಂಗಳವಾಡಿಯನ್ನು ಶೃಂಗಾರಗೊಳಿಸಿದಾಗ "ಮಂಗಳಂ ಮೊಳೆತು ಮಂಗಳಂ ಬೆಳೆದುದು, ಅಖಿಳಶುಭ ಮಂಗಳಂ ಕವಲ್ತು ಮಂಗಳಂ ತಳಿತು ಮಂಗಳಂ ಕಂಗೊಳಿಸಿ ಪೂತು ಕಾತುಂ ದೋರೆವಣ್ಣು ಮಂಗಳಮಹಾಸಿರಿಯ ಸವಿಯ ಮಂಗಳ ಜನಂಗಳೆಲ್ಲಾ ಸ್ವಾದಿಸಾನಂದ ಮಂಗಳರಸಾವೇಶರಾಗಿ ಮಂಗಳ ಹಾಡಿ ಮಂಗಳಂ ಹೂಡಿ ಮಂಗಳವಾಡಿಯೆನಿಪ ಪುರ ಕಲ್ಯಾಣ ನಾಮವಾಯ್ತು" ಎಂದು ಸಿಂಗಿರಾಜನು ಮಂಗಳವಾಡವೇ ಕಲ್ಯಾಣವೆನಿಸಿಕೊಂಡಿತೆಂಬಂತೆ ವರ್ಣಿಸಿದ್ದಾನೆ.[68] ಬಸವನಾಶ್ರಯಿಸಿದಾಗ ಬಿಜ್ಜಳನು ಆ ವೇಳೆಗೆ ಸಾಮಂತನಾಗಿರದೆ, ಸ್ವತಂತ್ರ ಚಕ್ರವರ್ತಿಯಾಗಿದ್ದನೆಂಬಂತೆಯೂ, ಅವನ ಆಧಿಪತ್ಯವು ಯಾರ ಅಧೀನಕ್ಕೂ ಒಳಗಾಗದೆ ನಿರಂಕುಶವೋ ಎಂಬಂತೆಯೂ, ಅವನ ವೈಭವ

---

[67] *Ind, Ant*, vol Xi. p. 69, (ಇದರಲ್ಲಿ ತೈಲನುಸತ್ತನೆಂಬ ವಾರ್ತೆಯಿದೆ). ನೋಡು ಕ. ಸಾ. ಪ. ಪತ್ರಿಕೆ, ಸಂಪುಟ 37, ಸಂಚಿಕೆ 1-2, ಪು. 88. [68] ಸಿಂ. ಪು. 7-46.

ವನ್ನೂ ವಿಕ್ರಮವ್ಯಾಪ್ತಿಯನ್ನೂ ಎಲ್ಲ ಬಸವಪುರಾಣಕಾರರೂ ಬಣ್ಣಿಸಿರುವರು. ಈ ವಿಧವಾದ ವರ್ಣನೆಗೆ ಬಿಜ್ಜಳನು ಪಾತ್ರನಾಗಿದ್ದುದು ಕ್ರಿ. ಶ. 1156—1561 ರಿಂದೀಚೆಗೇ ಹೊರತು ಅದಕ್ಕಿಂತ ಹಿಂದೆಯಲ್ಲ. ಆದುದರಿಂದ ಬಸವನು ಕ್ರಿ. ಶ. 1140 ಕ್ಕೆ ಹಿಂದೆ ಹುಟ್ಟಿ, ಎಂಟು ವರ್ಷ ವಯಸ್ಸಿನಲ್ಲೇ ಬಾಗೇವಾಡಿಯನ್ನು ಬಿಟ್ಟು, ಕೂಡಲಸಂಗಮಕ್ಕೆ ಬಂದೊಡನೆಯೇ ಬಿಜ್ಜಳನಾಳುವ ಕಲ್ಯಾಣಕ್ಕೆ ಬಂದು ಪ್ರಧಾನಪಟ್ಟಕ್ಕೇರಿದನೆಂಬ ಘಟನಾಪರಂಪರೆಗಳೆಲ್ಲವೂ ಒಂದಕ್ಕಿಂತ ಒಂದು ಹೆಚ್ಚು ಹೆಚ್ಚು ಅಸಂಬದ್ಧ ಅಸಮಂಜಸ ಅವಾಸ್ತವಿಕ ಅಸ್ತವ್ಯಸ್ತ ಕಲ್ಪನೆಗಳು.

ಕ್ರಿ. ಶ. 1161/2 ರಲ್ಲಿ ಬಸವನು ಕಪ್ಪಡಿಸಂಗಮದಿಂದ ಮಂಗಳವಾಡಕ್ಕೂ, ಅಲ್ಲಿಂದ ಕ್ರಿ. ಶ. 1162/3 ರಲ್ಲಿ ಕಲ್ಯಾಣಕ್ಕೂ ಬಂದು, ಅಲ್ಲಿ ಬಿಜ್ಜಳನು ನಿವೃತ್ತನಾಗುವವರೆಗೂ ಅಂದರೆ 1168 ರವರೆಗೂ ಇದ್ದು, ಆಮೇಲೆ ಮತ್ತೆ ಕಪ್ಪಡಿಸಂಗಮಕ್ಕೆ ಬಂದು, ಅಲ್ಲೇ 10-12 ವರ್ಷಗಳ ಕಾಲ ಶಿವಾನುಭವ ಗೋಷ್ಠಿಯಲ್ಲಿದ್ದು ಕ್ರಿ. ಶ. 1180 ರ ಸುಮಾರಿಗೆ ಶಿವೈಕ್ಯನಾಗಿರಬಹುದು.

ಈಗ ಬಸವೇಶ್ವರನ ಜೀವನದ ಹಲವಾರು ಘಟ್ಟಗಳನ್ನು ಕೆಳಕಂಡಂತೆ ವಿಂಗಡಿಸಿಕೊಳ್ಳಬಹುದು :

| | | |
|---|---|---|
| ಜನನ | ಕ್ರಿ. ಶ. | 1140 |
| ಬಾಗೇವಾಡಿಯಲ್ಲಿ | ,, | 1156 ರವರೆಗೆ |
| ಕೂಡಲಸಂಗಮಕ್ಕೆ | ,, | 1156 ರಲ್ಲಿ |
| ಕೂಡಲಸಂಗಮದಲ್ಲಿ | ,, | 1161 ರವರೆಗೆ |
| ಮಂಗಳವಾಡಕ್ಕೆ | ,, | 1161/2 ರಲ್ಲಿ |
| ಕಲ್ಯಾಣಕ್ಕೆ | ,, | 1162/3 ರಲ್ಲಿ |
| ಕಲ್ಯಾಣದಲ್ಲಿ | ,, | 1168 ರವರೆಗೆ |
| ಮತ್ತೆ ಕೂಡಲಸಂಗಮಕ್ಕೆ | ,, | 1168/9 ರಲ್ಲಿ |
| ಕೂಡಲಸಂಗಮದಲ್ಲಿ | ,, | 1180 ರವರೆಗೆ |
| ಕೂಡಲಸಂಗೈಕ್ಯ | ,, | 1180 ರಲ್ಲಿ |

ಬಸವೇಶ್ವರನು ಕ್ರಿ. ಶ. 1140 ರಲ್ಲಿ ಹುಟ್ಟಿದನೆಂದೂ, ಕ್ರಿ. ಶ. 1161/2 ರಿಂದ 1168 ರವರಿಗೆ ಬಿಜ್ಜಳನಲ್ಲಿದ್ದನೆಂದೂ ಹೇಳುವುದರಿಂದ ಒಂದೇ ಒಂದು ಅಸಮಂಜಸತೆಯು ಪ್ರಾದುರ್ಭವಿಸುವುದು. ಅದೇನಂದರೆ ಕಲ್ಯಾಣದಲ್ಲಿ ಹುಟ್ಟಿದನೆಂದಿರುವ ಚೆನ್ನಬಸವೇಶ್ವರನಿಗೆ ಬಸವನು ಕಲ್ಯಾಣವನ್ನು ಬಿಡುವವೇಳೆಗೆ 7-8 ವರ್ಷವೂ ಆಗಿರುವುದಿಲ್ಲ—ಇಷ್ಟು ಎಳೆಯ ಹುಡುಗನು ಬಸವನಿಗೆ ಧರ್ಮಪ್ರಸಾರ ಕಾರ್ಯದಲ್ಲಿ ಸಹಾಯಕನಾಗಿದ್ದನೆಂಬುದಾದರೂ ಹೇಗೆ ? ಎಂದು.

ಇದು ಅಸಮಂಜಸತೆಯ ಆಭಾಸವೇ ಹೊರತು ಅಸಮಂಜಸತೆಯಲ್ಲ. ಮೊದಲನೆಯದಾಗಿ ಚೆನ್ನಬಸವೇಶ್ವರನು ಕಲ್ಯಾಣದಲ್ಲಿ ಹುಟ್ಟಿದನೆಂಬುದೇ ನಿರಾಧಾರವಾದುದು. ಈ ಒಂದು ತಪ್ಪು ಕಲ್ಪನೆಗೆ ಚೆನ್ನಬಸವಪುರಾಣದ ವಿರೂಪಾಕ್ಷ ಪಂಡಿತನು ಪೋಷಕನಾದರೂ, ಜನಕನು ಕನ್ನಡ ಬಸವಪುರಾಣದ ಭೀಮಕವಿಯೇ. ಅಂದರೆ ಕ್ರಿ. ಶ. 1369 ಕ್ಕೆ ಹಿಂದೆ, ಚೆನ್ನಬಸವನು ಕಲ್ಯಾಣದಲ್ಲಿ ಹುಟ್ಟಿದನೆಂಬ ವಾರ್ತೆಯು ವಚನಗಳಲ್ಲಾಗಲಿ, ವೀರಶೈವಪುರಾಣಗಳಲ್ಲಾಗಲಿ ಕಾಣಬರುವುದಿಲ್ಲ. ಪಾಲ್ಕುರಿಕೆ ಸೋಮನಾಥನ ತೆಲುಗು ಬಸವಪುರಾಣದಲ್ಲಿ—ಅದರ ಪ್ರಕಾರ—ಬಸವನು ಕೂಡಲಸಂಗಮದಿಂದ ಕಲ್ಯಾಣಕ್ಕೆ ಬಂದು 'ಬಿಜ್ಜಳನ ಹನ್ನೆರಡು ಜನ ಮಂತ್ರಿಗಳಿಗೂ ಕಣ್ಣೊಲೆಯಂತಿದ್ದು ಶಿವಭಕ್ತರ ಸೇವೆಯಲ್ಲಿ ನಿರತನಾಗಿದ್ದ. ಇರಲು ಶಿವಭಕ್ತಿಯ ಪ್ರಾಣಸ್ವರೂಪಳಾದ ಆ ನಾಗಾಂಬೆಯು ವರತನೂಭವನಾದ ಚೆನ್ನಬಸವನು ಬಸವನನ್ನು ಹೊಗಳುತ್ತಿದ್ದ. ಆ ಚೆನ್ನಬಸವನು ಬಸವಕಾರುಣ್ಯ ಹಸ್ತಸಂಭೂತ ಪ್ರಶಸ್ತದೇಹನು' ಎಂದು ಪ್ರಾರಂಭಿಸಿ, ಆತನ ಮಹಿಮೆಯನ್ನು ಮುಂದೆ ಕೆಲವು ಮಾತುಗಳಲ್ಲಿ ವಿವರಿಸಿ, "ಹಾಗಿರಲು ಅಲ್ಲಮಪ್ರಭು ಕಲ್ಯಾಣದ ಕಡೆ ಬಂದ" ಎಂದು ಬಸವನು ಪ್ರಭುದೇವರಿಗೆ ಆತ್ಮಸರ್ವಸ್ವಾರ್ಪಣೆಮಾಡಿಕೊಂಡ ಸಂದರ್ಭವನ್ನು ಚಿತ್ರಿಸು

ವನು. ಇದೇ ಸಂದರ್ಭವನ್ನು ಭೀಮಕವಿಯು ಬಸವ ಪುರಾಣದ ಏಳನೇ ಸಂಧಿಯಲ್ಲಿ ಅನುವಾದ ಮಾಡುತ್ತ ಆ ಸಂಧಿಗೆ ಒಂದು ಸೂಚನೆಯ ಪದ್ಯವನ್ನು

"ತರುಣಿ ನಾಗಾಂಬೆಯ ಸುಗರ್ಭದಿ
ನಿರುಪಮಜ್ಞಾನ ಸ್ವರೂಪಂ
ಪರಮಕಾರಣ ಚೆನ್ನಬಸವಂ ಉದ್ಭವಂಗೈದ"

ಎಂದು ಬರೆದಿದ್ದಾನೆ. ಆದರೆ ಭೀಮಕವಿಯು ತನ್ನ ಸೂಚನೆಗನುಸಾರವಾಗಿ ಚೆನ್ನಬಸವನು ಜನಿಸಿದ್ದನ್ನು ಆ ಸಂಧಿಯಲ್ಲಿ ವರ್ಣಿಸುವುದಿರಲಿ, ಮತ್ತೆ ಪ್ರಸ್ತಾಪಿಸುವುದೂ ಇಲ್ಲ; ತೆಲುಗು ಬಸವಪುರಾಣದಲ್ಲಿನ ಚನ್ನಬಸವನ ಮಹಿಮೆ ಇತ್ಯಾದಿಗಳನ್ನು ಯಥಾವತ್ತಾಗಿ ಅನುವಾದಿಸುತ್ತಾನೆ. ಆದರೂ ಆ ಸೂಚನೆಯ ಪದ್ಯದಲ್ಲಿನ "ಉದ್ಭವಂಗೈದ" ಎಂಬ ಮಾತಿನಿಂದ, ಬಸವನು ಕಲ್ಯಾಣದಲ್ಲಿದ್ದಾಗ ಚೆನ್ನಬಸವನು ಹುಟ್ಟಿದನೆಂಬ ಅಪಾರ್ಥಕ್ಕೆ ಎಡೆಯಾಯಿತು. ಈ ಅನುದ್ದಿಷ್ಟ ಅಯಥಾರ್ಥ ಸೂಚನೆಯನ್ನೇ ಪರಮಸತ್ಯವೆಂದು ವಿರೂಪಾಕ್ಷ ಪಂಡಿತನು ತನ್ನ ಚೆನ್ನಬಸವ ಪುರಾಣದಲ್ಲಿ ಚೆನ್ನಬಸವನು **ಕಲ್ಯಾಣದಲ್ಲಿ** ಹುಟ್ಟಿದನೆಂದು ಕಲ್ಪಿಸಿ ವರ್ಣಿಸಿ ಆ ಶಿಶುವನ್ನು ಆನೆಯ ಮೇಲಿಟ್ಟು ಕಲ್ಯಾಣದ ಬೀದಿ ಬೀದಿಗಳಲ್ಲಿ ಮೆರೆಸಿಯೇ ಬಿಟ್ಟನು. ಅಂದಿನಿಂದ **ಈ ಸುಳ್ಳುವಾರ್ತೆ ನಿಜವನ್ನು ಮುಚ್ಚಿ ಮೀರಿ ಹಬ್ಬಿನಿಂತುಬಿಟ್ಟಿತು.**

ತೆಲುಗು ಬಸವಪುರಾಣದಲ್ಲಿಯಾದರೋ ಚೆನ್ನಬಸವನು ಕಲ್ಯಾಣದಲ್ಲಿ ಹುಟ್ಟಿದನೆಂದಾಗಲಿ, ಅಥವಾ ಮತ್ತೆಲ್ಲಿಯಾದರೂ ಹುಟ್ಟಿದನೆಂದಾಗಲಿ—ಆತನ ಜನನದ ಬಗ್ಗೆ ಎಳ್ಳಷ್ಟೂ ಹೇಳಿಲ್ಲ. ಬಸವನು ಬಂದು ಕಲ್ಯಾಣದಲ್ಲಿ ನಿಲ್ಲುವ ಹೊತ್ತಿಗೆ ಚೆನ್ನಬಸವನು ಬಸವನ ಕಾರುಣ್ಯ ಹಸ್ತಸಂಭೂತ (= ಶಿಷ್ಯ)ನಾಗಿ, "ಸರ್ವಾಂಗಲಿಂಗಿ ಮತ್ತು ಸಂಸಾರನಿಸ್ಸಂಗಿ"ಯಾಗಿರುತ್ತಾನೆಂಬಷ್ಟು ವಿಷಯವನ್ನು ಮಾತ್ರ ಹೇಳುತ್ತಾನೆ.

ಪಾಲ್ಕುರಿಕೆ ಸೋಮನಾಥ ಮತ್ತು ಭೀಮ ಇವರಿಬ್ಬರೂ ತಮ್ಮ ಪುರಾಣಗಳಲ್ಲಿ ಮತ್ತೊಮ್ಮೆ ಚೆನ್ನಬಸವನ ಪ್ರಸ್ತಾಪಮಾಡಿ, ಬಸವನು ಯೋಗನಿದ್ರೆಯಲ್ಲಿದ್ದು ಪ್ರಾಣಲಿಂಗ ಪವಾಡವನ್ನು ತೋರಿದನೆಂಬ ಸಂದರ್ಭದಲ್ಲಿ, ಚೆನ್ನಬಸವನು ಅಲ್ಲಿ ದ್ವಾರಸ್ಥನಾಗಿದ್ದಂತೆ ಹೇಳಿದೆ. ಆದರೆ ಹರಿಹರನ ಬಸವರಗಳೆಯಲ್ಲಿ ಚೆನ್ನಬಸವನ ಜನನ-ವೃತ್ತಾಂತವನ್ನಾಗಲಿ, ಬಸವನು ಪ್ರಾಣಲಿಂಗಪವಾಡವನ್ನು ತೋರಿದಾಗ ಆತನಲ್ಲಿದ್ದನೆಂಬ ಅಂಶವನ್ನಾಗಲಿ ಪ್ರಸ್ತಾಪಿಸುವುದು ಹಾಗಿರಲಿ, ನಮಗೆ ಸಿಕ್ಕಿರುವಷ್ಟು ಹರಿಹರನ ಆ ರಗಳೆಯಲ್ಲೆಲ್ಲೂ ಚೆನ್ನಬಸವನ ಹೆಸರೇ ಕಂಡು ಬರುವುದಿಲ್ಲ. ಆದರೂ ಹರಿಹರನು ತನ್ನ ಲಿಂಗಾರ್ಚನಾ ರಗಳೆಯಲ್ಲಿ ಚೆನ್ನಬಸವನ ಹೆಸರನ್ನು ಮಿಕ್ಕ ಶಿವಶರಣರ ನಾಮಾವಳಿಯೊಡನೆ ಸೇರಿಸಿ ಭಕ್ತಿಯಿಂದ ಸ್ಮರಿಸಿದ್ದಾನೆ.

ಬಸವೇಶ್ವರನ ಷಟ್‌ಸ್ಥಲದ ವಚನಗಳಲ್ಲಿ (ನಂ. 439, 718) ಬಸವೇಶ್ವರನು ಚೆನ್ನಬಸವನ ಮೇಲೆ ಆಣೆಯಿಟ್ಟುಕೊಳ್ಳುವನು ಮತ್ತು ಆತನನ್ನು ಮರೆಯಲಾರೆನೆಂದೂ ಹೇಳಿರುವುದರಿಂದ ಬಸವನಿಗೆ ಚೆನ್ನಬಸವನು ಅತ್ಯಂತಪ್ರಿಯನೂ ಸಹಾಯಕನೂ ಆಗಿದ್ದನೆಂದೂ ಊಹಿಸಬಹುದು.

ಆದರೆ ಆತನು ಕಲ್ಯಾಣದಲ್ಲಿ ಹುಟ್ಟಿದನೆಂಬುದು ಶುದ್ಧ ಕಲ್ಪನಾವಿಲಾಸ—ಸತ್ಯವಿಪರ್ಯಾಸ. ಬಸವನು ಬಾಗೇವಾಡಿಯಲ್ಲಿದ್ದಾಗಲೇ, ಅಕ್ಕನಾಗಲಾಂಬಿಯ ಗರ್ಭದಲ್ಲಿ ಹುಟ್ಟಿರಲಾರನೇಕೆ? ಬಸವನು ಬಾಗೇವಾಡಿಯನ್ನು ಬಿಟ್ಟು ಹೊರಡುವ ವೇಳೆಗೆ 9-10 ವರ್ಷದ ಚಿಕ್ಕ ಬಾಲಕನಾಗಿದ್ದಿರಬಹುದು. ಆದ್ದರಿಂದಲೇ ಸೋಮನಾಥನು, ಬಸವನೊಡನೆ ಅಕ್ಕನಾಗಲಾಂಬೆಯು ಕಪ್ಪಡಿಸಂಗಮಕ್ಕೆ ಹೊರಟಳೆಂಬಾಗಲಾಗಲಿ; ಸಿಂಗಿರಾಜನು, ಬಸವನ ತಾಯಿ ತಂದೆಗಳು ಕಪ್ಪಡಿಸಂಗಮಕ್ಕೆ ಬಂದು ತಮ್ಮ ಮಗಳಾದ ಅಕ್ಕನಾಗಾಯಿಯನ್ನೂ ಮತ್ತು ಅವಳ ಪತಿಯಾದ ಶಿವದೇವ ಅಥವಾ ಶಿವಸ್ವಾಮಿಯನ್ನೂ ಬಸವನ ಸೇವೆಗೋಸ್ಕರ ಬಿಟ್ಟು ಹೋದರೆಂದಾಗಲಿ ಹೇಳುವಾಗ ಎಳೆಯ ಹುಡುಗನಾದ ಚೆನ್ನಬಸವನ ಮಾತೆತ್ತದೆ ಹೋಗಿರಬಹುದು.

ಆದ್ದರಿಂದ ಚೆನ್ನಬಸವನು, ಕಲ್ಯಾಣದಲ್ಲಿ ಬಸವನು ಧರ್ಮಕಾರ್ಯದಲ್ಲಿ ನಿರತನಾದ ವೇಳೆಗಾಗಲೇ, ಸುಮಾರು ಹದಿನಾರು ವಯಸ್ಸಿನವನಾಗಿರುತ್ತಾನೆಂದು ಊಹಿಸಬಹುದು.

ಹೀಗೆ ಬಸವನು ಕ್ರಿ. ಶ. 1140 ರಲ್ಲಿ ಹುಟ್ಟಿದನೆನ್ನುವುದರಿಂದ ಉಂಟಾಗಬಹುದಾದ ಅಸಾಮಂಜಸ್ಯವು ವಿವೇಚನೆಯ ಎಳೆಬಿಸಿಲಲ್ಲಿ ಆವಿಯಾಗಿ ಮಾಯವಾಯಿತು. ಆದರೆ ಕ್ರಿ. ಶ. 1140 ಕ್ಕಿಂತ ಹಿಂದಕ್ಕೆ, ಕ್ರಿ. ಶ. 1106 ರ ವರೆಗೆ[69] ಬಸವಜನನವನ್ನು ಒಯ್ಯುವುದರಿಂದ ಆಗುವ ಚಾರಿತ್ರಿಕ ಅಸಂಬದ್ಧತೆಯನ್ನು ಕುರಿತು ಆಲೋಚಿಸೋಣ: ಬಸವನು ಕಲ್ಯಾಣಕ್ಕೆ ಬಂದಾಗ ಬಿಜ್ಜಳನು ಚಕ್ರವರ್ತಿಯಾಗಿದ್ದುದರಿಂದ, ಆತನು ಅಲ್ಲಿಗೆ ಬಂದುದು ಕ್ರಿ. ಶ. 1162/3 ಕ್ಕಿಂತ ಹಿಂದೆಂಬುದು ಅಸಾಧ್ಯ. ಬಿಜ್ಜಳನು ಮಂಗಳವಾಡದಲ್ಲಿ ಆಳುತ್ತಿದ್ದಾಗ, ಕ್ರಿ. ಶ. 1156 ರಲ್ಲೇ ಬಸವನು ಅವನ ಆಸ್ಥಾನಕ್ಕೆ ಬಂದು ಸೇರಿದನೆಂದು ಊಹಿಸಿದರೂ, ಆ ವೇಳೆಗಾಗಲೇ ಅವನಿಗೆ 50 ವರ್ಷ ವಯಸ್ಸಾಗಿರಬೇಕು. ಆ ಅಪರ ವಯಸ್ಸಿನಲ್ಲಿ ಬಸವನು ಸಿದ್ಧರಸ ಅಥವಾ ಬಲದೇವನ ಮಗಳನ್ನು ಮದುವೆಯಾದನೆಂಬುದು ವಿಕೃತವಾಗಿ ಕಾಣುವುದು. ಮತ್ತು ಕ್ರಿ. ಶ. 1106 ರಲ್ಲಿ ಹುಟ್ಟಿದ ಬಸವನಿಗೆ ಕ್ರಿ. ಶ. 1114 ರ ವೇಳೆಗೆ ನಡೆದ ಉಪನಯನಕ್ಕೆ ಬಿಜ್ಜಳನ ಮಂತ್ರಿಯಾದ ಬಲದೇವನು ಬಂದಿದ್ದನೆಂಬುದು ತೀರ ಅಸಂಭಾವ್ಯ. ಏಕೆಂದರೆ ಆ ವೇಳೆಗೆ ಬಹುಶಃ ಬಿಜ್ಜಳನೇ ಹುಟ್ಟಿರುವುದಿಲ್ಲವಾಗಬಹುದು. ಆತನು ತನ್ನ ತಂದೆಯಿಂದ ರಾಜ್ಯಭಾರ ವಹಿಸಿಕೊಂಡುದೇ ಕ್ರಿ. ಶ. 1140 ರಷ್ಟು ಈಚೆಗೆ.

ಆದುದರಿಂದ ಬಸವನು ಹುಟ್ಟಿದ ವರ್ಷವನ್ನು ಕ್ರಿ. ಶ. 1140 ರ ಹಿಂದುಹಿಂದಕ್ಕೆ ಒಯ್ದಂತೆಲ್ಲ, ಸತ್ಯವೂ ದೂರವಾಗುತ್ತ ಹೋಗುವುದಲ್ಲದೆ, ಬಸವನ ಜೀವನದಲ್ಲಿ ನಡೆದಿರಬಹುದಾದ ವಾಸ್ತವಿಕಾಂಶಗಳೆಲ್ಲ ಮುಂದುಹಿಂದಾಗುತ್ತವೆ.

**ಎಲ್. ಬಸವರಾಜು**



[69] (*a*) (1) ಬಸವೇಶ್ವರನ ಕಾಲ,—ಶ್ರೀ ಚೆನ್ನಮಲ್ಲಿಕಾರ್ಜುನ. (2) ಶ್ರೀ ಶಿ. ಶಿ. ಬಸವನಾಳರು. (3) R. C. C. Carr. (4) J. M. Campbell. (*b*) ಕ್ರಿ. ಶ. 1115 ಶ್ರೀ ಎಂದು ಹರಪನ ಹಳ್ಳಿಯ ಶಾಂತಪ್ಪಾಜಿ. (*c*) ಕ್ರಿ. ಶ. 1127 ಎಂದು W R. Cornish: Census Report of Madras Presidency, Vol I, 1871. (*d*) ಕ್ರಿ. ಶ. 1132 ಎಂದು (1) ಶ್ರೀ ಎಚ್. ಆರ್. ಕರಿಬಸವಶಾಸ್ತ್ರಿ. (2) ಶ್ರೀ ಹರ್ಡೇಕರ್ ಮಂಜಪ್ಪನವರು—ಶ್ರೀ ಬಸವಚರಿತ್ರೆ.

# ಗುರುಭಕ್ತಾಂಡಾರ ಚರಿತೆ

ಗುರುಭಕ್ತಾಂಡಾರ ಚರಿತೆಯನ್ನು ವಿರಚಿಸಿದವನು ಪೆಮ್ಮಿಸೆಟ್ಟಿ. ಆತನು 'ಪ್ರಾಸ ಭೂಷಣ' ಎಂದು ತನ್ನನ್ನು ಸಂಬೋಧಿಸಿಕೊಂಡಿದ್ದಾನೆ. ಕ್ರಿ. ಶ. ೧೬೫೦ ರಲ್ಲಿ ಇದ್ದಿರಬಹು ದಾದ ಆತನ ಕೃತಿ ಇನ್ನೂ ಪ್ರಕಟವಾಗಿಲ್ಲ. ಕರ್ಣಾಟಕ ಕವಿಚರಿತೆ, ಎರಡನೆಯ ಭಾಗ, ೪೨೭ ನೆಯ ಪುಟದಲ್ಲಿ "ಇದು ಉದ್ದಂಡ ಷಟ್ಪದಿಯಲ್ಲಿ ಬರೆದಿದೆ; ಸಂಧಿ ೩ ಪದ್ಯ ೨೭೩" ಎಂದು ಹೇಳಿದೆ. ಆದರೆ ಈ ಕಾವ್ಯವು ವಾರ್ಧಕಷಟ್ಪದಿಯಲ್ಲಿದೆ. ಇದರಲ್ಲಿ ೩ ಸಂಧಿಗಳೂ ೩೦೦ ಪದ್ಯಗಳೂ ಇವೆ. ಗುರುಭಕ್ತಾಂಡಾರಿ ಒಬ್ಬ ಶಿವಭಕ್ತ. ಆತನ ಕಥೆಯೇ ಈ ಕಾವ್ಯ ದಲ್ಲಿ ನಿರೂಪಿತವಾಗಿದೆ. ಈ ಅಪ್ರಕಟಿತ ಕಾವ್ಯದ ಪರಿಚಯವನ್ನು ಇಲ್ಲಿ ಮಾಡಿಕೊಡಲಾಗಿದೆ.

ಮೊದಲನೆಯ ಸಂಧಿ ಸೂಚನೆಯಲ್ಲಿ :

ಪರಮ ಶ್ರೀ ಗುರುರಾಯ ಮರುಳು ಸಿದ್ಧೇಶ್ವರನ
ಕರಕಮಲವಾರ್ಧಿಪರಿಪೂರ್ಣಚಂದ್ರಮನೆನಿಪ
ವರ ಪ್ರಾಸಭೂಷಣನ ಜಿಹ್ವೆಯೊಳು ಶಿವನಿರ್ದು ಪೇಳಿಸಿದ ಸತ್ಕೃತಿಯಿದು ||

ಎಂದು ಕವಿ ಹೇಳಿಕೊಂಡು ತರುವಾಯ ತನ್ನ ಇಷ್ಟದೈವವಾದ ಮರುಳು ಸಿದ್ಧೇಶನನ್ನು ಮೂರು ಪದ್ಯಗಳಲ್ಲಿ ಸ್ತುತಿಸಿದ್ದಾನೆ. ಆಮೇಲೆ ಕೈಲಾಸವಾಸನಾದ ಮಹೇಶನನ್ನೂ ಆತನ ರಾಣಿಯಾದ ತುಹಿನಾದ್ರಿಜಾತೆಯನ್ನೂ ಹೊಗಳಿದ್ದಾನೆ. ಶಿವಶರಣರನ್ನೂ ಸಹೃದಯರನ್ನೂ ಕುರಿತು :

ಪೊಡವಿಯೊಳ್ ಜಡಿವ ಗಿರಿ ದಡದಲ್ಲಿ ನುಡಿವವರ
ವೊಡನೊಡನೆ ನುಡಿವಂತೆ ಮೃಡನು ಯೆನ್ನೊಡನಿರ್ದು
ನುಡಿಸಿದರೆ ನುಡಿದೆ ನಾಂ ಬೆಡಗುಗಳ ಗಡಣದಿಂ ಕಡುಸೊಬಗುವಡೆದ ಕೃತಿಯ |
ಮೃಡಶರಣರಡಿಗೆಱಗಿ ಸಡಗರದೊಳೊಡರಿಸುವೆ
ಬಿಡದೆ ನೇರ್ಪಡಿಸಿ ನಿಂದೊಡಗಲಸಿ ನಡೆಗೊಳಿಸಿ
ಮೃಡಭಕ್ತಿಗೊಡಲಿತ್ತು ಪಡೆದರ್ಥ ಕೆಡದರ್ಥಿ ಪಡೆವೆತ್ತ ದೃಢಚಿತ್ತರು ||
ಶ್ರುತಿಯ ಸೊಬಗುಗಳ ಸಂಗತಿಯ ಸಾರದ ಮಹೋ
ನ್ನತಿಯನುಪಮಾನಂದ ರತಿಯ ರಂಜಕದ ಗಿರಿ
ಸುತೆಯು ನಿಜಪತಿಯ ಘನಮತಿಯ ಚದುರತೆಯ ಪದಗತಿಯ ಸತ್ಕೃತಿಯ ಕಥೆಯ |
ಕ್ಷಿತಿಯೊಳಗೆ ಮೆಱೆವಂತೆಯತಿಮುದದೊಳೆನ್ನ ಬಡ
ಮತಿಗೆ ತಕ್ಕಂತೆ ನಾಂ ನುತಿಸುವೆನು ನೆಱೆ ಕೇಳಿ
ಸಿತಗಳನ ಕವಿಗಳಪ್ರತಿಯೆನಿಸುತಿರ್ದೀ ವಸುಮತಿಯೊಳಗೆ ಗತಿಗೊಳಿಪುದು ||

ಈ ರೀತಿ ಹೇಳಿ ಕಾವ್ಯವನ್ನು ಪ್ರಾರಂಭಿಸುತ್ತಾನೆ.

ಧರೆಯೊಳೀ ಕೃತಿವೆಸರು ಗುರುಭಕ್ತಿಯಾಂಡಾರ
ಚರಿತೆಯಿದ ಪೇಳಿದಾ ಕರ್ತೃವಾರೆಂದೆನಲು
ವುರುತರದ ಮುಂಡಗೆಯ ಮಾದರಸ ಮಾದಲಾಂಬಿಕೆಯ ರತ್ನಗರ್ಭಾಂಭೋನಿಧಿ |
ಪರಿಪೂರ್ಣಚಂದ್ರಮನು ಶಿವಕವಿಗಳಿಗೆ ಕಲ್ಪ
ತರು ಕಾಮಧೇನು ಚಿಂತಾರತ್ನ ಬಸವೇ
ಶ್ವರನು ಮತಿಯಂ ಕೊಟ್ಟು ಪೇಳೆನಲು ಪ್ರಾಸಭೂಷಣ ಪೇಳ್ದ ಸತ್ಕೃತಿಯಿದು ||

ತನ್ನ ಕೃತಿಯಲ್ಲಿ ಲಕ್ಷಣವನ್ನು ನೋಡಕೂಡದಂತೆ. ಏಕೆಂದರೆ ಶಿವನು ಸರ್ವಲಕ್ಷಣ ಸದಾ

ಪುಣ್ಯನಾದಕಾರಣ ಅದು ಸುಲಕ್ಷಣವೆಯಾಗಿಹುದಂತೆ. ಅಲ್ಲದೆ "ಶಿವಕವಿಗೆ ಪ್ರಾಸವೇ ಭೂಷಣಗಳಾಗೆ ಕೈಕೊಂಡೆನಾ ಪೆಸರನು" ಎಂದೂ, ಮತ್ತೆ

ಮದನಾರಿ ಕವಿಗಳಿಗೆ ಲಕ್ಷಣವದಾವುದೆನೆ
ಪದಪ್ರಾಸಗೊಂಡಘಮನದೊಳುಪಮೆವುತ್ಪ್ರೇಕ್ಷೆ
ಹದಿನೆಂಟು ವಾರ್ಗ ನವರಸಭರಿತವಾಗಿರ್ಪುದೆ ರೀತಿಯಾದುದು ಸರ್ವನ|
ಚದುರಕಬ್ಬಿಗರಂಗಕೂಳರೀಶನ ಕೃತಿಯೊ
ಳದು ಲೇಸುವಿದು ದೋಷವೆಂಬರೆಮ್ಮಭವಂಗೆ
ಯಿದಿರುಂಟೆವೊಮ್ಮೆ ಶಿವನೆಂಬ ನುಡಿಯಿರ್ದೊಡಾ ಕಾವ್ಯಕೆ ಜಪತಪಗಳು ||

ಹೀಗೆ ಹೇಳಿಕೊಂಡಿದ್ದಾನೆ. ಪೂರ್ವಕವಿಗಳಲ್ಲಿ ಬಾಣ, ಭಲ್ಲಟ, ಭಾರತಿ, ಮಲುಹಣ, ಸುಜಾಣ ಮಲೆಯರಸ, ಉದ್ಭಟ, ಕಾಳಿದಾಸ, ಕವಿಕೇಶಿರಾಜ, ಭೋಜ, ಮಯ, ಮಯೂರ—ಈ ಶಿವ ಕವಿಗಳನ್ನು ನೆನೆದು ತಾನು ಪೇಳಲಿರುವ "ಮಹಾಕೃತಿ ಕ್ಷೋಣಿಯೊಳಗಱುವಂತೆ ಉರುವಂತೆ ಮೆಱೆವಂತೆ ಮಾಡುವುದು" ಎಂದು ಪ್ರಾರ್ಥಿಸಿಕೊಂಡಿದ್ದಾನೆ. ತನ್ನ ಕಾವ್ಯರಚನೆಯ ಕಾರಣ ವನ್ನೂ ಮೂಲವನ್ನೂ ಕುರಿತು--

ಅನುಪಮ ವಿಚಿತ್ರಕವಿ ಪಾಲ್ಕುಱಿಕೆ ಸೋಮೇಶ್ವ
ರನುಯಾಂಧ್ರಭಾಷೆಯೊಳ್ ದ್ವಿಪದಿಯೊಳ್ ಪೇಳ್ದ ಚಿ
ಧ್ಘನ ಮಹಿಮ ಗುರುಭಕ್ತಾಂಡಾರ ಚರಿತೆಯಂ ಆರಾಧ್ಯಚರಿತೆಯೊಳಗೆ|
ಮನವೊಲಿದು ತೆಗೆದು ಕನ್ನಡಿಸೆಂದು ಬಸವಣ್ಣ
ನೆನಹಿನೊಳು ಬಂದು ಭಸಿತವನಿಟ್ಟು ಮತಿಗೊಡಲು
ವಿನಯದಿಂ ಪ್ರಾಸಭೂಷಣ ಪೇಳ್ದನೀ ಕೃತಿಯ ಶರಣರಾಲಿಸಿ ಪಾಲಿಸಿ||

ಇಂತೆಂದು ಹೇಳಿದ್ದಾನೆ. ಇದಾದ ಮೇಲೆ ಸಮುದ್ರದ ವರ್ಣನೆ. "ಮೆಱೆವ ಭೂಕಾಂತೆವೊಸೆದಿಟ್ಟ ಸೀಮಂತ ಮಾಣಿಕವೊಯೆಂಬಂತೆಸೆವ ಕನಕಗಿರಿಗಂತಕನ ದೆಶೆಯೊಳೊಲವಿಂ ತುರುಕದೇಶ ವಿಹುದು." ಆ ರಾಜ್ಯವನ್ನು ರವಿಕುಲಸುಜಾತ ಬಿಜ್ಜಳರಾಯನಾಳುತ್ತಿದ್ದನು. ಆತನು ವಾಸಿಸು ತ್ತಿದ್ದ ಕಲ್ಯಾಣ ಭಕ್ತರ ಪ್ರಾಣವಾಗಿತ್ತು. ಆ ಕಲ್ಯಾಣವನ್ನು ನೋಡುವರೆ ಸುರಪನಕ್ಷಿಗಳವಲ್ಲವು. ಕೊಂಡಾಡುವರೆ ಫಣಿಪತಿಯ ಜಿಹ್ವೆಗಳು ಸಾಲವು. ಆ ಕಲ್ಯಾಣಪುರವನ್ನು ಬಳಸಿದ ಮಣಿ ಮಯದ ಕೋಟೆ ನಾಲ್ವತ್ತೆಂಟುಯೋಜನ ಪ್ರಮಾಣವುಳ್ಳದಾಗಿತ್ತು. ಅದರಲ್ಲಿ ಪರಶಿವನ ಭವನ ಲಕ್ಷ ತೊಂಬತ್ತಾರುಸಾವಿರವಿತ್ತು. ಅಲ್ಲಿ ತ್ರಿಪುರಾಂತಕನ ಸಾಸಿರುಪ್ಪರಿಗೆಗಳೂ, ಸೋಮ ಸೂರ್ಯರ ವೀಥಿಯ ಇನ್ನೂರನಾಲ್ವತ್ತು ಅರಮನೆಗಳೂ, ಹರದರಂಗಡಿಗಳೂ, ಗಣಿಕೆಯರ ಸೌಧಗಳೂ, ಎಪ್ಪತ್ತೆರಡುಲಕ್ಷ ಮಂಡಲೇಶ್ವರ ಹರ್ಮ್ಯಗಳೂ ಇದ್ದುವು. ಒಂದುದಿನ ಬಿಜ್ಜಳ ಮಹೀಪತಿ ಓಲಗಂಗೊಟ್ಟಿರಲು ಶಶಿಧರನ ಲಿಪಿ ಆತನ ಸಿಂಹಾಸನದ ಬಳಿ ಬಂದು ಬಿದ್ದಿತು. ಆತನು ಅದಕ್ಕೆ ನಮಸ್ಕಾರಮಾಡಿ ಎತ್ತಿಕೊಂಡು ಅಕ್ಷರ ಗಣಿತ ಛಂಧ ವೇದಶಾಸ್ತ್ರಾಗಮದ ಲಕ್ಷಣವನಖಿಳ ಲಿಪಿಗಳ ಬಲ್ಲ ವಿಚಕ್ಷಣರ ಕೈಗೆ ಕೊಡಲು ಅವರು ಅದರಲ್ಲಿ ಒಂದು ಅಣು ಮಾತ್ರವೂ ತಿಳಿಯದಾದರು. ಅದನ್ನು ಬಲ್ಲವನು ಬಸವಣ್ಣನಲ್ಲದೆ ಮತ್ತಾರೂ ಇಲ್ಲವೆಂದು ಅರಿತ ಆ ನೃಪನು ಬಸವಣ್ಣನಲ್ಲಿಗೆ ಬಂದು ಶರಣುಮಾಡಿ ಆ ಲಿಪಿಯನ್ನು ಕೊಟ್ಟನು. ಬಸವಣ್ಣನು ಭಾಳನೇತ್ರನ ಆ ಲಿಪಿಯನ್ನು ಗಳಗಳನೆ ಓದಿ ಏಳು ಶಂಖವು ಏಳು ಪದ್ಮವು ಏಳರ್ಬುದವು ಹೂಳಿರ್ದ ಹೊನ್ನಭಂಡಾರವನ್ನು ಹದಿನೆಂಟು ಮಾಣಿಕದ ಪದಕಂಗಳನ್ನು ತರಿಸಿಕೊಟ್ಟನು. ಇದರಿಂದ ಮಹತ್ತರವಾಗಿ ಸಂಪ್ರೀತಿಗೊಂಡ ಬಿಜ್ಜಳನು ಬಸವೇಶ್ವರನಿಗೆ ತನ್ನ ಅರಮನೆಯ ಪಕ್ಕದಲ್ಲಿ ಮತ್ತೊಂದು ಅರಮನೆಯನ್ನು ಕಟ್ಟಿಸಿಕೊಟ್ಟನು. ಅತಿಚೆಲುವೆಯಾದ ಸಿದ್ಧರಸ ಡಣಾಯಕರ ಮಗಳಾದ ನೀಲಲೋಚನೆಯನ್ನು ವಿವಾಹಮಾಡಿಸಿದನು. ಬಸವಣ್ಣ ನೀಲ ಲೋಚನೆಯರು ಗಂಡಭೇರುಂಡನಂತೆ ದೇಹವೆರಡು ತನುವೊಂದಾಗಿದ್ದರು.

ಬಸವಣ್ಣನು ಮಡಿವಾಳಯ್ಯ, ಕಿನ್ನರಯ್ಯ, ಹಡಪದ ಅಪ್ಪಣ್ಣ, ಬಾಚರಸ, ಮರುಳುಶಂಕರ, ಸಿದ್ಧರಾಮಯ್ಯ, ಅಕ್ಕನಾಗಾಯಿ, ಚಿಕ್ಕಡಣಾಯಕ, ಕಕ್ಕಯ್ಯ, ಮೊದಲಾದವರೊಡನೆ ಒಡ ಲೊಂದಾಗಿ ಭಕ್ತಿಭಾವದಿಂದ ನಡೆದುಕೊಳ್ಳುತ್ತಿದ್ದನು. ಪರವಾದಿಗಳನ್ನು ಲೆಕ್ಕವಿಲ್ಲದೆ ಸೋಲಿಸಿ, ಅನೇಕ ಪವಾಡಗಳನ್ನು ಮೆರೆದನು. ಪ್ರತಿನಿತ್ಯ ಲಕ್ಷತೊಂಬತ್ತಾರುಸಾಸಿರ ಜಂಗಮಾರ್ಚನೆ ಯನ್ನು ಮಾಡುತ್ತಿದ್ದನು. ಇಂತಹ ಭಕ್ತಶಿರೋಮಣಿಯೂ ಗುರುಲಿಂಗಜಂಗಮ ಪ್ರೇಮಿಯೂ ಸಮಯಾಚಾರ ನಿಷ್ಠನೂ ಆದ ಬಸವೇಶನನ್ನು ಕವಿ ಈ ರೀತಿ ಸ್ತುತಿಸಿದ್ದಾನೆ.

ಬಸವಯೆಂಬವನ ಕುಲಕೋಟಿ ಪಾವನವಹುದು
ಬಸವಯೆಂಬವನ ಚಲಪದಗಳುನ್ನತವಹುದು
ಬಸವಯೆಂಬವನ ಬಲುಮೆಗೆ ಮಲೆವ ಶತ್ರುಗಳೆಲ್ಲ ದಹನವಹರು |
ಬಸವಯ್ಯ ಬಸವಣ್ಣ ಬಸವಪ್ಪ ಬಸವರಸ
ಬಸವೇಶ ಬಸವಲಿಂಗನೆ ಬಸವರಾಜೇಂದ್ರ
ಬಸವನೇ ಗತಿಯೆಂದು ಬಸವನೇ ಮತಿಯೆಂದು ಬಸವನಂ ನೆನಹುತಿಹೆನು ||

ಇಂತಹ ಮಹಾಮಹಿಮನಾದ ಬಸವೇಶನು ವಾಸಿಸುತ್ತಿದ್ದ ಕಲ್ಯಾಣಪುರದ ಈಶಾನ್ಯಭಾಗದಲ್ಲಿ ಬೆಜ್ಜವಾಡಿಯ ಪುರವು ಸಜ್ಜನರಿಂದ ಕೂಡಿ ಶೋಭಿಸುತ್ತಿತ್ತು. ಆ ಪುರದ ಸೂಳೆಗೇರಿಯ ವಿಲಾಸವನ್ನು ಬಣ್ಣಿಸಲು ಯಾವ ಕವಿಯಿಂದಲೂ ಸಾಧ್ಯವಿಲ್ಲವಂತೆ. ಅಂತಹ ಸೂಳೆಗೇರಿಯಲ್ಲಿ ರಂಭೆಯೂರ್ವಶಿ ತಿಲೋತ್ತಮೆಗೆ ನೂರ್ಮಡಿ ತೇಜದಿಂದ ಕೂಡಿದ ಅಪೂರ್ವವೇಶಿಯಾದ ವಿಟರ ಪ್ರಾಣವಾದ ಪ್ರೌಢಾವತಿಯು ಒಂದುದಿನ ಸರ್ವಾಭರಣಭೂಷಿತೆಯಾಗಿ ಪೊಸಮಡಿಯುಟ್ಟು ಮಣಿಮಯ ಸೌಧವನ್ನೇರಿ ನೋಡುವವರ ಕಣ್ಮನಗಳನ್ನು ಸೂರೆಗೊಳ್ಳುತ್ತಿದ್ದಳು. ಇತ್ತ ಗುರು ಭಕ್ತಿಯೆ ತನಗೆ ಪ್ರಾಣವಾಗಿಯೂ ಒಡಲಾಗಿಯೂ ಆ ಪುರಕ್ಕೆ ಪ್ರಭುವಾಗಿಯೂ ವಿಭು ವಾಗಿಯೂ ಇದ್ದ ಗುರುಭಕ್ತಾಂಡಾರಿಯು ಶೂಲಿಯ ಆಲಯಕೆಂದು ಅಂದಳವನ್ನೇರಿ ಸೂಳೆ ಗೇರಿಯೊಳಗೆ ಬಂದನು. ಅಲ್ಲಿಯ ಉಪ್ಪರಿಗೆಗಳನ್ನು ನೋಡಿಕೊಂಡು ಬರುತ್ತಿದ್ದಾಗ ಪ್ರೌಢಾ ವತಿಯ ಕುಡಿತೆಂಗಂಗಳ ಮಿಂಚು ಆತನನ್ನು ಕಟ್ಟಿ ಕೆಡಹಿತು. ಮುಂದಕ್ಕೆ ಅಡಿಯಿಡಲು ಆತನಿಗೆ ಬಾರದಂತಾಯಿತು. ಶಿವಭಕ್ತನಾದ ಗುರುಭಕ್ತಾಂಡಾರಿಗೂ ಈ ವ್ಯಾಮೋಹ ತಪ್ಪಲಿಲ್ಲ. ಅದನ್ನು ಕವಿ "ಕಂದರ್ಪರಾಜನಂಡಲೆಗೆ ಸಿಲುಕದವರಾರು ಯಿಂದುಧರಗಳವಲ್ಲ ಉಳಿದ ಜಡಜೀವರನು ಕೊಂದುಕೂಗದೆ ಬಿಡುವನೇ" ಎಂದು ಹೇಳಿದ್ದಾನೆ. ಗುರುಭಕ್ತನು ಕೂಡಲೆ ತನ್ನ ದೂತರನ್ನು ಆಕೆಯ ಬಳಿಗೆ ಅಟ್ಟಿದನು. ಅವರು ಪ್ರೌಢಾವತಿಯಲ್ಲಿಗೆ ಬಂದು ತಮ್ಮ ಒಡೆಯನ ರೂಪು ಗುಣ ಶೀಲ ಸಂಪತ್ತುಗಳನ್ನು ವಿವರಿಸಿ "ಇಳೆಯೊಳಗೆ ಪ್ರತಿಗಾಣೆನಾತಂಗೆ" ಆದುದರಿಂದ ಕೂಡಲೆ ನಿನ್ನಲ್ಲಿಗೆ ಆತನನ್ನು ಬರಮಾಡಿಕೊ ಎಂದು ಹೇಳಿದರು. ಪ್ರೌಢಾವತಿಯು ಅವರ ಮಾತುಗಳನ್ನು ಗಮನಿಸದೆ ಅವರನ್ನು ಹೊರಹೊರಡಿಸಿ ಹರ್ಮ್ಯದಿಂದಿಳಿದು ನಿಜಭವನಕ್ಕೆ ಬಂದಳು. ತನ್ನ ದೂತ ರಿಂದ ಸಂಗತಿಯನ್ನು ಅರಿತ ಗುರುಭಕ್ತಾಂಡಾರಿಯ ಚಿತ್ತವೆಲ್ಲವು ಕದಡಿಹೋಗಿ ಕಂಗೆಟ್ಟು ತಾನೇ ಸ್ವತಃ ಪ್ರೌಢಾವತಿಯ ಅರಮನೆಗೆ ಬಂದನು. ಆತನನ್ನು ಕಾಣುತ್ತಲೇ ಪ್ರೌಢಾವತಿಯು ಇದಿ ರಾಗಿ ಬಂದು ಕೈಮುಗಿದು ಹೊಂಗದ್ದುಗೆಯನ್ನು ಕೊಟ್ಟು ವಿನಯದಿಂದ ಪರಿಪರಿಯಾಗಿ ಉಪ ಚರಿಸಿ ಶರಣಾರ್ತಿಯಂ ಮಾಡಿದಳು. ಆಗ ಗುರುಭಕ್ತಾಂಡಾರಿ ತನ್ನ ದೂತರನ್ನು ಹೊರ ದೂಡಿದಕ್ಕೆ ಕಾರಣವನ್ನು ಕೇಳಿದನು. ಅದಕ್ಕೆ ಆಕೆ "ನೀನು ಗುರುಭಕ್ತ ನಿಷ್ಠಾಪರನು. ನಿನ್ನವನು ತಾನಱಿಯದೊಂದನಾಡಿದರೆ ನೂಕಿಸಿದೆ ಯೇನಿದಕೆ ತಪ್ಪುಳ್ಳಡಂ ನಿಮಗೆ ಬಿನ್ನಹವ ಮಾಡಿ ಕೊಂಬೆನು. ಮಾಸಿನಿಯರಿಚ್ಛೆಯಱಿಯದೆ ನುಡಿದವನ ನೂಕಿಸಲು ಕುಂದೇನು" ಎಂದು ಉತ್ತರಕೊಟ್ಟಳು. ಅದನ್ನು ಕೇಳಿದ ಗುರುಭಕ್ತಾಂಡಾರಿ "ಗಣಿಕೆಯರ ಚಿತ್ತವಱಿದಾಡುವುದು ಲೋಕದೊಳು ಹಣವಲ್ಲದೆ ಜೇಱೆ ಮಾಳ್ಪ ನೀತಿಗಳುಂಟೆ" ಎನಲು, ಆಕೆ "ಹಣವ ಗಳಿಸುವರೆ ಸೋತವರಂತೆ ಮೇಲಱಿಯದೆಣಿಕೆಹೀನರ ಸೊಮ್ಮ ಕಪಟದಿಂ ಗಳಿಸಿಕೊಂಡುಣಬೇಕು ವುಡಬೇಕು

ತೊಡಬೇಕು ವೇಶಿಯರು ಭಕ್ತರೆಡೆಗಳುಪಬಹುದೆ" ಎಂದು ಪ್ರಶ್ನಿಸಿದಳು. ಕೊನೆಗೆ ಗುರುಭಕ್ತನು ಆಕೆಗೆ "ಮನ್ಮಥಶಾಸ್ತ್ರದೊಳಗುಳ್ಳ ಪರಿಗಳೆಲ್ಲವ ತೋಱಿ ಕೂಡಿ ದಣಿಸಿಯೆ ಬಳಿಕ ತರುಣಿ ನಿನಗೊಲಿದು ಬೇಡಿದಸೀವೆ" ಎಂದು ಹೇಳಿದನು. ಅದಕ್ಕೆ "ಆಕೆ ಸ್ವಸ್ತ್ರೀಯ ಸುರತಕೇಳಿಯ ತೊಱೆದು ಬಯಲಬಣ್ಣಕೆ ಸಿಲುಕಿ ಅಸ್ಥಿರದ ಗಣಿಕೆಯರಿಗೆಳಸಿ ಮರುಳಹರೆ? ದಾಸಿ ವೇಶಿಯ ಸಂಗ ಹೇಸಿಕೆಯ ಪಡುಗಲ್ಲವೆ?" ಎಂದು ಪ್ರಶ್ನಿಸುವಳು. ಅಲ್ಲದೆ "ಹಣವುಳ್ಳನಕ ತನುಮನ ಪ್ರಾಣಗಳನೆಯಿಕ್ಕುವರೆಂದೂ ಹಣ ತೀರ್ದ ಬಳಿಕ ಕೆಲಬಲದೊಳಾಡುವರೆಂದೂ" ಅವರನ್ನು "ನೋಡಿ ದಣಿಸುವರಾರು ನುಡಿಸಿ ದಣಿಸುವರಾರು ಕೂಡಿ ದಣಿಸುವರಾರು ಕೊಟ್ಟು ದಣಿಸುವ ರಾರು ಗಾಡಿಕಾತಿಯರಂಗ ಪೊಸತು ನಾನಾ ಚಿತ್ರ"; ಸ್ತ್ರೀವ್ಯಾಮೋಹ ಕೇವಲ ಕ್ಷಣಿಕ ವಾದುದು ಎಂದು ನಾನಾವಿಧವಾಗಿ ಹೇಳಿದಳು. ಆದರೂ—

"ಅಂಬುಜಾನನೆ ನಿನ್ನ ನಸು ನೋಟವೆಂದೆಂಬ
ಶಂಬರಾರಿಯ ಸರಳು ನೆಟ್ಟುದಾಯತೆ ನಿನ್ನ
ತಂಬುಲವನಿಕ್ಕೆ ಕಟ್ಟದ ದೂಣದೆಂದನಾ ಗುರುಭಕ್ತಚಿಂತಾಮಣಿ"

ಅದಕ್ಕೆ ಪ್ರೌಢಾವತಿ "ಹೊಲೆರಕ್ತಮೂತ್ರ ಇವುಗಳಿಂದ ಹೊಲಸುನಾರುವ ಕುಳಿಯ ಮೋಹನದ ಬೀಡೆಂದು ಭಾವಿಸುವರೆ, ಪಾಪಿಗಣಿಕೆಯರಿಗೆಳಸುವರೆ ಬಲ್ಲವರು ಶಿವಭಕ್ತಿಯುಳ್ಳವರು" ಎಂದಳು. ಅದನ್ನು ಕೇಳಿದ ಗುರುಭಕ್ತಾಂಡಾರಿ "ಎಲೆ ಗಣಿಕೆ ನೀಸೀಗ ಪೇಳ್ದ ನರಕದ ಕುಳಿಗೆ ಹೊಲಬು ಗೆಡದವರಾರು ಸುರನರೋರಗರೊಳಗೆ? ಹರಿಹರ ಬ್ರಹ್ಮಾದಿಗಳು ಕೂಡ ಅಲರುಗಣ್ಣನ ಬಾಣಕ್ಕೆ ಪಕ್ಕಾಗಲಿಲ್ಲವೆ? ಬೆಲೆವೆಣ್ಣಿಗೀ ಮಾತು ನೀತಿಯೆ" ಎಂದು ಪ್ರಶ್ನಿಸಿದನು. ಅದಕ್ಕೆ—

ಎಲ್ಲ ಜನ್ಮಂಗಳೊಳು ಹೆಣ್ಣು ಜನ್ಮವೆ ಕಷ್ಟ
ಅಲ್ಲಿ ಹುಟ್ಟಿ ವೇಶಿಯಪ್ಪುದೆ ಕರಕಷ್ಟ
ಬಲ್ಲವರು ಬಲ್ಲರಿದ ನೀವಱಿಯುದುದೆಯಿಲ್ಲಾ ಗುರುಭಕ್ತ ಚಿಂತಾಮಣಿ]
ಒಲ್ಲೆನೆಂದರೆ ಕೋಪವೊಲಿದೆನೆಂದರೆ ಪಾಪ
ಸಲ್ಲದೀ ಮಾತು ಸತ್ಕುಲದೀಪ ನಮಗೊಲಿದ
ನಲ್ಲರಿಗೆ ತಪ್ಪಿದರೆ ನಮಗೆ ನರಕದ ಕೂಪವೆಂದಳಾ ಪ್ರೌಢಾವತಿ ||

ಅಲ್ಲದೆ "ಭಿನ್ನವಿಲ್ಲದೆ ನಡೆವ ಮಡದಿಯರ ಕೈಬಿಟ್ಟು ತನ್ನವರಿಗೆಲ್ಲ ಹಗೆಯಾಗಿ ಅನ್ಯರೆಡೆಗಳುಪು ವುದು ನರಕವಲ್ಲವೆ? ಮುನ್ನ ಮಾಡಿದ ಕರ್ಮಕೆ ವೇಶಿಯಾದುದು ಸಾಲದೆ?" ಎಂದು ಪ್ರಶ್ನಿಸಿದಳು. ಪ್ರೌಢಾವತಿ ಹೇಳಿದ್ದನ್ನೆಲ್ಲ ಕೇಳಿದ ಗುರುಭಕ್ತಾಂಡಾರಿ "ಸುದತಿಯರಯಿರವನಱುವಡೆ ವೇದಶಾಸ್ತ್ರದೊಳು ಮದನಾರಿಗಳವಲ್ಲವೆಂದು ಸಾರುತಲಿದೆಕೊಯಿದಕೆ ದೃಷ್ಟನೀ ಭಕ್ತ", ಮತ್ತು "ಹದಿರು ಚದುರಟಮಟದ ಗನ್ನಗದುಕುಗಳಿಂದ ಉದರವನ್ನು ಹೊರೆವವರಿಗೀ ಮಾತು ನೀತಿಯೇ ? ಚದುರೆ ತೋಱಿಂತಹರ ತ್ರಿಜಗದೊಳಗೆ ಅಲ್ಲದೆ ದೊರೆಗಳೊಲಿದು ಬಂದರೆ ಬೇಡ ವೆಂಬುದೆಲ್ಲಕೆ ಅರಿದು ಚದುರೆ ತೋಱಿಂತಹರ ತ್ರಿಜಗದೊಳಗೆ" ಎಂದನು. ಗುರುಭಕ್ತಚಿಂತಾ ಮಣಿಯ ಮಾತಿಂಗೆ ಹರಣಕರಣ ದಣಿದು ತರಣಿ ಶಶಿಮೌಳಿಯೆನ್ನಯ ವ್ರತವ ಗೆಲಿಸೆಂದು ಶರಣೆಂದು ತಾ ಹಿಂದೆ ಸಂದ ಶರಣರ ಘನವ ಪೇಳಲುದ್ಯೋಗಿಸಿದಳು ಆ ಪ್ರೌಢಾವತಿ.

ಮೇದಿನಿಯಲ್ಲಿ ಶ್ವೇತಸಂಬ ಒಬ್ಬ ದುಷ್ಟದುರಾಚಾರಿಯಿದ್ದನು. ಆತನು ಒಮ್ಮೆ ತನ್ನ ಸೂಳೆಗೆಂದು ಕೊಯ್ದು ತರುತ್ತಿದ್ದ ಪುಷ್ಪದೊಳಗೆ ಒಂದರಳು ಬೀದಿಯೊಳಗೆ ಬೀಳಲು ಅದು ಶಿವನಿಗೆ ಎಂದನು. ಆ ಪುಷ್ಪದ ಅರಳೇ ಆತನನ್ನು ರಕ್ಷಿಸಿತು. ಶ್ವೇತನನ್ನು ಎಳೆದುಕೊಂಡು ಹೋಗುತ್ತಿದ್ದ ಯಮದೂತರನ್ನು ಭಾಳನೇತ್ರನ ಭಟರು ಬಿಡಿಸಿ ಸುರನಗರಿಗೆ ಕೊಂಡೊಯ್ದರು. ಆ ಶ್ವೇತನನ್ನು ಅನಿಮಿಷಾದಿಗಳು ಇದಿರ್ಗೊಂಡು ರಂಭೆಯ ಮನೆಗೆ ಕರೆತಂದರು. ಆಕೆ ಆತನನ್ನು ಹೊಂಗದ್ದುಗೆಯಲ್ಲಿ ಕುಳ್ಳಿರಿಸಿ ಉಪಚರಿಸಿದಳು. ಆಕೆಯನ್ನು ಕಂಡ ಕೂಡಲೆ ಶ್ವೇತನು ಕಾಮ

ಪರವಶನಾದನು. ರಂಭೆ ಆತನ ವಿಕಾರವನ್ನೆಲ್ಲ ಬಿಡಿಸಿ 'ನಿನ್ನನ್ನು ಬನ್ನಬಡಿಸಿದ ಯಮದೂತರನ್ನು ಮರೆದೆಯಾ? ಕೆಳಗೆ ಬಿದ್ದ ಒಂದರಳು ಶಿವನಿಗೆ ಎಂದುದಕ್ಕಾಗಿ ನಿನಗೆ ಇಷ್ಟು ಭಾಗ್ಯಗಳಾದುವು. ಇನ್ನು ರತಿಸಂಗ ನಿನಗೇಕೆ? ಶಿವಪೂಜೆಗೆ ಏಳು' ಎಂದು ಹೇಳಿದಳು. ಅದಕ್ಕೆ ಆತನು 'ನಿನ್ನ ಪರಿರಂಭಣದ ಸಳಿತೋಳಯಿಂಬಿನೊಳು ಪೊಕ್ಕು ಸುರತಾಂಬುಧಿಯೊಳಾಳುವನ ನಂಬಿ ನೀ ನಿರುಪಮನ ಬೆಂಬಿಡದೆ ಪೂಜಿಸೆಂಬುದು ನಿನಗುಚಿತವೆ? ಅಲ್ಲದೆ ಶತಯಾಗವನು ಮಾಡಿದರು ನಿನ್ನಂಗುಟದ ತುದಿಯನು ಕಾಣರುಯೆಂದು ಸಕಲ ಶಾಸ್ತ್ರಂಗಳೆಲ್ಲ ಸಾರುತಿವೆಕೋ ಕೇಳೆನ್ನ ಪುಣ್ಯಕ್ಕೆ ಕಡೆಯಿಲ್ಲ ನಿನ್ನ ಸಂಗಸುಖವನು ಬಿಟ್ಟು ಬೇರೊಂದು ಕಡೆಗೆ ಮನವಂಗೈಸುವರೆ' ಎಂದು ಪ್ರಶ್ನಿಸಿದನು. ಅದನ್ನು ಕೇಳಿದ ರಂಭೆ 'ನೆಲಕೆ ಬಿದ್ದೊಂದು ಪುಷ್ಪದ ಫಲಕೆ ಇನಿತಾಯ್ತು ಹಲವು ಪುಷ್ಪವ ತಂದು ಷೋಡಶುಪಚಾರದಿಂದೊಲಿದು ಶಿವಪೂಜೆಯನು ಮಾಡಿದರೆ ನನ್ನಂತೆ ಕೋಟಿರಂಭೆಯರು ನಿನಗೆ ನೆಲೆವೆಂಡಿರಾಗರೇ? ಅಲರಂಬ ಕೇಳಿಯೊಳಗಿರ್ದು ಮರುದಿವಸಕ್ಕೆ ನಲಿ ನರಕದಲಿ ಬೀಳ್ವುದುಚಿತವೇ ಹೇಳು?' ಎಂದಳು. ಶ್ವೇತನು 'ಸ್ಥಿರಕಾಲ ಘಟ್ಟಬೆಟ್ಟಗಳಲಿರ್ದೇನು ಫಲವರಗಳಿಗೆ ಬಾಳ್ದಡಂ ಕಾಮಕೇಳಿಯೊಳಿಹುದೆ ಪರಮಪದ; ತರುಣಿ ನಿನ್ನಯ ಸಂಗದೊಳಗೊಂದು ನಿಮಿಷವಿರೆ ಶತಯಾಗಫಲವಲ್ಲವೇ?" ಎಂದನು. ಮತ್ತೆ 'ಇಂದು ನಿನ್ನೊಡನಿಹುದೆ ಸಾಕು' ಎನ್ನಲು ರಂಭೆ 'ಕಡುಚೆನ್ನ ನಿನ್ನ ಎನ್ನ ಸಳಿತೋಳಮೇಲಿರ್ದವನ ಯಮದೂತಕುನ್ನಿಗಳು ಬೆಳಗಾಯಿತೇಳೆಂದು ಪಿಡಿಕೊಂಡು ಬನ್ನಬಡಿಸುವುದನಾ ನೋಡಲಾಪೆನೆ' ಎಂದಳು. ಆಗ ಶ್ವೇತನಿಗೆ ಜ್ಞಾನೋದಯವಾಗಿ 'ತ್ರಿಣಯನಂ ಹರಿಯಜಸುರಾರ್ಚಿತನಸಂಖ್ಯಾತ ಗುಣವಂದ್ಯನಂ ಪೂಜೆಯಂ ಮಾಳ್ಪೆ' ಎನ್ನಲು ಆ ಕ್ಷಣದೊಳಗೆ ರಂಭೆ ಆತನನ್ನು ಶಿವಪೂಜೆಯಂ ಮಾಡುವ ಮಂಟಪಕೆ ಕೊಂಡೊಯ್ದಳು. ಆತನ ಪೂಜೆಗೆ ಸಕಲ ಸಿದ್ಧತೆಗಳನ್ನೂ ಮಾಡಿಕೊಟ್ಟಳು. ಆತನು ಶಶಿಮೌಳಿಯಂ ಬಿಜಯಂಗೈಸಿ ಕಂಗಳೊಳೊತ್ತಿ ಅಗ್ಘವಣಿಯನೆರೆದು ಗಂಧಾಕ್ಷತೆಯೊಳರ್ಚಿಸುತ ಧೂಪದೀಪಾರತಿಯ ಬೆಳಗುತ್ತ ಷೋಡಶೋಪಚಾರವನು ಮಾಡಿ —

ಮೃತ್ಯುಂಜಯನೆ ಜಯತು ಕೃತ್ತಿವಾಸನೆ ಜಯತು
ನಿತ್ಯ ನಿರ್ಮಲ ಜಯತು ಭಕ್ತವತ್ಸಲ ಜಯತು
ಸತ್ಯ ಸದ್ಗುಣ ಜಯತು ಚಿತ್ತಜಾರಿಯೆ ಜಯತು ಕರ್ತೃಜಗದೀಶ ಜಯತು |
ಅತ್ಯತಿಷ್ಠದ್ದಶಾಂಗುಲ ರುದ್ರಕನ್ನೆಯರು
ನೃತ್ಯಗಾನಪ್ರಿಯ ಗೌರೀಶ ಗಿರಿಜೇಶ
ಕಾತ್ಯಾಯನೀ ರಮಣ ಕರುಣಿ ಸಲಹು

ಎಂದು ಸ್ತೋತ್ರ ಮಾಡುತ್ತಿದ್ದನು. ಲಿಂಗದಲ್ಲಿಯೇ ನೆಟ್ಟದೃಷ್ಟಿಯುಳ್ಳವನಾಗಿ ತನ್ಮನಗಳು ಕರಿಗೊಂಡು ಕರುವಿಟ್ಟೆರಕದ ಪುತ್ತಳಿಯಂತೆ ಬೆಳಗಾಹತನಕ ನಿಂತನು. ಬೆಳಗಾಗುತ್ತಲೆ ಯಮದೂತರು ಬಂದು ಅಬ್ಬರಿಸಿ ಬೊಬ್ಬಿಡಲು ಆ ಶ್ವೇತನರ್ಚಿಸಿದ ಪುಷ್ಪದಲೊಂದು ಕುಸುಮ ಪ್ರಳಯಕಾಲದ ಕೋಟಿ ಸಿಡಿಲಂತೆ ಘರ್ಜಿಸುತ್ತ ಅವರನ್ನೆಲ್ಲ ತೊತ್ತಳದುಳಿದು ಕೊಂದು ಉರುಪಿ ಕಳೆಯಿತು. ಹೀಗೆ ಗಣಿಕೆ ರಂಭೆಯ ಕರುಣದಿಂದ ಶ್ವೇತ ಪುರುಹೂತರಿಗೆ ಮಿಗಿಲಾದ ಅಷ್ಟಭೋಗಗಳನ್ನು ಪಡೆದನು ಎಂದು ಪ್ರೌಢಾವತಿ ಗುರುಭಕ್ತನಿಗೆ ತಿಳಿಸಿ ಆಮೇಲೆ ಮಲುಹಣನ ಕಥೆಯನ್ನು ಹೇಳತೊಡಗಿದಳು.

ಭಾರತಿಯ ಪುರದ ಸುವರ್ಣಭಟ್ಟನ ಮಗನಾದ ಮಲುಹಣನು ಒಂದುದಿನ ವಿಜಯೇಶ್ವರ ದೇವಾಲಯವನ್ನು ಹೊಕ್ಕು ಶರಣುಮಾಡುತ್ತಿದ್ದಾಗ ಮಲುಹಣಿಯೆಂಬುವಳು ನಲಿದಾಡುತ್ತ ತೊಲೆದಾಡುತ್ತ ಸುಶ್ರಾವ್ಯವಾಗಿ ಹಾಡುತ್ತ ನಟಿಸುತ್ತ ಆ ದೇವಾಲಯವನ್ನು ಹೊಕ್ಕಳು. ಆಕೆಯ ಹಾವಭಾವ ವಿಲಾಸ ವಿಭ್ರಮ ರೂಪಲಾವಣ್ಯಗಳನ್ನು ಮಲುಹಣನು ಕಂಡು ಮನಸೋತನು. ಮಲುಹಣನನ್ನು ಕಂಡು ಆಕೆಯೂ ಮನಸೋತಳು. ಅವರಿಬ್ಬರ ನೋಟಗಳು

ಒಂದಾದುವು. ಅವರ ಮನೋಭಾವಗಳು ಕೂಡಿ ಕರಗಿ ನೀರಾಗಿ ಹರಿದುವು. ಮಲುಹಣೆಯು ಅಂಗಭವನ ಅರಮನೆಯಂತೆ ಶೋಭಿಸುತ್ತಿದ್ದ ತನ್ನ ದಿವ್ಯಗೃಹಕ್ಕೆ ಆತನನ್ನು ಕರೆದೊಯ್ದಳು. ಅವರಿಬ್ಬರೂ ಅಷ್ಟಭೋಗಗಳನ್ನು ಅನುಭವಿಸುತ್ತ ರತಿಸುಖಾನಂದದಿಂದ ಪರಮಯೋಗಿಗಳಂತೆ ರಾರಾಜಿಸುತ್ತಿದ್ದರು. ಪ್ರತಿನಿತ್ಯವೂ ಅವರು ವನಕೇಳಿ ಜಲಕೇಳಿಯನ್ನಾಡುತ್ತ ತರುವಾಯ ವಿವಿಧ ಪುಷ್ಪಗಳಿಂದ ವಿಜಯೇಶ್ವರನನ್ನು ಪೂಜಿಸುತ್ತಿದ್ದರು.

ಮಲುಹಣೆಯ ತಾಯಿಯು ದಿನನಿತ್ಯವೂ ತನ್ನ ಮಗಳಿಗೆ ಒತ್ತೆಯಾಗಿ ಸಾವಿರ ಹೊನ್ನುಗಳನ್ನು ಮಲುಹಣನಿಂದ ಪಡೆಯುತ್ತಿದ್ದಳು. ಮಲುಹಣನ ಧನವೆಲ್ಲ ಸವೆಯುತ್ತ ಬಂದರೂ ಆತನಿಗೆ ಮಲುಹಣೆಯ ಮೇಲಿನ ವ್ಯಾಮೋಹ ಮಾತ್ರ ತಗ್ಗಲಿಲ್ಲ. ಅದನ್ನರಿತ ಮಲುಹಣೆಯ ತಾಯಿ ಧನವಿಹೀನನಾದ ಮಲುಹಣನನ್ನು ಉಪಾಯಾಂತರದಿಂದ ಹೊರ ಹೊರಡಿಸಿ ತನ್ನ ಮಗಳ ಮೇಲೆ ಬಲವಾದ ಕಾವಲನ್ನು ಇಡಿಸಿದಳು. ಮಲುಹಣನ ಅಗಲಿಕೆಯನ್ನು ಸಹಿಸಲಾರದ ಮಲುಹಣಿ ನಾನಾ ಪರಿಯಾಗಿ ಅತ್ತು ಗೋಳಾಡಿ ತನ್ನ ಪ್ರಿಯತಮನನ್ನು ಮತ್ತೆ ಕರೆಸುವಂತೆ ಹಲವಂಗದಲ್ಲಿ ತಾಯಿಯನ್ನು ಬೇಡಿಕೊಂಡಳು. ಕೊನೆಗೆ ಆತನನ್ನು ಅರಸಿಕೊಂಡು ತಾನೇ ವಿಜಯೇಶ್ವರನ ಗುಡಿಗೆ ಬಂದಳು. ಅಲ್ಲಿಯೂ ಮಲುಹಣನನ್ನು ಕಾಣದೆ ಮೂರ್ಛೆಹೋದಳು. ಆಕೆಯ ಸಖಿಯರು ಆಕೆಯನ್ನು ಮನೆಗೆ ಕರೆದೊಯ್ದು ಉಪಚರಿಸಿದರು. ಮಲುಹಣನ ಅಗಲಿಕೆ ಮಲುಹಣಿಗೆ ಭರಿಸಲಸಾಧ್ಯವಾಗಿತ್ತು. ಅತ್ತ ಮಲುಹಣನ ಪರಿಸ್ಥಿತಿಯೂ ದಾರುಣವಾಗಿತ್ತು. ಆತನು ಮಲುಹಣೆಯ ತಾಯಿಯ ಹೆದರಿಕೆಯಿಂದ ಅತ್ತ ಸುಳಿಯದಿದ್ದರೂ ಆತನ ತನುಮನಗಳೆಲ್ಲ ಮಲುಹಣಿಯಲ್ಲಿಯೇ ನೆಟ್ಟುಹೋಗಿದ್ದುವು. ಒಂದುದಿನ ರಾತ್ರಿ ಕತ್ತಲೆಯಲ್ಲಿ ಒಬ್ಬನೇ ಮಲುಹಣೆಯ ಮನೆಯಬಳಿ ಬಂದು ಮೆಲ್ಲನೆ ಆಕೆಯನ್ನು ಕರೆದನು. ಅದನ್ನು ಕೇಳಿದ ಮಲುಹಣಿಯ ಸಖಿಯರು ಆಕೆಗೆ ಸುದ್ದಿಯನ್ನು ಮುಟ್ಟಿಸಿದರು. ಮಲುಹಣನು ಬಂದಿರುವ ಸುದ್ದಿಯನ್ನು ಕೇಳಿದಕೂಡಲೇ ಆಕೆಯ ವಿರಹತಾಪ ಒಮ್ಮೆಗೇ ಹಿಂದುಹೋಗಿ ಆಕೆ ಓಡಿಬಂದು ಮಲುಹಣನನ್ನು ಅಪ್ಪಿಕೊಂಡಳು. ತನ್ನ ತಾಯಿ ಮಾಡಿದ ಅಕೃತ್ಯಕ್ಕಾಗಿ ಮರುಗಿ ಇನ್ನು ತಮ್ಮನ್ನು ಕಾಪಾಡುವವನು ಮುಕ್ಕಣ್ಣನಲ್ಲದೆ ಮತ್ತಾರೂ ಇಲ್ಲವೆಂದೂ ಕೂಡಲೇ ಆತನನ್ನು ಭಜಿಸು ನಡೆ ಎಂದು ನಂಬಿಯಣ್ಣನ ವೃತ್ತಾಂತವನ್ನು ಹೇಳಿದಳು. ಆಕೆ ಹೇಳಿದ ಮಾತುಗಳು ಆತನ ಸರ್ವಾಂಗವನ್ನು ಭೇದಿಸಿ ಶಂಬರಾರಿಯ ತಾಪವೆಲ್ಲವನು ಪೊರಮಡಿಸಿತು. ಶಂಭುಭಾವವೆ ಆತನ ತನುವನಾವರಿಸಿತು. ಆತನು ಮಲುಹಣಿಯನ್ನು ಅಪ್ಪಿಕೊಂಡು ಬೀಳ್ಕೊಟ್ಟನು. ಮಲುಹಣಿಯು ವಿಜಯೇಶ್ವರನ ದೇವಾಲಯಕ್ಕೆ ಪೂಜೆಗಾಗಿ ಬಂದಳು. ಅತ್ತ ಮಲುಹಣನೂ ಅಲ್ಲಿಗೆ ಬಂದು ಮಲುಹಣಿಯನ್ನು ಕೂಡಿಕೊಂಡು ಮೂವತ್ತಾರು ಶ್ಲೋಕಗಳಿಂದ ಕಾತ್ಯಾಯಿನೀ ರಮಣನಾದ ಗಿರಿಜೇಶನನ್ನು ಸ್ತುತಿಸಿದನು. ಆಗ ವಿಜಯೇಶ್ವರನು ಪ್ರತ್ಯಕ್ಷನಾಗಿ ಮಲುಹಣನು ಬೇಡಿದುದನೆಲ್ಲ ಪಾಲಿಸಿ ಅವರಿಬ್ಬರನ್ನೂ ತನ್ನ ಪಾದದೆಡೆಯಲ್ಲಿ ಸೇರಿಸಿಕೊಂಡನು.

ಇದಾದಮೇಲೆ ಪ್ರೌಢಾವತಿಯು ಗುರುಭಕ್ತಾಂಡಾರಿಗೆ ಕುಮಾರಪಾಲ ಗುರ್ಜರನೆಂಬ ಶರಣನ ಪವಾಡವನ್ನು ಹೇಳಲು ಪ್ರಾರಂಭಿಸಿದಳು. ಕುಮಾರಪಾಲ ಗುರ್ಜರನೆಂಬುವನು ರಾಜ್ಯಭಾರವನ್ನು ಮಾಡುತ್ತಿದ್ದನು. ಆತನ ಹೆಂಡತಿ ರತಿಗಿಂತಲೂ ಚೆಲುವೆ, ಪರಮ ಪತಿವ್ರತೆ, ಸುಗುಣಯುತೆ, ಪುಣ್ಯಾವರಚರಿತೆ. ಆಕೆ ಒಂದುದಿನ ತನ್ನ ಚಿತ್ತವಲ್ಲಭನೊಡನೆ ಕರಣಗಳ ಕೂಡಿ ಜೂಜಾಡಿ ನೆತ್ತವಲಗೆಯೊಳು ಚಿತ್ರಪತ್ರದ ಕರು ಥಾಳಿಸಿಯೆ ಹಾಕಿದಳು. ಈರೈದು ಜಿದ್ದಿಹ ಪರಗಳೆರಡಂ ಗೆದ್ದ ನಾರಿ ಭದ್ರೆಯು ಹಾಕಿ ಮೂರು ಗುಣಮಂ ಗೆದ್ದಳ್. ಆ ರಾಜನು ತ್ರಿಪಂಚಕದುಗವನಾಡಿ ನಾಲ್ಕು ಕರಣವ ಗೆದ್ದನು. ಇಂತು ಆ ದಂಪತಿಗಳು ಅರ್ತಿಯಿಂದ ನೆತ್ತವಾಡುತ್ತಿರಲು ಸೌರಾಷ್ಟ್ರಪತಿ ಓಹಿಲದೇವನು ಅಭವಗರ್ಪಿಸಿದ ಧೂಪದ ಹೊಗೆಯೊಳೊರ್ವನೆಯಂತೆ ಕಾರಿಯಪುರಕೆ ಹೋಗುತಿರೆ ಕಂಡು ಆ ನೃಪತಿಗೆ ಮುಗುಳುನಗೆ ಮೊಳೆತುದು. ಅದನ್ನು ಕಂಡ ಆತನ ಪತ್ನಿ ಬಾಡಿದೆಳಲತೆಯಂತೆ ಕಂಗಳಲ್ಲಿ ನೀರನ್ನು ಸುರಿಸಿದಳು. ಆಟವನ್ನು ನಿಲ್ಲಿಸಿದಳು. ಗುರ್ಜರನು

ಆಕೆಯನ್ನು ಮುದ್ದಾಡಿ ಆಕೆಯ ವ್ಯಸನಕ್ಕೆ ಕಾರಣವನ್ನು ಕೇಳಿದನು. 'ನಾವಿಬ್ಬರೇ ಇರುವ ಈ ಸೌಧದಲ್ಲಿ ಏನು ಕೊರತೆಯನ್ನು ಕಂಡೆ' ಎಂದು ಆಕೆಯನ್ನು ಕೇಳಿದನು. ಅದಕ್ಕೆ ಆಕೆ 'ಹಾಸಿಯನು ಹೊತ್ತು ನಾನೆಂತು ಜೀವಿಪೆನು' ಎಂದು ಕೋಪದಿಂದ ನುಡಿದಳು. ಗುರ್ಜರನು ಆಕೆಯನ್ನು ಸಮಾಧಾನಪಡಿಸಿ ಓಹಿಲಯ್ಯನು ದೇಸಿಗನಂತೆ ಒಬ್ಬನೇ ಕೈಲಾಸಕ್ಕೆ ಹೋಗುತ್ತಿದ್ದುದನ್ನು ನೋಡಿ ನನಗೆ ನಗೆ ಬಂದಿತು ಎಂದು ಆತನನ್ನು ತೋರಿಸಿದನು. ಓಹಿಲಯ್ಯನನ್ನು ನೋಡಿದ ಆಕೆ ಸಾಷ್ಟಾಂಗ ಪ್ರಣಾಮಮಾಡಿ ಆ ಶಿವಶರಣನ ನಿಂದೆಯನ್ನು ತನ್ನ ಪತಿ ಮಾಡಿದ್ದನ್ನು ಕೇಳಿ ಕಿವಿಯನ್ನು ಮುಚ್ಚಿಕೊಂಡಳು. ಶರಣನಿಂದೆಯನ್ನು ಕೇಳಿದ ತಾನು ಉಳಿಯಲಾರೆನೆಂದು ತಿಳಿಸಿದಳು. ಅದಕ್ಕೆ ಗುರ್ಜರನು ಕಲಿಯಾರು, ಗಣದಾಸಿವೀರಯ್ಯ, ಸಾಮವೇದಿ, ಶ್ವಪಚಯ್ಯ, ಮಳೆಯರಾಜ, ಮಾನಕಂಜಾರ, ಜ್ಞಾನಸಂಬಂಧಿ, ಚೇರಮ, ನಂಬಿ, ಕಲಿಕಾಮ ಮೊದಲಾದ ಶಿವಶರಣರ ದೃಷ್ಟಾಂತವನ್ನು ಆಕೆಗೆ ತಿಳಿಸಲು 'ನಂದ ಶರಣರ ಘನವ ನೀವೀಗ ಪೇಳಿದಿರಿ, ನೀವೆಂದು ಬಿಜಯಮಾಡುವಿರಿ ನಿಮ್ಮ ಪುರಜನ ಸಹಿತ' ಎನಲು 'ಇಂದಿಗೇಳನೆಯ ದಿನಕೆ' ಎಂದನು. ಅದರಂತೆ ಅಂದಿನಿಂದ ಏಳನೆಯ ದಿನಕ್ಕೆ ಸರಿಯಾಗಿ ತನ್ನ ಪರಿವಾರ ಸಹಿತ ಕೈಲಾಸವನ್ನು ಪ್ರವೇಶಿಸಿದನು. ಗುರ್ಜರನು ತನ್ನ ಸತಿಗೆ ಕೈಲಾಸದ ವಿವಿಧ ವಿಷಯಗಳನ್ನೆಲ್ಲ ವಿವರಿಸಿ ಹೇಳುತ್ತಾ ಗಿರಿಜೇಶನ ಆಸ್ಥಾನವನ್ನು ತೋರಿಸಿದನು. ಅದನ್ನೆಲ್ಲ ನೋಡಿದ ಆಕೆ ತಾನು ಅವಿವೇಕದಿಂದ ವರ್ತಿಸಿದ್ದಕ್ಕಾಗಿ ತನ್ನನ್ನು ಕ್ಷಮಿಸುವಂತೆ ಪರಿಪರಿಯಾಗಿ ತನ್ನ ಪತಿಯನ್ನು ಪ್ರಾರ್ಥಿಸಿಕೊಂಡಳು. ಅದಕ್ಕೆ ಗುರ್ಜರನು 'ನಿನ್ನಿಂದ ನಾನು ಈ ಕೈಲಾಸವನ್ನು ಹೊಕ್ಕುದಾಯಿತು. ಆದುದರಿಂದ ನೀನೇ ನನಗೆ ಪರಮ ಗುರುವಾದೆ ಅಂಜಬೇಡ' ಎಂದು ಸಮಾಧಾನಪಡಿಸಿದನು. ತರುವಾಯ ಅವರಿಬ್ಬರೂ ಶಿವನಾಮ ಸಂಕೀರ್ತನೆಮಾಡುತ್ತ ಶಿವನ ಪಾದದಲ್ಲಿ ಕೆಡೆದರು. ಪಾರ್ವತಿಪರಮೇಶ್ವರರು ಅವರನ್ನು ಮೇಲೆತ್ತಿ ಮೈದಡವಿ ಅವರಿಗೆ ಸಾಲೋಕ್ಯ ಪದವಿಯನ್ನು ಕೊಟ್ಟರು. ಹೀಗೆ ತರುಣಿಯರ ಮಾತನ್ನು ಮೀರದೆ ಶ್ವೇತ, ಮಲುಹಣ, ಗುರ್ಜರ ಇವರು ಭೂತೇಶನಡಿಯ ಸೇರಿದರು. ಆದುದರಿಂದ ನನ್ನ ಮಾತನ್ನು ಮೀರದೆ ಶಿವಪೂಜೆಮಾಡು ಎಂದಳು. ಪ್ರೌಢಾವತಿ ಇಷ್ಟು ಪರಿಯಲ್ಲಿ ಹೇಳಿದರೂ ಆತನ ಕಂದರ್ಪತಾಪ ಕಡಿಮೆಯಾಗದೆ ಇಮ್ಮಡಿಸಲು ಆತನು ತವಕದಿಂದ ಹೋಗಿ ಆಕೆಯ ಸಿರಿಯನ್ನು ಹಿಡಿದುಕೊಂಡನು. ಆಗ ಪ್ರೌಢಾವತಿ ನಡುಗಿ ಹಮ್ಮೈಸಿ 'ಹಿಂದೆ ಗುರು ಪೇಳ್ದ ಸೂಚನೆ ತನಗೆ ತಾನೆಯದೆ' ಎಂದು ಹೇಳಿದಳು. 'ಗುರು ಮುಟ್ಟಿದನು' ಎಂದು ಪ್ರೌಢಾವತಿ ಹೇಳಿದ್ದನ್ನು ಕೇಳಿ ಗುರುಭಕ್ತನು ಎರಡು ಕಿವಿಗಳನ್ನು ಮುಚ್ಚಿಕೊಂಡು ಗುರುವೇ ಗುರುವೇ ಎಂದು ಕೂಗಿಕೊಂಡು ಅಲ್ಲಿಂದ ಪುರದಲ್ಲಿ ಅರಣ್ಯದಲ್ಲಿ ತೊಳಲಾಡಿದನು. ತನ್ನ ಗುರು ಮುಟ್ಟಿದವಳನ್ನು ನೋಡಿದ್ದಕ್ಕಾಗಿ ತನ್ನ ಕಣ್ಣುಗಳೆರಡನ್ನೂ ತೆಗೆದು ಬಿಸಾಟನು. ಆಕೆಯೊಡನೆ ವಿಕಾರವಾಗಿ ಆಡಿದ್ದಕ್ಕಾಗಿ ನಾಲಗೆಯನ್ನು ಕಿತ್ತು ಬಿಸಾಡಿದನು. ಆಕೆಯ ಮನೆಗೆ ಹೋದುದಕ್ಕಾಗಿ ಕಾಲುಗಳನ್ನು ಕತ್ತರಿಸಿಕೊಂಡು ಆಮೇಲೆ ಕತ್ತಿಯಿಂದ ಕೊರಳನ್ನೇ ಕತ್ತರಿಸಿಕೊಳ್ಳಲು ಸಿದ್ಧನಾದನು. ಆಗ ಅಭವನು ಅಂಬಿಕೆ ಸಹಿತ ಪ್ರತ್ಯಕ್ಷನಾಗಿ ಗುರುಭಕ್ತನನ್ನೂ ಆತನ ಗುರುವನ್ನೂ ಪ್ರೌಢಾವತಿಯನ್ನೂ ತನ್ನ ಪುರಕ್ಕೆ ಕರೆದೊಯ್ದು ಗಣಪದವಿಯನ್ನಿತ್ತನು. ತನ್ನ ಕಾವ್ಯದ ಕೊನೆಯಲ್ಲಿ ಕವಿ—

ಈ ಮೂಱು ಸಂಧಿಯನು ಹೇಳಿದರೆ ಕೇಳಿದರೆ
ಸಾಮಗಾನದೊಳೋದಿ ಬರೆದು ಆದರಿಸಿದರೆ
ಶ್ರೀಮಹಾದೇವನೊಲಿವನು ತಪ್ಪದಿದು ಸತ್ಯವೆಂದು ಪಾಲ್ಕುಱಿಕೆಯ |
ಸೋಮೇಶ್ವರನು ಪೇಳ್ದ ಕೃತಿಯ ಕನ್ನಡಿಸೆಂದು
ಪ್ರೇಮದಿಂದೊಲಿದು ಬಸವಣ್ಣ ಮತಿಯಂ ಕೊಡಲು
ಭೂಮಿಯೊಳು ಪ್ರಾಸಭೂಷಣ ಪೇಳ್ದನೀ ಕೃತಿಯ ಶರಣರಾಲಿಸಿ ಪಾಲಿಸಿ ||

ಎಂದು ಹೇಳಿಕೊಂಡಿದ್ದಾನೆ.

ಪೆಮ್ಮಿ ಸೆಟ್ಟಿ ಗುರುಭಕ್ತಾಂಡಾರ ಚರಿತೆಯನ್ನು ಬಿಟ್ಟು ಮತ್ತಾವ ಕೃತಿಯನ್ನೂ ಬರೆದಂತೆ ಕಂಡುಬಂದಿಲ್ಲ. ಈತನು ವೀರಶೈವಕವಿ. ಮರುಳುಸಿದ್ಧೇಶನ ಕರಜಾತ. ಈತನಿಗೆ ಪ್ರಾಸಭೂಷಣ ಎಂಬ ಬಿರುದುಂಟು. ಅದರಂತೆ ಆತನ ಗ್ರಂಥವು ಪ್ರಾಸಭರಿತವಾಗಿದೆ. ಪಾಲ್ಕುರಿಕೆ ಸೋಮೇಶ್ವರನು ಆಂಧ್ರಭಾಷೆಯಲ್ಲಿ ಬರೆದಿರುವ ಗುರುಭಕ್ತಾಂಡಾರಿ ಚರಿತ್ರೆಯನ್ನು ಕನ್ನಡಿಸು ಎಂದು ಬಸವಣ್ಣ ಸೆಸಹಿಸೊಳ್ ಭಸಿತವನಿಟ್ಟು ಮತಿಗೊಡಲು ತಾನು ಈ ಕೃತಿಯನ್ನು ಬರೆದುದಾಗಿ ಹೇಳಿಕೊಂಡಿದ್ದಾನೆ. ಪೆಮ್ಮಿ ಸೆಟ್ಟಿಯ ಈ ಅಪ್ರಕಟಿತ ರಸಭರಿತವಾದ ಕಾವ್ಯ ಅಚಿರದಲ್ಲೇ ಹೊರಬಂದು ಸಹೃದಯರ ಹೃದಯವನ್ನು ಸೂರೆಗೊಳ್ಳಲಿ ಎಂದು ಆಶಿಸುತ್ತೇನೆ.

ಎನ್. ಬಸವಾರಾಧ್ಯ

# ಖಡಿಯಾ ವರ್ಣಸಮಾಮ್ನಾಯ

## ೧. ಪೀಠಿಕೆ

**೧.೧.** ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರು ನನಗೆ ನಾಲ್ಕು ವರ್ಷಗಳ ಕಾಲ ಕನ್ನಡ ಅಧ್ಯಾಪಕರಾಗಿದ್ದರು ತರಗತಿಯಲ್ಲೂ ತರಗತಿಯ ಹೊರಗೂ ಅವರಿಂದ ನಾನು ಕಲಿತ ವಿಷಯಗಳು ಅನೇಕ. ಅವರು ನನಗೆ ಪಾಠ ಹೇಳಿದ ಅನೇಕ ವಿಷಯಗಳಲ್ಲಿ 'ಶಬ್ದಮಣಿದರ್ಪಣ'ವೂ ಒಂದಾಗಿತ್ತು. ವ್ಯಾಕರಣದಲ್ಲೂ ಭಾಷಾವಿಜ್ಞಾನದಲ್ಲೂ ನನಗೇನಾದರೂ ಅಲ್ಪಸ್ವಲ್ಪ ಆಸಕ್ತಿ ತೋರಿದ್ದೇ ಆದರೆ, ಅದು ಅವರ ಕೃಪೆಯಿಂದಲೇ. ಅವರ ಶಿಷ್ಯರೂ ಮಿತ್ರರೂ ಸೇರಿ ಅವರನ್ನು ಸನ್ಮಾನಿಸುವ ಈ ವಿಶೇಷ ಸಂದರ್ಭದಲ್ಲಿ, ನನ್ನದೂ ಒಂದು ಅಲ್ಪಕಾಣಿಕೆಯನ್ನು ಸಲ್ಲಿಸಲು ಅವಕಾಶ ಮಾಡಿಕೊಟ್ಟಿರುವ ಕಾರ್ಯಕರ್ತರಿಗೆ ನನ್ನ ವಂದನೆಗಳು. ಗುರುವರ್ಯ ಶ್ರೀ ಡಿ. ಎಲ್. ಎನ್. ಅವರಿಗೆ ನಮಸ್ಕಾರವನ್ನು ಸಲ್ಲಿಸಿ ಈ ಲೇಖನವನ್ನು ಮೊದಲು ಮಾಡುತ್ತೇನೆ.

**೧.೨.** ಖಡಿಯಾ ಭಾಷೆಯ ವರ್ಣಗಳನ್ನು ಆಧುನಿಕ ಭಾಷವಿಜ್ಞಾನದ ತತ್ತ್ವಗಳಿಗನುಗುಣವಾಗಿ ವಿವರಿಸುವುದೇ ಈ ಲೇಖನದ ಉದ್ದೇಶ. ಈ ಲೇಖನದಲ್ಲಿ ಕಂಡುಬರುವ ಅನೇಕ ಪಾರಿಭಾಷಿಕ ಪದಗಳು ಸಂಸ್ಕೃತಜ್ಞರಿಗೆ ಸುಪರಿಚಿತವೇ. ಆದರೆ ಕೆಲವೆಡೆಗಳಲ್ಲಿ, ಪ್ರಾಚೀನ ಶಿಕ್ಷಾಶಾಸ್ತ್ರದ ಪಾರಿಭಾಷಿಕಪದಗಳನ್ನೇ ಬಳಸಿದ್ದರೂ, ಅವುಗಳ ಮೂಲಾರ್ಥಕ್ಕೂ ಆಧುನಿಕ ಭಾಷಾವಿಜ್ಞಾನಕ್ಕನುಗುಣವಾಗಿ ಅವುಗಳನ್ನು ನಾನು ಬಳಸಿರುವ ಅರ್ಥಕ್ಕೂ ಸಾಮಂಜಸ್ಯ ತೋರದಿರಬಹುದು. ಉಚಿತವೆಂದು ಕಂಡುಬಂದ ಪದಗಳನ್ನು ಆರಿಸಿಕೊಂಡು ಅವುಗಳ ಅರ್ಥವ್ಯಾಪ್ತಿಯನ್ನು ನಿಷ್ಕರ್ಷೆಮಾಡಿ ಪ್ರಯೋಗಿಸುವುದು ವಿಜ್ಞಾನದ ಬರಹಗಳಲ್ಲಿ ಕಂಡುಬರುವಂತಹದೇ. ನಾನೂ ಅದೇ ಪದ್ಧತಿಯನ್ನು ಅನುಸರಿಸಿದ್ದೇನೆ.

**೧.೩.** ಖಡಿಯಾ ಮುಂಡವರ್ಗಕ್ಕೆ ಸೇರಿದ ಆದಿವಾಸಿ ಭಾಷೆ. ಇದನ್ನಾಡುವವರ ಸಂಖ್ಯೆ ಸುಮಾರು ಎರಡು ಲಕ್ಷ. ಈ ಭಾಷೆ ಉತ್ತರಪ್ರದೇಶದ ಕೆಲವು ಭಾಗಗಳಲ್ಲಿ ಪ್ರಚುರವಾಗಿದೆ. ಪ್ರಕೃತ, ಈ ಲೇಖನದಲ್ಲ ವಿವರಿಸಿರುವ ಖಡಿಯಾ ವರ್ಣಗಳಿಗೆ ಶ್ರೀಮಾನ್ ಪಿ.ಸಿ. ಕೆರ್‌ಕೆಟಾ ಎಂಬವರ ಉಚ್ಚಾರಣೆಯನ್ನೇ ಆಧಾರವಾಗಿಟ್ಟುಕೊಂಡಿದ್ದೇನೆ. ಇವರು ರಾಂಚಿಗೆ ಸುಮಾರು ನೂರು ಮೈಲಿ ದೂರದಲ್ಲಿರುವ ಮುರ್ಯಾಡಿಹ್ ಎಂಬ ಗ್ರಾಮದವರು. ನಾನು ಕೇಳಿದ ಪ್ರಶ್ನೆಗಳಿಗೆಲ್ಲಾ ತಾಳ್ಮೆಯಿಂದ ಉತ್ತರಕೊಟ್ಟು ಸಹಕರಿಸಿದ ಇವರಿಗೆ ನಾನು ಎಷ್ಟು ಋಣಿಯಾಗಿದ್ದರೂ ಸಾಲದು.[1]

**೧.೪.** ಖಡಿಯಾ ಭಾಷೆಯ ವ್ಯಾಕರಣದ ವಿಷಯವಾಗಿ ಇದುವರೆಗೂ ಪ್ರಕಟ

---

[1] ಈ ಸಂದರ್ಭದಲ್ಲಿ, ಖಡಿಯಾ ಭಾಷೆಯ ಮೇಲೆ ಸಂಶೋಧನೆ ನಡೆಸಲು ಅವಕಾಶ ಮಾಡಿಕೊಟ್ಟ ಡೆಕ್ಕನ್ ಕಾಲೇಜಿನ ಅಧಿಕಾರಿಗಳು ನೀಡಿದ ಸಹಕಾರವನ್ನು ಕೃತಜ್ಞತೆಯಿಂದ ನೆನೆಯಬೇಕು. ಈ ಲೇಖನವನ್ನು ಪ್ರಕಟಿಸಲು ಅನುಮತಿಯಿತ್ತಿರುವ ಕಾಲೇಜಿನ ಡೈರೆಕ್ಟರ್ ಡಾ. ಎಸ್. ಎಮ್. ಕತ್ರೆಯವರಿಗೆ ನಾನು ಕೃತಜ್ಞನಾಗಿದ್ದೇನೆ. ಈ ಲೇಖನವನ್ನು ಬರೆಯಲು ಮೊದಲು ಮಾಡಿದಾಗಿನಿಂದ ಅಚ್ಚಿಗೆ ಸಿದ್ಧವಾದ ಹಸ್ತಪ್ರತಿಯನ್ನು ತಯಾರಿಸುವವರೆಗೂ, ಅನೇಕ ವಿಷಯಗಳನ್ನು ಕುರಿತು ಚರ್ಚೆಮಾಡಿ ಉಪಯುಕ್ತವಾದ ಸಲಹೆಗಳನ್ನು ನೀಡಿದ ಶ್ರೀಮಾನ್ ಕೆ. ದೊರೆಸ್ವಾಮಿಯವರಿಗೆ ನಾನು ಬಹಳ ಕೃತಜ್ಞನಾಗಿದ್ದೇನೆ. ಈ ಲೇಖನದಲ್ಲಿ ಕಂಡು ಬರುವ ಅನೇಕ ಪಾರಿಭಾಷಿಕ ಪದಗಳನ್ನು ಸೂಚಿಸಿ ಸಹಾಯ ಮಾಡಿರುವ ಶ್ರೀಮಾನ್ ತೀ. ನಂ. ಶ್ರೀಕಂಠಯ್ಯನವರಿಗೆ ನಾನು ಕೃತಜ್ಞನಾಗಿದ್ದೇನೆ.

ವಾಗಿರುವ ಬರಹಗಳು ಎರಡೋ ಮೂರೋ. ಇಂಗ್ಲಿಷಿನಲ್ಲಿ ಗಗನಚಂದ್ರ ಬ್ಯಾನರ್ಜಿ ಎಂಬವರು ಬರೆದ ಒಂದು ಸಣ್ಣ ವ್ಯಾಕರಣ; ಬಹುಶಃ ಅದರ ಆಧಾರದ ಮೇಲೆ ರಚಿತವಾದ Linguistic Survey of India ದ ವರದಿ, ಇವುಗಳನ್ನು ಬಿಟ್ಟರೆ ಬೇರಾವ ಬರಹಗಳೂ ಈ ಲೇಖಕನಿಗೆ ತಿಳಿಯದು. ಸುಮಾರು ಅರುವತ್ತು ಎಪ್ಪತ್ತು ವರ್ಷಗಳ ಹಿಂದೆ ಇವುಗಳನ್ನು ಬರೆದ ವಿದ್ವಾಂಸರ ಪ್ರಯತ್ನ ಸ್ತುತ್ಯರ್ಹವೇ. ಆದರೂ ಈ ಎರಡು ಬರಹಗಳೂ ಅಶಾಸ್ತ್ರೀಯವಾದುವುಗಳು; ಆದುದರಿಂದ ಅವುಗಳು ವಿಶ್ವಸನೀಯವಲ್ಲವೆಂದು ಹೇಳದೆ ವಿಧಿಯಿಲ್ಲ. ಆಧುನಿಕ ಭಾಷಾವಿಜ್ಞಾನದ ತತ್ತ್ವಗಳಿಗನುಗುಣವಾಗಿ ಖಡಿಯಾ ಭಾಷೆಯ ಮೇಲೆ ಬರೆದ ಲೇಖನ, ನನಗೆ ತಿಳಿದ ಮಟ್ಟಿಗೆ, ಇದೇ ಮೊದಲನೆಯದು. ಅಲ್ಲದೆ, ಕನ್ನಡದಲ್ಲಿ ಈ ರೀತಿಯಾದ ಬರಹವೂ ಮೊತ್ತಮೊದಲನೆಯದು.

## ೨. ವರ್ಣಸಮಾಮ್ನಾಯ

### ೨.೧. ಸ್ವರಗಳು:[2]

| | | |
|---|---|---|
| ಇ | | ಉ |
| ಎ | | ಒ |
| | ಅ | |
| | ಆ | |

### ೨.೨. ವ್ಯಂಜನಗಳು:

| | | | | | |
|---|---|---|---|---|---|
| ಪ್ | ತ್ | ಟ್ | ಚ್ | ಕ್ | |
| ಫ್ | ಥ್ | ಠ್ | ಛ್ | ಖ್ | |
| ಬ್ | ದ್ | ಡ್ | ಜ್ | ಗ್ | |
| ಭ್ | ಧ್ | ಢ್ | ಝ್ | ಘ್ | |
| ಪ್' | | ಟ್' | ಚ್' | ಕ್' | |
| | ಸ್ | | | | ಹ್ |
| ಮ್ | ನ್ | | ಞ್ | ಙ್ | |
| | ಲ್ | | | | |
| | ರ್ | ಳ್ | | | |
| | | ಳ್ಹ | | | |
| ವ್ | | | ಯ್ | | |

### ೨.೩. ಅನುಸ್ವಾರ: ಂ

### ೨.೪. ಸಂಗಮ: +

[2] ಖಡಿಯಾ ವರ್ಣಗಳನ್ನು ಬರೆಯಲು ಕನ್ನಡಲಿಪಿಯನ್ನೇ ಉಪಯೋಗಿಸಿದ್ದೇನೆ. ಲಿಪಿಯಲ್ಲಿ ಸ್ವರಸಹಿತ ವ್ಯಂಜನಗಳನ್ನು ಒಂದೇ ಸಂಕೇತದಿಂದ ಗುರುತಿಸಿದ್ದರೂ, ಸ್ವರ ವ್ಯಂಜನಗಳು ಆನುಪೂರ್ವಿಯನ್ನನುಸರಿಸಿ ಒಂದಾದ ಮೇಲೊಂದು ಬರುವುದನ್ನು ಓದುಗರು ಗಮನಿಸಬೇಕು. ಉದಾಹರಣೆ, ಕೆಹುನಿ ಎಂದು ಲಿಪಿ ಮೂಲಕ ನಿರ್ದೇಶಿಸಿದಾಗ ವರ್ಣಗಳು ಕ್ ಎ ಹ್ ಉ ನ್ ಇ ಆನುಪೂರ್ವಿಯಲ್ಲಿ ಬರುತ್ತವೆ ಎಂದರ್ಥ. ಕನ್ನಡದ ಲಿಪಿರೂಪಗಳನ್ನೇ ನಾನು ಉಪಯೋಗಿಸಿದ್ದರೂ, ಅವುಗಳಿಗಿರುವ ಉಚ್ಚಾರಣೆ ಸಂಪೂರ್ಣವಾಗಿ ಕನ್ನಡದ್ದೇ ಅಲ್ಲ ಎಂಬುದನ್ನೂ ಓದುಗರು ನೆನಪಿನಲ್ಲಿಡಬೇಕು. ಕನ್ನಡದ ಉಚ್ಚಾರಣೆಗೂ ಖಡಿಯಾ ಉಚ್ಚಾರಣೆಗೂ ಇರುವ ಸಾಮ್ಯ ವೈಷಮ್ಯಗಳನ್ನು ಸಂದರ್ಭೋಚಿತವಾಗಿ ಸೂಚಿಸಲಾಗಿದೆ.

## ೩. ವರ್ಣಗಳ ವರ್ಣನೆ

### ೩.೧. ಸ್ವರಗಳು

**೩.೧.೧.** ಖಡಿಯಾ ಭಾಷೆಯ ಸ್ವರಗಳಲ್ಲಿ, ಕನ್ನಡದಲ್ಲಿರುವಂತೆ, ಹ್ರಸ್ವ-ದೀರ್ಘ ಭೇದಗಳಿಲ್ಲ. ಸ್ವನಶಾಸ್ತ್ರದ (phonetics) ದೃಷ್ಟಿಯಿಂದ ಈ ಭಾಷೆಯಲ್ಲಿ ಹ್ರಸ್ವ-ದೀರ್ಘ ಪ್ರಭೇದವಿದ್ದರೂ, ವರ್ಣಶಾಸ್ತ್ರದ (phonemics) ದೃಷ್ಟಿಯಿಂದ ಈ ಭೇದ ಸಾರ್ಥಕವಲ್ಲವೆಂದೇ (non-significant or non-distinctive) ಹೇಳಬೇಕು.[3] ಮೇಲೆ ಕೊಟ್ಟಿರುವ ಖಡಿಯಾ ವರ್ಣಗಳ ಪಟ್ಟಿಯಲ್ಲಿ ಆರು ಸ್ವರಗಳಿರುವುದು ಕಂಡು ಬರುತ್ತದೆ. ಅವುಗಳಲ್ಲಿ ಅ ವರ್ಣವು ಯಾವಾಗಲೂ ಹ್ರಸ್ವವಾಗಿಯೇ ಇರುತ್ತದೆ. ಉಳಿದ ಸ್ವರಗಳು ಇತರ ವರ್ಣಗಳ ಸಾಹಚರ್ಯದಿಂದ ಹ್ರಸ್ವ-ದೀರ್ಘ ಪ್ರಭೇದಗಳನ್ನು ವ್ಯಕ್ತಪಡಿಸುತ್ತವೆ. ಖಡಿಯಾ ಸ್ವರಗಳಿಗಿರುವ ಸ್ವನಪ್ರಭೇದಗಳನ್ನು (allophones) ಆ ಭಾಷೆಯ ಶಬ್ದರೂಪಗಳಲ್ಲಿ (utterances) ಕಂಡು ಬರುವ ರಚನಾವಿಶೇಷಗಳ ಆಧಾರದ ಮೇಲೆ, ಕೆಳಗೆ ಕಂಡಂತೆ ಅನುಮಾನಿಸಲಾಗಿದೆ.

| ರಚನೆ[4] | ಪ್ರಭೇದ | ಉದಾಹರಣೆ[5] |
|---|---|---|
| —.– –ವ್ಯ'—.– | ಅತ್ಯಂತ ಹ್ರಸ್ವ | ಸಿಡಿಚ್' 'ಹತ್ತಿ', ಡೆಪ್'ನಾ 'ಹತ್ತು', ಖುಕ್'ನಾ 'ಕೆಮ್ಮು', ಡೊಟ್'ನಾ 'ಹೊರು', ಡಿಸಾಕ್' 'ದೂರ' |
| + (ವ್ಯ)–(ವ್ಯ)+ | ದೀರ್ಘ | ಇಞ್+ 'ನಾನು', ಇ+ 'ಏನು', ಬಿಸ್+ 'ಇಪ್ಪತ್ತು', ಬೆರ್+ 'ಯಾರು', ಉ+ 'ಈ', ಉಂಟ್+ 'ಒಂಟೆ', ಪುಲ್+ 'ಸೇತುವೆ', ಒಸ್+ 'ಇಬ್ಬನಿ', ಸೊಲ್+ 'ಕಣದ ಒರಳು', ಆರ್+ 'ಎಂಟು', ಘಾಂಸ್ + 'ಹುಲ್ಲು'. |
| —.—ವ್ಯ–ವ್ಯ+ | ದೀರ್ಘ | ಕಮಿಜ್+ 'ಷರಟು', ಬಲ್‌ಟಿನ್ + 'ಬಕೆಟ್ಟು', ದಜ್‌ಗೆರ್+ 'ಪ್ರಾಣಿ', ಕಚುರ್ + 'ಹಾವಿನ ಪೊರೆ', ಬಂದುಕ್+ 'ಬಂದೂಕ', ಬಲ್‌ಪೊಸ್ + 'ದತ್ತುತೆಗೆದುಕೊ', ಕಡೊಜ್ |

---

[3] ಕನ್ನಡದ ಸ್ವರಗಳಲ್ಲಿ ಕಂಡು ಬರುವ ಹ್ರಸ್ವ—ದೀರ್ಘ ಪ್ರಭೇದವು ಸಾರ್ಥಕವಾದದ್ದು : ಕರು—ಕಾರು, ಬಿಡು—ಬೀಡು, ಹುಳು—ಹೂಳು. ಬೆಳೆ—ಬೇಳೆ, ಸೊನೆ—ಸೋನೆ ಎಂಬ ಪದಯುಗ್ಮಗಳಿಂದ ಇದು ಸಿದ್ಧವಾಗುತ್ತದೆ. ಖಡಿಯಾ ಭಾಷೆಯ ಸ್ವರಗಳಲ್ಲೂ ಹ್ರಸ್ವ—ದೀರ್ಘ ಪ್ರಭೇದಗಳಿದ್ದರೂ, ಕನ್ನಡದಲ್ಲಿರುವಂತೆ, ಅವು ಪದಗಳ ಅರ್ಥವನ್ನು ಬದಲಾಯಿಸಲಾರವು. ಯಾವುದಾದರೂ ಒಂದು ಭಾಷೆಯಲ್ಲಿ ಕಂಡು ಬರುವ ಸ್ವನಗಳನ್ನೆಲ್ಲಾ, ಸಾರ್ಥಕ ಅಸಾರ್ಥಕ ಎಂಬ ವಿವೇಚನೆಯಿಲ್ಲದೆ, ಅಭ್ಯಸಿಸುವ ಶಾಸ್ತ್ರವೇ ಸ್ವನಶಾಸ್ತ್ರ ; ಆದರೆ ಸ್ವನಗಳನ್ನು ಅವುಗಳ ಸಾರ್ಥಕತೆಯ ದೃಷ್ಟಿಯಿಂದ ಅಭ್ಯಸಿಸುವ ಶಾಸ್ತ್ರವೇ ವರ್ಣಶಾಸ್ತ್ರ. [4] ಈ ಸಾಲಿನಲ್ಲಿ ಕೊಟ್ಟಿರುವ ಸಂಕೇತಗಳ ಅರ್ಥವಿದು : ವ್ಯ' ಎಂಬುದು ಐದನೆಯ ಸಾಲಿನ ವ್ಯಂಜನಗಳನ್ನೂ, ವ್ಯ ಎಂಬುದು ಮಿಕ್ಕ ವ್ಯಂಜನಗಳನ್ನೂ, ಸ್ವ ಎಂಬುದು ಸ್ವರವನ್ನೂ,—ಎಂಬುದು ಪ್ರಕೃತ ಸ್ವರ ಕಂಡು ಬರುವ ಸ್ಥಾನವನ್ನೂ ಸೂಚಿಸುತ್ತದೆ. —.—ಎಂಬ ಸಂಕೇತವಿರುವೆಡೆ ಯಾವ ವರ್ಣಗಳು ಬೇಕಾದರೂ ಕಂಡುಬರಬಹುದು. ಕಂಸಗಳ ನಡುವೆ ಇರುವ ಸಂಕೇತಗಳು, ಆ ಸಂಕೇತದಿಂದ ನಿರ್ದಿಷ್ಟವಾದ ವರ್ಣ ಇದ್ದರೂ ಇರಬಹುದು, ಇಲ್ಲದಿರಲೂ ಬಹುದು ಎಂಬುದನ್ನು ಸೂಚಿಸುತ್ತದೆ. [5] ಶಬ್ದರೂಪಗಳನ್ನು ಸ್ವನಾತ್ಮಕ ಲಿಪಿಯಲ್ಲಾಗಲಿ (phonetic transcription) ವರ್ಣಾತ್ಮಕ ಲಿಪಿಯಲ್ಲಾಗಲಿ (phonemic transcription) ನಿರ್ದೇಶಿಸಬಹುದು. ಸ್ವನಾತ್ಮಕ ಲಿಪಿಯನ್ನು ಚೌಕ ಕಂಸಗಳ ನಡುವೆಯೂ. ವರ್ಣಾತ್ಮಕ ಲಿಪಿಯನ್ನು ಓರೆಗೆರೆಗಳ ನಡುವೆಯೂ ಬರೆಯುವುದು ಆಧುನಿಕ ಭಾಷಾವಿಜ್ಞಾನದ ಬರಹಗಳ ಸಂಪ್ರದಾಯ. ನನ್ನ ಲೇಖನದಲ್ಲಿ ಈ ಸಂಪ್ರದಾಯವನ್ನು ಅನುಸರಿಸಿಲ್ಲ. ಮುದ್ರಣ ಸೌಲಭ್ಯಕ್ಕಾಗಿ, ಕೇವಲ ವರ್ಣಾತ್ಮಕ ಲಿಪಿಯನ್ನು ದಪ್ಪಕ್ಷರಗಳಿಂದ ನಿರ್ದೇಶಿಸಿದೆ.

| | | |
|---|---|---|
| | | + 'ಮಿಾಸು', ಬ್'ಯಬಿಚಾರ್ + 'ವ್ಯಭಿಚಾರ', ದರ್ ಕಾರ್ + 'ಅವಶ್ಯಕತೆ' |
| +(ವ್ಯ)-ವ್ಯಸ್ವ+ | ದೀರ್ಘ | ಚಿನಿ + 'ಸಕ್ಕರೆ', ಎಳಿ + 'ಹಿಮ್ಮಡಿ', ಗೆಳೆ + 'ಬಾತು', ಭುಲು + 'ತೊಡೆ', ಆಧಾ + 'ಅರ್ಧ', ಗಾಳಿ + 'ಗಾಡಿ', ಗೊನೆ + 'ಹಲ್ಲು' |
| +(ವ್ಯ) ಸ್ವ (ವ್ಯ) ವ್ಯ—ವ್ಯಸ್ವ+ | ದೀರ್ಘ | ಚವ್‌ಕಿಲಾ + 'ಹೊಳಪು', ಸಿಖೆನಾ + 'ಕಲಿ', ಕಮುನಾ + 'ಕೆಲಸಮಾಡು', ಡೊಕೊನಾ + 'ಕುಳಿತುಕೊ', ಅಟ್‌ಕೆನಾ + 'ಅಡ್ಡಹಾಕು', ಲಡಾನಾ + 'ನಗು', ಬಟ್ ಖಾರಾ + 'ತಕ್ಕಡಿ', |
| ಇತರೆಡೆಗಳಲ್ಲಿ | ಹ್ರಸ್ವ | ತಿವ್‌ಸೊಜ್ + 'ಜಿಂಕೆ', ಇಡಿಪ್' 'ರಾತ್ರಿ', ಲೆರಜ್ + 'ಚಂದ್ರ', ಮೆಮೊನ್ + 'ವರ್ಷ', ರುಸುಜ್ + 'ಕೆಂಪು', ಸುರುಪ್'ನಾ 'ಹೀರು', ಬಿಕ್'ಘುಜ್‌ನಾ 'ಉಗುಳು', ತೊಜೊನ್‌ನಾ 'ಸಿಲ್ಲು', ಗೊಜ್‌ನಾ 'ಅಡಿಗೆಮಾಡು', ಇತ್ಯಾದಿ. |

**೩.೧.೨. ಇ**: ವಿಸ್ತೃತೋಷ್ಠ ಪೂರ್ವ ಸಂವೃತಸ್ವರ (unrounded front close vowel).[6] ಮೇಲೆ ಸೂಚಿಸಿರುವ ರಚನೆಗನುಗುಣವಾಗಿ ಈ ವರ್ಣದ ಉಚ್ಚಾರಣೆ ಬಹುಮಟ್ಟಿಗೆ ಕನ್ನಡದ ಇಈ ಕಾರಗಳಂತೆಯೇ. ಉದಾಹರಣೆಗಳು ೩.೧.೧. ರಲ್ಲಿ. ಸ್ವ_ವ್ಯ, ಸ್ವ—+ಈ ಎರಡು ಕಡೆಗಳಲ್ಲಿ ಇ ವರ್ಣಕ್ಕೆ ವ್ಯಂಜನ ಸ್ವನಪ್ರಭೇದವಿದೆ (non-syllabic allophone): ಬಇರಿ 'ವೈರಿ', ಬಿಲೊಇ + 'ಬೆಕ್ಕು'.

**೩.೧.೩. ಎ**: ವಿಸ್ತೃತೋಷ್ಠ ಪೂರ್ವ ಅರ್ಧಸಂವೃತಸ್ವರ (unrounded half -open front vowel).[7] ಕನ್ನಡದ ಎ ಏ ಕಾರಗಳಿಗಿಂತಲೂ ಹೆಚ್ಚು ಸಂವೃತೋಚ್ಚಾರಣೆ. ಉದಾಹರಣೆಗಳು ೩.೧.೧. ರಲ್ಲಿ.

**೩.೧.೪. ಉ**: ವೃತ್ತೋಷ್ಠ ಪಶ್ಚ ಸಂವೃತಸ್ವರ (rounded back close vowel).[8] ಈ ವರ್ಣದ ಉಚ್ಚಾರಣೆ ಬಹುಮಟ್ಟಿಗೆ ಕನ್ನಡದ ಉ ಊಕಾರಗಳಂತೆಯೇ. ಸ್ವ—ವ್ಯ, ಸ್ವ —+ಈ ಎರಡು ಕಡೆಗಳಲ್ಲಿ ಉವರ್ಣಕ್ಕೆ ವ್ಯಂಜನ ಸ್ವನಪ್ರಭೇದವಿದೆ: ಕಉವಾ 'ಕಾಗೆ', ಸೊಉಳಾಯ್‌ಡೊಮ್ + 'ಹೆಂಡತಿ.'

---

[6] ಸ್ವರಗಳನ್ನು ಶಾಸ್ತ್ರೀಯವಾಗಿ ವರ್ಣಿಸುವಾಗ, ಉಚ್ಚಾರಣೆಯ ಕಾಲದಲ್ಲಿ ತುಟಿಗಳು ಯಾವ ಆಕಾರವನ್ನು ತಳೆಯುತ್ತವೆ, ನಾಲಗೆಯ ಯಾವ ಭಾಗ ತಾಲುವಿನ ಯಾವ ಭಾಗದ ಕಡೆಗೆ ಏರುತ್ತದೆ, ನಾಲಗೆ ಎಷ್ಟು ಎತ್ತರಕ್ಕೇರುತ್ತದೆ—ಈ ಮೂರು ಮುಖ್ಯಾಂಶಗಳನ್ನೂ ತಿಳಿಸಬೇಕು. ಪ್ರಕೃತಸ್ವರವನ್ನುಚ್ಚರಿಸುವಾಗ, ತುಟಿಗಳು ವಿಸ್ತೃತವಾಗಿರುತ್ತವೆ (ವಿಸ್ತೃತೋಷ್ಠ); ನಾಲಗೆಯ ಮುಂಭಾಗ ತಾಲುವಿನ ಮುಂಭಾಗದ ಕಡೆಗೆ ಏರುತ್ತದೆ (ಪೂರ್ವ); ಉಚ್ಚರಿಸುವ ಸ್ವನ ಸ್ವರವಾಗಿಯೇ ಇರುತ್ತಾ ಆದಷ್ಟು ಮೇಲಕ್ಕೆ ನಾಲಗೆ ಏರುತ್ತದೆ (ಸಂವೃತ). [7] ಈ ಸ್ವರದ ಉಚ್ಚಾರಣೆಯಲ್ಲಿ, ನಾಲಗೆಯ ಮುಂಭಾಗವು ಸಂವೃತ ವಿವೃತಸ್ಥಾನಗಳ (೧೧ ನೇ ಅಡಿ ಟಿಪ್ಪಣಿಯನ್ನು ನೋಡಿ) ಮಧ್ಯಭಾಗಕ್ಕಿಂತಲೂ ಸ್ವಲ್ಪ ಮೇಲಕ್ಕೆ ಏರುತ್ತದೆ (ಅರ್ಧ ಸಂವೃತ); ಆ ಮಧ್ಯ ಭಾಗಕ್ಕಿಂತಲೂ ಸ್ವಲ್ಪ ಕೆಳಕ್ಕೆ ನಾಲಗೆ ತಗ್ಗಿದಾಗ ಉಂಟಾಗುವ ಸ್ವರ ಅರ್ಧ ವಿವೃತ. [8] ಈ ಸ್ವರದ ಉಚ್ಚಾರಣೆಯ ಕಾಲದಲ್ಲಿ ತುಟಿಗಳು ದುಂಡಾಗಿರುತ್ತವೆ (ವೃತ್ತೋಷ್ಠ); ನಾಲಗೆಯ ಹಿಂಭಾಗವು ಮೃದು ತಾಲುವಿನ (soft palate, velum) ಕಡೆಗೆ ಏರುತ್ತದೆ (ಪಶ್ಚ).

೩.೧.೫. ಒ: ವೃತ್ತೋಷ್ಠ ಪಶ್ಚ ಅರ್ಧಸಂವೃತಸ್ವರ (rounded back half open vowel).[9] ಕನ್ನಡದ ಒ ಓಕಾರಗಳಿಗಿಂತಲೂ ಹೆಚ್ಚು ಸಂವೃತೋಚ್ಚಾರಣೆ.

೩.೧.೬. ಅ: ವಿಸ್ತೃತೋಷ್ಠ ಮಧ್ಯಸ್ವರ (unrounded central vowel).[10] ಇವರ್ಣ ಪರವಾದಾಗ ಅರ್ಧಸಂವೃತ; ಇತರೆಡೆಗಳಲ್ಲಿ ಅರ್ಧಸಂವೃತ ಮತ್ತು ಅರ್ಧವಿವೃತ ಸ್ಥಾನಗಳ ನಡುವಣ ಸ್ವನಪ್ರಭೇದಗಳನ್ನು ಪಡೆದಿರುತ್ತದೆ: ಕಂಇ+ 'ಕೆಂಬಗ', ಪತಾ 'ಬಾಲ', ಮನೆ, ಅಡಿ, ಮರ ಮುಂತಾದ ಕನ್ನಡ ಪದಗಳಲ್ಲಿರುವ ಅವರ್ಣದಂತೆ ಉಚ್ಚಾರಣೆ.

೩.೧.೭. ಆ: ವಿಸ್ತೃತೋಷ್ಠ ಈಷತ್‌ಪಶ್ಚ ವಿವೃತ ಸ್ವರ (unrounded slightly backed open vowel).[11] ಉಚ್ಚಾರಣೆ ಬಹುಮಟ್ಟಿಗೆ ಕನ್ನಡದ ಆಕಾರದಂತೆ.

### ೩. ೨. ವ್ಯಂಜನಗಳು

೩. ೨. ೧. ಮೊದಲ ಸಾಲಿನ ವ್ಯಂಜನಗಳೆಲ್ಲವೂ ಅಘೋಷ ಅಲ್ಪಪ್ರಾಣಗಳು (voiceless unaspirates).[12] ಚ್ ಒಂದನ್ನುಳಿದು, ಎಲ್ಲವೂ ಸ್ಪರ್ಶಗಳು (stops);[13] ಚ್ ಅನುಘರ್ಷ(affricate).[14]

ಪ್ : ಓಷ್ಠ್ಯ (bilabial). ಉಚ್ಚಾರಣೆ ಬಹುಮಟ್ಟಿಗೆ ಕನ್ನಡದ ಪಕಾರದಂತೆ.[15] ಎರಡು ತುಟಿಗಳನ್ನೂ ಕೂಡಿಸಿ, ಹೊರಬರುವ ಉಸಿರನ್ನು ತಡೆಗಟ್ಟಿ, ಒಮ್ಮೆಯೇ ತುಟಿಗಳನ್ನು ತೆರೆದು, ಸೆರೆಯಾದ ಉಸಿರನ್ನು ಬಿಡುಗಡೆ ಮಾಡುವಾಗ ಉಂಟಾಗುವ ಸ್ವನ: ಪುದ್‌ಗಾ 'ಗರಿ,' ಜೆಪುಜ್+'ಜೊಂಡು', ಉಪ್‌ಲೆನಾ 'ತೇಲು,' ಪಾಪ್ 'ಪಾಪ'.

ತ್ : ದಂತ್ಯ (dental). ಉಚ್ಚಾರಣೆ ಹೆಚ್ಚು ಕಡಿಮೆ ಕನ್ನಡದ ತಕಾರದಂತೆ. ಕನ್ನಡದ ತಕಾರೋಚ್ಚಾರಣೆಯಲ್ಲಿ, ನಾಲಗೆಯ ತುದಿ ಮೇಲಿನ ಹಲ್ಲುಗಳ ಒಳಭಾಗವನ್ನು ಸ್ಪರ್ಶಿಸಿದರೆ, ಖಡಿಯಾ ತ್ ವರ್ಣದ ಉಚ್ಚಾರಣೆಯಲ್ಲಿ ನಾಲಗೆಯ ತುದಿ ಮೇಲಿನ ಹಲ್ಲುಗಳ ತುದಿಯನ್ನು ಸ್ಪರ್ಶಿಸಿ, ಹಲ್ಲುಗಳ ಎರಡು ಸಾಲಿನ ಮಧ್ಯೆ ಇಣಿಕುತ್ತದೆ (interdental): ತೆರೋಮ್+'ಜೇನ್ನೊಣ,' ಲುತುರ್ 'ಕಿವಿ,' ಕುಲುಕ್ 'ತರ್ 'ಕೆನ್ನೆ,' ಸಾತ್ 'ಏಳು'.

ಟ್ : ಪ್ರತಿವೇಷ್ಟಿತ ಪಶ್ಚವರ್ತ್ಸ್ಯ (retroflex post-alveolar)[16]. ಉಚ್ಚಾರಣೆ ಹೆಚ್ಚು ಕಡಿಮೆ ಕನ್ನಡದ ಟಕಾರದಂತೆ. ಕನ್ನಡದ ಟಕಾರೋಚ್ಚಾರಣೆಯಲ್ಲಿ ನಾಲಗೆಯ

---

[9] ಈ ಪಾರಿಭಾಷಿಕ ಪದಗಳ ಅರ್ಥ ಮೇಲಿನ ಟಿಪ್ಪಣಿಗಳಿಂದಲೇ ಸ್ಪಷ್ಟವಾಗಿದೆ. [10] ಈ ಸ್ವರವನ್ನು ಚ್ಚರಿಸುವಾಗ ನಾಲಗೆಯ ನಡುವಣ ಭಾಗವು ತಾಲುವಿನ ನಡುವಣ ಭಾಗದ ಕಡೆಗೆ ಏರುತ್ತದೆ (ಮಧ್ಯ). [11] ಈ ಸ್ವರವನ್ನು ಉಚ್ಚರಿಸುವಾಗ ನಾಲಗೆಯ ಮಧ್ಯ ಪಶ್ಚ ಭಾಗಗಳ ನಡುವಣ ಭಾಗವು (ಈಷತ್ ಪಶ್ಚ) ಆದಷ್ಟು ಮಟ್ಟಿಗೆ ತಗ್ಗಿರುತ್ತದೆ (ವಿವೃತ). [12] ಉಚ್ಚಾರಣೆಯ ಕಾಲದಲ್ಲಿ ಘೋಷ ತಂತುಗಳು (vocal chords) ಕಂಪಿಸುತ್ತಿದ್ದರೆ ಉಂಟಾಗುವ ಸ್ವನಗಳು ಘೋಷಗಳು; ಘೋಷ ತಂತುಗಳು ತಟಸ್ಥವಾಗಿದ್ದರೆ ಉಂಟಾಗುವ ಸ್ವನಗಳು ಅಘೋಷಗಳು. [13] ಶ್ವಾಸಕೋಶದಿಂದ ಹೊರಬರುತ್ತಿರುವ ಉಸಿರನ್ನು, ಘೋಷ ತಂತುಗಳಿಂದ ತುಟಿಗಳವರೆಗಿನ ಯಾವುದಾದರೂ ಒಂದು ಸ್ಥಾನದಲ್ಲಿ ಸಂಪೂರ್ಣವಾಗಿ ತಡೆಗಟ್ಟಿ, ಒಡನೆಯೇ ಬಿಟ್ಟಾಗ ಉಂಟಾಗುವ ಸ್ವನಗಳು ಸ್ಪರ್ಶಗಳು, [14] ಶ್ವಾಸಕೋಶದಿಂದ ಹೊರಬರುತ್ತಿರುವ ಉಸಿರನ್ನು, ಘೋಷತಂತುಗಳಿಂದ ತುಟಿಗಳವರೆಗಿನ ಯಾವುದಾದರೂ ಒಂದು ಸ್ಥಾನದಲ್ಲಿ ಇಕ್ಕಟ್ಟಾದ ಎಡೆಯ ಮೂಲಕ ನುಸುಳಿಸಿದಾಗ ಉಂಟಾಗುವ ಘರ್ಷಣಾತ್ಮಕ ಸ್ವನಗಳು ಘರ್ಷಗಳು; ಸ್ಪರ್ಶದಂತೆ ಮೊದಲಾದರೂ, ವಿಲಂಬ ವಿಮೋಚನೆಯ ಫಲವಾಗಿ, ಸಮಾನಸ್ಥಾನದ (homorganic) ಘರ್ಷದಂತೆ ಕೊನೆಗೊಳ್ಳುವ ಸ್ವನಗಳು ಅನುಘರ್ಷಗಳು. [15] ಆದರೆ ಕನ್ನಡದ ಪಕಾರಕ್ಕಿಂತಲೂ ಹೆಚ್ಚು ತೀಕ್ಷ್ಣ (tense) ಕರಣಸ್ನಾಯುಗಳು ಬಿಗಿಗೊಂಡು ಉಚ್ಚಾರವಾಗುವ ಸ್ವನಗಳು ತೀಕ್ಷ್ಣಗಳು. (ಕರಣ ಎಂಬುದರ ವಿವರಣೆಯನ್ನು ೧೮ ನೇ ಅಡಿಟಿಪ್ಪಣಿಯಲ್ಲಿ ನೋಡಿ) ಖಡಿಯಾ ಉಚ್ಚಾರಣೆಯಲ್ಲಿ ವ್ಯಂಜನಗಳೆಲ್ಲಾ ತೀಕ್ಷ್ಣವಾಗಿವೆ. [16] ನಾಲಗೆಯ ತುದಿಯನ್ನು ಮಡಿಚಿ ಅದರ ಕೆಳಭಾಗವನ್ನು ತಾಲುವಿಗೆ ಅಭಿಮುಖವಾಗಿರಿಸುವ ಕ್ರಿಯೆಗೆ ಪ್ರತಿವೇಷ್ಟನ

ತುದಿಯ ಕೆಳಭಾಗ ಪಶ್ಚವರ್ತ್ಸದಿಂದ ಮೂರ್ಧದ (cacumen) ವರೆಗೆ ಇರುವ ಸ್ಥಾನಾಂತರಗಳನ್ನು ಸ್ಪರ್ಶಿಸುತ್ತದೆ. ಖಡಿಯಾ ಟಕಾರೋಚ್ಚಾರಣೆಯಲ್ಲಿ ಅದು ವರ್ತ್ಸಕ್ಕಿಂತಲೂ ಸ್ವಲ್ಪ ಹಿಂದಿನ ಭಾಗವನ್ನು ಸ್ಪರ್ಶಿಸುತ್ತದೆ: ಟೊಪ್'ಡಿರ್ 'ಗೆದ್ದಲಹುಳು,' ಪೊಟಾ 'ಕರುಳು,' ರೊಕ್‌ಟೊಕ್ 'ಅಡ್ಡಗಟ್ಟು,' ಉಂಟ್ 'ಒಂಟೆ'.

**ಚ್:** ತಾಲವ್ಯ (palatal). ನಾಲಗೆಯ ಮಧ್ಯಭಾಗವನ್ನು ತಾಲುವಿನ ಮಧ್ಯಭಾಗಕ್ಕೆ ಸ್ಪರ್ಶಿಸಿ ಉಚ್ಚರಿಸುವ ಅನುಘರ್ಷ. ಉಚ್ಚಾರಣೆ ಈ ಲೇಖಕನ ಕನ್ನಡ ಚಕಾರೋಚ್ಚಾರಣೆಯಂತೆ. ಅನೇಕ ಕನ್ನಡಿಗರು[17] ಜಿಹ್ವಾಫಲಕವನ್ನು (blade of the tongue) ವರ್ತ್ಸಕ್ಕೆ ಸ್ಪರ್ಶಿಸಿ ಚಕಾರೋಚ್ಚಾರ ಮಾಡುತ್ತಾರೆ. ಖಡಿಯಾ ಚ್ ವರ್ಣವು ಇದಕ್ಕಿಂತಲೂ ಭಿನ್ನವಾದದ್ದು: ಚಕರ್ 'ಅಗಲ, ಚಪ್ಪಟೆ,' ಲುಚುರ್ 'ತುಟಿ,' ಹೆಚ್‌ಕಿ 'ಬಿಕ್ಕಲು,' ಪಾಂಚ್ 'ಐದು.'

**ಕ್ :** ಮೃದುತಾಲವ್ಯ (velar). ಉಚ್ಚಾರಣೆ ಹೆಚ್ಚುಕಡಿಮೆ ಕನ್ನಡದ ಕಕಾರದಂತೆಯೇ. ಕನ್ನಡದ ಕಕಾರೋಚ್ಚಾರಣೆಯಲ್ಲಿ ನಾಲಗೆಯ ಹಿಂಭಾಗವು ಮೃದು ತಾಲುವಿನ ಮಧ್ಯಭಾಗವನ್ನು ಸ್ಪರ್ಶಿಸಿದರೆ, ಅದಕ್ಕಿಂತಲೂ ಸ್ವಲ್ಪ ಹಿಂಭಾಗವನ್ನು ಸ್ಪರ್ಶಿಸಿದಾಗ ಉಂಟಾಗುವ ಸ್ವನ: ಕೊಳಿ 'ಸೊಂಟ,' ರೊಕೆಟ್' 'ಮರಳು,' ಬಕ್‌ಲಾ 'ತೊಗಟೆ,' ಸಾಂಳಕ್ 'ರಸ್ತೆ.'

**೩.೨.೨.** ಎರಡನೆಯ ಸಾಲಿನಲ್ಲಿರುವ ವ್ಯಂಜನಗಳು, ಪ್ರಯತ್ನ (manner of articulation), ಸ್ಥಾನ (point of articulation), ಕರಣ (articulator),[18] ಅಘೋಷತ್ವ—ಈ ನಾಲ್ಕು ಲಕ್ಷಣಗಳಲ್ಲೂ ಮೊದಲನೇ ಸಾಲಿನ ವ್ಯಂಜನಗಳಂತೆಯೇ. ಮೊದಲನೆಯ ಸಾಲಿನ ವ್ಯಂಜನಗಳು ಅಲ್ಪಪ್ರಾಣಗಳಾದರೆ, ಎರಡನೆಯ ಸಾಲಿನವು ಮಹಾ ಪ್ರಾಣಗಳು (aspirates).

**ಫ್ :** ಫಸ್ಕಟ್ 'ಸುಳ್ಳು,' ಫಮ್‌ಫ್‌ಲಾಕ್' 'ಚಿಟ್ಟೆ,' ತುಫಜ್‌ನಾ 'ಹಿಡಿ'; + ವರ್ಣವು ಪರವಾದಾಗ ಸಮಾನಸ್ಥಾನದ (homorganic) ಅನುಘರ್ಷವಾಗಿ ಉಚ್ಚಾರವಾಗುತ್ತದೆ: ಬರಫ್ + 'ಮಂಜುಗಡ್ಡೆ.'[19]

**ಥ್ :** ಥೆರಿಯಾ 'ತಟ್ಟೆ,' ಹಾಂಥಿ 'ಆನೆ,' ಬೊಥ್‌ಳಾ 'ಮೊಂಡು.'

**ಠ್ :** ಠೊಕ್'ಠೊರ್ 'ಗಂಟಲು,' ಬಂಇಠಿ 'ಈಳಿಗೆಮಣೆ,' ಅಜ್‌ಠಾ 'ಕಾಲ್ಬೆರಳು'; + ವರ್ಣವು ಪರವಾದಾಗ ಸಮಾನಸ್ಥಾನದ ಅನುಘರ್ಷವಾಗಿ ಉಚ್ಚಾರವಾಗುತ್ತದೆ: ಆಠ್ + 'ಎಂಟು.'

---

(retroflexion) ಎಂದು ಹೆಸರು. ಈ ಪ್ರಯತ್ನದಿಂದುಂಟಾದ ಸ್ವನಗಳು ಪ್ರತಿವೇಷ್ಟಿತಗಳು (retroflex). ತಾಲುವಿಗೂ ಮೇಲುಹಲ್ಲುಗಳ ಸಾಲಿಗೂ ನಡುವೆ ಇರುವ ಉನ್ನತ ಪ್ರದೇಶವೇ ವರ್ತ್ಸ. ವರ್ತ್ಸಕ್ಕಿಂತಲೂ ಸ್ವಲ್ಪ ಹಿಂದಿನ ಭಾಗ ಪಶ್ಚವರ್ತ್ಸ. [17] ನೋಡಿ: Affricates in Kannada speech—T. N. Sreekantaiya; IL, 1954. [18] ಶ್ವಾಸಕೋಶದಿಂದ ಹೊರಬರುವ ಉಸಿರನ್ನು, ಘೋಷತಂತುಗಳಿಂದ ತುಟಿಗಳವರೆಗಿನ ಯಾವುದಾದರೂ ಒಂದು ಸ್ಥಾನದಲ್ಲಿ, ಯಾವುದಾದರೂ ಒಂದು ಬಗೆಯಿಂದ ಅಡ್ಡಿಪಡಿಸುವ ವಿಧಾನವೇ ಪ್ರಯತ್ನ. ಈ ಪ್ರಯತ್ನದಲ್ಲಿ ಹೆಚ್ಚು ಚಟುವಟಿಕೆಯಿಂದ ಚಲಿಸುವ ಅಂಗಗಳೇ ಕರಣಗಳು. ಉಸಿರು ಅಡಚಣೆಗೊಳ್ಳುವ ಸ್ಥಳಗಳೇ ಸ್ಥಾನಗಳು. ಉದಾ—ಕನ್ನಡದ ತಕಾರೋಚ್ಚಾರಣೆಯಲ್ಲಿ, ನಾಲಗೆಯ ತುದಿ (ಕರಣ) ಮೇಲು ಹಲ್ಲಿನ ಒಳಭಾಗವನ್ನು (ಸ್ಥಾನ) ಸ್ಪರ್ಶಿಸಿ, ಉಸಿರನ್ನು ಸಂಪೂರ್ಣವಾಗಿ ತಡೆಗಟ್ಟುತ್ತದೆ ಪ್ರಯತ್ನ). [19] ಈ ವರ್ಣಸಮಾಮ್ನಾಯದಲ್ಲಿ ಮಹಾಪ್ರಾಣಗಳನ್ನು ಒಂದೇ ವರ್ಣವಾಗಿ (unit phoneme) ಪರಿಗಣಿಸಲಾಗಿದೆ. ಕೆಲವು ಭಾಷೆಗಳಲ್ಲಿ ಅವುಗಳನ್ನು ಸಂಯುಕ್ತವರ್ಣಗಳಾಗಿ (ಅಲ್ಪಪ್ರಾಣವರ್ಣ+ಹ್) ಪರಿಗಣಿಸಲು ಅವಕಾಶವಿರುತ್ತದೆ. ಆದರೆ ವ್ಯಂಜನಗಳ ವಿನ್ಯಾಸದ (distribution) ದೃಷ್ಟಿಯಿಂದ, ಈ ಭಾಷೆಯಲ್ಲಿ ಅವುಗಳನ್ನು ಒಂದೇ ವರ್ಣವಾಗಿ ಪರಿಗಣಿಸಬೇಕಾಗಿದೆ. ಇದೇ ಮಾತು ಐದನೆಯ ಸಾಲಿನ ವ್ಯಂಜನಗಳಿಗೂ ಅನ್ವಯಿಸುತ್ತದೆ.

**ಛ್ :** ಛೆವ್‌ರಾ 'ಚರ್ಮ,' ಬಛಿಯಾ 'ಹೆಣ್ಣುಕರು,' ಬಛ್‌ರು 'ಕರು'.

**ಖ್ :** ಖೊಳಿ 'ಹಳ್ಳಿ,' ಲಿಖಾನಾ 'ಬರೆ,' ಒಖ್‌ಳಿ 'ಪುರದ ಒರಳು' ; +ವರ್ಣವು ಪರವಾದಾಗ ಸಮಾನಸ್ಥಾನದ ಅನುಘರ್ಷವಾಗಿ ಉಚ್ಚಾರವಾಗುತ್ತದೆ : ಚೊಖ್ + 'ಚೂಪು'.

೩.೨.೩. ಮೂರನೆಯ ಸಾಲಿನಲ್ಲಿರುವ ವ್ಯಂಜನಗಳು, ಪ್ರಯತ್ನ, ಸ್ಥಾನ, ಕರಣ, ಅಲ್ಪ ಪ್ರಾಣತ್ವ—ಈ ನಾಲ್ಕು ಲಕ್ಷಣಗಳಲ್ಲೂ ಮೊದಲನೇ ಸಾಲಿನ ವ್ಯಂಜನಗಳಂತೆಯೇ. ಮೊದಲನೇ ಸಾಲಿನ ವ್ಯಂಜನಗಳು ಅಘೋಷಗಳಾದರೆ, ಮೂರನೆಯ ಸಾಲಿನವು ಘೋಷಗಳು. ಎರಡನೇ ಸಾಲಿನ ವ್ಯಂಜನಗಳೂ ಮೂರನೆಯ ಸಾಲಿನ ವ್ಯಂಜನಗಳೂ, ಪ್ರಯತ್ನ, ಸ್ಥಾನ, ಕರಣ—ಈ ಮೂರು ಲಕ್ಷಣಗಳಲ್ಲೂ ಒಂದೇ ಆಗಿವೆ. ಎರಡನೇ ಸಾಲಿನ ವ್ಯಂಜನಗಳು ಅಘೋಷಗಳೂ ಮಹಾಪ್ರಾಣಗಳೂ ಆಗಿದ್ದರೆ ಮೂರನೆಯ ಸಾಲಿನವು ಘೋಷಗಳೂ, ಅಲ್ಪಪ್ರಾಣಗಳೂ ಆಗಿವೆ.

**ಬ್ :** ಬೊಕೊಪ್' 'ತಲೆ', ಲೆಬು 'ವ್ಯಕ್ತಿ, ಮನುಷ್ಯ', ಡೊಬ್‌ರೆನಾ 'ಮುಚ್ಚಿಡು', ಗರಿಬ್ 'ಬಡವ'.

**ದ್ :** ದಾರು 'ಮರ', ಸಮುದರ್ 'ಸಮುದ್ರ', ಪುದ್‌ಗಾ 'ಗರಿ'.

**ಡ್ :** ಡೊಳೆಕ್' 'ಸಣ್ಣ', ಸಿಡಿಚ್' 'ಹತ್ತಿ', ಡಿಳ್‌ಗರ್ 'ಧೈರ್ಯ'.[20]

**ಜ್ :** ಜಜ್+ 'ಮೂಳೆ', ಅಜೊಟ್'ನಾ 'ಬತ್ತು', ಅಜ್‌ಗರ್ 'ಹೆಬ್ಬಾವು', ಜಹಾಂಜ್ 'ಹಡಗು'.

**ಗ್ :** ಗೊರೆ 'ಶ್ವಾಸಕೋಶ', ಮುಗಮ್ + 'ಮುಂದೆ', ಪೊಗ್'ರಿ 'ರುಮಾಲು', ನಾಗ್ 'ನಾಗರಹಾವು'.

೩.೨.೪. ನಾಲ್ಕನೆಯ ಸಾಲಿನ ವ್ಯಂಜನಗಳು, ಪ್ರಯತ್ನ, ಸ್ಥಾನ, ಕರಣ, ಘೋಷತ್ವ—ಈ ನಾಲ್ಕು ಲಕ್ಷಣಗಳಲ್ಲೂ ಮೂರನೆಯ ಸಾಲಿನ ವ್ಯಂಜನಗಳಂತೆಯೇ. ಮೂರನೆಯ ಸಾಲಿನ ವ್ಯಂಜನಗಳು ಅಲ್ಪಪ್ರಾಣಗಳಾದರೆ, ನಾಲ್ಕನೆಯ ಸಾಲಿನವು ಮಹಾಪ್ರಾಣಗಳು.

**ಭ್ :** ಭಾಲು 'ಕರಡಿ', ಡುಭ್‌ನಿ 'ಲೋಟ'.

**ಧ್ :** ಧುಳಿ 'ಧೂಳು', ಆಧಾ 'ಅರ್ಧ', ಅನ್‌ಧ್‌ರಾ 'ಕುರುಡ', ಸುಧ್ 'ಬಡ್ಡಿ'.

**ಢ್ :** ಢಿಲೊ 'ಸಡಿಲ', ಡೊಢ್‌ರಿ 'ಪೊಟರೆ', ಲೊಕ್'ಢೊ 'ಆಮೇಲೆ'.

**ಝ್ :** ಝುಲೊಜ್ + 'ಎತ್ತರ', ಬುಝೊಯ್‌ನಾ 'ತಿಳಿವಳಿಕೆ', ಪಝ್‌ರಾ 'ಬುಗ್ಗೆ', ಸೊಝ್ 'ನೇರ'.

**ಘ್ :** ಘಾಂಸ್ 'ಹುಲ್ಲು', ಜುಘಾಯ್ 'ಅನೇಕ', ಸಜ್‌ಘ್‌ರಾಯ್‌ನಾ 'ಸಹಾಯ ಮಾಡು', ನಾಘ್ 'ನಾಗರಹಾವು'.

---

[20] ಕನ್ನಡ ಡವರ್ಣದ ದೃಷ್ಟಿಯಿಂದ ಕೆಲವು ಮಾತುಗಳನ್ನಿಲ್ಲಿ ಬರೆಯಬೇಕು. ಕನ್ನಡದಲ್ಲಿ ಡವರ್ಣಕ್ಕೆ ಎರಡು ರೀತಿಯಾದ ಉಚ್ಚಾರಣೆಯುಂಟು. ಪದಾದಿಯಲ್ಲಿದ್ದಾಗಲೂ (ಡೊಳ್ಳು), ಸಮಾನಸ್ಥಾನದ ವರ್ಣಗಳೊಡನೆಯೂ (ಬಡ್ಡಿ, ಹೆಂಡ್ತಿ, ಡಾಳ್ಡಾ, ಕಡ್ಯೆ) ಅದಕ್ಕಿರುವುದು ಸ್ಪರ್ಶೋಚ್ಚಾರಣೆ. ಇತರ ಕಡೆಗಳಲ್ಲಿ ಅದರ ಉಚ್ಚಾರಣೆ ಭಿನ್ನವಾದದ್ದು (ಈ ಲೇಖನದ ೩. ೨. ೯. ಭಾಗವನ್ನು ನೋಡಿ). ಕನ್ನಡದಲ್ಲಿ ಇವೆರಡು ಸ್ವನಗಳೂ ಒಂದೇ ವರ್ಣಕ್ಕೆ ಸೇರಿದವುಗಳು. ಇತರ ವರ್ಣಗಳ ಸಾಹಚರ್ಯದಿಂದ ಈ ವರ್ಣದ ಉಚ್ಚಾರಣೆ ಬೇರೆ ಬೇರೆಯಾಗುತ್ತದೆ. ಕನ್ನಡದಲ್ಲಿ, ಈ ಎರಡು ಸ್ವನಗಳು ಸ್ವನಶಾಸ್ತ್ರದ ದೃಷ್ಟಿಯಿಂದ ಬೇರೆ ಬೇರೆಯಾಗಿದ್ದರೂ, ಅವುಗಳು ಪದಗಳ ಅರ್ಥವನ್ನು ಬದಲಾಯಿಸಲಾರವು. ಆದರೆ, ಖಡಿಯಾದಲ್ಲಿ ಒಂದೇ ಆನುಪೂರ್ವಿಯಿರುವ ಎರಡು ಪದಗಳಲ್ಲಿ ಈ ಎರಡು ಸ್ವನಗಳ ಪರಸ್ಪರ ವಿನಿಮಯದಿಂದ ಅರ್ಥವ್ಯತ್ಯಾಸವು ತೋರುವುದರಿಂದ ಅವುಗಳು ವರ್ಣಶಾಸ್ತ್ರದ ದೃಷ್ಟಿಯಿಂದ ಸಾರ್ಥಕವಾದವುಗಳು ; ಕಡವ್+ 'ಬೊಗಸೆ,' ಕಳವ್+ 'ಬಳೆ'.

**೩.೨.೫.** ಐದನೆಯ ಸಾಲಿನಲ್ಲಿರುವ ವ್ಯಂಜನಗಳು ಮುಂಡವರ್ಗದ ಅನೇಕ ಭಾಷೆಗಳಲ್ಲಿ ಕಂಡುಬರುವ ವರ್ಣವಿಶೇಷ. ದ್ರಾವಿಡವರ್ಗಕ್ಕಾಗಲಿ ಆರ್ಯವರ್ಗಕ್ಕಾಗಲಿ ಸೇರಿದ ಭಾಷೆಗಳಲ್ಲಿ ಈ ವ್ಯಂಜನಗಳು ಕಂಡುಬರುವುದಿಲ್ಲ. ಉರಾಓಂ ಮುಂತಾದ ಒಂದೆರಡು ದ್ರಾವಿಡ ಭಾಷೆಗಳಲ್ಲಿ ಕ್' ಎಂಬ ಸಂಜ್ಞೆಯಿಂದ ನಿರ್ದಿಷ್ಟವಾದ ವರ್ಣವಿದ್ದರೂ ಮಿಕ್ಕಮೂರು ವರ್ಣಗಳು ಆ ಭಾಷೆಗಳಲ್ಲೂ ಕಂಡುಬರುವುದಿಲ್ಲ. ಈ ಸಾಲಿನ ಪ್', ಟ್', ಚ್', ಎಂಬ ವರ್ಣಗಳು, ಸ್ಥಾನ, ಪ್ರಯತ್ನ, ಕರಣ, ಅಲ್ಪಪ್ರಾಣತ್ವ—ಈ ನಾಲ್ಕು ಲಕ್ಷಣಗಳಲ್ಲೂ ಮೊದಲ ಸಾಲಿನ ಪ್, ಟ್, ಚ್ ಎಂಬ ವರ್ಣಗಳಂತೆಯೇ. ಆದರೆ, ಚ್ ಅನುಘರ್ಷವಾದರೆ, ಚ್' ಸ್ಪರ್ಶ. ಈ ಮೂರು ವ್ಯಂಜನಗಳೂ ಉಚ್ಚಾರಣಾ ಕಾಲದ ಮೊದಲಿನಲ್ಲಿ ಈಷದ್‌ಘೋಷಗಳಾಗಿದ್ದು (weakly voiced), ಘೋಷ ತಂತುಗಳ ಸಂಕೋಚದಿಂದ ಇದ್ದಕ್ಕಿದ್ದ ಹಾಗೆಯೇ ತಮ್ಮ ಘೋಷತ್ವವನ್ನು ಕಳೆದುಕೊಳ್ಳುತ್ತವೆ. ಅಲ್ಲದೆ, ಅಪರೂಪವಾಗಿ, + ವರ್ಣ ಪರವಾದಾಗ, ನಾಸಿಕ್ಯ ವಿಮೋಚನವೂ (nasal release) ಇವುಗಳಿಗುಂಟು. ಅನುನಾಸಿಕ (nasal)[21] ನಾಸಿಕ್ಯಸ್ವರಗಳ (nasal vowels) ಆನುಪೂರ್ವಿಯಿರಲು, ಮುಂದಿರುವ ಈ ವರ್ಣಗಳಲ್ಲಿ ನಾಸಾನುರಣನ (nasal resonance) ಕಂಡುಬರುತ್ತದೆ.

**ಪ್':** ರುಮ್‌ಕುಪ್' 'ಅಕ್ಕಿ', ಭೊಪ್'ರೆನಾ 'ತುಂಬು', ಮಾಂಪ್'ಹಾನಾ 'ಬೆಳೆ'.

**ಟ್':** ಜುಟ್' 'ಬೇರು', ಅಕೆಟ್'ನಾ 'ಕಚ್ಚು', ಮೊಂಟ್' 'ಕಣ್ಣು'. ತ್ ವರ್ಣ ಪರವಾದಾಗ, ಈ ವರ್ಣಕ್ಕೆ ದಂತ್ಯಸ್ವನಪ್ರಭೇದವಿದೆ: ಅಕೆಟ್'ತೆಮೊಯ್ 'ಅವರು ಕಚ್ಚುತ್ತಾರೆ.'

**ಚ್':** ಲಾಚ್' 'ಹೊಟ್ಟೆ', ಡೆಚ್'ನಾ 'ಕತ್ತರಿಸು', ಮಿಂಚ್' 'ಚಿಕ್ಕಮ್ಮ'.

**ಕ್':** ಡಾಕ್' 'ನೀರು', ರಾಕ್' ರಾಕ್' 'ಹೂವು'. ಪ್', ಟ್', ಚ್' ವರ್ಣಗಳನ್ನು ಉಚ್ಚರಿಸುವಾಗ, ಪ್, ಟ್, ಚ್ ವರ್ಣಗಳ ಉಚ್ಚಾರಣೆಗೆ ಆವಶ್ಯಕವಾದ ಸ್ಪರ್ಶ ಪ್ರಯತ್ನ, ಜೊತೆಜೊತೆಗೇ ಘೋಷ ತಂತುಗಳ ಸಂಕೋಚ—ಇವೆರಡೂ ಕಂಡುಬರುತ್ತವೆ. ಆದರೆ ಕ್' ವರ್ಣವನ್ನುಚ್ಚರಿಸುವಾಗ ಈ ಎರಡೂ ವ್ಯಾಪಾರಗಳು ಕಂಡುಬರುವುದಿಲ್ಲ. ಸ್ವರತಂತುಗಳು ಸಂಕೋಚದ ಫಲವಾಗಿ ಒಂದಕ್ಕೊಂದು ಸ್ಪರ್ಶಿಸಿ ಶ್ವಾಸನಾಳದಿಂದ ಹೊರಬರುವ ಉಸಿರನ್ನು ತಡೆಗಟ್ಟಿದಾಗ ಉಂಟಾಗುವ ಸ್ವನವಿದು. ಮಕ್ಕಳಿಗೆ ವರ್ಣಮಾಲೆಯನ್ನು ಹೇಳಿಕೊಡುವಾಗ 'ಅ ಆ' 'ಇ ಈ' ಮುಂತಾಗಿ ಉಚ್ಚರಿಸುತ್ತೇವೆಯಷ್ಟೆ. ಈ ಎರಡು ಸ್ವರಗಳ ಮಧ್ಯೆ ಇರುವ ವ್ಯಂಜನವು ಸಾಧಾರಣವಾಗಿ ನಮ್ಮ ಗಮನಕ್ಕೆ ಬರುವುದಿಲ್ಲ. ಸ್ವಲ್ಪ ಗಮನಿಸಿ ನೋಡಿದರೆ ಇವೆರಡು ಸ್ವರೋಚ್ಚಾರಣೆಗಳ ಮಧ್ಯೆ ಶ್ವಾಸಬಂಧನವಿರುತ್ತದೆ. ಈ ಸ್ವನಕ್ಕೆ ಗಲೀಯ ಸ್ಪರ್ಶವೆಂದು (glottal stop) ಹೆಸರು.

ಗಲೀಯ ಸ್ಪರ್ಶದ ಸ್ಥಾನಕ್ಕೂ ಕ್, ಖ್, ಗ್, ಘ್ ವರ್ಣಗಳ ಮೃದು ತಾಲವ್ಯ ಸ್ಥಾನಕ್ಕೂ ವ್ಯತ್ಯಾಸವಿರುವುದಾದರೂ, ಅವುಗಳನ್ನೆಲ್ಲಾ ಒಂದೇ ಸಾಲಿನಲ್ಲಿ (ಮೇಲಿನಿಂದ ಕೆಳಕ್ಕೆ) ಸೇರಿಸಿರುವುದೇತಕ್ಕೆ ಎಂಬ ಪ್ರಶ್ನೆ ಏಳಬಹುದು. ಅದಕ್ಕಿರುವ ಅನೇಕ ಕಾರಣಗಳಲ್ಲಿ ಒಂದನ್ನು ಇಲ್ಲಿ ಸೂಚಿಸಬಹುದು. ಕೆಳಗಿನ ಉದಾಹರಣೆಗಳನ್ನು ನೋಡಿ :

---

೨೧ ಮೃದುತಾಲುವಿನಿಂದ ತುಟಿಗಳವರೆಗಿರುವ ಯಾವುದಾದರೂ ಸ್ಥಾನದಲ್ಲಿ ಉಸಿರನ್ನು ಸಂಪೂರ್ಣವಾಗಿ ತಡೆಗಟ್ಟಿ, ಮೃದುತಾಲುವನ್ನು ತಗ್ಗಿಸಿ ಉಸಿರನ್ನು ಮೂಗಿನ ಮೂಲಕ ಬಿಟ್ಟರೆ ಉಂಟಾಗುವ ಸ್ವನಗಳು ಅನುನಾಸಿಕಗಳು.

| | | |
|---|---|---|
| ಒಗೆಪ್ '— 'ಸುಡು' | ಒಗೆಫೊಕ್ 'ಮೊಯ್ | 'ಅವರು ಸುಟ್ಟರು' |
| | ಒಗೆಬೆಮೊಯ್ | 'ಅವರು ಸುಡುತ್ತಾರೆ' |
| ಅಕೆಟ್'— 'ಕಚ್ಚು' | ಅಕೆಥೊಕ್ 'ಮೊಯ್ | 'ಅವರು ಕಚ್ಚಿದರು' |
| | ಅಕೆಡೆಮೊಯ್ | 'ಅವರು ಕಚ್ಚುತ್ತಾರೆ' |
| ಪಿಚ್ '— 'ಮುರಿ' | ಪಿಛೊಕ್ 'ಮೊಯ್ | 'ಅವರು ಮುರಿದರು' |
| | ಪಿಜೆಮೊಯ್ | 'ಅವರು ಮುರಿಯುತ್ತಾರೆ' |

ಮೇಲಿನ ಉದಾಹರಣೆಗಳಿಂದ ಎರಡು ಅಂಶಗಳು ವ್ಯಕ್ತವಾಗುತ್ತವೆ: (೧) ಖಡಿಯಾ ಭಾಷೆಯಲ್ಲಿ —ಒಕ್ ' ಎಂಬ ಪ್ರತ್ಯಯ ಭೂತಕಾಲವನ್ನೂ,—ಎ ಎಂಬ ಪ್ರತ್ಯಯ ಭವಿಷ್ಯತ್ ಕಾಲವನ್ನೂ,—ಮೊಯ್ ಎಂಬ ಪ್ರತ್ಯಯ ಪ್ರಥಮ ಪುರುಷ ಬಹುವಚನವನ್ನೂ ಸೂಚಿಸುತ್ತವೆ. (೨) ಪ್,'ಟ್,'ಚ್ ' ವರ್ಣಗಳು —ಒಕ್ ' ಪ್ರತ್ಯಯ ಪರವಾದಾಗ ಸಂಧಿಕಾಲದಲ್ಲಿ ಫ್,ಥ್,ಛ್ ಎಂದೂ,—ಎ ಪ್ರತ್ಯಯ ಪರವಾದಾಗ ಬ್,ಡ್,ಜ್ ಎಂದೂ ಮಾರ್ಪಡುತ್ತವೆ.

ಈಗ ಕ್ ' ವರ್ಣಾಂತವಾದ ಒಂದು ಧಾತುವನ್ನು ತೆಗೆದುಕೊಂಡು ಪ್ರಥಮ ಪುರುಷ ಬಹುವಚನದಲ್ಲಿ ನಡೆಸಿ ನೋಡೋಣ.

| | | |
|---|---|---|
| ರೆಮಾಕ್ ' 'ಕರೆ' | ರೆಮಾಖೊಕ್ 'ಮೊಯ್ | 'ಅವರು ಕರೆದರು' |
| | ರೆಮಾಗೆಮೊಯ್ | 'ಅವರು ಕರೆಯುತ್ತಾರೆ' |

ಪ್',ಟ್',ಚ್' ವರ್ಣಗಳಿಗೆ ಸಂಧಿಕಾಲದಲ್ಲಿ ಉಂಟಾಗುವ ವಿಕಾರಗಳೇ ಕ್' ವರ್ಣಕ್ಕೂ ಉಂಟಾಗುವುದರಿಂದ, ಅದನ್ನು ಕವರ್ಗದಲ್ಲೇ ಸೇರಿಸುವುದು ಉಚಿತವಾಗಿದೆ.

೩.೨.೬. ಆರನೇ ಸಾಲಿನಲ್ಲಿರುವ ಎರಡು ವ್ಯಂಜನಗಳೂ ಘರ್ಷಗಳು.

**ಸ್ :** ಅಘೋಷ ವರ್ತ್ಸ್ಯ: ಸೊಲೊಕ್ ' 'ನಾಯಿ,' ಸಸುರ್ 'ಮಾವ,' ಬೊಕ್‌ಸೆಲ್ 'ನಾದಿನಿ,' ಒಸ್ 'ಇಬ್ಬನಿ.'

**ಹ್ :** ಈಷದ್‌ಘೋಷ ಗಲೀಯ : ಹೊಇನಾ 'ಆಗು,' ಲೊಹಾ 'ಕಬ್ಬಿಣ,' ಚೆಹ್‌ರಾ 'ಮುಖ,' ಗ್‌ವಹ್ 'ಸಾಕ್ಷಿ'.

೩.೨.೭. ಏಳನೆಯ ಸಾಲಿನ ನಾಲ್ಕು ವ್ಯಂಜನಗಳೂ ಅನುನಾಸಿಕಗಳು. ಸ್ಥಾನ, ಕರಣ, ಘೋಷತ್ವ—ಈ ಮೂರು ಲಕ್ಷಣಗಳಲ್ಲೂ ಮೂರನೇ ಸಾಲಿನ ವ್ಯಂಜನಗಳಂತೆಯೇ. ಈ ನಾಲ್ಕು ಅನುನಾಸಿಕಗಳೂ +ವರ್ಣ ಪರವಾದಾಗ ದೀರ್ಘವಾಗಿರುತ್ತವೆ.

**ಮ್ :** ಮೊಕ್ ' 'ಹೊಗೆ,' ರಮಂಟ್ ' 'ಉಗುರು,' ಕೊಮ್‌ಹೆಜ್ + 'ಒರಟು,' ಅಮ್+ 'ನೀನು.'

**ನ್ :** ಪರದಲ್ಲಿರುವ ವರ್ಣಗಳಿಗನುಗುಣವಾಗಿ ನ್ ವರ್ಣಕ್ಕೆ ಮೂರು ಸ್ವನಪ್ರಭೇದಗಳಿವೆ. ದಂತ್ಯಸ್ಪರ್ಶಗಳು ಪರದಲ್ಲಿರುವಾಗ ದಂತ್ಯವಾಗಿಯೂ ಪ್ರತಿವೇಷ್ಟಿತ ಪಶ್ಚವರ್ತ್ಸ್ಯ ಸ್ಪರ್ಶಗಳು ಪರದಲ್ಲಿರುವಾಗ ಪ್ರತಿವೇಷ್ಟಿತ ಪಶ್ಚವರ್ತ್ಸ್ಯವಾಗಿಯೂ, ಬಹುತೇಕ ಇತರೆಡೆಗಳಲ್ಲಿ ವರ್ತ್ಸ್ಯವಾಗಿಯೂ ಉಚ್ಚಾರವಾಗುತ್ತದೆ: ನಾಯ್‌ಗೊಮ್+ 'ಕಮ್ಮಾರ,' ತರನ್+ 'ಹಗಲು,' ಕೊನ್‌ಥೆಟ್' 'ಹಕ್ಕಿ,' ಅನ್‌ಡಾ 'ಮೊಟ್ಟೆ,' ಪೆನೆರ್ 'ರೆಕ್ಕೆ.' ತಾಲವ್ಯ ಅನುಘರ್ಷಗಳು ಪರದಲ್ಲಿರುವಾಗ, ವರ್ತ್ಸ್ಯ, ಪ್ರತಿವೇಷ್ಟಿತ ಪಶ್ಚವರ್ತ್ಸ್ಯ ಉಚ್ಚಾರಣೆಗಳು ವೈಕಲ್ಪಿಕ

ವಾಗಿ (free variation) ಕಂಡುಬರುತ್ತದೆ: ಬನ್‌ಭಾಯ್‌ನಾ ‘ರಕ್ಷಿಸು,’ ಹನ್‌ಜೆಕ್’ ‘ಅದು.’[22]

**ಞ್ :** ಞತೊಕ್ ’ ನಾ ‘ತಿನ್ನು’, ಎಞಮ್ + ‘ರಕ್ತ,’ ತಞಾ ನಾ ‘ಸೇಯು,’ ಮೊಂಞ್ + ‘ಒಂದು.’

**ಜ್ :** ಬುಜಮ್ + ‘ಹಾವು,’ ಬೊಜ್‌ತೆಲ್ ‘ಕೋಣ,’ ಡಜ್‌ನಾ ‘ಕಳಿಸು,’ ಗಿಳಿಜ್ + ‘ಬೇಸಗೆ.’

**೩.೨.೮.** ಎಂಟನೇ ಸಾಲಿನಲ್ಲಿರುವ ಏಕಮಾತ್ರ ವ್ಯಂಜನವು ಘೋಷ ವರ್ತ್ಸ್ಯ ಪಾರ್ಶ್ವಿಕ (lateral).[23] ಟ ವರ್ಗದ ವರ್ಣಗಳು ಪರವಾಗಿದ್ದಾಗ ಕನ್ನಡದ ಳಕಾರದಂತೆಯೂ, ಇತರೆಡೆಗಳಲ್ಲಿ ಕನ್ನಡದ ಲಕಾರದಂತೆಯೂ ಉಚ್ಚಾರಣೆ:[24] ಲರಜ್ + ‘ಬೇರು’, ಬಿಲೊಞ + ‘ಬೆಕ್ಕು’, ಉಲ್‌ಟಾ ‘ಎದುರು’, ಜೊಲ್ ‘ಎಣ್ಣೆ’.

**೩.೨.೯.** ಒಂಬತ್ತನೇ ಸಾಲಿನಲ್ಲಿರುವ ವ್ಯಂಜನಗಳಲ್ಲಿ ಒಂದು ಕಂಪಿತ (trill) ಮತ್ತೊಂದು ತಾಡಿತ (flap).[25] ಎರಡೂ ಘೋಷಗಳು.

**ರ್ :** ವರ್ತ್ಸ್ಯ ಕಂಪಿತ. ಕನ್ನಡದ ರೇಫಕ್ಕಿಂತಲೂ ಹೆಚ್ಚು ಕಂಪನಗಳಿಂದ ಕೂಡಿದ್ದು: ರವನ್ + ‘ಹದ್ದು’, ಬಿರು ‘ಪರ್ವತ’, ದರ್‌ಕಾರ್ ‘ಅವಶ್ಯಕತೆ’, ಕಿನಿರ್ ‘ಕಾಡು’.

**ಳ್ :**[26] ಪ್ರತಿವೇಷ್ಟಿತ ಪಶ್ಚ ವರ್ತ್ಸ್ಯ ತಾಡಿತ. ಕನ್ನಡದ ಆಡು ಎಂಬ ಪದದಲ್ಲಿ ಡಕಾರಕ್ಕೆ ಇರುವ ಉಚ್ಚಾರಣೆಯಂತೆ: ಗೊಂಳಿ ‘ಹಸು’, ಕನ್‌ಥ್‌ಳಾ ‘ಹಲಸಿನ ಹಣ್ಣು’, ಖಳಿಯಾ ‘ಖಡಿಯಾ’, ಪಾಂಳ್ ‘ಬ್ರಾಹ್ಮಣ’.

**೩.೨.೧೦.** ಹತ್ತನೇ ಸಾಲಿನಲ್ಲಿರುವ ವ್ಯಂಜನ ಎಲ್ಲ ವಿಧದಲ್ಲೂ ಳ್ ವರ್ಣದಂತೆಯೇ ಆದರೂ, ಮಹಾ ಪ್ರಾಣತ್ವವಿರುವುದೇ ಇದರ ವೈಶಿಷ್ಟ್ಯ,

**ಳ್ಹ್ :**[27] ದಾಳ್ಹಿ ‘ಗಡ್ಡ’, ಗಾಕ್’ ಳ್ಹಾ ‘ಆಳ’, ಸಾಂಳ್ಹ್ ‘ಗೂಳಿ’.

---

[22] ಕನ್ನಡ ನವರ್ಣಕ್ಕೂ ಖಡಿಯಾ **ನ್**‌ವರ್ಣಕ್ಕೂ ಇರುವ ಸಾಮ್ಯ ವೈಷಮ್ಯಗಳನ್ನು ಗಮನಿಸಬೇಕು. ಕನ್ನಡದಲ್ಲಿರುವಂತೆಯೇ (ಸನ್ತೆ, ಯತ್ನ) ಖಡಿಯಾದಲ್ಲಿಯೂ ದಂತ್ಯ ನ್‌ಸ್ವನವು ನವರ್ಣಕ್ಕೆ ಸೇರಿದ್ದೇ; ಬಹುತೇಕ ಇತರೆಡೆಗಳಲ್ಲಿ **ನ್**‌ವರ್ಣಕ್ಕೆ ವರ್ತ್ಸ್ಯೋಚ್ಚಾರಣೆ. ಆದರೆ, ಕನ್ನಡದ ನವರ್ಣಕ್ಕೆ, ತಾಲವ್ಯಗಳು ಪರವಾದಾಗ, ತಾಲವ್ಯಸ್ವನ ಪ್ರಭೇದವುಂಟು (ಪಞ್ಚ, ಮಞ್ಜು); ಅಲ್ಲದೆ ಕನ್ನಡದಲ್ಲಿ ನವರ್ಣ ಣವರ್ಣ ಗಳೆರಡೂ ಉಂಟು (ಮನೆ, ಮಣೆ). ಖಡಿಯಾದಲ್ಲಿ ಪ್ರತಿವೇಷ್ಟಿತ ಣ್‌ಸ್ವನವು **ನ್**‌ವರ್ಣಕ್ಕೇ ಸೇರಿದ್ದು; ಅಲ್ಲದೆ **ನ್**‌ವರ್ಣ **ಞ್**‌ವರ್ಣಗಳೆರಡೂ ಉಂಟು. [23] ಶ್ವಾಸಕೋಶದಿಂದ ಹೊರಬರುವ ಉಸಿರನ್ನು, ಬಾಯಲ್ಲಿರುವ ಯಾವುದಾದರೂ ಸ್ಥಾನದಲ್ಲಿ ತಡೆಗಟ್ಟಿ, ನಾಲಗೆಯ ಪಾರ್ಶ್ವದ (ಗಳ) ಲ್ಲಿ ಬಿಟ್ಟರೆ ಉಂಟಾಗುವ ಸ್ವನಗಳು ಪಾರ್ಶ್ವಿಕಗಳು. [24] ಕನ್ನಡದಲ್ಲಿ ಲವರ್ಣ ಳವರ್ಣಗಳೆರಡೂ ಉಂಟು (ಕಾಲು—ಕಾಳು). ಆದರೆ ಖಡಿಯಾದಲ್ಲಿ ಲ್ ಮತ್ತು ಳ್ ಸ್ವನಗಳು **ಲ್**‌ವರ್ಣದ ಸ್ವನಪ್ರಭೇದಗಳು. ೩, ೨೦, ೨೨—ಈ ಅಡಿ ಟಿಪ್ಪಣಿ ಗಳಲ್ಲಿ ಹೇಳಿರುವ ಅಂಶಗಳನ್ನು ಇಲ್ಲಿಯೂ ಸೂಕ್ತವಾಗಿ ಅನುವೃತ್ತಿ ಮಾಡಿಕೊಳ್ಳಬೇಕು. [25] ತುಟಿಗಳು, ನಾಲಗೆಯ ತುದಿ, ಕಿರುನಾಲಗೆ (uvula)—ಇವುಗಳಲ್ಲಿ ಯಾವುದಾದರೂ ಒಂದು ವಿಶೇಷವಾಗಿ ಕಂಪಿಸಿದರೆ ಉಂಟಾಗುವ ಸ್ವನಗಳು ಕಂಪಿತಗಳು. ಒಂದೇ ಒಂದು ಕಂಪನದಿಂದ ಕೂಡಿರುವ ಕಂಪಿತಗಳೇ ತಾಡಿತಗಳು. ನಾಲಗೆಯ ತುದಿ ಕಂಪಿಸುವಾಗ ವರ್ತ್ಸವನ್ನು ತಟ್ಟುತ್ತಿದ್ದರೆ ಉಂಟಾಗುವ ಸ್ವನವರ್ತ್ಸ್ಯ ಕಂಪಿತ. ನಾಲಗೆಯ ತುದಿಯ ಕೆಳಭಾಗ ಪಶ್ಚವರ್ತ್ಸವನ್ನು ಒಂದೇ ಒಂದು ಸಲ ತಟ್ಟಿದರೆ ಉಂಟಾಗುವ ಸ್ವನ, ಪ್ರತಿವೇಷ್ಟಿತ ಪಶ್ಚವರ್ತ್ಸ್ಯ ತಾಡಿತ. [26] ಎರಡನೇ ಅಡಿಟಿಪ್ಪಣಿಯ ಕಡೆಯ ಎರಡು ವಾಕ್ಯಗಳನ್ನು ನೋಡಿ. [27] ಲಿಪಿ ಸಾದೃಶ್ಯದಿಂದ ಈ ವರ್ಣವು ಸಂಯುಕ್ತವೆಂದು ಭಾವಿಸಬಾರದು. ಎರಡನೇ ಅಡಿ ಟಿಪ್ಪಣಿಯ ಕಡೆಯ ಎರಡು ವಾಕ್ಯಗಳನ್ನು ನೋಡಿ.

11976



೩.೨.೧೧. ಕಡೆಯ ಸಾಲಿನ ಎರಡು ವ್ಯಂಜನಗಳೂ ಘೋಷ ಘರ್ಷರಹಿತ ನಿರಂತರಗಳು (frictionless continuants).[28]

**ಯ್ :** ತಾಲವ್ಯ. ಉಚ್ಚಾರಣೆ ಕನ್ನಡದ ಯಕಾರದಂತೆ: ಯೊನಾ 'ನೋಡು', ಕೊಯೊ 'ಗಾಳಿ, ದೆವ್ವ', ಕೊಯ್‌ಲಾ 'ಇದ್ದಲು', ಸಿಜ್‌ಕೊಯ್ 'ಕೋಳಿ'.

**ವ್ :** ಓಷ್ಠ್ಯ. ನೆವಾಂ 'ಸೀತಾಫಲ', ಆವ್‌ನಾ 'ಇರು', ಛಾವ್ 'ಆರು'. ಹಾವು, ಹೂವು, ಪ್ರೋಟು ಮುಂತಾದ ಕನ್ನಡಪದಗಳಲ್ಲಿರುವ ವಕಾರೋಚ್ಚಾರಣೆಯಂತೆ. ಬಾವಿ, ವಾರ ಮುಂತಾದ ಕನ್ನಡಪದಗಳಲ್ಲಿರುವ ವಕಾರದಂತೆ ದಂತೋಷ್ಠ್ಯವಲ್ಲ (labio-dental).[29]

**೩.೩.** ನಾಸಿಕತೆ.[30] ಕೇವಲ ಸ್ವರಾಂಗವಾಗಿಯೇ ವರ್ತಿಸುವ ಈ ವರ್ಣದ ಉಚ್ಚಾರಣೆಯ ಕಾಲದಲ್ಲಿ ಉಸಿರು ಏಕಕಾಲದಲ್ಲಿ ಬಾಯಿಂದಲೂ ಮೂಗಿಂದಲೂ ಹೊರಬರುತ್ತದೆ. ಕೇವಲ ಸ್ವರಾಂಗವಾಗಿದ್ದರೂ ಇದಕ್ಕೆ ವರ್ಣಸಂಜ್ಞೆಯನ್ನು ಕೊಟ್ಟಿರುವುದು ಉಚಿತವೇ. ಮುಖಸ್ವರಗಳಿಗೂ (oral vowels) ನಾಸಿಕ್ಯ ಸ್ವರಗಳಿಗೂ ಇರುವ ಭೇದ ಸಾರ್ಥಕವಾದದ್ದು: ದಾವ್ 'ಮಚ್ಚು', ದಾಂವ್ 'ಆವರ್ತಿ'; ಕುಇನಾ 'ಕಾಡುಹಿಡಿ', ಜುಂಇನಾ 'ವಾಸನೆ ನೋಡು'; ತಇ 'ಹುರಿಯೋಡು', ಕಂಇ 'ಕೆಂಜಗ'; ಭುತ್ 'ಭೂತ', ದುಂತ್ 'ದೇವತೆ'; ಎಳಿ 'ಹಿಮ್ಮಡಿ', ಎಂಳಿ 'ಒನಕೆ'. ನಾಸಿಕ್ಯಸ್ವರಗಳಲ್ಲೆಲ್ಲಾ ಕಂಡು ಬರುವ ನಾಸಿಕ್ಯ ಲಕ್ಷಣವನ್ನು ಪ್ರತ್ಯೇಕಿಸಿ ವರ್ಣವಾಗಿ ಪರಿಗಣಿಸದಿದ್ದರೆ ಮತ್ತೆ ಆರು ಸ್ವರಗಳಿಗೆ ವರ್ಣಸಂಜ್ಞೆ ಕೊಡಬೇಕಾಗಿ ಬರುತ್ತದೆ. ಅನುಸ್ವಾರಸಹಿತವಾದ ಸ್ವರಗಳ ಮುಂದೆ ಬರಬಹುದಾದ ಇತರ ಸ್ವರಗಳೂ, ಯ್, ವ್ ವರ್ಣಗಳೂ ನಾಸಿಕ್ಯಭಾವವನ್ನು ಹೊಂದುತ್ತವೆ.

**೩.೪.** + : ಈ ವರ್ಣವು ನಾವು ಇದುವರೆಗೂ ನೋಡಿದ ವರ್ಣಗಳಿಗಿಂತಲೂ ಭಿನ್ನವಾದದ್ದು. ಉಳಿದ ಎಲ್ಲಾ ವರ್ಣಗಳೂ ಒಂದಲ್ಲ ಒಂದು ಸ್ವನರೂಪದಿಂದ ವ್ಯಕ್ತವಾದರೂ, ಈ ವರ್ಣಕ್ಕೆ ಯಾವ ಸ್ವನರೂಪವೂ ಇಲ್ಲ. ಮಿಕ್ಕ ವರ್ಣಗಳಿಗಿರುವಂತೆ ಇದಕ್ಕೆ ಉಚ್ಚಾರಣೆಯಿಲ್ಲ. ಆದರೂ ಈ 'ಶೂನ್ಯ'ಕ್ಕೆ ವರ್ಣಸಂಜ್ಞೆಯನ್ನು ಕೊಟ್ಟಿರುವುದೇಕೆಂದು ಪ್ರಶ್ನಿಸಬಹುದು. ಅದಕ್ಕುತ್ತರವಾಗಿ ಕೆಳಗಿನ ಮಾತುಗಳನ್ನು ಬರೆಯಲಾಗಿದೆ.

ಸ್ವರಗಳೂ ಅನುನಾಸಿಕಗಳೂ ಕೆಲವೆಡೆಗಳಲ್ಲಿ ದೀರ್ಘಸ್ವನಪ್ರಭೇದಗಳನ್ನು ಪಡೆದಿರುವುದನ್ನು ಮೇಲೆ ತಿಳಿಸಲಾಗಿದೆ. ಆ ಸಂದರ್ಭದಲ್ಲಿ +ವರ್ಣವನ್ನು ಉಪಯೋಗಿಸಲಾಯಿತು. ಈಗ +ಸಂಜ್ಞೆಯನ್ನು ಕೆಲವು ಉದಾಹರಣೆಗಳ ಸಹಾಯದಿಂದ ವಿವರಿಸಬಹುದು. ಮೊದಲು ಎರಡು ಶಬ್ದರೂಪಗಳನ್ನು ತೆಗೆದುಕೊಂಡು ನೋಡೋಣ.

ಲೆಜ್‌ಗಾ 'ಎಡ'
ಸೆಜ್‌ಗಾ 'ಮೊದಲೇ'

ಈ ಲೇಖನದ ೩.೨.೭. ಭಾಗದಲ್ಲಿ ಅನುನಾಸಿಕಗಳು ಕೆಲವೆಡೆಗಳಲ್ಲಿ ದೀರ್ಘವಾಗಿ ಉಚ್ಚಾರವಾಗುತ್ತವೆಯೆಂದು ಹೇಳಿದೆ. ಈ ಮಾತಿನ ಪ್ರಕಾರ ಮೇಲಿನ ಉದಾಹರಣೆಗಳಲ್ಲಿರುವ ಎರಡು ಜ್ ವರ್ಣಗಳೂ ಹ್ರಸ್ವವಾಗಿಯೇ ಉಚ್ಚಾರವಾಗುತ್ತವೆ ಎಂದಂತಾಯಿತು. ಆದರೆ ವಸ್ತುಸ್ಥಿತಿ ಹಾಗಿಲ್ಲ. ಮೊದಲ ಜ್ ವರ್ಣವು ಹ್ರಸ್ವವಾಗಿಯೂ ಎರಡನೆಯದು

---

[28] ಘರ್ಷ ಸ್ವನಗಳಿಗೂ ಸಂವೃತ ಸ್ವರಗಳಿಗೂ ಮಧ್ಯಸ್ಥವಾದ ಸ್ವನಗಳು ಘರ್ಷರಹಿತನಿರಂತರಗಳು. [29] ಕೆಳದುಟಿ ಕರಣವಾಗಿದ್ದು, ಮೇಲು ಹಲ್ಲಿನ ತುದಿ ಸ್ಥಾನವಾಗಿದ್ದಾಗ ಉಂಟಾಗುವ ಸ್ವನಗಳು ದಂತೋಷ್ಠ್ಯಗಳು. [30] ಎರಡನೇ ಅಡಿಟಿಪ್ಪಣಿಯ ಕಡೆಯ ಎರಡು ವಾಕ್ಯಗಳನ್ನು ನೋಡಿ.

ದೀರ್ಘವಾಗಿಯೂ ಉಚ್ಚಾರವಾಗುತ್ತದೆ. ಎರಡು ಕಾರಣಗಳಿಂದ ಹೀಗಾಗಿರಬಹುದು : (೧) ಹ್ರಸ್ವ ದೀರ್ಘ ಜ್ ಸ್ವನಗಳೆರಡೂ ಬೇರೆ ಬೇರೆ ವರ್ಣಗಳು. (೨) ಈ ಎರಡು ಪ್ರಭೇದಗಳು ತಲೆದೋರಲು ಜ್‌ವಿನ ವರ್ಣಸಾಹಚರ್ಯದಲ್ಲೇ ಏನೋ ವಿಶೇಷವಿರಬೇಕು. ಈ ಮಾತು ಮಿಕ್ಕಮೂರು ಅನುನಾಸಿಕಗಳಿಗೂ ಅನ್ವಯವಾಗುತ್ತದೆ, ಈಗ ಮತ್ತೆರಡು ಉದಾಹರಣೆಗಳನ್ನು ನೋಡೋಣ.

ಉತಿಚ್ ' ' ಈ ಕಡೆ '
ಉತಿಕ್ ' ' ಈ ಕೈ '

ಈ ಲೇಖನದ ೩. ೧. ಭಾಗದಲ್ಲಿ ಬರೆದಿರುವಂತೆ, ಮೇಲಿನ ಉದಾಹರಣೆಗಳಲ್ಲಿರುವ ಎರಡು ಉ ವರ್ಣಗಳೂ ಹ್ರಸ್ವವಾಗಿ ಉಚ್ಚಾರವಾಗಬೇಕು. ಆದರೆ ಮೊದಲ ಉ ಹ್ರಸ್ವವಾಗಿಯೂ ಎರಡನೆಯದು ದೀರ್ಘವಾಗಿಯೂ ಉಚ್ಚಾರವಾಗುತ್ತದೆ. ಹೀಗೇಕಾಯಿತು ? ಮತ್ತೆ, ಮೇಲೆ ಕೊಟ್ಟಿರುವಂಥ ಎರಡು ಕಾರಣಗಳನ್ನೇ ಹೇಳಬೇಕಾಗುತ್ತದೆ.

ಮೇಲೆ ಕೊಟ್ಟಿರುವ ಉದಾಹರಣೆಗಳನ್ನೇ ಬೇರೊಂದು ದೃಷ್ಟಿಯಿಂದ ನೋಡೋಣ. ಖಡಿಯಾ ಭಾಷೆಯಲ್ಲಿ ಆಘಾತವು (stress) ಸಾಧಾರಣವಾಗಿ ಶಬ್ದರೂಪಗಳ ಮೊದಲ ಸ್ವರದ ಮೇಲಿರುತ್ತದೆ. ಇದರ ಪ್ರಕಾರ ಮೊದಲಿನೆರಡು ಉದಾಹರಣೆಗಳಲ್ಲಿರುವ ಎ ವರ್ಣದ ಮೇಲೂ, ಅನಂತರದ ಎರಡು ಉದಾಹರಣೆಗಳಲ್ಲಿರುವ ಎ ವರ್ಣದ ಮೇಲೂ ಆಘಾತವಿದೆ. ಇಷ್ಟೇ ಇದ್ದಿದ್ದರೆ ಯಾವ ಪ್ರಶ್ನೆಯೂ ಏಳುತ್ತಿರಲಿಲ್ಲ. ಆದರೆ, ಲೆಜ್‌ಗಾ ಎಂಬುದರಲ್ಲಿ ಎ ವರ್ಣದ ಮೇಲೆ ಮಾತ್ರ ಆಘಾತವಿದ್ದರೆ, ಸೆಜ್‌ಗಾ ಎಂಬುದರಲ್ಲಿ ಎ ವರ್ಣದ ಮೇಲೂ ಆ ವರ್ಣದ ಮೇಲೂ ಆಘಾತವಿದೆ. ಹಾಗೆಯೇ, ಉತಿಚ್ ' ಎಂಬುದರಲ್ಲಿ ಉ ವರ್ಣದ ಮೇಲೆ ಮಾತ್ರ ಆಘಾತವಿದ್ದರೆ, ಉ:ತಿಕ್ ' ಎಂಬುದರಲ್ಲಿ ಉ ವರ್ಣದ ಮೇಲೂ ಇ ವರ್ಣದ ಮೇಲೂ ಆಘಾತವಿರುತ್ತದೆ. ಇಂಥ ಸನ್ನಿವೇಶದಲ್ಲಿ ಪರಿಹಾರಗಳಿರುವುದು ಎರಡೇ : ಆಘಾತ, ದೀರ್ಘಸ್ವರ ದೀರ್ಘಾನುನಾಸಿಕಗಳನ್ನು ಪ್ರತ್ಯೇಕವರ್ಣಗಳಾಗಿ ಪರಿಗಣಿಸುವುದು, ಅಥವಾ ಪೂರ್ವಾಪರವರ್ಣಗಳಲ್ಲೇ ಏನೋ ವಿಶೇಷವನ್ನು ಪರಿಗಣಿಸುವುದು.

ಮೊದಲನೆಯ ಪರಿಹಾರವನ್ನು ಅನುಸರಿಸಿದ್ದೇ ಆದರೆ, ಈಗಿರುವ ವರ್ಣಗಳಿಗಿಂತಲೂ ಅಧಿಕವಾಗಿ ನಾಲ್ಕು ದೀರ್ಘ ಅನುನಾಸಿಕಗಳೂ, ಐದು ದೀರ್ಘ ಸ್ವರಗಳೂ ಒಂದು ಆಘಾತವೂ ವರ್ಣಸಂಜ್ಞೆಯನ್ನು ಪಡೆಯಬೇಕಾಗುತ್ತದೆ. ಇದರ ಫಲವಾಗಿ, ಭಾಷೆಯ ಅನೇಕ ಶಬ್ದರೂಪಗಳಲ್ಲಿ ಅನುಮಾನದಿಂದಲೇ ಸಿದ್ಧವಾಗುತ್ತಿದ್ದ ಕೆಲವು ಸ್ವನಪ್ರಭೇದಗಳು ವರ್ಣಸಂಜ್ಞೆಯನ್ನು ಪಡೆದು ವರ್ಣಸಮಾಮ್ನಾಯವು ಅಳತೆ ಮೀರುತ್ತಿತ್ತು. ವರ್ಣಸಮಾಮ್ನಾಯದಲ್ಲಿ +ವರ್ಣವನ್ನು ಅಳವಡಿಸಿರುವುದರಿಂದ, ಮೇಲಿನ ಆಕ್ಷೇಪಗಳಿಗೆ ಎಡೆಯಿಲ್ಲದಂತಾಗುತ್ತದೆ. ಆಗ, ಸೆಜ್‌ಗಾ ಮತ್ತು ಉತಿಚ್ ' ಎಂಬ ರೂಪಗಳನ್ನು ಸೆಜ್+ಗಾ ಮತ್ತು ಉ+ತಿಚ್ ' ಎಂದು ಸಂಕೇತಿಸಿದರೆ, ಮೊದಲು ಅನುಮಾನದಿಂದ ಸಿದ್ಧವಾಗುತ್ತಿದ್ದ ಸ್ವನಪ್ರಭೇದಗಳು ಈಗಲೂ +ವರ್ಣವಿಧಾಯಕದಿಂದ ಅನುಮಾನಕ್ಕೊಳಪಡುತ್ತದೆ.

ಈ ಸಂಜ್ಞೆಯ ಮತ್ತೊಂದು ವಿಶೇಷವೆಂದರೆ, ಇದರ ಎರಡು ಕಡೆಗಳಲ್ಲೂ ಇರುವ ರೂಪಗಳು ಬೇರೆ ಬೇರೆ ಅರ್ಥಘಟಕಗಳಾಗಿರುವುದೇ (morphemes). ಕೇವಲ ವರ್ಣಶಾಸ್ತ್ರದ ಪ್ರಕ್ರಿಯೆಗಳಿಂದಲೇ ಸಿದ್ಧವಾದ ಈ ಎರಡು ರೂಪಗಳಿಗೆ ಪದಸಂಜ್ಞೆಯನ್ನು ಕೊಡಬಹುದು. ಇಲ್ಲಿ ಪದವೆಂದರೆ ಮೌನದಿಂದ (pause) ತೊಡಗಿ +ವರ್ಣದವರೆಗೂ ಇರುವ ಅಥವಾ ಎರಡು +ವರ್ಣಗಳ ನಡುವೆ ಇರುವ ಅಥವಾ +ವರ್ಣದಿಂದ ತೊಡಗಿ ವಿರಾಮದವರೆಗಿರುವ ವರ್ಣ

ಸಮುದಾಯ. ವರ್ಣಶಾಸ್ತ್ರದಲ್ಲಿ ವಿಧಾಯಕವಾಗುವ ಈ ಪದವೂ ವ್ಯಾಕರಣ ಪ್ರಕ್ರಿಯೆಗಳಿಂದ ಸಿದ್ಧವಾಗುವ ಪದವೂ ಒಂದೇ ಆಗಿರಬಹುದು ಅಥವಾ ಭಿನ್ನವಾಗಿರಬಹುದು.

*    *    *    *    *

ಮೇಲೆ ಮಾಡಿರುವ ಬಿಡಿಯಾ ವರ್ಣಸಮಾಮ್ನಾಯವು ಅಪೂರ್ಣವಾದದ್ದು. ಶಬ್ದರೂಪಗಳಲ್ಲಿ ಕಂಡು ಬರುವ ಸ್ವರ ವ್ಯಂಜನಗಳ ವಿನ್ಯಾಸ (distribution), ಸಂಯುಕ್ತ ವರ್ಣಗಳ (clusters) ಸ್ವರೂಪ, ನುಡಿಯಲ್ಲಿ ಕಂಡು ಬರುವ ಧ್ವನಿಯ ಏರಿಳಿತಗಳು (intonational features) ಇವುಗಳ ವಿವೇಚನೆಯನ್ನು ಈ ಲೇಖನದಲ್ಲಿ ಬಿಟ್ಟುಬಿಡಲಾಗಿದೆ.

**ಎಚ್. ಎಸ್. ಬಿಳಿಗಿರಿ**

# ಮೃಗಯಾವಿಹಾರಿ ದುಷ್ಯಂತ

ಮಹಾಭಾರತದ ಉಪಾಖ್ಯಾನದಲ್ಲಿಯೂ, ಕಾಳಿದಾಸನ ನಾಟ್ಯಕಥೆಯಲ್ಲಿಯೂ ದುಷ್ಯಂತನು ಮೃಗಯೆಗಾಗಿ ಬಂದು, ದೈವವಶಾತ್ ಕಣ್ವನ ಆಶ್ರಮದ ಬಳಿ ಬಂದು, ಆ ಮುನಿಯು ಆಶ್ರಮದಲ್ಲಿಲ್ಲದಾಗ ಶಕುಂತಲೆಯನ್ನು ಕಂಡನೆಂದು ಹೇಳಿದ್ದಾಗಿದೆ. ಮೃಗಯೆ ಒಂದು ರಾಜವ್ಯಸನ. ಪಾನ, ದ್ಯೂತ, ಅಥವಾ ಸ್ತ್ರೀವ್ಯಸನ, ದುಷ್ಯಂತನಿಗೆ ಇದ್ದಂತೆ ಖ್ಯಾತಿ ಇಲ್ಲ. ಮೃಗಯೆಯಿಂದ ಪ್ರಜೆಗಳಿಗೂ ಕೊಂಚ ಉಪಯೋಗವಿದೆ. ಆದರೂ ಕಾಳಿದಾಸನ ಕಾಲಕ್ಕೆ ಮೃಗಯೆ ಕೂಡ ಅಷ್ಟೊಂದು ಒಳ್ಳೆಯ ವ್ಯವಸಾಯವಲ್ಲ ಎಂಬ ಭಾವ ಇದ್ದಿರಬೇಕು. ಉಜ್ಜಯಿನಿಯ ಸುತ್ತುಮುತ್ತಲಿದ್ದ ಜೈನ ಹಾಗೂ ಬೌದ್ಧ ವಾತಾವರಣದ ಪ್ರಭಾವವೊ ಏನೋ; ಇಂಥ ಶಂಕೆಗೆ ಉತ್ತರವೊ ಏನೊ ಎಂಬಂತೆ ದುಷ್ಯಂತನೊಡನೆ ಬೇಟೆಗೆ ಬಂದ ಸೇನಾಪತಿಯು ಮೃಗಯೆಯಂಥ ವಿನೋದವಿಲ್ಲ ಇದನ್ನು ವ್ಯಸನವೆಂದು ಕರೆಯುವುದು ಮಿಥ್ಯಾವಾದ ಎಂದು ಮೃಗಯೆಯ ವಕಾಲತ್ತನ್ನು ವಹಿಸಿ ಮಾತನಾಡಿದ್ದಾನೆ. ಮೈಯ ಕೊಬ್ಬಿಳಿದು ಹೊಟ್ಟೆ ತೆಳ್ಳಗುಳಿದು, ಕೂತೇಳಲು ಮೈ ಸೂಟಿಯಾಗಿರುತ್ತದೆ. ಹೆದರಿಕೆಯಲ್ಲಿಯೂ ಸಿಟ್ಟಿನಲ್ಲಿಯೂ ಮೃಗಗಳ ಚಿತ್ತವು ಹೇಗೆ ವಿಕೃತಗೊಳ್ಳುವುದು ಎಂಬುದರ ಅವಲೋಕನವಾಗುತ್ತದೆ. ಗತಿಮತ್ತಾದ ಗುರಿಗೆ ಹೊಡೆಯುವ ಅಭ್ಯಾಸ ಬಿಲ್ಗಾರನಿಗಾಗಿ ಅವನ ಹೆಚ್ಚಳವಾಗುತ್ತದೆ. ಇಂಥ ಮೃಗಯೆ ವಿನೋದವಲ್ಲದೆ, ವ್ಯಸನವಾದೀತೆ? ಎಂದು ಅವನ ವಾದ:

> ಮೇದಶ್ಛೇದ ಕೃಶೋದರಂ ಲಘು ಭವತ್ಯುತ್ಥಾನಯೋಗ್ಯಂ ವಪುಃ
> ಸತ್ವಾನಾಮಪಿ ಲಕ್ಷ್ಯತೇ ವಿಕೃತಿಮಚ್ಚಿತ್ತಂ ಭಯಕ್ರೋಧಯೋಃ।
> ಉತ್ಕರ್ಷಃ ಸ ಚ ಧನ್ವಿನಾಂ ಯದಿಷವಃ ಸಿಧ್ಯಂತಿ ಲಕ್ಷ್ಯೇ ಚಲೇ
> ಮಿಥ್ಯೈವ ವ್ಯಸನಂ ವದಂತಿ ಮೃಗಯಾಮೀದೃಗ್ವಿನೋದಃ ಕುತಃ॥
>
> (ಅಂಕ ೨, ಪ. ೫)

ಇದೆಲ್ಲ ನಿಜ. ಆದರೆ ದುಷ್ಯಂತ ಬೇಟೆಗೆ ಹೊರಟದ್ದು ಅದೇನು ವ್ಯಸನವಲ್ಲ; ಅದು ಉತ್ತಮ ವಿನೋದ ಎಂದು ಸಿದ್ಧ ಮಾಡುವುದಕ್ಕೂ ಅಲ್ಲ. ಕಾಳಿದಾಸನು ಬರೆದುದು ನಾಟಕವಾಗದೆ, ಕಾದಂಬರಿಯಾಗಿದ್ದರೆ, ಮೃಗಯೆಯ ಪೂರ್ವೋತ್ತರದ ವಿವರಣೆಯೆಲ್ಲ ಬರುತ್ತಿತ್ತೊ ಏನೊ? ಶಾಕುಂತಲವು ನಾಟಕ. ಕಾರ್ಯರೂಪದ ಘಟನೆಗಳೇ ಮುಖ್ಯವಾಗಿ ರಂಗದ ಮೇಲೆ ಬರತಕ್ಕವು. ಆದರೂ ದುಷ್ಯಂತ ಮೃಗಯೆಗಾಗಿ ಏಕೆ ಹೊರಟ? ಅವನ ಪರಿವಾರದಲ್ಲಿ ಅದರ ಬಗ್ಗೆ ತುಂಬಾ ಉತ್ಸಾಹವಿದೆ. ಆದರೆ ದುಷ್ಯಂತ ಮೃಗಯಾಕಾಮಿಯಾಗಿಯೇ ಬಂದಿದ್ದನೆ? ಇದು ಕುತೂಹಲ ಕೆರಳಿಸುವ ಪ್ರಶ್ನೆ. ಇದಕ್ಕೆ ಉತ್ತರವಾಗಿ ನಮಗೆ ಬೇರೆ ಮಾತಿನ ಎಳೆಗಳು ಸಿಕ್ಕರೆ, ಆ ಜ್ಞಾನದಿಂದ ಕಥೆಯ ಸ್ವಾರಸ್ಯ, ವ್ಯಕ್ತಿಗಳ ಶೀಲವೈಚಿತ್ರ್ಯ ಇವಕ್ಕೇನಾದರೂ ಬೇರೆ ಮೆರಗು ಬರುವುದೊ ನೋಡುವುದು ಚಿತ್ತರಂಜಕವಾಗದೆ ಹೋಗಲಾರದು.

ಪುರುವಂಶದಲ್ಲಿ ಸಂತತಿ ನಿಂತುದರಿಂದ ದಾಯಾದಿಗಳ ಮನೆತನದಿಂದ ದುಷ್ಯಂತನನ್ನು ಈ ಮನೆತನಕ್ಕೆ ದತ್ತು ತಕ್ಕೊಳ್ಳಲಾಯಿತು ಎಂದು ಪುರಾಣ ಹೇಳುತ್ತವೆ. ಆದರೆ, ನಾಟಕದ ದುಷ್ಯಂತ ತಾನು ಕೆಚ್ಚಪೌರವನಿದ್ದಂತೆ ಮಾತನಾಡುತ್ತಾನೆ (ಅಂಕ ೫, ೨೫ನೆಯ ಪದ್ಯದ ಬಳಿಕ: "ವಿನಿಪಾತಃ ಪೌರವೈಃ ಪ್ರಾರ್ಥ್ಯತ ಇತಿ ನ ಶ್ರದ್ಧೇಯಮ್." ಶಕುಂತಲೆಯು ಅವನಿಗೆ "ಪೌರವ"ನೆಂದೂ "ಪುರುವಂಶ ಪ್ರತ್ಯಯ"ನೆಂದೂ ಕರೆಯುತ್ತಾಳೆ. ಏಳನೆಯ ಅಂಕದಲ್ಲಿ ಅಲ್ಲಿಯ ತಾಪಸಿಯು ಸರ್ವದಮನನನ್ನು "ಪುರುವಂಶ ಪ್ರಭವ" ಎನ್ನುತ್ತಾಳೆ. ಕಾಳಿದಾಸನೂ

ದುಷ್ಯಂತ ಚೊಕ್ಕ ಪುರುವಂಶದವನೆಂದೇ ಸೂಚಿಸುತ್ತಲೂ ಇರಬಹುದು. ಪುರಾಣ ಕಥೆಯಂತೆ ದುಷ್ಯಂತನು ತೀರ ನಿಪುತ್ರಿಕನೇನೂ ಅಲ್ಲ. ರಥಂತರಿಯಾದ ಒಬ್ಬ ರಾಣಿಗೆ ಅಷ್ಟು ಗಣನೆಗೆ ಬಾರದ ಒಬ್ಬ ಮಗನಿದ್ದ ಎಂಬ ಉಲ್ಲೇಖ ಕಂಡು ಬರುತ್ತದೆ. ನಾಟಕದಮಟ್ಟಿಗಂತೂ ದುಷ್ಯಂತ ನಿಪುತ್ರಿಕ. ಹಿರಿಯ ರಾಣಿ ವಸುಮತಿ, ಅದಲ್ಲದೆ ಕಲಾಪ್ರವೀಣೆ ಹಂಸಪದಿಕೆ—ಇವರಿಬ್ಬರಲ್ಲಿಯೂ ಇವನಿಗೆ ಸಂತತಿ ಇಲ್ಲ. ತನಗೆ ಸಂತತಿಯಾಗಲಾರದು ಎಂದೇನೂ ಅವನು ನಿರಾಶನಾಗಲಿಲ್ಲ. ಅದೇಕೆ ಪುರೋಹಿತ ನೆನಪು ಮಾಡಿಕೊಡುವಂತೆ—ತನಗೆ ಚಕ್ರವರ್ತಿ ಲಕ್ಷಣದ ಮಗನಾಗ ಬಹುದೆಂದು ಅವನು ಪ್ರತೀಕ್ಷೆಯಲ್ಲಿದ್ದಾನೆ (ಅಂಕ ೫).

"ತ್ವಂ ಸಾಧುಭಿರುದ್ದಿಷ್ಟಃ ಪ್ರಥಮಮೇವ ಚಕ್ರವರ್ತಿನಂ ಪುತ್ರಂ ಜನಯಿಷ್ಯಸೀತಿ." ಚೊಚ್ಚಿಲ ಮಗನೆ ಚಕ್ರವರ್ತಿ ಆಗುವನೆಂದೂ ಇದರ ಅರ್ಥ ಆಗಬಹುದಾದರೂ, ಸಾಧುಗಳು ಮೊದಲೇ ಹೀಗೆ ಭವಿಷ್ಯವಾಣಿ ನುಡಿದಿದ್ದಾರೆ ಎಂದೂ ಇದರ ಅರ್ಥ. ಪುರೋಹಿತನ ಈ ಮಾತಿಗೆ ಪ್ರೇಕ್ಷಕರೂ ಹುಂಗುಟ್ಟಬಹುದು. ಯಾಕಂದರೆ, ಶಾಕುಂತಲದ ಮೊದಲನೆಯ ಅಂಕಿ ನಲ್ಲಿಯೇ ವೈಖಾನಸರು ದುಷ್ಯಂತನ ಬಾಣ ಪ್ರತಿಸಂಹರಣ ಸಾಮರ್ಥ್ಯವನ್ನು ಕಂಡ ನಿಮಿತ್ತ ದಿಂದ

ಸದೃಶಮೇತತ್ಪುರುವಂಶ ಪ್ರದೀಪಸ್ಯ ಭವತಃ—
ಜನ್ಮ ಯಸ್ಯ ಪುರೋರ್ವಂಶೇ ಯುಕ್ತರೂಪಮಿದಂ ತವ ।
ಪುತ್ರಮೇವಂ ಗುಣೋಪೇತಂ ಚಕ್ರವರ್ತಿನಮಾಪ್ನುಹಿ ॥

(ಅಂಕ ೧, ಪ. ೧೨)

ಹೀಗೆ ಆಶೀರ್ವದಿಸುತ್ತಾರೆ. ಅದೇನೂ ಶುಷ್ಕ ಆಶೀರ್ವಾದವಾಗಿರಲಿಲ್ಲ. ನಾಟ್ಯಕಥೆಯ ಬೀಜವೇ ಈ ವಾಕ್ಯದಲ್ಲಿದೆ ಎಂದರೂ ಸಲ್ಲುವುದು. ಅಂತೆಯೆ ಈ ನಾಟಕವು ೭ ನೆಯ ಅಂಕಿನ ವರೆಗೆ, ದುಷ್ಯಂತನು ಸರ್ವದಮನನ ಕೈಯಲ್ಲಿ ಚಕ್ರವರ್ತಿ ಲಕ್ಷಣವನ್ನು ಕಂಡು ಅವನನ್ನು ತನ್ನ ಮಗನನ್ನಾಗಿ ಒಪ್ಪಿಕೊಂಡು ಅಪ್ಪಿಕೊಳ್ಳುವವರೆಗೆ ಕಥೆ ಓಡಲೇಬೇಕು. ವೈಖಾನಸರ ನುಡಿಗೆ ದುಷ್ಯಂತ ಒಂದು ನಮಸ್ಕಾರ ಮಾಡಿ 'ಪ್ರತಿಗೃಹೀತಂ' ಎನ್ನುತ್ತಾನಂತೆ. ಮಗನಿಲ್ಲದ ದುಷ್ಯಂತನಿಗೆ ಸಂತತಿಯಾದೀತು ಎಂಬ ಒಂದು ಮಾತು ಕೇಳಿಕೂಡ ಹರ್ಷವಾಗಬೇಕಾಗಿತ್ತು. ಆದರೆ ಅವನು ಚಕ್ರವರ್ತಿ ಮಗನಾಗಲಿ ಎಂದರೂ ಬಹಳ ಮಿಸುಕಾಡುವುದಿಲ್ಲ. ಇದರ ಅರ್ಥವೆ, ದುಷ್ಯಂತನಿಗೆ ಬೇರೆ ಸಾಧುಗಳೂ ಇಂಥ ಆಶೀರ್ವಾದ ಕೊಟ್ಟ ಸ್ಮರಣೆ ಇದೆ. ಆದರೆ ಅದು ಇಂದಿಗೂ ಫಲಿಸಿಲ್ಲ. ಎರಡು ಮದುವೆಗಳಾಗಿ ಫಲಿಸಿಲ್ಲ. ರಾಣಿಯರಿಗೂ ಆ ಚಿಂತೆ ಇರಬಹುದು. ಆದರೆ, ದುಷ್ಯಂತನ ತಾಯಿಗೆ, ರಾಜಮಾತೆಗೆ ಆ ಚಿಂತೆ ಹೆಚ್ಚಾದಂತೆ ಕಾಣಿಸುತ್ತದೆ. ಈ ಚಿಂತೆಯ ಸುಳುಹು ನಮಗೆ ಎರಡನೆಯ ಅಂಕದಲ್ಲಿ ಸಿಗುವುದು. ರಾಜಧಾನಿ ಯಿಂದ ರಾಜಮಾತೆ ಕಳಿಸಿದ ಕರಭಕ ಎಂಬ ಸುದ್ದಿಗಾರ ಬರುತ್ತಾನೆ. ಮನೆತನದಲ್ಲಿ ಮಕ್ಕಳಾಗ ಲೆಂದು 'ಪುತ್ರಪಿಂಡಪಾಲನ' ಎಂಬ ಉಪವಾಸ ವ್ರತವನ್ನು ತಾಯಿ ಆಚರಿಸುತ್ತಿದ್ದಾಳೆ, ಅದರ ಪಾರಣೆಗೆ ರಾಜನು ನಗರಕ್ಕೆ ಮರಳಿ ಬರಬೇಕಂತೆ. ಆ ಚತುರ್ಥಿ ಮುಂದೆಯೆ ಬಂದಿದೆ. ಈ ವ್ರತವನ್ನು ರಾಜಮಾತೆ ದುಷ್ಯಂತನಿಗೆ ನೋಟೀಸು ಕೊಡದೆ ಆಗಲಿ, ಒಣ ಬೆದರಿಕೆಗಾಗಲಿ ಆಚರಿಸಿರಲಾರಳು. ರಾಜಮಾತೆಯ ಈ ಉಪವಾಸವೆ ದುಷ್ಯಂತನ ಎದೆಗೆ ತಾಕಿರಬೇಕು. ಆ ಉಪವಾಸ ಅದೇ ಮೊದಲನೆಯ ಸಲ ಆಗಿರಲಾರದು. ದುಷ್ಯಂತನನ್ನು ರಾಜಧಾನಿಯಲ್ಲಿ ಅಸ್ಥಿರ ಚಿತ್ತನಾಗಿ ಮಾಡಿದುದು ಮಾತೆಯ ಉಪವಾಸ ವ್ರತ. ಅವನು ಮನೆ ಬಿಟ್ಟು ಹೊರಟ ಮೃಗಯೆ, ಪಶುಹಿಂಸಾನಿಮಿತ್ತವಾಗಿದ್ದಾಗಿರಲಾರದು. ದೈವದ ಸುಳಿವು ಎಲ್ಲಾದರೂ ಹತ್ತಬಹುದೆ? ಎಂದು ಅವನು ಹೊರಟಿದ್ದಾನೆ. ಅವನ ಜೊತೆ ಹೊರಟ ಸೈನಿಕನಿಕಾಯ, ಕಿರಾತಸಂತತಿ ಮೃಗಯಾವಿನೋದ ಮಾಡಿರಬಹುದು. ವಿದೂಷಕನು ಮಾಡುವ ಮೃಗಯಾ ವರ್ಣನೆಯಲ್ಲಿ ದುಷ್ಯಂತನ ಪರಾಕ್ರಮದ ಸೂಚನೆಯಿಲ್ಲ. ಅಲೆದಾಟ ಸಾಕಷ್ಟಾಗಿದೆ ಎಂಬ

ಧ್ವನಿ ಇದೆ. ಹಾಗಾದರೆ, ದುಷ್ಯಂತನ ಮೃಗಯೆ ಯಾವುದು? ಮೃಗ ಧಾತು—ಹುಡುಕಾಡು ಎಂದು ಅರ್ಥ. 'ಮಾರ್ಗ' ಅದರಿಂದಲೇ ಬಂದುದು. ದುಷ್ಯಂತನು ಕಾಣಲಿಕ್ಕೆ ಬೇಟೆಗೆ ಹೊರಟರೂ ಅವನಿಗೆ ಮೃಗ್ಯವಾದುದ್ದುದು ಸಾಧುಗಳ, ಋಷಿಗಳ ಸ್ಥಾನ. ಕೃಷ್ಣಸಾರಂಗವನ್ನು ಕಂಡು ಅವನು ಅದರ ಬೆನ್ನು ಹತ್ತಿದ್ದರ ಕಾರಣವೇ ಅದು.

ಕೃಷ್ಣಸಾರಸ್ತು ಚರತಿ ಮೃಗೋ ಯತ್ರ ಸ್ವಭಾವತಃ |
ಸ ಜ್ಞೇಯೋ ಯಜ್ಞಿಯೋ ದೇಶೋ ಮ್ಲೇಚ್ಛದೇಶಸ್ತತಃ ಪರಃ ||

—ಮನುಸ್ಮೃತಿ, ಅಧ್ಯಾಯ ೨, ಶ್ಲೋಕ ೨೩.

ಕೃಷ್ಣಸಾರಂಗಗಳು ಅಡ್ಡಾಡುವ ಸ್ಥಾನ, ಋಷಿ ಮುನಿಗಳು ಅಡ್ಡಾಡುವ ವಾಸಸ್ಥಾನ. ಆ ಸಾರಂಗವನ್ನು ಅನುಸರಿಸಿಯೆ ದುಷ್ಯಂತ ಹೊರಟಿದುದರ ಮೂಲೋದ್ದೇಶವೇ ಅದು. ಸಾರಂಗ ಓಡಿಹೋಗುವ ಹಾದಿ ತಗ್ಗು ದಿನ್ನೆಯ ವಿಷಮ ಪ್ರದೇಶ, ಎಂಬುದೇನೋ ಸಿದ್ಧವೆ. ನೂತನ ಉತ್ತೇಜನದಿಂದ ದುಷ್ಯಂತ ಅದನ್ನು ಹೊಡೆಯುವ ರಭಸಕ್ಕೆ ಕ್ಷಣಮಾತ್ರ ಏರಿರಲು ಸಾಕು. ಆದರೆ ಅವನ ಪ್ರಾಣಿಧರ್ಮಾವಲೋಕನದ ಸೌಂದರ್ಯದೃಷ್ಟಿ ಸುಪ್ತವಾಗಿರಲಿಲ್ಲ. ಅಂತೆಯೆ ಅವನ ಬೇಟೆಗಿಂತ,

ಗ್ರೀವಾಭಂಗಾಭಿರಾಮಂ ಮುಹುರನುಪತತಿ ಸ್ಯಂದನೇ ಬದ್ಧದೃಷ್ಟಿಃ
ಪಶ್ಚಾರ್ಧೇನ ಪ್ರವಿಷ್ಟಃ ಶರಪತನಭಯಾದ್ಭೂಯಸಾ ಪೂರ್ವಕಾಯಮ್ |
ದರ್ಭೈರರ್ಧಾವಲೀಢೈಃ ಶ್ರಮವಿವೃತಮುಖಭ್ರಂಶಿಭಿಃ ಕೀರ್ಣವರ್ತ್ಮಾ
ಪಶ್ಯೋದಗ್ರಪ್ಲುತತ್ವಾದ್ವಿಯತಿ ಬಹುತರಂ ಸ್ತೋಕಮುರ್ವ್ಯಾಂ ಪ್ರಯಾತಿ ||

(ಅಂಕ ೧, ಪದ್ಯ ೭)

ಎಂಬ ಜಿಂಕೆಯ ವರ್ಣನೆ ಸರಸವಾಗಿದೆ. ನಾಟಕದ ಆದಿಯಲ್ಲಿ ಸೂತ್ರಧಾರನೂ ಕೂಡ ಸಾರಂಗದ ಬೆನ್ನು ಹತ್ತಿದ ದುಷ್ಯಂತನನ್ನು ಸೂತನಂತೆ ರುದ್ರಸ್ವರೂಪ ಪಿನಾಕಿಯೊಂದಿಗೆ ಹೋಲಿಸುವುದಿಲ್ಲ.

'ತವಾಸ್ಮಿ ಗೀತರಾಗೇಣ ಹಾರಿಣಾ ಪ್ರಸಭಂ ಹೃತಃ'

ದುಷ್ಯಂತನು ಜಿಂಕೆಯ ಬೆನ್ನು ಹತ್ತಿದುದು ಹಾರ್ದಿಕ ಆಕರ್ಷಣೆ, ಇದೇ ಸೂತ್ರಧಾರನ ಧ್ವನಿ. ದುಷ್ಯಂತನಿಗೆ ಸಾರಂಗದ ಕುರುಹಿನಿಂದ ಋಷ್ಯಾಶ್ರಮದ ಜಾಡು ಸಿಕ್ಕಿತು. ವೈಖಾನಸರಿಂದ ಆಶೀರ್ವಚನದ ಪುನುರುಕ್ತಿಯೂ ಕಿವಿಗೆ ಬಿತ್ತು. ದುಷ್ಯಂತನು ಅತಿ ವಿನಯದಿಂದಲೇ ಆಶ್ರಮಪ್ರವೇಶ ಮಾಡಬೇಕೆಂದು ನಿಶ್ಚಯಿಸಿಕೊಂಡವನು. ಆದರೆ, ದೈವ ಮಾಡಿದ ಸಂಜ್ಞೆಯಂತೆ ಅವನ ಆಂತರಿಕ ಪ್ರಾಣದಿಂದ ಪ್ರೇರಿತವಾಗಿ ಬಂದು ಅವನ ಚಿತ್ತವನ್ನೂ ನೇತ್ರವನ್ನೂ ಬೇರೆ ದಿಕ್ಕಿಗೇ ಹೊರಳಿಸಿದುದು—ಬಾಹುಸ್ಫುರಣ. ಅದು ಯಾವ ಕೃತಕವಲ್ಲ.

ಶಾಂತಮಿದಮಾಶ್ರಮಪದಂ ಸ್ಫುರತಿ ಚ ಬಾಹುಃ ಕುತಃ ಫಲಮಿಹಾಸ್ಯ |
ಅಥವಾ ಭವಿತವ್ಯಾನಾಂ ದ್ವಾರಾಣಿ ಭವಂತಿ ಸರ್ವತ್ರ ||

ಮೃಗಯಾವ್ಯಾಜದಿಂದ ಸಾರಂಗಮೃಗವನ್ನು ಕಂಡ. ಸಾರಂಗ ಸಂಕೇತದಿಂದ ಋಷ್ಯಾಶ್ರಮದ ದರ್ಶನದ ಅಪೇಕ್ಷೆ ಚೇತರಿಸಿತು. ವೈಖಾನಸರ ಆಶೀರ್ವಚನದಿಂದ ಹೃದಯ ಆಶಾಮಗ್ನವಾಯಿತು. ಬಾಹುಸ್ಫುರಣದಿಂದ ಅವನ ಆಸೆಗೆ ಬಾಯಿ ಒಡೆಯಿತು. (ಶಕುಂತಲೆಯ ಹೆಸರು ವೈಖಾನಸರಿಂದ ಕೇಳಿ ಯಾವುದೊ ಉದ್ದೀಪನವಾಗಿರಬೇಕು.) ಸ್ತ್ರೀಯರ ಆಲಾಪಧ್ವನಿ ಕೇಳಿ ಕಿವಿ ನಿಮಿರಿತು. ಅವರನ್ನು ಕಂಡಮೇಲಂತು 'ಮಧುರಮಾಸಾಂ ದರ್ಶನಂ' ಎಂದು ಬಾಯಿ ಬಿಟ್ಟು ನುಡಿದು, ಭವಿತವ್ಯ ಪ್ರಾಪ್ತಿಗಾಗಿ ಪ್ರಾಪ್ತ ಸಂದರ್ಭದಲ್ಲಿ ನಿವಜ್ಜೀತವಾಯಿತು. ಒಂದು

ಮೃಗದ ನೆಪದಿಂದ ದುಷ್ಯಂತ ಆಶ್ರಮವನ್ನು ಹೊಕ್ಕ. ತನ್ನವರ ಮೃಗಯಾ ಕೋಲಾಹಲದಿಂದ ದಿಕ್ಕೆಟ್ಟು ಆಶ್ರಮವನ್ನು ಹೊಕ್ಕ ಆನೆಯ ಹಾವಳಿಯಿಂದ ಪ್ರಥಮಾಂಕ ಮುಗಿತಾಯಕ್ಕೆ ಬಂತು. ಈ ಮಧ್ಯಾವಕಾಶದಲ್ಲಿಯೇ ಭ್ರಮರ, ಉಂಗುರ, ಕಥೆಯ ಹುರಿಯನ್ನು ಮೂರು ಮಾರು ಹೊಸೆದು ಬಿಟ್ಟಿತ್ತು. ದುಷ್ಯಂತನ ಮೃಗಯೆ ಬೇಟೆಯ ಆಟವಲ್ಲ. ಚಕ್ರವರ್ತಿ ಪುತ್ರ ಪ್ರಾಪ್ತಿಯ ಮಾರ್ಗಾನುಸರಣ. ಈ ವ್ಯಾಪಕಾರ್ಥದಲ್ಲಿಯೇ ಪ್ರಥಮಾಂಕದ ಎಲ್ಲ ಘಟನೆಗಳಿಗೆ ಒಂದು ಅಗಮ್ಯ ಆವೇಶ ಬರುವುದು. ಆ ಆವೇಶದಲ್ಲಿ ಪ್ರವೇಶ ಮಾಡುವುದೇ ಕ್ರಾಂತದರ್ಶಿಯಾದ ವಿಮರ್ಶೆಯ ಕಾರ್ಯ. ರಸಿಕನಿಗೆ ಈ ಪ್ರತಿಭೆಯೂ ಬೇಕು.

**ದ. ರಾ. ಬೇಂದ್ರೆ**

(" ಅಂಬಿಕಾತನಯ ದತ್ತ")

# ರತ್ನಾಕರನ ಬಾಯ್ದೆರೆದ ಬ್ರಹ್ಮಲೋಕ

ಶೃಂಗಾರ ಶ್ರೀಕವಿ ಹಂಸರಾಜನೆಂದು ಪ್ರಖ್ಯಾತಿಗೊಂಡ ರತ್ನಾಕರನ ಶೃಂಗಾರರಸ ವಿಲಕ್ಷಣವಾದುದು. ಲೌಕಿಕವಾಗಿ ಪ್ರಾರಂಭವಾದ ಶೃಂಗಾರ ಅಲೌಕಿಕವಾಗಿ ಕಡೆಗೆ ಮೋಕ್ಷ ಶೃಂಗಾರವಾಗಿ ರೂಪಾಂತರಗೊಳ್ಳದಿರದು. 'ಮೋಹನಶೃಂಗಾರ ಮೋಕ್ಷಶೃಂಗಾರವೆಂದಾ ಹೇಮವರ್ಣಗುಂಟೆರಡು'[1] ಎಂದು ಭರತೇಶನ ವೈಭವವನ್ನು ಇಹಪರಸಾರ್ಥಕವಾಗುವಂತೆ ಕೊಂಡಾಡಿರುವನು. 'ಶೃಂಗಾರ ಸುಲಭ ಸುಜ್ಞಾನ ಕಲಾಧರ ಭಂಗವಿಲ್ಲದ ಭಾಗ್ಯದೊಡೆಯಾ'[2] ರತ್ನಾಕರನ ಪರಮಾತ್ಮ ಶೃಂಗಾರ ಸುಲಭನಾಗಿ ಹೋಗಿರುವನು. 'ಗುರುವೆ ರತ್ನಾಕರ ಸಿದ್ಧನ ಮನದ ಸಿಂಗರವೆ ಮತ್ತವನ ಸೌಂದರವೆ'[3] ಎಂದು ಮಹಾಕವಿ ನಿರ್ವಿಕಾರಿಯಾದ ಜಿನೇಂದ್ರನನ್ನು ಪಾಡಿ ತನ್ನ ಬಾಳನ್ನು ಸಿಂಗರಿಸಿಕೊಂಡಿರುವನು. ಭರತೇಶನ ಭೋಗಸಾಗರದಲ್ಲಿ ಅಡಗಿರುವ ಯೋಗ ಮೌಕ್ತಿಗಳನ್ನು ಆಗಾಗ ಹೊರತೆಗೆದು ಈ ಶೃಂಗಾರಕವಿ ಓದುಗರನ್ನು ಅಚ್ಚರಿಗೊಳಿಸುವನು.

ಭರತೇಶನ ಯೋಗಲೀಲೆಯನ್ನು ಕಾಣಬೇಕಾದರೆ ನಾವು **ಪರ್ವಯೋಗಸಂಧಿ**ಯನ್ನೋದಬೇಕು. ತನ್ನ ಮಡದಿಯರಿಗೆ ತತ್ವೋಪದೇಶವಿತ್ತಾದಮೇಲೆ ಭರತೇಶ ಧ್ಯಾನಾಸಕ್ತನಾಗುವನು. ಪದ್ಮಾಸನದಲ್ಲಿ ಅಚಲನಾಗಿ ಮಂಡಿಸಿ ಹಂಸಕಲೋಪಾಸಕನಾಗಿ ಚಕ್ರೇಶ ರಾರಾಜಿಸುವುದನ್ನು ರತ್ನಾಕರನ ಬಾಯಿಂದಲೆ ಕೇಳೋಣ:

ಮೂಲಾಧಾರದಿಂದೊಡ್ಯಾಣ ಬಂಧವ | ಜಾಲಂಧ್ರ ಬಂಧವನೆಸಗಿ ||
ನೂಲನೇರಿಸುವಂತೆ ಬ್ರಹ್ಮರಂಧ್ರಕೆ ಮತ್ತೆ | ಗಾಳಿಯನೆತ್ತಿ ನಿಲಿಸಿದಾ || ೭ ||

ಕುಂಡಲಿಯನು ವಾಯುವಿಂದಿರಿದರೆ ಪುಷ್ಪ | ಕಾಂಡನ ಶಕ್ತಿ ತಗ್ಗಿದುದು ||
ಗುಂಡಿಗೆಯೊಳು ಘಾಳಿ ನಿಂದರೆ ನಿಂದುದು | ಕಂಡಕಡೆಗೆ ಹೋಹ ಚಿತ್ತಾ || ೮ ||

ಕಳ್ಳಗುಪ್ಪೆಗೆ ಗಾಳಿಯೇರಿ ನಿಂದಿರೆ ನಿದ್ರೆ | ನಿಲ್ಲದೆ ಜರಿದೋಡಿತಾಗ ||
ಎಳ್ಳಷ್ಟು ಜಡನಿರದೋಡಿತು ನಡುನೊಸ | ಲಲ್ಲಿ ಗಾಳಿಯ ನಿಲಿಸಿದರೆ || ೯ ||

ನೆತ್ತಿಗನಿಲನೇರಿದಾಗ ಮೈಯೊಳಗಣ | ಕತ್ತಲೆ ಕೆಟ್ಟು ಪ್ರಕಾಶಾ ||
ಅತ್ತಿತ್ತ ತೋರುತಿದ್ದುದು ಪವನಾಭ್ಯಾಸ | ದುತ್ತುಂಗಗುಣವನೇನೆಂಬೆ || ೧೦ ||

ಯೋಗಶಾಸ್ತ್ರದ ರೀತಿ ಪವನಾಭ್ಯಾಸವನ್ನು ರತ್ನಾಕರ ವಿವರಿಸಿರುವನು. ಕ್ಲಿಷ್ಟವಾದ ಶಾಸ್ತ್ರದಲ್ಲೂ ಆಗಾಗ ಜೀವಕಳೆಯನ್ನು ಮಹಾಕಪಿ ತುಂಬುಬಲ್ಲ:

ವಾಯುಗಳೀರೈದು ನಿಂದ ನೆಲೆಯ ತನ್ನ | ಕಾಯದೊಳರಿದೊಂದನೊಂದಾ ||
ದಾಯವರಿದು ತೆಗೆದೊಂದೊಂದರೊಳು **ಕೂಡಿ | ಗಯ್ಯಾಳಿತನವ ನಿಲ್ಲಿಸಿದಾ** || ೬ ||

"ಕೂಡಿ ಗಯ್ಯಾಳಿತನವ ನಿಲ್ಲಿಸಿದಾ" ಎಂಬ ಮಾತಿನಲ್ಲಿ ಎಂಥ ಚಿತ್ರ ಅಡಗಿದೆ! ವಿಷಯ ಜಟಿಲವಾದರೂ ಹೇಳುವ ಧಾಟಿಯಲ್ಲಿ ಕುಣಿಯುವ ಪ್ರಾಸದಲ್ಲಿ ಸರಸತೆ ಮೂಡಿದೆ.

ಯೋಗಮಹಿಮೆಯನ್ನು ರತ್ನಾಕರಯೋಗಿಯೇ ಬಲ್ಲ. ಈ ಸಂದರ್ಭದಲ್ಲಿ ಮಹಾಕವಿ ತನ್ನ ಸ್ವಾನುಭವವನ್ನೇ ಬಿತ್ತರಿಸುವಂತಿದೆ.

---

[1] ಭ. ವೈ. ಪರ್ವಾಭಿಷೇಕ ಸಂಧಿ, ಪ. ೨. [2] ಭ. ವೈ. ಪರ್ವಯೋಗ ಸಂಧಿ, ಪ. ೧. [3] ಭ. ವೈ. ವೀಣಾಸಂಧಿ, ಪ. ೧೩೯.

ಹಿರಿದಾದ ಹಸಿವು ತೃಷೆಗಳಲ್ಪವಹವು ಪೈ | ಸರಿಸಿ ಹೋಹುವು ರೋಗವೆಲ್ಲ ||
ಗರಳವನುಂಡು ದಕ್ಕಿಸಬಹುದನಿಲನ | ಪರಿಚಯ ಸದರವೆ ಜನಕೆ || ೧೧ ||

ಪವನ ಸಂಚಾರವ ತಡೆದರೆ ಮುಗಿದಕ್ಷಿ | ವಿವರದೊಳಾ ರಾಜಯೋಗಿ ||
ಧವಲಬಿಂದುವ ಕಂಡ ನಾಸಿಕಾಗ್ರದೊಳು ಸಂ | ಭವಿಸಿದುದಾಗ ವಿಶೋಧಾ || ೧೨ ||

ಬಳಿಕ ಚನ್ನಾಗಿ ಕಂಗಳ ಮುಗಿದಾ ಭವ್ಯ | ಕುಲರತ್ನ ತನ್ನ ಮೈಯೊಳಗೆ ||
ದಳಗಳ ಪಸರಿಸಿ ಸಾಲಾಗಿ ನಿಂದಾರು | ಜಲಜವ ಕಂಡನೇನೆಂಬೆ || ೧೩ ||

ಪಣೆ ಕೊರಳೆದೆ ನಾಭಿ ಲಿಂಗ ಮೂಲಾಧಾರ | ದೆಣಿಕೆಯೊಳಾರು ತಾವರೆಯಾ ||
ಅಣಿದಿರದೆರಡೆಂಟು ಪನ್ನೆರಳ್ಪತ್ತಾರು | ಪೆಣೆದು ನಾಲ್ಕೆಸಳಾಗಿ ಕಂಡಾ || ೧೪ ||[4]

ಆರು ಪದ್ಮಗಳೆಸಳೈವತ್ತರೊಳು ಕ್ರಮು | ದೋರಲಕ್ಷರಗಳೈವತ್ತು ||
ಬೇರೆ ಬೇರಲ್ಲಲ್ಲಿ ಸ್ಥಾಪಿಸಿ ನೃಪತಿ ಕ | ಣ್ಣೂರಿ ಧ್ಯಾನಿಸಿದನೇನೆಂಬೆ || ೧೫ ||

ಹಕ್ಷವೆರಡು ಸ್ವರ ಹದಿನಾರು ಕಾದಿಯಿಂ | ಠಾಕ್ಷರದೆಡೆಗೆ ಪನ್ನೆರಡು ||
ಪಾಕ್ಷರದೆಡೆಗೆ ಲಾಕ್ಷರ ಮುಟ್ಟಸಾಕ್ಷರ | ಕಾಕ್ಷರಗಳ ನಿಲಿಸಿದನು || ೧೬ ||

ವನಜದಳಗಳಲ್ಲಿ ಸಿಂದಮೃತ ಬಟ್ಟ | ವನಿಗಳೊ ಬಟ್ಟ ಮುತ್ತುಗಳೊ ||
ತನಿವೆಳಗಿನ ಬೀಜರಾಜಿಯೊ ಯೆಂಬಂತೆ | ಜನಪಗಕ್ಷರತೋರುತಿಹವು || ೧೯ ||

ಕಾವ್ಯದ ನಡುವೆ ರತ್ನಾಕರ, ಶಾಸ್ತ್ರವನ್ನು ತಂದಂತೆ ಶಾಸ್ತ್ರದ ನಡುವೆ ಕಾವ್ಯವನ್ನೂ ತರುವಂಥ ಪ್ರತಿಭಾಸಂಪನ್ನ ! 'ತನಿವೆಳಗಿನ ಬೀಜರಾಜಿಯೊ' ಎಂಬಾಗ ಓದುಗನಿಗಾಗುವ ಆನಂದಕ್ಕೆ ಮಿತಿಯಿದೆಯೆ ? ವಾಚಕರಿಗೆ ಬೇಸರವಾಗದಂತೆ ಪಾಂಡಿತ್ಯವನ್ನೂ ಪ್ರತಿಭೆಯನ್ನೂ ಸಮತೋಲನವಾಗಿ ಸಾಗಿಸಿಕೊಂಡು ಹೋಗಿರುವನು.

ಧ್ಯಾನಾಸಕ್ತನಾದ ಭರತೇಶ ಸಮವಸರಣದಲ್ಲಿ ವಿರಾಜಮಾನರಾದ ತೀರ್ಥಂಕರ ಪರಮದೇವರನ್ನು ಆತ್ಮದೃಷ್ಟಿಯಿಂದೀಕ್ಷಿಸುವನು. ಸಿದ್ಧಲೋಕದತನಕ ತನ್ನ ಭಾವಲಹರಿಯನ್ನು ಹರಿಸಿರುವನು.

ಬಚ್ಚಬರಿಯ ಜ್ಞಾನದರ್ಶನ ಮೈಯಾಗಿ | ಅಚ್ಚುಗವೆಂಬುದ ನೀಗಿ ||
ನಿಚ್ಚಲು ಸುಖದೊಳೋಲಾಡುವ ಸಿದ್ಧರ | ಮೆಚ್ಚಿ ಧ್ಯಾನಿಸಿದನಾ ನೃಪತಿ || ೨೩ ||

ಬಟ್ಟಬಯಲಲ್ಲಿ ಕಲ್ಪನೆಯ ಕುಂಚವಾಡಿಸಿ ಆತ್ಮವಿಕಾಸದ ಪರಿಪೂರ್ಣಾವಸ್ಥೆಯನ್ನು ಮಹಾಕವಿ ಚಿತ್ರಿಸಿರುವನು !

ಭರತೇಶ ಧ್ಯಾನದ ಪರಕಾಷ್ಠತೆಗೇರಿ ಸವಿಕಲ್ಪಸಮಾಧಿಯಲ್ಲಿ ತಲ್ಲೀನನಾಗುವ ಭವ್ಯ ದೃಶ್ಯವನ್ನು ನೋಡೋಣ :

ಸುಯ್ಯೆಲರಿಂದ್ರಿಯ ಮನಗಳನಡಗಿಸಿ | ಮೈಯೆಂಬ ಜಿನಗೃಹದೊಳಗೆ ||
ಒಯ್ಯನೆ ಕಂಡನಾಗಳೆ ಪರಮಾತ್ಮನ | ಕೈಯ ಕನ್ನಡಿಯ ಕಾಂಬಂತೆ || ೨೫ ||

ರೂಪೆಲ್ಲ ಬೆಳಗು ರೂಪೆಲ್ಲ ಸುಜ್ಞಾನವಾ | ರೂಪೆಲ್ಲ ದರ್ಶನಶಕ್ತಿ ||
ರೂಪೆಲ್ಲ ಸುಖವಾದ ತ್ರಿಭುವನ ಶೃಂಗಾರ | ರೂಪನ ಕಂಡನಾ ಸೊಬಗಾ || ೨೬ ||

'ಅಳತೆಗೆ ತೂಕಕ್ಕೆ ಲೆಕ್ಕಕ್ಕೆ ಬಾರದಗ್ಗಳ ವಸ್ತುವ ಕಂಡನಾಗ'[5]

---

[4] ೧೬—೧೨—೧೦—೬—೪—೨ : ಈರೀತಿ ಹಣೆಯಿಂದ ಮೂಲಾಧಾರದ ತನಕ ಷಟ್ಚಕ್ರಗಳ ದಳವಿನ್ಯಾಸ ಇದೆ.  [5] ಭ. ವೈ. ಪರ್ವಯೋಗ ಸಂಧಿ, ಪ. ೨೬.

ಕೊಡದೊಳಗಾಕಾಶವಿಪ್ಪಂತೆ ಮೈಯೊಳ| ಗಡಗಿರ್ದ ಬಯಲ ರೂಪನನು ||
ನಡುನೆತ್ತಿಯಿಂದಡಿವುಟ್ಟಕಂಡನು ಕಟ್ಟ| ಕಡೆಯ ಕಾಂಬಂತೆ ತತ್ವಗಳಾ || ೨೮ ||

ಸುತ್ತಲು ಪ್ರಭೆಯಾಗಿ ಸುತ್ತಲು ಸುಖವಾಗಿ ಸುತ್ತಲು ಸುಜ್ಞಾನವಾಗಿ ||
ಚಿತ್ತದೊಳಾತ್ಮ ತೋರುವನೊಂದು ಜ್ಯೋತಿಯ| ಪುತ್ತಳಿಯಂತೆ ಮೈತುಂಬಿ || ೩೮ ||

'ಕಂಡನು ಕಟ್ಟಕಡೆಯ ಕಾಂಬಂತೆ ತತ್ವಗಳ' ಎಂಬ ಮಾತು ಜಿನಧರ್ಮದ ಸಾರವಾಗಿದೆ. ಓದಿ ಕಲಿತ ಶಾಸ್ತ್ರಗಳಿಗಿಂತ ಧ್ಯಾನದಿಂದ ಪಡೆದ ಆತ್ಮಜ್ಞಾನ ಸ್ಥಿರವಾದುದೆಂದು ಕುಂದ ಕುಂದಾಚಾರ್ಯರೂ ಹೇಳುವರು.

ಸತ್ಥಂ ಣಾಣಂ ಣಹವಇ ಜಹ್ಮಾ ಸತ್ಥಂ ಣಯಾಣಏ ಕಿಂಚಿ ||
ತಹ್ಮಾ ಅಣ್ಣಂ ಣಾಣಂ ಅಣ್ಣಂ ಸತ್ಥಂ ಜಿಣಾ ಏಂತಿ ||[6]

[ಶಾಸ್ತ್ರವು ಜ್ಞಾನವಲ್ಲ, ಏಕೆಂದರೆ ಅದು ಏನನ್ನೂ ತಿಳಿಯಲಾರದು; ಅದು ಜಡವಿರುತ್ತದೆ. ಅದರಿಂದ ಜ್ಞಾನವೆಂಬುದು ಬೇರೆ, ಶಾಸ್ತ್ರವೇ ಬೇರೆ. ಹೀಗೆ ಜಿನೇಂದ್ರ ಹೇಳುವನು.]

ಆತ್ಮಜ್ಞಾನವೇ ಮಾನವನ ಧ್ಯೇಯದ ಕೊನೆಯ ಘಟ್ಟ. ನಾನಾ ವಿದ್ಯೆಗಳನ್ನು ಕಲಿತು ಅದೊಂದನ್ನು ಕಲಿಯದಿದ್ದರೆ ಎಲ್ಲವೂ ವ್ಯರ್ಥ. ಆತ್ಮವಿದ್ಯೆಯನ್ನು ಕಲಿತು ಇನ್ನಾವುದನ್ನು ಕಲಿಯದೇ ಹೋದರೂ ನಷ್ಟವೇನಿಲ್ಲ. ಇಂಥ ಆತ್ಮವಿದ್ಯೆಯನ್ನು ರತ್ನಾಕರ ಮಹಾಕವಿ 'ಪ್ರಭೆಯಾಗಿ' ಹರಿಸಿರುವನು; 'ಸುಖ'ವಾಗಿ ಬಿತ್ತರಿಸಿರುವನು.

ನಿರ್ವಿಕಲ್ಪ ಸಮಾಧಿಯ ಅನುಭವವನ್ನು ಶ್ರೀರಾಮಕೃಷ್ಣಪರಮಹಂಸರ ದಿವ್ಯವಾಣಿಯಿಂದ ಕೇಳಬೇಕು. "ಸಾಮಾನ್ಯ ಮಾನವನ ಮನಸ್ಸು ಗುದ, ಲಿಂಗ, ನಾಭಿ ಇವಗಳನ್ನಾಶ್ರಯಿಸಿದ ಸ್ನಾಯುಚಕ್ರಗಳಲ್ಲಿ ಸಂಚರಿಸುತ್ತದೆ. ಸ್ವಲ್ಪ ಪರಿಶುದ್ಧವಾದರೆ ಆ ಮನಸ್ಸು ಒಮ್ಮೊಮ್ಮೆ ಹೃದಯವನ್ನಾಶ್ರಯಿಸಿದ ಜ್ಯೋತಿಯ ಅಥವಾ ಜ್ಯೋತಿರ್ಮಯವಾದ ರೂಪಾದಿಗಳ ದರ್ಶನದಲ್ಲಿ ಸ್ವಲ್ಪ ಆನಂದಾನುಭವವನ್ನು ಹೊಂದುತ್ತದೆ. ನಿಷ್ಠೆಯ ಏಕಾಗ್ರತೆಯಲ್ಲಿ ವಿಶೇಷವಾಗಿ ಅಭ್ಯಾಸಗೊಂಡರೆ ಕಂಠವನ್ನಾಶ್ರಯಿಸಿದ ಚಕ್ರಕ್ಕೆ ಅದು ಏರುತ್ತದೆ. ಆಗ ಅದು ತನ್ನ ಧ್ಯೇಯಕ್ಕೆ ಸಂಬಂಧಿಸಿದ ಮಾತುಗಳನ್ನಾಡುವುದಲ್ಲದೆ ಬೇರೆ ವಿಷಯಗಳ ಆಲೋಚನೆಯೂ ಕೂಡ ಅದಕ್ಕೆ ಪ್ರಾಯಶಃ ಅಸಂಭವವಾಗುವುದು. ಇಲ್ಲಿ ಏರಿದರೂ ಆ ಮನಸ್ಸು ಕೆಳಗಿನ ಚಕ್ರಗಳಲ್ಲಿ ಪುನಃ ಇಳಿದು ಆ ಧ್ಯೇಯವನ್ನು ಪುನಃ ಮರೆಯುವಂತೆ ಮಾಡಬಹುದು. ಆದರೆ ಆ ಮನಸ್ಸು ಯಾವ ರೀತಿಯಿಂದಲೇ ಆಗಲಿ ಪ್ರಬಲ ಏಕನಿಷ್ಠೆಯ ಸಹಾಯದಿಂದ ಕಂಠದಮೇಲಿರುವ ಹುಬ್ಬುಗಳ ನಡುವಿನ ಚಕ್ರಕ್ಕೇರಿದಾಗ ಅದು ಸಮಾಧಿಸ್ಥವಾಗಿ ಪಡೆಯುವ ಆನಂದಾನುಭವವನ್ನು ಹೋಲಿಸಿದರೆ ಕೆಳಗಿನ ಚಕ್ರಾದಿಗಳ ವಿಷಯಾನಂದಸುಖವು ಅದಕ್ಕೆ ತುಚ್ಛವೆಂದು ತಿಳಿಯುವುದು. ಇಲ್ಲಿಂದ ಇನ್ನು ಪತನವಾಗುವ ಶಂಕೆಯಿಲ್ಲ. ಇಲ್ಲಿಂದಲೇ ಸ್ವಲ್ಪಮಾತ್ರ ಆವರಣದಿಂದ ಆಚ್ಛಾದಿತವಾದ ಪರಂಜ್ಯೋತಿಯು ಅದರ ಸಮ್ಮುಖದಲ್ಲಿ ಪ್ರಕಾಶಿಸುವುದು. ಶ್ರೀ ಪರಮಾತ್ಮನಿಂದ ಒಂದಿಷ್ಟು ಮಾತ್ರ ಭೇದವು ಅದಕ್ಕೆ ಕಂಡುಬಂದರೂ ಅಲ್ಲಿ ಏರಿದೊಡನೆಯೇ ಅದ್ವೈತ ಜ್ಞಾನದ ವಿಶೇಷ ಪ್ರಕಾಶವು ದೊರಕುತ್ತದೆ; ಅಲ್ಲದೆ ಈ ಚಕ್ರವನ್ನು ಭೇದಿಸಿದೊಡನೆಯೇ ಭೇದಾಭೇದಜ್ಞಾನವು ಪೂರ್ತಿ ಮರೆಯಾಗಿ ಪೂರ್ಣ ಅದ್ವೈತ ಜ್ಞಾನದಲ್ಲಿ ಆ ಮನಸ್ಸು ನೆಲಸುವುದು . . ."[7] ಭರತೇಶನ ಧ್ಯಾನಾವಸ್ಥೆ ಇದರೊಡನೆ ಹೋಲಿಸಿ ನೋಡಿದರೆ ಸಂಸಾರದಲ್ಲಿದ್ದುಕೊಂಡೇ ಆತ, ಆತ್ಮನ ಅನಂತ ಸಿರಿಯೊಡನೆ ಆಗಾಗ ಓಲಾಡುತ್ತಿದ್ದನೆಂದು ಧಾರಾಳವಾಗಿ ಹೇಳಬಹುದು.

ಭರತೇಶ ಧ್ಯಾನಾವಸ್ಥೆಯಲ್ಲಿರುವಾಗ, ಆತ್ಮನೊಡನೆ ಜನ್ಮಜನ್ಮಾಂತರಗಳಿಂದ ಅಂಟಿಬಂದ

[6] ಸ. ಸಾ. ೧೦೪ [7] ಶ್ರೀ ರಾಮಕೃಷ್ಣ ಲೀಲಾಪ್ರಸಂಗ, IV, ೩೨೪.

ಕರ್ಮರಾಶಿ ಕರಗಿಹೋಗುವುದನ್ನು ರತ್ನಾಕರ ಕಣ್ಣಿಗೆ ಕಟ್ಟುವಂತೆ ವಿವರಿಸಿರುವನು. ತನಗಾಗುವ ನಿರ್ಜರೆಯನ್ನೇ ಮಹಾಕವಿ ಚಿತ್ರಿಸುವಂತೆ ಕಾಣುವುದು.

ಅಂಬರದೊಳು ಬಹುವರ್ಣದ ಮುಗಿಲ ತೊ | ಡಂಬೆಗಳಡೆಯಾಡುವಂತೆ ||
ಬೆಂಬೀಳ್ದು ಕರ್ಮ ಕದಲುತಿರ್ದುದಾಗ ಚಿ | ದಂಬರಪುರುಷ ರೂಪಿನೊಳು || ೩೯ ||

ಹೊಗೆಯಂತೆ ಮಸಿಯ ಕದಡಿ ಮೀಯಲಿರೆವಂತೆ | ಜಗುಳುತಿಹುದು ಪಾಪರಜಸು ||
ಮೊಗೆದು ರಕ್ತವನೆರೆದಂತರಸಿನದಂತೆ | ದಿಗಿಲಸಿಳಿವುದಾಗ ಪುಣ್ಯಾ || ೪೦ ||

ನೀರು ಬಿಟ್ಟವ ಕೊರೆವಂತೆ ರಾಯನ ಧ್ಯಾನ | ವಾರಿ ಭೇದಿಸಿ ಕರ್ಮಗಿರಿಯಾ ||
ಸೋರಿಸುತಿರ್ದುದು ಜಿನಜಿನ ಹಂಸತ | ತ್ವಾರಾಧನೆಗೆಣೆಯುಂಟೆ ? || ೪೧ ||

ಸೂಜಿಯಂದದಿ ಮಳೆ ಸುರಿಯೆ ಹಸಿಯ ಮಣ್ಣ | ಭಾಜನ ಕರಗಿ ಹೋಹಂತೆ ||
ತೈಜಸಕಾರ್ಮಣತನು ಸೋರುತಿದ್ದುದಾ | ರಾಜನ ಧ್ಯಾನಧಾರೆಯೊಳು || ೪೨ ||[8]

ಬಿಗಿದ ಮೂಡೆಯ ಕಟ್ಟು ಸಡಿಲವಾದರೆ ಧಾನ್ಯ | ಪೊಗುವಂತೆ ಬಂಧದೊಡ್ಡಳಿದು ||
ಮಿಗೆ ಕರ್ಮಧೂಳಿ ಸೋರುವುದದು ಧ್ಯಾನಿಗೊ | ಬ್ಬನಿಗೆ ಗಮ್ಯ ಪರರ್ಗೆ ಕಾಣಿಸದು || ೪೪ ||

ಒಮ್ಮೊಮ್ಮೆ ಚಿದ್ರೂಪಕಾಂತಿವೆರಸಿ ಕಾಣ್ಬ | ನೊಮ್ಮೊಮ್ಮೆ ಮಾಸಿ ಕಾಣುವನು ||
ಗುಮ್ಮುತಿಹುವು ಕಂಡಕಡೆಗೆ ಕರ್ಮಗಳೊಳ | ಗುಮ್ಮುತಿಹುವು ಸುಗುಣಗಳು || ೪೮ ||

ಅಲೌಕಿಕ ವಿಚಾರವನ್ನು ರತ್ನಾಕರ ‘ಧ್ಯಾನಿಗೊಬ್ಬನಿಗೆ ಗಮ್ಯ ಪರರ್ಗೆ ಕಾಣಿಸದು’ ಎಂದು ಹೇಳಿರುವುದು ನಿಜವಾದರೂ ಈ ಮಹಾಕವಿ, ಮಹಾಯೋಗಿಯೂ ಆಗಿರುವುದರಿಂದ ಸಹೃದಯವೃಂದಕ್ಕೆಲ್ಲ ‘ಕರ್ಮಧೂಳಿ ಸೋರುವ ಚಿತ್ರ’ ಅನುಭವವೇದ್ಯವಾಗದಿರದು. ಇಲ್ಲಿ ರತ್ನಾಕರನ ಯೋಗಾನುಭವ ಕಲೆಯ ಬಲೆಯಲ್ಲಿ ಸಿಕ್ಕಿ ಸಾಮಾನ್ಯರಿಗೂ ಅರಿವಾಗುವಂತಿದೆ. ಪಾಂಡಿತ್ಯ ಒಣಪಾಂಡಿತ್ಯವಾಗದೆ ಪ್ರತಿಭಾ ಪ್ರಭಾವಳಿಯನ್ನು ತಳೆದು ರಾರಾಜಿಸಿದಾಗ ಹಂಸೆ ಕಲೆಯ ಕಾಮನ ಬಿಲ್ಲು ಮೂಡುವುದರಲ್ಲಿ ಅಚ್ಚರಿಯೇನಿದೆ!

ಧ್ಯಾನವೆಸಗುತ್ತಾ ಚಕ್ರೇಶ ಪರಮಾನಂದಾವಸ್ಥೆಯಲ್ಲಿ ಮುಳುಗಿಹೋಗುವನು. ‘ಏನದ್ಭುತವಿದ್ಯೆಯಲಾ’ ಎಂದು ತನ್ನಲ್ಲಿ ತಾನೇ ಮೆಚ್ಚಿಕೊಳ್ಳುವನು.

ಬೆಳಗಿನೊಳೊಂದು ಪುರುಷರೂಪವ ತಿದ್ದಿ ನು | ಣ್ಬೆಳಗಿನೊಳದನೊಪ್ಪವಿಟ್ಟು ||
ಬೆಳಗಿನೊಳಗೆ ಹೊಳೆದಂತೆದೆಯೊಳಗಾಗ | ಬೆಳಗುತಿದ್ದನು ಪರಮಾತ್ಮ || ೫೫ ||

ಚಂದ್ರಸೂರ್ಯರ ಗೋಷ್ಠಿಯೊಳು ಕುಳಿತಂತೆ ಜಿ | ನೇಂದ್ರ ಸಂಪದ ಸಾರಿದಂತೆ ||
ರುಂದ್ರಸಿದ್ಧರೊಳೈಕ್ಯವಾದಂತೆ ರಾಜಯೋ | ಗೀಂದ್ರನಿದ್ದನು ಧ್ಯಾನದಲ್ಲಿ || ೫೭ ||

ತನ್ನಲ್ಲಿ ತನಗಾಗಿ ತನ್ನ ನಿಲಿಸಿ ತಾನು | ತನ್ನಿಂದ ತನ್ನನೆ ನೋಡಿ ||
ತನ್ನೊಳುಮ್ಮಿದ ನಿಜಸುಖವ ಸುಖಿಸುತ ನಿ | ಷ್ಪನ್ನನಿದ್ದನು ವಿಭವದೊಳು || ೬೫ ||

ನಿರ್ವಿಕಲ್ಪ ಸಮಾಧಿಯ ಅಂತರಾಳವನ್ನು ರತ್ನಾಕರ ನಮ್ಮ ಮುಂದಿಟ್ಟಿರುವನು. ಇಲ್ಲಿ ಭರತೇಶನ ಅದ್ವೈತಾನಂದದ ಸೊಬಗನ್ನು ವಿವರಿಸಿರುವನು. ಮನಸ್ಸಿನಂತೆ ಮಾದೇವ. ಜಿನನನ್ನು ಧ್ಯಾನಿಸುತ್ತಾ ಕೊನೆಗೆ ತಾವೇ ಜಿನೇಂದ್ರರಾಗುವ ಭವ್ಯಕಲೆಯನ್ನು ಜೈನಾಚಾರ್ಯರು ಸಾರಿರುವರು.

---

[8] ಜೀವಿಗೆ ಔದಾರಿಕ, ತೈಜಸ ಮತ್ತು ಕಾರ್ಮಣವೆಂದು ಮೂರು ದೇಹಗಳಿವೆ. ಸತ್ತಾಗ ಕೇವಲ ಔದಾರಿಕದೇಹ ಮಾತ್ರ ನಶಿಸುವುದು. ತೈಜಸ, ಕಾರ್ಮಣ ದೇಹಗಳು ಮುಕ್ತನಾಗುವತನಕ ಜೀವಿಯನ್ನು ಬೆಂಬಿಡದೆ ಹಿಂಬಾಲಿಸುವುವು.

ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಳೇಬರವ್ |
ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ||[9]

[ಮನುಷ್ಯನು ನಿತ್ಯವೂ ಯಾವಯಾವ ಸ್ವರೂಪವನ್ನು ಧ್ಯಾನಮಾಡುತ್ತಾನೋ ಅದೇ ಸ್ವರೂಪವನ್ನು ಮರಣಸಮಯದಲ್ಲಿಯೂ ಸ್ಮರಿಸುತ್ತ ದೇಹವನ್ನು ಬಿಡುತ್ತಾನೆ. ಅದರಿಂದ ಅವನು ಆಯಾ ಸ್ವರೂಪಗಳನ್ನು ಹೊಂದುವನು.]

ಕೀಟಭ್ರಮರ ನ್ಯಾಯದಂತಿದೆ ಬಹಿರಾತ್ಮ ಮತ್ತು ಪರಮಾತ್ಮ ನ್ಯಾಯ. ಬಹಿರಾತ್ಮ, ಸದ್ಭಾವನೆಗಳಿಂದ ಅಂತರಾತ್ಮವಾಗಿ ತಪೋಸಾಮರ್ಥ್ಯದಿಂದ ಪರಮಾತ್ಮನಾಗಿ ರಾರಾಜಿಸುವುದು.[10]

ಭರತೇಶನ ಏಕಾಗ್ರ ಚಿತ್ತತೆಯನ್ನೂ ಬ್ರಹ್ಮಾನಂದವನ್ನೂ ರತ್ನಾಕರ ರಮಣೀಯವಾಗಿ ವಿವರಿಸಿರುವನು. ಯೋಗಾನಂದ ರತ್ನಾಕರನ ಬಾಳಿನುಸಿರಾದರೆ, ಕಾವ್ಯಾನಂದ ಈತನ ಕರತಲಾಮಲಕ!

ಬೊಲ್ಲನಿಲ್ಲದೆ ವೈಹಾಳಿ ಮಾಳ್ಪನು ವಿಣಿ | ಯಿಲ್ಲದುಯ್ಯಲಾಡುತಿಹನು ||
ನಲ್ಲಳಿಲ್ಲದೆ ರತಿಸುಖವ ಸುಖಿಸುವನ | ದೆಲ್ಲಿ ಕಲಿತನೊ ರಾಜೇಂದ್ರ ||೬೬||

ಬಾಯ ಹಂಗಿಲ್ಲದೆ ಚಿದ್ಗುಣಾನ್ನವನುಂಬ | ಕಾಯವಿಲ್ಲದೆ ರೂಪುದೋರ್ಪ ||
ಶ್ರೀಯಿಲ್ಲದತಿ ಸಿರಿವಂತನಾಗಿಹನೇನು | ಮಾಯಕಾರನೊ ಸಾರ್ವಭೌಮ ||೬೭||

'ಕರೆವ ನಿಜಾನಂದ ರಸವ ಸುಖಿಸಿ ಜಿನನರಿಕೆಯ ಭೋಗಿಯಾಗಿಹನು' ||೬೮||

ಆಭರಣಗಳುಂಟು ತಲೆಸುತ್ತ ದೋತ್ರವುಂ | ಟಾ ಭೂಪಗೊಳಗುಂಟು ಧ್ಯಾನ ||
ಸಾಭರಣಾಂಕಿತ ಸಿದ್ಧರಿಂತಿಹರೆಂಬ | ಶೋಭೆಯ ಸೂಚಿಸುತಿರ್ದಾ ||೬೯||

ತನುವ ಸಂಗ್ರಂಥದೊಳಿರಿಸಿ ನಿರ್ವಾಣವ | ವಿನುತಾತ್ಮನೊಡಗೂಡಿ ನೋಡಿ ||
ಜನಿಸಿದ ಸುಖದಿಂದ ಪರಿಪೂರ್ಣನಾಗಿ ಬಿ | ಮ್ಮನೆ ಬಿಗುಹೇರಿರ್ದನಾಗ ||೭೧||

ಒಳಗುವಿಮ್ಮದಾನಂದ ಹೊರಸೂಸುವಂತೆ ಕಂ | ಗಳಲೊಗುತಿಹುದು ಮುದಾಶ್ರು ||
ಪುಳಕವೆದ್ದಿಹುದು ಸರ್ವಾಂಗದೊಳಗೆ ಹಂಸ | ಕಳೆಯೊಳಿದ್ದನು ಕಳಾರತ್ನ ||೭೩||

ಸೋನೆಮಳೆ ಸುರಿವಾಗ ಮಾಳಿಗೆಯಲ್ಲಿ | ಮಾನವರಿಪ್ಪ ರೀತಿಯೊಳು ||
ಏನೆಂದು ಹೊರಗನರಿಯದೊಳಗಾತ್ಮವಿ | ಜ್ಞಾನಲೋಕದೊಳಿರ್ದನಾಗ ||೭೭||

ಇದುವರೆಗೂ ಶಾಸ್ತ್ರಭಾಗದ ಕಟ್ಟುನಿಟ್ಟಾದ ನಿಯಮಗಳಿಗೊಳಪಟ್ಟು ರತ್ನಾಕರನ ಕಾವ್ಯಕನ್ನೆ ಬೇಸರಪಟ್ಟಿದ್ದಳೋ ಏನೊ. ಈಗ ಆ ದೇವಿ ಸ್ವಚ್ಛಂದವಾಗಿ ನಾನಾಭಂಗಿಯಲ್ಲಿ ನರ್ತಿಸಿ ಆಧ್ಯಾತ್ಮರಸದ ಹೊಲಬನ್ನೆಲ್ಲ ಅಭಿವ್ಯಕ್ತಿಗೊಳಿಸಿರುವಳು. ಪಾಂಡಿತ್ಯವನ್ನು ಹಿನ್ನೂಕಿ ರತ್ನಾಕರನ ಪ್ರತಿಭೆ ಮುನ್ನುಗ್ಗಿ ತನ್ನ ಕಲ್ಪನಾ ಧ್ವಜವನ್ನು ಕಾವ್ಯಾಕಾಶದಲ್ಲಿ ಹಾರಾಡಿಸಿದೆ. 'ಶ್ರೀಯಿಲ್ಲದತಿ ಸಿರಿವಂತನಾಗಿಹನೇನು ಮಾಯಕಾರನೊ ಸಾರ್ವಭೌಮ!' ಎಂಬ ಮಾತು ಧ್ವನಿಪೂರ್ಣವಾದುದು. ಲೌಕಿಕ ಸಿರಿಯಿಂದ ಶ್ರೀಮಂತರಾದವರು ಇಂದಲ್ಲ ನಾಳೆ ಮಣ್ಣು ಮುಕ್ಕಬೇಕಾಗುವುದು. ಅವರ ಶ್ರೀಮಂತಿಕೆ ಪರಾವಲಂಬಿಯಾದುದು. ಬಾಹ್ಯಸಿರಿಯ ಸೋಕನ್ನೂ ನೀಗಿಕೊಂಡು ಎಲ್ಲ ಆವರಣಗಳಿಂದ ಬಿಡುಗಡೆ ಹೊಂದಿ ನಿರ್ವಾಣವಾಗುವುದಕ್ಕಿಂತ ಬೇರೆ ಸಂಪದ ಬೇಕೆ? "...... ಆದರೆ ಮನಸ್ಸು ಯಾವ ರೀತಿಯಿಂದಲೇ ಆಗಲಿ ಪ್ರಬಲ ಏಕನಿಷ್ಠೆಯ ಸಹಾಯದಿಂದ ಕಂಠದ ಮೇಲಿರುವ ಹುಬ್ಬುಗಳ ನಡುವಣ ಚಕ್ರಕ್ಕೇರಿದಾಗ

---

[9] ಗಾಂಧಿಜಿಯವರ ಅನಾಸಕ್ತಿಯೋಗ: ಭಗವದ್ಗೀತೆ, viii—೬.

[10] ಬಹಿರಾತ್ಮನೆಂದರೆ ವಿಷಯಲಂಪಟವಾದ ಚೇತನ; ರಸಲೋಕವಿಹಾರಿಯಾದ ಚೇತನಕ್ಕೆ ಅಂತರಾತ್ಮವೆನ್ನುವರು. ಜಿನೇಂದ್ರನನ್ನು ಪರಮಾತ್ಮನೆನ್ನುವರು.

ಅದು ಸಮಾಧಿಸ್ಥನಾಗಿ ಪಡೆಯುವ ಆನಂದಾನುಭವವನ್ನು ಹೋಲಿಸಿದರೆ ಕೆಳಗಿನ ಚಕ್ರಾದಿಗಳ ವಿಷಯಾನಂದ ಸುಖವು ಅದಕ್ಕೆ ತುಚ್ಛವೆಂದು ತಿಳಿಯುವುದು . . . . . . ."[11] ಶ್ರೀರಾಮ ಕೃಷ್ಣ ಪರಮಹಂಸರ ದಿವ್ಯಾನುಭವವನ್ನು ಈ ಸಂದರ್ಭದಲ್ಲಿ ನೆನೆದರೆ ರತ್ನಾಕರನ ಅಭಿಪ್ರಾಯಕ್ಕೆ ಪುಷ್ಟಿ ದೊರೆಯದಿರದು. "ನಾಭರಣಾಂಕಿತ ಸಿದ್ಧರಿಂತಿಹರೆಂಬ ಶೋಭೆಯ ಸೂಚಿಸುತಿರ್ದಾ" ರತ್ನಾಕರ ಬಾಹ್ಯಾಡಂಬರಕ್ಕಿಂತ ಅಂತರ್ಯದ ವಿಕಾಸಕ್ಕೆ ಹೆಚ್ಚು ಗಮನ ಕೊಟ್ಟಿರುವನು. ಜೈನಸಿದ್ಧಾಂತಗಳಿಗೆ ಅಕ್ಷರಶಃ ಅರ್ಥವನ್ನು ಕಲ್ಪಿಸಿ ಪಂಡಿತವೃಂದ ತಲೆ ಕೆಡಿಸಿಕೊಳ್ಳುತ್ತಿದ್ದು ದನ್ನು ರತ್ನಾಕಾರ ಸಹಿಸದಾದ. ಈತನಲ್ಲಿ ಭಾವಾರ್ಥಕ್ಕೆ ಬೆಲೆ ಹೆಚ್ಚೇ ವಿನಾ ವಾಚ್ಯಾರ್ಥಕ್ಕಲ್ಲ. 'ತನುವ ಸಂಗ್ರಂಥದೊಳಿರಿಸಿ ನಿರ್ವಾಣವ ನಿಸುತಾತ್ಮನೊಡಗೂಡಿ ನೋಡಿ' ಎಂಬಾಗ ರತ್ನಾ ಕರನ ಮನೋಭಾವ ಸ್ಪಷ್ಟವಾಗುವುದು.

ಹೊರಗೆ ಸರ್ವವ ಬಿಡಬಹುದು ಚಿತ್ತದೊಳಿದ್ದ | ಕರೆಯನೊಂದನು ಬಿಡಲರಿದು ||
ಅರುವೆಯ ಬಿಸುಟರೆ ತಪಸಿಯೆ ? ಹರೆ ಬಿಟ್ಟ | ರರೆಗೋಲೆ ವಿಷಹೋಯ್ತೆ ಫಣಿಗೆ ? ||[12]

ಬಾಹುಬಲಿಯ ಮನಃಕಷಾಯವನ್ನು ಕುರಿತು ಭರತೇಶನೊಡನೆ ಆದಿದೇವ ಬಿತ್ತರಿಸುವಾಗ ಈ ಮಾತು ಬಂದಿದೆ. ಕೇವಲ ಬತ್ತಲೆಯಾಗಿ ಅಲೆದಾಡಿದ ಮಾತ್ರಕ್ಕೇ ಮುಕ್ತರಾದೆವೆಂದು ಭಾವಿಸಿದ ಮುನಿಸಿನ ಮುನಿಗಳನ್ನು ರತ್ನಾಕರ ಈ ಸಂದರ್ಭದಲ್ಲಿ ಟೀಕಿಸಿರುವನು.

ತಹ್ಮಾ ಜಹಿತ್ತು ಲಿಂಗೇ ಸಾಗಾರಣಗಾರಏಹಿಂ ವಾಗಹಿಎ |
ದಂಸಣಣಾಣ ಚರಿತ್ತೇ ಅಪ್ಪಾಣಂ ಜುಂಜ ಮೋಕ್ಖಪಹೇ ||[13]

[ಅದಕ್ಕಾಗಿ ಗೃಹಸ್ಥ ಇಲ್ಲವೆ ಮುನಿ ಲಕ್ಷಣಗಳನ್ನು ತ್ಯಜಿಸಿ ನಿಮ್ಮ ಆತ್ಮವನ್ನು ದರ್ಶನ ಜ್ಞಾನ ಚಾರಿತ್ರರೂಪ ಮೋಕ್ಷಮಾರ್ಗದಲ್ಲಿ ನಿಯೋಜಿಸುವುದು].

ಎಂದು ಭಗವಾನ್ ಕುಂದಕುಂದರು ಖಚಿತವಾಗಿ ತಿಳಿಸಿರುವರು. ರತ್ನಾಕರ ನಿರ್ವಾಣ [ಬತ್ತಲೆ] ವನ್ನು ಒಪ್ಪಿದರೂ ಕೇವಲ ಬಟ್ಟೆಯನ್ನು ಕಳಚಿದ ಮಾತ್ರಕ್ಕೆ ಮಹರ್ಷಿಯೆಂದು ಯಾರನ್ನೂ ಪರಿಗಣಿಸಲಾರ; ಅಂತರ್ಯದ ಪರಿಗ್ರಹಗಳನ್ನು ತ್ಯಜಿಸಿ ಅದಕ್ಕೆ ಪೂರಕವಾಗಿ ಬಾಹ್ಯ ಪರಿಗ್ರಹಗಳನ್ನೂ ತ್ಯಜಿಸಿದಾಗ ಅಂಥವರನ್ನು ಮನಸಾರೆ ಕೊಂಡಾಡಿ ಬಿಡುವನು. ಭರತೇಶನಾದರೋ ಇದ್ದು ಇಲ್ಲದಂತೆ ಲೋಕದ ವ್ಯವಹಾರದಲ್ಲಿ ವರ್ತಿಸಿ ತನ್ನ ಅನಾಸಕ್ತಿ ಯೋಗದಿಂದ ಕರ್ಮ ನಿರ್ಜರೆಯೆಸಗಿದ ಮಹಾನುಭಾವ! "ಜ್ಞಾನರೂಪಿಯಾದ ಆತ್ಮನಲ್ಲಿ ಸ್ಥಿರನಾಗದೆ ಕೈಗೊಳ್ಳುವ ತಪಸ್ಸು ವ್ರತಗಳಿಗೆ ಸರ್ವಜ್ಞನು ಅಜ್ಞಾನತಪ, ಅಜ್ಞಾನ ವ್ರತಗಳೆಂದು ಹೇಳುವನು."[14]

ಅತ್ತ ರಾಣಿಯರು ಜಿನಗೇಹದಲ್ಲಿ ಜಿನಸ್ತುತಿಯೆಸಗುವೆಡೆ ರತ್ನಾಕರ ನಮ್ಮ ಗಮನವನ್ನು ಸೆಳೆಯುತ್ತಾನೆ. ಸಂಜೆಯಾದುದನ್ನು ಮನೋಹರವಾಗಿ ವರ್ಣಿಸುತ್ತಾನೆ.

ಮೃಗಧರಮುಖಿಯರ ಜಿನ ಭಕ್ತಿರಾಗದಂ | ತೊಗೆದುದು ಸಂಧ್ಯಾರಾಗ ||
ಗಗನ ಹೂವಾದಂತೆ ತಾರೆಗಳಲ್ಲಿಗ | ಲ್ಲಿಗೆ ತೋರಿದುವು ಮಿನುಮಿನುಗಿ || ೮೦ ||

ಪ್ರಕೃತಿಯ ಸೊಬಗಿಗಾಗರವಾದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ರತ್ನಾಕರ ಜನಿಸಿದರೂ ಈತನ ಕಾವ್ಯದಲ್ಲಿ ಪ್ರಕೃತಿಯ ವರ್ಣನೆ ಅಷ್ಟಾಗಿ ಬಂದಿಲ್ಲ. ರುದ್ರರಮಣೀಯವಾದ ಪರ್ವತ ಪಂಕ್ತಿ ಈತನನ್ನು ಬಳಸಿಕೊಂಡಿದ್ದರೂ ಭೀಕರಾರಣ್ಯ ಈತನ ಸುತ್ತಲೂ ದಟ್ಟವಾಗಿ ಹಬ್ಬಿದ್ದರೂ ಭರತೇಶವೈಭವದಲ್ಲಿ ಪ್ರಕೃತಿಗೆ ಎಷ್ಟರಮಟ್ಟಿಗೆಡೆ ದೊರೆಯಬೇಕಾಗಿತ್ತೋ ಅಷ್ಟು ದೊರೆತಿಲ್ಲ.

---

[11] ಶ್ರೀ ರಾಮಕೃಷ್ಣಲೀಲಾಪ್ರಸಂಗ IV, ೩೨೪. [12] ಭ. ವೈ., ಶ್ರೀಣ್ಯಾರೋಹಣಸಂಧಿ, ಪ. ೧೯.
[13] ಸ. ಸಾ. ೪೧೧. [14] ಸ. ಸಾ. ೧೫೩.

ಬಂದಿರುವಷ್ಟು ವಿವರಣೆಯನ್ನು ನೋಡಿದಾಗ ಈತನ ಕಲ್ಪನೆಯಲ್ಲಿ ಸಹಜತೆಯಿರುವುದನ್ನೂ ಸೌಂದರ್ಯವಿರುವುದನ್ನೂ ಗಮನಿಸಬಹುದು. "ಗಗನ ಹೂವಾದಂತೆ ತಾರೆಗಳಲ್ಲಿ ಗಲ್ಲಿಗೆ ತೋರಿದುವು ಮಿನುಮಿನುಗಿ" ಎಂಬ ಬಣ್ಣನೆಯಲ್ಲಿರುವ ಬೆಡಗನ್ನು ನೋಡಿ. ಇನ್ನು ಭರತೇಶ ನರಸಿಯರ ಜಿನಸ್ತುತಿಯನ್ನಾಲಿಸೋಣ.

ಬಣ್ಣಸರವ ಪಸರವ ಸಿಕ್ಕಿದಂತೆಲ್ಲ | ಬಣ್ಣವಣ್ಣಿಗೆಯಲ್ಲಿ ಕುಳಿತು ||
ಸಣ್ಣದನಿಯೆಸೆಯೆ ಬಸದಿ ತುಂಬಿರೆ ಕೂರ್ತು | ಬಣ್ಣಿಸಿದರು ಪುರಜಿನನಾ || ೮೨ ||

ಪಾಸಿದ ದಣಿಬದೊಳೆಲ್ಲರು ಪಲ್ಯಂ | ಕಾಸನದೊಳಗೊಲ್ದು ಕುಳಿತು ||
ಮಾಸದ ಮನದಿಂದ ಮುಗಿದ ಹಸ್ತಗಳಿಂದ | ಭಾಸುರಸ್ತುತಿಯ ಮಾಡಿದರು || ೮೩ ||

ಶಾಂತಭಾವದೊಳು ನಿರಾಲಾಸ್ಯದೊಳು ಮಹಾ | ಸಂತೋಷದೊಳು ತವತವಗೆ ||
ಅಂತಕವಿಜಯನ ಕೀರ್ತಿಸಿದರು ಪುಣ್ಯ | ಕಾಂತೆಯರೇನ ಬಣ್ಣಿಪೆನು || ೮೪ ||

ಭರತೇಶನ ಮಡದಿಯರ ಜಿನಭಕ್ತಿಯನ್ನು ಕೊಂಡಾಡುವಾಗ ರತ್ನಾಕರ ಮೈಮರೆತು ಹೋಗುವನು. ತನ್ನ ಕಾಲದ ಶ್ರಾವಕಿಯರ ಸಮ್ಯಕ್ತ್ವವನ್ನು ಮಹಾಕವಿ ಈ ನೆಪದಲ್ಲಿ ಹಾಡಿರುವನೋ ಏನೊ!

ಭರತೇಶ ಮೈಮರೆತು ಧ್ಯಾನಾಸಕ್ತನಾದಾಗ ನಾನಾಭೂತಗಳು ಆಯೆಡೆ ಧಾವಿಸಿ ಸೇವೆಯೆಸಗುವುದನ್ನು ವೈಭವಪೂರ್ಣವಾಗಿ ರತ್ನಾಕರ ಚಿತ್ರಿಸಿರುವನು.

ವನದೇವಿ ಪುರದೇವಿ ಜಲದೇವಿ ಜೈನಶಾ | ಸನದೇವಿಯರು ನೆರೆದೆಲ್ಲ ||
ಮನುವಂಶತಿಲಕನ ಯೋಗವ ನೋಡಿ ಮೂ | ಗಿನ ಮೇಲೆ ಬೆರಳಿಟ್ಟರಾಗ || ೯೫ ||

ತಲೆಯಿಂದ ಪಜ್ಜೆಮುಟ್ಟರಸನ ನೋಳ್ಪರು | ಚಲಿಸದ ಧ್ಯಾನವ ಕಂಡು ||
ತಲೆದೂಗುವುವು ಕೈಮುಗಿವುವು ಪೂಜಿವು | ವೊಲಿದು ವ್ಯಂತರ ದೇವತೆಗಳು || ೯೬ ||

ಚಾಮರವಿಕ್ಕುವುವಾಲವಟ್ಟವನಿಕ್ಕಿ | ಪೂಮಳೆಗರೆವುವು ಮೇಲೆ ||
ಪ್ರೇಮದಿಂದಾರತಿಯೆತ್ತುವುವಾತ್ಮಾ | ರಾಮಗುತ್ತಮ ದೇವತೆಗಳು || ೯೭ ||

ಮೆಲ್ಲಮೆಲ್ಲನೆ ಸ್ತುತಿಮಾಳ್ಪವು ರಾಣಿಯ | ರೆಲ್ಲರು ಬಪ್ಪ ಬಟ್ಟೆಯನು ||
ಮೆಲ್ಲಗಾರೈವುವು ನೃಪನ ಮೈಮುಟ್ಟದ | ಲ್ಲಲ್ಲಿ ನಿಂದೋಲೈಸುತಿಹುವು || ೯೮ ||

ಭ್ರಾಂತಿಯ ಬಿಟ್ಟಾತ್ಮರೂಪ ನೋಳ್ಪವರಿಗೋ | ರಂತೆರಗುವುದು ಮೂಲೋಕಾ ||
ವ್ಯಂತರಗಳು ಸೇವೆಮಾಳ್ಪುದೇನರಿದೆಂದು | ಶಾಂತಾತ್ಮನಿರ್ದನಾತ್ಮನೊಳು || ೧೦೦ ||

ಏಕಾಗ್ರಮನನಾಗಿ ಯೆಲ್ಲರ ನೀಗಿ ತಾ | ನೇಕಾಕಿಯಾಗಿಹೆನೆನಲು ||
ಏಕೆ ಬಿಡುವುದು ಪೂರ್ವದ ಪುಣ್ಯ ವ್ಯಂತರಾ | ನೀಕವಿದ್ದುದು ಬಳಸಿನೊಳು || ೧೦೧ ||

ಸಾಮಾನ್ಯವಾಗಿ ಮುನಿಗಳಿಗುಪಸರ್ಗವಾದಾಗ ಶಾಸನದೇವತೆಗಳು ಧಾವಿಸಿ ಉಪಸರ್ಗ ನಿವಾರಣೆಮಾಡುವ ಹಾಗೂ ಸೇವೆಯೆಸಗುವ ಚಿತ್ರಗಳನ್ನು ಜೈನಸಾಹಿತ್ಯದಲ್ಲಿ ಆಗಾಗ ಕಾಣುವೆವು. ಆದಿದೇವ ತಪೋನಿರತನಾಗಿದ್ದಾಗ ಕಚ್ಛ ಮಹಾಕಚ್ಛರ ತನಯರಾದ ನಮಿ ವಿನಮಿಗಳು ವಿಷಯಲೋಲುಪರಾಗಿ ಮಹಾ ಮುನಿಯೆಡೆ ಬಂದು ಪೀಡಿಸಿದಾಗ 'ಪ್ರಕಂಪಿ ತಾಸನನುತ್ಪನ್ನಾವಧಿಬೋಧಂ' ಆದ ಧರಣೇಂದ್ರ ಆಯೆಡೆ ಬಂದು ಉಪಾಯವಾಗಿ ನಮಿ ವಿನಮಿಯರನ್ನು ಕಳುಹಿಸಿಕೊಡುವನು[15]. ಅತ್ತ ಬಾಹುಬಲಿ ಕಾಯೋತ್ಸರ್ಗದಲ್ಲಿ ತಪವೆಸಗುತ್ತಿದ್ದಾಗ ಹುತ್ತಗಳೆದ್ದು ಮುನೀಂದ್ರನ ಸುತ್ತ ಬಳ್ಳಿಗಳಡರಿ ಸುತ್ತುಗಟ್ಟಿದಾಗ ಖೇಚರಿಯರು ಬಂದು ಭಕ್ತಿಯಿಂದ ಸೇವೆಯೆಸಗುವುದನ್ನು ಪಂಪನ ಆದಿಪುರಾಣದಲ್ಲಿ ಕಾಣಬಹುದು[16].

---

[15] ಆ. ಪು. ix, ೯೮-೧೧೧ [16] ಆ. ಪು. xiv, ೧೪೨-೧೪೩

ಭರತೇಶನ ಸುತ್ತ ಭೂತಗಳು ಕಾಣಿಸಿಕೊಂಡು ಮಾಡುವ ಸೇವೆ ಆತನ ವೈಭವಕ್ಕಿನ್ನೂ ಗುಣವಾದುದು. 'ಏಕೆ ಬಿಡುವುದು ಪೂರ್ವದ ಪುಣ್ಯ? ವ್ಯಂತರಾನೀಕವಿದ್ದುದು ಬಳಸಿಸೊಳು!' ಎಂದು ರತ್ನಾಕರ ಮೈಯುಬ್ಬಿ ಹೋಗಿರುವನು. ಭರತೇಶ ಏಕಾಂತವನ್ನಪೇಕ್ಷಿಸಿದರೂ ಆತನ ಪುಣ್ಯ ಅದಕ್ಕೆ ಎಂದೂ ಅವಕಾಶವಿತ್ತಿಲ್ಲ. 'ತುಂಬಿಯ ಗಾನವ ಕೇಳುತ ಸಡೆದನಾಡಂಬರ ತಪ್ಪದ ಭೋಗಿ'[17] ಎಂದು ಭರತೇಶನನ್ನು ಹಿಂದೊಮ್ಮೆ ರತ್ನಾಕರ ಕೊಂಡಾಡಿರುವನು. ಆದಿ ದೇವನಿಗೆ ಸುರವೃಂದ ಭಕ್ತಿಯಿಂದ ಪೂಜೆಯೆಸಗುವಂತೆ ಬುವಿಯಲ್ಲಿ ಧ್ಯಾನಿಯಾದ ಭರತೇಶನಿಗೆ ಈ ವ್ಯಂತರ ದೇವತೆಗಳು ಪೂಜೆಯೆಸಗಿವೆ. ಭರತೇಶನಿರುವ ತಾಣವೇ ಅಭಿನವ ಸಮವಸರಣ ವೆಂದು ರತ್ನಾಕರ ಭಾವಿಸಿರುವನು.

'ಕ್ಷಿತಿಪನಿದ್ದನು ಸುರಪೂಜೆವಡೆದು ಮರ್ತ್ಯ ಸತಿಯರ ಪೂಜೆಗಿಂಬಾಗಿ'. ಭರತೇಶ ನನ್ನು ಎಷ್ಟು ಜನ ಪೂಜಿಸಿದರೂ ರತ್ನಾಕರನಿಗೆ ಸಾಲದಾಗಿದೆ. ತಮ್ಮ ಪತಿದೇವನ ಅಚಲವಾದ ಧ್ಯಾನವನ್ನು ಕಂಡು ಆನಂದಿಸಲೆಂದು ಆತನ ಮಡದಿಯರನ್ನೂ ಮಹಾಕವಿ ಆಹ್ವಾನಿಸುವನು.

**ದೂರದೊಳಗೆ ನಿಂದು ನೋಡಿದರರಸನಾ | ಕಾರವನಾ ಲಲನೆಯರು ||**
**ಮೇರು, ಪುರುಷನಾಗಿ ಮಿಸುಕದೆ ಕುಳಿತಂತೆ | ಧೀರನಿರ್ದನು ನಿಜಾತ್ಮನೊಳು || ೧೦೯ ||**

'ಮೇರು ಪುರುಷನಾಗಿ' ಎಂಬ ಕಲ್ಪನೆ ಅಪೂರ್ವವಾದುದು. ಭರತೇಶನ ಮಹತ್ತಿಗೆಣೆ ಯಾಗಿ ನಿಲ್ಲುವಂಥ ಬೃಹತ್ತನ್ನು ರತ್ನಾಕರ ಕಲ್ಪಿಸಿರುವನು. "ಮಂಗಲ ವಸ್ತು ತುಂಬಿದ ಗೃಹ ದೊಳು ಜಗನ್ಮಂಗಳನಿರ್ದನಾತ್ಮನೊಳು". ಇಂಥವನನ್ನು ಕಂಡಾಗ ಅರಸಿಯರಲ್ಲಿ ಚಿಮ್ಮಿಬಂದ ಭವ್ಯಕಲ್ಪನೆಯನ್ನು ನೋಡೋಣ.

**ಮುಕ್ಕೊಡೆಯಂತೊಡ್ಡಿ ಮೇಲೆ ಮಾಣಿಕ ಜ್ಯೋತಿ | ಚೊಕ್ಕದಿ ಮೂರು ಸಾಲಾಗಿ ||**
**ಇಕ್ಕುವುದೊಂದು ಕಿರೀಟ ಚಕ್ರೇಶಗಿಂ | ದಕ್ಕ ಮೂರಾಯ್ತೆಂದರವರು || ೧೧೩ ||**

ಮುಕ್ಕೊಡೆಯ ಸನ್ಮಾನ ಜಿನೇಂದ್ರನೊಬ್ಬನಿಗೆ ಮೀಸಲಾದುದು. ಆದರೆ ಭರತೇಶನ ರಾಣಿಯರ ಬಗೆಗಣ್ಣಿಗೆ ತಮ್ಮ ಪತಿದೇವನ ಭಾವೀಸಂಪದ ಕಂಡಿತೇನೋ! ಚಕ್ರೇಶನ ಭವ್ಯತೆಗೆ ಮಾರಾಣಿಯರು ದಿವ್ಯಕಲ್ಪನೆಯ ಕಿರೀಟವಿಟ್ಟಿರುವರು.

ಬೆಳಗಿನ ಲೋಕವನ್ನು ಹೊಗುವಂತೆ ಆ ವನಿತೆಯರು ಭರತೇಶ ತಪವೆಸಗುವ ತಾಣಕ್ಕೆ ಬಂದು ಆ ರತ್ನಯೋಗಿಯನ್ನು ಮೂರುಬಾರಿ ಬಲಗೊಂಡು ಮನೆತುಂಬ ಕುಳಿತರು. ರತ್ನದ ಪಡಲಿಕೆಯೊಳಗಿದ್ದ ಪರಮಾತ್ಮ ರತ್ನವರ್ಣನೆಯ ಶಾಸ್ತ್ರವನ್ನು ರತ್ನಗಳ ಹೊಂಬೆಳಗಿನಲ್ಲಿ ಅಬಲಾರತ್ನಗಳೋದಿದರು. ಕೆಲವರು ಆಗಮವನ್ನೋದಿದರೆ ಮತ್ತೆ ಕೆಲವರು ವೀಣೆಗಳಲ್ಲಿ ಇನಿದನಿಯ ಮಳೆಗರೆದರು. 'ಮಂಟಪ ಗುಮುಗುಮು ಗುಮ್ಮನೆ ಕೊರಳೆದೆಗುಂಟಾಗಿ ಠಾಯೆ ದೋರಿದರು; ಬೆಂಡಿನಂದದ ಲಘುಕಿನ್ನರಿಯಲ್ಲಿ ಸ್ವರಮಂಡಲದಲ್ಲಿ ಶ್ರುತಿಗೂಡಿ ಗಂಡು ಕೋಗಿಲೆ ಯಂತೆ, ಪೆಣ್ದುಂಬಿಯಂತೆ ಆಗ ಆತ್ಮಸಾರವನು ಹಿಂಡಿದರು'.

**ಹಾಲಂತೆ ಸಂಗೀತ, ಶರ್ಕರೆಯಂತೆ ನಿ | ರಾಲ ಪ್ರಕಾಶದಧ್ಯಾತ್ಮ ||**
**ಹಾಲುಸಕ್ಕರೆಗೂಡಲಾರ ಸೋಲಿಸದು ? ವೀ | ಣಾಲಾಪೆಯರು ಪಾಡುತಿಹರು || ೧೩೯ ||**

ಅಧ್ಯಾತ್ಮಸಾರಕ್ಕೆ ಮಹಾಕವಿ ಸಂಗೀತದ ರಸಲೇಪವಿಟ್ಟು ಸಾಕಾರಗೊಳಿಸಿರುವನು.

ಈಗ ಚಂಚಲಾಕ್ಷಿಯರ ಏಕಾಗ್ರ ಚಿತ್ತತೆಯನ್ನು ನೋಡೋಣ:

**ಮಿಸುಕದೆ ಕುಳಿತು ಕಣ್ಮುಚ್ಚಿ ಭಾವದಿ ತಮ್ಮ | ನೊಸಲೊಳು ಕಾಣ್ಬರಕ್ಷರವಾ ||**
**ಕುಸಿದೊಮ್ಮೆ ತಮ್ಮ ಮೆಯ್ಯೊಳಗೆ ತಮ್ಮಾತ್ಮನ | ನಸುಬೆಳಗಾಗಿ ಕಾಣುವರು || ೧೪೪ ||**

[17] ಭ. ವೈ., ಮುನಿಭುಕ್ತಿ ಸಂಧಿ, ಪ. ೧೨.

ಓದಿ ಶಬ್ದಬ್ರಹ್ಮದಿಂದ ಕೆಲರು ಗೀತ| ನಾದ ಬ್ರಹ್ಮದಿ ಕೆಲಬರು ||
ಭೇದ ಭಾವನೆಯ ಯೋಗಭಾವದೊಳು ಕೆಲ| ರಾ ದಿವ್ಯರಾತ್ರಿಯೊಳಿಹರು ||೧೪೮||

ಬಳಸಿ ನಾರಿಯರು ಬ್ರಹ್ಮತ್ರಯ ಪೂಜೆಯೊ| ಳಲಸದೆ ಜಾಗರವಿರಲು ||
ನೆಲದಾಣ್ಮ ನಡುವೆ ತನ್ನಾತ್ಮನೊಳಡಗಿ ನಿ| ಶ್ಚಲ ಪರಬ್ರಹ್ಮದೊಳಿರ್ದ ||೧೪೯||

ಭರತೇಶನ ರಾಣಿಯರೂ ತಮ್ಮ ಪತಿದೇವನಂತೆ ಬ್ರಹ್ಮಲೋಕ ವಿಹಾರಿಗಳಾಗಲು ಪ್ರಯತ್ನಿಸಿರುವರು. ಸಮವಸರಣದ ಭವ್ಯತೆ ಮತ್ತು ದಿವ್ಯತೆಗಳ ಪಡಿನೆಳಲಾಗಿ ಭರತೇಶನ ಸಂಸಾರ ವಿರಾಜಿಸಿದೆ. ಆದಿಬ್ರಹ್ಮನ ಲೋಕ ಎಂತೋ ಅಂತೆ ಬ್ರಹ್ಮಪುತ್ರನ ಲೋಕವೂ ಕೂಡ. ಬ್ರಹ್ಮಲೋಕ ಮತ್ತು ಬ್ರಹ್ಮಪುತ್ರನ ಲೋಕಗಳನ್ನು ಕಲಾಮಯವಾಗಿ ಬಣ್ಣಿಸಿ ರತ್ನಾಕರ, ಕವಿಬ್ರಹ್ಮನಾಗಿರುವನು. ಇಲ್ಲಿಯ ಓದು ಶಬ್ದಬ್ರಹ್ಮ! ಇಲ್ಲಿಯ ಗೀತ, ನಾದಬ್ರಹ್ಮ! ಇಲ್ಲಿಯ ಧ್ಯಾನ, ಯೋಗಬ್ರಹ್ಮ! ಇಲ್ಲಿಯ ಪೂಜೆ ಬ್ರಹ್ಮತ್ರಯ ಪೂಜೆ! ಇಷ್ಟೂ ನಡೆದುದು ಆದಿಬ್ರಹ್ಮನ ಪುತ್ರನ ಸಾನ್ನಿಧ್ಯದಲ್ಲಿ! ಕವಿಬ್ರಹ್ಮ ರತ್ನಾಕರನ ಪ್ರತಿಭಾಲೋಕದ ಕಲ್ಪನಾ ದೇಗುಲದ ಭವ್ಯದೃಶ್ಯವಿದು!

ಜಿ. ಬ್ರಹ್ಮಪ್ಪ

# ಜೈನ ಕಥಾಸಾಹಿತ್ಯ

ಪ್ರಾಚೀನಕಾಲದಿಂದಲೇ ಕಥಾಸಾಹಿತ್ಯದ ಸ್ಥಾನವು ಬಹಳ ಉನ್ನತವಾಗಿದೆ. ಋಗ್ವೇದ, ಬ್ರಾಹ್ಮಣ, ಉಪನಿಷದ್ ಮೊದಲಾದ ವೈದಿಕ ಗ್ರಂಥಗಳಲ್ಲಿ ಅನೇಕ ಶಿಕ್ಷಾಪ್ರದ ಆಖ್ಯಾನಗಳು ಸಿಗುವುವು. ಇವುಗಳ ಮೂಲಕ ಮಾನವ ಜೀವನವನ್ನು ಮೇಲೆ ಎತ್ತುವುದಕ್ಕೋಸ್ಕರ ಪ್ರಯತ್ನವು ನಡೆದಿದೆ. ಬೌದ್ಧರ ಜಾತಕಕಥೆಗಳನ್ನು ಕಥೆಗಳ ಒಂದು ಸಮೃದ್ಧವಾದ ಕೋಶವೆಂದು ಒಪ್ಪುವುದು ತಪ್ಪಾಗಲಾರದು. ಸಿಂಹಳ, ಬರ್ಮ ಮೊದಲಾದ ದೇಶಗಳಲ್ಲಿ ಈ ಜಾತಕ ಕಥೆಗಳು ಲೋಕಪ್ರಿಯವಾಗಿವೆ. ಅಲ್ಲಿಯ ನಿವಾಸಿಗಳು ಇಂದೂ ಈ ಕಥೆಗಳನ್ನು ನಿದ್ರೆಯನ್ನು ಬಿಟ್ಟು ರಾತ್ರಿಯೆಲ್ಲಾ ಪ್ರೀತಿಯಿಂದ ಕೇಳುವುದುಂಟು. ಜಾತಕಕಥೆಗಳಲ್ಲಿ ಬುದ್ಧನ ಪೂರ್ವ ಜನ್ಮಗಳ ವರ್ಣನೆಯು ಇದೆ. ಈ ಕಥೆಗಳ ದೃಶ್ಯವನ್ನು ನಾವು ಸಾಂಚಿ, ಬರಹುತ, ಮೊದಲಾದ ಸ್ಥಳಗಳಲ್ಲಿ ಸಿಗುವ ಬೌದ್ಧಸ್ತೂಪಗಳ ಭಿತ್ತಿಗಳಲ್ಲಿ ಇಂದೂ ನೋಡಬಹುದು. ಇವುಗಳ ಕಾಲ ಕ್ರಿ.ಪೂ. ೨ ನೆಯ ಶತಮಾನ.

ಪ್ರಾಚೀನಕಾಲದಲ್ಲಿ ಭಾರತವರ್ಷದಲ್ಲಿ ಪ್ರಚಾರದಲ್ಲಿದ್ದ ರಾಮಾಯಣ, ಮಹಾಭಾರತ ಮೊದಲಾದ ಅನೇಕ ಲೋಕಕಥೆಗಳನ್ನು ಬ್ರಾಹ್ಮಣರು, ಜೈನರು ಹಾಗೂ ಬೌದ್ಧರು ತಮ್ಮ ತಮ್ಮ ಧರ್ಮಗ್ರಂಥಗಳಲ್ಲಿ ಸ್ಥಾನವನ್ನಿತ್ತು ತಮ್ಮ ತಮ್ಮ ಸಿದ್ಧಾಂತಗಳ ಪ್ರಚಾರವನ್ನು ಮಾಡಿದರು. ಬೌದ್ಧರ ಪಾಲಿಸಾಹಿತ್ಯದಂತೆ ಜೈನರ ಪ್ರಾಕೃತಸಾಹಿತ್ಯವೂ ಕಥೆಗಳ ದೊಡ್ಡ ಭಂಡಾರವು. ಜೈನ ಸಾಧುಗಳು ತಮ್ಮ ಧರ್ಮದ ಪ್ರಚಾರಕ್ಕಾಗಿ ಬಹಳ ದೂರದೂರದ ದೇಶಗಳಿಗೆ ಪ್ರಯಾಣ ಮಾಡುತ್ತಿದ್ದರು. ಬೃಹತ್ಕಲ್ಪಭಾಷ್ಯಾಂತರ್ಗತ 'ಜನಪದ ಪರೀಕ್ಷಾ' ಪ್ರಕರಣದಲ್ಲಿ ಜೈನ ಸಾಧುಗಳು ಆತ್ಮಶುದ್ಧಿಗಾಗಿಯೂ ಇತರರನ್ನು ಧರ್ಮದಲ್ಲಿ ಸ್ಥಿರಗೊಳಿಸುವುದಕ್ಕಾಗಿಯೂ ಜನಪದ ವಿಹಾರವನ್ನು ಅಗತ್ಯಮಾಡಬೇಕೆಂದೂ ಜನಪದ ವಿಹಾರವನ್ನು ಮಾಡುವ ಸಾಧುಗಳು ಅಲ್ಲಿಯ ಜನರಿಗೆ ಅಲ್ಲಿಯ ಭಾಷೆಯಲ್ಲಿಯೇ ಉಪದೇಶಮಾಡಲು ಮಗಧ, ಮಾಳವ, ಮಹಾರಾಷ್ಟ್ರ, ಕರ್ಣಾಟಕ, ದ್ರಾವಿಡ, ಗೌಡ, ವಿದರ್ಭ ಮೊದಲಾದ ಆಯಾ ದೇಶಗಳ ಲೋಕಭಾಷೆಯಲ್ಲಿ ನಿಪುಣರಾಗಿರಬೇಕೆಂದೂ ಹೇಳಿದೆ.

ಜೈನಸಾಹಿತ್ಯದ ಪ್ರಾಚೀನತಮಭಾಗಕ್ಕೆ ಆಗಮವೆಂದು ಹೆಸರು. ದಿಗಂಬರ ಪರಂಪರೆಯ ಅಭಿಮತದಂತೆ ಆಗಮಗ್ರಂಥಗಳು ಸಂಪೂರ್ಣ ನಷ್ಟವಾಗಿವೆ. ಶ್ವೇತಾಂಬರ ಪರಂಪರೆಯ ಅಭಿಪ್ರಾಯದಂತೆ ಆಗಮಗ್ರಂಥಗಳು ವಿಕೃತರೂಪದಲ್ಲಿ ಇಂದೂ ಇವೆ. ಹನ್ನೊಂದು ಅಂಗಗಳು, ಹನ್ನೆರಡು ಉಪಾಂಗಗಳು, ಹತ್ತು ಪ್ರಕೀರ್ಣಕಗಳು, ಆರು ಛೇದಸೂತ್ರಗಳು, ನಾಲ್ಕು ಮೂಲಸೂತ್ರಗಳು, ನಂದಿ ಹಾಗೂ ಅನುಯೋಗದ್ವಾರ ಇವೇ ಶ್ವೇತಾಂಬರರು ಹೇಳುವ ಆಗಮಗ್ರಂಥಗಳು. ಹನ್ನೊಂದು ಅಂಗಗಳ ಅಂತರ್ಗತ 'ನಾಯಾಧಮ್ಮಕಹಾ' ಅಂದರೆ ಜ್ಞಾತೃಧರ್ಮಕಥೆ ಎಂಬ ಐದನೆಯ ಅಂಗದಲ್ಲಿ ಜ್ಞಾತೃಪುತ್ರನಾದ ಮಹಾವೀರನ ರೋಚಕವೂ ಶಿಕ್ಷಾಪ್ರದವೂ ಆದ ಅನೇಕ ಧರ್ಮಕಥೆಗಳು ವರ್ಣಿಸಲ್ಪಟ್ಟಿವೆ. 'ಉಪಾಸಕದಶಾ' ಎಂಬ ಆರನೆಯ ಅಂಗದಲ್ಲಿ ಮಹಾವೀರನ ಉಪಾಸಕರ ಸುಂದರ ಕಥೆಗಳು ಸಿಗುವುವು. ಒಂದು ಮಾತು: ಕಥಾಸಾಹಿತ್ಯದ ಸರ್ವೋತ್ತಮ ಭಾಗ ನಮಗೆ ಆಗಮಗ್ರಂಥಗಳ ಟೀಕಾಟಿಪ್ಪಣಿಗಳಲ್ಲಿ ಸಿಗುವುದು. ಈ ಟೀಕಾಟಿಪ್ಪಣಿಗಳು ನಿರ್ಯುಕ್ತಿ, ಭಾಷ್ಯ, ಚೂರ್ಣಿ ಮತ್ತು ಟೀಕೆ ಹೀಗೆ ನಾಲ್ಕು ಭಾಗಗಳಲ್ಲಿ ವಿಭಾಗಿಸಲ್ಪಟ್ಟಿವೆ. ಭಾರತದ ಪ್ರಾಚೀನ ಕಥಾಸಾಹಿತ್ಯದ ದೃಷ್ಟಿಯಿಂದ ಇವುಗಳಲ್ಲಿ ಚೂರ್ಣಿ ಮತ್ತು ಟೀಕಾಸಾಹಿತ್ಯ ಅತ್ಯಂತ ಮಹತ್ತ್ವ

ಪೂರ್ಣವಾದುದು. ಇವುಗಳಲ್ಲಿಯೂ ಆವಶ್ಯಕ ಚೂರ್ಣಿ ಹಾಗೂ ಉತ್ತರಾಧ್ಯಯನ ಟೀಕೆಯಂತೂ ಕಥೆಗಳ ದೊಡ್ಡ ಕೋಶವೇ ಆಗಿದೆ. ಆಗಮಸಾಹಿತ್ಯವನ್ನು ಬಿಟ್ಟರೂ ಜೈನಸಾಹಿತ್ಯದಲ್ಲಿ ಪುರಾಣ, ಚರಿತ್ರೆ, ಚಂಪೂ, ಪ್ರಬಂಧ ಮೊದಲಾದುವುಗಳ ರೂಪದಲ್ಲಿ ಪ್ರಾಕೃತ, ಸಂಸ್ಕೃತ, ಅಪಭ್ರಂಶ, ಕನ್ನಡ, ತಮಿಳು ಮೊದಲಾದ ಭಾಷೆಗಳಲ್ಲಿಯೂ ಸಣ್ಣ ದೊಡ್ಡ ಅನೇಕ ಕಥೆಗಳು ದೊರೆಯುವುವು.

ಪೌರಾಣಿಕ ಮಹಾಪುರುಷರ ಕಥಾಗ್ರಂಥಗಳ ಅನಂತರ ಜೈನೇತರ ವಿದ್ವಾಂಸರ ಲಕ್ಷ್ಯ ಕಾಲ್ಪನಿಕ ಹಾಗೂ ಐತಿಹಾಸಿಕ ಕಥೆಗಳ ಕಡೆಗೆ ಹೊರಳಿದುದನ್ನು ಕಂಡು ಜೈನ ವಿದ್ವಾಂಸರೂ ಲೋಕರುಚಿಯನ್ನು ಲಕ್ಷ್ಯದಲ್ಲಿಟ್ಟು ತರಂಗವತೀ, ಮಲಯವತೀ, ಮಗಧಸೇನಾ, ಬಂಧುಮತೀ, ಸುಲೋಚನಾ ಮೊದಲಾದ ಸುಂದರ ಕಾಲ್ಪನಿಕ ಕಥೆಗಳನ್ನು ಬರೆದರು. ಕವಿರಾಜಕುಂಜರ ನೇಮಿಚಂದ್ರನ ಲೀಲಾವತಿಯೂ ಇದೇ ಶ್ರೇಣಿಗೆ ಸೇರಿದ ಒಂದು ಕಾಲ್ಪನಿಕ ಕಥೆಯಾಗಿದೆ. ಮಹಾರಾಜ ವಿಕ್ರಮಾದಿತ್ಯನಿಗೆ ಸಂಬಂಧಪಟ್ಟ ಕಥೆಗಳು ಸಾಮಾನ್ಯ ಜನರ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿದ್ದುವು. ಇದನ್ನು ಕಂಡು ಜೈನ ಲೇಖಕರೂ ವಿಕ್ರಮಾರ್ಕನ ಸಂಬಂಧದಲ್ಲಿ ಒಂದೆರಡಲ್ಲ ; ಸುಮಾರು ಅರುವತ್ತು ಕಥೆಗಳನ್ನು ಬರೆದರು. ಸಂಭವತಃ ಇಷ್ಟೊಂದು ರಚನೆಗಳು ಜೈನೇತರ ಲೇಖಕರದೂ ಸಿಗಲಾರವು. ವಿಕ್ರಮ ಸಂಬಂಧಿ ಜೈನ ರಚನೆಗಳು ಹದಿಮೂರನೆಯ ಶತಮಾನದಿಂದ ಪ್ರಾರಂಭವಾದುವು.

ಇದೇ ಶತಮಾನದಲ್ಲಿ ಜೈನ ವಿದ್ವಾಂಸರಿಂದ ಬೇರೆ ಬೇರೆ ಲೋಕಕಥೆಗಳ ಆಧಾರದ ಮೇಲೆ ಸ್ವತಂತ್ರವಾಗಿ ಗ್ರಂಥನಿರ್ಮಾಣ ಕಾರ್ಯವು ಪ್ರಾರಂಭವಾಯಿತು. ಶ್ರೀ ಪೂರ್ಣಭದ್ರರು ಸುಪ್ರಸಿದ್ಧ ಲೋಕಕಥಾಗ್ರಂಥವಾದ ಪಂಚತಂತ್ರವನ್ನು ಇದೇ ಶತಮಾನದಲ್ಲಿ ಉದ್ಧಾರಮಾಡಿದರು. ಹದಿನಾಲ್ಕನೆಯ ಶತಮಾನದಲ್ಲಿ ಆಚಾರ್ಯ ಮೇರುತುಂಗರು 'ಪ್ರಬಂಧಚಿಂತಾಮಣಿ'ಯಲ್ಲಿ ಲೋಕವಿಶ್ರುತ ಐತಿಹಾಸಿಕ ಕಥೆಗಳ ಆಧಾರದ ಮೇಲೆ ಪ್ರಬಂಧಗಳನ್ನು ರಚಿಸಿದರು. ಗುಜರಾತಿನ ಇತಿಹಾಸದ ದೃಷ್ಟಿಯಿಂದ ಈ ಗ್ರಂಥವು ಬಹಳ ಮಹತ್ತ್ವಪೂರ್ಣವಾಗಿದೆ. ಹದಿನೈದನೆಯ ಶತಮಾನದ ಪ್ರಾರಂಭದಲ್ಲಿ ಆಚಾರ್ಯ ರಾಜಶೇಖರರು 'ಚತುರಾಶೀತಿ ಕಥಾಸಂಗ್ರಹ'ವೆಂಬ ಹೆಸರಲ್ಲಿ ಪ್ರಚಲಿತ ಎಂಭತ್ತನಾಲ್ಕು ಉಪಾಖ್ಯಾನಗಳನ್ನು ಶ್ರಮಪಟ್ಟು ಸಂಗ್ರಹಿಸಿದರು. ಇವು ಪ್ರಾಕೃತ ಹಾಗೂ ಸಂಸ್ಕೃತ ಭಾಷೆಗಳ ರಚನೆಗಳಾದುವು. ಇದೇ ಪ್ರಕಾರ ಹದಿನೈದನೆಯ ಶತಮಾನದಿಂದ ಮುಂದೆ ತತ್ಕಾಲೀನ ಲೋಕಭಾಷೆಗಳಲ್ಲಿಯೂ ಅನೇಕ ಕಥಾಕೃತಿಗಳು ಜನ್ಮತಾಳಿದುವು. ವಿದ್ಯಾವಿಲಾಸರಾಸ, ಅಂಬಡಚರಿತ್ರ, ಕರ್ಪೂರಮಂಜರೀ, ಸಂದಬತ್ತೀಸಿ, ಪ್ರಿಯಮೇಲಕ, ಶಶಿಕಲಾ, ಶೃಂಗಾರಮಂಜರೀ, ಸಗಾಲಶಾಹರಾಸ, ಸುಕಸಾಹೇಲೀ, ಮಾಧವಾನಲ ಕಾಮಕಂದಲಾ ಮೊದಲಾದುವು ಇದೇ ಶ್ರೇಣಿಗೆ ಸೇರಿದ ಕೃತಿಗಳಾಗಿವೆ.

ಧರ್ಮಭಾವನೆಯೇ ಪ್ರಧಾನವಾಗಿರುವ ಜೈನ ಕಥೆಗಳು ಭಾರತೀಯ ಲೋಕಸಾಹಿತ್ಯದ ವಿಶುದ್ಧ ಪ್ರತೀಕಗಳು. ಕರ್ಮಬಂಧನದಿಂದ ಮುಕ್ತಿಯನ್ನು ಪಡೆಯುವುದೇ ಜೈನಧರ್ಮದ ಮುಖ್ಯಗುರಿ. ಇದೇ ಗುರಿ ಜೈನ ಕಥಾಸಾಹಿತ್ಯದ ಉಸಿರು. ಈ ಕಥೆಗಳು ಪುನರ್ಜನ್ಮದಲ್ಲಿ ನಂಬಿಕೆಯನ್ನು ಹೆಚ್ಚಿಸಿ ಈ ಜನ್ಮದಲ್ಲಿ ಮಾಡಿದ ಪುಣ್ಯಪಾಪಗಳ ಫಲವನ್ನು ಮುಂದಿನ ಜನ್ಮದಲ್ಲಿ ಉಣಬೇಕಾಗುವುದೆಂದೂ ಮುಕ್ತಿಯನ್ನು ಪಡೆಯಬೇಕಾದರೆ ಮನುಷ್ಯ ಜನ್ಮದಿಂದಲೇ ಸಾಧ್ಯವೆಂದೂ ಬೋಧಿಸುತ್ತವೆ. ಹಿಂಸಾದಿ ಐದು ಪಾಪಗಳ ಕಹಿಫಲವನ್ನೂ ಅಹಿಂಸಾದಿ ಐದು ವ್ರತಗಳ ಸಿಹಿಫಲವನ್ನೂ ವಿವರಿಸಿ ಜನತೆಯನ್ನು ವ್ರತಗಳ ಕಡೆಗೆ ಎಳೆಯುವುದೇ ಜೈನಕಥೆಗಳ ಪ್ರಧಾನ ಲಕ್ಷ್ಯವಾಗಿದೆ. ಇದಕ್ಕೆ ನಾವು ಕನ್ನಡದಲ್ಲಿ 'ವಡ್ಡಾರಾಧನೆ,' 'ಧರ್ಮಾಮೃತ' ಮೊದಲಾದವುಗಳ ಶಿಕ್ಷಾಪ್ರದವಾದ ಕಥೆಗಳನ್ನು ತೆಗೆದುಕೊಳ್ಳಬಹುದು. ಡಾ|| ಹರ್ಟಲ್, ಸಿ. ಹೆಚ್. ಟಾನಿ ಮೊದಲಾದ ಪಾಶ್ಚಾತ್ಯ ವಿದ್ವಾಂಸರು ಜೈನ ಕಥೆಗಳೊಡನೆ ಯುರೋಪೀಯ ಕಥೆಗಳಿಗೆ ನಿಕಟ

ಸಂಬಂಧವಿರುವುದರಿಂದ ಪೂರ್ವದಲ್ಲಿ ಇವು ಬಹಳ ದೂರದವರೆಗೆ ಹರಡಿದ್ದುವೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಜೈನಕಥೆಗಳಲ್ಲಿ ನಮಗೆ ಭಾರತೀಯ ಜನತೆಯ ಪ್ರತಿಯೊಂದು ವರ್ಗದ ಆಚಾರ-ವಿಚಾರ ಹಾಗೂ ವ್ಯವಹಾರಗಳ ಯಥಾರ್ಥವೂ ವಿಸ್ತೃತವೂ ಆದ ಪರಿಚಯವು ಸಿಗುವುದು. ಈ ಕಥೆಗಳು ಭಾರತೀಯ ಲೋಕಕಥೆಗಳ ಕ್ಷೇತ್ರದಲ್ಲಿಯೇ ಮಾತ್ರವಲ್ಲ ಭಾರತೀಯ ಸಭ್ಯತೆ ಮತ್ತು ಸಂಸ್ಕೃತಿಯ ಇತಿಹಾಸಕ್ಷೇತ್ರದಲ್ಲಿಯೂ ಅತ್ಯಂತ ಮಹತ್ವಪೂರ್ಣವಾದ ಸ್ಥಾನವನ್ನು ಗಳಿಸಿವೆ. ಇವುಗಳ ವೃತ್ತಾಂತ ವಿಶಾಲ ಭಾರತೀಯ ಸಾಹಿತ್ಯದ ಒಂದು ಪ್ರಮುಖ ಅಂಗದ ರೂಪದಲ್ಲಿ ತನ್ನ ಅಮರಕೀರ್ತಿಯನ್ನು ಉಳಿಸಿಕೊಂಡಿದೆ. ಜೈನ ಕಥೆಗಳ ಪ್ರತಿಪಾದನ ಶೈಲಿ ಬೌದ್ಧ ಕಥೆಗಳ ಪ್ರತಿಪಾದನಶೈಲಿಯಿಂದ ತೀರ ಭಿನ್ನವಾಗಿದೆ. ಜೈನಕಥೆಗಳ ಮೂಲವಸ್ತು ಭೂತಕಾಲದೊಡನೆ ಸಂಬಂಧಿಸದೆ ವರ್ತಮಾನಕಾಲದೊಡನೆ ಸಂಬಂಧಿಸಿದೆ. ಇವು ತಮ್ಮ ಸಿದ್ಧಾಂತಗಳನ್ನು ನೇರವಾಗಿ ಉಪದೇಶಮಾಡದೆ ಕಥಾನಕಗಳ ಮೂಲಕ ಪರೋಕ್ಷವಾಗಿ ಉಪದೇಶಮಾಡುವುವು.

ಜೈನ ಕಥಾಲೇಖಕರಿಗೆ ಜೈನ ಕಥೆಗಳು ಪರಂಪರೆಯಿಂದ ಉಪಲಬ್ಧವಸ್ತುವಾದುದರಿಂದ ಪೂರ್ವಕಥೆಗಳ ವರ್ಣನೆಯನ್ನು ಮಾಡುವ ಸಂದರ್ಭದಲ್ಲವರು ಸ್ವತಂತ್ರರಾಗಿರುವರು. ಆದರ್ಶ ಉಪದೇಶದ ಪ್ರಚಾರವೇ ಕಥೆಗಳ ಲಕ್ಷ್ಯವಾಗಿರುವುದರಿಂದ ಕಥಾಲೇಖಕರಿಗೆ ಕಥೆಗಳ ಪಾತ್ರಗಳು ಹೇಗಿದ್ದರೂ ಒಂದೆ. ಇದರಿಂದ ಜೈನ ಲೇಖಕರು ಪ್ರಾಚೀನವೂ ಪ್ರಚಲಿತವೂ ಪರಂಪರಾಗತವೂ ಆದ ಕಥೆಗಳಿಗೇನೇ ಹೊಸ ರೂಪವನ್ನು ಕೊಟ್ಟರೆಂದು ಯಾರೂ ತಿಳಿದು ಕೊಳ್ಳಬಾರದು. ಏಕೆಂದರೆ ಅವರು ಅಧಿಕ ಪರಿಮಾಣದಲ್ಲಿ ಮೌಲಿಕ ಕಥೆಗಳನ್ನೂ ಸೃಷ್ಟಿಸಿರು ವುದುಂಟು. ಜೈನ ಲೇಖಕರು ಮೌಲಿಕ ಹೊಸ ಕಥೆಗಳನ್ನು ಧರ್ಮೋಪದೇಶ ಹಾಗೂ ಸಿದ್ಧಾಂತದ ಪ್ರಚಾರದ ದೃಷ್ಟಿಯಿಂದಲೇ ಬರೆದರು. ಅವರ ಜ್ಞಾನಶಾಲೆಗಳಲ್ಲಿ ಕಥೆಗಳ ಮೂಲಕ ಧರ್ಮ ಮತ್ತು ಸಿದ್ಧಾಂತದ ರಹಸ್ಯವನ್ನು ಬೋಧಿಸುವ ಪದ್ಧತಿ ಮೊದಲಿಂದಲೇ ಇತ್ತು. ಏಕೆಂದರೆ ಸಾಮಾನ್ಯ ಜನರಿಗೆ ಕಥೆಗಳ ಮೂಲಕ ಸಿದ್ಧಾಂತದ ನೀರಸ ಮಾತುಗಳನ್ನು ಬೋಧಿ ಸುವುದು ಸುಲಭ. ಮಕ್ಕಳಿಂದ ಹಿಡಿದು ಮುದುಕರವರೆಗೆ ಕಥೆ ಕೇಳುವುದೆಂದರೆ ಬಹಳ ಪ್ರೀತಿ. ಸಣ್ಣ ಸಣ್ಣ ಮಕ್ಕಳೂ ಕಥೆಯಿಂದ ಅತಿ ಬೇಗ ಸಂತುಷ್ಟರಾಗುತ್ತಾರೆ. ನಮ್ಮ ಮನೆಗಳಲ್ಲಿ ಸಾಯಂಕಾಲ ಚಿಕ್ಕ ಚಿಕ್ಕ ಮಕ್ಕಳು ಮನೆಯ ಮುದುಕ ಮುದುಕಿಯರನ್ನು ಪ್ರತಿದಿನ ಕಥೆ ಹೇಳಬೇಕೆಂದು ಪೀಡಿಸುತ್ತಿರುವುದನ್ನು ನಾವು ಪ್ರತ್ಯಕ್ಷ ನೋಡುತ್ತಿರುತ್ತೇವೆ. ನಿಜವಾಗಿಯೂ ಧರ್ಮಪ್ರಚಾರಕ್ಕೆ ಕಥೆಗಳು ಸುಗಮವಾದ ಮಾರ್ಗಗಳು. ಈಗಲೂ ಬೇರೆ ಬೇರೆ ಧರ್ಮಗಳ ಉಪದೇಶಕರು ಹೆಚ್ಚಾಗಿ ಕಥೆಗಳ ಮೂಲಕವೇ ತಮ್ಮ ಧರ್ಮದ ಪ್ರಚಾರವನ್ನು ಮಾಡು ತ್ತಿರುವುದು ಅನುಭವಸಿದ್ಧವಾದ ಮಾತು. ನಮ್ಮಲ್ಲಿ ಪಂಚತಂತ್ರಾದಿ ಕಥೆಗಳೂ ಬಾಲಕರಿಗೆ ನೀತಿಬೋಧೆಯನ್ನು ಕೊಡುವುದಕ್ಕೋಸ್ಕರವೇ ಹುಟ್ಟಿದುವು. ಅಂತೂ ಇತರ ಸಾಹಿತ್ಯಗಳಂತೆ ಜೈನರ ಕಥಾಸಾಹಿತ್ಯವೂ ಬಹಳ ವಿಶಾಲವಾಗಿದೆಯೆಂದು ನಾವು ಒಪ್ಪಲೇಬೇಕು.

ಭಾರತೀಯ ಕಥಾಸಾಹಿತ್ಯದಲ್ಲಿ ಆಂಧ್ರವಂಶದ ಶಾಸಕನಾದ ಸಾತವಾಹನನ ಮಂತ್ರಿ ಯಾಗಿದ್ದ ಮಹಾಕವಿ ಗುಣಾಢ್ಯನ 'ಬೃಹತ್ಕಥೆ'ಯೇ ಸರ್ವಪ್ರಾಚೀನವಾದುದೆಂದೂ ಉಪಲಬ್ಧ ಕಥಾಗ್ರಂಥಗಳಲ್ಲಿ ಸೋಮದೇವನ 'ಕಥಾಸರಿತ್ಸಾಗರ' ಹಾಗೂ ಕ್ಷೇಮಂಧರನ 'ಬೃಹತ್ಕಥಾ ಮಂಜರಿ' ಇವು ಪ್ರಧಾನವಾಗಿದ್ದು ಇವೆರಡೂ ಕಥಾಗ್ರಂಥಗಳು ಗುಣಾಢ್ಯನ ಬೃಹತ್ಕಥೆಯ ಆಧಾರದ ಮೇಲೆಯೇ ರಚಿಸಲ್ಪಟ್ಟುವೆಂದೂ ಪೈಶಾಚಿ ಪ್ರಾಕೃತಭಾಷೆಯಲ್ಲಿ ರಚಿಸಲ್ಪಟ್ಟ ಹಾಗೂ ಇದುವರೆಗೆ ಅನುಪಲಬ್ಧ ಗುಣಾಢ್ಯನ ಬೃಹತ್ಕಥೆಯನ್ನು ರಚಿಸುವುದಕ್ಕೋಸ್ಕರ ಅವನಿಗೆ ಕಥೆಗಳು ಕಾಣಭೂತಿಯೆಂಬ ಹೆಸರಿನ ಒಂದು ಭೂತದಿಂದ ಪ್ರಾಪ್ತವಾಗಿದ್ದುವೆಂದೂ

ವಿದ್ವಾಂಸರ ಅಭಿಪ್ರಾಯ[1] ಈಗ ನಾವು ಭೂತಭಾಷೆಯನ್ನು ಆಡುತ್ತಿದ್ದ ಕಾಣಭೂತಿಯು ಯಾರೆಂಬುದನ್ನು ವಿಚಾರಮಾಡಬೇಕು. ಪ್ರಾಕೃತಭಾಷೆಯು ಪ್ರಾರಂಭದಿಂದ ಮುಖ್ಯವಾಗಿ ಜೈನರದೇ ಆಗಿತ್ತೆಂದೂ ಗುಣಾಢ್ಯನ ಬೃಹತ್ಕಥೆಯ ಭಾಷೆಯು ಪ್ರಾಕೃತವೇ ಆಗಿತ್ತೆಂದೂ ಎಲ್ಲರೂ ಒಪ್ಪಿರುವ ಮಾತು. ಆದುದರಿಂದ ಭೂತಭಾಷೆ ಅಥವಾ ಪ್ರಾಕೃತ ಭಾಷೆಯು ಜೈನರ ದಾಗಿರುವುದರಿಂದ ಕಾಣಭೂತಿಯು ಭೂತವಾಗಿರದೆ ಒಬ್ಬ ಜೈನ ಸಾಧುವಾಗಿರಬೇಕೆಂದೂ ಸಾಂಪ್ರದಾಯಿಕ ಅಸೂಯೆಯಿಂದ ಆ ಜೈನಸಾಧುವನ್ನು ಭೂತವೆಂದು ಉಲ್ಲೇಖಿಸಿರಬೇಕೆಂದೂ ಶ್ರೀ ಕೆ. ಪಿ. ಜೈನರ ಅಭಿಪ್ರಾಯ.

ಈ ಸಂದರ್ಭದಲ್ಲಿ ನಾವು ಆಚಾರ್ಯ ಜಿನಸೇನರ 'ಮಹಾಪುರಾಣ'ದ ಒಂದು ಮಾತನ್ನು ಸ್ಮರಿಸುವುದು ಅತ್ಯಗತ್ಯ. ಆಚಾರ್ಯ ಜಿನಸೇನರು ತಮ್ಮ ಮಹಾಪುರಾಣದಲ್ಲಿ ಶ್ಲೇಷರೀತಿಯಲ್ಲಿ ಗುಣಾಢ್ಯನ ಬೃಹತ್ಕಥೆಯ ಉಲ್ಲೇಖವನ್ನು ಮಾಡಿರುವರೆಂದು ವಿದ್ವಾಂಸರ ಅಭಿಪ್ರಾಯ[2]. ಇಷ್ಟೇ ಅಲ್ಲ. ಜಿನಸೇನರು ತಮ್ಮ ಮಹಾಪುರಾಣದ ಪ್ರಾರಂಭಿಕ ಐವತ್ತೊಂದ ನೆಯ ಪದ್ಯದಲ್ಲಿ ಕಥಾಗ್ರಂಥದ ಲೇಖಕರಾದ ಓರ್ವ ಕಾಣಭಿಕ್ಷುವೆಂಬ ಜೈನಾಚಾರ್ಯರ ಉಲ್ಲೇಖವನ್ನು ಮಾಡಿರುವುದುಂಟು. ಹೀಗಿರುವುದರಿಂದ ಶ್ರೀ ಕೆ. ಪಿ. ಜೈನರು ಮಹಾಪುರಾಣದ ಕಾಣಭಿಕ್ಷು ಹಾಗೂ ಗುಣಾಢ್ಯನ ಕಾಣಭೂತಿ ಇವೆರಡು ಹೆಸರು ಒಬ್ಬ ವ್ಯಕ್ತಿಗೇನೇ ಸಂಬಂಧ ಪಟ್ಟಿರಬಹುದೆಂದೂ ಗುಣಾಢ್ಯನಿಗೆ ಇವರಿಂದಲೇ ಕಥೆಗಳು ಸಿಕ್ಕಿರಬಹುದೆಂದೂ ಅಭಿಪ್ರಾಯ ಪಟ್ಟಿರುತ್ತಾರೆ. ಭಾರತೀಯ ಕಥಾಸಾಹಿತ್ಯದ ಉತ್ಪತ್ತಿ ಮತ್ತು ಅಭಿವೃದ್ಧಿಯಲ್ಲಿ ಜೈನರು ಯಥೇಷ್ಟ ದುಡಿದಿರುವರೆಂದೂ ಕಥೆಗಳ ಮೂಲಕ ಸಾಮಾನ್ಯ ಜನರಲ್ಲಿ ಧಾರ್ಮಿಕ ಸಿದ್ಧಾಂತ ವನ್ನು ಪ್ರಚಾರಮಾಡುವ ಪ್ರಣಾಲಿ ಸುಪ್ರಾಚೀನ ಕಾಲದಿಂದಲೇ ಜೈನರಲ್ಲಿತ್ತೆಂದೂ ಜೈನ ಸಾಹಿತ್ಯದ ಕಥಾಭಾಗ ಅಧಿಕ ವಿಶಾಲವಾಗಿದೆಯೆಂದೂ ಈ ಕಥೆಗಳಲ್ಲಿ ಅನೇಕ ಕಥೆಗಳು ಪೂರ್ವದಲ್ಲಿ ನಮ್ಮ ಭಾರತವರ್ಷದಲ್ಲಿಯೇ ಮಾತ್ರವಲ್ಲ, ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿಯೂ ಹರಡಿದ್ದುವೆಂದೂ ಒಟ್ಟು ಸಾರಾಂಶವಾಗಿದೆ.

**ಕೆ. ಭುಜಬಲಶಾಸ್ತ್ರಿ**

---

[1] R. G. Bhandarkar, Early History of the Deccan, page 170. [2] Indian Historical Quarterly, Volume V.

# ‘ಮೂರಿ’—ಒಂದು ವಿಚಾರ

‘ಮೂರಿವಿಡು’ ಮತ್ತು ‘ಮಾರಿಯ ಮೂರಿ’ ಇತ್ಯಾದಿ ಪ್ರಯೋಗಗಳು ಹಳಗನ್ನಡ ಕಾವ್ಯಗಳಲ್ಲಿ ಬಂದಿರುತ್ತವೆ. ಪಂಪಭಾರತದಲ್ಲಿನ ಪ್ರಯೋಗಗಳು—

(i) ವ|| ಆಗಳ್ ದುರ್ಯೋಧನನಂ ಮುಂದಿಟ್ಟೊಡಗೊಂಡು ಧೃತರಾಷ್ಟ್ರ ಕರ್ಣ ಶಲ್ಯ ಶಕುನಿ ಸೈಂಧವ ಪ್ರಭೃತಿಗಳ್ **ನೆಲಂ ಮೂರಿವಿಟ್ಟಂತೆ** ಸಭಾಕ್ಷೋಭಮಾಗೆ ತಳರ್ದು ನಾನಾ ವಿಧ ವಾಹನಂಗಳನೇಱಿ ನಿಜನಿವಾಸಂಗಳ್ಗೆ ಪೋದರ್.

(೨-೮೬ ವಚನ)

(ii) ಆಗಳ್ ದ್ರುಪದಂ ಬದ್ದವಣದ ಪಱೆಗಳಂ ಬಾಜಿಸಲ್ವೇೞ್ದು ಸುರತಮಕರಧ್ವಜನಂ ದ್ರೌಪದಿಯೊಡನೆ ಸಿವಿಗೆಯನೇಱಿಸಿ ಧೃಷ್ಟದ್ಯುಮ್ನ . . . . ರೆಂಬ ತನ್ನ ಮಗಂದಿರುಂ ಬೆರಸು **ನೆಲಂ ಮೂರಿವಿಟ್ಟಂತೆ** ಐರೆ ಮುಂದಿಟ್ಟು ಪೊೞಲ್ಗೊಡಗೊಂಡುವರ್ಪುದುಂ—

(೩-೬೪ ವಚನ)

(iii) ಇತ್ತ ಪುರುಷೋತ್ತಮನುಂ ಕತಿಪಯ ಪ್ರಯಾಣಂಗಳಿಂ ವಿರಾಟಪುರ ನಿಕಟ ವರ್ತಿಯಪ್ಪ ದಿವಿಜಾಪಗಾ ತಟದುಪವನದೊಳರಿನೃಪವನಕ್ಕುಪದ್ರವಕಾರಿಯಾಗಿ **ನೆಲಂ ಮೂರಿವಿಟ್ಟಂತೆ** ಬಿಟ್ಟಿರ್ದಜಾತಶತ್ರುವನವನತೋತ್ತಮಾಂಗನಾಗಿ ಕಂಡು—

(೯-೮೭ ವಚನ)

ಮೇಲಿನ ಮೂರು ವಚನಗಳಲ್ಲಿಯೂ ‘ನೆಲಂ ಮೂರಿವಿಟ್ಟಂತೆ’ ಎಂಬ ಒಂದೇ ಅಲಂಕಾರ ಬಂದಿರುತ್ತದೆ. ಪಂಪಭಾರತದ ಸಂಪಾದಕರು ಕೊಟ್ಟಿರುವ ಕ್ಲಿಷ್ಟಪದಗಳ ನಿಘಂಟುವಿನಲ್ಲಿ ‘ಮೂರಿವಿಡು—ಪ್ರಸವಿಸು?’ ಎಂಬ ಅರ್ಥವನ್ನು ಸೂಚಿಸಿರುತ್ತದೆ.

ದಿವಂಗತ ಮುಳಿಯ ತಿಮ್ಮಪ್ಪಯ್ಯನವರು ‘ನಾಡೋಜ ಪಂಪ’ ಎಂಬ ಗ್ರಂಥದಲ್ಲಿ (ಪು ೨೫೫) ಈ ಕುರಿತು ವಿಚಾರ ನಡೆಸಿ, ‘ನೆಲದೊಳಗಿನಿಂದ ಸರ್ಪನೆ ಹೊಸಲುಕ್ಕಿ ಘೋರೆಂದು ಹರಿದಂತೆ ಎಂಬ ಅರ್ಥದಲ್ಲಿ ನೆಲಂ ಮೂರಿವಿಟ್ಟಂತೆ ಎಂಬ ದೇಸಿ ನೆಲೆವಡೆದಿರಬಹುದೆ’ ಎಂಬುದಾಗಿ ಸಂದೇಹಪಟ್ಟಿರುತ್ತಾರೆ.

“ಪಂಪಾದಿ ಪ್ರಾಚೀನ ಮಹಾಕವಿಗಳಲ್ಲಿ ಕಂಡುಬರುವ ಕೆಲವು ವಿಶೇಷ ಪದಾರ್ಥಗಳ ಸ್ವರೂಪ ನಿರ್ಣಯ” ಎಂಬ ಉಪಯುಕ್ತ ಲೇಖನದಲ್ಲಿ (ಪು 61) ಪಂಡಿತ ಹೆಚ್. ಶೇಷಯ್ಯಂಗಾರ್ಯರು ಈ ಶಬ್ದಾರ್ಥವನ್ನು ನಿಷ್ಕರ್ಷೆ ಮಾಡುವುದಕ್ಕೆ ಯತ್ನಿಸಿರುತ್ತಾರೆ.

ಮೇಲಿನ ಯಾವ ಅರ್ಥವೂ ಸಮಂಜಸವಲ್ಲವೆಂದೂ ಅರ್ಧನೇಮಿ ಪುರಾಣದ ಈ ಕೆಳಗಿನ ಪದ್ಯದಿಂದ ‘ಮೂರಿ’ ಶಬ್ದಕ್ಕೆ ‘ಕಡೆವಾಯಿ’ ಎಂಬರ್ಥವಲ್ಲದೆ ಮತ್ತಾವ ಅರ್ಥವೂ ಸಮಂಜಸವಾಗುವುದಿಲ್ಲವೆಂದೂ ಅವರು ಅಭಿಪ್ರಾಯ ಪಡುತ್ತಾರೆ—

> **ತಾರಗೆಯುನೆ ತೊನೆದೊಟ್ಟಿದ**
> **ಮೂರಿಯ ರೋಮಂಥ ಫೇನಮಂಜರಿನಿಕರಂ ||**
> **ಕಾರಿರುಳ ತಿರುಳಿದೆನೆ ಮದ**
> **ಸೈರಿಭವಿರ್ಪುವು ಚಳತ್ತಮಾಳದ ನೆೞಲೊಳ್ || (ಆ. ೩—೪೫)**

“ಗಾಳಿಗೆ ಎಲೆಗಳಾಡುತ್ತಿರುವ ಹೊಂಗೆಯ ತೋಪಿನ ನೆಳಲಿನಲ್ಲಿ ಕಾರಿರುಳ ತಿರುಳೋ ಎಂಬಂತೆ ಕಪ್ಪನೆಯ ಮದಿಸಿದ ಕೋಣಗಳು ಮಲಗಿ ಮೆಲುಕು ಹಾಕುತ್ತಿದ್ದುವು. ಆ ಕೋಣಗಳು ಮೆಲುಕು ಹಾಕುವಾಗ ಒಂದರ ಮೇಲೊಂದರಂತೆ ಒಟ್ಟಿರುವ ಮೂರಿಯ ಎಂದರೆ ಕಡೆವಾ

ಯಿಂದ ಹೊರಚೆಲ್ಲಿದ ಸೊರೆಯ ಗೊಂಚಲಿನ ಸಮೂಹವು ನಕ್ಷತ್ರದಂ (ರಾಶಿಯಂ)ತೆ ತೋರುತ್ತಿದ್ದುವು" ಎಂಬುದಾಗಿ ತಾತ್ಪರ್ಯ ಮಾಡಿ, 'ಮೂರಿ' ಪದಕ್ಕೆ 'ಕಡೆವಾಯಿ' ಎಂಬರ್ಥವನ್ನು ಪ್ರತಿಪಾದಿಸುತ್ತಾರೆ. ಈ ಅರ್ಥ ಪ್ರಸ್ತುತ ಸಂದರ್ಭದಲ್ಲಿ ಸರಿಕಾಣುವುದು.

ಪಂಪಭಾರತದಲ್ಲಿನ ಪ್ರಯೋಗಗಳಿಗೆ ಈ ಅರ್ಥ ಅಷ್ಟು ಹೊಂದಿಕೊಳ್ಳುವ ಹಾಗೆ ಕಾಣುವುದಿಲ್ಲ. ಅಲ್ಲಿನ ಮೂರು ಸಂದರ್ಭಗಳಲ್ಲಿಯೂ ನೆಲವು (ಕಡೆ)ಬಾಯಿಬಿಟ್ಟಂತಾದರೆ, ಆಯಾ ಜನಸ್ತೋಮ ಅಥವಾ ಸೇನೆ ಆ ಬಾಯಿ (ಬಿರುಕಿನ) ಮೂಲಕ ಭೂಗರ್ಭವನ್ನು ಸೇರಬೇಕು. ನಿಜವಾಗಿಯೂ ಅಲ್ಲಿ ಉಂಟಾಗುವುದು ಒಂದು ತೆರನಾದ ಕ್ಷೋಭೆ.

ಪ್ರಾಯಶಃ 'ಮೂರಿ' ಶಬ್ದಕ್ಕೆ ಎರಡು ಅರ್ಥವಿರಬೇಕು.

(೧) **'ನೆಲಂ ಮೂರಿವಿಡು'** ಎಂಬಲ್ಲಿನ ಮೂರಿಯ ವಿಚಾರ:—ಹವ್ಯಕರ ಮನೆ ಮಾತಿನಲ್ಲಿ 'ಮೂರಿ' ಎಂಬ ಪದವನ್ನು 'ಮೈಮೂರಿ' ಎಂಬ ಸಮಸ್ತಪದದಲ್ಲಿ ಪ್ರಯೋಗ ಮಾಡುವರು. ಉದಾ—'ಅವ ಒರಕ್ಕಿಂದ ಎದ್ದು ಮೈಮೂರಿ ತೆಗೆತ್ತೆ'=ಅವನು ನಿದ್ದೆಯಿಂದ ಎದ್ದು ಮೈಮೂರಿಯನ್ನು ತೆಗೆಯುತ್ತಾನೆ; ಎಂದರೆ ಆತನು ಮೈಯನ್ನು ಮುರಿಯುತ್ತಾ—ಅವಯವಗಳನ್ನು ಅತ್ತಿತ್ತ ಮುರಿದು ನೇರವಾಗಿಸುತ್ತಾ—ಏಳುತ್ತಿದ್ದಾನೆ. ತುಳುವಿನಲ್ಲಿಯೂ ಇದೇ ಅರ್ಥವಿದೆ. ಮೆನ್ನರ್ ತುಳು ನಿಘಂಟುವಿನಲ್ಲಿ "ಮೂರಿದೆಪ್ಪುನಿ, ಮೂರಿಕಳೆಪ್ಪುನಿ=Stretching oneself" ಎಂದರೆ ಮೈ ನಿಮಿರಿಸುವುದೆಂದು ಹೇಳಿದೆ. ನಿದ್ರೆಯಿಂದ ಜಾಗ್ರದವಸ್ಥೆಗೆ ಬಂದು ಚುರುಕಾಗಿ ಯಾವ ಉದ್ಯಮವನ್ನಾದರೂ ತೊಡಗುವುದಕ್ಕೆ ಮುಂಚಿತವಾಗಿ ಅವಯವಗಳನ್ನು ನಿಮಿರಿಸಿಕೊಂಡು ಸಿದ್ಧರಾಗುವುದು ನಮಗೆ ಸಹಜ. ಈ ಮನೋವೃತ್ತಿ ಮನುಷ್ಯರಲ್ಲಿ ಮಾತ್ರವಲ್ಲ ಪ್ರಾಣಿಗಳಲ್ಲಿಯೂ ಇರುತ್ತದೆ.

ಈ ಅರ್ಥವನ್ನು ಗಮನಿಸಿಕೊಂಡರೆ, ನಿದ್ರಿಸಿದ **ನೆಲವೂ** ಎಚ್ಚತ್ತು ನಿಮಿರ್ದು **'ಮೈಮೂರಿ'** ತೆಗೆಯುವುದಾಗಿ ಉತ್ಪ್ರೇಕ್ಷಿಸಬಹುದು; ಹಾಗೆ ನೆಲಮೂರಿ ತೆಗೆಯುವಾಗ ಸಭಾಕ್ಷೋಭೆ ಇತ್ಯಾದಿ ಆಗಬಹುದು. 'ನೆಲ (ಮೈ) ಮೂರಿ ತೆಗೆ (ಬಿಡು)ವಾಗ' ಭೂಮಿಯೇ ಕಂಪಿಸಿದಂತೆಯೇ ಸರಿ.

'ಅರ್ಥನೇಮಿ ಪುರಾಣ'ದ ಆಶ್ವಾಸ ೩ ರ ಪದ್ಯ ೪೫ ರಲ್ಲಿಯೂ ಈ ಅರ್ಥವು ಸಮಂಜಸವಾಗುವುದು. "ಗಾಳಿಗೆ ಎಲೆಗಳಾಡುತ್ತಿರುವ ಹೊಂಗೆಯ ತೋಪಿನ ನೆಳಲಿನಲ್ಲಿ . . . ಮುದಿಸಿದ ಕೋಣಗಳು ಮಲಗಿರುತ್ತವೆ. (ಮೈ)ಮೂರಿ ತೆಗೆಯುತ್ತಾ ಮೆಲುಕಾಡುವಾಗ ಸೂಸುವ ಒಂದರ ಮೇಲೊಂದರಂತೆ ಒಟ್ಟಿರುವ ನೊರೆಯ ಗೊಂಚಲಿನ ಸಮೂಹವು ನಕ್ಷತ್ರ ಪುಂಜದಂತೆ ತೋರುತ್ತಿದ್ದುವು[1]."

ಈ ಅರ್ಥವನ್ನು ಸಮರ್ಥಿಸುವುದಕ್ಕೆ ತಮಿಳೂ ಒಂದಿಷ್ಟು ಸಹಾಯಕೊಡಬಹುದು. 'ತಿರುಪ್ಪಾವೈ' ಪದ್ಯ 23 ರಲ್ಲಿ 'ಮೂರಿ' ಪದಪ್ರಯೋಗ ಹೀಗಿದೆ—

"ಮಾರಿ ಮಲೈ ಮುೞೆಂಜಿಲ್ ಮನ್ನಿಕಿಡಂದ್ ಉಱಂಗುಂ ಶೀರಿಯ ಸಿಂಗಂ ಅಱಿವುಱ್ಱು ತೀವಿೞಿತ್ತು ವೇರಿಮಯಿರ್ ಪೊಂಗ ಎಪ್ಪಾಡುಂ ಪೇರ್ನ್ದ್ ಉದರಿ **ಮೂರಿ** ನಿಮಿರ್ನ್ದ್ ಮುೞಂಗಿ ಪ್ಪುಱಪ್ಪಟ್ಟು ಪ್ಪೋತರುಮಾ ಪೋಲೇ".

ಭಕ್ತೆ ಆಂಡಾಳ್ ತನ್ನ ಪ್ರಭು ಹೇಗೆ ಬರುವನೆಂಬುದನ್ನು ಚಿತ್ರಿಸುವ ಸಂದರ್ಭವಿದು—ಮಳೆಗಾಲದಲ್ಲಿ ಮಲೆಗುಹೆಯೊಳಗೆ ಮಲಗಿ ನಿದ್ರಿಸಿದ ಬಲಿಷ್ಠ ಮೃಗರಾಜನು ನಿದ್ರೆ ತಿಳಿದು ಕೆಂಡದಂಥ ಕಣ್ದೆರೆದು, ಕೇಸರ ನವಿರೇಳೆ ಎಲ್ಲೆಡೆಗೂ ಹೊರಳಾಡಿ ಮುಂದೆ ಸಂಚಾರಕ್ಕೆ

[1] ಮೆಲುಕಾಡುವ ಪ್ರಾಣಿಗಳು ಮಲಗಿಕೊಂಡು ಕಣ್ಣುಮುಚ್ಚಿ, ಪ್ರಾಯಃ ನಿದ್ರಿಸುತ್ತಾ ಮೆಲುಕಾಡುವುದನ್ನು ಗಮನಿಸಬಹುದು. ಹಾಗಿರುವಾಗ ಅರೆ ಎಚ್ಚರಿಕೆಯಲ್ಲಿ (ಮೈಮುರಿಯುತ್ತಾ) ಮೂರಿ ತೆಗೆಯುತ್ತಾ ಮೆಲುಕಾಡಿಕೊಂಡು ನೊರೆಯನ್ನು ಹೊರಸೂಸಬಹುದಲ್ಲವೆ?

ಶರೀರವು ವಿಧೇಯವಾಗುವುದಕ್ಕೋಸ್ಕರ ಒಡಲನ್ನು ನಿಮಿರಿಸಿ ಗರ್ಜಿಸುತ್ತಾ ಹೊರಡುವಂತೆ—(ಸ್ವಾಮಿಯೇ ಬರುವವನಾಗು)—ಎಂಬುದು ಮೇಲಿನ ಮಾತಿನ ಅಭಿಪ್ರಾಯ.

ಇದಕ್ಕೆ ವ್ಯಾಖ್ಯಾನ ಬರೆದ ಪೆರಿಯವಾಚ್ಚಾಂಪಿಳ್ಳೈ ಎಂಬವರು 'ಮೂರಿ ನಿಮಿರ್‌ನ್ದು' ಎಂಬ ಸಮಾಸಕ್ಕೆ ಈ ರೀತಿ ಅರ್ಥವನ್ನು ಹೇಳುತ್ತಾರೆ—"ಉಲಾವುಕೈಕ್ಕು (ಸಂಚಾರ ಸೌಲಭ್ಯಕ್ಕೆ) ಶರೀರಂ (ಶರೀರವನ್ನು) ವಿಧೇಯ ಮಾಕೈಕ್ಕಾಕ (ವಿಧೇಯ ಪಡಿಸುವುದಕ್ಕಾಗಿ) ಅವಯುವಙ್ಙಳೈಯೊನ್ಱಾಕ ನಿಮಿರ್ತ್ತು (ಅವಯುವಗಳಿಂದ ಕೂಡಿದ ಒಡಲನ್ನು ಒಂದಾಗಿ ನಿಮಿರಿಸಿ)—

ಈ ವ್ಯಾಖ್ಯಾನವು 'ಮೂರಿ' ಎಂದರೆ ಶರೀರವನ್ನು ನೇರವಾಗಿಸಿ ನಿಮಿರಿಸಿಕೊಳ್ಳುವುದೆಂಬ ಅಭಿಪ್ರಾಯವನ್ನು ಸ್ಪಷ್ಟಗೊಳಿಸುತ್ತದೆ.

(೨) ಎರಡನೆಯ ಅರ್ಥ—

ಅನೇಕ ಕಡೆ 'ಮಾರಿಯ ಮೂರಿ' ಎಂಬ ಪ್ರಯೋಗ ಬಂದುಂಟು. 'ರಾಮಚಂದ್ರ ಚರಿತ ಪುರಾಣ'ದಲ್ಲಿ—

**ನಾಡರಸಂ ತಗುಳ್ದು ಕಡೆಗಾಲದ ಮಾರಿಯ ಮೂರಿಯಂತೆ ಕ**
**ಣ್ಣೋಡದೆ ಬಾಲವೃದ್ಧವನಿತಾ ವಧೆಗೆಯ್ದು ಕವರ್ತೆಗೊಂಡು ಸು**
**ಟ್ಟೋಡಿಸಿ ಜಾತಿಯಂ ಕಿಡಿಸಿ ನಾಡರಸಂ ಕಡಿದಿಕ್ಕಿ ಮೆಚ್ಚಿದಂ**
**ಬೇಡರಸಂ ತರಂಗಿತಮನಾನಿರೆ ಬೇಡರಸೆಂಬ ಗರ್ವದಿಂ ||**

**(ಆಶ್ವಾಸ ೪—ಪದ್ಯ ೩೮)**

ಈ ಗ್ರಂಥಸಂಪಾದಕರು ಮೂರಿ=ಬಳಗ ಎಂಬುದಾಗಿ ಅರ್ಥ ಕೊಟ್ಟಿರುತ್ತಾರೆ. ಈ ಅರ್ಥ ಇಲ್ಲಿಗೆ ಹೊಂದಿಕೊಂಡಂತೆ ಭಾಸವಾದರೂ, ಇದೇ ಗ್ರಂಥದ ೧೩ನೆಯ ಆಶ್ವಾಸದ ೧೧೯ನೆಯ ಪದ್ಯಕ್ಕೆ, ಹೊಂದಿಕೊಳ್ಳುವುದಿಲ್ಲ—

**ವಿಳಿರ್ದು ವಿಳ್ಳಿಸೆ ವಾನರ ಕೇತನಂ**
**ಪ್ರಳಯ ಕಾಲದ ಮಾರಿಯ ಮೂರಿಯಂ**
**ತಳೆದು ಮಾರುತಿಯೇಱಿದ ತೇರದೇಂ**
**ತಳರ್ದುದೋ ಧರೆ ಕಂಪಿಸುವನ್ನೆಗಂ ||**

ಹಾಗೆಯೇ ಜನ್ನನ ಯಶೋಧರ ಚರಿತೆಯಲ್ಲಿ,

**ಭೈರವನ ಜವನ ಮಾರಿಯ**
**ಮೂರಿಯವೋಲ್‌ನಿಂದ ಮಾರಿದತ್ತಂ ಲಲಿತಾ**
**ಕಾರರ ಧೀರರ ಬಂದ ಕು**
**ಮಾರರ ರೂಪಿಂಗೆ ಠಕ್ಕುಗೊಂಡಂತಿರ್ದಂ ||**

**(ಅವತಾರ ೧—ಪದ್ಯ ೫೮)**

**ಮಾರಿಯ ಮೂರಿ ಮೇಲೆಱಗುವಂದದೆ ಭೋಂಕನೆ ಮೇಲೆವಿಬ್ದು ಕಂ |**
**ಠೀರವಮಂ**[2]

**(ವರ್ಧಮಾನ ಪುರಾಣ—ಆಶ್ವಾಸ ೩ ಪದ್ಯ ೪೪)**—

ಈ ಸಂದರ್ಭಗಳಲ್ಲಿ ಬಂದಿರುವ 'ಮೂರಿ' ಒಂದು ವಸ್ತುವಾಚಕವಾಗಿ ಇರುವಂತೆ ತೋರುತ್ತದೆ. ತುಳು, ಮಲಯಾಳಗಳಲ್ಲಿ 'ಮೂರ್' ಎಂಬ ಧಾತುವಿಗೆ 'ಕತ್ತರಿಸು', 'ಕಡಿ'

---

[2] ಇಲ್ಲಿ ಮೂರಿ ಎಂಬ ಪದಕ್ಕೆ 'ಬಾಯಿ' ಅಥವಾ ಬೇರಾವ ಅರ್ಥವನ್ನಾದರೂ ಹೇಳುವುದಕ್ಕಿಂತ, 'ಖಡ್ಗ' ಎಂಬರ್ಥವನ್ನು ಹೇಳಿ ಮಾರಿಯ ಖಡ್ಗವೇ ಮೇಲೆ ಬಿದ್ದಂತೆ ಎಂದಿಟ್ಟುಕೊಳ್ಳುವುದು ಹೆಚ್ಚು ರಸ ಪೋಷಕವಲ್ಲವೆ?

ಎಂಬರ್ಥ ಉಂಟು. ತುಳುವಿನಲ್ಲಿ 'ಮೂರ್ತೆ' ಎಂದರೆ ತೆಂಗು, ತಾಳೆ ಇತ್ಯಾದಿ ಮರಗಳ ಕೋಡುಗಳನ್ನು (ಕಳ್ಳು ತೆಗೆಯುವುದಕ್ಕಾಗಿ) ಕೊಯ್ದು ಬಡಿಯುವುದು. ಹಾಗೆಯೇ 'ಮೂಡ' ಎಂಬ ಪದಕ್ಕೆ ಮಲೆಯಾಳದಲ್ಲಿ 'ನಿಶಿತ', 'ಕೂರಿತ್ತು' 'ಕತ್ತಿ' ಎಂಬ ಅರ್ಥ ಉಂಟು. ಆದುದರಿಂದ 'ಮೂರಿ' ಪದಕ್ಕೆ ಕತ್ತಿ, ಖಡ್ಗ ಎಂಬ ಎರಡನೆಯ ಅರ್ಥವನ್ನು ಕಲ್ಪಿಸುವುದರಲ್ಲಿ ಔಚಿತ್ಯವಿದೆ. 'ಮಾರಿಯ ಮೂರಿ' ಎಂಬ ಎಲ್ಲ ಸಂದರ್ಭಗಳಲ್ಲಿ ಈ ಎರಡನೆಯ ಅರ್ಥ ಹೆಚ್ಚು ಸಮಂಜಸವಾಗಿ ಕೋರುತ್ತದೆ[3].

ಎಂ. ಮರಿಯಪ್ಪ ಭಟ್ಟ

---

[3] ತೆಲುಗು ಭಾಷೆಯಲ್ಲಿ ನನ್ನಿಚೋಡದೇವ (1130) ಕೃತ 'ಕುಮಾರ ಸಂಭವ'ದ ಆಶ್ವಾಸ ೮-೧೨೪ ನೆಯ ಪದ್ಯದಲ್ಲಿ ಮೂರಿಪದ ಪ್ರಯೋಗವಿದೆ—

ಅನುಪಮ ದಿವ್ಯಮೂರ್ತಿ ದರಹಾಸ ವಿಲಾಸ ವಿಭಾಸಿನಿಂಡು ಜ
ವ್ವನಿ ಸುಕುಮಾರಿ ತನ್ನ ವಿಟವರ್ಗಮು ನಲ್ಗಡ ವಚ್ಚಿ ಪ್ರೀತಿತೋ
ಗನುಗೊನಿ ಮೂರಿ ಚೂಡನೆಡಗಾನಕ ಸೂರೆಲು ವಾಱುಚುಡೆಂ ವೋ
ಹಿನಿಯುನು ಚೋಲೆನೊಕ್ಕ ಶರದಿಂದುನಿಭಾನನ ನಿಲ್ಪಿಮುಂಗಿಟನ್ ||

ಶಿವಪಾರ್ವತಿಯರ ವಿವಾಹದ ಅನಂತರದಲ್ಲಿ ಬರುವ ಉತ್ಸವಗಳ ವರ್ಣನಾಪದ್ಯಗಳಲ್ಲಿ ಇದೊಂದು. ಆ ಗ್ರಂಥದ ಸಂಪಾದಕರು 'ಮೂರಿ' ಶಬ್ದಕ್ಕೆ 'ಚಿತ್ತ ವಿಭ್ರಮ' ಎಂಬುದಾಗಿ ಅರ್ಥ ಹೇಳಿದ್ದಾರೆ. ಇಲ್ಲಿಯೂ ವಿಟವರ್ಗದವರು ತಮ್ಮ ಪ್ರೇಯಸಿಯರನ್ನು ಒಲಿಸುವುದಕ್ಕಾಗಿ ಮೈ ನಿಮಿರಿಸುವುದು (ಒನಪು ವೈಯಾರದಂತೆ) ಎಂಬುದಾಗಿ ಅರ್ಥ ಇಟ್ಟುಕೊಳ್ಳಬಹುದೆ? 'ಚಿತ್ತ ವಿಭ್ರಮ' ಎಂಬರ್ಥ ಹೊಂದಿಕೆಯಾಗುವುದಿಲ್ಲವೆಂಬುದಾಗಿ ತೆಲುಗು ವಿದ್ವಾಂಸರಲ್ಲಿ ಹಲವರ ಅಭಿಪ್ರಾಯವಿದೆ.

ಶ್ರೀ ಕುವೆಂಪು ಅವರ

# ಕಾವ್ಯಕಾರಣಿಯರು

೧

ವಿಶ್ವಸಾಹಿತ್ಯದ ವಿಶಾಲವಾರ್ಧಿಯಲ್ಲಿ ಹಂಸಾಕೃತಿಯ ಶ್ವೇತ ಬಹಿತ್ರದಲ್ಲಿ ರಸಯಾನ ಗೈಯುವ ರಸಿಕ ಶಿರೋಮಣಿಗೆ ದಿಗಂತ ವಿಶ್ರಾಂತವಾದ ನೀರಿನ ನೀಲಿಮೆಯಷ್ಟೇ ಅಲ್ಲ, ಸೂರ್ಯೋದಯ ಸೂರ್ಯಾಸ್ತಗಳ ಸ್ವರ್ಣವರ್ಣವೂ, ತೀರದಿಂದ ತೀಡಿಬರುವ ತೆಳುಗಾಳಿಯ ಸ್ಪರ್ಶಾನುಭವವೂ ಅನಂತವಾಗಿ ಆಗುತ್ತದೆ. ಅಲ್ಲದೆ ರಸಿಕ ವಿಹಾರಿ ಎತ್ತರದಲ್ಲಿ ನಿಂತು ಬಹು ಸೂಕ್ಷ್ಮವಾಗಿ ಈಕ್ಷಿಸಿದರೆ ಅವನ ಅರಿವಿಗೆ ಬರುತ್ತದೆ ಒಂದು ಮತ್ತೊಂದನ್ನು ಅಟ್ಟಿಸಿಕೊಂಡು ಬರುತ್ತಿರುವ ಅಲೆಗಳ ಆವಿರ್ಭಾವ ಎಲ್ಲಿಯದೆಂದು. ಆದ್ದರಿಂದ ಸಾಗರದ ಯಾವುದೋ ಮೂಲೆ ಯಲ್ಲಿ ಮೇಲೆದ್ದ ಪುಟ್ಟ ಅಲೆ ಬೃಹದಾಕಾರವನ್ನು ತಾಳಿ ಇಡೀ ಸಾಗರವನ್ನೇ ಆವರಿಸಿ ತನ್ನ ವಿರುದ್ಧ ಸೀಮೆಯಲ್ಲಿ ಪರ್ಯವಸಾನಗೊಳ್ಳುವುದಲ್ಲದೆ ಒಮ್ಮೊಮ್ಮೆ ಭಯಂಕರ ಬಿರುಗಾಳಿಯ ಆಶ್ರಯವನ್ನು ಪಡೆದು ವಿಕ್ಷುಬ್ಧ ಕ್ಷೋಭೆಗೊಳಿಸಿ ತನ್ನ ಉತ್ತುಂಗ ಶಿಖರ ಸದೃಶ ಅಟ್ಟಹಾಸ ದಿಂದ ಮಹಾಸಾಗರವನ್ನು ಅಲ್ಲೋಲ ಕಲ್ಲೋಲಗೊಳಿಸಿ ಮಧ್ಯೆ ಮಧ್ಯೆ ಕಾಣಬಹುದಾದ ಅನೇಕಾನೇಕ ದ್ವೀಪ ಸಮೂಹಗಳನ್ನು ನುಂಗಿ ನೊಣೆದು, ತೇಲುತ್ತಿರುವ ರಸಯಾನಿಯ ಹೃದಯ ವನ್ನು ತಲ್ಲಣಗೊಳಿಸಿ, ಸಮುದ್ರದ ತಳದಲ್ಲಿ ಕಾಣಬಹುದಾದ ಬಹುತೇಕ ಅಮೂಲ್ಯ ರತ್ನಗಳನ್ನು ತೋರಿಸಿಕೊಟ್ಟು ಮತ್ತೆ ಎಲ್ಲೋ ಯಾರಿಗೂ ಅರಿಯದಂತೆ ಅನಂತ ಜಲರಾಶಿಯಲ್ಲಿ ಲೀನವಾಗು ತ್ತದೆ. ಇಂತಹ ಅಲ್ಪ ತರಂಗದ ಅದ್ಭುತ ಕ್ರಿಯಾಶಕ್ತಿ, ಋತಚಿತ್ತಿನ ಆಜ್ಞಾದಾಯಿಯಾದ ಕ್ರತುಶಕ್ತಿಯಾಗಿ, ಚಿರಚೇತನ ಶ್ರೀಯಾಗಿ ಮೆರೆಯುವುದನ್ನು ಸಾಹಿತ್ಯ ಸಾಗರದಲ್ಲಿ ಅಲ್ಲಲ್ಲಿ ಗುರುತಿಸುತ್ತೇವೆ.

೨

ವಿಶ್ವಕವಿ ವಾಲ್ಮೀಕಿಯ ಅನ್ಯಾದೃಶ ಕಾವ್ಯಕಲಾ ಗೊಮ್ಮಟನಿಗೆ ಕುಸುರಿಗೆಲಸದ ಕೈವಾಡ ನಡೆಸಿದೆ ಕನ್ನಡದ ಮಹಾಶಿಲ್ಪಿ ಶ್ರೀಕುವೆಂಪು ಅವರ ಸಿದ್ಧಹಸ್ತ. ಆದರೆ ನಮ್ಮ ಪ್ರಸ್ತುತ ಗಮನ ಮಂಥರೆ ಮತ್ತು ಚಂದ್ರನಖಿ (ಶೂರ್ಪಣಖಿ) ಯರನ್ನು ಕುರಿತದ್ದು. ಒಬ್ಬಳು ದಶರಥನ ಸಾವಿಗೆ ಕಾರಣಳಾದರೆ, ಮತ್ತೊಬ್ಬಳು ದಶಶಿರನ ವಿನಾಶಕ್ಕೆ ಕಾರಣಳಾಗಿದ್ದಾಳೆ. ಒಬ್ಬಳು ಕೌಸಲ್ಯೆ, ಸುಮಿತ್ರೆ, ಕೈಕೆ ಮುಂತಾದವರಿಗೆ ವೈಧವ್ಯವನ್ನು ದಯಪಾಲಿಸಿದ್ದರೆ ಮತ್ತೊಬ್ಬಳು ಮಂಡೋದರಿ, ಧಾನ್ಯಮಾಲಿನಿ ಮತ್ತು ತಾರಾಕ್ಷಿ ಮುಂತಾದವರ ಮಾಂಗಲ್ಯ ಗಳನ್ನು ಹರಿದು ಎಸೆದಿದ್ದಾಳೆ. ನಂದನದಂತಿರುವ ರಮ್ಯೋದ್ಯಾನ ವನಗಳಿಂದ ಕಂಗೊಳಿಸುತ್ತಿ ರುವ ದಿವ್ಯ ಸೌಧಗಳಿಂದಲೂ, ಅವುಗಳ ಮೇಲೆ ಶ್ರೀರಾಮ ಪಟ್ಟಾಭಿಷೇಕದ ಸಂತೋಷ ಸುವಾರ್ತೆಯ ದಿವ್ಯ ವೈಜಯಂತಿಯನ್ನು ಹಾರಬಿಟ್ಟು ನಲಿದು ನರ್ತಿಸುತ್ತಿದ್ದ ಆ ಮಹಾನಗರ ಅಯೋಧ್ಯೆಯನ್ನು ಪ್ರೇತವನವನ್ನಾಗಿಸಿದ ಕೀರ್ತಿಗೆ ಒಬ್ಬಳು ಪಾತ್ರಳಾದರೆ, ದೈತ್ಯಶಿಲ್ಪಿ ಯಿಂದ ನಿರ್ಮಿತವಾದ, ಗಗನಚುಂಬಿಯಾದ ದೈತ್ಯಾಗಾರಗಳಿಂದಲೂ, ವಿಷಯೋನ್ಮತ್ತ ವಾಗಿ ಮೈಚಾಚಿ ಮಲಗಿರುವ ವಿಶಾಲ ವೀಥಿಗಳಿಂದಲೂ ದೈತ್ಯಾಟ್ಟಹಾಸಕ್ಕೆ ಇದೇ ತುಟ್ಟ

ತುದಿಯೆಂದು ಸಾರುತ್ತಿರುವ ಕನಕ ಗೋಪುರಗಳಿಂದಲೂ ಕಂಗೊಳಿಸುತ್ತಿರುವ ಕನಕ ಲಂಕೆಯನ್ನು ಮಣ್ಣುಗೂಡಿಸಿದ ಮಹಾ ಪ್ರಶಸ್ತಿಗೆ ಮತ್ತೊಬ್ಬಳು ಚಿರಭಾಗಿನಿಯಾಗಿದ್ದಾಳೆ; ಒಬ್ಬಳ ವಿಚಿತ್ರ ಮಮತೆ ಪುರುಷಸಿಂಹನಾದ ಶ್ರೀರಾಮಚಂದ್ರನನ್ನು ಸೀತಾಲಕ್ಷ್ಮಣರೊಡನೆ ವಿಪುಲ ವಿಪಿನಾಂತರಗಳಲ್ಲೆಲ್ಲಾ ಸುಮಾರು ಹದಿಮೂರು ವತ್ಸರಗಳ ತನಕ ಅಲೆಸಿ ಪಂಚವಟಿಯ ಪರ್ಣಕುಟಿಗೆ ಕರೆತಂದು ಬಿಟ್ಟಿದ್ದರೆ, ಮತ್ತೊಬ್ಬಳ ವಿಕಾರ ಪ್ರೇಮ ಶತಯೋಜನ ವಿಸ್ತೀರ್ಣವುಳ್ಳ ಸಾಗರವನ್ನು ದಾಟಿಸಿ ದೈತ್ಯ ಚಕ್ರವರ್ತಿ ರಾವಣ ಸಾರ್ವಭೌಮನನ್ನು ದಂಡಕಾರಣ್ಯದತ್ತ ಸೆಳೆದು ತಂದು ಬಿಟ್ಟಿದೆ; ಒಬ್ಬಳು ಭರತನಿಗೆ ಪಾದುಕೆಯ ಪೂಜಾಕಾರ್ಯವನ್ನೂ, ಊರ್ಮಿಳೆಗೆ ಕಾವಿಯ ವಸ್ತ್ರಾದಿಗಳನ್ನೂ ದಯಪಾಲಿಸಿದ್ದರೆ, ಮತ್ತೊಬ್ಬಳು ವಿಭೀಷಣನನ್ನು ತಪೋಧನನನ್ನಾಗಿಸಿ, ಸುರಸೆ, ಅನಲೆ, ತ್ರಿಜಟೆ ಮುಂತಾದವರಿಗೆ ಜಪಮಣಿಯನ್ನು ಕರುಣಿಸಿದ್ದಾಳೆ. ಇವಳದು ಸ್ವಾರ್ಥರಹಿತ ಪ್ರೇಮ, ಅವಳದು ಸ್ವಾರ್ಥಸಹಿತ ಕಾಮ; ಒಬ್ಬಳು ರಾಮಾಯಣಕ್ಕೆ ನಾಂದಿ ಹಾಡಿದ್ದರೆ ಮತ್ತೊಬ್ಬಳು ರಾವಣಾಯನಕ್ಕೆ ಚರಮಗೀತೆ ಹಾಡಿದ್ದಾಳೆ. ಇವಳು ರಾಮತ್ವವನ್ನು ಮೆರೆಸಲಿಕ್ಕೆ ಕಾರಣಳಾಗಿದ್ದರೆ, ಅವಳು ರಾವಣತ್ವವನ್ನು ಧ್ವಂಸಮಾಡಲಿಕ್ಕೆ ಅಪ್ರತ್ಯಕ್ಷ ಹೇತುವಾಗಿದ್ದಾಳೆ. ಒಟ್ಟಿನಲ್ಲಿ ಇಬ್ಬರೂ ಮಹಾಕಾವ್ಯದ ಮಹಾರಥವನ್ನು ಆಯಾಸವಾದಾಗ ಒಬ್ಬರಿಗೊಬ್ಬರು ಅನುಸರಿಸಿಕೊಂಡು ಬಹು ದೂರದ ತನಕ ಎಳೆದಿದ್ದಾರೆ. ಮಹರ್ಷಿ ವಾಲ್ಮೀಕಿಯ ಪ್ರತಿಭಾವಲಯದಿಂದ ಚಿಮ್ಮಿಬಂದ ಈ ಸ್ತ್ರೀಯರು ಆಧುನಿಕ ಕನ್ನಡ ಸಾಹಿತ್ಯಾಚಾರ್ಯ ಶ್ರೀ ಕುವೆಂಪು ಅವರ ಪೂರ್ಣದೃಷ್ಟಿಯ ದಿವ್ಯದರ್ಶನ ತೀರ್ಥದಲ್ಲಿ ಮಿಂದು ಪುನೀತೆಯರಾಗಿದ್ದಾರೆ!

೩

## ಮಂಥರೆಯ ವಾಸುಕಿ ಮಹಾಮಮತೆ!

ಅಂದು ಹುಣ್ಣಿಮೆಯ ರಾತ್ರಿ. ಎಲ್ಲೆಡೆಯೂ ಹಾಲ್ದಿಂಗಳು ಪಸರಿಸಿದೆ. 'ಅರಮನೆಯ ಉದ್ಯಾನ ಶಾದ್ವಲಶ್ಯಾಮ ವೇದಿಕೆಯಲ್ಲಿ' ರಾಣಿಯರು ತಮ್ಮ ತಮ್ಮ ಮಕ್ಕಳುಗಳೊಡನೆ ವಿಹರಿಸುತ್ತಿರುವಾಗ, ಶಿಶು ರಾಮಚಂದ್ರ ಗಗನಮಂಡಲದ ಪೂರ್ಣಚಂದ್ರನಿಗಾಗಿ ಹಟ ಹಿಡಿದು ರೋದಿಸಲು ತೊಡಗುತ್ತಾನೆ. ಕೌಸಲ್ಯೆಯಾಗಲಿ, ಕೈಕೆಯಾಗಲಿ, ಯಾರು ಸಮಾಧಾನಪಡಿಸಿದರೂ ಸುಮ್ಮನಾಗುವಂತಿಲ್ಲ. ದಶರಥನಿಗೂ ಮಂತ್ರಿ ಸುಮಂತ್ರನಿಗೂ ಅದು ಸಾಧ್ಯವಾಗಲಿಲ್ಲ. ಅದೇ ಸಮಯದಲ್ಲಿ ಕಿಶೋರ ಭರತನನ್ನು ಕಂಕುಳಲ್ಲಿಟ್ಟುಕೊಂಡು ಮುದುಕಿಯೊಬ್ಬಳು ಬರುತ್ತಾಳೆ. ಅವಳನ್ನು ಕಂಡೊಡನೆಯೇ ಕೈಕೆ ಹೊರತಾಗಿ ಎಲ್ಲರೂ ಮುಖ ಮುರಿದುಕೊಂಡು ಮಾತು ನಿಲ್ಲಿಸುತ್ತಾರೆ. ಅವಳೋ! ಅವಳ ರೂಪೋ!! ಅವಳನ್ನು ಸೃಷ್ಟಿಸಿದ ಸೃಷ್ಟಿಕರ್ತನಿಗೇ ಪ್ರೀತಿ! 'ಗೂನುಬೆನ್ನಿನ ಹಲ್ಲುಗಳುದುರಿ ಬೋಡಾದ ಬಾಯಿನ, ಕುಳಿಯ ಕೆನ್ನೆಗಳ, ಕಬ್ಬಿಣದಂತೆ ಇರುವ ಮೊರಡು ಮುಖದ, ಕೂದಲುದುರಿದ ಬೋಳು ಹುಬ್ಬಿನ,' ಅಸ್ಥಿಪಂಜರದಂತಿರುವ ಆ ಭೀಕರಾಕಾರೆಯನ್ನು ಕೈಕೆ ಬಹಳ ಅಕ್ಕರೆಯಿಂದ ಮಾತನಾಡಿಸುತ್ತಾಳೆ. ರಾಮನ ರೋದನಕ್ಕೆ ಕಾರಣವನ್ನರಿತ ಈ ಕುಬ್ಜೆ, ಮುದಿಗೂನಿ, ಅವನನ್ನು ಮುದ್ದಿಸ ಬಯಸಿ ತನ್ನ ತೋಳನ್ನು ಮುಂದೆ ಚಾಚಲು ಕೌಸಲ್ಯೆ, 'ಕಂದಂಗೆ ಅಮಂಗಳಂ, ಮುಟ್ಟದಿರ್, ಮುಟ್ಟದಿರ್'! ಎಂದು ನಿವಾರಿಸುತ್ತಾಳೆ. ಪಾಪ, ಆ ಮುದಿಗೂನಿಯ ಮಮತೆ ಏನಾಗಬೇಕು! ಪ್ರೇಮ ಕ್ರೋಧಕ್ಕೆ ಎಡೆಗೊಟ್ಟಿತು. ಈ ರೀತಿ ಜಗದ ನಿಂದೆಗೆ ಗುರಿಯಾದ ಈ ಪತಿತೆ ರಾಮಾಯಣದ ಚಾಲಕಶಕ್ತಿ, ಮಂಥರೆ!

ಕೇಕಯ ರಾಜನೊಮ್ಮೆ ಬೇಟೆಗಾಗಿ ಅರಣ್ಯಕ್ಕೆ ಹೋಗಿ ಹಿಂತಿರುಗುವಾಗ 'ಪಳುವೆ ತಾನಳುವಂತೆ' ಗೋಳಿಡುತ್ತಿದ್ದ ಹೆಣ್ಣು ಹಸುಳೆಯೊಂದನ್ನು ಕಂಡನು. ಅದರ ಮೈಮೇಲಿದ್ದ ಕಟ್ಟಿರುವೆ ಮುಂತಾದುವುಗಳನ್ನು ಒರಸಿ 'ದಾರಿಯ ಸಡೆವ ಮಾರಿಯಂ ಮನೆಗೆ ತರುವಂತೆ'

ಆ ವಿಕಾರರೂಪಿನ ದಸ್ಯುಶಿಶುವನ್ನು ತನ್ನರಮನೆಗೆ ತಂದು ಸಾಕಿದನು. ಅವನ ಆಶ್ರಯದಲ್ಲಿ 'ಬೆಳೆದುದು ಕೂಸು ಕುಳ್ಳಾಗಿ, ಗೂನಾಗಿ, ತೊತ್ತಾಗಿ, ಕರ್‍ರಗೆ ಜನರ ಕಣ್ಗೆ ಹೇಸಿನಾಕೃತಿಯಾಗಿ!' ಕಂಡ ಕಂಡವರೆಲ್ಲರೂ ಆ ಅನಾಥೆಯನ್ನು 'ಛೀ ಎಂದು, ತೊಲಗೆಂದು, ಥೂ ಎಂದು, ಸಾಯೆಂದು, ನಾಯ್ಮರಿಗೆ ಕಡೆಯಾಗಿ ಭಾವಿಸಿದರು.' ಮುಖಕ್ಕೆ ಕೆಸರನ್ನೆಡುವಂತೆ ಅದಕ್ಕೆ 'ಮಂಥರೆ' ಎಂಬ ಹೆಸರನ್ನು ಎಸೆದರಂತೆ! ಹೀಗಿದ್ದ ಕುಬ್ಜೆ ಕುಮಾರಿಯಾದಾಗ ಕೇಕಯ ರಾಜಸತಿಗೆ ಕೈಕೆ ಜನಿಸಿದಳು. ಆಗ 'ಮಳೆಹೊಯ್ದ ಶಿರನಾಯ್ತು ಮಂಥರೆಯ ಮರುಧರೆಗೆ!' ಅವಳ ಸಂತಸಕ್ಕೆ ಪಾರವುಂಟೇ? ತನ್ನ ಅಕ್ಕರೆಯನ್ನೆಲ್ಲಾ ಆ ಮಗುವಿನ ಮೇಲೆಸೆದಳು. ಕೈಕೆಯೂ ಸಹ ಮಂಥರೆಯ ತೊಡೆಯ ಮೇಲೆ 'ಕಾಳಾಹಿ ಭೋಗದಲಿ ಹೊಳೆವ ಹೆಡೆಮಣಿಯಂತೆ' ಬೆಳೆದಳು. ಮುಂದೆ ಕೈಕೆ ದಶರಥ ಮಹಾರಾಜನನ್ನು ಲಗ್ನವಾಗಿ ಅಯೋಧ್ಯೆಗೆ ಹೋದಾಗ ತಾನೂ ಅವಳ ಜೊತೆಯಲ್ಲಿಯೇ ಹೋದಳು. ಮಂಥರೆಯ ಮಮತೆ ಚಿಗುರಿ ಚೆಲುವಾಯಿತು. 'ತನ್ನೊಂದು ಜೀವಿತಕೆ ರಾಜಪುತ್ರಿಯ ಸರ್ವಸುಖಮಾಗೆ ಮರೆತಳನ್ಯಾಯಮಂ, ಮರೆತಳಪಮಾನಮಂ, ಮತ್ತೆ ಮರೆತಳು ತನ್ನನುಂ ತಾನೆ, ಕೈಕೆಯೊಳ್ ಸಾಯುಜ್ಯ ಹೊಂದಿ.'

ಹೀಗಿರಲು, 'ಬೆಸಲೆಯಾದಳು ಕೈಕೆ ಭರತನಂ.' ಆಗ 'ಮಂಥರೆಗೆ ಮೂರನೆಯ ಕಣ್ ಮೂಡಿದಂತಾಯ್ತು.' ಹಡೆದ ತಾಯಿಯೇ ನಾಚುವಂತೆ ಆ ಶಿಶು ಭರತನನ್ನು ಸಲಹಿದಳು. ಮಂಥರೆಯ ಮಮತೆಯ ಪಕ್ಷಿಗೆ ಗರಿಮೂಡಿತು! ಅರಮನೆಯ ದಾಸಿಯರಾದಿಯಾಗಿ ಎಲ್ಲರೂ ಇವಳನ್ನು ನೋಡುವುದೇ ಅಮಂಗಳವೆಂದೂ, ಗಾಳಿ ಸೋಕಿದರೆ ಮೈಲಿಗೆ ಎಂದೂ ಹೇಸಿ, ಊಟಮಾಡುವ ಸಮಯದಲ್ಲೂ ಸಹ ಇವಳನ್ನು ಹೊರಕ್ಕೆ ತಳ್ಳುತ್ತಿದ್ದರು. ಪೃಥಿವಿಯ ಯಾವ ವ್ಯಕ್ತಿಯೂ ಪುರಸ್ಕರಿಸದಿರುವಾಗ ತನಗೆರಡು ಕಣ್ಣಾಗಿ, ತನ್ನ ಬಾಳಿನ ಬೆಳಕಾಗಿ, ಆನಂದದ ನಿಧಿಯಾಗಿ, ತನ್ನ ಜೀವಿತದ ಸರ್ವಸ್ವವೂ ತಾವೇ ಆಗಿ ಮೆರೆಯುತ್ತಿದ್ದ ಆ ಕೈಕೆ ಭರತರಲ್ಲಿ ಅವಳ ಅಮಿತ ಪ್ರೇಮ ಮನೆಮಾಡಿಕೊಂಡಿತು. ಆದ್ದರಿಂದಲೇ 'ನರರ್ ಅನ್ಯರಿಲ್ಲಾಯಿತ್ತು ಮಂಥರೆಯ ಲೋಕಕ್ಕೆ, ಕೈಕೆ ಭರತರ್ ವಿನಾ, ದಶರಥಂ ಕೈಕೆ ಭರತರಿಗಾಗಿ; ಕೈಕೆ ಭರತರಿಗಾಗಿ ಕೋಸಲ ಮಯೋಧ್ಯೆಗಳ್, ಶಶಿಸೂರ್ಯ ತಾರಾಳಿಗಳ್ ಕೈಕೆ ಭರತರಿಗಾಗಿ; ಭರತನಾಳ್ವಿಕೆಗಾಗಿ ಈ ಪೃಥಿವಿ!' ಇಷ್ಟೇ ಅವಳ ಜೀವನದ ಪರಮಗುರಿ. ಇದನ್ನು ಕಂಡೇ ಮಹಾಕವಿ ಪ್ರಜ್ಞೆ, 'ಹಾ, ಮಂಥರೆಯ ಈ ಮಮತೆಯಾವರ್ತದೊಳ್ ಸುಟ್ಟುರೆಗೆ ಧೂಳಿ ತರಗೆಲೆ ತಿರ್‍ರನೆಯೆ ಸುತ್ತುವೋಲ್ ಸಿಲ್ಕಿ ಘೂರ್ಣಿಸದಿಹುದೆ ಪೇಳ್ ತ್ರೇತಾ ಮಹಾಯುಗಂ!' ಎಂದು ಧ್ವನಿಗೈದಿದೆ.

ಅಂದು ಶ್ರೀರಾಮಚಂದ್ರನ ಪಟ್ಟಾಭಿಷೇಕದ ದಿನ. ಕೋಸಲ ಅಯೋಧ್ಯೆಗಳು ಆನಂದದಿಂದ ನಲಿಯುವ ಹಬ್ಬದ ದಿನ. ನಗರವೆಲ್ಲಾ ಅಲಂಕೃತವಾಗಿದೆ. ಎಲ್ಲಿ ನೋಡಿದರಲ್ಲಿ ಸಂಭ್ರಮವೋ ಸಂಭ್ರಮ. ಮಂಗಳ ವಾದ್ಯಗಳು ಎಲ್ಲೆಲ್ಲೂ ಮೊಳಗುತ್ತಿವೆ. ಇದನ್ನು ತಿಳಿದ ಮಂಥರೆಯ ಎದೆ ಒಡೆದುಹೋಯಿತು. ಘಾಸಿಯಿಂದ ಬೀರುತ್ತ ಕೈಕೆಯರಮನೆಗೆ ಹೋಗುತ್ತಾಳೆ. 'ಅಯ್ಯೋ ಕೆಟ್ಟೆ ನೀಂ! ಕೆಟ್ಟೆನಾಂ! ಹಾ ಭರತ! ಭರತ! ಹಾ!' ಎಂದು ಒರಲುತ್ತಾ ಧೊಪ್ಪನೆ ಬಿದ್ದು ಮೇಲೆದ್ದು ಬಿಕ್ಕಿ ಬಿಕ್ಕಿ ಅಳುತ್ತಾ ತನ್ನನ್ನು ಸಂತೈಸಲು ಬಂದ ಕೈಕೆಗೆ ರಾಮಚಂದ್ರನ ಪಟ್ಟಾಭಿಷೇಕದ 'ದುರ್ವಾರ್ತೆ'ಯನ್ನು ಹೇಳುತ್ತಾಳೆ; ದಶರಥನ ಹುಸಿ ಪ್ರೇಮವನ್ನು ಹೀಗಳೆಯುತ್ತಾಳೆ. 'ಭರತನನ್ ಉಪಾಯದಿಂ ನಿನ್ನ ತೌರಿಂಗಟ್ಟಿ, ಕೇಳ್, ಪಟ್ಟಕಟ್ಟುವನಂತೆ ನಾಳೆ ರಾಮಂಗೆ!' ಎಂದೊದರುತ್ತಾಳೆ. ಅದಕ್ಕೆ ಕೈಕೆ ಆನಂದಿಸಿ ರಾಮನೇನು ಭರತನೇನು ಮಕ್ಕಳಿಬ್ಬರೂ ನನ್ನವರು ಎಂದು ಸಂತೋಷದ ಸುವಾರ್ತೆಯನ್ನು ತಿಳಿಸಿದ್ದಕ್ಕಾಗಿ ಮೆಚ್ಚು ಕೊಡಲು ಹೋದಾಗ ಕುಪಿತಳಾದ ಮಂಥರೆ ಸಿಡಿಮಿಡಿಗೊಂಡು, 'ಸಾಕು ನಿಲ್ಲಿಸು ಮೂರ್ಖೆ, ಪೆತ್ತ ಮಗುವನೆ ತಿಂಬ ರಕ್ಕಸಿಯ ಪಾಂಗಿನಿಂದಾಡುತಿಹೆ: ನಿನ್ನ ಕಂದಗೆ ನೀನೇ ಮಿಳ್ತು' ಎಂದು ಮುಂತಾಗಿ ಬೈದು 'ವೈರಿ ಬೇರುಂಟೆ ಲೋಕದಿ

ಸವತಿಮಗನಿಗಿಂ?' ಎಂದು ತತ್ತ್ವವನ್ನು ಒದರಿ, 'ಭರತನಂ ರಾಮಂಗೆ ತೊಳ್ತುಗೆಯ್ಸದೆ ಪಳುವಕಾದೊಡಂ ಕಳುಹು; ದಯೆದೋರು. ನಾನವನೊಡನೆ ಪೋದಪೆನ್ ಶುಶ್ರೂಷೆಗೆಯ್ಯೆ. ಭಿಕ್ಷೆಯಿಡೆನಗೆ ನಿನ್ನಿಂದೆ!' ಎಂದು ಖಿನ್ನಳಾಗಿ ನುಡಿದು ಹೊರಟ ಮಂಥರೆಯನ್ನು, 'ಮುಳುಗು ವಾತಂ ಪ್ರಾಣರಕ್ಷಣೆಗೆ ಮೊಸಳೆಯಿಂ ತಬ್ಬುವೋಲಂತೆ' ತೆಗೆದಪ್ಪುತ್ತಾಳೆ ಕೈಕೆ. ಇಲ್ಲಿ ತಳಿತು ಹೂವಾಯಿತು ಮಂಥರೆಯ ಪ್ರೇಮವೃಕ್ಷ. ಅದು ವಿಷಪೂರಿತ ಫಲವನ್ನು ಬಿಟ್ಟದ್ದು ಕೈಕೆಯೆಂಬ ಬೃಹತ್ ಕಾಂಡದಲ್ಲಿ. ಅಂತೆಯೇ ಇದೇ ಬಳಿ ಚಿಗಿದು ಚಿಮ್ಮುತ್ತದೆ ಶ್ರೀ ರಾಮಾಯಣದ ನೈಜ ಕ್ರಿಯೆ!

ಆದರೂ ಇಲ್ಲಿ ನಾವು ಮಂಥರೆಯ ಅಂತರಂಗವನ್ನು ಪ್ರವೇಶಮಾಡದಿದ್ದಲ್ಲಿ ಮೋಸ ಹೋಗುತ್ತೇವೆ. ಈ ಪತಿತೆಯ ಹೃದಯದಲ್ಲಿ ತುಂಬಿ ತುಳುಕುತ್ತಿರುವುದು ಕೇವಲ ಮಮತೆ ಮಾತ್ರ, ಅದೂ ಕೈಕೆ ಭರತರಿಗಾಗಿ ಮಿಾಸಲು. ಎಲ್ಲರೂ ತನ್ನನ್ನು ದೂಷಿಸುತ್ತಿರುವರೆಂಬ ದ್ವೇಷ ವಾಗಲಿ, ಸೇಡಾಗಲಿ ಇವಳಲ್ಲಿ ಎಳ್ಳಷ್ಟೂ ಇಲ್ಲ. ಅದಕ್ಕಾಗಿಯೇ 'ಚಂದ್ರ ಸುಂದರ ವದನೆ ದುಡುಕದಿರ್ ತಲೆಗೆಟ್ಟ ಗೂನಿಯೆನ್ನಯ ನುಡಿಗೆ ಬಿಳ್ದು ತರುವಾಯದೊಳ್ ದೂರದಿರ್, ಮಮತೆಯಿಂ ನಿನ್ನ ಭರತನ ಮೇಲಣಕ್ಕರೆಯ ಮಮತೆಯಿಂ, ರಾಮವಿದ್ವೇಷದಿಂದಲ್ತು, ರಾಮಂ ಬಾಳ್ಗೆ! ಪೇಳ್ದನಿಸಿತೆಲ್ಲಮಂ ನಿನಗೆ—ರಾಮಂ ಬಾಳ್ಗೆ!' ಎಂದಂದು ಕೈಕೆಯನ್ನು ಎಚ್ಚರಿಸಿ ರಾಮನನ್ನು ಮನಸಾರೆ ಹರಸುತ್ತಾಳೆ; ಪತಿಯನ್ನು ಎದುರಿಸುವ ಸಂಗ್ರಾಮಕ್ಕೆ ಸಕಲ ಸಿದ್ಧತೆ ಗಳನ್ನೂ ಮಾಡಿ ಹೊರಟುಹೋಗುತ್ತಾಳೆ.

ಆಯಿತು. ಮಂಥರೆಯೆಬ್ಬಿಸಿದ ಈ ಸುಳಿ ದಶರಥನನ್ನು ಮೊದಲುಗೊಂಡು ಸಕಲರನ್ನೂ ತನ್ನತ್ತ ಸೆಳೆದು ಅಪ್ಪಳಿಸಿಬಿಟ್ಟಿತು. ಮಂಥರೆಯ ಇಷ್ಟಸಿದ್ಧಿಯಾಯಿತು. ಪ್ರೇಮದ ಮಡದಿ ಕೈಕೆಯ ಬಾಯಿಂದ ತನ್ನ ಮಗ ಭರತನಿಗೆ ಪಟ್ಟಾಭಿಷೇಕವನ್ನೂ, ನಿಷ್ಕಂಟಕವಾಗಿಸಲು ರಾಮ ನಿಗೆ ಹದಿನಾಲ್ಕು ವರ್ಷಗಳ ವನವಾಸದ ವರವನ್ನೂ ಕೇಳಿಸಿಯೇ ಬಿಟ್ಟಿತು. ರಾಮ, ಸೀತೆ, ಲಕ್ಷ್ಮಣರಿಗೆ ವಲ್ಕಲವನ್ನು ದಯಪಾಲಿಸಿ ಜಟಾಧಾರಿಗಳನ್ನಾಗಿಸಿ ಅರಣ್ಯಕ್ಕೆ ಅಟ್ಟಿಯೇ ಬಿಟ್ಟಿತು. ತರುವಾಯದಲ್ಲಿ ದುಃಖಾಕ್ರಾಂತನಾದ ದಶರಥನನ್ನು ಪರಲೋಕಯಾತ್ರೆ ಗೈಸಿಯೂ ಆಯಿತು. ನಗುತ್ತಿದ್ದ ಅಯೋಧ್ಯೆಯ ಮುಖದಲ್ಲಿ ಪ್ರೇತ ಕಳೆಯ ತಾಂಡವವಾಯಿತು. ಇಷ್ಟಕ್ಕೂ ಕಾರಣ ಅದೇ ಆ ಮುದಿಗೂನಿಯ ಮಹಾಮಮತೆ!

ನೆನೆದಂತೆ ನಡೆಯದೆ ಕ್ರಿಯೆ ವಿಪರೀತವಾದಾಗ ಆ 'ಪ್ರೇಮ ಭೈರವಿ' ಮಂಥರೆ ರುದ್ರ ಭೂಮಿಯಲ್ಲಿ ಅರುಳು ಮರುಳಾಗಿ ಯಾರಿಗೂ ತಿಳಿಯದಂತೆ ಅರಚುತ್ತಾ ಅಲೆಯುತ್ತಾಳೆ. ತನ್ನ 'ಜೀವನಾನಂದ ಸಾಗರ ಸುಧಾಂಶು'ವಾದ ಭರತನಿಗಾಗಿ, ಭರತನಭ್ಯುದಯಕ್ಕಾಗಿ ಎಂದು ಮಾಡಿದ ಸರ್ವಪ್ರಯತ್ನವೂ ವಿಫಲವಾದುದಕ್ಕಾಗಿ ನೊಂದು ಪಶ್ಚಾತ್ತಾಪಪಟ್ಟು ರಾಮ ಚಂದ್ರನನ್ನು ಮತ್ತೆ ನಗರಕ್ಕೆ ಕರೆತರುತ್ತೇನೆಂದು ಒದರುತ್ತಾ ಹೋಗುತ್ತಾಳೆ. ಕಡೆಗೆ ಮಹಾಕವಿ ಹೃದಯ ಕನಿಕರದಿಂದ ಕಾಳ್ಗಿಚ್ಚನ್ನು ದಯಪಾಲಿಸಿ, ಅವಳ ಕಾಳಿಕೆಯನ್ನು ಭೌತದೇಹದೊಂದಿಗೆ ಭಸ್ಮೀಭೂತವನ್ನಾಗಿ ಮಾಡುತ್ತದೆ. ಮುಂದೆ 'ತಪಸ್ಸಿದ್ಧಿ'ಯಲ್ಲಿ, ನಾಳೆ ರಾಮನಾಗಮನ ವಾಗದಿದ್ದಲ್ಲಿ ಅಗ್ನಿಪ್ರವೇಶಮಾಡುವೆನೆಂದು ಸಿದ್ಧನಾಗಿದ್ದ ಭರತನಿಗೆ ಅಗ್ನಿಕುಂಡದಿಂದ ಮೇಲೆದ್ದು ಕಾಣಿಸಿಕೊಂಡು, 'ಕಂದ ನಿನ್ನಗ್ರಜಂ ಇಂದೊ ನಾಳೆಯೊ ದಿಟಂ ಪಿಂತಿರುಗಿ ಬಂದ ಪನ್. ಮಾಣ್ ಮನದ ತರಿಸಲ್ಕೆಯಂ', ಎಂದು ಅಭಯಪ್ರದಾನಮಾಡುತ್ತಾಳೆ 'ಮಂಥರೆ ಯಂತರಾತ್ಮದ ಪುಣ್ಯಲಕ್ಷ್ಮಿ!' ಹೇಸಿದ ಭರತನು ಆ ಹೆಸರನ್ನು ತಿರಸ್ಕರಿಸಿ ನುಡಿದಾಗ, 'ವತ್ಸ, ಕಾರಣಳಲ್ತು, ಬರಿ ಕರಣಮಾ ಕುಬ್ಜೆ' ಎಂಬ ಪೂರ್ಣದೃಷ್ಟಿಯ ಸೂತ್ರದರ್ಶನವನ್ನು ಸಾರಿ, 'ಮಂಥರಾಪ್ರೇಮದಂತಃಕರಣಮಂ ಕಾಣೆ ನೀಂ. ರಾಮನಂ ಮತ್ತೆ, ನಿನ್ನಭ್ಯುದಯಕಾಗಿ, ಪಿಂ ಮರಳ್ಚುವುದ್ಯೋಗದೊಳ್ ತೊಡಗಿರಲ್ಕವಳ್ ದವಾಗ್ನಿಗಾಹುತಿಯಾದಳಲ್ತೆ? ಬಹಿರಂಗದೊಳ್ ಆ ಕುಬ್ಜೆ ವಿಕೃತಿಯೆಂತಂತೆ ಹೊರನೋಟಕಾ ಗೂನಿಗೆಯ್ದುದು ಪಾಪವೇಷಿ; ನಾನೆಯೆ, ನೋಡು

ನಿನ್ನ ಮಂಥರೆಯಂತರಾತ್ಮದ ಪುಣ್ಯಲಕ್ಷ್ಮಿ' ಎಂದು ಹೇಳಿ ಜ್ವಾಲೆಯಲ್ಲಿ ಕರಗಿಹೋಗುತ್ತದೆ. ಮಹಾಕವಿಯ ಕರುಣಾಮೃತದಲ್ಲಿ ಮಿಂದು ಮಡಿಯುಟ್ಟು ಪುನೀತೆಯಾಗಿರುವ ಮಂಥರೆಯು ಸರ್ವರ ಗೌರವಾದರಗಳಿಗೂ ಪಾತ್ರಳಾಗಿದ್ದಾಳೆ.

೪

## ಚಂದ್ರನಖಿ ಚಕೋರೆ!

"....ಮೂಡುತಿರ್ದುವೆ ಮಹಾರತ್ನಗಳ್, ಪೇಳ್,
ಮಥಿಸದಿರೆ ಮಂಥರೆಯ ವಾಸುಕಿ ಮಹಾಮಮತೆ ತಾಂ
ಕೈಕೆ ಮಂದರದಿಂದಮಾ ತ್ರೇತಾಸಮುದ್ರಮಂ?"

ಹೌದು!

ಆದರೆ ಆ ಮಹಾರತ್ನಗಳಿಗೆ ಮೆರಗುಕೊಟ್ಟು ಅವುಗಳು ದ್ಯೋತಕವಾಗುವಂತೆ ಮಾಡಿರುವ ಮಹತ್ ಕೀರ್ತಿ ಮತ್ತೊರ್ವಳಿಗೆ ಸಲ್ಲುತ್ತದೆ. ಅವಳೇ ಲಂಕಾಧಿಪತಿ ರಾವಣೇಶ್ವರನ ಅನುಜೆ ಚಂದ್ರನಖಿ! ಶ್ರೀ ರಾಮನೊಡನೆ ನಮಗೂ ಕನಕಲಂಕೆಯ ದರ್ಶನವನ್ನು ಮಾಡಿಸಿ ಅಲ್ಲಿಯ ಮೃಣ್ಮಯಕ್ಕೆ ಚಿನ್ಮಯತೆಯನ್ನು ದಯಪಾಲಿಸಲು ಸಹಾಯಕಳಾಗಿ, ರಾಮಾಯಣದಲ್ಲಿ ಮತ್ತೊಂದು ಮಹಾ ಸಂಪುಟವನ್ನೇ ತೆರೆದ ಮಹಿಮಾನ್ವಿತೆ!

ಅಂದೊಂದು ಸಂಜೆ ಸೀತಾರಾಮರಿರ್ವರೂ ತಮ್ಮ ಪಂಚವಟಿಯ ಪರ್ಣಕುಟಿಯ ಮುಂದೆ ಕುಳಿತು ದಿಗಂತವನ್ನೀಕ್ಷಿಸುತ್ತಿದ್ದಾಗ ಇದ್ದಕ್ಕಿದ್ದ ಹಾಗೆ ಮುಗಿಲ ತೇರಿಂದ ಒಂದು 'ಮಂಜುಮ ಸ್ತ್ರೀ ಮೂರ್ತಿ' ಮೂಡಿತು. ತಕ್ಷಣವೇ ಅದು ಒನಪು ವೈಯಾರಗಳಿಂದ ಹತ್ತಿರ ಬಂದು, "ಸುಸ್ವಾಗತಂ ನಿನಗೆ, ಕೋಸಲೇಶ್ವರ, ನಮ್ಮ ದಕ್ಷಿಣಾವನಿಗೆಮಗೆ ನೀನತಿಥಿ. ಚಂದ್ರನಖಿ ನಾಂ; ಲಂಕೇಶ್ವರನ ಭಗಿನಿಯೆಂ!" ಎಂದು ಸ್ವಾಗತ ಹಾಗೂ ಸ್ವಪರಿಚಯಗಳೆರಡನ್ನೂ ಮಾಡಿಕೊಂಡಿತು. ರಾವಣನೆಂಬ ಹೆಸರನ್ನು ಕೇಳಿದ ಮಾತ್ರಕ್ಕೇ ಸೀತೆ ಕಳವಳಗೊಳ್ಳುತ್ತಾಳೆ. ಶ್ರೀ ರಾಮಚಂದ್ರನು ಔಡುಗಚ್ಚಿ "ರಾವಣನ ತಂಗೆ, ತಳುವಿ ಒಂದೆಯಲಾ ಸುಖಾಗಮನಮಂ ಬಯಸೆ! ನಾಳೆಯೋ ನಾಡಿನೋ ಬೀಳ್ಕೊಂಡಪೆವು ನಿಮ್ಮ ಈ ಅಡವಿ ಪೊಡವಿಯಂ ಅಯ್ಯೊ, ಆತಿಥ್ಯಮಂ ಸವಿವ ಸೌಭಾಗ್ಯಮೆನಗಿಲ್ಲಾಯ್ತಲಾ!", ಎಂದಾಗ, ನಕ್ಕು, "ಹೋಣೆ ನಮತು, ನಂತರ ಮನೆಗೆ ಹೋಗುವನ್ನೆಗಂ; ಹೋದಂದು ನಾವವರ ನೆರೆಯಲ್ತೆ ಜರ್ದನಿಕ್ಕುವವರೆಗೆ, ಮೇಣವರೆ ಬೀಳುಕೊಡುವನ್ನೆಗಂ? ನೀಮೆಂತು ಪಿಂತಿರುಗುವಿರಿ ಜರ್ದನುಣ್ಣದೆಯೆ ನಾಮಿಕ್ಕುವಾ? ನಿಮಗದು ತಗದು; ನಮಗಪಕೀರ್ತಿ." ಲೌಕಿಕ ಧರ್ಮದ ನುಡಿ ಧ್ವನಿಪೂರ್ಣವಾಗಿದೆ. ಅತಿಥಿಗೆ ಔತಣವನ್ನು ಕೊಡುವ ಯಜಮಾನಿಯೇ ಹಸಿದು ಹಾತೊರೆಯುತ್ತಿದ್ದಾಳೆ! ಕಾಮತೃಷೆಯನ್ನು ನೀಗಲು ರಾಮನನ್ನು ಬೇಡುತ್ತಿದ್ದಾಳೆ. "ಊಟದೊಳ್ ಕದನದಾಟದೊಳ್ ಅಂತೆ ಬೇಟದೊಳ್ ಜಲನಿಷ್ಠೆ ಎಮ್ಮ ಸಲ್ಲಕ್ಷಣಂ! ಮಾಳ್ಪುದಂ ರಸಪೂರ್ಣಮೆನೆ ರಾಗಪೂರ್ವಕಮಾಗಿ ಮಾಳ್ಪುದದೆ ನಮಗೆ ಸಲ್! ಕೋಸಲೇಶ್ವರ ನಮ್ಮ ಪ್ರೇಮಮಂ ತಣಿಯುಣದೆ ನೀಂ ಪಿಂತಿರುಗಿ ಪೋಪುದನದಳಂ!" ಒಳ್ಳೇ ಪೀಕಲಾಟಕ್ಕೆ ಬಂತು ರಾಮನಿಗೆ. "ವಿಚಿತ್ರಮಿಮಾ ದಾಕ್ಷಿಣಾತಿಥ್ಯಂ ಬಲಾತ್ಕಾರ ಸತ್ಕಾರಂ!" ಎಂದು ಮತ್ತೊಮ್ಮೆ ಮನಸ್ಸಿನಲ್ಲಿ ಅಂದುಕೊಂಡನೇನೋ!

ವಾದ ಮುಂಬರಿಯುತ್ತದೆ. ಪ್ರಣಯಾರ್ಥಿನಿ ಚಂದ್ರನಖಿ ಪ್ರೇಮಭಿಕ್ಷೆಯನ್ನು ಅಂಗಲಾಚಿ ಬೇಡುತ್ತಾಳೆ. ತನ್ನ ಪತಿ ಮದುವೆಯಾದ ಸ್ವಲ್ಪ ದಿನಗಳಲ್ಲಿಯೇ ತನ್ನ ಅಣ್ಣ ರಾವಣನಿಂದ ಪಾತಾಳಯುದ್ಧದಲ್ಲಿ ಬಲಿಯಾದುದನ್ನು ಅಂದಿನಿಂದ ಇಂದಿನವರೆಗೂ ಬರಡು ಬಾಳು ಬಾಳುತ್ತಾ, ಎದೆಯನ್ನು ಶ್ಮಶಾನವಾಗಿಸಿರುವುದನ್ನೂ ವಿವರಿಸಿ ಹೇಳಿ 'ನನ್ನೆರ್ದೆಯ ನೀರಸದಿಳೆಗೆ ನೀಂ ಮಳೆಯಾಗಿ ಕರೆಯಯ್ಯ, ಹೊಳೆಯಾಗಿ ಹರಿಯಯ್ಯ, ಹಚ್ಚನೆಯ ಹಸುರು ಪಯ

ರಿನ ಬೆಳೆಯ ಸಿರಿಯಾಗಿ ಬಾರಯ್ಯ, ಕಲ್ಪತರು ನೀನಲ್ತೆ ಜೇಳ್ಪರಿಗೆ?' ಎಂದು ಸೆರಗೊಡ್ಡಿ ಬೇಡುತ್ತಾಳೆ. 'ಅನಾರ್ಯೆ, ನೀನನ್ಯ ಭಾರ್ಯೆ! ರಾಕ್ಷಸವಿವಾಹ ಕ್ರಮಂ, ಕೇಳ್ ನಮಗಸಹ್ಯಂ!' ನಸುನಕ್ಕು ರಾಮಚಂದ್ರ—'. . . . . . ಪತ್ನಿಯಿಹಳೆನಗಿವಳ್ ಪ್ರಿಯೆಯುಂ ವಲಂ; ವೇಣ್ ಚೆಲ್ವಿಗೇನಲ್ಲಿ ಕೊರೆಯಿಲ್ಲ!' ಎಂದು ನುಡಿಯುತ್ತಾನೆ. ಸೀತೆಯ ರೂಪು ಲಾವಣ್ಯಗಳನ್ನು ಮೆಚ್ಚಿಕೊಂಡ ಚಂದ್ರನಖಿ 'ಸಿಹಿಗೆಂತು ರುಚಿಯಿಹುದೊ ಕಹಿಗುಮಂತೆಯೆ ಬೇರೆ ರುಚಿಯಿರದೆ? . . . . ನಿಮ್ಮುತ್ತರದ ರತಿಯ ಸಾತ್ವಿಕ ರಸದ ಜೊತೆಗೆ ನಮ್ಮ ದಕ್ಷಿಣ ರತಿಯ ರಾಜಸವನನು ಭವಿಸಿ ನೋಳ್ಪೊಡೆ ಕಳಂಕಮೇಂ ರಾಜ–ರಸಿಕತೆಗೆ?' ಅಬ್ಬಾ! ಏನು ನಯ ಈ ನುಡಿಯಲ್ಲಿ! ಕುಪಿತನಾದ ರಾಮಚಂದ್ರನು, 'ಸಿಲ್, ನುಡಿಯದಿರ್ ಪೊಲ್ಲಮಂ . . . . ಮಾತು ಸಾಕಿಲ್ಲಿರದೆ ನಡೆ, ಸಹೋದರ ಲಕ್ಷ್ಮಣಂ ಬರ್ಪನಿತರೊಳ್. ಬಂದೊಡಪ್ಪುದು ನಿನಗೆ ತಗುವವೊಲ್ ಮದುವೆ ಮರಿಯಾದೆ!' ಎಂದು ಧಿಕ್ಕರಿಸಿ ನುಡಿಯುತ್ತಾನೆ. ಅದೇ ಸಮಯಕ್ಕೆ ಆಗಮಿಸಿದ ಲಕ್ಷ್ಮಣನು, ನಿಂತಿದ್ದ ನವಾಂಗಿಯನ್ನು ಆಪಾದ ಮಸ್ತಕದವರೆಗೂ ಈಕ್ಷಿಸಿ, ಅಣ್ಣನಿಂದ ಅವಳ ನಿಜಾಂಶವನ್ನು ತಿಳಿದು, 'ತೊಲಗೆಲೆ ನಿಶಾಚರಿಯೆ!' ಎಂದು ಬಾಣಸಹಿತ ತನ್ನ ತೋಳನ್ನು ಬೀಸಿದ ಕೂಡಲೇ ಬಾಣದ ಮೊನೆ ತಾಕಿ ಅವಳ ಮುಖ ಕೆತ್ತಿ ಹೋಯಿತು. ತಕ್ಷಣವೇ ಚಂದ್ರನಖಿ ಶೂರ್ಪನಖಿಯಾದಳು! ಭೀಮಭೀಕರೆಯಾದ ಆ ಕಾಮರೂಪಿಣಿಯನ್ನು ಕಂಡುದೇ ತಡ ಲಕ್ಷ್ಮಣನು ತನ್ನ ಕತ್ತಿಯಿಂದ ಅವಳ ಮೂಗನ್ನು ಕೊಯ್ದುಬಿಡುತ್ತಾನೆ. ಅಬ್ಬರಿಸಿ ಬೊಬ್ಬಿರಿದ ರಕ್ಕಸಿ ಅಂಬರಕ್ಕೆ ಸಿಡಿಯುತ್ತಾಳೆ.

ಇಲ್ಲಿಂದಲೇ ರಾಮಾಯಣ ಕಥಾವಾಹಿನಿ ಬೇರೊಂದು ಮುಖವಾಗಿ ಹರಿಯುವುದು. ಶ್ರೀ ರಾಮಚಂದ್ರನು ಪಿತೃವಾಕ್ಯ ಪರಿಪಾಲನೆಗಾಗಿ ವನವಾಸವನ್ನು ಕೈಗೊಂಡು ಪಂಚವಟಿಯಿಂದ ಕೆಲವೇ ದಿನಗಳಲ್ಲಿ ನಗರವನ್ನು ಸೇರಿ ಮತ್ತೆ ಪಟ್ಟಾಭಿಷಕ್ತನಾಗಬಹುದಾಗಿತ್ತು. ಆದರೆ ಲಂಕೆಯನ್ನು ದರ್ಶಿಸಿ, ಅಲ್ಲಿಯ ದಶಶಿರನನ್ನು ಮರ್ದಿಸಿ ಅದಕ್ಕಿಂತಲೂ ಮಿಗಿಲಾದ ತನ್ನವಳನ್ನು ಕೊಂಡೊಯ್ಯಬೇಕು. ಹೀಗೆ ತಾನೊಲಿದ ಮಹಾಭಾಗ್ಯಕ್ಕೂ, ಚಿರಕೀರ್ತಿಗೂ ಕಾರಣಳಾಗಿ ನಿಂತಿದ್ದಾಳೆ ಅತ್ತ ಮರೆಯಲ್ಲಿ ಚಂದ್ರನಖಿ. ಪಂಚವಟಿಯವರೆಗೆ ಮಂಥರೆ ಎಳೆತಂದ ರಥವನ್ನು ಮತ್ತೂ ಮುಂದುವರಿಸಿದ್ದಾಳೆ ಚಂದ್ರನಖಿ. ಮಂಥರೆಯ ಮಮತೆಯಂತೆ ಇವಳದೂ ಒಂದು ರೀತಿಯ ಮೋಹ. ದೈಹಿಕ ಸುಖಕ್ಕೆ ಆಸೆಪಟ್ಟು ದುರ್ಗತಿಗೆ ಪಕ್ಕಾದ ಈಕೆಯ ಪೂರ್ವ ವೃತ್ತಾಂತ ಎಲ್ಲರಲ್ಲೂ ಮರುಕ ಹುಟ್ಟಿಸುವಂಥದು. ಎಳವೆಯಲ್ಲೇ ಪತಿಯನ್ನು ಕಳೆದುಕೊಂಡ ಈ ರಕ್ಕಸಿಯ ಅಂತರಂಗದಲ್ಲಿ ಕಾಮ ಕೊನರುವುದರಲ್ಲೇನು ಆಶ್ಚರ್ಯವಿಲ್ಲ. ಆದರೆ ಪಾತ್ರಾಪಾತ್ರ ವಿವೇಚನೆ ಇಲ್ಲದೆ ಕೈಗೆ ಸಿಕ್ಕದ ವಸ್ತುವನ್ನು ಬಯಸಿದ್ದು ಅವಳೇ ಮಾಡಿಕೊಂಡ ಅನ್ಯಾಯ. ಲಂಕೆಯಲ್ಲಿ ಯಾವನಾದರೂ ರಾಕ್ಷಸನನ್ನು ಒಲಿಯಬಹುದಾಗಿತ್ತು. ಅದಕ್ಕೆ ಬದಲು ರಾಮನನ್ನಾಗಲಿ, ಲಕ್ಷ್ಮಣನನ್ನಾಗಲಿ ಬಯಸಿದ್ದು ಮಹಾಪರಾಧವಾಯಿತು. ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ಅನುಭವಿಸಿಯೂ ಆಯಿತು. ಶಿಕ್ಷೆ ಖರ, ದೂಷಣ, ಇಂದ್ರಜಿತು, ಮೇಘನಾದ, ರಾವಣಾದಿಗಳ ಮಹಾ ಮರಣವಷ್ಟೇ ಅಲ್ಲ, ಮಾನಸಿಕವಾಗಿ ತಾನೂ ಘೋರತರ ಶಿಕ್ಷೆಯನ್ನು ಪತಿಯನ್ನಗಲಿದ ಜಾನಕಿಗಿಂತಲೂ ಮಿಗಿಲಾಗಿ ಅನುಭವಿಸಿದಳು.

ಖರದೂಷಣಾದಿಗಳು ಬಲಿಯಾದ ಮೇಲೆ ಚಂದ್ರನಖಿ ಅಣ್ಣನಿಗೆ ರಾಮಲಕ್ಷ್ಮಣರ ಶೌರ್ಯ ಪ್ರತಾಪಗಳನ್ನು ವಿಸ್ತರಿಸಿ ವೈದೇಹಿಯ ದೇಹವರ್ಣನೆಯನ್ನು ಮಾಡಿ, ರಾವಣನೇನಾದರೂ ಶತ್ರುವನ್ನು ಗೆದ್ದರೆ ಆ ಚೆಲುವೆ ಸೀತೆ ಕೈಗೂಡುವಳೆಂಬ ಆಸೆ ತೋರಿಸುತ್ತಾಳೆ. ಅಂತೆಯೇ ಅಣ್ಣನಲ್ಲಿ ಒಂದು ಭಿಕ್ಷೆಯನ್ನು ಬೇಡುತ್ತಾಳೆ. ". . . ಹೇ ದೈತ್ಯರಾಜೇಂದ್ರ ನನ್ನದಿದೊ ಒರ್ ಬಿನ್ನಪಂ: ನಿನಗೆ ಕೈಸೆರೆಗಳಾಗುವೊಡೆ ಆ ಇರ್ವರಂ ಬಿಕ್ಕೆ ನೀಡೆನಗೆ. ನನ್ನಿಚ್ಛೆರತಿ ಹೊಡೆ ತಣಿವವೊಲ್ ಆ ಧೂರ್ತರನು ರಸವನೀಂಟೀಂಟಿ ತೃಪ್ತಿಗೆ ತನಿಯನೆರೆವೆ!" ಎಂಬುದಾಗಿ ಪ್ರಣಯ ಕಾರುಣ್ಯಕ್ಕೆ ಕೈ ಚಾಚುತ್ತಾಳೆ. ಅವಳ ದೃಷ್ಟಿಯಲ್ಲಿ ಸೀತೆ ರಾವಣನವಳಾಗುವು

ದಕ್ಕಿಂತಲೂ ರಾಮನಾಗಲಿ, ಲಕ್ಷ್ಮಣನಾಗಲಿ ತನ್ನವನಾಗಿ ತನ್ನ ಕಾಮತೃಷೆಯನ್ನು ತೃಪ್ತಿಪಡಿಸಿದರೆ ಸಾಕು. ಇದೇ ಮಹದಿಚ್ಛೆಯಿಂದ ಮಾಡಬಾರದ ಕಾರ್ಯಕ್ಕೆ ಕೈಹಾಕಿಸುತ್ತಾಳೆ. ವಂಚಕತನದಿಂದ ಸೀತೆಯನ್ನು ಕಳವುಮಾಡಿಸಿ ಗುಪ್ತಗೃಹದಲ್ಲಿ ಕೆಲವು ದಿನ ತನ್ನ ರಕ್ಷಣೆಯಲ್ಲಿರಿಸಿಕೊಳ್ಳುತ್ತಾಳೆ. ಅಣ್ಣನ ಬೇಟದ ಬೇಟೆಯನ್ನು ಕಂಡು, 'ತನ್ನ ಬೇಟದ ಬೇಂಟೆಯುಂ ಸಫಲಮಹುದೆಂದು' ಹಿಗ್ಗುತ್ತಾಳೆ. ಮುಂದೆ ಚಂದ್ರನಖಿಯ ದೃಷ್ಟಿ ಅಣ್ಣನಿಂದ ಸೀತೆಯ ಪಾತಿವ್ರತ್ಯ ಕೆಡಬಾರದು; ಆದರೆ ತನಗೆ ಮಾತ್ರ ತನ್ನ ಪ್ರೀತಿಯ ವಸ್ತುಗಳಾದ ರಾಮಲಕ್ಷ್ಮಣರು ದೊರೆಯಬೇಕು ಇಷ್ಟಾಗಿ ಉಳಿಯುತ್ತದೆ. ಅದಕ್ಕಾಗಿಯೇ ಸೀತೆಯನ್ನು ಸಂತೈಸುತ್ತಾ, "ಎರ್ದೆಗಿಡದಿರಾರ್ಯೆ .... ಮಾಸಿಸಿಯ ಮಾಸಕ್ಕೆ ಕುಂದಿನಿತುಮಾಗದೋಲಾನೆ ಹೊಣೆ, ಸನ್ಮಾನ್ಯೆ. ತಿರ್ದಿದಪೆನೆಂತಾದೊಡಂ ಅಣ್ಣನೀ ಗೈದುದಂ ಅವಿವೇಕಮಂ" ಎಂದ ನುಡಿಗಳು ಬರಿಯ ಔಪಚಾರಿಕವಾಗಿ ಕಂಡರೂ ಮುಂದೆ ಸೀತೆಯ ಸಹವಾಸದಿಂದ ಸುಶೀಲೆಯಾದ ಚಂದ್ರನಖಿ ರಾವಣನನ್ನು ತಿದ್ದಲು ಪ್ರಯತ್ನಿಸುತ್ತಾಳೆ. ಅಣ್ಣನನ್ನೇ, 'ಪಾಪಿ ನೀನ್ ಎನ್ನನುಂ ಪಾಪಕ್ಕೆ ಸೂಂಕಿದೆಯ್' ಎಂದು ಬಯ್ದು 'ಧವಳಮಾರ್ಗಗಮನೆ' ಯಾಗುತ್ತಾಳೆ. ಪಾಪಿ ಶೂರ್ಪನಖಿ ನಮಗೆ ಮುಂದೆ ಎಲ್ಲಿಲ್ಲೂ ಕಾಣುವುದು ಸಾಧ್ವಿ ಚಂದ್ರನಖಿಯಾಗಿ! ಇಂತಹ ಪವಿತ್ರ ಪರಿವರ್ತನೆಯಿಂದ ರಾಮಾಯಣಕ್ಕೆ ಕಳೆ ಬಂದಿದೆ; ಕೀರ್ತಿ ತಂದಿದೆ.

ಬಹಳ ದಿನಗಳ ಘೋರ ಸಂಗ್ರಾಮದ ಪರಿಣಾಮವಾಗಿ ಇಂದ್ರಜಿತು, ಮೇಘನಾದ, ಕುಂಭಕರ್ಣಾದಿ ದೈತ್ಯಕುಲ ಶಿರೋಮಣಿಗಳ ನಾಶವಾಯಿತು. ಚಿಂತಾಕ್ರಾಂತನಾದ ರಾವಣನು ಪ್ರಿಯಪತ್ನಿ ಮಂಡೋದರಿ, ಪ್ರೇಮದ ಪುತ್ರಿ ಅನಲೆ ಮೊದಲಾದವರಿಂದ ಬಹಳ ರೀತಿಯ ಉಪದೇಶಗಳನ್ನು ಕೇಳಿ ಕೇಳಿ ತನ್ನ ಶಯ್ಯಾಗಾರದಲ್ಲಿ ಒರಗಿದ್ದಾನೆ. ಇದ್ದಕ್ಕಿದ್ದಂತೆಯೇ ಬಾಗಿಲು ತೆರೆಯುತ್ತದೆ. ತೆರೆದವಳು ಚಂದ್ರನಖಿ! ತಂಗಿಯನ್ನು ಕಂಡು ರಾವಣ—'ಏನ್ ಬಂದುದೌ, ತಂಗೆ? .... ಏನಿದೀ ಮಲಿನ ವಸನಂ ನಿನಗೆ. ಅದೇಕಿಂತು ಸೊರಗಿರುವೆ' ಎಂದು ತನ್ನ ಕಾಲ ಮೇಲೆ ಬಿದ್ದವಳನ್ನು ಸಂತೈಸುತ್ತಾ ನುಡಿಯುತ್ತಾನೆ. ಆಗ ನಡೆದ ಅಣ್ಣತಂಗಿಯರ ಅಮೃತ ಭಾಷಣವನ್ನು ಮಹಾಕವಿಯ ಬಾಯಿಂದಲೇ ಕೇಳೋಣ—

ಚಂದ್ರನಖಿ: "ಪಾಪಿ; ಪಶ್ಚಾತ್ತಾಪಿ;
ಬಂದೆ ನಾಂ ಬಯಸಿ ಪ್ರಾಯಶ್ಚಿತ್ತಮಂ!"

ರಾವಣ: "...... ಪಾಪಮೇನ್?"
ಅರ್ಗೆ ಪಶ್ಚಾತ್ತಾಪಮಾರ್ಗೆ ಪ್ರಾಯಶ್ಚಿತ್ತಮ್?"

ಚಂದ್ರನಖಿ: "ಪಾಪಿ ನಾನ್. ನನಗೆ ಪ್ರಾಯಶ್ಚಿತ್ತಮಿನ್ನಾರ್ಗೆ!"
(ವ್ಯಂಗ್ಯಮನೆ ನಕ್ಕನಸುರಂ.)
ನಗುವ ಏಕಣ್ಣ?
ಮುನ್ನನ್ನಳಲ್ತು ನಾನಿನ್ .... ನನ್ನ ದೆಸೆಯಿಂದೆ
ಕಳ್ದುಯ್ದು ಹದಿಬದೆಯನೆಳೆತಂದೆ. ಲಂಕೆಯಂ
ನಾನೆ ಈ ದುರ್ಗತಿಗೆ ತಂದೆ; ಲೆಕ್ಕಕೆ ಮಿಗಿಲ್
ಬೀರಾಳ್ಗಳಂ ತಿಂದೆ; ಸೇನಾನಿಗಳನೆನಿತೊ
ಕೊಂದೆ; ಕುಂಭಕರ್ಣನ ಕೊಂದೆನತಿಕಾಯನಂ
ಮೇಣಿಂದ್ರಜಿತು ಮೇಘನಾದಾದಿ ಮಕ್ಕಳಂ
ಬೇಳ್ದೆನ್ನಯ ದುರಭಿಮಾನದ ದವಾಗ್ನಿಯಂ
ಪೋಷಿಸಲ್. ಕಾಲ್ವಿಡಿದು ಬೇಡುವೆನ್ ನಿನ್ನನೀ
ರಣಮೇಧಮಂ ನಿಲಿಸು ನನ್ನನಾ ಲಕ್ಷ್ಮಣಂ
'ಶೂರ್ಪನಖಿ' ಎಂದು ಕೋಪಕೆ ಬಯ್ದನಂದದಂ

ನನ್ನಿಗೆಯ್ಯದಿರಿಂದು ನೀನ್. ಬಂದೆನಿಲ್ಲಿಗಾನ್
ನಿನ್ನಡಿಯೊಳೊಂದು ಭಿಕ್ಷೆಯ ಬೇಡಲದನೆನಗೆ
ನೀಡವೇಳ್ಕುಂ!''

ರಾವಣ: "ಭಿಕ್ಷೆ? ನಿನ್ನನ್ನಳಿಗೆ ಭಿಕ್ಷೆ?
ಇಂದಿನೀ ವೇಷದಿಂ ನೀಂ ಭಿಕ್ಷುಣಿಯೆ ದಿಟಂ!''

ಚಂದ್ರನಖಿ: "ನಾನ್ ಪೊತ್ತಿಸಿದ ಕಿಚ್ಚನಾನ್ ನಂದಿಸಲ್ಕೆನಗೆ
ನೀಡು ನಿನ್ನನುಮತಿಯ ಭಿಕ್ಷೆಯಂ''

ರಾವಣ: "ಚಂದ್ರನಖಿ,
ನಿನ್ನ ಕೈ ಪೊತ್ತಿಸಿತ್ತಾದೊಡಂ, ನಿನ್ನಳವನಾ
ಕಾಳ್ಗಿಚ್ಚು ಮೀರಿರ್ಪುದಿಂದು. ನೀನಾರಿಸಲ್
ಪೋದಡದು ಕೇಳ್ ನಿನ್ನನೊಳಕೊಳ್ಳುವುದೆ ದಿಟಂ!''

ಚಂದ್ರನಖಿ: "ನನಗದೇ ಪಥ್ಯಂ!''

ರಾವಣ: "ಅದೇನ್ ನಿನ್ನ ಬಗೆ? ಪೇಳ್.''

ಚಂದ್ರನಖಿ: "ಪೇಳಲೆನಗಾಸೆ, ಪೇಳಲ್ಕಂಜುತಿಹುದೆನ್ನ
ಜಿಹ್ವೆ.''

ರಾವಣ: "ನೀನೊಡವುಟ್ಟಿದಳ್.''

ಚಂದ್ರನಖಿ: "ಜನಕಕನ್ಯೆಯಂ.
ದಾಶರಥಿಗೊಪ್ಪಿಸುವುದೆನ್ನಾ ಮನೋರಥಂ!''

ರಾವಣ: "ಸತ್ಪಥಮೆ ದಲ್ ತಂಗೆ! ಸತ್ಪಥಮೆ ಅದು ದಿಟಂ,
ಹೆಂಬೇಡಿಗಳಿಗೆ, ಮೇಣ್ ಜೀವಗಳ್ಳಂಗೆ''

ಸಂಭಾಷಣೆ ಸ್ವಲ್ಪಕಾಲ ಮುಂದುವರಿಯುತ್ತದೆ. ಸಾರ್ವಭೌಮನು ಭವಿಷ್ಯದ ಭವ್ಯತಾ ದೃಶ್ಯವನ್ನು ದರ್ಶಿಸಿ ತನ್ನ ತಂಗೆಗೆ ಬಿತ್ತರಿಸಿದಾಗ ಚಂದ್ರನಖಿ ಆನಂದ ಬಾಷ್ಪಗಳನ್ನು ಕರೆಯುತ್ತಾ ನಮಿಸಿ, "ದಿಟಂ ನೀನ್ ಮಹಾಕವಿ ದಿಟಂ! ಜಗದ್ ರಂಗದೊಳ್, ಬರಿಕಲ್ಪನೆಯೊಳಲ್ತು ಕೃತಿಗಳಂ ಕೊರೆಯುವ ಮಹಚ್ಛಿಲ್ಪಿ ನೀಂ ದಿಟಂ!'' ಎಂಬುದಾಗಿ ಹಾಡಿ ಆನಂದಿಸುತ್ತಾಳೆ. ಅಂತೆಯೇ ದೈತ್ಯೇಶ್ವರನನ್ನು ಮಹಾಕವಿ, ಮಹಾಶಿಲ್ಪಿಯನ್ನಾಗಿ ಮಾಡಿದ ಕೀರ್ತಿಗೆ ತಾನೂ ಸಹ ಭಾಗಿನಿಯಾಗಿದ್ದಾಳೆ ಶೂರ್ಪನಖಿ—ಅಲ್ಲ—ಚಂದ್ರನಖಿ!

ಸಾ. ಶಿ. ಮರುಳಯ್ಯ

# ಭಾರತೀಯ ಆತ್ಮವಿಚಾರದಲ್ಲಿ ಸಮನ್ವಯದೃಷ್ಟಿ

ಭಾರತೀಯ ದರ್ಶನಗಳಲ್ಲಿ ಸ್ಪಷ್ಟವಾದ ಎರಡು ಶಾಖೆಗಳನ್ನು ನಾವು ಕಾಣುತ್ತೇವೆ. ಈ ಶಾಖೆಗಳು ಆತ್ಮಸ್ವರೂಪವನ್ನೇ ಮುಖ್ಯವಾಗಿ ಅವಲಂಬಿಸಿ ರೂಪುಗೊಂಡಿವೆ. ಭಾರತೀಯ ದರ್ಶನಗಳಿಗೆ ಆತ್ಮವಿಚಾರವೇ ಮುಖ್ಯವಾದುದರಿಂದ ಆತ್ಮವಿಚಾರವನ್ನು ಕುರಿತು ವಿವೇಚಿಸುವದು ಪ್ರತಿಯೊಬ್ಬ ದಾರ್ಶನಿಕನ ಆದ್ಯ ಕರ್ತವ್ಯವಾಗಿದೆ. ಅದಕ್ಕಾಗಿ ಜೈನ, ಬೌದ್ಧ, ವೈದಿಕ ಆಚಾರ್ಯರುಗಳೆಲ್ಲ ಆತ್ಮಜ್ಞಾನಕ್ಕೆ ಸಂಬಂಧಿಸಿದ ವಿವಿಧ ಗ್ರಂಥಗಳನ್ನು ರಚಿಸಿದ್ದಾರೆ. ತಮ್ಮ ತಮ್ಮ ಪೂರ್ವ ಪರಂಪರೆಯನ್ನು ಪುಷ್ಟಗೊಳಿಸಲಿಕ್ಕೂ ಹೊಸ ಯುಗದ ಅನ್ಯ ದಾರ್ಶನಿಕರ ಪ್ರಭಾವದಿಂದ ತಮ್ಮ ದಾರ್ಶನಿಕ ವಿಚಾರಗಳನ್ನು ಹೆಚ್ಚು ಸುಸಂಗತಗೊಳಿಸಲಿಕ್ಕೂ ಪ್ರತಿಯೊಬ್ಬರೂ ಪ್ರಯತ್ನಿಸಿದ್ದುಂಟು. ವಿವಿಧ ಆತ್ಮಗಳ ಅಸ್ತಿತ್ವವನ್ನು ಮನ್ನಿಸುವ ಅವೈದಿಕ ದರ್ಶನಗಳಾದ ಜೈನ, ಬೌದ್ಧ ದರ್ಶನಗಳಂತೂ ಆತ್ಮಜ್ಞಾನಕ್ಕೆ ಸಂಬಂಧಿಸಿದ ಹಲವು ಗ್ರಂಥಗಳನ್ನು ಭಾರತೀಯ ವಾಙ್ಮಯಕ್ಕೆ ಕಾಣಿಕೆಯಾಗಿ ಕೊಟ್ಟಿವೆ. ವೈದಿಕ ದರ್ಶನಗಳೆನಿಸಿಯೂ ಕೂಡ ಉಪನಿಷತ್ತುಗಳನ್ನು ಆಧಾರವೆಂದು ಸ್ವೀಕರಿಸದೆ, ಆತ್ಮನ ಅದ್ವೈತ ತತ್ವವನ್ನು ಒಪ್ಪದೆ, ಅವೈದಿಕ ಜೈನ ದರ್ಶನಕ್ಕೆ ಸಮಾನವಾದ ಆತ್ಮವನ್ನು ತತ್ವತಃ ಅನೇಕವೆಂದು ಮನ್ನಿಸುವ, ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವಮೀಮಾಂಸಾ ದರ್ಶನಗಳೂ ಕೂಡ ಈ ಯುಗದಲ್ಲಿ ತಮ್ಮ ಆತ್ಮಮೀಮಾಂಸವನ್ನು ಪ್ರಚುರಗೊಳಿಸಿವೆ. ಇವೆಲ್ಲವುಗಳಿಗೆ ವೇದಾಂತ ದರ್ಶನವು ಪ್ರತಿ ಪಕ್ಷದಲ್ಲಿ ನಿಂತು, ತನ್ನ ಅದ್ವೈತವಾದವನ್ನು ಮಂಡಿಸಬೇಕಾಯಿತು. ಇಂಥ ಮಹತ್‌ಕಾರ್ಯವನ್ನು ಅದ್ವೈತದರ್ಶನದ ಪರವಾಗಿ ಶ್ರೀ ಶಂಕರಾಚಾರ್ಯರು ಮಾಡಿದರು. ವೇದಾಂತದರ್ಶನಗಳ ಪ್ರಮುಖ ಆಚಾರ್ಯರು ಅವರಾಗಿದ್ದಾರೆ. ಹಾಗೆಯೇ ಆತ್ಮವಿಚಾರದಲ್ಲಿ ತಮ್ಮ ಪ್ರಕಾಂಡ ಪಾಂಡಿತ್ಯವನ್ನು ಪ್ರದರ್ಶಿಸಿದ ಶ್ರೀ ವೀರಸೇನ, ಜಿನಸೇನರು ಜೈನದರ್ಶನದ ನೇತೃಗಳಾಗಿದ್ದಾರೆ. ಬೌದ್ಧರ ವಸುಬಂಧು, ದಿಙ್ನಾಗರಂಥ ವಿದ್ವಾಂಸರನ್ನೂ ಇಲ್ಲಿ ಗಮನಿಸಬೇಕು. ಈ ಯುಗದ ಆತ್ಮವಿಚಾರಕ್ಕೆ ಅವರು ಸಲ್ಲಿಸಿದ ಸೇವೆಯು ಅನುಪಮವಾಗಿದೆ. ಇವರೆಲ್ಲರ ವಿಚಾರಗಳನ್ನು ಈ ಯುಗದಲ್ಲಿ ಬಾಳದಿದ್ದರೂ ಭಾರತೀಯ ಆತ್ಮವಿಚಾರವನ್ನು ವಿವೇಚಿಸಿದ ಉಳಿದ ದಾರ್ಶನಿಕರ ವಿಚಾರಗಳನ್ನೂ ಸ್ವೀಕರಿಸಿ, ಇಲ್ಲಿ ಆತ್ಮವಿಚಾರವನ್ನು ಸ್ಥೂಲವಾಗಿ ಮಂಡಿಸಲಾಗುತ್ತಿದೆ. ಇದು ಸ್ವಾಭಾವಿಕವಾಗಿಯೇ, ಹಿಂದಿನ ಯುಗಗಳ ಆತ್ಮವಿಚಾರದ ವಿಕಸಿತ ರೂಪವನ್ನು ಚಿತ್ರಿಸುತ್ತದೆ.

ವೇದಕಾಲದಿಂದ ಉಪನಿಷತ್ತುಗಳವರೆಗೆ ವೈದಿಕರು ಹೆಚ್ಚಾಗಿ ಅದ್ವೈತ ತತ್ವವನ್ನೇ ಸ್ವೀಕರಿಸಿದ್ದರು. ಮುಂದೆ ಉಪನಿಷತ್ತುಗಳ ಆಧಾರದಿಂದ ಬ್ರಹ್ಮಸೂತ್ರದಲ್ಲಿ ವೇದಾಂತ ದರ್ಶನದ ವ್ಯವಸ್ಥೆಯನ್ನು ಮಾಡುವಾಗಲೂ ಅದ್ವೈತ ಸಿದ್ಧಾಂತವನ್ನೇ ಪುಷ್ಟಗೊಳಿಸಲಾಯಿತು. ಆದರೆ ಪ್ರತ್ಯಕ್ಷ ವಿಶ್ವದಲ್ಲಿ ಅನೇಕ ಜೀವಗಳನ್ನು ಕಾಣುವಾಗ ಜಗತ್ತಿನಲ್ಲಿ ಆತ್ಮವಸ್ತುವು ಒಂದೇ ಆಗಿದೆಯೆಂದು ಪ್ರತಿಪಾದಿಸುವದು ಸಮಂಜಸವೆನಿಸದೆ ಹೋಯಿತು. ಆದರಿಂದ ತತ್ವತಃ ಒಂದೇ ಆತ್ಮವನ್ನು ಸ್ವೀಕರಿಸಿಯೂ ಜಗತ್ತಿನಲ್ಲಿ ದೃಷ್ಟಿಗೋಚರವಾಗುವ ವಿವಿಧ ಜೀವಗಳ ಅಸ್ತಿತ್ವವನ್ನು ಮನ್ನಿಸುವಂಥ ವ್ಯಾಖ್ಯಾನವನ್ನು ಬ್ರಹ್ಮಸೂತ್ರಕ್ಕೆ ಬರೆಯಬೇಕಾಯಿತು, ಇದರಲ್ಲಿ ಜೀವಗಳಿಗೂ ಮೂಲ ಆತ್ಮನಿಗೂ ಇರುವ ಸಂಬಂಧವನ್ನು ವಿವರಿಸಬೇಕಾಯಿತು. ಇಂಥ ಕಾರ್ಯವನ್ನು ಬ್ರಹ್ಮಸೂತ್ರದ ವ್ಯಾಖ್ಯಾನದಲ್ಲಿ ಶಂಕರಾಚಾರ್ಯರು ಮಾಡಿದರು. ಹೀಗೆ ಮಾಡುವದೆಂದರೆ ಆತ್ಮನ ಏಕತ್ವ ವಿಚಾರವನ್ನೂ ಅನೇಕತ್ವ ವಿಚಾರವನ್ನೂ

ಸಮನ್ವಯಿಸುವ ಉಪಕ್ರಮವಾಗಿದೆ. ಈ ಉಪಕ್ರಮವನ್ನು ಶಂಕರಾಚಾರ್ಯರನ್ನು ಮೊದಲು ಮಾಡಿಕೊಂಡು, ಅನೇಕ ಜನ ವೈದಿಕ ವಿದ್ವಾಂಸರು ಮುಂದರಿಸಿದರು. ಇವರೆಲ್ಲರ ವಿವರಣೆಗಳೂ ವ್ಯಾಖ್ಯಾನಗಳೂ ಭಿನ್ನಭಿನ್ನವಾಗಿರುವದು ಸಹಜವಾಗಿದೆ. ಅದಕ್ಕಾಗಿ ವೇದಾಂತ ದರ್ಶನದಲ್ಲಿ ಅನೇಕ ಪರಂಪರೆಗಳೂ ಉಂಟಾದವು. ಇವುಗಳೆಲ್ಲದರ ಮೇಲೆಯೂ ಅವೈದಿಕ ದರ್ಶನಗಳ ಅನೇಕಾತ್ಮಕವಾದ ಪ್ರಭಾವವನ್ನಂತೂ ನಾವು ಸ್ವೀಕರಿಸಬೇಕಾಗುವದು. ಅಲ್ಲದೆ ವೈದಿಕ ದರ್ಶನಗಳಲ್ಲಿಯೂ ಹಲವು ದರ್ಶನಗಳು ಅನೇಕ ಆತ್ಮಗಳನ್ನು ಸ್ವೀಕರಿಸುತ್ತವೆ. ಇವುಗಳ ಮೇಲೆ ವೇದಬಾಹ್ಯ ದರ್ಶನಗಳ ಪ್ರಭಾವವಿದ್ದುದು ಕಂಡುಬರುತ್ತದೆ. ಇಂಥ ಅವೈದಿಕ ದರ್ಶನಗಳಲ್ಲಿ ಪ್ರಾಚೀನ ಸಾಂಖ್ಯ ಹಾಗೂ ಜೈನ ದರ್ಶನಗಳಾಗಿದ್ದವೆಂದರೆ ಆಶ್ಚರ್ಯಪಡುವ ಕಾರಣವಿಲ್ಲ. ಐತಿಹಾಸಿಕ ಸಂಗತಿಗಳ ಕಲ್ಪನೆ ಇದ್ದವರಿಗೆ ಪ್ರಾಚೀನ ಕಾಲದಲ್ಲಿ ಸಾಂಖ್ಯವು ಅವೈದಿಕ ದರ್ಶನಗಳಲ್ಲಿ ಒಂದಾಗಿತ್ತೆಂಬುದು ಸುಪರಿಚಿತವಾಗಿದೆ. ಮುಂದೆ ಅದಕ್ಕೆ ವೈದಿಕ ರೂಪವನ್ನು ಕೊಡಲಾಯಿತು.

ಶ್ರೀಶಂಕರಾಚಾರ್ಯರು, ಮೂಲದಲ್ಲಿ ಬ್ರಹ್ಮವು ಒಂದೇ ಆಗಿದೆ; ಅನಾದಿಯಾದ ಅವಿದ್ಯೆಯ ಕಾರಣದಿಂದ ಅದು ಅನೇಕ ಜೀವಗಳ ರೂಪದಲ್ಲಿ ದೃಷ್ಟಿಗೋಚರವಾಗುತ್ತದೆ—ಎಂದು ಹೇಳುತ್ತಾರೆ. ಈ ಹೇಳಿಕೆಯನ್ನು ಸಮರ್ಥಿಸುವದಕ್ಕಾಗಿ 'ಮಾಯಾವಾದ'ವನ್ನು ಕಲ್ಪಿಸುತ್ತಾರೆ. ಉದಾಹರಣೆಗೆಂದು ಒಂದು ಹಗ್ಗವು ನಮ್ಮ ಅಜ್ಞಾನದಿಂದ ಹಾವಿನಂತೆ ಕಾಣುತ್ತದೆ. ಹಾವು ಹಗ್ಗವಾಗಲಾರದು, ಹಗ್ಗವು ಹಾವಾಗಲಾರದು. ಆದರೆ ಹಗ್ಗದಲ್ಲಿ ಹಾವಿನ ಭಾಸವಾಗುತ್ತದೆ, ಹಾಗೆಯೇ ಬ್ರಹ್ಮವು ಅನೇಕ ಜೀವಗಳ ರೂಪದಲ್ಲಿ ಬಂದು ಜನ್ಮವೆತ್ತದು. ಜೀವಗಳ ಜನ್ಮಕ್ಕೂ ಕಾರಣವಾಗದು– ಆದರೂ ಅನೇಕ ಜೀವಗಳ ರೂಪದಲ್ಲಿ ನಮಗೆ ಗೋಚರವಾಗುತ್ತದೆ. ಇದಕ್ಕೆ ಅವಿದ್ಯೆಯೇ ಕಾರಣವಾಗಿದೆ. ಈ ಅವಿದ್ಯೆಗೇನೇ 'ಮಾಯೆ' ಎಂದು ಹೆಸರು. ಅದಕ್ಕಾಗಿ ಅನೇಕ ಜೀವಗಳು ಮಾಯಾರೂಪವಾಗಿವೆ. ಅವು ಮಿಥ್ಯವಾಗಿವೆ. ಜೀವಗಳ ಅಜ್ಞಾನವು ದೂರವಾದಾಗ ಅವು ಬ್ರಹ್ಮಾನುಭೂತಿಯನ್ನು ಹೊಂದುತ್ತವೆ. ಅಂದರೆ ಅವಿದ್ಯೆಯು ಅಳಿದಾಗ ಬ್ರಹ್ಮತಾದಾತ್ಮ್ಯವು ಸಿದ್ಧಿಸುತ್ತದೆ. ಜೀವಭಾವವು ನಷ್ಟವಾಗಿ ಬ್ರಹ್ಮಭಾವವು ಲಭಿಸುತ್ತದೆ. ಈ ದೃಷ್ಟಿಯಲ್ಲಿ ವಿಶ್ವವೆಲ್ಲ ಮಿಥ್ಯವಾಗಿದೆ. ಬ್ರಹ್ಮವೊಂದೇ ಸತ್ಯವಾಗಿದೆ.

ಜೈನ ದಾರ್ಶನಿಕರ ಆತ್ಮವಿಚಾರವು ಇದಕ್ಕಿಂತ ಭಿನ್ನವಾಗಿದೆ. ಆತ್ಮಗಳು ಲೋಕದಲ್ಲಿ ಅಸಂಖ್ಯಾತವಾಗಿವೆ. ನಾವು ಸುತ್ತಲೂ ಕಾಣುವ ಜೀವಗಳು ಕರ್ಮವೆಂಬ ದ್ರವ್ಯದಲ್ಲಿ ಸೇರಿದ ಆತ್ಮನ ವಿವಿಧ ಅವಸ್ಥೆಗಳಾಗಿವೆ. ಇವು ಶುದ್ಧ ಆತ್ಮಗಳಲ್ಲ. ಈ ಕರ್ಮವೆಂಬುದೊಂದು ಪುದ್ಗಲದ ಅವಸ್ಥೆಯಾಗಿದೆ. ಇದು ಆತ್ಮನನ್ನು ನಾನಾವಿಧ ಸಂಸಾರದಲ್ಲಿ ಸುತ್ತಾಡಿಸುವದು. ಇದೇ ಪುನರ್ಜನ್ಮಕ್ಕೂ ಕಾರಣವಾಗುವುದು. ಈ ಕರ್ಮಬಂಧನದಿಂದ ಬಿಡುಗಡೆಯನ್ನು ಹೊಂದಿದ ಆತ್ಮನೇ ಮುಕ್ತನು. ಇಂಥ ಮುಕ್ತಾತ್ಮರು—ಸಿದ್ಧರು—ಸಹ ಹಲವರಿದ್ದಾರೆ. ಅವರು ಲೋಕಾಗ್ರದ 'ಸಿದ್ಧಶಿಲೆ'ಯಲ್ಲಿ ನಿರಂತರವಾಗಿ ವಾಸಿಸುವರು. ಈ ಶುದ್ಧಾತ್ಮವು ಚೈತನ್ಯಲಕ್ಷಣವುಳ್ಳದ್ದಾಗಿರುತ್ತದೆ. ಅಮೂರ್ತವಾಗಿರುತ್ತದೆ. ಅಲ್ಲದೆ ಶುಭಕರ್ಮಗಳ ಕರ್ತೃವೂ ತನಗೆ ಪ್ರಾಪ್ತವಾದ ದೇಹದ ಪರಿಮಾಣವನ್ನು ಹೊಂದುವ ಸಾಮರ್ಥ್ಯವುಳ್ಳುದೂ ತನ್ನ ಸ್ವಾಭಾವಿಕವಾದ ಗುಣಗಳಿಂದ ಮೇಲು ಮೇಲಕ್ಕೆ ಹೋಗುವ ಲಕ್ಷಣವುಳ್ಳುದೂ ಆಗಿರುತ್ತದೆ.[1] ಇಂಥ ಆತ್ಮಗಳು ಪರಿಶುದ್ಧಾವಸ್ಥೆಯಲ್ಲಿ ಪರಮಾತ್ಮಾವಸ್ಥೆಯಲ್ಲಿ ಕೂಡ ಅನೇಕವಾಗಿರುತ್ತವೆ. ಈ ಉಚ್ಚ ಅವಸ್ಥೆಯನ್ನು ಪಡೆದ ಸಿದ್ಧಾತ್ಮರು ತಿರುಗಿ ಲೋಕದಲ್ಲಿ ಜನ್ಮವೆತ್ತಲಾರರು. ಇವರೆಲ್ಲರು ತಮ್ಮ ತಮ್ಮ ಪರಿಶುದ್ಧಿಯನ್ನು ತಾವೇ ತಪಸ್ಸು ಸಾಧನೆಗಳಿಂದ ಸಾಧಿಸಿಕೊಂಡ

---

1 "ಜೀವೋ ಉವ ಜಗನು ಓ ಅಮುತ್ತಿ ಕತ್ತಾ ಸದೇಹ ಪರಿಮಾಣೊ"
ಭೊತ್ತಾ ಸಂಸಾರತ್ಥೋ ಸಿದ್ಧೋಸೋ ವಿಸ್ಸಸೋದ್ಧಗಈ || ೨ ||

—ನೇಮಿಚಂದ್ರ : ದ್ರವ್ಯ ಸಂಗ್ರಹ

ವರು. ಯಾವ ಬಾಹ್ಯಶಕ್ತಿಯ ದೇವರ—ಕೃಪೆಯಾಗಲಿ, ಸಹಾಯವಾಗಲಿ ಇವರಿಗೆ ಬೇಕಾಗಿಲ್ಲ. ಅಂಥ ಸರ್ವಶಕ್ತಿಮಾನ್ ಹಾಗೂ ಕರ್ತೃತ್ವದ ಸಾಮರ್ಥ್ಯವುಳ್ಳ ಯಾವ ದೇವತ್ವವನ್ನೂ ಜೈನದರ್ಶನವು ಸ್ವೀಕರಿಸುವದಿಲ್ಲ. ಸ್ವಾತಂತ್ರ್ಯ, ಸಮತೆ, ಸರ್ವೋದಯಗಳೇ ಅದರ ಲಕ್ಷಣಗಳಾಗಿವೆ. ಈ ಲಕ್ಷಣಕ್ಕೆ ಅನುಸರಿಸಿ ಇದರ ಆತ್ಮವಿಚಾರವು ಅರಳಿದೆ.

ಬೌದ್ಧದರ್ಶನದಲ್ಲಿ ಅನಾದಿ ಅನಂತ ಆತ್ಮತತ್ತ್ವಕ್ಕೆ ಸ್ಥಾನವೇ ಇಲ್ಲ. ಇದು ಅನಾತ್ಮವಾದಿ ದರ್ಶನವಾಗಿದೆ. ಅಂದರೆ ಬೌದ್ಧರು ಆತ್ಮವನ್ನೇ ಸ್ವೀಕರಿಸುವದಿಲ್ಲವೆಂದಲ್ಲ. ಆದರೆ ವೇದಾಂತ ದರ್ಶನದಂತೆ ವಿಶ್ವದ ಮೂಲದಲ್ಲಿ ಒಂದು ಶಾಶ್ವತವಾದ– ಆತ್ಮವು—ಬ್ರಹ್ಮತತ್ತ್ವವಿದೆಯೆಂದು ಮಾತ್ರ ಒಪ್ಪುವದಿಲ್ಲ. ಉಪನಿಷತ್ತುಗಳ ಆತ್ಮವಿದ್ಯೆಗೂ ಬೌದ್ಧರ ಆತ್ಮವಿಚಾರಕ್ಕೂ ಬಹಳ ಅಂತರವಿದೆ. ಬೌದ್ಧಧರ್ಮದ ಮೂಲವನ್ನು ಉಪನಿಷತ್ತುಗಳಲ್ಲಿ ಶೋಧಿಸುವುದು ಕೇವಲ ಒಂದು ಭ್ರಾಂತಿಯೆನಿಸುವುದು. ವೇದಾಂತದ ಮನೋಮಯ ಆತ್ಮಕ್ಕೂ ಬೌದ್ಧರ ಪುದ್ಗಲಕ್ಕೂ (ದೇಹಧಾರಿ ಜೀವ, ಚಿತ್ತ ಎಂದೂ ಬೌದ್ಧರು ಹೇಳುವರು.) ತುಲನೆ ಮಾಡಿದರೆ ಮೂಲದಲ್ಲಿಯೇ ಅಂತರವಿದೆ. ಬೌದ್ಧರಲ್ಲಿ ಮನವು ಅಂತಃಕರಣವಾಗಿದೆ. ಅದು ಚಿತ್ತೋತ್ಪಾದನಕ್ಕೆ ಇಂದ್ರಿಯಗಳಂತೆ ಕಾರಣವಾಗಿದೆ. ಆದರಿಂದ ಮನೋಮಯ ಆತ್ಮಕ್ಕೆ ಇದು ಸರಿಹೊಂದಲಾರದು. ವಿಜ್ಞಾನಾತ್ಮದೊಡನೆ ಸ್ವಲ್ಪಮಟ್ಟಿಗೆ ಮಾತ್ರ ಹೋಲಿಸಬಹುದು. ವಿಜ್ಞಾನಾತ್ಮವು ಮೃತ್ಯುವಿನೊಡನೆ ಲೀನವಾಗಿ ಹೋಗುವದು. ಮುಂದೆ ಮತ್ತೆ ಪುನರ್ಭವದಲ್ಲಿ ಸಂವೇದನ ಶೀಲವಾಗಿ ಜಾಗೃತಗೊಳ್ಳುವದು. ಇದರಂತೆಯೇ ಬೌದ್ಧರ ಪುದ್ಗಲವೂ ಮೃತ್ಯುವಿನ ಅವಸ್ಥೆಯಲ್ಲಿ ನಿರೋಧಗೊಳ್ಳುವುದು. ಆದರೆ ಮೃತ್ಯುವಿನ ತರುವಾಯ ಮತ್ತೆ ಪುದ್ಗಲವು ಉತ್ಪನ್ನವಾಗುವದು. ವಿಜ್ಞಾನಾತ್ಮಕ್ಕೂ ಈ ಪುದ್ಗಲಕ್ಕೂ ಈ ದೃಷ್ಟಿಯಿಂದ ಸ್ವಲ್ಪ ಹೋಲಿಕೆಯಿದ್ದರೂ ತತ್ವತಃ ಅಂತರವಿದೆ: ವೇದಾಂತದ ವಿಜ್ಞಾನಾತ್ಮವು ಪುನಃ ಸಂವೇದನ ಶೀಲವಾದಾಗ ಮೊದಲಿನದೇ ಇರುತ್ತದೆ. ಬೌದ್ಧರ ಪುದ್ಗಲವು ಹಾಗಲ್ಲ. ಮರಣದ ನಂತರ ಉತ್ಪನ್ನವಾಗುವ ಪುದ್ಗಲವು ಮೊದಲಿನದೇ ಎಂದು ಬೌದ್ಧರು ಸ್ವೀಕರಿಸುವದಿಲ್ಲ. ಹೊಸದು ಎಂದೂ ನಿಶ್ಚಿತವಾಗಿ ಹೇಳುವದಿಲ್ಲ. ಬೌದ್ಧದರ್ಶನವು ಇಷ್ಟೇ ಹೇಳುವದು—ಮೊದಲು ಚಿತ್ತವಿತ್ತು; ಅದಕ್ಕಾಗಿ ಎರಡನೆಯ ಚಿತ್ತವು ಜನಿಸಿತು. ಎರಡನೆಯದಾಗಿ ಜನಿಸುವಂಥದು ಮೊದಲಿನದೂ ಅಲ್ಲ. ಅದರಿಂದ ಭಿನ್ನವೂ ಅಲ್ಲ. ಆದರೆ ಅದರ ಸಂತತಿಯಲ್ಲಿ ಅದು ಇದೆ. ಬೌದ್ಧರಲ್ಲಿ ಜನ್ಮ, ಮರಣ, ಮುಪ್ಪುಗಳೆಲ್ಲ ಇವೆ. ಇವುಗಳಿಗೆಲ್ಲ ಸ್ಥಿರವಾದ ಒಂದು ಆಧಾರವಿಲ್ಲ[2] ಇವರ ಅಭಿಪ್ರಾಯದಲ್ಲಿ ಆತ್ಮವು ಶರೀರದಿಂದ ಅತ್ಯಂತ ಭಿನ್ನವೂ ಅಲ್ಲ. ಅಭಿನ್ನವೂ ಅಲ್ಲ. ಜನ್ಮ, ಮರಣ, ಮುಕ್ತ ಅವಸ್ಥೆಗಳೆಲ್ಲ ಇದ್ದರೂ ಅವು ನಿತ್ಯವಲ್ಲ; ಅವಸ್ಥೆಗಳು. ಈ ಅವಸ್ಥೆಗಳು ಪೂರ್ವದ ಕಾರಣ ಪರಂಪರೆಯಿಂದ ನಿರ್ಮಾಣವಾಗುತ್ತವೆ. ಮುಂದೆ ನವೀನ ಕಾರಣಗಳನ್ನು ಉತ್ಪನ್ನಗೊಳಿಸಿ ನಷ್ಟಗೊಳ್ಳುತ್ತವೆ. ಹೀಗೆ ಸಂಸಾರಚಕ್ರವು ಸಾಗಿದೆ. ಯಾವ ದೇವರೂ ಅಥವಾ ಬ್ರಹ್ಮನೂ ಈ ಸಂಸಾರದ ಕರ್ತೃವಾಗಿಲ್ಲ, ಹೇತು ಸಮುದಾಯದ ಆಶ್ರಯವನ್ನು ತಕ್ಕೊಂಡು ಶುದ್ಧ ಧರ್ಮಗಳೇ ಪ್ರವೃತ್ತಿಸುತ್ತಿವೆ. ಆದರಿಂದ ಜನ್ಮಾಂತರದೊಳಗಿನ ಚಿತ್ತ ಸಂಗತಿಯ ವಿಷಯದಲ್ಲಿ ಸ್ವತಃ ಬುದ್ಧಘೋಷನು ಹೀಗೆ ಹೇಳುತ್ತಾನೆ:—ಪೂರ್ವಚಿತ್ತವು ನಾಶವಾಯಿತು. ಇದರಿಂದ ನವೀನ ಚಿತ್ತವು ಉದ್ಭವಿಸಿತು.[3] ಅದರಿಂದ ಬೌದ್ಧರಲ್ಲಿ ಪುದ್ಗಲವು

---

[2] ಸಂಯುತ್ತ ನಿಕಾಯ ೧೨-೨೬

"ನ ಹೆತ್ಥ ದೇವೊ ಬ್ರಹ್ಮಾ ವಾ ಸಂಸಾರಸ್ಸತ್ಥಿ ಕಾರತೊ ||
ಸುದ್ಧ ಧಮ್ಮ ಪವತಂತಿ ಹೇತು ಸಂಭಾರ ಪಚ್ಚಯಾ" || ೧೯-೨೦

ಅಂಗುತ್ತರನಿಕಾಯ, 3.

[3] ತಥೇವ ಪರಿಸಂಧಿಹ್ಮಿ ವತ್ತತೆ ಚಿತ್ತಸಂತತಿ
ಪುರಿಮಂ ಭಜ್ಜತಿ ಚಿತ್ತಂ ಪಚ್ಛಿಮಂ ಜಾಯತೊ ತತೊ || ೧೯-೨೩ ||

ವಿಶುದ್ಧಿಮಾರ್ಗ.

ಕ್ಷಣಿಕವೂ ಅನೇಕವೂ ಆಗಿದೆ; ಉಪನಿಷತ್ತುಗಳ ಆತ್ಮವಿದ್ಯೆಯಿಂದ ತೀರ ಭಿನ್ನವಾಗಿದೆ. ವೇದಾಂತ ದರ್ಶನವು ಅದ್ವೈತ ಬ್ರಹ್ಮ ಅಥವಾ ಪರಮಾತ್ಮನನ್ನು ಪ್ರಮಾಣವೆಂದು ಸ್ವೀಕರಿಸಿ, ಅನೇಕ ಜೀವಗಳ ಉತ್ಪತ್ತಿಯನ್ನು ಸಿದ್ಧಮಾಡುವಂತೆ—ಶೈವರೂ ಕೂಡ ಅದ್ವೈತ ಮಾರ್ಗವನ್ನು ಸ್ವೀಕರಿಸುತ್ತಾರೆ. ಇವರು ಪರಬ್ರಹ್ಮನ ಸ್ಥಾನದಲ್ಲಿ 'ಅನುತ್ತರ' ಎಂಬ ಹೆಸರಿನ ಒಂದು ತತ್ತ್ವನನ್ನು ಸ್ವೀಕರಿಸುತ್ತಾರೆ: ಇದು ಸರ್ವಶಕ್ತಿಮಾನ್‌ವಾದ ನಿತ್ಯಪದಾರ್ಥವಾಗಿದೆ. ಇದಕ್ಕೇನೇ ಶಿವ, ಮಹೇಶ್ವರ ಎಂದು ಹೇಳಲಾಗುತ್ತದೆ. ಈ ಶಿವನ ಇಚ್ಛೆಯಿಂದ, ಶಿವನಿಂದಲೇ ಜೀವ ಮತ್ತು ಜಗತ್ತುಗಳು, ಪ್ರಕಟವಾಗುತ್ತವೆ. ಅದರಿಂದ ಈ ಎರಡೂ ಪದಾರ್ಥಗಳು ಮಿಥ್ಯವಲ್ಲ, ಸತ್ಯವಾಗಿವೆ.

ಇದರಂತೆಯೇ ರಾಮಾನುಜಾಚಾರ್ಯರ ಅದ್ವೈತವೂ ಒಂದು ವಿಶಿಷ್ಟ ಮಾದರಿಯದಾಗಿದೆ. ಇವರ ಮತಕ್ಕೆ ಅನುಸರಿಸಿ ಜೀವ ಅನೇಕವಾಗಿವೆ, ನಿತ್ಯವಾಗಿವೆ, ಅಣು ಪರಿಮಾಣವಾಗಿವೆ, ಜೀವ, ಜಗತ್ತುಗಳೆರಡೂ ಪರಮಾತ್ಮನ ಕಾರ್ಯಗಳಾಗಿವೆ—ಪರಿಣಾಮವಾಗಿವೆ. ಆದರಿಂದ ಇವೆರಡೂ ಮಿಥ್ಯವಲ್ಲ; ಸತ್ಯವಾಗಿವೆ; ಮುಕ್ತಾವಸ್ಥೆಯಲ್ಲಿ ಜೀವವು ಪರಮಾತ್ಮನಿಗೆ ಸಮನಾಗಿ ಅವನ ಹತ್ತಿರವೇ ನಿಲ್ಲುವುದು: ಇಲ್ಲಿ ಜೀವ, ದೇವರು ಯಾವಾಗಲೂ ಭಿನ್ನವಾಗಿದ್ದಾರೆ. ಇವರಲ್ಲಿ ಕಾರ್ಯಕಾರಣ ಸಂಬಂಧವಿದೆ: ಈ ಸಂಬಂಧವನ್ನು ಬಿಡಿಸಲಿಕ್ಕೆ ಬರುವದಿಲ್ಲ—ವಾದುದರಿಂದ ಇವು ಅದ್ವೈತವಾಗಿವೆ. ಆದರೂ ಇದೊಂದು ವಿಶಿಷ್ಟಾದ್ವೈತವಾಗಿದೆ.

ಇನ್ನೂ ಮುಂದೆ ಹೋಗಿ, ಮಧ್ವಾಚಾರ್ಯರು ಉಪನಿಷತ್ತುಗಳ ಅದ್ವೈತ ಪ್ರವೃತ್ತಿಯನ್ನೇ ಬದಲಿಸಿದರು. ಇವರು ಜೀವಗಳು ಅನೇಕವಾಗಿವೆ; ನಿತ್ಯವಾಗಿವೆ, ಅಣುಪರಿಮಾಣವಾಗಿವೆ—ಎಂದು ಸ್ವೀಕರಿಸುವರು. ಬ್ರಹ್ಮನಂತೆ ಜೀವಗಳೂ ಸತ್ಯವಾಗಿದೆ. ಆದರೆ ಪರಮಾತ್ಮನ ಅಧೀನದಲ್ಲಿವೆ. ಜೀವಗಳು ಪರಸ್ಪರ ಭಿನ್ನವಾಗಿದ್ದು, ಈಶ್ವರನಿಂದಲೂ ಜೀವಗಳೆಲ್ಲ ಭಿನ್ನವಾಗಿವೆ. ಅದರಿಂದ ಇದು ದ್ವೈತಸಿದ್ಧಾಂತವಾಗಿದೆ.

ಪ್ರಾಚೀನ ಕಾಲದಿಂದ ಭಾರತದಲ್ಲಿ ಅನೇಕಾತ್ಮವಾದವನ್ನು ಪ್ರತಿಪಾದಿಸುವ ದರ್ಶನಗಳು ಇದ್ದುವು. ಅದರಂತೆ ಅದ್ವೈತವನ್ನು ಪ್ರತಿಪಾದಿಸುವ ವೇದಾಂತವೂ ಪ್ರಚುರವಾಗಿತ್ತು. ಒಂದು ಶ್ರಮಣಪರಂಪರೆಯ ಆಸ್ತಿಯಾದರೆ ಇನ್ನೊಂದು ವೈದಿಕಪರಂಪರೆಯ ಸ್ವತ್ತಾಗಿದೆ. ಮುಂದೆ ಇವೆರಡು, ವಿಚಾರಕ್ರಮಗಳು ಒಂದಾಗಲು ಯತ್ನಿಸಿ ಭಾರತೀಯ ಅಧ್ಯಾತ್ಮ ವಿದ್ಯೆಯಲ್ಲಿ ಒಂದು ಸಾಮರಸ್ಯವು ರೂಪುಗೊಂಡಿತು. ಇದೇ ಭಾರತೀಯ ಸಂಸ್ಕೃತಿಯ ವಿಕಾಸ ಶೀಲತೆಯ ಲಕ್ಷಣವಾಗಿದೆ. ಅಧ್ಯಾತ್ಮವಿಚಾರದ ಸಮನ್ವಯವಾಗಿದೆ, ಆತ್ಮವಿಚಾರದಲ್ಲಿ ಸಮನ್ವಯ ದೃಷ್ಟಿಯಾಗಿದೆ.

ಮಿರ್ಜಿ ಅಣ್ಣಾರಾಯ

# ವಿಂಡ್ಸರ್ ಊರಿನ ವಿನೋದಪ್ರಿಯ ಪತ್ನಿಯರು

ಎಲಿಸಬೆತ್ ರಾಣಿಯು "ಹೆನ್ರಿ IV' (ಭಾಗ 1 ಮತ್ತು 2) ನಾಟಕದಲ್ಲಿ ಬರುವ ಫಾಲ್‌ಸ್ಟಾಫ್‌ನನ್ನು ನೋಡಿ ಆನಂದಪಟ್ಟು, 'ಈ ಫಾಲ್‌ಸ್ಟಾಫ್ ಪ್ರಣಯಪಾಶಕ್ಕೆ ಸಿಕ್ಕಿಬಿದ್ದದ್ದನ್ನು ನೋಡಬೇಕು. ಅದನ್ನು ಚಿತ್ರಿಸಿ ಒಂದು ನಾಟಕವನ್ನು ಬರಿ' ಎಂದು ಆಜ್ಞಾಪಿಸಿದಳಂತೆ. ಆಕೆಯ ಇಷ್ಟಾನುಸಾರ ಷೇಕ್ಸ್‌ಪಿಯರ್ ಎರಡೇ ವಾರಗಳಲ್ಲಿ ಈ ನಾಟಕವನ್ನು ಬರೆದನಂತೆ. ಈ ಕಥೆಯನ್ನು ಜಾನ್ ಡೆನಿಸ್ ಎಂಬವನು 1702 ರಲ್ಲಿ—ಅಂದರೆ ಈ ನಾಟಕ ಮೊದಲಬಾರಿ ಆಚ್ಚಾಗಿ ಒಂದು ಶತಮಾನ ಕಳೆದಮೇಲೆ—ಬರೆದಿದ್ದಾನೆ. ಇದನ್ನು ಸಮರ್ಥಿಸಲು ಸಮಕಾಲೀನ ಆಧಾರವೇನೂ ಸಿಕ್ಕಿಲ್ಲ. ಈ ನಾಟಕದ ಕ್ರಿಯೆಯೆಲ್ಲಾ ನಡೆಯುವುದು ವಿಂಡ್ಸರ್‌ನಲ್ಲಿ ಅಥವಾ ಅದರ ಹತ್ತಿರದಲ್ಲಿ. ಅಲ್ಲಿ ಇಂಗ್ಲೆಂಡಿನ ದೊರೆಗಳ 'ವಿಂಡ್ಸರ್ ಕ್ಯಾಸಲ್' ಇದೆ. 'ನೈಟ್ ಆಫ್ ದಿ ಗಾರ್ಟರ್' (Knight of the Garter) ಎಂಬ ದೊಡ್ಡ ಪ್ರಶಸ್ತಿಯನ್ನು ದಾನಮಾಡುತ್ತಿದ್ದದ್ದು ಅಲ್ಲಿಯೇ. ಕೌಂಟ್ ಮಂಪೆಲ್‌ಗಾರ್ಟ್ (ಅನಂತರ ವರ್ಟೆಂಬರ್ಗ್‌ನ ಡ್ಯೂಕ್) ಎಂಬ ಜರ್ಮನ್ ಮಾಂಡಲಿಕನಿಗೆ ಈ ಪ್ರಶಸ್ತಿಯನ್ನು ಕೊಡಬಹುದೆಂದು 1597 ರಲ್ಲಿ ರಾಣಿ ನಿಶ್ಚಯಿಸಿದಳು. ಈ ಪ್ರಶಸ್ತಿಯ ಮತ್ತು ಮಂಪೆಲ್‌ಗಾರ್ಟ್‌ನ ಪ್ರಸ್ತಾಪ—ತೀರ ಸ್ಪಷ್ಟವಾಗಿಯಲ್ಲ—ಈ ನಾಟಕದಲ್ಲಿ ಬಂದಿದೆ. ರಾಣಿಯ ಮತ್ತು ಆಕೆಯ ಆಸ್ಥಾನದ ಪ್ರಶಂಸೆಯೂ ನಾಟಕದಲ್ಲಿ ಕಂಡುಬರುತ್ತದೆ. ಇದು ಆತುರದಲ್ಲಿ ಬರೆದ ನಾಟಕ ಎನ್ನುವುದಕ್ಕೂ ಅದರಲ್ಲಿ ಆಧಾರ ಸಿಕ್ಕುತ್ತದೆ. ಇದನ್ನೆಲ್ಲಾ ನೋಡಿದರೆ ಡೆನಿಸ್ ಹೇಳಿರುವ ಕಥೆಯನ್ನು ನಂಬುವುದು ಸಾಧ್ಯ.

ಕಥಾಸಾರಾಂಶ:—ನ್ಯಾಯಾಧೀಶನಾದ ಮಾಸ್ಟರ್ ಷ್ಯಾಲೊ, ಅವನ ಬಂಧು ಸ್ಲೆಂಡರ್, ಮತ್ತು ಪಾದ್ರಿ ಸರ್ ಹ್ಯೂ ಎವನ್ಸ್ (ಇವನು ವೇಲ್ಸ್‌ನವನು)—ಇವರೆಲ್ಲರೂ ಮಾಸ್ಟರ್ ಪೇಜ್‌ನ ಮನೆಗೆ ಹೋಗುತ್ತಿದ್ದರು. ಷ್ಯಾಲೋವಿಗೆ ಸರ್ ಜಾನ್ ಫಾಲ್‌ಸ್ಟಾಫ್‌ನ ಮತ್ತು ಅವನ ಅನುಚರರ ಮೇಲೆ ಕೋಪ—ಅವರು ಅವನಿಗೆ ಸೇರಿದ ಜಿಂಕೆಗಳನ್ನು ಕಳ್ಳತನದಲ್ಲಿ ಕೊಂದು ತೆಗೆದುಕೊಂಡುಹೋಗುತ್ತಿದ್ದರೆಂದು. 'ಇದನ್ನು ಸಹಿಸಲಾಗುವುದಿಲ್ಲ. ನಾನು ಯುವಕನಾಗಿದ್ದಿದ್ದರೆ ಕತ್ತಿಯನ್ನು ಹಿರಿದು ಈ ಫಾಲ್‌ಸ್ಟಾಫ್‌ಗೆ ಬುದ್ಧಿ ಕಲಿಸುತ್ತಿದ್ದೆ. ಈ ವ್ಯಾಜ್ಯವನ್ನು ಸ್ಟಾರ್‌ಚೇಂಬರಿನವರೆಗೆ ತೆಗೆದುಕೊಂಡು ಹೋಗಬೇಕಾದರೂ ಸರಿಯೆ, ಅವನಿಗೆ ಶಿಕ್ಷೆಯಾಗಲೇಬೇಕು' ಎಂದು ಷ್ಯಾಲೊ ರೇಗುತ್ತಿದ್ದ. ಸರ್ ಹ್ಯೂ 'ಈ ಜಗಳವನ್ನು ಅಷ್ಟು ಬೆಳಸದೆಯೇ ಪರಿಹಾರ ಮಾಡಿಕೊಳ್ಳುವ ಪ್ರಯತ್ನಮಾಡೋಣ. ಅದಿರಲಿ, ಈಗ ಮಾಸ್ಟರ್ ಪೇಜ್‌ನ ಮಗಳು (ಆ್ಯನ್ ಪೇಜ್) ಸ್ಲೆಂಡರ್‌ನನ್ನು ಮದುವೆಯಾಗುವಂತೆ ಏರ್ಪಾಡುಮಾಡಬೇಕು' ಎಂದ. ಈ ಸಂಬಂಧದ ವಿಷಯದಲ್ಲಿ ಷ್ಯಾಲೋವಿಗೂ ಆಸಕ್ತಿಯಿತ್ತು. ಇವರೆಲ್ಲರೂ ಪೇಜ್‌ನ ಮನೆಯಬಳಿಗೆ ಬಂದಾಗ ಫಾಲ್‌ಸ್ಟಾಫ್‌ನೂ ಅವನ ಅನುಚರರೂ (ಪಿಸ್ಟಲ್, ಬಾರ್ಡಾಲ್ಫ್, ಮತ್ತು ನಿಮ್) ಅಲ್ಲೇ ಸಿಕ್ಕಿದರು. ಷ್ಯಾಲೊ 'ನೀನು ಜಿಂಕೆಗಳನ್ನು ಕದ್ದೆ, ಅಲ್ಲದೆ ನಮ್ಮ ಸೇವಕರನ್ನು ಹೊಡೆದೆ' ಎಂದದ್ದಕ್ಕೆ ಉತ್ತರವಾಗಿ ಫಾಲ್‌ಸ್ಟಾಫ್ 'ಹೌದು, ನೀನು ಹೇಳುವುದು ನಿಜ. ಈ ವಿಷಯದಲ್ಲಿ ದೂರು ತಂದರೆ ನೀನೇ ನಗುಪಾಟಲಾಗುತ್ತೀಯೆ' ಎಂದುಬಿಟ್ಟ. ಅವನ ಅನುಚರರು ಸ್ಲೆಂಡರ್‌ಗೆ ಮದ್ಯ ಕುಡಿಸಿ ಅವನು ಅಮಲಿನಲ್ಲಿದ್ದಾಗ ಅವನ ಜೇಬಿನಲ್ಲಿದ್ದ ಹಣವನ್ನು ಕಸಿದುಕೊಂಡಿದ್ದರಂತೆ. ಸ್ಲೆಂಡರ್ ಈ ಆಪಾದನೆಯನ್ನು ತಂದಾಗ ಅವರು ಅದೆಲ್ಲಾ ಸುಳ್ಳೆಂದೇ ಸಾಧಿಸಿದರು. ಪೇಜ್

ಈ ಜಗಳವನ್ನು ಪರಿಹರಿಸುವ ಪ್ರಯತ್ನ ಮಾಡಿದ. ಅವನು, ಸರ್ ಹ್ಯೂ, ಗಾರ್ಟರ್ ಇನ್‌ನ ಯಜಮಾನ (ಇವನನ್ನು ಮುಂದೆ 'ಹೋಸ್ಟ್' ಎಂದು ಕರೆಯಲಾಗಿದೆ), ಈ ಮೂವರೂ ತೀರ್ಪುಗಾರರಾಗಿ ಜಗಳವನ್ನು ಕೊನೆಗಾಣಿಸಬೇಕೆಂದು ತೀರ್ಮಾನ ವಾಯಿತು. ಪೇಜ್ ಅವರೆಲ್ಲರನ್ನೂ ಊಟಕ್ಕೆ ಕರೆದ. 'ಆ್ಯನ್‌ಳನ್ನು ಮಾತಾಡಿಸಿ ಒಲಿಸಿಕೊ' ಎಂದು ಷ್ಯಾಲೊ ಮತ್ತು ಸರ್ ಹ್ಯೂ ಸ್ಲೆಂಡರ್‌ಗೆ ಪ್ರೋತ್ಸಾಹ ಕೊಟ್ಟರು. ಆದರೆ ಆ ಮುಖಭೇಡಿ ಮುಂದುವರಿಯಲಿಲ್ಲ. ಸರ್ ಹ್ಯೂ 'ಆ್ಯನ್‌ಳ ಮನಸ್ಸು ಸ್ಲೆಂಡರ್‌ನ ವಿಷಯದಲ್ಲಿ ಪ್ರಸನ್ನವಾಗುವಂತೆ ಸಹಾಯಮಾಡು' ಎಂದು ಮಿಸಿಸ್ ಕ್ವಿಕ್ಲಿ (ಇವಳು ಡಾಕ್ಟರ್ ಕಯಸ್ ಎಂಬ ಫ್ರೆಂಚರವನ ಮನೆಯಲ್ಲಿ ಸೇವಕಿಯಾಗಿದ್ದಳು) ಗೆ ಕಾಗದ ಬರೆದು ಕಳಿಸಿದ.

ಫಾಲ್‌ಸ್ಟಾಫ್ ತನ್ನಲ್ಲಿ ಮಿಸಿಸ್ ಪೇಜ್, ಮಿಸಿಸ್ ಫೋರ್ಡ್, ಇಬ್ಬರೂ ಅನುರಕ್ತರಾಗಿದ್ದರೆಂದು ಭ್ರಮೆಗೊಂಡ. ಅವನು ಹಣವಿಲ್ಲದೆ ತವಕಿಸುತ್ತಾ ಗಾರ್ಟರ್ ಇನ್‌ನಲ್ಲಿ ನೆಲಸಿದ್ದ; ಅನುಚರರ ಸಂಖ್ಯೆಯನ್ನು ಕಡಿಮೆ ಮಾಡಿಕೊಳ್ಳಬೇಕೆಂದು ಬಾರ್ಡಾಲ್ಫ್‌ನನ್ನು ಕೆಲಸದಿಂದ ತೆಗೆದು ಹೋಸ್ಟ್‌ನ ಸೇವೆಗೆ ಬಿಟ್ಟುಕೊಟ್ಟ. ಆದರೂ ಹಣಗಳಿಸಲು ಬೇರೆ ಮಾರ್ಗವನ್ನು ಹುಡುಕಲೇ ಬೇಕಾಗಿತ್ತು. ಮಿಸಿಸ್ ಫೋರ್ಡ್‌ಳೂ ಮತ್ತು ಮಿಸಿಸ್ ಪೇಜ್‌ಳೂ ತಮ್ಮ ತಮ್ಮ ಮನೆಯ ಹಣಕಾಸಿನ ವ್ಯವಹಾರವನ್ನೆಲ್ಲಾ ತಮ್ಮ ವಶದಲ್ಲೇ ಇಟ್ಟುಕೊಂಡಿದ್ದರೆಂದು ಕೇಳಿದ್ದ. ಅವರಿಬ್ಬರನ್ನೂ ವಶಮಾಡಿ ಕೊಂಡರೆ ಅವರಿಂದ ಹಣ ಸುಲಿಯಬಹುದೆಂದು ಭಾವಿಸಿ ಇಬ್ಬರಿಗೂ ಪ್ರಣಯಪತ್ರ ಬರೆದು ಪಿಸ್ಟಲ್ ಮತ್ತು ನಿಮ್‌ರೊಡನೆ ಆ ಪತ್ರಗಳನ್ನು ಕಳಿಸಬೇಕೆಂದಿದ್ದ. ಆದರೆ ಆ ಸೇವಕರಿಬ್ಬರೂ 'ಇಂಥ ಹೇಯವಾದ ಕೆಲಸದಲ್ಲಿ ನಾವು ಭಾಗಿಗಳಾಗಲಾರೆವು' ಎಂದುಬಿಟ್ಟರು. ಫಾಲ್‌ಸ್ಟಾಫ್ ಕೋಪಗೊಂಡು ಅವರಿಬ್ಬರನ್ನೂ ಕೆಲಸದಿಂದ ತೆಗೆದು ಪ್ರಣಯ ಪತ್ರಗಳನ್ನು ರಾಬಿನ್ ಎಂಬ ಹುಡುಗನೊಡನೆ ಕಳಿಸಿಕೊಟ್ಟ.

ಸ್ಲೆಂಡರ್‌ಗೆ ಸಹಾಯಮಾಡಬೇಕೆಂದು ಕೋರಿ ಸರ್ ಹ್ಯೂ ಮಿಸಿಸ್ ಕ್ವಿಕ್ಲಿಗೆ ಕಾಗದ ಬರೆದಿದ್ದನಷ್ಟೆ. ಮಿಸಿಸ್ ಕ್ವಿಕ್ಲಿ ಆ ಕಾಗದವನ್ನು ತಂದಿದ್ದ ದೂತನಿಗೆ 'ಆಗಲಿ, ಆ್ಯನ್‌ಳು ಸ್ಲೆಂಡರ್‌ಗೆ ಒಲಿಯುವಂತೆ ಮಾಡುತ್ತೇನೆ' ಎಂದು ಹೇಳುತ್ತಿರುವ ಸಮಯಕ್ಕೆ ಡಾಕ್ಟರ್ ಕಯಸ್ ಮನೆಗೆ ಬಂದ. ಅವನೂ ಆ್ಯನ್‌ಳ ಪ್ರೇಮಕ್ಕೆ ಸ್ಪರ್ಧಿ. ಆದ್ದರಿಂದ ದೂತ ಅವನಿಗೆ ಕಾಣದಂತೆ ಅವಿತುಕೊಂಡ. ಕಯಸ್ ಅವನನ್ನು ಪತ್ತೆಮಾಡಿ, ಅವನು ಬಂದ ಉದ್ದೇಶವನ್ನು ತಿಳಿದು. ಮಿಸಿಸ್ ಕ್ವಿಕ್ಲಿ ತನಗೆ ಎರಡು ಬಗೆದಳೆಂದು ರೇಗಿದ್ದಲ್ಲದೆ ತನ್ನೊಡನೆ ಯುದ್ಧಕ್ಕೆ ನಿಲ್ಲಬೇಕೆಂದು ಸರ್ ಹ್ಯೂವಿಗೆ ಹೇಳಿಕಳಿಸಿದ. ಈ ಮಧ್ಯೆ ಫೆಂಟನ್ ಎಂಬ ಯುವಕನೊಬ್ಬ ತಾನೂ ಆ್ಯನ್‌ಳನ್ನು ಬಯಸಿ ಕ್ವಿಕ್ಲಿಯ ಸಹಾಯ ವನ್ನು ಬೇಡಿದ. ಆಕೆ ಪರಸ್ಪರ ವಿರೋಧಿಗಳಾದ ಈ ಮೂವರು (ಸ್ಲೆಂಡರ್, ಕಯಸ್, ಫೆಂಟನ್) ಸ್ಪರ್ಧಿಗಳಿಗೂ ಸಹಾಯಮಾಡುವುದಾಗಿ ಭರವಸೆಕೊಟ್ಟಳು.

ಫಾಲ್‌ಸ್ಟಾಫ್‌ನ ಪ್ರಣಯ ಪತ್ರಗಳು ಮಿಸಿಸ್ ಪೇಜ್‌ಗೂ ಮಿಸಿಸ್ ಫೋರ್ಡ್‌ಗೂ ತಲಪಿದವು. ಮಿಸಿಸ್ ಪೇಜ್ ಅದನ್ನು ಓದಿ ಕೋಪಗೊಂಡು 'ಈ ಕೇಡಿಗ ನಿಗೆ ತಕ್ಕ ಶಿಕ್ಷೆ ಮಾಡಬೇಕು' ಎಂದುಕೊಳ್ಳುತ್ತಿರುವಾಗ ಮಿಸಿಸ್ ಫೋರ್ಡ್ ತನ್ನ ಪತ್ರ ವನ್ನು ಹಿಡಿದುಕೊಂಡು ಅಲ್ಲಿಗೆ ಬಂದಳು. ಎರಡು ಪತ್ರಗಳನ್ನೂ ಹೋಲಿಸಿ ನೋಡಿದರೆ, ಒಂದು ಮತ್ತೊಂದರ ಮಕ್ಕಿ-ಕಾ-ಮಕ್ಕಿ ನಕಲು! ಪತ್ನಿಯರಿಬ್ಬರೂ ಸೇರಿ ಫಾಲ್ ಸ್ಟಾಫ್‌ಗೆ ಬುದ್ಧಿ ಕಲಿಸಲು ತಂತ್ರವನ್ನು ಹೂಡಿದರು. ಮಿಸಿಸ್ ಫೋರ್ಡ್ 'ನಾಳೆ ಹತ್ತು ಘಂಟೆಯಿಂದ ಹನ್ನೊಂದರೊಳಗೆ ನಮ್ಮ ಮನೆಗೆ ಬಾ, ಆಗ ನನ್ನ ಗಂಡ ಮನೆಯಲ್ಲಿರುವುದಿಲ್ಲ' ಎಂದು ಕ್ವಿಕ್ಲಿಯ ಮೂಲಕ ಫಾಲ್‌ಸ್ಟಾಫ್‌ಗೆ ಹೇಳಿಕಳಿಸಿದಳು;

ಮಿಸಿಸ್ ಪೇಜ್ 'ಸರಿಯಾದ ಸಮಯ ಒದಗಿದಾಗ ನಾನು ಹೇಳಿಕಳಿಸುತ್ತೇನೆ; ನಿನ್ನ ಸೇವಕ ನನ್ನಲ್ಲಿಗೆ ಬಂದು ಹೋಗುತ್ತಿರಲಿ' ಎಂದು ಸಂದೇಶ ಕಳಿಸಿದಳು.

ಫಾಲ್‌ಸ್ಟಾಫ್‌ನಿಂದ ಹೊರದೂಡಿಸಿಕೊಂಡಿದ್ದ ಸೇವಕರು (ಪಿಸ್ಟಲ್ ಮತ್ತು ನಿಮ್) ಆತನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ಅವನ ಪ್ರಣಯ ಪ್ರಯತ್ನವನ್ನು ಪೇಜ್‌ಗೂ ಫೋರ್ಡ್‌ಗೂ ತಿಳಿಸಿದರು. ಪೇಜ್ ತನ್ನ ಹೆಂಡತಿಯ ವಿಷಯದಲ್ಲಿ ಸಂಶಯ ಗೊಳ್ಳಲಿಲ್ಲ; ಆಕೆ ಫಾಲ್‌ಸ್ಟಾಫ್‌ನನ್ನು ಒಯ್ದು ಹೊರದೂಡುತ್ತಾಳೆಂದು ಅವನು ಬಲ್ಲ. ಫೋರ್ಡ್‌ನದ್ದು ಮಾತ್ರ ಸಂಶಯಪ್ರಕೃತಿ; 'ಈ ಹೆಂಗಸರನ್ನು ನೆಚ್ಚಬಾರದು, ಎಚ್ಚರಿಕೆಯಿಂದಿರಬೇಕು,' ಎಂದು ಅವನು ವಾದಿಸಿದ. ಇದನ್ನು ಕೇಳಿದ ಮಿಸಿಸ್ ಫೋರ್ಡ್ ತನ್ನ ಗಂಡನಿಗೂ ಬುದ್ಧಿ ಕಲಿಸಬೇಕೆಂದುಕೊಂಡಳು.

ಫೋರ್ಡ್ ತನ್ನ ವೇಷವನ್ನು ಮರಸಿ, 'ಬ್ರುಕ್' ಎಂಬ ಹೆಸರಿನಲ್ಲಿ ಫಾಲ್‌ಸ್ಟಾಫ್‌ನ ಪರಿಚಯ ಮಾಡಿಕೊಂಡು, 'ನನಗೆ ಮಿಸಿಸ್ ಫೋರ್ಡ್‌ಳಲ್ಲಿ ಬಹಳ ಪ್ರೀತಿ. ಅವಳನ್ನು ಒಲಿಸಿಕೊಳ್ಳಲು ಎಷ್ಟೋ ಪ್ರಯತ್ನ ಮಾಡಿದ್ದೇನೆ. ಆದರೆ ಅವ ಳಿಂದ ಏನೇನೂ ಪ್ರೋತ್ಸಾಹ ದೊರೆತಿಲ್ಲ. ನೀನಾದರೆ ದೊಡ್ಡಮನುಷ್ಯ; ಆಕೆಯನ್ನು ಒಲಿಸಿಕೊಳ್ಳುವುದು ನಿನಗೆ ಸುಲಭ. ಆಕೆ ನಿನಗೆ ವಶಳಾದರೆ, ಆ ಧೈರ್ಯದ ಮೇಲೆ ನಾನೂ ಆಕೆಯನ್ನು ಪಡೆಯಬಹುದು. ಆದ್ದರಿಂದ ನೀನು ಆ ಪ್ರಯತ್ನಮಾಡು' ಎಂದು ಹೇಳಿ ಫಾಲ್‌ಸ್ಟಾಫ್‌ಗೆ ಸ್ವಲ್ಪ ಹಣವನ್ನೂ ಕೊಟ್ಟ. ಫಾಲ್‌ಸ್ಟಾಫ್ ಸಂತೋಷ ದಿಂದ ಇದಕ್ಕೆ ಒಪ್ಪಿ, ತನಗೆ ಮಿಸಿಸ್ ಫೋರ್ಡ್‌ಳಿಂದ ಒಂದಿದ್ದ ಸಂದೇಶದ ವಿವರ ಗಳನ್ನು ತಿಳಿಸಿದ. 'ನಾನು ಹತ್ತುಘಂಟೆಯ ವೇಳೆಗೆ ಅವಳನ್ನು ನೋಡಲು ಹೋಗು ತ್ತೇನೆ; ಅಲ್ಲಿಂದ ಬಂದ ಮೇಲೆ ನಿನಗೆ ವರದಿಮಾಡುತ್ತೇನೆ' ಎಂದು ಬ್ರುಕ್‌ಗೆ ಭರವಸೆ ಕೊಟ್ಟ.

ಸರ್ ಹ್ಯೂವನ್ನು ಯುದ್ಧಕ್ಕೆ ಕರೆದಿದ್ದ ಕಯಸ್ ಆತನಿಗಾಗಿ ವಿಂಡ್ಸರ್‌ನ ಹತ್ತಿರದ ಬಯಲಿನಲ್ಲಿ ಕಾದಿದ್ದ. ಯುದ್ಧವನ್ನು ನೋಡಲು ಹೋಸ್ಟ್, ಷ್ಯಾಲೊ, ಸ್ಲೆಂಡರ್, ಪೇಜ್—ಇವರೆಲ್ಲರೂ ಬಂದರು. ಆದರೆ ಸರ್ ಹ್ಯೂ ಬರಲೇ ಇಲ್ಲ. ಯುದ್ಧ ನಡೆಯಬೇಕಾದ ಸ್ಥಾನವನ್ನು ನಿರ್ಣಯಿಸುವ ಕೆಲಸ ಹೋಸ್ಟ್‌ನದ್ದಾಗಿತ್ತು. ಆತ ಸ್ಪರ್ಧಿಗಳಿಬ್ಬರನ್ನೂ ಬೇರೆ ಬೇರೆ ಸ್ಥಳಗಳಿಗೆ ಕಳಿಸಿದ್ದ! ಅವನಿಗೆ ಯುದ್ಧವನ್ನು ತಪ್ಪಿಸ ಬೇಕೆಂಬ ಉದ್ದೇಶ. ಬೇರೊಂದು ಬಯಲಿನಲ್ಲಿ ಸರ್ ಹ್ಯೂ ಕಾಯುತ್ತಿದ್ದ. ಅವನು 'ಕಯಸ್‌ನನ್ನು ಕೊಂದುಬಿಡುತ್ತೇನೆ' ಎಂದು ಜಂಬ ಕೊಚ್ಚುತ್ತಿದ್ದರೂ ನಿಜವಾಗಿ ಅಳುವ ಸ್ಥಿತಿಯಲ್ಲಿದ್ದ. ಹೋಸ್ಟ್, ಕಯಸ್,ಪೇಜ್ ಮೊದಲಾದವರೆಲ್ಲರೂ ಅಲ್ಲಿಗೇ ಬಂದರು. ಯುದ್ಧಮಾಡಬೇಕಾಗಿದ್ದವರಿಬ್ಬರೂ ಪ್ರತ್ಯೇಕವಾಗಿ ಮಾತಾಡಿಕೊಂಡರು— ಇಬ್ಬರಿಗೂ ಯುದ್ಧ ಅಷ್ಟೇನೂ ಬೇಕಾಗಿರಲಿಲ್ಲ! ಸರ್ ಹ್ಯೂ ಎಲ್ಲರಿಗೂ ಕೇಳುವಂತೆ ಕಯಸ್‌ಗೆ ಬೆದರಿಕೆ ಹಾಕಿದನಾದರೂ ರಹಸ್ಯವಾಗಿ 'ಇವರೆಲ್ಲರ ಸಂತೋಷಕ್ಕಾಗಿ ನಾವೇಕೆ ಯುದ್ಧಮಾಡಬೇಕು? ಸ್ನೇಹಿತರಾಗಿರೋಣ' ಎಂದು ಹೇಳಿ ಕಯಸ್‌ನನ್ನು ಒಪ್ಪಿಸಿದ.

ಅತ್ತ ಫಾಲ್‌ಸ್ಟಾಫ್ ಗೊತ್ತಾಗಿದ್ದ ಕಾಲಕ್ಕೆ ಸರಿಯಾಗಿ ಮಿಸಿಸ್ ಫೋರ್ಡ್‌ಳ ಮನೆಗೆ ಹೋದ. ಅವನು ತನ್ನ ಪ್ರೇಮವನ್ನು ಹೇಳಿಕೊಳ್ಳುವುದರಲ್ಲಿದ್ದಾಗ ಮಿಸಿಸ್ ಪೇಜ್ ಮೊದಲೇ ಏರ್ಪಾಡಾಗಿದ್ದಂತೆ ಅಲ್ಲಿಗೆ ಬಂದಳು. ಫಾಲ್‌ಸ್ಟಾಫ್ ಅವಳಿಗೆ ಕಾಣದಂತೆ ಅವಿತುಕೊಂಡ. ಮಿಸಿಸ್ ಪೇಜ್ ಅವನಿಗೆ ಕೇಳುವಂತೆ 'ಫಾಲ್‌ಸ್ಟಾಫ್ ಇಲ್ಲಿಗೆ ಬಂದಿದ್ದಾನಂತಲ್ಲ? ಅವನನ್ನು ಹಿಡಿಯಲು ನಿನ್ನ ಗಂಡ ತನ್ನ ಸ್ನೇಹಿತ ರೊಡನೆ ಬರುತ್ತಿದ್ದಾನೆ' ಎಂದು ಮಿಸಿಸ್ ಫೋರ್ಡ್‌ಗೆ ಹೇಳಿದಳು. ಮಿಸಿಸ್ ಫೋರ್ಡ್

ಮೊದಲು ಫಾಲ್‌ಸ್ಟಾಫ್ ಬಂದೇ ಇಲ್ಲವೆಂದು ಹೇಳಿ ಅನಂತರ ಭಯಗೊಂಡವಳಂತೆ ನಟಿಸಿದಳು. ಅವಿತುಕೊಂಡಿದ್ದ ಫಾಲ್‌ಸ್ಟಾಫ್ ಹೆದರಿ ಹೊರಗೆ ಬಂದು ತನ್ನನ್ನು ಹೇಗಾದರೂ ಉಳಿಸಬೇಕೆಂದು ಬೇಡಿಕೊಂಡ. ಪತ್ನಿಯರಿಬ್ಬರೂ ಸೇರಿ ಅವನನ್ನು ಕೊಳೆಬಟ್ಟೆಯ ಕುಕ್ಕೆಯಲ್ಲಿ ಕೂರಿಸಿ ಮೇಲೆ ಕೊಳೆಬಟ್ಟೆಗಳನ್ನು ಮುಚ್ಚಿ, ಆಳುಗಳ ತಲೆಯ ಮೇಲೆ ಹೊರಿಸಿ ಕಳಿಸಿದರು. ಫೋರ್ಡ್ ಅವರನ್ನು ತಡೆದನಾದರೂ ಫಾಲ್‌ಸ್ಟಾಫ್ ಕುಕ್ಕೆಯಲ್ಲಿದ್ದನೆಂಬುದನ್ನು ತಿಳಿಯಲಿಲ್ಲ. ಸೇವಕರು ಫಾಲ್‌ಸ್ಟಾಫ್‌ನನ್ನು ಹೊತ್ತುಕೊಂಡು ಹೋಗಿ ಥೇಮ್ಸ್‌ನದಿಯ ಬಳಿಯಲ್ಲಿದ್ದ ಬಚ್ಚಲುನೀರಿನಲ್ಲಿ ಉರುಳಿಸಿದರು. ಫೋರ್ಡ್ ಮನೆಯಲ್ಲೆಲ್ಲಾ ಹುಡುಕಿ ಫಾಲ್‌ಸ್ಟಾಫ್‌ನನ್ನು ಕಾಣದೆ, ತನ್ನ ಸಂಶಯ ಪ್ರಕೃತಿಗಾಗಿ ನಿಂದೆಗೆ ಗುರಿಯಾಗಬೇಕಾಯಿತು.

ಪತ್ನಿಯರಿಬ್ಬರಿಗೂ ಇಷ್ಟರಿಂದಲೇ ತೃಪ್ತಿಯಾಗಲಿಲ್ಲ. ಫಾಲ್‌ಸ್ಟಾಫ್‌ಗೆ ಮತ್ತಷ್ಟು ಶಿಕ್ಷೆಯಾಗಬೇಕು; ಅಲ್ಲದೆ ಫೋರ್ಡ್‌ಗೆ ಹಿಡಿದಿದ್ದ ಸಂಶಯದ ಹುಚ್ಚನ್ನು ಸಂಪೂರ್ಣವಾಗಿ ಬಿಡಿಸಬೇಕು. ಅದಕ್ಕಾಗಿ ಪತ್ನಿಯರಿಬ್ಬರೂ ಫಾಲ್‌ಸ್ಟಾಫ್‌ನನ್ನು ಮತ್ತೊಂದು ಸಾರಿ ಕರಸುವ ಯೋಜನೆ ಮಾಡಿದರು. 'ಅಕಸ್ಮಾತ್ ನನ್ನ ಗಂಡ ಬಂದುಬಿಟ್ಟದ್ದರಿಂದ ತೊಂದರೆಯಾಯಿತು. ನಾಳೆ ಎಂಟು ಘಂಟೆಗೆ ಅವನು ಹಕ್ಕಿಬೇಟೆಗೆ ಹೋಗುತ್ತಾನೆ. ಆಗ ನಮ್ಮ ಮನೆಗೆ ಬಾ' ಎಂದು ಮಿಸಿಸ್ ಫೋರ್ಡ್ ಅವನಿಗೆ ಹೇಳಿ ಕಳಿಸಿದಳು. ನಡೆದದ್ದೆಲ್ಲವನ್ನೂ ಫಾಲ್‌ಸ್ಟಾಫ್ ತನ್ನ ಹೊಸ ಸ್ನೇಹಿತ ಬ್ರುಕ್ (ವೇಷಧಾರಿಯಾದ ಫೋರ್ಡ್)ಗೆ ತಿಳಿಸಿದ.

ಅತ್ತ ಪೇಜ್‌ನ ಮನೆಯಲ್ಲಿ ಫೆಂಟನ್ ಆ್ಯನ್‌ಳೊಡನೆ ಮಾತಾಡುತ್ತಿದ್ದಾಗ ಪೇಜ್, ಸ್ಲೆಂಡರ್, ಷ್ಯಾಲೊ, ಫೋರ್ಡ್, ಎಲ್ಲರೂ ಬಂದರು. ಪೇಜ್ ಫೆಂಟನ್ ಮೇಲೆ ಕೋಪಗೊಂಡು 'ನೀನು ನಮ್ಮ ಮನೆಗೆ ಬರಬೇಡ. ಆ್ಯನ್‌ಳನ್ನು ಬೇರೊಬ್ಬ ವರನಿಗೆ ಕೊಡಬೇಕೆಂದಿದ್ದೇನೆ' ಎಂದು ಹೇಳಿ ಅವನನ್ನು ಹೊರಡಿಸಿದ. ಫೆಂಟನ್ ಹಿಂದೆ ರಾಜಪುತ್ರ ಹೆನ್ರಿಯ ಮತ್ತು ಫಾಲ್‌ಸ್ಟಾಫ್‌ನ ಗುಂಪಿನಲ್ಲಿ ಓಡಾಡುತ್ತಿದ್ದನಂತೆ, ಅವರ ಹುಚ್ಚಾಟಗಳಲ್ಲಿ ಭಾಗಿಯಾಗಿದ್ದನಂತೆ. ಆದ್ದರಿಂದ ಪೇಜ್‌ಗೆ ಅವನ ವಿಷಯದಲ್ಲಿ ಅಸಮಾಧಾನ. ಪೇಜ್‌ಗೆ ಒಪ್ಪಿಗೆಯಾಗಿದ್ದ ವರ—ಸ್ಲೆಂಡರ್. ಮಿಸಿಸ್ ಪೇಜ್‌ಗೆ ಸ್ಲೆಂಡರ್‌ನ ವಿಷಯದಲ್ಲಿ ತಿರಸ್ಕಾರ; ತನ್ನ ಮಗಳು ಕಯಸ್‌ನನ್ನು ಮದುವೆಯಾಗಲೆಂದು ಅವಳ ಆಸೆ. ಆ್ಯನ್ ತಂದೆತಾಯಿಯರಿಬ್ಬರ ಇಷ್ಟಕ್ಕೂ ವಿರೋಧವಾಗಿ ಫೆಂಟನ್‌ನನ್ನು ಮೆಚ್ಚಿದ್ದಳು.

ಮಾರನೆಯ ದಿನ ಎಂಟು ಘಂಟೆಯ ಹೊತ್ತಿಗೆ ಫಾಲ್‌ಸ್ಟಾಫ್ ಮಿಸಿಸ್ ಫೋರ್ಡ್‌ಳನ್ನು ನೋಡಲು ಬಂದ. ಫೋರ್ಡ್ ಹೊಂಚುಕಾಯುತ್ತಿದ್ದು 'ಇವೊತ್ತು ಫಾಲ್‌ಸ್ಟಾಫ್‌ನನ್ನೂ ನನ್ನ ಹೆಂಡತಿಯನ್ನೂ ಬಯಲಿಗೆಳೆದೇ ತೀರುತ್ತೇನೆ' ಎಂದುಕೊಂಡು ತನ್ನ ಸ್ನೇಹಿತರೊಡನೆ ಬಂದ. ಈ ಸಾರಿ ಪತ್ನಿಯರಿಬ್ಬರೂ ಫಾಲ್‌ಸ್ಟಾಫ್‌ಗೆ ಬ್ರೆಯಿನ್ಸ್‌ಫರ್ಡ್‌ನ ಮಾಟಗಾತಿಯ ವೇಷ ಹಾಕಿ ಹೊರಕ್ಕೆ ಕಳಿಸಿದರು. ಫೋರ್ಡ್‌ಗೆ ಆ ಮಾಟಗಾತಿಯನ್ನು ಕಂಡರೆ ಆಗದು. ಆದ್ದರಿಂದ ಅವನು ಫಾಲ್‌ಸ್ಟಾಫ್‌ನನ್ನು ಗುರುತಿಸದಿದ್ದರೂ ಆ ಕೃತಕ ಮಾಟಗಾತಿಯನ್ನು ಚೆನ್ನಾಗಿ ಹೊಡೆದು ಅಟ್ಟಿದ. ಅಂತೂ ಫಾಲ್‌ಸ್ಟಾಫ್ ಅವನ ಕಣ್ಣಿಗೆ ಸಿಕ್ಕಲಿಲ್ಲ; ಹೆಂಡತಿಯ ವಿಷಯದಲ್ಲಿ ಅನವಶ್ಯಕವಾಗಿ ಸಂಶಯಗೊಂಡದ್ದಕ್ಕೆ ಅವನಿಗೆ ಮತ್ತೆ ಅವಮಾನವಾಯಿತು.

ಇದಾದ ಮೇಲೆ ಪತ್ನಿಯರಿಬ್ಬರೂ ತಮ್ಮ ಗಂಡಂದಿರಿಗೆ ಫಾಲ್‌ಸ್ಟಾಫ್‌ನ ಪ್ರಯತ್ನವನ್ನೂ ಅವನಿಗೆ ತಾವು ಮಾಡಿದ ಪ್ರತೀಕಾರವನ್ನೂ ವಿಶದವಾಗಿ ತಿಳಿಸಿ

ದರು. ಹೆಂಡತಿಯ ವಿಷಯದಲ್ಲಿ ಸಂಶಯಗೊಂಡದ್ದಕ್ಕಾಗಿ ಫೋರ್ಡ್ ಪಶ್ಚಾತ್ತಾಪ ಪಟ್ಟ. ಅವರೆಲ್ಲರೂ ಸೇರಿ ಫಾಲ್‌ಸ್ಟಾಫನನ್ನು ಮತ್ತೊಮ್ಮೆ ಬಲೆಗೆ ಹಾಕಿಕೊಂಡು ಶಿಕ್ಷಿಸಲು ಹೊಸದೊಂದು ಉಪಾಯವನ್ನು ಹೂಡಿದರು. ಆಗ ವಿಂಡ್ಸರ್ ಕಾಡಿನಲ್ಲಿ ಹರ್ನ್ ಎಂಬ ಬೇಟೆಗಾರ (Herne The Hunter)ನ ದೆವ್ವ ಅಲೆದಾಡುತ್ತಿರುತ್ತದೆಂಬ ನಂಬಿಕೆ ಹರಡಿತ್ತು. 'ನೀನು ಹರ್ನ್ ದೆವ್ವದ ವೇಷ ಹಾಕಿಕೊಂಡು ರಾತ್ರಿ ಕಾಡಿನಲ್ಲಿರುವ ದೆವ್ವದ ಮರದ ಬಳಿಗೆ ಬಾ. ಅಲ್ಲಿ ಯಾರ ಅಡಚಣೆಯೂ ಇರುವುದಿಲ್ಲ. ನಾನೂ ಅಲ್ಲಿಗೆ ಬರುತ್ತೇನೆ' ಎಂದು ಮಿಸಿಸ್ ಫೋರ್ಡ್ ಫಾಲ್‌ಸ್ಟಾಫ್‌ಗೆ ಹೇಳಿ ಕಳಿಸುವುದು; ಆ ವೇಳೆಗೆ ಆ್ಯನ್‌ಳೂ ನಾಲ್ಕಾರು ಹುಡುಗರೂ ಫೇರಿಯರ ವೇಷ ಹಾಕಿ, ತಲೆಯ ಮೇಲೆ ದೀಪಗಳನ್ನಿಟ್ಟುಕೊಂಡು ಕಾಡಿನಲ್ಲಿ ಅವಿತಿರುವುದು; ಫಾಲ್‌ಸ್ಟಾಫ್ ಬಂದೊಡನೆ ಈ ಫೇರಿಯರೆಲ್ಲಾ ಅವನ ಮೇಲೆ ನುಗ್ಗಿ ಅವನ ಕೈಬೆರಳುಗಳಿಗೆ ಜೆಂಕಿ ತೋರಿಸಿ ಸುಟ್ಟು ಗಲಭೆಮಾಡುವುದು—ಇದೇ ಅವರ ಹೊಸತಂತ್ರ.

ಈ ತಂತ್ರದ ಜೊತೆಗೆ ಪೇಜ್ ಮತ್ತು ಮಿಸಿಸ್ ಪೇಜ್ ತಮ್ಮದೇ ಆದ ಉಪತಂತ್ರಗಳನ್ನು ಹೂಡಿದರು—ಒಬ್ಬರ ತಂತ್ರ ಮತ್ತೊಬ್ಬರಿಗೆ ತಿಳಿಯದು. 'ಆ್ಯನ್ ಕಾಡಿಗೆ ಬರುವಾಗ ಬಿಳಿಯ ವಸ್ತ್ರಗಳನ್ನು ಧರಿಸಿರುತ್ತಾಳೆ. ಆ ಮೂಲಕ ಅವಳನ್ನು ಗುರುತಿಸಬಹುದು. ನೀನು ಅವಳನ್ನು ಗುಟ್ಟಾಗಿ ಕರೆದುಕೊಂಡು ಹೋಗಿ ಮದುವೆ ಮಾಡಿಕೊ' ಎಂದು ಪೇಜ್ ಸ್ಲೆಂಡರ್‌ಗೆ ಹೇಳಿಕೊಟ್ಟ; 'ಅವಳು ಹಸುರು ಬಟ್ಟೆ ಹಾಕಿರುತ್ತಾಳೆ, ನೀನು ಕರೆದುಕೊಂಡು ಹೋಗಿ ಮದುವೆಮಾಡಿಕೊ' ಎಂದು ಮಿಸಿಸ್ ಪೇಜ್ ಕಯಸ್‌ಗೆ ಹೇಳಿದಳು. ಇದನ್ನೆಲ್ಲಾ ಆ್ಯನ್‌ಳಿಂದಲೇ ತಿಳಿದುಕೊಂಡ ಫೆಂಟನ್ ಹೋಸ್ಟ್‌ನ ಸಹಾಯ ಪಡೆದು ತಾನೇ ಅವಳನ್ನು ಹಾರಿಸಿಕೊಂಡು ಹೋಗಿ ಮದುವೆಯಾಗುವ ಏರ್ಪಾಡುಮಾಡಿದ.

ಫಾಲ್‌ಸ್ಟಾಫ್‌ಗೆ ಸಂಬಂಧಪಟ್ಟ ತಂತ್ರವೇನೋ ವ್ಯವಸ್ಥೆಮಾಡಿದ್ದಂತೆಯೇ ನಡೆಯಿತು. ಪತ್ನಿಯರಿಬ್ಬರೂ ತನ್ನನ್ನು ಹೇಗೆ ಮೋಸಗೊಳಿಸಿದರೆಂಬುದನ್ನು ಕೇಳಿ ಅವನು ಬಹಳ ಅವಮಾನಗೊಂಡು ನೊಂದುಕೊಂಡ. ಆ್ಯನ್‌ಳಿಗೆ ಸಂಬಂಧಿಸಿದ ಉಪತಂತ್ರದಲ್ಲಿ ಪೇಜ್‌ಗೂ ಅವನ ಹೆಂಡತಿಗೂ ಸೋಲಾಯಿತು—ಆ್ಯನ್‌ಳನ್ನು ಫೆಂಟನ್ ಮದುವೆಯಾದ. ಕೆಲಸ ಕೈಮೀರಿ ಹೋಯಿತೆಂದು ತಿಳಿದ ಮೇಲೆ ಪೇಜ್ ಅವನನ್ನು ಕ್ಷಮಿಸಿದ. ಫಾಲ್‌ಸ್ಟಾಫ್‌ಗೂ ಕ್ಷಮೆದೊರೆಯಿತು. ಪೇಜ್ ಎಲ್ಲರನ್ನೂ ಊಟಕ್ಕೆ ಕರೆದುಕೊಂಡು ಹೋದ.

* * *

ಈ ನಾಟಕದ ಕಥಾವಸ್ತುವನ್ನು ಹೋಲುವಂಥ ಕಥೆ ಟಾರ್ಲ್‌ಟನ್ ಎಂಬವನು ಬರೆದ 'The Tale of Two Lovers of Pisa' (ಇದು ಸ್ಟ್ರಾಪರೋಲ ಎಂಬವನ ಕಥೆಯೊಂದರ ಇಂಗ್ಲಿಷ್ ರೂಪ) ಎಂಬುದರಲ್ಲಿ ಸಿಕ್ಕುತ್ತದೆ. 1593 ರಲ್ಲಿ ಆಡಿದ 'The Jealous Comedy' (ಇದರ ವಿಷಯದಲ್ಲಿ ಮತ್ತೇನೂ ತಿಳಿದು ಬಂದಿಲ್ಲ) ಎಂಬ ನಾಟಕವೇ ಷೇಕ್ಸ್‌ಪಿಯರ್‌ನ ಮೂಲವಿರಬಹುದೆಂಬ ಊಹೆಯಿದೆ. ರಾಣಿಯ ಅಪ್ಪಣೆಯನ್ನು ತಡಮಾಡದೆ ಪಾಲಿಸುವ ಆತುರದಲ್ಲಿ ಷೇಕ್ಸ್‌ಪಿಯರ್ ಹಳೆಯ ನಾಟಕವೊಂದನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಬದಲಾಯಿಸಿಕೊಂಡಿರಬಹುದಾದರೂ ಒಟ್ಟಿನಲ್ಲಿ ಈ ನಾಟಕ ಅವನ ಸ್ವಂತದ್ದೇ ಎನ್ನಬಹುದು.

ವೈನೋದಿಕವನ್ನು ಬರೆಯಹೊರಟಾಗ ರಮ್ಯಮನೋವೃತ್ತಿಯನ್ನು ಬಳಸದಿರುವುದು ಷೇಕ್ಸ್‌ಪಿಯರ್‌ನ ಸ್ವಭಾವಕ್ಕೆ ವಿರುದ್ಧವಷ್ಟೆ; ಇಲ್ಲಿಯೂ—ಆ್ಯನ್-ಫೆಂಟನ್‌ರ ಪ್ರಣಯ ಪ್ರಸಂಗದಲ್ಲಿ—ಅದಕ್ಕೆ ಅಲ್ಪಸ್ವಲ್ಪ ಅವಕಾಶಕೊಟ್ಟಿದ್ದಾನೆ; ಆದರೆ ಅದರ ಲೇಪ ತೀರ ಲಘುವಾದದ್ದು. ಇದು ರಮ್ಯವೈನೋದಿಕವೆನ್ನಲಾಗುವುದಿಲ್ಲ. ಈ ನಾಟಕದ ಕ್ರಿಯೆ ನಡೆಯುವ

ಸ್ಥಳ 'ಇಲ್ಲಿರಿಯ' ವಲ್ಲ, ಆರ್ಡನ್ ವನವಲ್ಲ, ವೆನಿಸ್‌ನಂಥ ದೂರದ ರೇವು ಪಟ್ಟಣವಲ್ಲ, ಇಂಗ್ಲೆಂಡಿನಲ್ಲೇ ಇರುವ ವಿಂಡ್ಸರ್ ಗ್ರಾಮ. ಆಂದಮೇಲೆ ಕಾಲದೇಶಗಳ ದೃಷ್ಟಿಯಿಂದ ದೂರವಾದದ್ದರಿಂದಲೇ, ಅಪರಿಚಿತವಾದದ್ದರಿಂದಲೇ, ಸೃಷ್ಟಿಯಾಗಬಹುದಾದ ರಮ್ಯವಾತಾವರಣ ಇಲ್ಲಿ ಕಾಣುವುದಿಲ್ಲ. ಷೇಕ್ಸ್‌ಪಿಯರ್ ಲಂಡನ್ ನಗರವನ್ನು ಬಿಟ್ಟು ನಮ್ಮನ್ನು ಜಿಂಕೆಗಳ ಓಡಾಟವುಳ್ಳ ಪ್ರಕೃತಿಯ ಹಿನ್ನೆಲೆಗೆ, ಹಳ್ಳಿಗಾಡಿನ ಪ್ರಾಂತಕ್ಕೆ, ಕರೆದೊಯ್ಯುತ್ತಾನೆಂಬುದೇನೋ ನಿಜ. ವಿಂಡ್ಸರ್ ಕಾಡಿನಲ್ಲಿರುವ ಹಳೆಯ ಓಕ್ ಮರದ ಬಳಿ ಬೇಟೆಗಾರ ಹರ್ನ್‌ನ ಪ್ರೇತ ಸುಳಿದಾಡುತ್ತದೆಂಬ ಕಥೆಯ ನೆನಪನ್ನೂ ಕೊಡುತ್ತಾನೆ; ಅಲ್ಲಿ ಫೇರಿಯರ ನೆನಪೂ ಬರುತ್ತದೆ. ಆದರೆ ನಾವು ಅಲ್ಲಿ ಕಾಣುವುದು ನಿಜವಾಗಿ ಹರ್ನ್‌ನ ಪ್ರೇತವನ್ನಲ್ಲ ವೇಷಧಾರಿಯಾದ ಫಾಲ್‌ಸ್ಟಾಫ್‌ನನ್ನು. ಆ ಫೇರಿಯರೂ ಫೇರಿಯರಲ್ಲ, ಆ ವೇಷವನ್ನು ಧರಿಸಿದ ಹುಡುಗ ಹುಡುಗಿಯರು. ಈ ರಹಸ್ಯವನ್ನು ಷೇಕ್ಸ್‌ಪಿಯರ್ ಮೊದಲೇ ನಮಗೆ ಬಿಟ್ಟುಕೊಟ್ಟಿದ್ದಾನಾದ್ದರಿಂದ, ನಮ್ಮ ಮೇಲೆ ರಮ್ಯತೆಯ ಗಾಳಿ ಕ್ಷಣಕಾಲ ಬೀಸಿದಂತಾಗುತ್ತದೆಯೇ ಹೊರತು ಅದು ನಮ್ಮನ್ನು ಆವರಿಸಿ ವಶಪಡಿಸಿಕೊಂಡಂತಾಗುವುದಿಲ್ಲ. ಇಲ್ಲಿರಿಯದಲ್ಲಿ ಆಗುವಂತೆ ಇಲ್ಲಿಯ ವಾತಾವರಣದಲ್ಲಿ ಹೂವುಗಳ ಪರಿಮಳವಾಗಲಿ ಗಾನಮಾಧುರ್ಯವಾಗಲಿ ನಮ್ಮನ್ನು ಮುತ್ತಿ ಸೆರೆಹಿಡಿಯುವುದಿಲ್ಲ. ಈ ನಾಟಕದಲ್ಲಿ ಹಡಗುಗಳು ಮುಳುಗುವುದಿಲ್ಲ, ರಾಜ್ಯಚ್ಯುತರಾದ ರಾಜರು ರಾಬಿನ್‌ಹುಡ್‌ನಂತೆ ನಿರಾತಂಕರಾಗಿ ವನಜೀವನ ನಡಸುವುದಿಲ್ಲ. ರಮ್ಯವೈನೋದಿಕದೊಡನೆ ಇದನ್ನು ಹೋಲಿಸಿದಾಗ ಎಲ್ಲಕ್ಕಿಂತಲೂ ಹೆಚ್ಚಾಗಿ ಎದ್ದುಕಾಣುವುದೆಂದರೆ—ಯೌವನದ ಸೊಂಪಿನ ಅಭಾವ. ಆ್ಯನ್ ಪೇಜ್ ಮತ್ತು ಫೆಂಟನ್ ಈ ಮಾತಿಗೆ ವಿನಾಯಿತಿಯಾಗುತ್ತಾರಾದರೂ ಅವರು ಇಲ್ಲಿ ಪ್ರಧಾನ ಪಾತ್ರಗಳಲ್ಲ, ಉಪಕಥೆಗೆ ಸೇರಿದವರು. ಮುಖ್ಯ ಕಥೆಯ ವಿನೋದಪ್ರಿಯ ಪತ್ನಿಯರಿಬ್ಬರೂ ಯೌವನವನ್ನು ದಾಟಿದವರೇ. ಅವರು ತಮ್ಮ ವಯಸ್ಸನ್ನು ಬಚ್ಚಿಡುವ ಪ್ರಯತ್ನವನ್ನೂ ಮಾಡುವುದಿಲ್ಲ:

What, have I 'scaped love-letters in the holiday-time of my beauty, and am I now a subject for them?

II, i, 1-2

ಎಂದು ಮಿಸೆಸ್ ಪೇಜ್ ರೇಗುತ್ತಾಳೆ. ಅವಳ ಪ್ರಣಯವನ್ನು ಬೇಡುವ ಫಾಲ್‌ಸ್ಟಾಫ್ ಅವಳು ಯೌವನೆಯಾಗಿ ಕಾಣುತ್ತಾಳೆಂಬ ಕಪಟಪ್ರಶಂಸೆಯನ್ನು ಸಹ ಮಾಡುವುದಿಲ್ಲ. 'You are not young, no more am I' ಎಂದು ಪ್ರಣಯಾರ್ಥಿಗೆ ಉಚಿತವಲ್ಲದ, ಸ್ತ್ರೀಯರಿಗೆ ಅಪ್ರಿಯಸತ್ಯವಾದ, ಮಾತನ್ನೇ ತನ್ನ ಕಾಗದದಲ್ಲಿ ಬರೆಯುತ್ತಾನೆ.

ಈ ನಾಟಕದ ಹಾಸ್ಯದಲ್ಲಿ—ಅದರಲ್ಲೂ ಮುಖ್ಯಕಥೆಯ ಹಾಸ್ಯದಲ್ಲಿ—ಬಿಯಾಟ್ರಿಸ್‌ಳ ಮತ್ತು ರಾಸಲಿಂಡ್‌ಳ ಮಾತಿನಲ್ಲಿ ಕಾಣುವಂಥ ಚಮತ್ಕಾರವೂ ನವಿರೂ ಕಾಣುವುದಿಲ್ಲ. ಇಲ್ಲಿಯ ಹಾಸ್ಯ ಬಹುಮಟ್ಟಿಗೆ ಪ್ರಹಸನಾತ್ಮಕವಾದದ್ದು. ಈ ನಾಟಕದ ಪಾತ್ರಗಳು ಶ್ರೀಮಂತವರ್ಗದವರಲ್ಲ; ಆ ವರ್ಗಕ್ಕೆ ಸಹಜವೆನ್ನಬಹುದಾದ ವೈಭವ, ಗಾಂಭೀರ್ಯ, ಬಾಹ್ಯಸಂಸ್ಕೃತಿಗಳೊಂದೂ ಇಲ್ಲಿ ಕಾಣುವುದಿಲ್ಲ. ಇಲ್ಲಿ ಚಿತ್ರಿಸಿರುವ ಜೀವನ ಷೇಕ್ಸ್‌ಪಿಯರ್‌ನ ಪ್ರೇಕ್ಷಕರಿಗೆ ಪರಿಚಿತವಾದ ಮಧ್ಯಮವರ್ಗದವರದು. ಈ ದೃಷ್ಟಿಯಿಂದ ಈ ನಾಟಕ ಷೇಕ್ಸ್‌ಪಿಯರ್‌ನ ಕೃತಿಗಳಲ್ಲಿ ಪ್ರತ್ಯೇಕವಾಗಿ ನಿಲ್ಲುತ್ತದೆ.

ಮೇಲೆ ಹೇಳಿದ್ದೆಲ್ಲಾ ಈ ನಾಟಕವನ್ನು ಅವಹೇಳನಮಾಡುವ ಮಾತಲ್ಲ. ತನ್ನ ಮಿತಿಯಲ್ಲಿ ಅದು ರಂಗಸ್ಥಳದಮೇಲೆ ಯಶಸ್ವಿಯೇ ಆಗುತ್ತದೆ. ಎಲ್ಲ ನಾಟಕಗಳೂ ಶ್ರೀಮಂತ ವಾತಾವರಣದಲ್ಲೇ ನಡೆಯಬೇಕೆಂಬ, ಎಲ್ಲ ಹಾಸ್ಯವೂ ರಾಸಲಿಂಡ್‌ಳ ಅಥವಾ ಬಿಯಾಟ್ರಿಸ್‌ಳ ಹಾಸ್ಯದಂತೇ ಇರಬೇಕೆಂಬ ನಿಯಮವೇನೂ ಇಲ್ಲವಷ್ಟೆ! ಇಲ್ಲಿಯ ಜನರು—ಪೇಜ್, ಫೋರ್ಡ್, ಅವರ ಪತ್ನಿಯರು, ಇತ್ಯಾದಿ—ಕಲ್ಮಷವಿಲ್ಲದವರು. ಫೋರ್ಡ್ ಸಂಶಯಕ್ಕೆ ಎಡೆಗೊಡುತ್ತಾ

ನಾದರೂ ಅದಕ್ಕೆ ಕಾರಣವಿಲ್ಲವೆಂದು ತಿಳಿದಮೇಲೆ ಮನಸ್ಸಿನಲ್ಲಿ ಕಹಿಯೇನನ್ನೂ ಉಳಿಸಿ ಕೊಳ್ಳುವುದಿಲ್ಲ. ಫಾಲ್‌ಸ್ಟಾಫ್‌ನ ಪ್ರಣಯಪ್ರಯತ್ನವೇನೋ ದುಷ್ಟಪ್ರಯತ್ನ. ಆದರೆ ಅವನನ್ನು ಗೇಲಿಗೆಪ್ಪಿಸಿ ಬುದ್ಧಿ ಕಲಿಸಿದ ಮೇಲೆ ಎಲ್ಲರೂ ಅವನನ್ನು ಕ್ಷಮಿಸುತ್ತಾರೆ ಮಾತ್ರವಲ್ಲ, ಸ್ನೇಹಭಾವದಿಂದ ಸವ್ಯವಹಾರಕ್ಕೂ ಸೇರಿಸಿಕೊಳ್ಳುತ್ತಾರೆ.

Good husband, let us every one go home,
And laugh this sport o'er by a country fire;
Sir John and all.

V, v, 232-234

ಎಂದು ಮಿಸಿಸ್ ಪೇಜ್ ಹೇಳುವ ಮಾತು ಈ ನಾಟಕವನ್ನು ಅಕಲ್ಮಷವಾದ ಹರ್ಷದ ವಾತಾವರಣದಲ್ಲಿ ಮುಗಿಸುತ್ತದೆ.

ಈ ನಾಟಕದ ಸಂವಿಧಾನದಲ್ಲಿ ಆತುರದ ಪರಿಣಾಮ ಕಾಣುತ್ತದೆ. ಕೆಲವು ಎಳೆಗಳು ವ್ಯವಸ್ಥೆಗೆ ಹೊಂದಿಕೊಳ್ಳದೆ ಜಡಿಯಾಗಿ ಉಳಿಯುತ್ತವೆ. ಮೊದಲನೆಯ ದೃಶ್ಯವನ್ನು ನೋಡುವಾಗ ನಮಗೆ 'ಫಾಲ್‌ಸ್ಟಾಫ್ ಜಿಂಕೆಗಳನ್ನು ಕೊಂದು ಸ್ಲ್ಯಾಲೋವಿನ ಸೇವಕರನ್ನು ಹೊಡೆದ ಪ್ರಸಂಗಕ್ಕೆ* ಈ ನಾಟಕದಲ್ಲಿ ಗಣನೀಯವಾದ ಸ್ಥಾನವಿರಬೇಕು' ಎನ್ನಿಸುತ್ತದೆ. ಮುಖ್ಯವಾದ ಫಾಲ್‌ಸ್ಟಾಫ್‌ನ ಪ್ರಣಯದ ಮಾತು ಅಲ್ಲಿ ಬರುವುದಿಲ್ಲ—ಮೂರನೆಯ ದೃಶ್ಯದಲ್ಲಿ ಬರುತ್ತದೆ. ಜಿಂಕೆಗಳ ಪ್ರಸಂಗ ಆ ದೃಶ್ಯದೊಡನೆಯೇ ಕೊನೆಗಾಣುತ್ತದೆ. ಮುಖ್ಯಕಥೆಗಾಗಲಿ ಉಪಕಥೆಗಾಗಲಿ ಅದರಿಂದ ಪೋಷಣೆಯೇನೂ ದೊರೆಯುವುದಿಲ್ಲ. ಸ್ಲ್ಯಾಲೋ ಮುಂದಿನ ದೃಶ್ಯಗಳಲ್ಲೂ ಬರುತ್ತಾನಾದರೂ ಬಹುಮಟ್ಟಿಗೆ ಪ್ರೇಕ್ಷಕನಾಗಿ ಮಾತ್ರ. ಹೋಸ್ಟ್‌ನ ಕುದುರೆಗಳು ಕಳವಾದ ಪ್ರಸಂಗವೂ (IV, v) ಹೀಗೆಯೇ ನಾಟಕದ ಕ್ರಿಯೆಯೊಡನೆ ನಿಕಟವಾದ ಸಂಬಂಧ ಪಡೆಯದೆ ನಿಂತಿದೆ. ಜರ್ಮನಿಯ ಡ್ಯೂಕ್‌ನ ಕಡೆಯವರು ಬೇಕೆಂದದ್ದರಿಂದ ಹೋಸ್ಟ್ ಅವರಿಗೆ ಕುದುರೆಗಳನ್ನು ಕೊಟ್ಟನಂತೆ. (ಈ ಡ್ಯೂಕ್ ನೇ ಮೇಲೆ ಕಥಾಸಾರಾಂಶದಲ್ಲಿ ಕಾಣಿಸಿರುವ ಮಂಪಲ್‌ಗಾರ್ಟ್). ಷೇಕ್ಸ್‌ಪಿಯರ್ ಯಾವ ಹಳೆಯ ನಾಟಕದ ಆಧಾರದ ಮೇಲೆ ಇದನ್ನು ರಚಿಸಿದನೋ ಅದರಲ್ಲಿ ಈ ವಿಷಯಕ್ಕೆ ಹೆಚ್ಚು ಪ್ರಾಮುಖ್ಯವಿದ್ದಿರಬಹುದು; ಆತುರದಲ್ಲಿ ಬರೆಯುತ್ತಿದ್ದ ಕವಿಯ ಅಜಾಗರೂಕತೆಯಿಂದಾಗಿ ಅದು ಇಲ್ಲಿ ಜಡಿಯೆಳೆಯಾಗಿ ಉಳಿದಿರಬಹುದು. ಪೇಜ್‌ನ ಮಗನಾದ ವಿಲಿಯಮ್‌ನನ್ನು ಸರ್ ಹ್ಯೂ ಪರೀಕ್ಷೆ ಮಾಡುವ ದೃಶ್ಯ (IV, i) ಮುಖ್ಯಕಥೆಗೆ ಸಂಬಂಧಪಟ್ಟದ್ದಲ್ಲ ಎನ್ನುವಂತಿಲ್ಲವಾದರೂ ಅದನ್ನು ಬಿಟ್ಟರೆ ನಾಟಕಕ್ಕೆ ಏನೂ ನಷ್ಟವಿಲ್ಲ.

ಈ ಕೆಲವು ದೋಷಗಳನ್ನು ಬಿಟ್ಟರೆ ನಾಟಕದ ಸಂವಿಧಾನ ಬಿಗಿಯಾಗಿಯೇ ಇದೆ. ಈ ನಾಟಕ ಹಳೆಯ ಕಾಲದ ತಂತ್ರ (intrigue) ಪ್ರಧಾನವಾದ ಕೃತಿಗಳನ್ನು ಹೋಲುತ್ತದೆ. ವಾಸ್ತವಿಕ ವಾತಾವರಣ, ನೀತಿಯ ದೃಷ್ಟಿಯಿಂದ ಪ್ರಶಂಸಾರ್ಹವಲ್ಲದ ಪ್ರಣಯ, ಅದಕ್ಕೆ ಸಂಬಂಧಪಟ್ಟಂತೆ ಬರುವ ತಂತ್ರ ಪ್ರತಿತಂತ್ರಗಳು, ಸೇವಕ ವರ್ಗದವರ ಸಹಾಯ—ಇವುಗಳೆಲ್ಲಾ 'intrigue' ನಾಟಕದ ಪ್ರಭಾವ ಕಾಣುತ್ತದೆ. ಇಂಥ ನಾಟಕಗಳಲ್ಲಿ ಸಂವಿಧಾನ ಬಿಗಿಯಾಗಿಯೇ ಇರಬೇಕಾಗುತ್ತದೆ. ಪತ್ನಿಯರಿಬ್ಬರ ಪ್ರೇಮವನ್ನು ಗಳಿಸಲು ಫಾಲ್‌ಸ್ಟಾಫ್ ಮಾಡಿದ ಪ್ರಯತ್ನ, ಮತ್ತು ಅವನಿಗೆ ಬುದ್ಧಿ ಕಲಿಸಲು ಪತ್ನಿಯರು ಹೂಡಿದ ತಂತ್ರ—ಇವೇ ಈ ನಾಟಕದ ಬೆನ್ನೆಲುಬು. ಈ ತಂತ್ರ ಪ್ರತಿತಂತ್ರಗಳ ನಿರೂಪಣೆ ಸ್ಪಷ್ಟವಾಗಿಯೂ ಬಿಗಿಯಾಗಿಯೂ ಇದೆ. ಇಲ್ಲಿ ದುಷ್ಟ ಪ್ರಣಯಕ್ಕೆ ವಿಜಯವಿಲ್ಲ—ಇಂಗ್ಲೆಂಡಿನ ಮಧ್ಯಮ ವರ್ಗದವರ ಕಥೆಯಾದ್ದರಿಂದ ಅಂಥ ವಿಜಯವನ್ನು ತೋರಿಸುವುದು ವಿವೇಕವಾಗುತ್ತಿರಲಿಲ್ಲ.

* ಈ ದೃಶ್ಯದಲ್ಲಿ ಷೇಕ್ಸ್‌ಪಿಯರ್ ತಾನು ಹಿಂದೆ ಸರ್ ಥಾಮಸ್ ಲೂಸಿಯ ಜಿಂಕೆಗಳನ್ನು ಕೊಂದಿದ್ದುದನ್ನು ನೆನೆದಿರಬಹುದು ಎಂಬ ಊಹೆಯಿದೆ. 'ಷೇಕ್ಸ್‌ಪಿಯರ್ ಪೂರ್ವಭಾಗ'ದ 10 ನೆಯ ಪುಟವನ್ನು ನೋಡಿ.

ಸೇವಕರ ತಂತ್ರಕ್ಕೂ ಇಲ್ಲಿ ಪ್ರಾಧಾನ್ಯವಿಲ್ಲ; ಅವರ ಪೈಕಿ ಸ್ವಲ್ಪ ಹೆಚ್ಚಾಗಿ ಓಡಾಡುವವಳೆಂದರೆ ಮಿಸಿಸ್ ಕ್ವಿಕ್ಲಿ. ಮಿಸಿಸ್ ಫೋರ್ಡ್‌ಳ ಸಂದೇಶಗಳನ್ನು ಫಾಲ್‌ಸ್ಟಾಫ್‌ಗೆ ತಲಪಿಸುವವಳು ಅವಳೇ; ಇದಲ್ಲದೆ ಅವಳು ಆ್ಯನ್‌ಳ ಪ್ರೇಮಕ್ಕೆ ಸ್ಪರ್ಧಿಗಳಾದ ಮೂವರಿಗೂ ಸಹಾಯ ಮಾಡುವುದಾಗಿ ಭರವಸೆ ಕೊಡುತ್ತಾಳೆ, ಗೊಂದಲದಲ್ಲಿ ಓಡಾಡಿ ತಾನೂ ಒಬ್ಬ ಗಣ್ಯವ್ಯಕ್ತಿಯೆಂದುಕೊಳ್ಳುತ್ತಾಳೆ. ಅವಳಿಂದ ಪ್ರೇಮಿಗಳಿಗೇನೂ ಸಹಾಯವಾಗುವುದಿಲ್ಲ. ಈ ನಾಟಕದಲ್ಲಿ ತಂತ್ರಗಳನ್ನು ನಿರ್ವಹಿಸುವ ಕೆಲಸವಿರುವುದು ಸೇವಕರ ಕೈಯಲ್ಲಲ್ಲ, ಒಡೆಯರ ಕೈಯಲ್ಲಿ. ಮುಖ್ಯ ಕಥೆಯಲ್ಲಿ ಷೇಕ್ಸ್‌ಪಿಯರ್ ಎರಡು ಕೆಲಸಗಳನ್ನು ನಿರ್ವಹಿಸಬೇಕು: ಫಾಲ್‌ಸ್ಟಾಫ್‌ಗೆ ಬುದ್ಧಿ ಕಲಿಸಬೇಕು ಮತ್ತು ಫೋರ್ಡ್‌ಗೂ ಬುದ್ಧಿ ಕಲಿಸಬೇಕು. ಫಾಲ್‌ಸ್ಟಾಫ್‌ನ ಕಡೆಯಿಂದ ಪ್ರತಿತಂತ್ರವೇನೂ ಬರುವುದಿಲ್ಲ; ಅವನು ಫೋರ್ಡ್ ದಂಪತಿಗಳಿಬ್ಬರಿಂದಲೂ ಸುಲಭವಾಗಿ ವಂಚಿತನಾಗುತ್ತಾನೆ. ತಂತ್ರದ ಸ್ಪರ್ಧೆ ಇರುವುದು ಗಂಡಹೆಂಡಿರ ನಡುವೆ. ವೈನೋದಿಕದ ದೃಷ್ಟಿಯಿಂದ ಮತ್ತು ನೀತಿಯ ದೃಷ್ಟಿಯಿಂದ ಇಲ್ಲಿ ಹೆಂಡತಿಗೆ ಜಯವಾಗಬೇಕಾದದ್ದು ನ್ಯಾಯವೇ.

ಮುಖ್ಯಕಥೆಯ ಜೊತೆಗೆ ಆ್ಯನ್‌ಳ ಮದುವೆಯ ಕಥೆ ಸೇರಿದೆ. ಯಾಂತ್ರಿಕ ಜೋಡಣೆಯ ದೃಷ್ಟಿಯಿಂದ ನೋಡಿದರೆ, ಈ ಉಪಕಥೆಯಿಲ್ಲದಿದ್ದರೂ ಮುಖ್ಯಕಥೆ ಸಾಗಬಹುದು. ಆದರೂ ಉಪಕಥೆಯಿಂದ ಪ್ರಯೋಜನವಿಲ್ಲದಿಲ್ಲ. ವಯಸ್ಸು ಕಳೆದ ಫಾಲ್‌ಸ್ಟಾಫ್‌ನ ನಿಂದ್ಯವಾದ ಪ್ರಣಯ (?) ದ ಮಗ್ಗುಲಲ್ಲಿ ಯುವಕ ಯುವತಿಯರ ಸುಂದರ ಪ್ರೇಮದ ಚಿತ್ರ ಬಂದಿರುವುದು ಅನುಪಯುಕ್ತವಲ್ಲ. ಹಣದ ಆಸೆಗಾಗಿ ಪ್ರಣಯವನ್ನು ನಟಿಸುವವನಿಗೆ ಸೋಲಾಗಬೇಕಾದದ್ದು ಹೇಗೆ ನ್ಯಾಯವೋ ಹಾಗೇ ಆ್ಯನ್-ಫೆಂಟನ್‌ರ ಸ್ವಾಭಾವಿಕ ಮತ್ತು ಪ್ರಾಮಾಣಿಕ ಪ್ರೇಮಕ್ಕೆ ಜಯ ದೊರೆಯುವುದೂ ನ್ಯಾಯವೇ. ಅಲ್ಲದೆ, ಉಪಕಥೆಯಿಂದಾಗಿ ಸರ್ ಹ್ಯೂ, ಡಾಕ್ಟರ್ ಕಯಸ್, ಸ್ಲೆಂಡರ್—ಇಂಥ ವಿಚಿತ್ರವ್ಯಕ್ತಿಗಳಿಗೆ ಕೆಲಸ ದೊರೆತು ನಾಟಕದ ಕಳೆ ಹೆಚ್ಚುತ್ತದೆ.

ಪೇಜ್, ಫೋರ್ಡ್, ಇಬ್ಬರೂ ಸದ್ಗೃಹಸ್ಥರು, ಅತಿಥಿಸತ್ಕಾರದಲ್ಲಿ ಸಂತೋಷವುಳ್ಳವರು (ಊಟ ಉಪಾಹಾರಗಳಿಗೆ ಆಹ್ವಾನಿಸುವ ಮಾತು ಈ ನಾಟಕದಲ್ಲಿ ಪದೇ ಪದೇ ಬರುತ್ತದೆ). ಪೇಜ್ ತನ್ನ ಹೆಂಡತಿಯಲ್ಲಿ ಪ್ರಶಂಸಾರ್ಹವಾದ ನಂಬಿಕೆಯಿಟ್ಟಿದ್ದಾನೆ. ಫೋರ್ಡ್ ಸಂಶಯ ಪ್ರಕೃತಿಯವನಾದರೂ ಮನಸ್ಸಿನಲ್ಲಿ ಕಹಿಯನ್ನು ಳಿಸಿಕೊಳ್ಳುವವನಲ್ಲ. ಪತ್ನಿಯರಿಬ್ಬರ ಪಾತ್ರ ಚಿತ್ರಣವೂ ಚೆನ್ನಾಗಿದೆ. ತಮ್ಮ ಶೀಲವನ್ನು ಕೆಡಿಸಲು ಪ್ರಯತ್ನಿಸಿದ ಫಾಲ್‌ಸ್ಟಾಫ್‌ನ ವಿಷಯದಲ್ಲಿ ಅವರು ನಡೆದುಕೊಂಡ ರೀತಿಗೆ ಮೆಚ್ಚಿಕೆ ಸಲ್ಲಬೇಕು. ಅವರು ದಿಟ್ಟತನದ ಹೆಂಗಸರು; ಫಾಲ್‌ಸ್ಟಾಫ್‌ನ ಮೇಲೆ ಗಂಡಂದಿರಿಗೆ ದೂರು ಹೇಳುವ ಬದಲು ತಾವೇ ಅವಶ್ಯಕವಾದ ಕಾರ್ಯಕ್ರಮ ನಡಸುತ್ತಾರೆ. ಹೀಗೆ ಮಾಡಿದ್ದರಿಂದ ಫೋರ್ಡ್‌ನನ್ನು ಮೆಟ್ಟಿದ್ದ ಸಂಶಯ ಪಿಶಾಚಿಯನ್ನು ತೊಲಗಿಸುವುದು ಸಾಧ್ಯವಾಯಿತು; ಅಲ್ಲದೆ ಅದು ಅವರಿಗೊಂದು ವಿನೋದವೂ ಹೌದು. ಫಾಲ್‌ಸ್ಟಾಫ್‌ನ ವಿಷಯದಲ್ಲಿ ಅವರಿಬ್ಬರಿಗೂ ಮರೆಯಲಾಗದ ದ್ವೇಷವೇನೂ ಇಲ್ಲ. ಅವನ ದುರ್ನಡತೆ ರೇಗಿಸಿತು, ಅದಕ್ಕೆ ತಕ್ಕ ಪ್ರತೀಕಾರ ಮಾಡಿದರು. ಅನಂತರ ಆ ಪ್ರಸಂಗವನ್ನು ಅಲ್ಲಿಗೇ ಮುಗಿಸಿ ಅವನೊಡನೆ ಸ್ನೇಹಭಾವದಿಂದಿರಲು ಅವರ ಗಂಡಂದಿರಂತೆ ಅವರೂ ಸಿದ್ಧರಾಗಿದ್ದಾರೆ. ಇದು ದೊಡ್ಡಗುಣ. ಇವರಿಬ್ಬರಲ್ಲಿ ಮಿಸಿಸ್ ಪೇಜ್‌ಳದ್ದು ಸ್ವಲ್ಪ ಮುಂದುವರಿಯುವ ಸ್ವಭಾವ—ಅವಳು ಸಲಹೆ ಕೊಡುವವಳು, ಮಿಸಿಸ್ ಫೋರ್ಡ್ ಸಲಹೆ ಪಡೆಯುವವಳು. ಬೇಟೆಗಾರ ಹರ್ನ್‌ನ ಪ್ರೇತದ ವಿಷಯದಲ್ಲಿ ಜನಗಳಿಗಿದ್ದ ನಂಬಿಕೆಯನ್ನು ತಮ್ಮ ತಂತ್ರಕ್ಕಾಗಿ ಉಪಯೋಗಿಸಿಕೊಳ್ಳಬಹುದೆಂಬ ಸಲಹೆ ಬರುವುದು ಅವಳಿಂದ. ಪೇಜ್ ದಂಪತಿಯರಿಗೆ ತಮ್ಮ ಮಗಳು ಫೆಂಟನ್‌ನನ್ನು ಮದುವೆಯಾಗುವುದು ಇಷ್ಟವಿಲ್ಲ. ಆದರೆ ಮದುವೆ ನಡೆದು ಹೋದ ಮೇಲೆ ಅಳಿಯನ ವಿಷಯದಲ್ಲಿ ಔದಾರ್ಯದಿಂದಲೇ ವರ್ತಿಸುತ್ತಾರೆ.

ಬಾರ್ಡಾಲ್ಫ್, ಪಿಸ್ಟಲ್, ನಿಮ್, ಮಿಸಿಸ್ ಕ್ವಿಕ್ಲಿ,* ಇವರೆಲ್ಲರೂ ನಮಗೆ ಹಿಂದೆಯೇ 'ಹೆನ್ರಿ IV'ನಲ್ಲಿ, ಅಥವಾ 'ಹೆನ್ರಿ V'ನಲ್ಲಿ, ಪರಿಚಿತರಾದವರು; ಹೆಚ್ಚು ಕಡಿಮೆ ಅಲ್ಲಿದ್ದಂತೆಯೇ ಇಲ್ಲಿಯೂ ಇದ್ದಾರೆ. ಬಾರ್ಡಾಲ್ಫ್ ತನ್ನ ಕೆಂಪು ಮುಖವನ್ನು ಇಲ್ಲೂ ಉಳಿಸಿಕೊಂಡಿದ್ದಾನೆ. ಪಿಸ್ಟಲ್ ಮೊದಲಿನಂತೆಯೇ 'rant' ಮಾತಾಡುತ್ತಾನೆ. ಬೋರ್ಸ್‌ಹೆಡ್ ಟಾವರ್ನ್‌ನಲ್ಲಿದ್ದಾಗ ಅವರಲ್ಲಿ ಕಂಡಿದ್ದ ಕಲ್ಯಾಣಗುಣಗಳು ಈಗಲೂ ಕಂಡುಬರುತ್ತವೆ. ಪಿಸ್ಟಲ್ ಮತ್ತು ನಿಮ್ ಇಬ್ಬರೂ ಫಾಲ್‌ಸ್ಟಾಫ್‌ನ ಪ್ರಣಯ ಪ್ರಯತ್ನಕ್ಕೆ ಸಹಾಯಕರಾಗಲೊಲ್ಲದೆ ಹೊರಬಿದ್ದದ್ದು ಇಲ್ಲಿ ಗಮನಾರ್ಹವಾದ ವ್ಯತ್ಯಾಸ. ಅವರಿಗೆ ಈ ಸಭ್ಯತೆಯ ಸೋಂಕು ಅಂಟಿಕೊಂಡದ್ದು ಸ್ವಲ್ಪ ಆಶ್ಚರ್ಯವೇ.

ಸರ್ ಹ್ಯೂ, ಕಯಸ್, ಸ್ಲೆಂಡರ್—ಇವರೆಲ್ಲರೂ ಇಂಗ್ಲಿಷ್ ಭಾಷೆಯನ್ನು ಕೊಲೆಮಾಡುವುದರಲ್ಲಿ ನಿಸ್ಸೀಮರು (ಈ ಶಕ್ತಿ ಅವರಿಗೆ ಮಾತ್ರ ಮೀಸಲಲ್ಲವೆಂದೂ ಒಪ್ಪಬೇಕು). ಸರ್ ಹ್ಯೂ ವೇಲ್ಸ್‌ನವನು; ಕಯಸ್ ಫ್ರಾನ್ಸ್‌ನವನು—ಆದ್ದರಿಂದ ಅವರಿಗೆ ಸ್ವಲ್ಪ ಕ್ಷಮೆ ಸಲ್ಲಬೇಕೇನೊ! ಇವರೆಲ್ಲರ ಮತ್ತು ಹೋಸ್ಟ್‌ನ ಚಿತ್ರಗಳು ಲಘುವಾದರೂ ಮನೋರಂಜಕವಾಗಿವೆ. ಇಂಗ್ಲಿಷ್ ಭಾಷೆಯ ದುರುಪಯೋಗದಿಂದ ಉದ್ಭವಿಸುವ ಹಾಸ್ಯ ಸ್ವಲ್ಪ ಬೇಸರವಾಗಬಹುದಾದರೂ ಪ್ರಹಸನಾತ್ಮಕವಾದ ನಾಟಕದಲ್ಲಿ ಅದು ದೊಡ್ಡ ದೋಷವೆನ್ನಿಸುವುದಿಲ್ಲ. ಇವರೆಲ್ಲರಲ್ಲೂ ಒಂದಲ್ಲದಿದ್ದರೆ ಮತ್ತೊಂದು ಬಗೆಯ ವೈಲಕ್ಷಣ್ಯ (eccentricity) ಕಾಣಿಸುತ್ತದೆ; ಆದರೆ ಯಾರೊಬ್ಬರೂ ಕೇಡಿಗರಲ್ಲ.

ಜಸ್ಟಿಸ್ ಷ್ಯಾಲೊ ನಮಗೆ ಹಿಂದೆಯೇ (ಹೆನ್ರಿ IV, ಭಾಗ 2 ರಲ್ಲಿ) ಪರಿಚಿತನಾದವನು. ಅವನ ಬುದ್ಧಿ ಮೊದಲಿಗಿಂತ ಹರಿತವೇನೂ ಆಗಿಲ್ಲ. ಮೊದಲಿನಂತೆಯೇ ಈಗಲೂ ಅವನಲ್ಲಿ ಸ್ವಾಭಿಮಾನ, ದೊಡ್ಡಸ್ತಿಕೆಯ ಪ್ರದರ್ಶನಗಳು ಕಾಣುತ್ತವೆ. ಅವನ ಬಂಧುವಾದ ಸ್ಲೆಂಡರ್‌ನ ಪಾತ್ರವೂ ಚೆನ್ನಾಗಿಯೇ ಬಂದಿದೆ. 'slender' ಆದರೂ, ಅವನು ಮೂಢನೂ ಹೌದು, ಹೇಡಿಯೂ ಹೌದು. ಅವನಿಗೆ ಆ್ಯನ್‌ಳನ್ನು ಮದುವೆಯಾಗಬೇಕೆಂಬ ಆಸೆಯಿದ್ದರೂ ಅದನ್ನು ಸ್ಪಷ್ಟವಾಗಿ ಒಪ್ಪಿಕೊಳ್ಳಲು ನಾಚಿಕೆ. 'ಅವಳಲ್ಲಿ ಪ್ರೀತಿಯಿದೆಯೋ ಇಲ್ಲವೊ? ಹೇಳು' ಎಂದು ಷ್ಯಾಲೊ ನೇರವಾಗಿ ಪ್ರಶ್ನೆಹಾಕಿದಾಗಲೂ ನಿಷ್ಕೃಷ್ಟವಾದ ಉತ್ತರಕೊಡಲೊಲ್ಲ. ನಮ್ಮಲ್ಲಿ ಹುಡುಗರಿಗೆ ಹದಿನೈದು-ಹದಿನಾರು ವರ್ಷವಾಗಿದ್ದಾಗಲೇ ಮದುವೆಮಾಡುತ್ತಿದ್ದ ಕಾಲದಲ್ಲಿ ಅವರು ಹೇಳುತ್ತಿದ್ದಂತೆ, 'ನೀವು ಒಪ್ಪಿದರೆ ಸರಿ, ನಿಮ್ಮ ಇಷ್ಟದಂತೆ ನಡೆಯುತ್ತೇನೆ' ಎನ್ನುತ್ತಾನೆ. 'ಮನೆಯೊಳಕ್ಕೆ ಬನ್ನಿ' ಎಂದು ಆ್ಯನ್ ಕರೆದಾಗಲೂ ಅವನಿಗೆ ಒಳಕ್ಕೆ ಹೋಗುವುದಕ್ಕೆ ನಾಚಿಕೆ. ಪ್ರೇಮದ ಮಾತಾಡುವುದಕ್ಕೆ ಅವನಿಗೆ ಬಾಯೇ ಇಲ್ಲ—ಅವಳೊಡನೆ ಅವನು ಆಡುವ ಮಾತು ಕರಡಿಗಳ ವಿಷಯ! ಅವನು ಪ್ರೇಮದ ಮಾತಾಡಬೇಕಾದರೆ 'Book of songs and sonnets' ನೋಡಿಕೊಂಡು ಮಾತಾಡಬೇಕು; ಆ ಪುಸ್ತಕದ ಸಹಾಯವಿಲ್ಲದಿದ್ದರೆ ಅವನ ಬಾಯಿ ಕಟ್ಟಿ ಹೋಗುತ್ತದೆ. ಅವನ ಪ್ರೇಮೋದ್ಗಾರವೇನಿದ್ದರೂ 'Oh heaven, This is Mistress Anne Page!' ಎಂದು ಬೆಚ್ಚುವುದರಲ್ಲೂ, ತನಗೆ ತಾನೇ 'Oh sweet Anne Page' 'Ah sweet Anne Page' ಎಂದು ನಿಟ್ಟುಸಿರೆಳೆಯುವುದರಲ್ಲೂ ಪರ್ಯವಸಾನವಾಗುತ್ತದೆ. ಅವನ ಮಾತು ಆ್ಯನ್‌ಳಿಗೆ ಬೇಸರ ತಂದದ್ದೇನೂ ಆಶ್ಚರ್ಯವಲ್ಲ. ಆಕೆಯ ಚಿತ್ರವೂ ನಾಟಕದಲ್ಲಿರುವ ಅಲ್ಪಾವಕಾಶದಲ್ಲಿ ಚೆನ್ನಾಗಿಯೇ ಮೂಡಿ ಬಂದಿದೆ. ಅವಳು ಸುಂದರಿ; ತನ್ನ ಮನಸ್ಸನ್ನು ತಾನು ಬಲ್ಲವಳು; ಫೆಂಟನ್‌ಗೆ ಒಲಿದಿದ್ದಾಳೆ; ತಂದೆ ತಾಯಿಯರ ಇಷ್ಟಕ್ಕೆ ವಿರೋಧವಾಗಿಯಾದರೂ ಅವನನ್ನು ಮದುವೆಯಾಗಲು ಸಿದ್ಧವಾಗಿದ್ದಾಳೆ. ಆದರೆ 'ಅವರ

---

* 'ಹೆನ್ರಿ V'ನಲ್ಲಿ ಮಿಸಿಸ್ ಕ್ವಿಕ್ಲಿ ಪಿಸ್ಟಲ್‌ನ ಹೆಂಡತಿಯಾಗಿದ್ದಳು. ಇಲ್ಲಿ ಅವರ ದಾಂಪತ್ಯದ ಮಾತೇನೂ ಇಲ್ಲ. ಅಲ್ಲದೆ ಇಲ್ಲಿ ಫಾಲ್‌ಸ್ಟಾಫ್ ಅವಳನ್ನು ಮೊದಲು ಕಂಡಾಗ ಅವಳ ಗುರುತಿಲ್ಲದವನಂತೆಯೇ ನಡೆದುಕೊಳ್ಳುತ್ತಾನೆ.

11976



ಒಪ್ಪಿಗೆಯನ್ನು ದೊರಕಿಸಿಕೊಳ್ಳಲು ಸರ್ವಪ್ರಯತ್ನವನ್ನೂ ಮಾಡು' ಎಂದು ಫೆಂಟನ್‌ಗೆ ಹೇಳುತ್ತಾಳೆ.

ಇನ್ನು ಉಳಿದವನು ಫಾಲ್‌ಸ್ಟಾಫ್. ಈ ನಾಟಕವು ಹುಟ್ಟಿದ್ದೇ ಅವನನ್ನು ಪ್ರಣಯಿಯನ್ನಾಗಿ ಚಿತ್ರಿಸುವುದಕ್ಕೆ—ಡೆನಿಸ್ ಹೇಳಿರುವ ಕಥೆಯ ಪ್ರಕಾರ. ಆದರೆ ಈ ನಾಟಕ ತನ್ನ ಮಿತಿಯಲ್ಲಿ ಕೊಡಬಲ್ಲ ಆನಂದವನ್ನು ಸವಿಯುವುದಕ್ಕೆ ಡೆನಿಸ್‌ನ ಕಥೆ ಅಡಚಣೆಯಾಗಬಹುದು—ಹಿಂದಿನ (ಹೆನ್ರಿIVನ) ಫಾಲ್‌ಸ್ಟಾಫ್‌ಗೆ ಹೋಲಿಸಿದರೆ ಇಲ್ಲಿಯವನು ಬೀಳಾಗಿ ಕಾಣುತ್ತಾನೆ. ಅಂದಮೇಲೆ, 'ಈ ನಾಟಕಕ್ಕೂ ಹಿಂದಿನ ಫಾಲ್‌ಸ್ಟಾಫ್-ನಾಟಕಗಳಿಗೂ ಸಂಬಂಧವಿಲ್ಲ, ಇದೇ ಬೇರೆ ನಾಟಕ' ಎಂದುಕೊಂಡು ಹಳೆಯ ಫಾಲ್‌ಸ್ಟಾಫ್‌ನನ್ನು ಮರೆಯುವುದು ಲೇಸು. ಆದರೆ ಅವನನ್ನು ಮರೆಯುವುದಾದರೂ ಹೇಗೆ! ಕವಿಯೇ ನಮಗೆ ಮತ್ತೆ ಮತ್ತೆ ಆತನ ನೆನಪುಕೊಡುತ್ತಿದ್ದಾನೆ. ಈ ಫಾಲ್‌ಸ್ಟಾಫ್‌ನೂ ಬೊಜ್ಜ. 'ಹೆನ್ರಿ IV' ನಲ್ಲಿ ಅವನ ಸಂಗಡಿಗರಾಗಿದ್ದವರು ಇಲ್ಲಿಯೂ ಬಂದಿದ್ದಾರೆ; ಅವರನ್ನು 'ಇವರು ಹೊಸಬರು' ಎನ್ನುವಂತೇನೂ ಚಿತ್ರಿಸಿಲ್ಲ—ಬಾರ್ಡಾಲ್ಫ್‌ನ ಮುಖದ ಕೆಂಬಣ್ಣವೇನೂ ಮಾಸಿಲ್ಲ, ಪಿಸ್ಟಲ್‌ನ 'rant' ಮೊದಲಿನಂತೆ ಉಳಿದಿದೆ. ಅಷ್ಟೇ ಅಲ್ಲ; ರಾಜಪುತ್ರ ಹೆನ್ರಿ ಈ ಗುಂಪಿನವರೊಡನೆ ತುಂಟಾಟಗಳಲ್ಲಿ ಕಾಲ ಕಳೆಯುತ್ತಿದ್ದನೆಂಬುದರ ಪ್ರಸ್ತಾಪ ನೇರವಾಗಿಯೂ ಇಲ್ಲಿ ಬರುತ್ತದೆ. 'ಹೆನ್ರಿ IV' ನಲ್ಲಿ ನಾವು ಕಾಣದಿದ್ದ—ಆದರೆ ಇಲ್ಲಿ ಕಾಣುವ—ಫೆಂಟನ್ ಆ ತುಂಟಾಟಗಳಲ್ಲಿ ಭಾಗಿಯಾಗಿದ್ದನಂತೆ; ಪೇಜ್‌ಗೆ ಅವನ ವಿಷಯದಲ್ಲಿ ಅಸಮಾಧಾನವಿರುವುದಕ್ಕೆ ಅದೇ ಕಾರಣ:

> he kept company with the wild prince and poins
>
> III, ii, 66-67.

ಇದನ್ನೆಲ್ಲಾ ನೋಡಿದರೆ, 'ಷೇಕ್ಸ್‌ಪಿಯರ್ ಇಲ್ಲಿ ಹಿಂದಿನ ಫಾಲ್‌ಸ್ಟಾಫ್‌ನ ಕಥೆಯನ್ನೇ ಮುಂದುವರಿಸಿದ್ದಾನೆ' ಎನ್ನಿಸುವುದು ಸಹಜ. ಈ ಭಾವನೆಗೆ ಪುಷ್ಟಿಕೊಡುವಂತೆ ಇಲ್ಲಿಯ ಫಾಲ್‌ಸ್ಟಾಫ್‌ನ ಮಾತೂ ಅನೇಕ ವೇಳೆ ಹಿಂದಿನವನ ನೆನಪು ತರುತ್ತದೆ:

> Reason, you rogue, reason: think' st thou I'll endanger my soul gratis ? At a word, hang no more about me, I am no gibbet for you . . . you stand upon your honour! why, thou unconfinable baseness, it is as much as I can do to keep the terms of my honour precise.
>
> —II, ii, 14 ff.

> You may know by my size that I have a kind of alacrity in sinking; if the bottom were as deep as hell, I should drown. I had been drowned, but that the shore was shelvy and shallow,—a death that I abhor; for the water swells a man; and what a thing should I have been when I had been swelled!
>
> —III, v, 11 ff.

ಈ ಮಾತುಗಳಲ್ಲಿರುವುದು ಹಳೆಯ ಫಾಲ್‌ಸ್ಟಾಫ್‌ನ ಸರಣಿಯೇ ಅಲ್ಲವೆ? ಅವನು ತನ್ನ ಬೊಜ್ಜುದೇಹವನ್ನು ಹೀಗೇ ಹಾಸ್ಯಮಾಡಿಕೊಳ್ಳುತ್ತಿದ್ದನಲ್ಲವೆ?

ಈ ವ್ಯಕ್ತಿ—ಸಂತತವಾಗಿಯಲ್ಲದಿದ್ದರೂ—ಕೆಲವು ವೇಳೆ ಹಿಂದಿನ ಫಾಲ್‌ಸ್ಟಾಫ್‌ನನ್ನು ಹೋಲುತ್ತಾನೆ, ನಿಜ. ಆದರೆ ಅವನಲ್ಲಿ ಹಿಂದಿನ ಅಜೇಯ ಧಾರ್ಷ್ಟ್ಯವಿದೆಯೆ? 'ಹೆನ್ರಿ IV'* ನಾಟಕದ ಫಾಲ್‌ಸ್ಟಾಫ್‌ನನ್ನು ಮಾತಿನಲ್ಲಿ ಸೋಲಿಸಿದವರು ಯಾರೂ ಇಲ್ಲ. ಅವನ ಬಾಯಿ ಕಟ್ಟಿ ಹೋದದ್ದು ಒಂದೇ ಒಂದುಸಾರಿ—ಅವನು ಐದನೆಯ ಹೆನ್ರಿಯಿಂದ ತಿರಸ್ಕೃತನಾದಾಗ. ಇಲ್ಲಿಯ ಫಾಲ್‌ಸ್ಟಾಫ್ ಮೊದಲನೆಯ ಅಂಕದಲ್ಲಿ ಮಾತ್ರ ಷ್ಯಾಲೋ ಇವನ ಮತ್ತು ಸ್ಲೆಂಡರ್‌ನ

---

*ಇಲ್ಲಿ 'ಹೆನ್ರಿ IV' ನಾಟಕದ ವಿಷಯ ಪ್ರಸ್ತಾಪಿಸುವಾಗ ಆ ನಾಟಕದ ಎರಡು ಭಾಗಗಳನ್ನೂ ಮನಸ್ಸಿನಲ್ಲಿಟ್ಟುಕೊಂಡಿದ್ದೇನೆ.

ಬಾಯಿಬಡಿದು ಗೆಲ್ಲುತ್ತಾನೆ. ಹಳೆಯ ಫಾಲ್‌ಸ್ಟಾಫ್‌ಸು ರಾಜಪುತ್ರ ಹೆನ್ರಿಯ ಮೇಲೂ ಮುಖ್ಯ ನ್ಯಾಯಾಧೀಶನ ಮೇಲೂ ಗಳಿಸಿದ ವಿಜಯಕ್ಕೆ ಹೋಲಿಸಿದರೆ, ಈ ವಿಜಯ ಕೇವಲ ಜುಜುಬಿ ಎನ್ನಿಸುತ್ತದೆ. ಪ್ಯಾಲೋವಿನಂಥ ಗುಬ್ಬಿಯ ಬಾಯಿ ಮುಚ್ಚಿಸುವುದಕ್ಕೆ ಫಾಲ್‌ಸ್ಟಾಫ್‌ನ ಬ್ರಹ್ಮಾಸ್ತ್ರ ಬೇಕೆ!

ಇಲ್ಲಿಯ ಫಾಲ್‌ಸ್ಟಾಫ್ ಒಂದಲ್ಲ, ಎರಡಲ್ಲ, ಮೂರುಸಾರಿ ವಂಚನೆಗೆ ಒಳಗಾಗುತ್ತಾನೆ. ಅವನ ಬುದ್ಧಿ ಅಷ್ಟು ಮೊಂಡಾಗಿದೆ! ಮೊದಲಸಾರಿ ಅವನು ಮಿಸಿಸ್ ಫೋರ್ಡ್‌ಳ ಮನೆಯಲ್ಲಿದ್ದಾಗ ಮಿಸಿಸ್ ಪೇಜ್ ಅಲ್ಲಿಗೆ ಬಂದಳು; ಅವನು ಪರದೆಯ ಹಿಂದೆ ಅವಿತುಕೊಂಡ. ಹಳೆಯ ಫಾಲ್‌ಸ್ಟಾಫ್‌ನೂ ('ಹೆನ್ರಿ IV, ಭಾಗ I' ರಲ್ಲಿ) ಹೀಗೇ ಅವಿತುಕೊಂಡಿದ್ದ—ಷೆರಿಫ್ ಅವನನ್ನು ಹಿಡಿಯಲು ಬಂದಾಗ. ಆಗ ಅವನು ಸ್ವಲ್ಪವೂ ಧೈರ್ಯಗೆಡಲಿಲ್ಲ, ಸುಖವಾಗಿ ನಿದ್ದೆ ಮಾಡುತ್ತಿದ್ದ. ಇಲ್ಲಾದರೋ, ಫಾಲ್‌ಸ್ಟಾಫ್ ಹೆದರಿನಡುಗುತ್ತಿದ್ದಾನೆ. ಹೆಂಗಸರೆದುರಿಗೆಅಂಜುಬುರುಕತನವನ್ನು ತೋರಿಸಬಾರದೆಂಬ ಪರಿಜ್ಞಾನವೂ ಅವನಿಗಿಲ್ಲ. 'ಎಲ್ಲಿ, ಆ ಕೊಳಕುಬಟ್ಟೆಯ ಬುಟ್ಟಿಯನ್ನು ತೋರಿಸಿ, ನಿಮ್ಮ ದಮ್ಮಯ್ಯ, ಆ ಬುಟ್ಟಿಯನ್ನು ತೋರಿಸಿ! ಅದರಲ್ಲಿ ಕೂತುಕೊಳ್ಳೀನಿ. ಹೇಗಾದರೂ ನನಗೆ ಸಹಾಯಮಾಡಿ, ಇಲ್ಲಿಂದ ನನ್ನನ್ನು ಸಾಗಿಸಿ!' ಎಂದು ಅಂಗಲಾಚುತ್ತಾನೆ (III, iii, 118ff). ಎರಡನೆಯ ಸಾರಿಯೂ ಇದೇ ಕಥೆ. 'ಅಯ್ಯೋ ನಾನೇನು ಮಾಡಲಿ! ಈ ಹೊಗೆಕೊಳವೆ ಒಳಗೆ ಅವಿತುಕೊಳ್ಳಲೆ? . . . . ಏನಾದರೂ ಉಪಾಯ ಹುಡುಕಲಾರಿರಾ? ಏನಾದರೂ ಅನುಭವಿಸಿಯೇನು, ಈ ಅಪಾಯ ತಪ್ಪಿಸಿಕೊಂಡರೆ ಸರಿ!' (IV, ii, 46 ff). ಈ ಸಾರಿ ಅವನಿಗೆ ದೊಣ್ಣೆಯ ಪೆಟ್ಟೂ ಬೀಳುತ್ತದೆ! ಕೊಳೆಬಟ್ಟೆಯ ಬುಟ್ಟಿಯಲ್ಲಿ ಕೂತು ಥೇಮ್ಸ್‌ನದಿಗೆ ಉರುಳಿಸಿಕೊಂಡ ಮೇಲೆ, ದೊಣ್ಣೆಯಿಂದ ಬಡಿಸಿಕೊಂಡ ಮೇಲೆ, ಫಾಲ್‌ಸ್ಟಾಫನ ಅಗ್ಗಳಿಕೆ ಏನೇನೂ ಉಳಿಯಲಾರದು. ಅವನು ಮತ್ತೆ ಜನರಿಗೆ ಮುಖ ತೋರಿಸುವುದು ಹೇಗೆ! ಮೊದಲ ಎರಡು ಸಾರಿ ತಾನು ಪಟ್ಟ ಬವಣೆಯನ್ನು ಬ್ರುಕ್‌ಗೆ ಹೇಳಿಕೊಳ್ಳುವ ಮಾತಿನಲ್ಲಾದರೂ ಸ್ವಲ್ಪ ಸ್ವಾರಸ್ಯವಿತ್ತು. ಮೂರನೆಯ ಸಾರಿ ಅದೂ ಉಳಿಯಲಿಲ್ಲ.

I do begin to perecive that I am made an ass.

ಎನ್ನುತ್ತಾನೆ. ತಾನು ಕತ್ತೆಯಾದನೆಂಬ ಅರಿವು ಆಗತಾನೆ ಆರಂಭವಾಗಿದೆಯಂತೆ! ಫೋರ್ಡ್, ಪೇಜ್, ಸರ್ ಹ್ಯೂ, ಎಲ್ಲರೂ ಮನಸಾರ ಬಯ್ದಾಗ ಉತ್ತರಕೊಡಲು ಅವನಿಗೆ ನಾಲಗೆಯೇ ಇಲ್ಲ. ಅವನ ಮಾತಿನ ಬುಗ್ಗೆ ಬತ್ತಿಹೋಗಿದೆ:

I am dejected; I am not able to answer the Welsh flannel . . . use me as you will.

V, v, 158 ff.

ಎಂದು ತೆಪ್ಪನಾಗುತ್ತಾನೆ.

ಹೀಗಾಗಿ ಈ ವ್ಯಕ್ತಿ ಹಳೆಯ ಫಾಲ್‌ಸ್ಟಾಫ್‌ನೂ ಅಲ್ಲ, ಹೊಸಬನೂ ಅಲ್ಲ, ಎನ್ನುವಂತಾಗಿದೆ. ಇಬ್ಬರು ಫಾಲ್‌ಸ್ಟಾಫ್‌ರಿಗೂ ನುಡಿಯಲ್ಲಿ ಸ್ವಲ್ಪ ಹೋಲಿಕೆಯಿದ್ದರೂ ನಡೆಯಲ್ಲಿ ಇಲ್ಲವೇ ಇಲ್ಲವೇನೋ ಎನ್ನುವಂತಾಗಿದೆ. ಷೇಕ್ಸ್‌ಪಿಯರ್ ಯಾವುದೋ ನಾಟಕದ ವಸ್ತುವನ್ನು ತೆಗೆದುಕೊಂಡು ಅದರ ಜೊತೆಗೆ ಫಾಲ್‌ಸ್ಟಾಫ್‌ನನ್ನು ಹೊಂದಿಸಲು ಪ್ರಯತ್ನಮಾಡಿದ್ದೇ ತಪ್ಪೇನೊ—ಆ ತಪ್ಪಿನ ಜವಾಬ್ದಾರಿ ಎಲಿಸಬೆತ್ ರಾಣಿಯ ಮೇಲೆ ಬರಗಬೇಕು. ಆಕೆಯ ಸಂತೋಷಕ್ಕಾಗಿ ಫಾಲ್‌ಸ್ಟಾಫ್‌ನ ಹೆಸರನ್ನು ಇಲ್ಲಿಯೂ ಬಳಸಿಕೊಂಡದ್ದಾಯಿತು; ಅಂದಮೇಲೆ ಆತನ ಮಾತಿನ ಸರಣಿಯೂ ಸ್ವಲ್ಪಮಟ್ಟಿಗೆ ಕಂಡುಬರಬೇಕಾದ್ದು ಸ್ವಾಭಾವಿಕ—ರಾಣಿ ಅವನನ್ನು ರೂಪಿನಿಂದ ಮಾತ್ರವಲ್ಲದೆ ಮಾತಿನಿಂದಲೂ ಗುರುತಿಸಬೇಕಷ್ಟೆ. ಆಕೆಯ ಬಯಕೆಯನ್ನು ಇಷ್ಟು ಮಟ್ಟಿಗಾದರೂ ಈಡೇರಿಸಬೇಕು—ಪೂರ್ತಿ ಈಡೇರಿಸುವುದು ಸಾಧ್ಯವಲ್ಲ; ಫಾಲ್‌ಸ್ಟಾಫ್ ಪ್ರಣಯಿಯಾಗಲಾರ.

ನಿಜವಾಗಿ ನೋಡಿದರೆ, ಷೇಕ್ಸ್‌ಪಿಯರ್ ರಾಣಿಯ ಆಜ್ಞೆಯಲ್ಲಿ ಮುಖ್ಯಾಂಶವಾದದ್ದನ್ನೇ--ಫಾಲ್‌ಸ್ಟಾಫ್ ಪ್ರಣಯಿಯಾದದ್ದನ್ನು ತೋರಿಸಬೇಕೆಂಬುದನ್ನೇ—ಬಿಟ್ಟುಬಿಟ್ಟಿದ್ದಾನೆ. ಆತನ ಮತ್ತು ಅವನ ಸಂಗಡಿಗರ ಹೆಸರುಗಳನ್ನು ಮಾತ್ರ ಎಳೆತಂದು, ಅವರ ಮಾತಿಗೂ ರೂಪಕ್ಕೂ ಅದೇ ಬಣ್ಣವನ್ನು ಕೊಟ್ಟು ರಾಣಿಗೆ ವಂಚನೆಮಾಡಿದ್ದಾನೆ! ಇಲ್ಲಿಯ ಫಾಲ್‌ಸ್ಟಾಫ್ ನಿಜವಾಗಿ ಪ್ರಣಯಿಯೆ ? ಅವನಲ್ಲಿ ರಮ್ಯಪ್ರೇಮ ಲವಲೇಶವಾದರೂ ಇಲ್ಲವೆಂಬುದಂತೂ ಯಾರಿಗಾದರೂ ಸ್ಪಷ್ಟವಾಗುತ್ತದೆ. ಅದಿಲ್ಲದಿದ್ದರೆ ಹೋಗಲಿ, ಕೇವಲ ಸ್ತ್ರೀವ್ಯಾಮೋಹವಾದರೂ ಅವನಲ್ಲಿ ಕಾಣುತ್ತದೆಯೆ ? ಅವನು ಮಿಸಿಸ್ ಪೇಜ್, ಮಿಸಿಸ್ ಫೋರ್ಡ್, ಇಬ್ಬರನ್ನೂ ಏಕಕಾಲದಲ್ಲಿ ವಶಪಡಿಸಿಕೊಳ್ಳಲು ಪ್ರಯತ್ನಿಸುತ್ತಾನೆ; ಅವರಿಬ್ಬರಿಗೂ ಬೇರೆ ಬೇರೆ ಪ್ರಣಯಪತ್ರವನ್ನು ಬರೆಯುವಷ್ಟು ಆಸಕ್ತಿಯೂ ಅವನಿಗಿಲ್ಲ—ಒಂದೇ ಪತ್ರವನ್ನು ನಕಲುಮಾಡಿ ಕಳಿಸುತ್ತಾನೆ! ಅವನಿಗೆ ಬೇಕಾದ್ದು ಹೆಣ್ಣಲ್ಲ, ಹೊನ್ನು; ಹೆಣ್ಣು ಹೊನ್ನಿಗೆ ಸಾಧನ ಮಾತ್ರ. ಹೆಣ್ಣನ್ನು (ಮಿಸಿಸ್ ಫೋರ್ಡ್‌ಳನ್ನು) ಗೆದ್ದರೂ ಬ್ರುಕ್‌ಗೆ ಬಿಟ್ಟುಕೊಡಲು ಸಿದ್ಧನಾಗಿದ್ದಾನೆ—ಹಣಕ್ಕೆ ಪ್ರತಿಫಲವಾಗಿ. ಅವನ ಭಾಗಕ್ಕೆ ಮಿಸಿಸ್ ಫೋರ್ಡ್‌ಳು ಗಂಡನ ಖಜಾನೆಯ ಬೀಗದಕೈ ಇದ್ದಂತೆ; ಆದ್ದರಿಂದ ಅವಳು ಬೇಕು (II, ii, 257-8). ಆ ಪತ್ನಿಯರ ವಿಷಯದಲ್ಲಿ ಹಣದ ಆಸೆಗಿಂತ ಹೆಚ್ಚಿನ ಆಸಕ್ತಿಯೇನೂ ಅವನಿಗಿರಲಿಲ್ಲ.

ಒಟ್ಟಿನಲ್ಲಿ ಹಿಂದಿನ ಹಾಸ್ಯವೀರನ ಚಹರೆ ಕಂಡುಬಂದರೂ 'ಇಲ್ಲಿಯ ಫಾಲ್‌ಸ್ಟಾಫ್ ಬೇರೆ ವ್ಯಕ್ತಿ' ಎಂದುಕೊಳ್ಳುವುದೇ ಲೇಸು—ಈ ವಿಷಯದಲ್ಲಿ ಷೇಕ್ಸ್‌ಪಿಯರ್‌ನ ಉದ್ದೇಶ ಏನೇ ಇದ್ದಿರಲಿ. 'ಹೆನ್ರಿ IV, ಭಾಗ 2'ರ ಕೊನೆಕೊನೆಗೆ ಫಾಲ್‌ಸ್ಟಾಫ್ ಇಳಿಮುಖನಾಗಿರುವುದನ್ನು ಕವಿ ತೋರಿಸಿದ್ದಾನೆಂಬುದನ್ನು ಹಿಂದೆ ಕಂಡೆವಷ್ಟೆ. 'ಆ ಫಾಲ್‌ಸ್ಟಾಫ್‌ನ ಗತಿ ಕೊನೆಗೆ ಆಗಬೇಕಾದ್ದು ಹೀಗೆಯೇ' ಎಂದು ಈ ನಾಟಕದಲ್ಲಿ ಷೇಕ್ಸ್‌ಪಿಯರ್ ತೋರಿಸಿದ್ದಾನೆಂಬುದು ಒಂದು ವಾದ. ಹೀಗೆ ನಂಬುವುದಕ್ಕೆ ಎರಡು ಮುಖ್ಯವಾದ ಅಡಚಣೆಗಳಿವೆ. ಒಂದು: ಫಾಲ್‌ಸ್ಟಾಫ್ ಕಾಲ್ಪನಿಕ ವ್ಯಕ್ತಿ. ಷೇಕ್ಸ್‌ಪಿಯರ್ ಅವನ ಜೀವನಚರಿತ್ರೆಯನ್ನೇನೂ ಬರೆಯುತ್ತಿಲ್ಲ. ಒಂದು ನಾಟಕದಲ್ಲಿ ಬರುವ ವ್ಯಕ್ತಿಗಿರುವ ಜೀವ ಆ ನಾಟಕದ ಎಲ್ಲೆಗಳೊಳಗೆ ಮಾತ್ರ. ಅವನ ವ್ಯಕ್ತಿತ್ವ ಆ ನಾಟಕದೊಡನೆಯೇ ಕೊನೆಗಾಣುತ್ತದೆ; ಆ ವ್ಯಕ್ತಿಯ ಚಹರೆಯನ್ನು ಮತ್ತೆ ತಂದು ನಾಟಕದಲ್ಲಿ ಮುಂದುವರಿಸುವ ಪ್ರಯತ್ನ ನಡೆದಿದ್ದರೂ ಈ ಮಾತು ಸತ್ಯ. ಆದ್ದರಿಂದ ಇಲ್ಲಿಯ ಫಾಲ್‌ಸ್ಟಾಫ್ ಬೇರೆಯೆಂದು ಭಾವಿಸುವುದೇನೂ ತಪ್ಪಲ್ಲ. ಎರಡು: 'ಹೆನ್ರಿ IV'ನ ಫಾಲ್‌ಸ್ಟಾಫ್ ತನ್ನ ಸೃಷ್ಟಿಕರ್ತನಿಗೆ ಆನಂದವನ್ನು ಕೊಟ್ಟಿದ್ದನೆಂಬ ವಿಷಯದಲ್ಲಿ ಸಂಶಯವಿಲ್ಲ—ಆದ್ದರಿಂದಲೇ ಕವಿಯು ಆತನಿಗೆ ಮನಸೆಳೆಯುವಂಥ ಮರಣವನ್ನು ಕಲ್ಪಿಸಿದ. ಆ ಫಾಲ್‌ಸ್ಟಾಫ್‌ನ ಬೆನ್ನುಹತ್ತಿ, ನಾಟಕದಿಂದ ನಾಟಕಕ್ಕೆ ಓಡಿಸಿಕೊಂಡು ಬಂದು, ಬೇಟೆಯಾಡಿ ಅವನನ್ನು ಕೊಳೆ ಬಟ್ಟೆಯ ಕುಕ್ಕೆಯಲ್ಲಿ ತುರುಕಿ ನದೆಬಡಿದನೆಂಬುದು ನಂಬಲಾಗದ ಮಾತು. 'ನಿನ್ನ ಜೀವನಕ್ಕೆ ಇದೇ ತರ್ಕಬದ್ಧವಾದ ಕೊನೆ' ಎಂದು ಅವನಿಗೆ ಉಪದೇಶಮಾಡುವುದಕ್ಕೆ ಷೇಕ್ಸ್‌ಪಿಯರ್ ಈ ನಾಟಕವನ್ನು ಬರೆದನೆ!

ರಾಣಿಯ ಆಜ್ಞೆ ಬಂತು, ಷೇಕ್ಸ್‌ಪಿಯರ್ ತನ್ನ ಹಳೆಯ ಫಾಲ್‌ಸ್ಟಾಫ್‌ನನ್ನು ಮನಸ್ಸಿನಲ್ಲಿಟ್ಟುಕೊಂಡು ನಾಟಕ ರಚನೆಯನ್ನು ಆರಂಭಿಸಿದ. ಆ ಫಾಲ್‌ಸ್ಟಾಫ್‌ನ ನೆನಪು ಉಳಿದಿದೆಯಾದರೂ ಇಲ್ಲಿಯವನು ಬೇರೆ ವ್ಯಕ್ತಿ—ಸಾಹಿತ್ಯಮೀಮಾಂಸೆಯ ದೃಷ್ಟಿಯಿಂದ. ಷೇಕ್ಸ್‌ಪಿಯರ್‌ನ ಕಲೆಯ ಬೆಳವಣಿಗೆಗೆ ಅಷ್ಟೇನೂ ನೇರವಾಗಿ ಸಂಬಂಧಪಡದಿದ್ದರೂ ರಂಗಸ್ಥಳದ ಮೇಲೆ ಯಶಸ್ವಿಯಾಗುವ ಈ ನಾಟಕದ ರಸಾಸ್ವಾದನೆಗೆ ಇದಕ್ಕಿಂತ ಹೆಚ್ಚಿನ ಚರ್ಚೆ ಸಹಾಯಕವಲ್ಲ.

ಎ. ಎನ್. ಮೂರ್ತಿರಾವ್

## "ಕಿಮಾತ್ಮಾನಂ ನ ಬುಧ್ಯಸೇ"

ವಾಲ್ಮೀಕಿ ರಾಮಾಯಣದಲ್ಲಿ ನಾಯಕನಾದ ರಾಮನನ್ನು ಬಿಟ್ಟರೆ ಹನುಮಂತನೇ ಶ್ರೇಷ್ಠತಮ ವ್ಯಕ್ತಿ. ಅತಿ ಕಷ್ಟದ ಕಾಯಕವನ್ನು ಯಾವಾಗ ಬೇಕಾದರೂ ಕೈಗೊಳ್ಳುವುದರಲ್ಲಾಗಲಿ, ಪರಿಸ್ಥಿತಿಗೆ ಅನುರೂಪವಾದ ದೇಹಬಲ ಬುದ್ಧಿಬಲಗಳನ್ನು ತಕ್ಷಣ ಅಜೇಯವಾಗಿ ತೋರಿಸುವುದರಲ್ಲಾಗಲಿ, ಭವ್ಯ ತೇಜಸ್ಸಿನಿಂದ ಅಡಿಗಡಿಗೆ ಪರಿಶೋಭಿಸುವುದರಲ್ಲಾಗಲಿ ಅವನನ್ನು ಹೋಲುವ ವೀರಪುಂಗವ ಇನ್ನೊಬ್ಬನಿಲ್ಲ. ಸೀತೆಯಿಂದ ಬಂದಿರುವ ಚೂಡಾಮಣಿಯನ್ನು ಕೈಯಲ್ಲಿ ಇರಿಸಿಕೊಂಡು ರಾಮ ನುಡಿಯುವ ನುಡಿಯೇನು?

> **ಕೃತಂ ಹನುಮತಾ ಕಾರ್ಯಂ ಸುಮಹದ್ಭುವಿ ದುರ್ಲಭಮ್ |**
> **ಮನಸಾಪಿ ಯದನ್ಯೇನ ನ ಶಕ್ಯಂ ಧರಣೀತಲೇ ||**
>
> **—ಯುದ್ಧಕಾಂಡ: 1—2**

ಭಾರಿ ಬಿರುದು ಇದು ಹನುಮಂತನಿಗೆ. ಮತ್ತೊಂದು ಗಭೀರ ಸಂದರ್ಭದಲ್ಲಿ ಇನ್ನೂ ಹೆಚ್ಚಿನ ಪ್ರಶಸ್ತಿ, ಪ್ರಾಯಶಃ ಪ್ರಶಸ್ತಿಗಳ ಮೇರುಶಿಖರ, ಅವನಿಗೆ ಸಂದಿದೆ. ಯುದ್ಧಕಾಂಡದ ೭೪ನೇ ಸರ್ಗ. ಇಂದ್ರಜಿತ್ತುವಿನ ಬ್ರಹ್ಮಾಸ್ತ್ರದ ಕಟ್ಟುಗಳಿಗೆ ಸಿಕ್ಕಿ ಸಮಸ್ತ ವಾನರಸೇನೆ ನಿಶ್ಚೇಷ್ಟಿತವಾಗಿದೆ; ರಾಮಲಕ್ಷ್ಮಣರಿಗೂ ಮೂರ್ಛೆ. ಇಬ್ಬರೇ ಎಚ್ಚೆತ್ತಿರುವವರು: ಹನುಮಂತ, ವಿಭೀಷಣ. ಪಂಜು ಹಿಡಿದುಕೊಂಡು ರಣರಂಗವನ್ನು ಶೋಧಿಸುತ್ತ ಅವರೀರ್ವರೂ ಹೆಜ್ಜೆಯಿಕ್ಕುತ್ತಾರೆ. ಬಾಣಪೀಡಿತನಾಗಿ ಕುಸಿದು ಮಲಗಿದ್ದರೂ ಪ್ರಜ್ಞೆಯುಳ್ಳವನಾಗಿರುವ ಜಾಂಬವಂತ ಕಾಣಬರುತ್ತಾನೆ ಕಣ್ಣಿಗೆ. "ಹೇಗಿದ್ದೀಯೆ ನೀನು" ಎಂಬ ಕುಶಲಪ್ರಶ್ನೆಗೆ ಅವನು ಅವಸರದಿಂದ ಮರುಪ್ರಶ್ನೆ ಹಾಕುತ್ತಾನೆ ಅವರಲ್ಲಿ:

> **ಅಂಜನಾ ಸುಪ್ರಜಾ ಯೇನ ಮಾತರಿಶ್ವಾ ಚ ನೈರ್ಋತ|**
> **ಹನುಮಾನ್ವಾನರಶ್ರೇಷ್ಠಃ ಪ್ರಾಣಾನ್ ಧಾರಯೇತ್ ಕ್ವಚಿತ್||**
>
> **—ಯುದ್ಧ : 74—18**

ಚಕಿತನಾದ ವಿಭೀಷಣ ಎನ್ನುತ್ತಾನೆ: "ಇದೇನು ಜಾಂಬವ, ರಾಮ ಲಕ್ಷ್ಮಣ ಸುಗ್ರೀವರ ಯೋಗಕ್ಷೇಮವನ್ನು ವಿಚಾರಿಸದೆ ಮಾರುತಿಯನ್ನು ಬಗೆಯುತ್ತಿರುವೆ! ಮಾರುತಿಯೆಂದರೆ ನಿನಗೆಷ್ಟು ಅಗಾಧ ಪ್ರೀತಿ!" ಜಾಂಬವ ಆಗ ಸತ್ಯಾಂಶವನ್ನು ನಿಷ್ಪಕ್ಷಪಾತದಿಂದ ಹೊರಗೆಡಹುತ್ತಾನೆ: "ಹನುಮಂತ ಉಳಿದಿದ್ದರೆ ನಾವೆಲ್ಲರೂ ಉಳಿದಂತೆ!"

> **ತಸ್ಮಿನ್ ಜೀವತಿ ವೀರೇತು ಹತಮಪ್ಯಹತಂ ಬಲಂ|**
> **ಹನುಮತ್ಯುಜ್ಝಿತಪ್ರಾಣೇ ಜೀವಂತೋ ಪಿ ವಯಂ ಹತಾಃ||**
>
> **—ಯುದ್ಧ : 74—22**

ಹನುಮಂತನ ಪುರುಷಸತ್ವ ದಿಟವಾಗಿ ಅಳತೆಗೆ ಮೀರಿದುದು, ಆಶ್ಚರ್ಯಪ್ರೇರಕ, ಅಚಿಂತ್ಯ. ಪ್ರಪಂಚದ ಭವ್ಯಕಾವ್ಯ (Epic) ಗಳಲ್ಲಿ ಒಡಮೂಡಿ ಚಿರಂಜೀವಿಗಳಾಗಿ ನಮ್ಮನ್ನು ಹರಸುತ್ತಿರುವ ಅಕಿಲೀಸ್ ಹರ್ಕ್ಯುಲೀಸ್ ಓಡಿನ್ ಬಾಲ್ಡರ್ ರುಸ್ತುಂ ಭೀಮಸೇನರಂಥ ಲೋಕರಕ್ಷಕರ ಕೂಟದಲ್ಲಿ ಅವನಿಗೊಂದು ಹೆಮ್ಮೆಯ ಪೀಠ.

ಈ ಮಟ್ಟದ ಆಂಜನೇಯ ಆದೊಮ್ಮೆ ದುಗುಡ ಭಾರದಿಂದ ತಗ್ಗಿ, ಮ್ಲಾನಮುಖನಾಗಿ,

ನೆಲದ ಮೇಲೆ ದೃಷ್ಟಿಯನ್ನೂರಿ, ಏಕಾಂಗಿಯಾಗಿ ಕುಳಿತಿದ್ದನೆಂದರೆ ನಂಬಬಹುದೆ? ಹಾಗಾದದ್ದುಂಟು. ಕಿಷ್ಕಿಂಧಾಕಾಂಡಕ್ಕೆ ಕೊನೆಯಾಗಿರುವ ನಾಲ್ಕೈದು ಸರ್ಗಗಳನ್ನು ಜ್ಞಾಪಿಸಿಕೊಳ್ಳಿ.

ವೀರ ವಾನರಲೋಕಸ್ಯ ಸರ್ವಶಾಸ್ತ್ರವಿಶಾರದ|
ತೂಷ್ಣೀಮೇಕಾಂತಮಾಶ್ರಿತ್ಯ ಹನುಮನ್‌ಕಿಂ ನ ಜಲ್ಪಸಿ||
—ಕಿಷ್ಕಿಂಧಾಕಾಂಡ : 66—2

ಸೀತಾನ್ವೇಷಣೆಗಾಗಿ ದಕ್ಷಿಣ ದಿಕ್ಕಿಗೆ ಹೊರಟ ಅಂಗದತಂಡಕ್ಕೆ ಸಂಪಾತಿಯ ಮೂಲಕ ಲಂಕೆಯ ವೃತ್ತಾಂತ ತಿಳಿಯುತ್ತದೆ:

ತಸ್ಯಾಂ ವಸತಿ ವೈದೇಹೀ ದೀನಾ ಕೌಶೇಯವಾಸಿನೀ |
ರಾವಣಾಂತಃಪುರೇ ರುದ್ಧಾ ರಾಕ್ಷಸೀಭಿಸ್ಸುರಕ್ಷಿತಾ ||
—ಕಿಷ್ಕಿ : 58—22

ಆದರೆ, ಅವರಿರುವ ಜಾಗಕ್ಕೂ ರಾಕ್ಷಸ ರಾಜಧಾನಿಗೂ ಮಧ್ಯೆ ಹರಡಿಕೊಂಡಿದೆ ಬಲುಭೀತಿ ಹುಟ್ಟಿಸುವ ಮಹೋದಧಿ:

ಆಕಾಶಮಿವ ದುಷ್ಪಾರಂ ಸಾಗರಂ ಪ್ರೇಕ್ಷ್ಯ ವಾನರಾಃ|
ವಿಷೇದುಸ್ಸಹಸಾ ಸರ್ವೇ ಕಥಂ ಕಾರ್ಯಮಿತಿ ಬ್ರುವನ್ ||
—ಕಿಷ್ಕಿ : 64—8

ಪಡೆಯ ಮುಂದಾಳಾದ ಅಂಗದ ಕೇಳುತ್ತಾನೆ:

ಕ ಇದಾನೀಂ ಮಹಾತೇಜಾ ಲಂಘಯಿಷ್ಯತಿ ಸಾಗರಂ|
ಕಃ ಕರಿಷ್ಯತಿ ಸುಗ್ರೀವಂ ಸತ್ಯಸಂಧಮರಿಂದಮಂ||
—ಕಿಷ್ಕಿ : 64—17

ಯಾರಿಂದಲೂ ಅಭಯವೀಯುವ ಪ್ರತ್ಯುತ್ತರವಿಲ್ಲ. ಅಷ್ಟೇಕೆ, ಮಾತನಾಡುವ ಅಭೀಪ್ಸೆಯೇ ಎಲ್ಲರಲ್ಲೂ ನಶಿಸಿಹೋಗಿದೆ. ಕೊಂಚ ಹೊತ್ತಿನ ತರುವಾಯ ಜ್ಞಾನಾನುಭವ ವೃದ್ಧನೂ ಬೆಳಕು ತೋರುವವನೂ ಆದ ಜಾಂಬವಂತ,

ಅಸ್ಯ ತೇ ವೀರ ಕಾರ್ಯಸ್ಯ ನ ಕಿಂಚಿತ್ಪರಿಹೀಯತೇ |
ಏಷ ಸಂಚೋದಯಾಮ್ಯೇನಂ ಯಃ ಕಾರ್ಯಂ ಸಾಧಯಿಷ್ಯತಿ ||
—ಕಿಷ್ಕಿ: 65-34

ಎಂಬ ಭರವಸೆಯನ್ನಿತ್ತು, ಆ ಗುಂಪಿನಿಂದಾಚೆ ಅನತಿದೂರದಲ್ಲಿ ಕುಳಿತಿದ್ದ ಉದ್ಧಾರಕನ ಬಳಿಗೆ ಧಾವಿಸುತ್ತಾನೆ.

ತತಃ ಪ್ರತೀತಂ ಪ್ಲವತಾಂ ವರಿಷ್ಠಮೇಕಾಂತಮಾಶ್ರಿತ್ಯ ಸುಖೋಪವಿಷ್ಟಮ್ |
ಸಂಚೋದಯಾಮಾಸ ಹರಿಪ್ರವೀರೋ ಹರಿಪ್ರವೀರಂ ಹನುಮಂತಮೇವ ||
—ಕಿಷ್ಕಿ: 65-35

ಎಂದರೆ, ವಾನರರ ಸಮಾಲೋಚನೆಯಲ್ಲಿ ಭಾಗವಹಿಸಿಲ್ಲ ಆಂಜನೇಯ. ಚಿಂತಾಕ್ರಾಂತನಾಗಿ ನಿರ್ಜನ ಪ್ರದೇಶಕ್ಕೆ ನಡೆದು ತಾನೊಬ್ಬನೇ ತನ್ನ ಯೋಚನೆಗಳೊಂದಿಗೆ ಹೆಣಗಾಡುವುದು ಅವನಿಗೇತಕ್ಕೆ ಪ್ರಿಯವಾಯ್ತು? ಅವರೆಲ್ಲರ ಮುಂದಿರುವ ಮಹೋದ್ಯಮದ ಅತೀವ ಭಾರ ಅವನನ್ನೂ ಅದುಮುತ್ತಿದೆ ಒಂದುಕಡೆ. ಇನ್ನೊಂದುಕಡೆ ತಾನಾರೆಂಬ ಆತ್ಮಪರಿಜ್ಞಾನ ಇಲ್ಲದೆ ತಬ್ಬಿಬ್ಬಾಗಿದ್ದಾನೆ ಅವನು. 'ಗವಯ ಗವಾಕ್ಷರಂತೆ ತಾನೂ ಒಬ್ಬ ಕಪಿ ತಾನೆ; ಹೆಚ್ಚೆಂದರೆ ತಾನು ಮೈಂದ ದ್ವಿವಿದರಿಗೆ ಸಾಟಿ. ಸುಷೇಣ ಜಾಂಬವರಷ್ಟು ದೊಡ್ಡವ ತಾನಲ್ಲ. ಯುವರಾಜ

ಅಂಗದನ ಹೆಸರನ್ನಾಗಲಿ ಮಹಾರಾಜ ಸುಗ್ರೀವನ ಹೆಸರನ್ನಾಗಲಿ ತನ್ನ ಹೆಸರಿನೊಡನೆ ಎಂದಾದರೂ ಸೇರಿಸಬಹುದೆ!' ಈ ಬಗೆಯ ವಿನೀತ ಭಾವನೆಗಳಿಂದ ಸ್ವಂತ ಶಕ್ತಿ ಯುಕ್ತಿ ಸಾಹಸಗಳನ್ನು ಕುರಿತು ಅವನಲ್ಲಿ ಗಾಢ ಸಂದೇಹ ಉಲ್ಬಣವಾಗಿದೆ. ಅವನೆಷ್ಟೇ ಆತ್ಮವಂತನಾದರೂ ಆತ್ಮ ಸಂಶಯದ ಪ್ರಾಬಲ್ಯದಿಂದ ಆತ್ಮಪ್ರಕಾಶ ಸಾಕಷ್ಟು ಬೆಳಗದೆ ಅವನ ಆತ್ಮಾಭಿಮಾನ ಮಂಕಾಗಿ ಬಿಟ್ಟಿದೆ. ಪ್ರಾಯಶಃ ತನ್ನಲ್ಲಿ ತಕ್ಕ ಸಾಮರ್ಥ್ಯ ಇರಬಹುದೊ ಏನೊ ಎಂಬ ಆಶಯದ ಅರುಣೋದಯಕ್ಕೇ ತಡೆಹಾಕುತ್ತಿದೆ ಅವನಿಗೆ ಸಹಜವಾದ ಆತ್ಮಸಂಯಮ. ಅಂತೂ ಒಂದು ರೀತಿಯ ಆತ್ಮವಂಚನೆಗೆ ಪಕ್ಕಾಗಿದ್ದಾನೆ ಹನುಮಂತ. ಆತ್ಮನಿಂದೆಯನ್ನೇನೂ ಅವನು ಮಾಡಿಕೊಳ್ಳುತ್ತಿಲ್ಲ; ಆದರೆ ಅಪ್ರಯತ್ನಿತವಾಗಿ ಅವನಿಂದ ಆಗುತ್ತಿದೆ ಆತ್ಮಾನಪೇಕ್ಷೆ, ಆತ್ಮನಿರಾಕರಣೆ. ಪಾತ್ರದ ಆಂತರ್ಯ ಪ್ರಕಟನೆಯ ದೃಷ್ಟಿಯಿಂದ ಕಾವ್ಯದ ಈ ಭಾಗವೊಂದು ರಾಗವತ್ತಾದ ಘಟ್ಟ. ಈಗ ಹನುಮಂತನಿಗೂ ಅಗತ್ಯವಾಗಿದೆ ಅಸಾಧಾರಣವಾದ ಆಶ್ರಯ, ಅವನಿಗೆ ಗೊತ್ತಾಗದಂತೆ. ಆ ಆಶ್ರಯದಾತ, ಮಾರ್ಗದರ್ಶಿ, ಗುರುವೇ ಋಕ್ಷಾಧೀಶ ಜಾಂಬವಾನ್. ಹನುಮಂತ ನಿಜವಾಗಿ ಯಾರೆಂಬ ಗುಟ್ಟು ಅವನೊಬ್ಬನಿಗೆ ಗುಟ್ಟಲ್ಲ; ಹನುಮಂತನ ವ್ಯಕ್ತಿಬಲದ ಎತ್ತರವನ್ನೂ ಕಾರ್ಯಪಟುತ್ವದ ಪಾರಮ್ಯವನ್ನೂ ಅವನು ಬಲ್ಲ. ಸದ್ದಿಲ್ಲದೆ ಬಂದು, ವತ್ಸನ ಬೆನ್ನನ್ನು ತಟ್ಟಿ, ತುಂಬುಹೃದಯದಿಂದ ಪ್ರಾರಂಭಿಸುತ್ತಾನೆ ತನ್ನ ಪರಿಣಾಮಕಾರಿಯಾಗುವ ಭಾಷಣವನ್ನ:

ವೀರ ವಾನರಲೋಕಸ್ಯ ಸರ್ವಶಾಸ್ತ್ರವಿಶಾರದ।
ತೂಷ್ಣೀಮೇಕಾಂತಮಾಶ್ರಿತ್ಯ ಹನುಮನ್‌ಕಿಂ ನ ಜಲ್ಪಸಿ॥
ಬಲಂ ಬುದ್ಧಿಶ್ಚ ತೇಜಶ್ಚ ಸತ್ವಂ ಚ ಹರಿಪುಂಗವ।
ವಿಶಿಷ್ಟಂ ಸರ್ವಭೂತೇಷು ಕಿಮಾತ್ಮಾನಂ ನ ಬುಧ್ಯಸೇ॥

—ಕಿಷ್ಕಿ: 66-2, 7

ಮುಂದೆ ಜಾಂಬವಂತ ಹೂಡಿ ಸಮರ್ಪಕ ಸಮಾಪ್ತಿಗೆ ಕೊಂಡೊಯ್ಯುವ ವ್ಯಾಪಾರ ಬರಿ ಮಾತುಗಾರಿಕೆಯಲ್ಲ, ಸುಮ್ಮನೆ ಹುರಿದುಂಬಿಸುವುದಲ್ಲ, ಆಗಲಿರುವ ಘಟನಾವಳಿಗೆ ಕೇವಲ ಪೂರ್ವಸಿದ್ಧತೆಯಲ್ಲ. ಸಮುದ್ರಲಂಘನ ಸೀತಾದರ್ಶನ ನಿಶಾಚರವಧೆ ಲಂಕಾಧ್ವಂಸ ಇತ್ಯಾದಿ ದಿಗ್ಗಜ ಕಾರ್ಯಕ್ಕೆ ಆವಶ್ಯಕವಾಗಿದೆ ಒಂದು ದಿವ್ಯಸತ್ವ. ಅದರ ಸರ್ವಾಂಗಸುಂದರ ನಿರ್ಮಾಣವೇ ಜಾಂಬವಂತನ ಜವಾಬ್ದಾರಿ, ಅವನ ಜ್ಞಾನ ಅನುಭವ ಧೀಶಕ್ತಿ ತ್ಯಾಗ ವಾಂಛಿಲ್ಯಗಳಿಗೆ ಯೋಗ್ಯ ಸವಾಲು. ಹನುಮಂತನನ್ನು ಅಡಸಿರುವ ಆತ್ಮಶಂಕೆಯ ಭೂತ ಅವನ್ನೇನೂ ಅಡಸಿಲ್ಲ, ತನ್ನ 'ಸಾಮರ್ಥ್ಯ'ದಲ್ಲಿ ಪೂರ್ಣ ನೆಚ್ಚಿಕೆಯಿದೆ ಜಾಂಬವನಿಗೆ. ಸಾಮಾನ್ಯ 'ಹನುಮ'ನನ್ನು 'ವೀರ ಮಾರುತಿ'ಯನ್ನಾಗಿ ಬೆಳೆಸಿ ಬದಲಾಯಿಸುವ ಕೃಷಿಯಲ್ಲಿ ಅವನು ಕೃತಕೃತ್ಯ. ಮರದಿಂದ ಮರಕ್ಕೆ ಕುಪ್ಪಳಿಸಿ ತೃಪ್ತಿಗೊಳ್ಳುವ 'ಮಂಗಹನುಮ'ನಲ್ಲಿ; ವಾರಿಧಿಯನ್ನು ಜಯಿಸಿ, ಲಂಕೆಯನ್ನು ಹೊಕ್ಕು, ಸೀತಾಮಾತೆಯನ್ನು ಕಂಡುಹಿಡಿದು, ರಾವಣೇಶ್ವರನನ್ನೇ ಎದುರಿಸಿ, ರಾಮದೂತ ತಾನೆಂಬ ಆತ್ಮಪ್ರತಿಷ್ಠೆಯನ್ನು ಸಾರುವ 'ಪವನಾತ್ಮಜ'ನಲ್ಲಿ! ಅದೊಂದು ಬಗೆಯ ಶಿಲ್ಪ, ಆತ್ಮಶಿಲ್ಪ. ಜಾಂಬವಂತ ಅದರ ಓಜರೂವಾರಿ. ಅವನ ಅದ್ವಿತೀಯ 'ಕೈಗೆಲಸ'ವನ್ನು ವಿವರಿಸುವ ಮುನ್ನ, ರಾಮಾಯಣದ ಆ ಪ್ರಕರಣದಲ್ಲಿ ನಡೆದ ಇನ್ನೊಂದು ಪ್ರಸಂಗವನ್ನು ಪರಿಭಾವಿಸ ತಕ್ಕದ್ದು; ಅದೂ ವಿಶೇಷ ಬೋಧಪ್ರದ.

ಜನಕಪುತ್ರಿ ಲಂಕೆಯಲ್ಲಿ ಸೆರೆಯಾಳಾಗಿರುವಳೆಂಬ ವಾರ್ತೆ ಕಿವಿ ತಾಕಿದೊಡನೆ ಮುಗ್ಧ ಮರ್ಕಟಗಳಿಗೆ ಇನ್ನೇನು ತಮ್ಮ ರೊಟ್ಟಿ ಜಾರಿ ತುಪ್ಪಕ್ಕೆ ಬಿತ್ತು ಎನ್ನುವಷ್ಟು ಆನಂದ.

ಆಖ್ಯಾತಾ ಗೃಧ್ರರಾಜೇನ ಸಮುತ್ಪತ್ಯ ಪ್ಲವಂಗಮಾಃ।
ಸಂಗತಾಃ ಪ್ರೀತಿಸಂಯುಕ್ತಾ ವಿನೇದುಸ್ಸಿಂಹವಿಕ್ರಮಾಃ॥

—ಕಿಷ್ಕಿ: 64-1

ತ್ವರೆಯಿಂದ ಮುಂಬರಿದು ಸೇರುತ್ತಾರೆ 'ಕೃತ್ಸ್ನಂ ಲೋಕಸ್ಯ ಮಹತಃ ಪ್ರತಿಬಿಂಬಮಿವ ಸ್ಥಿತಂ' ಎಂಬಂತಿರುವ ಸಾಗರದ ತೀರವನ್ನ. ಕೂಡಲೆ 'ರೋಮಹರ್ಷಕರಂ ದೃಷ್ಟ್ವಾ

ವಿಷೇದುಃ ಕಪಿಕುಂಜರಾಃ'! ಅದು ಬರಿ ಪಾರಾವಾರಾವಲ್ಲ; ಅವರ ಮುಂದಿರುವ ಕೆಲಸದ ಅಗಾಧತೆ, ಭೀಷಣತ್ವ, ಮಹಾತ್ರಾಸಗಳ ಸ್ಪಷ್ಟ ಸಂಮಿಶ್ರ ಚಿತ್ರ. ನಿಸ್ಸಹಾಯಕರಂತೆ, ಗತಿ ತೋರದವರಂತೆ, ಕೊರಗುತ್ತಾರೆ ಅವರೆಲ್ಲ. ಹೆಗ್ಗಡೆಯಾಗಿ ಅಂಗದ ಇಲ್ಲದಿದ್ದರೆ, ಅವನೂ ದರ್ಪಕೆಟ್ಟಿದ್ದರೆ, ಅವರ ಪಾಡು ಯಾರಿಗೆ ಬೇಕು?

> ವಿಷಣ್ಣಾಂ ವಾಹಿನೀಂ ದೃಷ್ಟ್ವಾ ಸಾಗರಸ್ಯ ನಿರೀಕ್ಷಣಾತ್ |
> ಆಶ್ವಾಸಯಾಮಾಸ ಹರೀನ್ಭಯಾರ್ತಾನ್ ಹರಿಸತ್ತಮಃ ||
>
> —ಕಿಷ್ಕಿ : 64-9

ಹಾಗೂ ಅವರ ನಡುಕ ಶಮನವಾಗುವುದಕ್ಕೆ ಒಂದು ರಾತ್ರಿ ಅವಧಿಯನ್ನು ಬಿಟ್ಟುಕೊಡುತ್ತಾನೆ. ಮಾರನೆಯ ಬೆಳಗ್ಗೆ 'ಅಂಗದೋ ವಾನರೈಸ್ಸಹ ಹರಿವೃದ್ಧೈಸ್ಸಮಾಗಮ್ಯ ಪುನರ್ಮಂತ್ರಮಮಂತ್ರಯತ್.' (64-13).

ಆ ಮೇಲೆ ಜರುಗುವ ಯಾರು ಯಾರು ಎಷ್ಟೆಷ್ಟು ಹಾರುತ್ತಾರೆಂಬ ಸಂಗತಿಗಳ ಒಕ್ಕಣಿಕೆಯು ನಾಗರಿಕತೆ ಮದೋನ್ಮತ್ತನಿಗೂ ಅರಸಿಕನಿಗೂ ಹತ್ತು ಇಪ್ಪತ್ತು ಎಪ್ಪತ್ತು ನೂರು ಎನ್ನುವ ನಿಸ್ಸಾರ ಗಣಿತದಂತೆ ಬೇಸರ ತರಬಹುದು. ಅದು ಬಾಹ್ಯ ವೃತ್ತಾಂತ, ಅಷ್ಟೆ. ಸಹೃದಯನ ಅಂತಃಚಕ್ಷುಗಳಿಗೆ ಪ್ರಸಂಗದ ರಾಗ ತೀಕ್ಷ್ಣತೆಯೂ ಗಂಭೀರ ಸತ್ಯವೂ ಉದಾತ್ತ ತತ್ವವೂ ಮಹತ್ಕಾವ್ಯ ಸ್ವಾರಸ್ಯವೂ ಗೋಚರವಾದಾವು. ಒದಗಿದ ನಾನಾ ಕಷ್ಟಗಳನ್ನು ದಾಟಿ ಈ ಹಂತವನ್ನು ಮುಟ್ಟಿದ್ದಾರೆ ವಾನರರು. ಪುನಃ ಮತ್ತೊಂದು ಕಾಡಿಗೆ ಬಣ್ಣದ ಕಷ್ಟ ಎದುರಾಗಿದೆ ಅವರಿಗೆ. ಆದರೂ, ಸುಗ್ರೀವಾಜ್ಞೆಯ ರಾಮಸೇವೆಯನ್ನು ನೆರವೇರಿಸದೇ ಹಿಂತಿರುಗಿದರೆ ಅವರು ಬಾಳಬಹುದೆ, ಅವರಿಗೇಕೆ ಬಾಳು? ಮಾಡಲೇಬೇಕು, ಮಡಿಯುವ ಗೋಜು ಬೇಡದಿದ್ದರೆ.

> ಕೋ ವೀರೋ ಯೋಜನಶತಂ ಲಂಘಯೇಚ್ಚ ಪ್ಲವಂಗಮಾಃ |
> ಇಮಾಂಶ್ಚ ಯೂಥಪಾನ್ಸರ್ವಾನ್ಮೋಕ್ಷಯೇತ್ಕೋ ಮಹಾಭಯಾತ್ ||
> ಕಸ್ಯ ಪ್ರಭಾವಾದ್ದಾರಾಂಶ್ಚ ಪುತ್ರಾಂಶ್ಚೈವ ಗೃಹಾಣಿ ಚ |
> ಇತೋ ನಿವೃತ್ತಾಃ ಪಶ್ಯೇಮ ಸಿದ್ಧಾರ್ಥಾಃ ಸುಖಿನೋ ವಯಂ ||
>
> —ಕಿಷ್ಕಿ : 64-18, 19

'ಇಗೊ ನಾನಿದ್ದೇನೆ' ಎನ್ನುತ್ತ ಎಗರಿನಿಂತು 'ಪುಣ್ಯಾಮಭಯದಕ್ಷಿಣಾಂ' ಈಯಬಲ್ಲ ಸಾಗರಪ್ಲವನ ಧೀರ ಯಾವನಿದ್ದಾನೆ ಸಭೆಯಲ್ಲಿ? ಅಯ್ಯೋ, ಒಬ್ಬನೂ ಇಲ್ಲ:

> ಅಂಗದಸ್ಯ ವಚಶ್ಶ್ರುತ್ವಾ ನ ಕಶ್ಚಿತ್ಕಿಂಚಿದಬ್ರವೀತ್ |
> ಸ್ತಿಮಿತೇವಾಽಭವತ್ತತ್ರ ಸರ್ವಾ ಸಾ ಹರಿವಾಹಿನೀ ||
>
> —ಕಿಷ್ಕಿ : 64-22

ವಾನರರ ಮೌನಕ್ಕೆ ಅವರ ಶೌರ್ಯ ಸಾಮರ್ಥ್ಯಗಳ ಕೊರತೆ ಹೊರಗಣ ಮುಖ. ಒಳಗಣ ಮುಖ ಯಾವುದೆಂದರೆ, ಪವಿತ್ರವೂ ಘನತಮವೂ ಆದ ಆ ಮುಹೂರ್ತದಲ್ಲಿ ಅವರ ಅಂತರ್ಯದೊಳಗೆ ಆಗುತ್ತಿರುವ ಆತ್ಮಪರೀಕ್ಷೆ. ಯಾವನು ಆತ್ಮಪ್ರಶ್ನೋತ್ತರವನ್ನು ನಿಷ್ಕಲ್ಮಷ ಶ್ರದ್ಧೆಯಿಂದ ಎಸಗಿಕೊಳ್ಳುತ್ತಾನೋ ಅವನಿಗೆ ಆತ್ಮದರ್ಶನ ತುಸು ಸಮಯ ಮಿಂಚಿದರೂ ಮಿಂಚುತ್ತದೆ; ಅಷ್ಟಿಷ್ಟು ಆತ್ಮಜ್ಞಾನ ಗಳಿಸಿಬಂದರೂ ಬರುತ್ತದೆ. ಘಳಿಗೆ ಸನ್ನಿವೇಶಗಳ ಪ್ರಚೋದನೆಯ ಜೊತೆಗೆ ಅಂಗದನ ಪ್ರಶಂಸೆಯೂ ಕೂಡಿಕೊಂಡು ಒತ್ತಾಸೆಮಾಡುತ್ತದೆ:

ಸರ್ವೇ ಬಲವತಾಂ ಶ್ರೇಷ್ಠಾ ಭವಂತೋ ದೃಢವಿಕ್ರಮಾಃ ||
—ಕಿಷ್ಕಿ : 64—23

ನಹಿ ವೋ ಗಮನೇ ಸಂಗಃ ಕದಾಚಿತ್ಕಸ್ಯಚಿತ್ಕ್ವಚಿತ್ ||
—ಕಿಷ್ಕಿ : 64—24

ಹೀಗೆ ಸ್ಫೂರ್ತಿಗೊಂಡ ವಾನರರು ಋಜುತ್ವ ತಪಸ್ಸನ್ನು ತಪಗೈದು, ತಮ್ಮ ತಮ್ಮ ಬಲಾಬಲಗಳನ್ನು ಆತ್ಮಸಾಕ್ಷಿಯಾಗಿ ವರದಿಗೈಯುತ್ತಾರೆ ಅಂಗದನ ಮುಂದೆ, ತಮ್ಮ ಆತ್ಮದೈವದ ಸನ್ನಿಧಿಯಲ್ಲಿಯೋ ಎಂಬಂತೆ. ಗಜನ 'ಪ್ಲವೇಯಂ ದಶಯೋಜನಂ' ಎಂಬುದರಿಂದ ಹಿಡಿದು ಸುಷೇಣನ 'ಅಶೀತಿಂ ಯೋಜನಾನಾಂತು ಪ್ಲವೇಯಂ ಪ್ಲವಗೇಶ್ವರಾಃ' ಎಂಬುದರವರೆಗೂ ವಾಕ್ಯ ವಾಕ್ಯಕ್ಕೂ ಕುತೂಹಲವನ್ನು ಕೆರಳಿಸುತ್ತ ನಡೆಯುತ್ತದೆ ಸತ್ಯನಿರೂಪಣೆಯ ಸ್ಪರ್ಧೆ. ನಂತರ ಜಾಂಬವನ ಸರದಿ. ಮುದುಕರಿಗೆ ಬಡಾಯಿ ಸ್ವಾಭಾವಿಕವಲ್ಲವೆ? ಮುದುಕ ಜಾಂಬವಂತನ ಮಾತುಗಳನ್ನು ಆಲಿಸಿ:

ಪೂರ್ವಮಸ್ಮಾಕಮಪ್ಯಾಸೀತ್ಕಶ್ಚಿದ್ಗತಿಪರಾಕ್ರಮಃ |
ತೇ ವಯಂ ವಯಸಃ ಪಾರಮನುಪ್ರಾಪ್ತಾಃಸ್ಮ ಸಾಂಪ್ರತಂ ||
—ಕಿಷ್ಕಿ : 65—11

ಆದರೂ 'ಕಪಿರಾಜಶ್ಚ ರಾಮಶ್ಚ ಕೃತನಿಶ್ಚಯೌ' ಎಂದಿಗೂ ಉಪೇಕ್ಷಿಸ ತಕ್ಕುದಲ್ಲ; ನಿಜವನ್ನು ಮರೆಮಾಚಲಾಗದು:

ನವತಿಂ ಯೋಜನಾನಾಂತು ಗಮಿಷ್ಯಾಮಿ ನ ಸಂಶಯಃ ||
—ಕಿಷ್ಕಿ : 65—13

ಮಾದರಿ ವೃದ್ಧ ಈ ಜಾಂಬವಂತ! ಕಥೆಯ ದೃಷ್ಟಿಯಿಂದ, ಜಾಂಬವಂತನ ಹೇಳಿಕೆ ಹೇಗೆ ಸಭಿಕರನ್ನು ನಿರೀಕ್ಷೆಗೆ ಎತ್ತಿ ತುಪಕ್ಕನೆ ಕೆಳಕ್ಕೆ ಜೀಳಿಸುತ್ತದೆ, ಗಮನಿಸಿ. ನುರಿತ ಕಥನಕಾರ ವಾಲ್ಮೀಕಿ! ಹಿಂದೆ ತ್ರಿವಿಕ್ರಮನನ್ನು ಪ್ರದಕ್ಷಿಣೆಮಾಡಿದ ಉಪಮಾತೀತ ಪ್ರತಾಪದ ಶೂರನಿಗೆ ಇನ್ನೊಂದು ಹತ್ತು ಯೋಜನ ಹೆಚ್ಚಾಗಿ ಗಮನಶಕ್ತಿ ಇಲ್ಲವೆ ಇಂದು? ಇದೆಯೆಂದು ಅವನು ಒರೆದಿದ್ದರೆ ಗಗನ ಕಳಚಿ ಬಿದ್ದು ಹೋಗುತ್ತಿತ್ತೆ? ಹಾಗಲ್ಲ. ಕಾರ್ಯಾವಸರ ರಾಮನಿಗೆ ಮೀಸಲು; ಅದರ ಮೇಲೆ ಸುಗ್ರೀವನ ಪ್ರತಿಜ್ಞೆ ರಾಜಛತ್ರವಾಗಿ ಎದ್ದುನಿಂತಿದೆ. ಸತ್ಯಕ್ಕೆ ಮಾತ್ರ ಅವಕಾಶವುಂಟು; ಅನೃತದ ನಕಲಿನ ನೆರಳಿಗೂ ಇಲ್ಲ. ಅದು ಹೋಗಲಿ. ವಾನರರು ಈಗೇನು ಮಾಡಬೇಕು? ಮತ್ತೆ ಬಿಕ್ಕಟ್ಟು. ಜಾಂಬವಂತನ ಅನುಮತಿಯನ್ನು ಪಡೆದು ಅಂಗದ, ಇತರರೊಂದಿಗೆ ತಾನೂ ಒಬ್ಬನೆಂದು ಬಗೆದು, ಇತರರಂತೆ ತನ್ನ ಸಾಧ್ಯತೆಯ ಆತ್ಮಚರಿತೆಯನ್ನೂ ಬಹಿರಂಗಗೊಳಿಸುತ್ತಾನೆ:

ಅಹಮೇತದ್ಗಮಿಷ್ಯಾಮಿ ಯೋಜನಾನಾಂ ಶತಂ ಮಹತ್ |

ಅದನ್ನಾಲಿಸಿದ ಕಪಿಗಳಿಗೆ ಸ್ವರ್ಗ ಬೆರಳಿನ ಕೊನೆಗೆ ಬಂದಂತೆ ಪ್ರಮೋದ. ಆದರೆ, ಅದು ಅಂಗದನ ನಿರೂಪಣೆಯ ಪ್ರಥಮ ಪಾದ; ದ್ವಿತೀಯ ಪಾದವೂ ಉಂಟು:

ನಿವರ್ತನೇತು ಮೇ ಶಕ್ತಿಃ ಸ್ಯಾನ್ನವೇತಿ ನ ನಿಶ್ಚಿತಾ ||
—ಕಿಷ್ಕಿ : 65—19

ಗಜನಿಂದ ಅಂಗದನವರೆಗೂ ಎಲ್ಲರೂ ಏಕಮತದಿಂದ ಏಕರೀತಿಯಲ್ಲಿ ಸತ್ಯನಿಷ್ಠೆಯನ್ನು ಅಭ್ಯಾಸಗೈದಿರುವ ಸಂಗತಿ ಮೆಚ್ಚಿಕೆಗೆ ಸರಿಯಾದದ್ದು. ಒಬ್ಬನಿಗೂ ಆತ್ಮಾಪಹಾರ (ತಾನು ಬೇರೊಬ್ಬ ವ್ಯಕ್ತಿಯೊ ಎಂಬಂತೆ ನಟಿಸುವಿಕೆ) ಸೇರದು; ಒಬ್ಬನಿಂದಲೂ ಆತ್ಮಶ್ಲಾಘನೆಯ ಸೊಲ್ಲಿಲ್ಲ;

ಜಾಂಬವ ಅಂಗದರಿಗೂ ಆತ್ಮಪೂಜೆ ಹೊಲ್ಲ. ಅಂಥಾದ್ದೆಲ್ಲ ಆತ್ಮಲಾಭ ಆತ್ಮೋದಯಾದಿ ಕುತ್ಸಿತ ಚಟುವಟಿಕೆಗಳಲ್ಲಿ ಮಗ್ನರಾಗಿರುವ ಪ್ರಾಪಂಚಿಕ ಜೀವಿಗಳಿಗೆ ಯುಕ್ತ; ಉದಾತ್ತ ವಾನರರಿಗೆ ಅವುಗಳೇಕೆ?

ಇರಲಿ. ಅಂಗದನ ಹೇಳಿಕೆಯಿಂದ ಯಾವ ಪುರುಷಾರ್ಥ ಸಾಧನೆಯಾಯ್ತು ವ್ಯಾಕುಲ ದಲ್ಲಿರುವ ಪಡೆಗೆ? ಜಾಂಬವನನ್ನು ಕಳಿಸಿದರೆ ಅವನಿಗೆ ಜಲಸಮಾಧಿ, ತಮಗೆ ನಿರಾಶೆ; ಅಂಗದ ನನ್ನು ಕಳಿಸುವುದೂ ಒಂದೆ, ದೈತ್ಯರಿಗೆ ಅವನನ್ನು ಬಲಿ ಒಪ್ಪಿಸುವುದೂ ಒಂದೆ. ಪರಿಸ್ಥಿತಿಯ ವಿಷಮತೆ ಕರಗಲೇ ಇಲ್ಲ. ಆದಿಕವಿಯ ಕಥನ ಕೌಶಲ ಇಲ್ಲಿ ಕುದುರಿ, ಮತ್ತೊಂದು ವ್ಯತ್ಯಾಸ ವನ್ನು ನೀರಸ ಒಕ್ಕಣಿಕೆಗೆ ಪೋಣಿಸಿ, ರಸೋದಯವನ್ನು ವೃದ್ಧಿಸುತ್ತದೆ. ಜಾಂಬವಂತನ ಪಾತ್ರಕ್ಕೆ ನವೀನ ಮೆರುಗನ್ನು ಕೊಡುವುದೇ ಆ ವ್ಯತ್ಯಾಸ. ಅವನು ರಾಜನೀತಿ ವಿಶಾರದ, ನಯವಿನಯದಲ್ಲಿ ನಿಷ್ಣಾತ, ಸಚಿವೋತ್ತಮ. ಅಂಗದನ ವಚನ ನಿಜವೆಂದು ಅವನಿಗೆ ಗೊತ್ತಿದೆ. ಆದರೂ, ನೇತಾರನಲ್ಲಿ ಏನೊ ದೌರ್ಬಲ್ಯವಿದೆಯೆಂಬ ಅಂಶ ಪ್ರಚುರವಾದರೆ ಹಿಂಬಾಲಕರ ಮನಸ್ಸಿನ ಮೇಲೆ ದುಷ್ಪರಿಣಾಮ ಆದರೂ ಆಗಬಹುದಲ್ಲವೆ? ಹೀಗೆ ಆಲೋಚಿಸಿ, ಅಂಗದನ ಮಾತು ಮುಗಿಯುವುದರೊಳಗೆ ಬಾಯಿಹಾಕಿ, "ನೀನು ನೂರಲ್ಲ ಸಾವಿರ ಯೋಜನಗಳನ್ನೂ ಲಂಘಿಸಿ ಮರಳಿ ಬರಬಲ್ಲೆ. ಅದು ನಿರ್ವಿವಾದ, ಆದಿರಲಿ. ನಿನ್ನನ್ನು ನಾವು ಈ ಕೆಲಸಕ್ಕೆ ನೇಮಿಸ ಬಹುದೆ?

ನ ಹಿ ಪ್ರೇಷಯಿತಾ ತಾತ ಸ್ವಾಮೀ ಪ್ರೇಷ್ಯಃ ಕಥಂಚನ |
ಭವತಾಯಂ ಜನಃ ಸರ್ವಃ ಪ್ರೇಷ್ಯಃ ಪ್ಲವಗಸತ್ತಮ ||

—ಕಿಷ್ಕಿ: 65-22

ಅಲ್ಲದೆ, ನಮ್ಮೆಲ್ಲರಿಗೂ ನೀನು ಸ್ವಾಮಿ:

ತಸ್ಮಾತ್ಕಲತ್ರವತ್ತತ್ರ ಪ್ರತಿಪಾಲ್ಯಃ ಸದಾ ಭವಾನ್ ||

—ಕಿಷ್ಕಿ: 65-22

ಕಡೆಯದಾಗಿ, ನೀನು ಗುರುಪುತ್ರ, ಗುರು." ಸೂತ್ರವಾಕ್ಯಗಳಿಂದ ಕುಸಿದಿದ್ದ ಗಾಂಭೀರ್ಯವನ್ನು ತಿರುಗಿ ಎತ್ತಿನಿಲ್ಲಿಸುತ್ತಾನೆ ವೃದ್ಧ ಶಿರೋಮಣಿ. ಅದೇನೋ ಸರಿ, ವಿಷಯ ಇತ್ಯರ್ಥವಾಗುವುದು ಹೇಗೆ? ಅಂಗದ ಹೋಗಲಾಗದು; ಬೇರಾವ ವಾನರನೂ ಹೋಗಲಾರ: ಉಪಾಯವೇನಿದೆ? ಸೂಕ್ತ ಉಪಾಯ ನೆನಪಾಗುತ್ತದೆ ಅಂಗದನನ್ನು ತಡೆದು ನಿಲ್ಲಿಸಿದ ದಕ್ಷನಿಗೆ. 'ಕಾರ್ಯವನ್ನು ನೆರವೇರಿಸಬಲ್ಲ ವೀರನಿದ್ದಾನೆ, ಅವನನ್ನು ನಾನೀಗಲೇ ಎಚ್ಚರಗೊಳಿಸಿ ಪ್ರೋತ್ಸಾಹಿಸುತ್ತೇನೆ' ಎಂಬ ಅಮೃತ ವಚನವನ್ನು ಆಡಿ, ಒರುತ್ತಾನೆ ಅಂಜನಾಸೂನುವನ್ನು ಹುಡುಕಿಕೊಂಡು.

ಹನುಮಂತನ ದುಗುಡಕ್ಕೆ ಬಹುಶಃ ಇಂಥ ಯೋಚನೆಗಳು ಕಾರಣ. 'ತಾನಾರು? ಕಪಿಕುಲದ ಕೇಸರಿಗೂ ಕಪಿಕುಲದ ಅಂಜನೆಗೂ ಹುಟ್ಟಿದ ಒಬ್ಬ ಕಪಿ. ತನ್ನನ್ನು ಕೀಶಪತಿ ಪ್ಲವಗೋತ್ತಮ ವಾನರವರೇಣ್ಯ ಎಂದು ಮಿತ್ರರು ಸ್ತುತಿಸಿದರೇನು? ಮರ್ತ್ಯನಾದದ್ದರಿಂದ ತನ್ನ ಶಕ್ತಿ ಸಾಹಸಗಳಿಗೆ ಮಿತಿ ಉಂಟೇ ಉಂಟು.' ನಿರುತ್ಸಾಹ ಅವನನ್ನು ಹಿಡಿದಿರುವಾಗ, ಅದಕ್ಕೆ ಮದ್ದು 'ಜಾಂಬವತ್ಕೃತ ಪ್ರೋತ್ಸಾಹನ.' ಜಾಂಬವ ಹೇಳುತ್ತಾನೆ:

ಹನುಮನ್ ಹರಿರಾಜಸ್ಯ ಸುಗ್ರೀವಸ್ಯ ಸಮೋ ಹ್ಯಸಿ |
ರಾಮಲಕ್ಷ್ಮಣಯೋಶ್ಚಾಪಿ ತೇಜಸಾಚ ಬಲೇನ ಚ ||

—ಕಿಷ್ಕಿ: 66-3

ಹನುಮಂತನ ಚಿತ್ತ ಕಲಕಿದಂತಾಗುತ್ತದೆ. 'ಏನಿದು, ಸುಗ್ರೀವನಿಗೆ ತಾನು ಸಮಾನನೆ? ರಾಮ ಲಕ್ಷ್ಮಣರೂ ತನ್ನನ್ನು ಅತಿಕ್ರಮಿಸಿಲ್ಲವೆ?' ಮುಂದುವರಿದು ಹೇಳುತ್ತಾನೆ ಜಾಂಬವ: 'ವಿಹಗರಾಜ ಗರುಡನಿದ್ದಾನೆ;

ಪಕ್ಷಯೋರ್ಯದ್ಬಲಂ ತಸ್ಯ ತಾವದ್ಭುಜಬಲಂ ತವ |
ವಿಕ್ರಮಶ್ಚಾಪಿ ವೇಗಶ್ಚ ತೇ ನ ತೇನಾವಹೀಯತೇ || '

—ಕಿಷ್ಕಿ : 66-6

'ಗರುತ್ಮಂತನಷ್ಟು ಬಲಿಷ್ಠನೆ ತಾನು ! ಎಲ್ಲ ಕಟ್ಟುಕಥೆ ಇರಬಹುದು ; ಸಂಬುವುದೆಂತು ?' ಸಂಜಿಕೆಯನ್ನು ಉಂಟುಮಾಡುವ ಅದ್ಭುತ ಜನನವನ್ನು ಅವನಿಗೆ ಅರುಹುತ್ತಾನೆ ಹಿರಿಯ. "ಅಪ್ಸರೆಯರಲ್ಲಿ ಅಪ್ಸರೆಯಾದ ತ್ರಿಲೋಕಸುಂದರಿ ಪುಂಜಿಕಸ್ಥಲೆ ಶಾಪಗ್ರಸ್ತಳಾದಳು. ಕಾಮರೂಪಿಣಿಯಾದ ವಾನರಿಯಂತೆ ಜನ್ಮತಾಳಿ, ಅಂಜನೆಯೆಂಬ ಅಂಕಿತವನ್ನು ತಳೆದು, ವಾನರೇಂದ್ರ ಕೇಸರಿಗೆ ಮಡದಿಯಾದಳು. ಒಂದು ದಿವಸ ಆಕೆ ಮನುಷ್ಯ ಸ್ತ್ರೀ ರೂಪವನ್ನು ಧರಿಸಿ ಅಭರಣ ಹೂಮಾಲೆಗಳಿಂದ ಸಿಂಗರಿಸಿಕೊಂಡು, ಸಂಚರಿಸುತ್ತಿದ್ದಳು.

ತಸ್ಯಾ ವಸ್ತ್ರಂ ವಿಶಾಲಾಕ್ಷ್ಯಾಃ ಪೀತಂ ರಕ್ತದಶಂ ಶುಭಂ |
ಸ್ಥಿತಾಯಾಃ ಪರ್ವತಸ್ಯಾಗ್ರೇ ಮಾರುತೋಽಪಹರಚ್ಛನೈಃ ||

ಕಿಷ್ಕಿ : 66—12

'ಪವನಃ ಕಾಮಮೋಹಿತಃ.' ತನ್ನ ಅನುಗ್ರಹದಿಂದ ಅವಳಲ್ಲಿ ಹುಟ್ಟುವ ಕುಮಾರ

ಮಹಾಸತ್ತ್ವೋ ಮಹಾತೇಜಾ ಮಹಾಬಲ ಪರಾಕ್ರಮಃ |
ಲಂಘನೇ ಪ್ಲವನೇ ಚೈವ ಭವಿಷ್ಯತಿ ಮಯಾ ಸಮಃ ||

—ಕಿಷ್ಕಿ : 66—19

ಎಂಬ ಅಮೋಘ ವಾಕ್ಯ ಹೊರಬಿದ್ದಿತು ವಾಯುದೇವನ ವದನದಿಂದ." ಹನುಮಂತನ ಅಂತರ್ಯದಲ್ಲಿ ಯಾವುದೋ ಪಾವನ ವಿದ್ಯುತ್ಪ್ರವಾಹ ಹರಿಯುತ್ತದೆ. 'ಆಹ, ತಾನೊಬ್ಬ ದೇವಾಂಶಸಂಭೂತ: ದಿವ್ಯಶಕ್ತಿ ತನ್ನಲ್ಲಿ ಇರಲೇಬೇಕು, ಹಾಗಾದರೆ!' ಜಾಂಬವಂತನ ಆಖ್ಯಾನ ಮುಂದುವರಿಯುತ್ತದೆ. "ಕಣ್ಣು ಬಿಟ್ಟು ನೋಡಿದ ಕೂಡಲೇ ಸೂರ್ಯ ಕಾಣಿಸಿದ ಅರ್ಭಕನಿಗೆ. ಹಣ್ಣೆಂದು ಭ್ರಮಿಸಿ ಅದನ್ನು ಕೈಯಿಂದ ಹಿಡಿದುಕೊಳ್ಳುವುದಕ್ಕಾಗಿ ಮೇಲು ಮೇಲಕ್ಕೆ ನೆಗೆಯುತ್ತ ಹೋದ. ಸಾವಿರಾರು ಯೋಜನಗಳನ್ನು ಒಂದೇ ನವನೆ ದಾಟಿ ಹಾರಿದ. ಸೂರ್ಯ ಪ್ರಜ್ವಲಿಸಿದ.

ತೇಜಸಾ ತಸ್ಯ ನಿರ್ಧೂತೋ ನ ವಿಷಾದಂ ಗತಸ್ತತಃ[1] ||

—ಕಿಷ್ಕಿ : 66—22

ವಿಶ್ವಕ್ಕೆ ಅಪಾಯವಾದೀತೆಂದು ದೇವೇಂದ್ರ ಅಂಜಿ, ತನ್ನ ವಜ್ರಾಯುಧವನ್ನು ಎಸೆದು ಏರುತ್ತಿದ್ದ ಪ್ರಚಂಡ ಶಿಶುವನ್ನು ಕೆಳಕ್ಕೆ ಕೆಡವಿದ.

ತತಂ ಶೈಲಾಗ್ರಶಿಖರೇ ವಾಮೋ ಹನುರಭಜ್ಯತ |
ತತೋ ಹಿ ನಾಮಧೇಯಂ ತೇ ಹನುಮಾನಿತಿ ಕೀರ್ತ್ಯತೇ ||

ಕಿಷ್ಕಿ : 66—24

ಮಗನಿಗಾದ ಅಪಘಾತದಿಂದ ಕುಪಿತನಾದ ವಾಯುದೇವ ಬೀಸುವುದನ್ನೇ ನಿಲ್ಲಿಸಿ, ಕ್ಷೋಭೆಯನ್ನುಂಟುಮಾಡಿ, ಆತಂಕಕೊಟ್ಟ ದೇವತೆಗಳಿಗೆ. ಅವರೆಲ್ಲರೂ ವಿನೀತರಾಗಿ ಅವನಲ್ಲಿಗೆ ಬಂದು ಸಮಾಧಾನಗೊಳಿಸಿ ಕಿಶೋರನಿಗೆ ಅತ್ಯುತ್ಕೃಷ್ಟ ವರಗಳನ್ನು ದಯಪಾಲಿಸಿದರು. ಬ್ರಹ್ಮನಿಂದ ಬಂದದ್ದು :

ಅಶಸ್ತ್ರವಧ್ಯತಾಂ ತಾತ ಸಮರೇ ಸತ್ಯವಿಕ್ರಮ ||

—ಕಿಷ್ಕಿ : 66—27

---

[1] ಈ ಪ್ರಸ್ತಾವದಲ್ಲಿ, ಜಟಾಯು ಸಂಪಾತಿಗಳು ಸೂರ್ಯನನ್ನು ಸ್ಪರ್ಶಿಸಬೇಕೆಂಬ ಹೆಬ್ಬಯಕೆಯಿಂದ ಹಾರಿದ ಸಾಹಸವೂ, ಅದರಿಂದ ಅವರಿಗಾದ ಮಾನಭಂಗ ಪಕ್ಷಹಾನಿಗಳೂ ಗಮನಾರ್ಹ, ಹೋಲಿಕೆಗಾಗಿ.

ಇಂದ್ರನಿಂದ ಬಂದದ್ದು :

ಸ್ವಚ್ಛನ್ದತಶ್ಚ ಮರಣಂ ತೇ ಭೂಯಾದಿತಿ ವೈ ಪ್ರಭೋ ||
—ಕಿಷ್ಕಿ : 66—28

ಇನ್ನೇನು ಬೇಕು ಅವಕ್ಕಿಂತ ಹೆಚ್ಚಾಗಿ ? ಹೀಗೆ,

ಮಾರುತಸ್ಯೌರಸಃ ಪುತ್ರಸ್ತೇಜಸಾ ಚಾಪಿ ತತ್ಸಮಃ |
ತ್ವಂ ಹಿ ವಾಯುಸುತೋ ವತ್ಸ ಪ್ಲವನೇ ಚಾಪಿ ತತ್ಸಮಃ ||
—ಕಿಷ್ಕಿ : 66—30

ನೀನು ಸಾಮಾನ್ಯನಲ್ಲ, ದಿವ್ಯಪುರುಷ, ದಿವ್ಯಶಕ್ತ !”

ತನಗೆ ಗೊತ್ತಿರದ ಆತ್ಮ ಚರಿತ್ರೆಯ ಕಥನವನ್ನು ಆಲಿಸುತ್ತ ಹನುಮಂತನಲ್ಲಿ ಉಕ್ಕಿ ಹರಿದ ಅಮಾನುಷ ಚೈತನ್ಯವನ್ನು ಊಹಿಸಿಕೊಳ್ಳಬಹುದು. ಜಾಂಬವಂತನ ನುಡಿಗಟ್ಟು ಶಬ್ದಗಳಂತೆ ನುಡಿದು ನಿಲ್ಲದೆ, ಆತ್ಮೀಯ ದಿಗ್ದರ್ಶನದ ಜ್ಯೋತಿಯಾಯ್ತು. ಹನುಮಂತನಲ್ಲಿ ಸುಪ್ತವಾಗಿದ್ದ ಆತ್ಮಪ್ರತ್ಯಯ ನಿದ್ರೆ ಕಳೆದೆದ್ದು ಬೇಗ ಬೇಗ ವೃದ್ಧಿಹೊಂದಿತು, ಆತ್ಮ ವರ್ಚಸ್ಸು ಕಣ್ಣು ಕೋರೈಸುತ್ತ ಬೆಳಗಿತು. ಮನಸ್ಸಿನಂತೆ ಅವನ ದೇಹವೂ ಮಹತ್ತರವಾಗಿ ವರ್ಧಿಸಿತಂತೆ !

ತತಸ್ತು ವೈ ಜಾಂಬವತಾ ಪ್ರಚೋದಿತಃ ಪ್ರತೀತ ವೇಗಃ ಪವನಾತ್ಮಜಃ ಕಪಿಃ |
ಪ್ರಹರ್ಷಯಂಸ್ತಾಂ ಹರಿವೀರವಾಹಿನೀಂ ಚಕಾರ ರೂಪಂ ಮಹದಾತ್ಮನಸ್ತದಾ ||
—ಕಿಷ್ಕಿ : 66—38

ಹಾಗೆ ‘ವೀರ್ಯೇಣಾಪೂರ್ಯಮಾಣಂ ಚ ಸಹಸಾ ವಾನರೋತ್ತಮಂ’ (67-1) ‘ಸಂಸ್ತೂಯಮಾನೋ ಹನುಮಾನ್ ವ್ಯವರ್ಧತ ಮಹಾಬಲಃ’ (67-4). ನಂತರ ಅವನಿಂದ ಆಗುತ್ತದೆ ಒಂದು “ಆತ್ಮಘೋಷ”.[2] ಅದು ಆತ್ಮಸ್ತುತಿಯಲ್ಲ, ಬಡಾಯಿ ಅಲ್ಲ. ಕಾರ್ಯಸಾಧನೆಗೆ ತಕ್ಕ ಬಲ ಬುದ್ಧಿ ಸಾಮರ್ಥ್ಯಗಳು ತನ್ನಲ್ಲಿವೆಯೆಂಬ ನಿಜಾಂಶವನ್ನು ಪ್ರಾಮಾಣಿಕವಾಗಿ ನೇರವಾಗಿ ಲೋಕಕ್ಕೆ ಶ್ರುತಪಡಿಸಿ, ಸಂತಸಗೊಳಿಸುವ ಆತುರ, ಅಷ್ಟೆ. ಅದರಂತೆ ಅವನು ನಡೆಸುವ ಮಹಾಕಾರ್ಯಾವಳಿ ಸುಂದರಕಾಂಡದ ತಿರುಳು.

ಮುಖಂಡ ಮಾರ್ಗದರ್ಶಿ ಪ್ರಾಧ್ಯಾಪಕ ವಸ್ತಾದಿ ಹೆಗ್ಗಡೆ ಗುರು ವೃದ್ಧರೆಲ್ಲರಿಗೂ ಶುಭ್ರ ಮೇಲ್ಪಂಕ್ತಿ ವಾಲ್ಮೀಕಿಯ ಜಾಂಬವಂತ. ಅವನೇನೂ ಸಾಧಾರಣ ಕರಡಿಯಲ್ಲ: ಪ್ರಜೇಶ್ವರ ಬ್ರಹ್ಮನ ತನಯ, ವೀರಾಧಿವೀರ, ಅಪರಿಮಿತ ಪರಾಕ್ರಮಿ. ತ್ರಿವಿಕ್ರಮಾವತಾರ ಕಾಲದಲ್ಲಿ ಪೃಥಿವಿಯನ್ನು ಇಪ್ಪತ್ತೊಂದು ಸಾರಿ ಸುತ್ತಿಬಂದಿದ್ದ ಅತ್ಯಧಿಕ ಶಕ್ತ. ದೇವಶಾಸನದಂತೆ ಅಮೃತ ಮಥನಕ್ಕೆ ಬೇಕಾದ ಮೂಲಿಕೆಗಳನ್ನು ನಾನಾ ದಿಕ್ಕಿನಿಂದ ಆಯ್ದು ಶೇಖರಿಸಿ ತಂದುಕೊಟ್ಟ ಧೀಮಂತ. ಅವನು ಚಿರಂಜೀವಿ. ಇಷ್ಟಿದ್ದರೂ ಸ್ವಾಭಿಮಾನ ಅವನಲ್ಲಿ ರವೆಯಷ್ಟೂ ಕಾಣಿಸದು. ಆತ್ಮಪರೀಕ್ಷೆಯನ್ನು ಮಾಡಿಕೊಳ್ಳುವುದಕ್ಕೆ, ಎಷ್ಟೇ ನಿಷ್ಠುರವಾಗಲಿ ಸತ್ಯಾಂಶವನ್ನು ಸ್ವೀಕರಿಸುವುದಕ್ಕೆ, ಅವನು ಸದಾ ಸಿದ್ಧ. ಕಡೆಯಲ್ಲಿ ಹನುಮಂತನಲ್ಲಿ ಉದಾರಿ ಪ್ರಾರ್ಥಿಸಿಕೊಳ್ಳುವ ನಿರಹಂಕಾರವನ್ನೂ ಶುಚಿಶೀಲವನ್ನೂ ಭಾವಿಸಿ :

ಸ ಇದಾನೀಮಹಂ ವೃದ್ಧಃ ಪರಿಹೀನಪರಾಕ್ರಮಃ |
ಸಾಂಪ್ರತಂ ಕಾಲಮಸ್ಮಾಕಂ ಭವಾನ್ ಸರ್ವಗುಣಾನ್ವಿತಃ ||
ತದ್ವಿಜೃಂಭಸ್ವ ವಿಕ್ರಾಂತಃ ಪ್ಲವತಾಮುತ್ತಮೋಹ್ಯಸಿ |

---

[2] ವೀರಾಗ್ರೇಸರರು ಆ ರೀತಿ ತಮ್ಮ ತಮ್ಮ ಶಕ್ತಿ ಸಾಹಸಗಳನ್ನು ಮುಚ್ಚುಮರೆಯಿಲ್ಲದೆ ತಾವೇ ಘೋಷಣೆಗೈಯುವುದು ಪ್ರಪಂಚದ ಎಲ್ಲ ಭವ್ಯಕಾವ್ಯ (Epic)ಗಳಲ್ಲೂ ಕಾಣಬರುತ್ತದೆ.

ತ್ವದ್ವೀರ್ಯಂ ದ್ರಷ್ಟುಕಾಮೇಯಂ ಸರ್ವಾ ವಾನರ ವಾಹಿನೀ ||
ಉತ್ತಿಷ್ಠ ಹರಿಶಾರ್ದೂಲ ಲಂಘಯಸ್ವ ಮಹಾರ್ಣವಂ |
ಪರಾ ಹಿ ಸರ್ವಭೂತಾನಾಂ ಹನುಮನ್ಯಾ ಗತಿಸ್ತವ ||

—ಕಿಷ್ಕಿ: 66-34, 35, 36.

ಇದು ಹೃದಯವೈಶಾಲ್ಯದ ತುತ್ತ ತುದಿ, ವಿವೇಕ ವಿಚಕ್ಷಣೆಯ ವಯಿರಮುಡಿ. ಕಾಯ ಚಟುವಟಿಕೆಗಾಗಿ ದೊಡ್ಡ ಹೆಸರಿಗಾಗಿ ಶ್ರಮಿಸುವುದಕ್ಕೆ ನಿಯತ ಅವಧಿ ಉಂಟೆಂಬುದನ್ನು ಜಾಂಬವ ಅರಿತಿರುವ. ತನ್ನ ಪಾಲಿಗೆ ಅದು ಸವೆದಿದೆಯೆಂಬ ಖಚಿತ ದರ್ಶನದಿಂದ ಅವನಿಗಿಲ್ಲ ಅಸಂತೋಷ. ಈಗ ತಾನೇ ಮಾಡುವುದಕ್ಕಿಂತ ಮಾಡಬಲ್ಲವರನ್ನು ಕಂಡುಹಿಡಿದು ಅವರಿಂದ ಮಾಡಿಸುವುದರಲ್ಲಿ ಹೆಚ್ಚು ತೃಪ್ತಿ ಬರಬಹುದೆಂಬುದನ್ನು ಮನಗಂಡಿದ್ದಾನೆ ಆ ನಿಸ್ಸ್ವಾರ್ಥಿ. ಸೀತಾನ್ವೇಷಣದ ಹಾದಿಯಲ್ಲಿ ಅಡ್ಡಲಾಗಿ ಬಿದ್ದಿರುವ ಅಗಾಧ ವೃಕ್ಷವನ್ನು ಎತ್ತಿ ಆಚೆಗೆಸೆಯುವ ಪೇರಾಸೆ ತಾನಲ್ಲ; ಪೇರಾಸೆ ಯಾವುದು ಎಲ್ಲಿದೆಯೆಂಬುದನ್ನು ಬಲ್ಲ. ಕಾರ್ಯಶೀಲ ಹನುಮಂತನೂ ಧನ್ಯ, ಪ್ರೋತ್ಸಾಹಕ ಜಾಂಬವಂತನೂ ಧನ್ಯ. ಅವರಿಬ್ಬರ ಸಂಯೋಗ ಉತ್ತಮ ಶಿಷ್ಯ ಉತ್ತಮ ಗುರುಗಳ ಸಂಯೋಗ. ಗುರುಗಳಿಗೆ ಗುರು, ವೃದ್ಧರಲ್ಲಿ ವೃದ್ಧ ಅಲ್ಲವೆ ಮಹಾನುಭಾವ ಜಾಂಬವಂತ!

ಆಹ್ಲಾದ ಪ್ರಮುಖವಾದ ಚಿಕ್ಕ ಕಥಾನಕದಲ್ಲಿ ಧ್ವನ್ಯರ್ಥ ಪರಂಪರೆಯನ್ನು ಹೇಗೆ ಇಡ ಬಲ್ಲ ಭರತವರ್ಷದ ಕವಿಕುಲಗುರು ವಾಲ್ಮೀಕಿ ಬಗೆಯಿರಿ; ಬಗೆದು ಆತನಿಗೆ ತಲೆಬಾಗಿ ನಮಸ್ಕರಿಸಿ!

ಎಸ್. ವಿ. ರಂಗಣ್ಣ

# ಪ್ರತ್ಯಭಿಜ್ಞಾದರ್ಶನ

## ಪ್ರತ್ಯಭಿಜ್ಞಾದರ್ಶನ ಪರಿಚಯ

ಶೈವದರ್ಶನವು ಭಾರತದ ಪ್ರಮುಖ ದರ್ಶನಗಳಲ್ಲಿ ಒಂದು. ಈ ದರ್ಶನದ ವಾದ ಸರಣಿಯು ಭಾರತದ ಹಲವು ಇತರ ಮತ ಮತ್ತು ತತ್ತ್ವಗಳು ಸಾರುವ ಅಭೇದಾಂಶವನ್ನೇ ಅನುಸರಿಸಿ ನಿಂತಿದೆ. ಈ ದರ್ಶನವು ಈಶ್ವರವಾದವನ್ನೂ ಮತ್ತು ಅಭೇದಾಂಶವನ್ನೂ ಅಳವಡಿಸಿ ಕೊಂಡೇ ಬೆಳೆದುಬಂದಿದೆ. ಈ ದರ್ಶನದ ಮುಖ್ಯವಾದ ಪ್ರಭೇದಗಳು ಶೈವಸಿದ್ಧಾಂತ ಮತ್ತು ಪ್ರತ್ಯಭಿಜ್ಞಾದರ್ಶನವೆಂಬೆರಡು. ಇವೆರಡರಲ್ಲಿ ಶೈವಸಿದ್ಧಾಂತವು ದಕ್ಷಿಣ ಭಾರತದಲ್ಲಿ ನೆಲಸಿ, ಪ್ರಸಿದ್ಧವಾಗಿದೆ. ಈ ಮತದ ಅನುಯಾಯಿಗಳು ಬಹುಜನರಿದ್ದಾರೆ. ಪ್ರತ್ಯಭಿಜ್ಞಾದರ್ಶನ ವಾದರೋ ಕಾಶ್ಮೀರದಲ್ಲಿ ಹಿಂದೆ ಪ್ರಸರಿಸಿದ್ದಿತು. ಈ ದರ್ಶನಕ್ಕೆ "ಕಾಶ್ಮೀರದ ಶೈವಮತ" ಎಂಬುದಾಗಿಯೂ ಬಹುಜನರಿಟ್ಟ ಹೆಸರಿದೆ. ಹಲವರು ಇದನ್ನು ಆಧುನಿಕ ಶಿವಾದ್ವೈತಕ್ಕೆ ಮೂಲವಿರಬಹುದೆಂದು ಊಹಿಸುತ್ತಾರೆ. ಇಂದಿಗೂ ಈ ಮತದ ಅನುಯಾಯಿಗಳು ಕೆಲವ ರಿದ್ದಾರೆ.

ಪ್ರತ್ಯಭಿಜ್ಞಾದರ್ಶನದ ಮುಖ್ಯೋದ್ದೇಶವನ್ನು ದರ್ಶನದ ಆದಿಸೂತ್ರದಲ್ಲಿಯೇ ಈ ರೀತಿ ಯಾಗಿ ತಿಳಿಸಿದ್ದಾರೆ: "ಹೇಗೋ ಮಹೇಶ್ವರನ ದಾಸ್ಯವನ್ನು ಸಂಪಾದಿಸಿ, ಇತರ ಜನರಿಗೆ ಉಪಕಾರವಾಗಲೆಂದು ಇಚ್ಛಿಸಿ, ಸಮಸ್ತರಿಗೂ ಸಂಪತ್ತನ್ನು ತರಬಲ್ಲ ಪ್ರತ್ಯಭಿಜ್ಞಾಶಾಸ್ತ್ರವನ್ನು ಹೇಳುತ್ತೇನೆ."[1]

ಪ್ರತ್ಯಭಿಜ್ಞಾದರ್ಶನದವರು ತಮ್ಮ ಸಾರ್ಥಕವಾದ ನಾಮಕರಣದಲ್ಲಿಯೇ ದರ್ಶನದ ಅತ್ಯಂತ ಮುಖ್ಯಾಂಶವನ್ನು ಹೊರಗೆಡಹಿದ್ದಾರೆ. 'ಪ್ರತ್ಯಭಿಜ್ಞೆ' ಎಂದರೆ 'ಗುರುತಿಸುವಿಕೆ' ಎಂದರ್ಥ. ಲೋಕದಲ್ಲಿ 'ಅವನೇ ಈ ದೇವದತ್ತ'[2] ಎಂಬ ಪ್ರತೀತಿಯುಂಟಷ್ಟೆ. ಇದರಲ್ಲಿ "ಅವನು" ಎಂಬಂಶದಿಂದ ಬೇರೆ ದೇಶದ ಮತ್ತು ಬೇರೆ ಕಾಲದ ಒಬ್ಬ ಮನುಷ್ಯನ ಜ್ಞಾನವಾಗುತ್ತದೆ. 'ಈ' ಎಂಬ ಶಬ್ದದಿಂದ ಪ್ರಕೃತವಾದ ದೇಶ ಮತ್ತು ಕಾಲದವನ ಜ್ಞಾನ ವಾಗುತ್ತದೆ. "ಇಂತಹವರಿಬ್ಬರೂ ಒಂದೇ" ಎಂಬ ಐಕ್ಯಜ್ಞಾನವು ನಮಗೆ ಪ್ರತೀತಿಯಿಂದ ಒಟ್ಟಿನಲ್ಲಿ ತಿಳಿಯುತ್ತದೆ. 'ಆ ದೇಶದ ಮತ್ತು ಆ ಕಾಲದ ದೇವದತ್ತನು ಈತನೇ' ಎಂಬಾಕಾರ ವಾದ ಗುರುತಿರುವಿಕೆಗೆ 'ಪ್ರತ್ಯಭಿಜ್ಞೆ' ಎಂಬುದಾಗಿ ವ್ಯವಹಾರ.[3] ಇಂತಹ ವ್ಯವಹಾರವನ್ನೇ

---

[1] ತತ್ರೇದಂ ಪ್ರಥಮಂ ಸೂತ್ರಮ್ :—

ಕಥಂ ಚಿದಾಸಾದ್ಯ ಮಹೇಶ್ವರಸ್ಯ
ದಾಸ್ಯಂ ಜನಸ್ಯಾಪ್ಯುಪಕಾರಮಿಚ್ಛನ್ |
ಸಮಸ್ತ ಸಂಪತ್ಸಮವಾಪ್ತಿ ಹೇತುಂ
ತತ್ಪ್ರತ್ಯಭಿಜ್ಞಾಮುಪಪಾದಯಾಮಿ ||

ಸರ್ವದರ್ಶನಸಂಗ್ರಹ, ಪುಟ 191

[2] "ಸೋऽಯಂ ದೇವದತ್ತಃ."

[3] "ಸೋऽಯಮಿತ್ಯತ್ರ ತಚ್ಛಬ್ದೇನ ದೇಶಾಂತರ ಕಾಲಾಂತರ ಸಂಬಂಧೀ ಪುರುಷಃ ಪ್ರತೀಯತೇ | ಇದಂ ಶಬ್ದೇನ ಚ ಸಂನಿಹಿತದೇಶವರ್ತಮಾನಕಾಲಸಂಬಂಧೀ | ತಯೋಃ ಸಾಮಾನಾಧಿಕರಣ್ಯೇನ ಐಕ್ಯಮವಗಮ್ಯತೇ |" (ಪು. 102)

ಅನುಸರಿಸಿ "ಅವನೇ ಈ ಚೈತ್ರ" ಮುಂತಾದ ಇತರ ಪ್ರತೀತಿಗಳೂ ಹೇರಳವಾಗಿ ಹುಟ್ಟಿವೆ.[4] ಇದರಂತೆಯೇ ಜೀವನಿಗೆ "ಆ ಪರಮೇಶ್ವರನೇ ನಾನು"[5]—ಎಂಬುದಾಗಿ ತನ್ನನ್ನು ಗುರುತಿಸಿ ಕೊಳ್ಳುವ ತಿಳುವಳಿಕೆ ಬಂದರೆ, ಆಗ ಜೀವನು 'ಪರಸಿದ್ಧಿ' ಎಂಬ ಮುಕ್ತಿಯನ್ನು ಪಡೆಯುತ್ತಾನೆ. ಇದಕ್ಕೆ "ಪ್ರತ್ಯಭಿಜ್ಞೆ" ಎಂಬುದಾಗಿ ಹೆಸರು.[6] ಉತ್ತಮವಾದ ಜ್ಞಾನಕ್ಕೆ 'ಪ್ರಜ್ಞಾನ'ವೆಂದು ಹೆಸರು. 'ನಾನು ಈಶ್ವರ'ಎಂಬುದಾಗಿ ಗುರುತಿಸುವಿಕೆಯೇ, ಸಾಕ್ಷಾತ್ಕರಿಸುವಿಕೆಯೇ ಈ ಉತ್ತಮವಾದ ಜ್ಞಾನ.[7] ಎಂದಮೇಲೆ, "ಪ್ರತ್ಯಭಿಜ್ಞಾದರ್ಶನ"ವೆಂಬ ನಾಮಕರಣವು ಎಷ್ಟು ಸಾರ್ಥಕವಾದುದೆಂದು ನಮಗೆ ಮನದಟ್ಟಾದಂತೆಯೇ ಆಯಿತು. ನಾಮಕರಣವನ್ನು ಮನನ ಮಾಡುವುದರಿಂದ, ಸಕಲ ಸಂಪತ್ತಿನ ಪ್ರಾಪ್ತಿಯಾಗಬೇಕಾದರೆ 'ಸ ಏವೇಶ್ವರೋಽಹಂ' ಎಂಬ ಪ್ರತ್ಯಭಿಜ್ಞೆಯೇ ಮುಖ್ಯ ಕಾರಣವೆಂದು ಸಿದ್ಧವಾಯಿತು. ಇಂತಹ ಜ್ಞಾನವು ಮನುಷ್ಯನಿಗೆ ಬರಬೇಕಾದರೆ ಅಷ್ಟು ಸುಲಭವಲ್ಲ; ಆದರೆ ಯಾರಿಗೆ 'ನಿತ್ಯವಾದ ಸುಖವೊಂದುಂಟು, ಅದನ್ನು ನಾನು ಸಂಪಾದಿಸಬೇಕು' ಎಂಬ ಅರಿವುಂಟಾಗುವುದೋ ಅಂತಹವನಿಗೆ ಅಧಿಕಾರ ಪ್ರಾಪ್ತಿ ಯಾಗುವುದೆಂದು ಪರಿಗಣಿಸಬೇಕು.[9]

## ಪ್ರತ್ಯಭಿಜ್ಞಾದರ್ಶನ ಸಾಹಿತ್ಯ

ಪ್ರತ್ಯಭಿಜ್ಞಾದರ್ಶನವನ್ನು ಪರಿಚಯಮಾಡಿಕೊಡುವ 'ಸೂತ್ರ'ಗ್ರಂಥಗಳೂ,[10] 'ವೃತ್ತಿ'[11]ಗ್ರಂಥಗಳೂ, 'ವಿವೃತಿ'[12]ಗ್ರಂಥಗಳೂ ಮತ್ತು 'ವಿಮರ್ಶಿನೀ'[13] ಗ್ರಂಥಗಳೂ ಹೇರಳವಾಗಿವೆ. ಈ ಗ್ರಂಥಗಳು ಸುಮಾರು ಎಂಟನೆಯ ಶತಮಾನದ ಆದಿಭಾಗದಿಂದ ಪ್ರಾರಂಭ ವಾಗಿ ಹನ್ನೊಂದನೆಯ ಶತಮಾನದವರೆಗೆ ಬೆಳೆಯುತ್ತ ಬಂದವು. ಪ್ರತ್ಯಭಿಜ್ಞಾದರ್ಶನದಲ್ಲಿ ಪ್ರಸಿದ್ಧವಾದ ಕೆಲವು ಗ್ರಂಥಗಳ ಹೆಸರಿವು: ವಸುಗುಪ್ತರ 'ಶಿವಸೂತ್ರ', 'ಸ್ಪಂದಾಮೃತ' ಮತ್ತು 'ವಾಸವೀ'; ಕಲ್ಲಟರ 'ಶಿವಸೂತ್ರ ವೃತ್ತಿ', 'ಸ್ಪಂದಸರ್ವಸ್ವ' ಮತ್ತು 'ಸ್ಪಂದಕಾರಿಕಾ'; ಕ್ಷೇಮರಾಜರ 'ಶಿವಸೂತ್ರ ವಿಮರ್ಶಿನೀ,' 'ಈಶ್ವರ ಪ್ರತ್ಯಭಿಜ್ಞಾಹೃದಯ' ಮತ್ತು 'ಸ್ಪಂದ

---

4 "ಲೋಕೇ ಹಿ 'ಸ ಏವಾಯಂ ಚೈತ್ರ' ಇತಿ ಪ್ರತಿಸಂಧಾನೇನಾಭಿಮುಖೀಭೂತೇ ವಸ್ತುನಿ ಜ್ಞಾನಂ ಪ್ರತ್ಯಭಿಜ್ಞೇತಿ ವ್ಯವಹ್ರಿಯತೇ"—ಪು. 193.

5 "ಸ ಏವ ಈಶ್ವರೋಽಹಮ್"

—ಸರ್ವ. ಸಂ. ವ್ಯಾಖ್ಯಾ, ಪು. 192.

6 "ಅಹಮೀಶ್ವರಃ ನಾನ್ಯಃ ಇತ್ಯೇವಂ ಯಃ ಸಾಕ್ಷಾತ್ಕಾರಃ ಸಃ ಪ್ರತ್ಯಭಿಜ್ಞೇತ್ಯುಚ್ಯತೇ"

—ವ್ಯಾಖ್ಯಾ, ಪು. 190.

7 "ಪ್ರಕೃಷ್ಟಂ ಜ್ಞಾನಂ ಪ್ರಜ್ಞಾನಂ ಪ್ರತ್ಯಭಿಜ್ಞಾ। ಈಶ್ವರೋಽಹಮಿತ್ಯೇವಂ ಸಾಕ್ಷಾತ್ಕಾರಃ"

—ಸರ್ವ. ಸಂ. ವ್ಯಾಖ್ಯಾ, 192.

8 "ತಥಾ ಚ ಸಮಸ್ತಸಂಪತ್ಸಮವಾಪ್ತೇಃ ಪ್ರತ್ಯಭಿಜ್ಞಾಹೇತುತ್ವಂ ಸಿದ್ಧಮ್"

—ವ್ಯಾಖ್ಯಾ, ಪು. 193.

9 "ಯಾವನ್ನಸ್ವಸ್ಯ ನಿತ್ಯಸುಖಾದಿ ವಿಜ್ಞಾನಂ ಸಂಪ್ರಾಪ್ತಂ ತಾವನ್ನ ಪ್ರತ್ಯಭಿಜ್ಞೋದೇತಿ"

—ವ್ಯಾಖ್ಯಾ, ಪು. 193.

10 ಸಂಕ್ಷೇಪವಾಗಿ ಅರ್ಥ ಹೇಳುವ ವಾಕ್ಯಗಳಿಗೆ 'ಸೂತ್ರ'ವೆಂದು ಹೆಸರು. 11 ಸೂತ್ರಗಳ ಅನ್ವಯ ಮತ್ತು ಅರ್ಥ ಹೇಳುವ ಗ್ರಂಥಗಳಿಗೆ 'ವೃತ್ತಿ' ಎಂದು ಹೆಸರು. 12 ಬೇರೆ ಪದಗಳಿಂದ ಅರ್ಥ ವಿವರಿ ಸುವುವು 'ವಿವೃತಿ' ಗ್ರಂಥಗಳು. 13 ಹೆಚ್ಚು ವಿಚಾರಮಾಡುವ ಗ್ರಂಥಗಳಿಗೆ 'ವಿಮರ್ಶಿನೀ' ಎಂದು ಹೆಸರು. ಇವುಗಳಲ್ಲಿ ಎರಡುಭೇದ: (1) ಲಘುವಿಮರ್ಶಿನೀ, (2) ಬೃಹದ್ವಿಮರ್ಶಿನೀ—ಎಂಬುದಾಗಿ.

ನಿರ್ಣಯ'; ಸೋಮಾನಂದರ 'ಶಿವದೃಷ್ಟಿ' ಮತ್ತು 'ಶಿವದೃಷ್ಟಿವೃತ್ತಿ'; ಉತ್ಪಲಾಚಾರ್ಯರ 'ಪ್ರತ್ಯಭಿಜ್ಞಾಕಾರಿಕಾ,' 'ಈಶ್ವರಸಿದ್ಧಿ' ಮತ್ತು 'ಅಜಡಪ್ರಮಾತೃಸಿದ್ಧಿ'; ಅಭಿನವಗುಪ್ತರ 'ಪ್ರತ್ಯಭಿಜ್ಞಾವಿಮರ್ಶಿನೀ,' 'ಶಿವದೃಷ್ಟ್ಯಾಲೋಚನ,' 'ಪರಾತ್ರಿಂಶಿಕಾ ವಿವರಣ,' 'ತಂತ್ರಸಾರ' 'ತಂತ್ರಾಲೋಕ,' 'ಪರಮಾರ್ಥಸಾರ' ಮತ್ತು ಇತರ ಗ್ರಂಥಗಳು. ಪ್ರತ್ಯಭಿಜ್ಞಾದರ್ಶ' ದಲ್ಲಿ ಅಭಿನವಗುಪ್ತರ ಹೆಸರು ಮತ್ತು ಅವರ ಗ್ರಂಥಗಳು ಬಹು ಪೂಜ್ಯವಾದುವು.

## ಪ್ರತ್ಯಭಿಜ್ಞಾದರ್ಶನದ ವಿಶೇಷಾಂಶಗಳು

ಪ್ರತ್ಯಭಿಜ್ಞಾದರ್ಶನವು ಗುರುವಿನ ಆವಶ್ಯಕತೆಯನ್ನೂ ದಾಸಭಾವವನ್ನೂ ಒತ್ತಿ ಹೇಳುತ್ತದೆ. ಸದ್ಗುರುವೇ ನಮಗೆ ಪ್ರತ್ಯಭಿಜ್ಞಾತತ್ತ್ವವನ್ನು ಉಪದೇಶಮಾಡಬಲ್ಲವ. ಸಕಾಲ ದಲ್ಲಿ ಪರಮೇಶ್ವರನೇ ನಮಗೆ ಗುರುಗಳನ್ನು ಒದಗಿಸುತ್ತಾನೆ. ಅಲ್ಲದೆ, ನಮಗೆ ಗುರುಪಾದವೂ ಪರಮೇಶ್ವರನಷ್ಟೇ ಪೂಜ್ಯ.[14] ಪರಮೇಶ್ವರನ ಇಚ್ಛೆಯೇ ನಮಗೆ ಈ ಗುರುಚರಣಸೇವಾ ಪ್ರಾಪ್ತಿಯನ್ನು ಒದಗಿಸಿಕೊಡುವುದು. ಇಂತಹ ಐಶ್ವರ್ಯವನ್ನು ವಿಷ್ಣು-ಬ್ರಹ್ಮರೂ ಪಡೆ ದಿದ್ದರು. ವಿಷ್ಣು-ಬ್ರಹ್ಮರೂ ಮಾಯೆಯಲ್ಲಿದ್ದವರೇ. ಆದರೆ ಅವರು ಈಶ್ವರನ ಮಾಯೆಯಿಂದ ಪಾರಾದುದು ಗುರುವಾದ ಪರಮೇಶ್ವರನ ಅನುಗ್ರಹಲೇಶದಿಂದಲೇ. ಸೂತ್ರ, ವೃತ್ತಿ, ವಿವೃತಿ ಮುಂತಾದುವುಗಳ ಗ್ರಂಥಕಾರರೂ ನಮಗೆ ಗುರುಸ್ಥಾನೀಯರೇ, ಪೂಜ್ಯರೇ. ಹೇಗೆ ಹೇಮಂತ ಋತುವಿನಲ್ಲಿ ಶೈತ್ಯವು ಹೆಚ್ಚಾಗುವುದರಿಂದ ವಟುಗಳು ಅಧ್ಯಯನ ಮಾಡಲು ಅಸಮರ್ಥರಾಗು ವುದರಿಂದ, ತಮ್ಮ ಬಳಿಗೆ ಅಗ್ನಿಯನ್ನು ತಂದಿಟ್ಟುಕೊಂಡು ಅಧ್ಯಯನ ಮಾಡಲಾರಂಭಿಸು ವರೋ ಮತ್ತು ಇಂತಹ ಸಂದರ್ಭದಲ್ಲಿ "ಅಗ್ನಿಯು ಅಧ್ಯಾಪನೆ ಮಾಡಿಸುವುದು" ಎಂಬು ದಾಗಿ ವ್ಯವಹರಿಸುವರೋ, ಅದರಂತೆ ಗುರುಗಳು ಮತ್ತು ಗುರುಸ್ಥಾನೀಯರಾದ ದರ್ಶನಾ ಚಾರ್ಯರುಗಳು, ಅಗ್ನಿಯು ಅಧ್ಯಯನಕ್ಕೆ ಪ್ರತಿಬಂಧಕವಾದ ಶೈತ್ಯವನ್ನು ನಿವಾರಣೆ ಮಾಡುವಂತೆ ಪ್ರತ್ಯಭಿಜ್ಞೆಗೆ ಪ್ರತಿಬಂಧಕವಾದ ವಿಪರೀತ ಭಾವನೆಯನ್ನು ದೂರಮಾಡಿ ಅಂತಹ ಜ್ಞಾನಕ್ಕೆ ಶಿಷ್ಯರು ಉನ್ಮುಖರಾಗುವಂತೆ ಮಾಡುವರು.

ಗುರೂಪದೇಶದಿಂದಲೇ ಪ್ರತ್ಯಭಿಜ್ಞಾದರ್ಶನದ ಮತ್ತೊಂದು ವಿಶೇಷಾಂಶವಾದ ದಾಸ್ಯಭಾವದ ಮಹತ್ತ್ವ ಅರಿವಾಗುವುದು. ಶಾಸ್ತ್ರದ ಮೊದಲನೆಯ ಸೂತ್ರದಲ್ಲಿಯೇ ದಾಸ್ಯಭಾವಕ್ಕೆ ಅನ್ವಯವಿದೆ.[15] ಮುಮುಕ್ಷುವಾದವನು "ನಾನು ಪರಮೇಶ್ವರನ ದಾಸ" ಎಂಬುದನ್ನು ಚೆನ್ನಾಗಿ ತಿಳಿಯಬೇಕು. 'ದಾಸ'ನಾದವನಿಗೆ ಪರಮೇಶ್ವರನು ಅವನಿಷ್ಟವನ್ನೆಲ್ಲಾ ಪೂರ್ಣಮಾಡುವನು.[16] ಒಟ್ಟಿನಲ್ಲಿ ದಾಸನೆಂದರೆ ಈ ದರ್ಶನದಲ್ಲಿ ಪರಮೇಶ್ವರನ ಸ್ವರೂಪವಾದ ಸ್ವಾತಂತ್ರ್ಯವೆಂಬ ಧರ್ಮವನ್ನು ಪಡೆಯಲು ಅರ್ಹನಾದ ಜೀವನೆಂದರ್ಥ.[17] ಎಂದಮೇಲೆ ಪರಮೇಶ್ವರನ ದಾಸ್ಯವನ್ನು ಅಂಗೀಕರಿಸುವುದರಿಂದ, ಆತನ ಸ್ವಾತಂತ್ರ್ಯಾದಿ ಧರ್ಮಗಳೂ ನಮಗೆ ಪ್ರಾಪ್ತವಾಗುವುವು—ಎಂಬ ತಾತ್ಪರ್ಯವಾಯಿತು. ಉತ್ಪಲಾಚಾರ್ಯರು ಭಕ್ತನ ಮುಖ್ಯವಾದ ಲಕ್ಷಣವೆಂದರೆ ಈ ದಾಸ್ಯವೆಂದು ಹೇಳಿದ್ದಾರೆ ಮತ್ತು ಪರಮೇಶ್ವರನ ದಾಸ್ಯ ವನ್ನು ಪಡೆಯುವುದೇ ಸಂಪತ್ತಿನ 'ಪರಾಕಾಷ್ಠೆ' ಎಂದೂ ಅಂತಹ ದಾಸ್ಯವನ್ನು ಹೊಂದದೆ

14 "ಪರಮೇಶ್ವರಾಭಿನ್ನಗುರುಚರಣಾರವಿಂದಯುಗಳ ಸಮಾರಾಧನೇನ ಪರಮೇಶ್ವರಘಟಿತೇನೈವ..." (ಪು. 191)

15 "ಕಥಂಚಿದಾಸಾದ್ಯ ಮಹೇಶ್ವರಸ್ಯ ದಾಸ್ಯಂ" (ಪು. 191)

16 "ದೀಯತೇ ಅಸ್ಮೈ ಸ್ವಾಮಿನಾ ಸರ್ವಂ ಯಥಾಭಿಲಷಿತಮಿತಿ ದಾಸಃ" (ಪು. 191)

17 "ಪರಮೇಶ್ವರಸ್ವರೂಪಸ್ವಾತಂತ್ರ್ಯಪಾತ್ರಮಿತ್ಯರ್ಥಃ" (ಪು. 191)

ಇರುವುದೇ 'ವಿಪತ್ತಿನ ಪರಾಕಾಷ್ಠೆ' ಎಂದೂ ಸ್ಪಷ್ಟಪಡಿಸಿದ್ದಾರೆ. ಸೋಮಾನಂದನಾಥರೂ ಸಹ, ಮಹೇಶ್ವರನ ದಾಸನಾದವನು ಸದಾ ತನ್ನನ್ನು ಶಿವನೆಂದೂ ಶಿವಶಕ್ತಿಸ್ವರೂಪ ಉಳ್ಳವನೆಂದೂ ತಿಳಿಯುತ್ತಾನೆ—ಎಂಬುದಾಗಿ ಹೇಳಿರುವರು.[18]

## ಪರಮೇಶ್ವರ

ಪ್ರತ್ಯಭಿಜ್ಞಾದರ್ಶನವು ಈಶ್ವರತತ್ತ್ವವನ್ನು ಒತ್ತಿಹೇಳುವ ಶಾಸ್ತ್ರ. ಈ ಪರಮೇಶ್ವರನಾದರೋ ಅಪರಿಮಿತವಾದ ಪ್ರಕಾಶ, ಆನಂದ ಮತ್ತು ಸ್ವಾತಂತ್ರ್ಯದಿಂದ ಕೂಡಿದವನು.[19] ಪರಮೇಶ್ವರನು ಚೈತನ್ಯರೂಪನಾದುದರಿಂದ "ಪ್ರಕಾಶ"ವೆಂಬ ನಾಮದಿಂದ ಶೋಭಿಸುತ್ತಾನೆ.[20] ಇವನಿಗೇ 'ಪ್ರಮಾತಾ' ಎಂದೂ ಬೇರೊಂದು ಹೆಸರು. ಶಿವಸೂತ್ರಗಳು ಈ ತತ್ತ್ವವನ್ನೇ ಚೈತನ್ಯರೂಪವಾದ 'ಆತ್ಮಾ' ಎಂದೂ ವ್ಯವಹರಿಸುವುದು. ಈ ಈಶ್ವರನಿಗೇ ಚಿದ್ರೂಪತ್ವ, ಅನವಚ್ಛಿನ್ನವಿಮರ್ಶತ್ವ, ಅನನ್ಯೋನ್ಮುಖತ್ವ, ಆನಂದೈಕಘನತ್ವ ಮತ್ತು ಮಹೇಶ್ವರತ್ವ—ಎಂಬ ಧರ್ಮಗಳು ಹೇಳಲ್ಪಟ್ಟಿವೆ. ಈತನೇ 'ಭಾವಾತ್ಮಾ' ಅಥವಾ ನಮ್ಮ ಚಿಂತನೆಗೆ ಅರ್ಹ. ಅನಂತಶಕ್ತಿಯುಳ್ಳ ಮತ್ತು ಅಪರಿಮಿತಶಕ್ತಿಯುಳ್ಳ ಈತನಲ್ಲಿ 'ಜ್ಞಾನಶಕ್ತಿ' ಮತ್ತು 'ಕ್ರಿಯಾಶಕ್ತಿ' ಎಂಬುವುಗಳು ಗಮನಾರ್ಹವಾದುವುಗಳು. ಜ್ಞಾನಶಕ್ತಿಯಿಂದ ಮಹೇಶ್ವರನು ನಮ್ಮ ಮುಂದೆ ತೋರುವ ಭೂತ ಮತ್ತು ಭೌತಿಕವಾದ ಭಾವಪದಾರ್ಥಗಳನ್ನು ನಿರ್ಮಾಣಮಾಡುತ್ತಾನೆ. ಈರೀತಿ ನಿರ್ಮಿತವಾದ ಪದಾರ್ಥಗಳನ್ನು ತನ್ನ ಕ್ರಿಯಾಶಕ್ತಿಯಿಂದ ಪ್ರಕಾಶಪಡಿಸುತ್ತಾನಾದುದರಿಂದ, ಮಹೇಶ್ವರನಿಗೆ 'ಪ್ರಯೋಜಕ ಕರ್ತೃತ್ವ'ವನ್ನು ಹೇಳುವ ವಾಡಿಕೆಯುಂಟು. "ನಾನು ಬಹುವಾಗುತ್ತೇನೆ"[21]—ಎಂದು ಇಚ್ಛಿಸಿ, ಸೃಷ್ಟಿಮಾಡುವಿಕೆಯೇ ಆತನ ಕ್ರಿಯಾಶಕ್ತಿಗೆ ಗುರುತು.

ಅಂತೂ ಮೇಲೆ ಹೇಳಿದ ಪ್ರಕಾಶ, ಆನಂದ, ಸ್ವಾತಂತ್ರ್ಯವೆಂಬ ಮೂರು ಧರ್ಮಗಳೂ ಪರಮೇಶ್ವರನ ಸ್ವರೂಪವೇ.[22] ಲೋಕದಲ್ಲಿ ನಾವು ಸೂರ್ಯ, ಚಂದ್ರ, ನಕ್ಷತ್ರಾದಿಗಳು ಪ್ರಕಾಶಿಸುವುದನ್ನು ಕಂಡಿದ್ದೇವಷ್ಟೆ. ಈ ಸೂರ್ಯಾದಿಗಳ ಪ್ರಕಾಶವೂ ಪರಮೇಶ್ವರನ ಪ್ರಕಾಶವೇ, ಬೇರೆಯಾದುದಲ್ಲ. ಸೂರ್ಯಾದಿಗಳ ಪ್ರಕಾಶಕ್ಕೂ ಈಶ್ವರನ ಪ್ರಕಾಶಕ್ಕೂ ಭೇದವಿಲ್ಲವೆಂಬುದು ಅನುಸಂಧಾನದಿಂದ ಸಿದ್ಧಿಸುತ್ತದೆ. ಪ್ರಕಾಶ ವಸ್ತುವಿರುವುದು ಒಂದೇ ; ಇವನೇ ಮಹೇಶ್ವರ. ಈಶ್ವರನು ಸೂರ್ಯಾದಿ ಇತರ ಪದಾರ್ಥಗಳ ಭಾಸಕನೆಂಬುದೂ, ಈಶ್ವರ ಪ್ರಕಾಶದಿಂದಲೇ ಸೂರ್ಯಾದಿಗಳ ಪ್ರಕಾಶವೂ ಏರ್ಪಡುವುದೆಂಬುದೂ ಶ್ರುತಿಸಿದ್ಧವೆಂದು ಅಭಿನವಗುಪ್ತಪಾದರು 'ಸಕಲ ಪದಾರ್ಥಗಳೂ ಭಾಸಮಾನವಾಗಿರುವ ಈಶ್ವರನಿಂದಲೇ ತಾವೂ ಭಾಸಮಾನವಾಗುತ್ತವೆ' ಎಂಬ ಪ್ರಮಾಣ ವಾಕ್ಯದ ಉದಾಹರಣೆಯಿಂದ ತಿಳಿಸುತ್ತಾರೆ.[23]

---

18 "ಸದಾ ಶಿವಾತ್ಮನಾವೇತ್ತಿ ಸದಾ ವೇತ್ತಿ ಮದಾತ್ಮನಾ" (ಪು. 195)

19 "ಸ ಭಗವಾನನವಚ್ಛಿನ್ನಪ್ರಕಾಶಾನಂದಸ್ವಾತಂತ್ರ್ಯಪರಮಾರ್ಥೋ ಮಹೇಶ್ವರಃ" (ಪು. 191)

20 "ಸ ಏವ ಚೈತನ್ಯರೂಪಃ ಪ್ರಕಾಶಃ ಪ್ರಮಾತೇತ್ಯುಚ್ಯತೇ" (ಪು. 196)

21 "'ಅಹಂ ಬಹುಸ್ಯಾಮ್' ಇತ್ಯೇವಂ ವಿಧಾ ಯೇಚ್ಛಾ ಸೈವ ತಸ್ಯ ಕ್ರಿಯಾ"
—ವ್ಯಾಖ್ಯಾ, 197.

22 "ಪ್ರಕಾಶ—ಆನಂದಃ—ಸ್ವಾತಂತ್ರ್ಯಂ ಚೇತ್ಯೇತತ್ತ್ರಯಂ
ಪರಮಾರ್ಥಭೂತಂ ಪರಮೇಶ್ವರಸ್ವರೂಪಮ್"
—ವ್ಯಾಖ್ಯಾ, 191.

23 "ವಿವೃತಂ ಚ ಅಭಿನವಗುಪ್ತಾಚಾರ್ಯೈಃ। ತಮೇವ ಭಾನ್ತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ಇತಿ ಶ್ರುತ್ಯಾ ಪ್ರಕಾಶಚಿದ್ರೂಪ ಮಹಿಮ್ನಾ ಸರ್ವಸ್ಯ ಭಾವಜಾತಸ್ಯ ಭಾಸಕತ್ವಮಭ್ಯುಪೇಯತೇ" (ಪು. 196)

ಪ್ರಪಂಚದಲ್ಲಿ ನೀಲ, ಪೀತ ಮುಂತಾದ ಆಕಾರದಲ್ಲಿ ಪದಾರ್ಥಗಳು ತೋರುವುದುಂಟು. ಆದರೆ ಈ ನೀಲಾದಿಗಳು ಭಾವಪದಾರ್ಥ ಭೇದದಿಂದ ತೋರುವ ಭೇದಗಳು. ವಸ್ತುತಃ, ದೇಶ-ಕಾಲ-ಆಕಾರ-ಸಂಕೋಚವೆಂಬುದೇ ಇಲ್ಲವಾಗಿ, ಈಶ್ವರನಿಗೂ ಪದಾರ್ಥಗಳಿಗೂ ಭೇದವಿಲ್ಲವಾದುದರಿಂದ ಎಲ್ಲವೂ ಈಶ್ವರನೇ ಮತ್ತು ಅವನ ಪ್ರಕಾಶವೇ.[24] ಪರಮೇಶ್ವರನ ಪ್ರಕಾಶವು ಯಾವ ತೆರನಾಗಿ ಅದ್ವಿತೀಯವಾದುದೋ ಅದರಂತೆಯೇ ಆತನ 'ಆನಂದ'ವೂ ಸಹ. ಆತನ ಚೈತನ್ಯ ರೂಪವು 'ಕ್ರಮರಹಿತ'ವಾದ ಆನಂದದಿಂದ ಕೂಡಿದುದು. ಎಂದರೆ, ಜೀವನ ಆನಂದದಲ್ಲಿ ಹೆಚ್ಚು ಕಡಮೆ ಹೇಗೆ ಕಾಣುವುದೋ ಅಂತಹ ತಾರತಮ್ಯದಿಂದ ಕೂಡಿದುದಲ್ಲ ಪರಮೇಶ್ವರನ ಆನಂದ. ಹಾಗೂ ಜೀವನು ಮನೆಕಟ್ಟಿ ಆನಂದ ಪಡುತ್ತಾನೆ, ಪುತ್ರಜನನವಾದರೆ ಆನಂದಪಡುತ್ತಾನೆ. ಜೀವನ ಆನಂದವು ಈ ರೀತಿಯಾಗಿ 'ಸೋಪಾಧಿಕ'ವಾದುದು. ಈಶ್ವರನ ಆನಂದವಾದರೋ ನಿರುಪಾಧಿಕವಾದುದು. ಆತನ ಆನಂದಕ್ಕೆ ಕಾರಣಗಳು ಬೇಕಿಲ್ಲ.

ಪ್ರತ್ಯಭಿಜ್ಞಾದರ್ಶನವು ಹೆಚ್ಚು ಹಾಡುವುದೆಂದರೆ ಪರಮೇಶ್ವರನ ಸ್ವಾತಂತ್ರ್ಯ ಸ್ವರೂಪವನ್ನು ಕುರಿತು. ಈ ಪರಮೇಶ್ವರನ ಪೂರ್ಣಸ್ವಾತಂತ್ರ್ಯವೆಂಬ ವಿಷಯವನ್ನು ಮುಖ್ಯವಾಗಿ ಮೂರು ಪ್ರಕಾರದಲ್ಲಿ ತಿಳಿಸುತ್ತಾರೆ. ಮೊದಲನೆಯದಾಗಿ, ಈಶ್ವರನು ಜೀವನ ಕರ್ಮವನ್ನು ನೋಡಿ, ಅದರ ಆಧಾರದ ಮೇಲೆ ಅವನಿಗೆ ಫಲವನ್ನು ಕೊಡುವುದಿಲ್ಲ. ಇದು ಅನೇಕ ಇತರ ದಾರ್ಶನಿಕರ ಮತವಾದರೂ ಪ್ರತ್ಯಭಿಜ್ಞಾದರ್ಶನವು ಇದನ್ನು ಒಪ್ಪದು. ಈ ವಾದವನ್ನು ಒಪ್ಪಿದರೆ, ಪರಮೇಶ್ವರನ ಸ್ವಾತಂತ್ರ್ಯಕ್ಕೆ ಹಾನಿ ಬರುವುದೆಂದು ತಿಳಿಸಿ, ಈ ವಾದವನ್ನು ದೂರಮಾಡುವರು.[25] ಈಶ್ವರನು ಯಾವ ಇತರ ಪದಾರ್ಥವನ್ನೂ ಅಪೇಕ್ಷಿಸದೆ ಸ್ವತಂತ್ರವಾಗಿ ತನ್ನಿಚ್ಛೆಯಿಂದಲೇ ಜಗತ್ತನ್ನು ಸೃಷ್ಟಿಸಬಲ್ಲನೆಂಬುದೇ ಪ್ರತ್ಯಭಿಜ್ಞಾದಾರ್ಶನಿಕರ ವಾದ ಸರಣಿ. ಹೀಗೆಂದ ಮೇಲೆ ಈಶ್ವರನ ಸ್ವಾತಂತ್ರ್ಯ ಸಾರುವುದಕ್ಕೆ ಆತ ಈ ಜಗತ್ತನ್ನು ಯಾವ ಮೃದಾದಿ ಉಪಾದಾನ ಕಾರಣಗಳನ್ನೂ ಅಪೇಕ್ಷಿಸದೆ, ತನ್ನ ಇಚ್ಛಾಮಾತ್ರದಿಂದಲೇ ಸೃಷ್ಟಿಸಬಲ್ಲನೆಂಬುದು ಎರಡನೆಯ ಪ್ರಕಾರದಿಂದ ವಾದಮಾಡಿ ತಿಳಿಸಿದಂತಾಯಿತು. ಈ ವಿಷಯದಲ್ಲಿ ವಸುಗುಪ್ತಾಚಾರ್ಯರಾಡಿದ ಮಾತು ಅತ್ಯಂತ ಭಾವಗರ್ಭಿತವಾಗಿದೆ. ಅವರು "ಈಶ್ವರನು ಯಾವ ಉಪಕರಣಗಳನ್ನು ಹೊಂದದೆಯೂ ಜಗತ್ತನ್ನು ಸೃಷ್ಟಿಸಬಲ್ಲ. ಗೋಡೆ ಇಲ್ಲದೆ ಶೂನ್ಯ ಪ್ರದೇಶದಲ್ಲಿಯೂ ಜಗತ್ತೆಂಬ ಚಿತ್ರವನ್ನು ಬರೆಯಬಲ್ಲ" ಎಂಬುದಾಗಿ ಹಾಡಿ, ಈಶ್ವರನ ಪೂರ್ಣ ಸ್ವಾತಂತ್ರ್ಯವನ್ನು ಸಾರಿದ್ದಾರೆ.[26] ಮೂರನೆಯದಾಗಿ ಈಶ್ವರನು ಅಪರಿಮಿತ ಐಶ್ವರ್ಯಶಾಲೀ;[27] ಆದುದರಿಂದಲೇ ಪರಮೇಶ್ವರನು ಲೋಕದ 'ನಿಯತಿ'[28] ಅಥವಾ ಧರ್ಮವನ್ನು ತನ್ನ ಅಧೀನದಲ್ಲಿಟ್ಟುಕೊಂಡಿರುವನೇ ಹೊರತಾಗಿ, 'ನಿಯತಿ'ಗೆ ತಾನು ತಲೆ ಬಾಗುವುದಿಲ್ಲ. ಬ್ರಹ್ಮಾದಿ ದೇವತೆಗಳು ಈ ನಿಯತಿಯನ್ನು ಅನುಸರಿಸುವವರೇ, ಅವರಿಗೆ

---

24 "ವಸ್ತುತಸ್ತು ದೇಶಕಾಲಾಕಾರಸಂಕೋಚವೈಕಲ್ಯಾದಭೇದ ಏವ" (ಪುಟ 196)

25 "ನಾಪಿ ಕರ್ಮಸಾಪೇಕ್ಷಸ್ಯೇಶ್ವರಸ್ಯ ಜಗತ್ಕಾರಣತ್ವಮ್ | ಈಶ್ವರಸ್ಯ ಜಗದುತ್ಪಾದನೇ ಕರ್ಮಾವಲಂಬಿತ್ವೇ ಪೂರ್ಣಸ್ವಾತಂತ್ರ್ಯ ಭಂಗಾಪತ್ತೇಃ"

—ವ್ಯಾಖ್ಯಾ, 190.

26 "ನಿರುಪಾದಾನಸಂಭಾರಮಭಿತ್ತಾವೇವ ತನ್ವತೇ |
ಜಗಚ್ಚಿತ್ರಂ ನಮಸ್ತಸ್ಮೈ ಕಲಾನಾಥಾಯ ಶೂಲಿನೇ" ||

(ಪು. 199)

27 "ಭೂರಿಭಗಃ"

28 ಪದಾರ್ಥಗಳು ಮತ್ತು ಅವುಗಳ ಧರ್ಮಗಳು ಹೀಗೆಯೇ ಇರಬೇಕೆಂಬ ನಿಯಮಕ್ಕೆ ಈ ಹೆಸರು. ಅಥವಾ, 'ನಿಯತಿ' ಎಂದರೆ ಅದೃಷ್ಟವೆಂದೂ ಮತ್ತೊಂದರ್ಥ.

11976



ಇದನ್ನು ಉಲ್ಲಂಘಿಸಲು ಸಾಧ್ಯವಿಲ್ಲ. ಏಕೆಂದರೆ ಅವರು ಪರಮೇಶ್ವರನ ಪರತಂತ್ರರು. ಪರಮೇಶ್ವರನಾದರೋ ಪೂರ್ಣವಾದ ಸ್ವಾತಂತ್ರ್ಯವನ್ನು ಹೊಂದಿರುವನಾದುದರಿಂದ, ಲೀಲೆಯಿಂದಲೇ ಈ 'ನಿಯತಿ'ಯನ್ನು ಮೀರಬಲ್ಲ. 'ನಿಯತಿ'ಯು ಪರಮೇಶ್ವರನ ಅಧೀನ. ಹೀಗೆ, ಈ ಮೂರು ಮುಖ್ಯವಾದ ಪ್ರಕಾರದಲ್ಲಿ ಪ್ರತ್ಯಭಿಜ್ಞಾದಾರ್ಶನಿಕರು ಪರಮೇಶ್ವರನ ಸ್ವರೂಪವಾದ ಸ್ವತಂತ್ರತೆಯನ್ನು ಕುರಿತು ಪ್ರಸ್ತಾಪಮಾಡುವರು.

## ಮಹೇಶ್ವರ ಮತ್ತು ಜಗತ್ತು

ಈಶ್ವರ ಮತ್ತು ಜಗತ್ತಿನ ಸಂಬಂಧವನ್ನು ಎಲ್ಲ ದರ್ಶನಗಳೂ ವಿಚಾರಿಸುವಂತೆ ಪ್ರತ್ಯಭಿಜ್ಞಾದರ್ಶನವೂ ವಿಚಾರಮಾಡುತ್ತದೆ. ಪರಮೇಶ್ವರನ ಇಚ್ಛೆಯೇ ಜಗತ್ತಿಗೆ ಕಾರಣವೆಂಬುದು ಈ ದರ್ಶನದವರು ಒತ್ತಿಹೇಳುವ ಮಾತಾಗಿದೆ.[29] 'ಇಚ್ಛೆ'ಯಿಂದಲೇ ಸೃಷ್ಟಿ ಸಾಧ್ಯವೆಂಬುದಕ್ಕೆ ಲೋಕದಲ್ಲಿ ದೃಷ್ಟಾಂತಗಳುಂಟು. ಯೋಗಿಗಳು ಮಣ್ಣು, ಬೀಜ ಮುಂತಾದ ಕಾರಣಗಳನ್ನು ಹೊಂದದೆಯೇ ತಮ್ಮ ಯೋಗಜಶಕ್ತಿಯಿಂದ ಅರ್ಥಕ್ರಿಯಾಕಾರಿಯಾದ ಘಟವೇ ಮೊದಲಾದ ಪದಾರ್ಥಗಳನ್ನು ಸೃಷ್ಟಿಸುತ್ತಾರೆ.[30] ಯೋಗಿಗಳೇ ತಮ್ಮ ಇಚ್ಛೆಯಿಂದ ಸೃಷ್ಟಿಸಲು ಸಮರ್ಥರಾದ ಮೇಲೆ ಇನ್ನು ಪರಶಿವನ ಮಾತೇನು! ಈ 'ಇಚ್ಛೆ'ಯು ಪರಮೇಶ್ವರನ ಕ್ರಿಯಾಶಕ್ತಿ ರೂಪವಾದುದು ಮತ್ತು ಈ ಇಚ್ಛೆಯಿಂದಲೇ ಈತನು ಪದ್ಮಾದಿ ಪುಷ್ಪಗಳಲ್ಲಿ ಸೌರಭವೇ ಮೊದಲಾದ ಧರ್ಮಗಳನ್ನು ನಿಯತವಾಗಿರುವಂತೆ ಪ್ರೇರಿಸುವನು. ಇಚ್ಛಾಕೃತ ಈ ತೆರನಾದ ನಿಯಮವನ್ನು ಬ್ರಹ್ಮಾದಿ ದೇವತೆಗಳೂ ಮೀರಲು ಸಾಧ್ಯವಿಲ್ಲ. ಜಗತ್ತಿನ ಸೃಷ್ಟಿಗೆ ಈ ಇಚ್ಛೆಯು ಮಾತ್ರ ಕಾರಣವೆಂದೂ, ಉಪಾದಾನ ಸಾಮಗ್ರಿಗಳು ಸೃಷ್ಟಿಗೆ ಬೇಕಿಲ್ಲವೆಂದೂ ತಿಳಿಸುವುದೇ ವಸ್ತುಗುಪ್ತಾಚಾರ್ಯರ ಅಭಿಪ್ರಾಯವಾಗಿತ್ತೆಂದು ಹಿಂದೆಯೇ ತಿಳಿಸಿದ "ನಿರುಪಾದಾನ ಸಂಭಾರ" ಎಂಬ ಅವರ ಉಕ್ತಿಯಲ್ಲಿ ಸ್ಪಷ್ಟವಾಗಿದೆ.

ಹೀಗೆ ಜಗತ್ತಿನ ಸೃಷ್ಟಿಗೆ ಕಾರಣವು ಈಶ್ವರನ ಇಚ್ಛೆಯು ಮಾತ್ರ—ಎಂಬುದಾಗಿ ವಾದಿಸಿದ ಮೇಲೆ ಪ್ರಕೃತಿಯೇ ಮೊದಲಾದ ಜಡವಸ್ತುಗಳಿಗೆ ಜಗತ್ಕಾರಣತ್ವವನ್ನು ಈ ದರ್ಶನದ ಆಚಾರ್ಯರು ನಿರಸನಮಾಡಿದಂತೆಯೇ ಆಯಿತು.[31] ಕಾರ್ಯ-ಕಾರಣ ಭಾವವು ಜಡವಸ್ತುಗಳಿಗೆ ಸಂಭವಿಸುವುದಿಲ್ಲ. ಜಡವಸ್ತುವಾದ ಬೀಜಕ್ಕೆ "ನಾನು ಅಂಕುರವಾಗಬೇಕು" ಎಂಬ ಇಚ್ಛೆ ಇಲ್ಲದಿರುವುದರಿಂದ, ಅದು ಹೇಗೆ ಅಂಕುರಾದಿಗಳಿಗೆ ಕಾರಣವಾದೀತು? ಈ ವಾದಸರಣಿಯು ನ್ಯಾಯವಾದುದರಿಂದಲೇ ಜಡವಾದ ಪ್ರಧಾನ ಅಥವಾ ಪ್ರಕೃತಿಗೂ ಮತ್ತು ಪರಮಾಣುಗಳಿಗೂ ಸ್ವತಂತ್ರವಾಗಿ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ. ಅಂತೂ ಜಡವಸ್ತುಗಳಿಗೆ ಅಪೇಕ್ಷಾಬುದ್ಧಿ ಇಲ್ಲವಾದುದರಿಂದ, ಅವುಗಳಲ್ಲಿ ಕಾರ್ಯ-ಕಾರಣ ಭಾವವನ್ನು ಅಂಗೀಕರಿಸಲು ಸಾಧ್ಯವಿಲ್ಲವೆಂದು ಈ ದರ್ಶನದವರು ಕ್ರಿಯಾಧಿಕಾರದಲ್ಲಿ ತಿಳಿಸಿರುವರು. ಮೃದಾದಿ ಪ್ರಕೃತಿಯೂ ಪರಮಾಣುವೂ ಜಡವಾದುದರಿಂದ ಹೇಗೆ ಜಗತ್ಕಾರಣವಲ್ಲವೋ, ಅದರಂತೆಯೇ 'ಕರ್ಮ'ವೂ ಜಡವಾದುದರಿಂದ, ಅದೂ ಜಗತ್ತಿಗೆ ಕಾರಣವಾಗಲಾರದು. ಒಂದು ಕಾರ್ಯವಾಗಬೇಕಾದರೆ ಅದು ಅಪೇಕ್ಷಾ ಬುದ್ಧಿಯಿಂದಲೇ ಸಾಧ್ಯ. 'ಕಾರ್ಯ'

---

[29] "ಪರಮೇಶ್ವರೇಚ್ಛಾವಶಾದೇವ ಜಗನ್ನಿರ್ಮಾಣಂ ಪರಿಘುಷ್ಯಂತಃ . . ." (ಪು. 190)

[30] "ಇಚ್ಛಾಮಾತ್ರೇಣ ಜಗನ್ನಿರ್ಮಾಣಮಿತ್ಯತ್ರ ದೃಷ್ಟಾನ್ತೋಽಪಿ ಸ್ಪಷ್ಟಂ ನಿರ್ದಿಷ್ಟಃ—
"ಯೋಗಿನಾಮಪಿ ಮೃದ್ಬೀಜೇ ವಿನೈವೇಚ್ಛಾವಶೇನ ಯತ್ ।
ಘಟಾದಿ ಜಾಯತೇ ತತ್ತತ್ ಸ್ಥಿರಭಾವಕ್ರಿಯಾಕರಮ್ ॥" (ಪು. 197)

[31] "ಅತ್ರ ಅಪೇಕ್ಷಾವಿಹೀನಾನಾಂ ಜಡಾನಾಂ ಕಾರಣತ್ವಂ ದುಷ್ಯತೀತಿ ಅಪರಿತುಷ್ಯನ್ತೋ . . ." (ಪು. 190)

ವಾದ ಜಗತ್ತು ಇರಬೇಕಾದರೆ 'ಜಗತ್ತಿರಲಿ' ಎಂಬ ಈಶ್ವರೇಚ್ಛಾರೂಪವಾದ ಚೈತನ್ಯ ಸ್ವರೂಪನಾದ ಈಶ್ವರನ ಅಪೇಕ್ಷಾಬುದ್ಧಿಯೇ ಕಾರಣ. ಈ ತೆರನಾದ ಅಪೇಕ್ಷಾಬುದ್ಧಿಯು ಕೇವಲ ಚೇತನ ಪದಾರ್ಥದ ಧರ್ಮವಾದುದರಿಂದ, ಅಚೇತನವಾದ ಕರ್ಮವು 'ಜಗತ್ತಾಗಲಿ' ಎಂದು ಹೇಗೆ ತಾನೆ ಇಚ್ಛಿಸೀತು?[32] ಹೀಗೆ ಮೊದಲನೆಯದಾಗಿ, ಜಡಪದಾರ್ಥಕ್ಕೆ ಅಪೇಕ್ಷಾಬುದ್ಧಿ ಇಲ್ಲವಾದುದರಿಂದ ಕರ್ಮ, ಪ್ರಕೃತಿ[33] ಮೊದಲಾದ ಜಡಗಳಿಗೆ ಜಗತ್ಕಾರಣತ್ವವನ್ನು ದೂರಮಾಡಿದರು. ಈ ಮೊದಲನೆಯ ಕಾರಣಮಾತ್ರದಿಂದ ತೃಪ್ತರಾಗದೆ ಈ ದರ್ಶನಕಾರರು ಮುಂದುವರಿಯುತ್ತ ಕಾರ್ಯ-ಕಾರಣ ಭಾವವನ್ನು ಪ್ರಸ್ತಾಪಿಸಿ, ಲೋಕದಲ್ಲಿ ಘಟಾದಿಕಾರ್ಯವಾಗಲು ಮೃದಾದಿ ಕಾರಣಸಾಮಗ್ರಿಯು ಬೇಕಿಲ್ಲವೆಂದು ವಾದಿಸುವರು. ಉದಾಹರಣೆಗಾಗಿ : ಯೋಗಿಯೊಬ್ಬನು ಘಟಮಾಡಲು, ಆತನಿಗೆ ಯಾವ ಮೃತ್ತಿನ ಸಹಾಯವೂ ಬೇಡವೇ ಬೇಡ. ಬೀಜದ ಸಹಾಯವಿಲ್ಲದೆಯೆ ಮುನಿಯಾದವನು ಅಂಕುರ ತೋರಿಸಬಲ್ಲ. ವಸಿಷ್ಠರೇ ಮೊದಲಾದ ಯೋಗಿಗಳು ಯಾವ ಸಾಮಗ್ರಿಯ ಸಹಾಯವಿಲ್ಲದೆಯೂ ವಿಶ್ವಾಮಿತ್ರ ಮೊದಲಾದವರಿಗೆ ಔತಣ ಮಾಡಿದರೆಂಬುದು ಪುರಾಣಾದಿಗಳಲ್ಲಿ ಪ್ರಸಿದ್ಧವಾದ ವಿಷಯ. ಆದುದರಿಂದ ಕಾರ್ಯ-ಕಾರಣ ಭಾವವು ಲೋಕದಲ್ಲಿ ನಿಯತವೆಂಬುದಲ್ಲ. ಈ ನಿಯಮವು ಯೋಗಿಸೃಷ್ಟಿಯಾದ ಘಟಾದಿಗಳಲ್ಲಿ ವ್ಯಭಿಚರಿತವಾಗಿದೆ ಎಂದು ವಾದಿಸಿದರು.[34] ಯೋಗಿಸೃಷ್ಟಿಯೂ ಸಹ ಅರ್ಥಕ್ರಿಯಾಕಾರಿಯಾದುದರಿಂದ, ಸ್ವಾಭಾವಿಕಸೃಷ್ಟಿ ಸ್ವರೂಪವೇ ಬೇರೆ, ಅಸ್ವಾಭಾವಿಕವಾದ ಯೋಗಿಸೃಷ್ಟಿಯೇ ಬೇರೆ ಎಂಬ ವಾದವು ಏಳಲು ಸಾಧ್ಯವೇ ಆಗುವುದಿಲ್ಲ. ಯೋಗಿಯು ಸೃಷ್ಟಿಸಿದ ಗಡಿಗೆಯಿಂದಲೂ ನಾವು ಸ್ವಾಭಾವಿಕವಾಗಿ ಸೃಷ್ಟವಾದ ಗಡಿಗೆಯಂತೆ ನೀರನ್ನು ತರಬಹುದು ಮತ್ತು ಅದರಲ್ಲಿ ನೀರನ್ನಿಡಬಹುದು. ಇದರಿಂದ ಲೋಕದಲ್ಲಿ ಕಾರ್ಯ-ಕಾರಣ ಭಾವವಿದ್ದೇ ಇರಬೇಕೆಂದೂ, ಜಗತ್ತಿನ ವಿಷಯದಲ್ಲೂ ಒಂದು ಕಾರಣವಿರಬೇಕೆಂದೂ ಹೇಳುವುದು ಸೂಕ್ತವಲ್ಲ. ಆದುದರಿಂದ ಪರಮೇಶ್ವರನೇ ಸಕಲಕ್ಕೂ ಕಾರಣ. ತನ್ನ ಇಚ್ಛಾಮಾತ್ರದಿಂದಲೇ ಎಲ್ಲವನ್ನೂ ಸೃಷ್ಟಿಸಬಲ್ಲ—ಎಂಬುದಾಗಿ ವಾದಿಸುವುದೇ ಸಮಂಜಸವೆಂದರು. ಇದರ ಮೇಲೆ ಮತ್ತೊಂದು ಪೂರ್ವಪಕ್ಷವೆದ್ದಿತು : "ಅಪೇಕ್ಷಾಬುದ್ಧಿ ಇಲ್ಲವಾದುದರಿಂದ ಜಡಪದಾರ್ಥಕ್ಕೆ ಜಗತ್ಕಾರಣತೆ ಇಲ್ಲವಾಗಲಿ. ಆದರೆ ಜೀವನು ಚೈತನ್ಯಸ್ವರೂಪನಾದುದರಿಂದ ಅವನಿಗೆ ಜಗತ್ಕಾರಣತೆ ಬರಬಹುದಲ್ಲವೇ ?" ಎಂಬುದಾಗಿ. ಇದಕ್ಕೆ ಪ್ರತ್ಯಭಿಜ್ಞಾದರ್ಶನದವರಿಗೆ ಸಮಾಧಾನ ಕೊಡುವುದು ಸುಲಭವಾಯ್ತು. ಜೀವನು ಚೇತನ ಪದಾರ್ಥವಾದರೂ, ಅವನಿಗೆ ಅಪೇಕ್ಷಾಬುದ್ಧಿ ಇದ್ದರೂ, ಅವನು ಅಸ್ವತಂತ್ರ ಮತ್ತು ಅಸಮರ್ಥ. ಇದು ನಮ್ಮ ಅನುಭವಸಿದ್ಧ. ಆದುದರಿಂದ ಅಸಮರ್ಥನಾದ ಜೀವನು ಈ ವಿಚಿತ್ರಸೃಷ್ಟಿಯನ್ನು ಹೇಗೆ ಮಾಡಿಯಾನು ?[35] ಆದುದರಿಂದ ಜಗತ್ತಿಗೆ ಅಪರಿಮಿತ ಮತ್ತು ಅನಂತ ಶಕ್ತಿಯುಳ್ಳ

---

[32] "ಏವಂ ಸ್ಥಿತೇ ಜಗತ್ಕಾರಣತ್ವಂ ನ ಕರ್ಮಣಃ ; ಅಚೇತನತ್ವಾತ್ |"

—ವ್ಯಾಖ್ಯಾ, 190.

[33] "ತಥಾ ಚ ಪ್ರಧಾನಪರಮಾಣ್ವಾದೀನಾಂ ನ ಜಗತ್ಕಾರಣತ್ವಮ್"

—ವ್ಯಾಖ್ಯಾ, 197.

[34] "ಯದಿ ಘಟಾದಿಕಂ ಪ್ರತಿ ಮೃದಾದ್ಯೇವ ಪರಮಾರ್ಥತಃ ಕಾರಣಂ ಸ್ಯಾತ್ ತರ್ಹಿ ಕಥಂ ಯೋಗೀಚ್ಛಾಮಾತ್ರೇಣ ಘಟಾದಿ ಜನ್ಮ ಸ್ಯಾತ್" (ಪು. 197)

[35] 1 (*a*) "ನ ವಾ ಅನೀಶ್ವರಸ್ಯ ಚೇತನಸ್ಯಾಪಿ"

—ಸರ್ವ. ಸಂ. 197.

(*b*) "ನಾಪಿ ಚೇತನಸ್ಯಾಪಿ ಜೀವಸ್ಯ | ಅಸಾಮರ್ಥ್ಯಾತ್ |"

—ವ್ಯಾಖ್ಯಾ, 197.

ಈಶ್ವರೇಚ್ಛೆಯೇ ಪರಮಕಾರಣವೆಂದಾಯ್ತು. ಹೀಗೆಂದಮೇಲೆ ಜಗತ್ತಿನಲ್ಲಿರುವ ಭಾವಪದಾರ್ಥಗಳ ಹುಟ್ಟುವಿಕೆ, ಇರುವಿಕೆ, ಅಭಿವೃದ್ಧಿಯಾಗುವಿಕೆ, ರೂಪಾಂತರ ಹೊಂದುವಿಕೆ, ಕಡಮೆಯಾಗುವಿಕೆ, ನಾಶವಾಗುವಿಕೆ—ಎಂಬ ಆರು ವಿಧವಾದ ವಿಕಾರಗಳಿಗೂ ಪರಮೇಶ್ವರನ ಇಚ್ಛೆಯೇ ಕಾರಣವೆಂದು ಹೇಳಲು ಸುಲಭವೇ ಆಯಿತು.

ಜಗತ್ತು ಈಶ್ವರೇಚ್ಛೆಯಿಂದಲೇ ಸೃಷ್ಟವಾಗಿರಲಿ; ಆದರೆ ಈಶ್ವರ ಮತ್ತು ಜಗತ್ತುಗಳಿಗಿರುವ ಸಂಬಂಧವಾದರೂ ಏನು ?—ಎಂಬ ಪ್ರಶ್ನೆಗೆ ಸಮರ್ಪಕವಾಗಿ ಪ್ರತ್ಯಭಿಜ್ಞಾದಾರ್ಶನಿಕರ ಉತ್ತರ ಉಂಟು. ಆಕಾಶಾದಿಗಳನ್ನೂ ಮತ್ತು ಇತರ ಭಾವಪದಾರ್ಥಗಳನ್ನೂ ಪರಮೇಶ್ವರನು ತನ್ನಲ್ಲಿಯೇ ತೋರಿಸುತ್ತಾನೆ; ಕನ್ನಡಿಯಲ್ಲಿ ತೋರುವ ಪ್ರತಿಬಿಂಬದಂತೆ.[36] ಹೀಗೆಂದ ಮೇಲೆ ಚೇತನಾಚೇತನಾತ್ಮಕವಾದ ಸಕಲ ಈ ಜಗತ್ತೂ ಪರಮೇಶ್ವರನ ದೃಷ್ಟಿಯಿಂದ ಬೇರೇಯಾದುದೇ ಅಲ್ಲ; ಅವನ ಅಂತರ್ಗತವಾದುದೇ ಎಂದಾಯಿತು. ಇದನ್ನು ವಿಶದಪಡಿಸಲು ವೃಕ್ಷ ಮತ್ತು ಅದರ ಶಾಖೆಗಳ ಉದಾಹರಣೆಯನ್ನು ಕೊಡಬಹುದು. ವೃಕ್ಷವೇನೋ ಒಂದೇ; ಆದರೆ ಅದರ ಶಾಖೆಗಳು ಬೇರೆ ಬೇರೆ ಎಂದು ನಾವು ವ್ಯವಹರಿಸುವುದುಂಟು. ಎಂದರೆ, ವೃಕ್ಷದ ದೃಷ್ಟಿಯಿಂದ ವೃಕ್ಷ, ಶಾಖೆ ಎಲ್ಲವೂ ಒಂದೇ. ಆದರೆ ನಮ್ಮ ವ್ಯವಹಾರದಲ್ಲಿ ಬೇರೆ ಬೇರೆ ಶಾಖೆಗಳೆಂದು ಭೇದಸೂಚಿತವಾಗುವುದು. ಇದರಂತೆಯೇ ಜೀವರು ಪರಸ್ಪರ ಭಿನ್ನರೆಂದೂ, ನಾನಾ ವಿಧವಾದ ಮಾನ—ಮೇಯಗಳಿಂದ ಕೂಡಿದ ಜಗತ್ತೂ ಭಿನ್ನವೆಂದೂ ವ್ಯವಹಾರವುಂಟು. ಪರಮೇಶ್ವರಾಪೇಕ್ಷಯಾ ಇವೆಲ್ಲವೂ ಅಭಿನ್ನವೇ. ಈ ವೃಕ್ಷದ ದೃಷ್ಟಾಂತದಿಂದ ಪರಮೇಶ್ವರನಿಗೂ ಮತ್ತು ಜಗತ್ತಿಗೂ ಇರುವುದು ಭೇದಾಭೇದ ಸಂಬಂಧವೆಂದು ಸ್ಥಿರೀಕೃತವಾಯಿತು.[37]

ಹಿಂದೆ ಘಟವೇ ಮೊದಲಾದ ಕಾರ್ಯಕ್ಕೆ ಮೃತ್, ದಂಡ, ಚಕ್ರಗಳು ಕಾರಣವಾಗಲಾರವು—ಎಂದು ಸ್ಪಷ್ಟಪಡಿಸಿದೆವು. ಎಂದಿಗೂ ಮೃತ್ ಘಟವನ್ನು ನಿರ್ಮಾಣಮಾಡದು; ಅಥವಾ, ದಂಡವಾಗಲಿ ಚಕ್ರವಾಗಲಿ ಸ್ವತಂತ್ರವಾಗಿ ಘಟವನ್ನು ಮಾಡದು. ಇವುಗಳು ಜಡಪದಾರ್ಥಗಳು; ಜಡಪದಾರ್ಥಗಳಿಗೆ ಇಚ್ಛಿಸುವ ಬುದ್ಧಿ ಇಲ್ಲ; ಕಾರ್ಯವಾಗಬೇಕಾದರೆ "ಇಂತಹ ಕಾರ್ಯವಾಗಬೇಕು" ಎಂಬ ಇಚ್ಛೆ ಇರಬೇಕು. ಇದು ಕುಂಬಾರನಲ್ಲಿ ಮಾತ್ರ ಇದ್ದೀತು. ಆದುದರಿಂದ ನಿಮಿತ್ತ ಕಾರಣನಾದ ಕುಂಬಾರನೇ ಘಟಕ್ಕೆ ಕಾರಣನಾದಾನು—ಎಂದೂ ತಿಳಿಸಿದ್ದಾಯಿತು. ಇದರಂತೆಯೇ ಅಪೇಕ್ಷಾಬುದ್ಧಿಯುಳ್ಳ ಪರಮೇಶ್ವರನೇ ಜಗತ್ತಿಗೆ ನಿಮಿತ್ತಕಾರಣನಾದಾನು. ಆದರೆ, ಪರಮೇಶ್ವರನ ದೃಷ್ಟಿಯಿಂದ ಚೇತನಾಚೇತ್ಮಕವಾದ ಕಾರ್ಯರೂಪವಾದ ಜಗತ್ತು ಅವನಿಂದ ಅಭಿನ್ನವೇ ಎಂದು ವೃಕ್ಷದ ವ್ಯವಹಾರದಿಂದ ಸಿದ್ಧವಾದುದರಿಂದ ಪರಮೇಶ್ವರನಿಗೆ ಒಂದು ವಿಧವಾದ ನಿಮಿತ್ತೋಪಾದಾನ ಕಾರಣತೆಯು ಹೇಳಿದಂತೆಯೇ ಆಯಿತೆಂಬ ಅಭಿಪ್ರಾಯವನ್ನು ಸೂಚಿಸಬಹುದು.

## ಪರಮೇಶ್ವರ ಮತ್ತು ಜೀವ

ಜಗತ್ತಿನ ಜಡವಾದ ಪದಾರ್ಥಗಳ ಮಾತಂತಿರಲಿ; ಚೇತನಾತ್ಮಕವಾದ ಜೀವನಿಗೂ ಪರಮೇಶ್ವರನಿಗೂ ಇರುವ ಸಂಬಂಧ ವಿಶೇಷವೇನು? ಈ ಪ್ರಮುಖವಾದ ವಿಷಯವನ್ನೂ ಪ್ರತ್ಯಭಿಜ್ಞಾದರ್ಶನದವರು ಸೂಕ್ಷ್ಮವಾದ ರೀತಿಯಲ್ಲಿ ಪರಿಶೀಲಿಸಿರುತ್ತಾರೆ. ಪರಮೇಶ್ವರನಿಗೂ ಜೀವನಿಗೂ ಇರುವುದು ತಾದಾತ್ಮ್ಯ ಸಂಬಂಧ. ಇದು ನಮಗೆ ಪ್ರತ್ಯಕ್ಷ, ಅನುಮಾನ, ಆಗಮ

---

[36] "ಸ್ವಾತ್ಮದರ್ಪಣೇ ಭಾವಾನ್ ಪ್ರತಿಬಿಂಬವತ್ ಅವಭಾಸಯತಿ"

—ಸರ್ವ. 190.

[37] "ಯಥಾ ವೃಕ್ಷ ಇತ್ಯೇಕತ್ವಂ ಶಾಖಾ ಇತಿ ನಾನಾತ್ವಂ ಏವಂ ಭೇದಾಭೇದಶಾಲೀ ಪರಮೇಶ್ವರಃ"

—ವ್ಯಾಖ್ಯಾ, 190

ಗಳಿಂದ ಸಿದ್ಧಿಸುತ್ತದೆ.[38] "ನಾನು ಈಶ್ವರನೇ ಮತ್ತೊಬ್ಬನಲ್ಲ" ಎಂಬಾಕಾರವಾದ ಸಾಕ್ಷಾತ್ಕಾರವಾಗುವುದು ನಮ್ಮ ಅನುಭವದಲ್ಲಿದೆಯಾಗಿ ಇಂತಹ ಪ್ರತ್ಯಕ್ಷಾನುಭವದ ಆಧಾರದ ಮೇಲೆ ಜೀವೇಶ್ವರ ತಾದಾತ್ಮ್ಯವನ್ನು ಸಾಧಿಸಬಹುದು. ಈ ಕೆಳಕಂಡ ಅನುಮಾನದ ಆಧಾರದ ಮೇಲೆ ಇದೇ ತಾದಾತ್ಮ್ಯವನ್ನು ಸ್ಥಿರಪಡಿಸಬಹುದು. "ಈ ಜೀವಾತ್ಮನು ಪರಮೇಶ್ವರನೇ ಆಗುತ್ತಾನೆ; ಇವನಿಗೆ ಜ್ಞಾನ ಮತ್ತು ಕ್ರಿಯಾಶಕ್ತಿ ಇರುವುದರಿಂದ; ಯಾರು ಎಷ್ಟರಮಟ್ಟಿಗೆ ಜ್ಞಾನ ಮತ್ತು ಕ್ರಿಯಾಶಾಲಿಯೋ, ಅಷ್ಟರಮಟ್ಟಿಗೆ ಅವನು ಈಶ್ವರನ ಮಟ್ಟಕ್ಕೇರುತ್ತಾನೆ; ಪ್ರಸಿದ್ಧನಾದ ಪರಮೇಶ್ವರನಂತೆ ಜೀವನೂ ಜ್ಞಾನಶಕ್ತಿ ಕ್ರಿಯಾಶಕ್ತಿಯುಳ್ಳವನೇ. ಆದುದರಿಂದ ಈ ಜೀವಾತ್ಮನು ಈಶ್ವರನೇ."[39] ಜೀವೇಶ್ವರತಾದಾತ್ಮ್ಯವನ್ನು ಪ್ರತ್ಯಭಿಜ್ಞಾದರ್ಶನರೂಪವಾದ ಶೈವಾಗಮ ಗ್ರಂಥಗಳೂ ಸಾರಿವೆ.[40] ಇಂತಹ ಪ್ರಮಾಣಗಳನ್ನೇ ಮನಸ್ಸಿನಲ್ಲಿಟ್ಟುಕೊಂಡು ಉದಯಾಕರ ಸೂನುವು ಹೇಳುವರು—"ಕರ್ತೃವೂ ಜ್ಞಾತೃವೂ ಆದ ಈ ಜೀವಾತ್ಮ ಅನಾದಿ ಸಿದ್ಧವಾದ ಪರಮೇಶ್ವರನೇ. ಬೇರೆಯಾದವನಲ್ಲ. ಇದು ವಸ್ತುಸ್ಥಿತಿಯಾಗಿರಲಾಗಿ ಯಾವ ವಿಚಾರ ಶೀಲನು ತಾನೆ 'ಜೀವಾತ್ಮನು ಪರಮೇಶ್ವರನಲ್ಲ' ಎಂಬುದಾಗಿ ನಿಷೇಧಮಾಡಿಯಾನು?"—ಎಂದು ಸಾರಿದುದು.[41]

ಜೀವೇಶ್ವರ ತಾದಾತ್ಮ್ಯವನ್ನು ಸಂಪಾದಿಸಲು ಜೀವನಲ್ಲಿರುವ ಹಲವು ಲಕ್ಷಣಗಳೇ ಸಹಾಯಕವಾಗುವುವು. ಮೊದಲನೆಯದಾಗಿ, ಜೀವಾತ್ಮನ ಸ್ವರೂಪವೂ ಸಹ ಪರಮೇಶ್ವರನ ಸ್ವರೂಪದಂತೆ ಚೈತನ್ಯರೂಪವಾದುದೇ; ಈಶ್ವರನ ಪ್ರಕಾಶದಂತೆ ಸರ್ವದಾ ಪ್ರಕಾಶರೂಪವಾದುದೇ. ಜೀವನ ಚೈತನ್ಯಪ್ರಕಾಶಗಳು ಈಶ್ವರನ ಚೈತನ್ಯ ಪ್ರಕಾಶಗಳಿಂದ ಭಿನ್ನವಾಗಿಯೂ ಮತ್ತು ಅದನ್ನು ಹೋಲುವುದೂ ಅಲ್ಲ. ಜೀವಾತ್ಮನು ವಸ್ತುತಃ ಈಶ್ವರನಿಂದ ಅಭಿನ್ನನೇ.[42] ಹಾಗೂ ಈಶ್ವರನಲ್ಲಿ ತೋರುವ ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿ ಎಂಬೆರಡು ಜೀವಾತ್ಮನಲ್ಲಿಯೂ ತೋರುವುವು. ಜೀವನಲ್ಲಿರುವ ಜ್ಞಾನಶಕ್ತಿಯು ಸ್ವತಃಸಿದ್ಧವಾಗಿದೆ, 'ನಾನು' ಎಂಬ ಜ್ಞಾನವು ಸಕಲ ಜೀವರಲ್ಲಿಯೂ ಎದ್ದು ಕಾಣುತ್ತದೆ. ಕ್ರಿಯಾಶಕ್ತಿಯಾದರೋ ಜೀವನು ಮಾಡುವ ಕಾರ್ಯಗಳಿಂದ ತನಗೂ ಇತರರಿಗೂ ವ್ಯಕ್ತವಾಗುತ್ತದೆ.[43] ಅಂತೂ ಈ

---

38 "ಸ್ವಸಂವೇದನ—ಉಪಪತ್ತಿ—ಆಗಮಸಿದ್ಧಪ್ರತ್ಯಗಾತ್ಮತಾದಾತ್ಮ್ಯೇ . . ." (ಪು. 190)

39 "ಅಯಮಾತ್ಮಾ ಪರಮೇಶ್ವರೋ ಭವಿತುಮರ್ಹತಿ; ಜ್ಞಾನಕ್ರಿಯಾಶಕ್ತಿಮತ್ತ್ವಾತ್। ಯೋ ಯಾವತಿ ಜ್ಞಾತಾ ಕರ್ತಾ ಚ ಸ ತಾವತೀಶ್ವರಃ ಪ್ರಸಿದ್ಧೇಶ್ವರವದ್ರಾಜವದ್ವಾ। ಆತ್ಮಾ ಚ ವಿಶ್ವಜ್ಞಾತಾ ಕರ್ತಾ ಚ; ತಸ್ಮಾದೀಶ್ವರೋಽಯಮಿತಿ॥" (ಪು. 194)

40 "ಸರ್ವಸುಲಭಮಭಿನವಂ ಪ್ರತ್ಯಭಿಜ್ಞಾಮಾತ್ರಂ ಪರಾಪರಸಿದ್ಧ್ಯುಪಾಯಮಭ್ಯುಪಗಚ್ಛನ್ತಃ . . ." (ಪು. 191)

41 ತದುಕ್ತಂ ಉದಯಾಕರಸೂನುನಾ—
ಕರ್ತರಿ ಜ್ಞಾತರಿ ಸ್ವಾತ್ಮನ್ಯಾದಿ ಸಿದ್ಧೇ ಮಹೇಶ್ವರೇ।
ಅಜಡಾತ್ಮಾ ನಿಷೇಧಂ ವಾ ಸಿದ್ಧಿಂ ವಾ ವಿದಧೀತ ಕಃ॥ (ಪು. 194)

42 "ಈಶ್ವರಸ್ಯ ಹಿ ಚೈತನ್ಯಂ ಸ್ವರೂಪಮ್। ಜೀವಾತ್ಮನೋಽಪಿ ತದೇವ ನ ತದ್ಭಿನ್ನಂ ತತ್ಸದೃಶಂ। ಜೀವಾತ್ಮನಃ ವಸ್ತುತಃ ಈಶ್ವರಾದಭಿನ್ನತ್ವಾತ್। ಸ್ವಸ್ಯ ಸದಾ ಪ್ರಕಾಶಮಾನತ್ವಾಚ್ಚೇತಿ।"
—ವ್ಯಾಖ್ಯಾ, 194.

43 "ಪ್ರಾಣಿನಾಂ ಚೈತನ್ಯಂ ಜ್ಞಾನಂ ಕ್ರಿಯಾ ಚೇತಿ ಶಕ್ತಿದ್ವಯಮ್। ತತ್ರಜೀವಾನಾಂ ಸ್ವಗತಾ ಜ್ಞಾನಶಕ್ತಿಃ ಸ್ವತಃಸಿದ್ಧಾ ಸ್ವಸ್ಯ ಸ್ವಯಂಪ್ರಕಾಶತೇ। ಕ್ರಿಯಾಶಕ್ತಿಸ್ತು ಕ್ರಿಯಯಾ ನಿರ್ವರ್ತ್ಯ ಯತ್ಕಾರ್ಯಂ ತದಾಶ್ರಿತಾ ಸತೀ ಪರೇಣ ಸ್ವೇನ ಚಾನುಸಂಧೀಯತೇ।"
—ವ್ಯಾಖ್ಯಾ, 195.

ಜ್ಞಾನ ಮತ್ತು ಕ್ರಿಯಾಶಕ್ತಿಗಳು ಈಶ್ವರ ಮತ್ತು ಜೀವರಿಗೆ ಸಾಧಾರಣವಾದುದರಿಂದ ಜೀವೇಶ್ವರತಾದಾತ್ಮ್ಯ ಸಾಧಿಸಲು ಅನುಕೂಲವಾಯಿತು.[44]

ಹೀಗಾದ ಮೇಲೆ ಏಳುವ ಸ್ವಾರಸ್ಯವಾದ ಪ್ರಶ್ನೆಯೊಂದು : ಚೈತನ್ಯ, ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿಗಳು ಜೀವ—ಪರಮೇಶ್ವರಿಗೆ ಸಾಧಾರಣವಾದರೆ, ಜೀವನ ಜೀವತ್ವಕ್ಕೆ ಕಾರಣವು ಯಾವುದು ? ಜೀವನಿಗೆ ಪರಮೇಶ್ವರಾಭಿನ್ನತೆ ತೋರದೆ ಇರುವುದಕ್ಕೆ ಕಾರಣವಾದರೂ ಏನು ? ಈ ಪ್ರಶ್ನೆಗೆ ಉತ್ತರವೀಯಲು ಪ್ರತ್ಯಭಿಜ್ಞಾದರ್ಶನಕ್ಕೆ ಕಷ್ಟವಾಗಲಿಲ್ಲ. ಜೀವನ ಜ್ಞಾನಶಕ್ತಿಯು ದೇಶ-ಕಾಲ-ವಸ್ತುರೂಪವಾದ ಉಪಾಧಿಯನ್ನು ಆಶ್ರಯಿಸಿಕೊಂಡಿರುವುದರಿಂದ, ಸ್ವಭಾವದಿಂದ ಪೂರ್ಣವಾಗಿದ್ದ ಜ್ಞಾನಶಕ್ತಿಗೆ ಸಂಕೋಚತೆ ಉಂಟಾಗುತ್ತದೆ. ಈ ಜ್ಞಾನಶಕ್ತಿಯ ಸಂಕೋಚವೇ ಜೀವೇಶ್ವರ ಅಭೇದದ ವಿಸ್ಮರಣೆಗೆ ಕಾರಣ.[45] ಇದೇ ರೀತಿಯಲ್ಲಿ ಜೀವನ ಚೈತನ್ಯವೂ ಸಹ. ಯದ್ಯಪಿ ಚೈತನ್ಯರೂಪವಾದ ಜೀವಾತ್ಮನು ಸದಾ ಪ್ರಕಾಶಿಸುತ್ತಾನೆ; ಆದರೂ ಪೂರ್ಣವಾಗಿ ಚೈತನ್ಯರೂಪದಿಂದ ಪ್ರಕಾಶಿಸುವುದಿಲ್ಲ. ಇದಕ್ಕೆ ಕಾರಣ ಮಾಯೆಯೇ. ಮಾಯೆಯ ಸ್ಪರ್ಶದಿಂದ ಚೈತನ್ಯವು ಒಂದು ಭಾಗದಲ್ಲಿ ಪ್ರಕಾಶಿಸುವುದೇ ಹೊರತು ಪೂರ್ಣವಾಗಿ ಅಲ್ಲ.[46] ಈಶ್ವರನ ಚೈತನ್ಯವಾದರೋ ಮಾಯಾಸ್ಪರ್ಶರಹಿತವಾದುದರಿಂದ ಸದಾ ಪೂರ್ಣವಾಗಿಯೇ ಪ್ರಕಾಶಿಸುತ್ತಿರುತ್ತದೆ. ಜೀವನಿಗೂ ಸಹ ಇಂತಹ ಪೂರ್ಣಾವಭಾಸ ಬಂದಲ್ಲಿ, ಆಗ ಈಶ್ವರಾಭೇದವು ಹೊಳೆಯುತ್ತದೆ. ಇಂತಹ ಪೂರ್ಣಾವಭಾಸವು ಬರಬೇಕಾದರೆ "ಈಶ್ವರೋಽಹಂ" ಎಂಬ ಪ್ರತ್ಯಭಿಜ್ಞೆಯಿಂದ ಮಾತ್ರ ಸಾಧ್ಯ. ಹಾಗೂ "ಅದೇ ಈಶ್ವರನೇ ನಾನು" ಎಂಬ ಪ್ರತ್ಯಭಿಜ್ಞೆಯಿಂದಲೇ ಸಂಕುಚಿತವಾದ ಜೀವನ ದೃಕ್ ಮತ್ತು ಕ್ರಿಯಾಶಕ್ತಿಗಳೂ ಪೂರ್ಣವಾಗಿ ವಿಕಾಸಗೊಳ್ಳುವುವು. ಹೀಗೆ ವಿಕಾಸಗೊಂಡಾಗಲೇ ತಿಳಿಯಾಗಿ ಈಶ್ವರತಾದಾತ್ಮ್ಯವು ಕಂಗೊಳಿಸುವುದು.

ಇಷ್ಟೊಂದು ಜೀವ-ಪರಮೇಶ್ವರರ ತಾದಾತ್ಮ್ಯ ಹೇಳಿದ ಮೇಲೆ, ಜೀವನು ಪರಮೇಶ್ವರನಿಂದ ಭಿನ್ನನಲ್ಲವೆಂದೇ ಆಯಿತು. ಹೀಗೆಂದಮೇಲೆ, ಸಂಸಾರವಾದರೂ ಯಾರಿಗೆ? ಎಂಬುದು ಸಹಜವಾದ ಪ್ರಶ್ನೆಯಾಯಿತು. ಇದಕ್ಕೆ ಸಮಾಧಾನವನ್ನು ಆಗಮಾಧಿಕಾರದಲ್ಲಿ ಈರೀತಿ ಹೇಳಿದೆ: "ಈಶ್ವರನಿಗೇ ಅನಾದಿಯಾದ ಅಜ್ಞಾನ ಅಂಟುತ್ತದೆ. ಇದನ್ನೇ 'ಮಾಯಾ' ಎಂಬುದಾಗಿ ವ್ಯವಹರಿಸುವುದು. ಈಶ್ವರನ ಒಂದು ಭಾಗವು ಮಾಯೆಯಿಂದ ಆವೃತವಾದಾಗ, ಆ ಭಾಗವು ಮಾತ್ರ ಸಂಸಾರವನ್ನು ಅನುಭವಿಸುತ್ತದೆ. ಮತ್ತು "ನಾನು ಈಶ್ವರ" ಎಂಬ ಪ್ರತ್ಯಭಿಜ್ಞೆಯು ಉದಯವಾಗಲು, ಈಶ್ವರನ ಸ್ವರೂಪಸಾಕ್ಷಾತ್ಕಾರವಾಗಿ, ಜೀವನ ದೃಕ್ ಮತ್ತು ಕ್ರಿಯಾಶಕ್ತಿಗಳು ಪೂರ್ಣವಾಗಿ ವಿಕಾಸಗೊಂಡು ಮಾಯಾಭಾಗದಿಂದ ಬಿಡುಗಡೆ ಹೊಂದುತ್ತದೆ.[47] ಎಂದ ಮೇಲೆ ಜೀವನು ಮಾಯಾಚ್ಛಾದಿತ ಪರಮೇಶ್ವರನ ಒಂದು ಭಾಗವೆಂದೂ, ಜೀವನಿಗೆ "ನಾನು ಈಶ್ವರ"ನೆಂಬ ಸಾಕ್ಷಾತ್ಕಾರವಾಗಲು ಜೀವನು ಮುಕ್ತನಾಗುವನೆಂದೂ ತಿಳಿಸಿದಂತಾಯಿತು ; ಸಂಸಾರಕ್ಕೆ ಮಾಯೆಯೇ ಕಾರಣವಾಯಿತು. ನಿತ್ಯಚೈತನ್ಯಕ್ಕೆ ಮಾಯೆಯು

---

[44] "ಕರ್ತರಿ ಜ್ಞಾತರಿ ಸ್ವಾತ್ಮನ್ಯಾದಿಸಿದ್ಧೇ ಮಹೇಶ್ವರೇ" (ಪು. 194)

[45] "ಯಾ ಚ ಏಷಾಂ ಜೀವಾನಾಂ ಜ್ಞಾನಶಕ್ತಿಃ ದೇಶ-ಕಾಲ-ವಸ್ತುರೂಪೋಪಾಧಿ ಅನುರೋಧೇನ ಸಂಕುಚಿತಾ ತತ್ತತ್ ಜ್ಞೇಯಪದಾರ್ಥ ಅನುಸಂಧಾನ ಕ್ರಮೇಣ ನಿರೂಪ್ಯತೇ ಸ ಏವ ಪ್ರಮಾತಾ ಮಹೇಶ್ವರಃ"
—ವ್ಯಾಖ್ಯಾ, 195.

[46] "ಸ್ವಪ್ರಕಾಶತಯಾ ಸತತಮವಭಾಸಮಾನೇಪ್ಯಾತ್ಮನಿ ಮಾಯಾವಶಾದ್ಭಾಗೇನ ಪ್ರಕಾಶಮಾನೇ ಪೂರ್ಣತಾವಭಾಸಸಿದ್ಧಯೇ ದೃಕ್‌ಕ್ರಿಯಾತ್ಮಕ ಶಕ್ತ್ಯಾವಿಷ್ಕರಣೇನ ಪ್ರತ್ಯಭಿಜ್ಞಾ ಪ್ರದರ್ಶ್ಯತೇ |" (ಪು. 194)

[47] "ಏಷ ಪ್ರಮಾತಾ ಮಾಯಾಂಧಃ ಸಂಸಾರೀ ಕರ್ಮಬಂಧನಃ |
ವಿದ್ಯಾದಿ ಜ್ಞಾಪಿತೈಶ್ವರ್ಯಃ ಚಿದ್ಘನೋ ಮುಕ್ತ ಉಚ್ಯತೇ ||" (ಪು. 199)

ಅಂಟಲು ಪರಮೇಶ್ವರ ಸ್ವರೂಪಜ್ಞಾನವು ತಪ್ಪಿ, ಆ ಭಾಗವು ಕರ್ಮದಿಂದ ಬದ್ಧವಾಗುವುದು. ಆಗ ಜೀವನಿಗೆ 'ಸಂಸಾರೀ' ಎಂಬ ವ್ಯವಹಾರವು ಬರುವುದು. ಇದರಿಂದ ಬಿಡುಗಡೆಯಾಗಲು ಪ್ರತ್ಯಭಿಜ್ಞೆಯೊಂದೇ ಕಾರಣ. ಮಾಯೆಯು ಸಂಸಾರಕ್ಕೆ ಕಾರಣವೆಂದೂ ಪ್ರತ್ಯಭಿಜ್ಞೆಯು ಇದರ ಮೋಚಕವೆಂದೂ ಪ್ರತ್ಯಭಿಜ್ಞಾದರ್ಶನದ ಸಿದ್ಧಾಂತವಾಯಿತು.

## ಮುಕ್ತಿ ಸ್ವರೂಪ

ಪ್ರತ್ಯಭಿಜ್ಞಾದರ್ಶನವು ಮುಕ್ತಿ ಸ್ವರೂಪವನ್ನು ವಿಶದವಾಗಿ ವಿವರಿಸುವುದು. "ನಾನು ಈಶ್ವರನೇ, ಅನ್ಯನಲ್ಲ" ಎಂಬ ಸಾಕ್ಷಾತ್ಕಾರವಾದರೆ, ಅದು ಪ್ರತ್ಯಭಿಜ್ಞೆ ಎನ್ನಿಸಿಕೊಳ್ಳುವುದೆಂದು ಹಿಂದೆ ತಿಳಿಸಿದೆವಷ್ಟೆ. ಈ ಪ್ರತ್ಯಭಿಜ್ಞಾ ಮಾತ್ರದಿಂದಲೇ "ಪರಸಿದ್ಧಿ" ಮತ್ತು "ಅಪರಸಿದ್ಧಿ"ಗಳು ಪ್ರಾಪ್ತವಾಗುತ್ತವೆ.[48] 'ಪರಸಿದ್ಧಿ' ಎಂಬುದೇ ಮುಕ್ತಿ. ಈ ಸ್ಥಿತಿಯಲ್ಲಿಯೇ ಅನವರತವೂ ಶಿವಸಾಕ್ಷಾತ್ಕಾರವಿರುವುದು. "ಅಪರಸಿದ್ಧಿ" ಎಂದರೆ ಅಭ್ಯುದಯ ಅಥವಾ ದೇವಲೋಕವೇ ಮೊದಲಾದ ಉತ್ತಮ ಸ್ಥಾನಗಳನ್ನು ಹೊಂದುವಿಕೆ ಹಾಗೂ ಇಂದ್ರಾದಿ ವೈಭವವನ್ನು ಅನುಭವಿಸುವಿಕೆ. ಸಾಕ್ಷಾತ್ಕಾರದ ಪ್ರಮಾಣವನ್ನು ಅನುಸರಿಸಿ ಸಾಧಕನಿಗೆ ಅಷ್ಟರಮಟ್ಟಿನ 'ಪರಸಿದ್ಧಿ' ಮತ್ತು 'ಅಪರಸಿದ್ಧಿ' ರೂಪವಾದ ಫಲಗಳು ಲಭಿಸುತ್ತವೆ. ಇಂತಹ ಮುಕ್ತಿಗೆ ಎಲ್ಲರೂ ಅಧಿಕಾರಿಗಳೇ. ಎಂದಮೇಲೆ ಪ್ರತ್ಯಭಿಜ್ಞಾಶಾಸ್ತ್ರವನ್ನು ಅಭ್ಯಾಸಮಾಡುವುದಕ್ಕೆ ಜನಸಾಮಾನ್ಯಕ್ಕೂ ಅಧಿಕಾರ ಉಂಟೆಂದಾಯಿತು. ಇತರ ಪಂಗಡಗಳವರು ವಾದಿಸುವಂತೆ ಶಿವಸಾಕ್ಷಾತ್ಕಾರಕ್ಕಾಗಿ ಯಾವ ವ್ರತಗಳನ್ನೂ ಮಾಡಬೇಕಾಗಿಲ್ಲ. ಆದುದರಿಂದ ತಮ್ಮದು ಅತ್ಯಂತ ಸುಲಭವಾದ ಮತವೆಂದು ಪ್ರತ್ಯಭಿಜ್ಞಾ ದರ್ಶನದವರ ಹೆಮ್ಮೆ.[49] ಆದರೆ ಪರಸಿದ್ಧಿ ಬಯಸುವ ಮುಮುಕ್ಷುವಿಗೆ ಎಲ್ಲಿಯವರೆಗೆ ತನಗೆ 'ನಿತ್ಯಸುಖವೊಂದುಂಟು; ಅದನ್ನು ಸಂಪಾದಿಸಬೇಕು' ಎಂಬ ಜ್ಞಾನವುಂಟಾಗುವುದಿಲ್ಲವೋ, ಅಲ್ಲಿಯವರೆಗೆ ಪ್ರತ್ಯಭಿಜ್ಞೆಯೇ ಉದಯಿಸುವುದಿಲ್ಲ.[50] ಆದುದರಿಂದ ಮುಮುಕ್ಷುವು ವಿವೇಕಶಾಲಿಯಾಗಬೇಕೆಂಬ ತಾತ್ಪರ್ಯವಾಯಿತು.

ಬದ್ಧನಾದ ಜೀವನಿಗೇ ಮುಕ್ತಿ ಸಂಭವಿಸುವುದು. 'ಬದ್ಧ' ಮತ್ತು 'ಮುಕ್ತ'ರು ಜೀವ ವಿಶೇಷಗಳು. ಮಾಯೆಯಿಂದ ಅಂಧನಾಗಿ ಜೀವನು ಬದ್ಧಸ್ಥಿತಿಯಲ್ಲಿ "ತನ್ನದು ಈಶ್ವರನ ಸ್ವರೂಪವೇ" ಎಂಬ ಜ್ಞಾನವನ್ನು ಮರೆತು, ಕರ್ಮಗ್ರಸ್ತನಾಗಿ ಸಂಸಾರಿಯಾಗುತ್ತಾನೆ. "ನಿಜವಾಗಿಯೂ ನಾನು ಈಶ್ವರನೆ" ಎಂಬಾಕಾರವಾದ ಪ್ರತ್ಯಭಿಜ್ಞೆಯಾಗಲು, ಜೀವನಿಗೆ ತನ್ನ ಈಶ್ವರಸ್ವರೂಪವು ಸಾಕ್ಷಾತ್ಕಾರವಾಗುತ್ತದೆ. ಆಗ ಅವನ ಜ್ಞಾನ ಮತ್ತು ಕ್ರಿಯಾಶಕ್ತಿಗಳು ಪೂರ್ಣವಾಗುತ್ತವೆ. ಇದೇ ಜೀವನ ಮುಕ್ತಸ್ಥಿತಿ.

ಬದ್ಧ ಮತ್ತು ಮುಕ್ತರ ವಿಷಯದಲ್ಲಿ ಪ್ರಬಲವಾದ ಈ ಕೆಳಗಣ ಒಂದು ಶಂಕೆಯುಂಟಾಯಿತು: "ನಾನು ಬಹುವಾಗಿ ಆದೇನು"—ಎಂಬ ಇಚ್ಛೆಯಿಂದ ಪರಮೇಶ್ವರನು ಸಕಲ ಜಗದಾಕಾರವಾಗಿ ಆವಿರ್ಭೂತನಾದನಷ್ಟೆ. ಎಂದಮೇಲೆ ಪ್ರಮಾತೃವಾದ ಜೀವನು ಈಶ್ವರನಿಂದ ಅಭಿನ್ನನೇ ಆದ; ಮತ್ತು, ಪ್ರಮೇಯವಾದ ಪೃಥಿವ್ಯಾದಿಗಳೂ ಈಶ್ವರನಿಂದ ಅಭಿನ್ನವೇ ಆದುವು. ಆದುದರಿಂದ ಪೃಥಿವೀ ಮೊದಲಾದ ಪ್ರಮೇಯ ಪದಾರ್ಥಗಳು ಪ್ರಮಾತೃವಾದ

---

48 "ಪ್ರತ್ಯಭಿಜ್ಞಾಮಾತ್ರಂ ಪರಾಪರಸಿದ್ಧ್ಯುಪಾಯಮಭ್ಯುಪಗಚ್ಛನ್ತಃ ಪರೇ ಮಾಹೇಶ್ವರಾಃ ಪ್ರತ್ಯಭಿಜ್ಞಾಶಾಸ್ತ್ರಮಭ್ಯಸ್ಯಂತಿ" (ಪು. 190-191)

49 "ಬಾಹ್ಯಾಭ್ಯಂತರಚರ್ಯಾ ಪ್ರಾಣಾಯಾಮಾದಿ ಕ್ಲೇಶಪ್ರಯಾಸಕಲಾಪವೈಧುರ್ಯೇಣ ಸರ್ವಸುಲಭಮಭಿನವಂ ಪ್ರತ್ಯಭಿಜ್ಞಾಮಾತ್ರಂ . . . ." (ಪು. 191)

50 "ಯಾವನ್ನ ಸ್ವಸ್ಯ ನಿತ್ಯಸುಖಾದಿವಿಜ್ಞಾನಂ ಸಂಪ್ರಾಪ್ತಂ ತಾವನ್ನ ಪ್ರತ್ಯಭಿಜ್ಞೋದೇತಿ"
—ವ್ಯಾಖ್ಯಾ, 193

ಜೀವನಿಂದ ಪೃಥಕ್ಕಾದ ಪದಾರ್ಥವಾಗಲಿಲ್ಲ. ಇದಸ್ನೊಪ್ಪಲು ಬದ್ಧ ಮುಕ್ತರಿಬ್ಬರಿಗೂ ಪ್ರಮೇಯವಾದ ಪೃಥಿವ್ಯಾದಿ ಪದಾರ್ಥಗಳ ವಿಷಯದಲ್ಲಿ ಒಂದೇ ವಿಧವಾದ ಅನುಸಂಧಾನವೇ ಉಂಟಾಗುವುದು. ಹೀಗೆಂದ ಮೇಲೆ ಬದ್ಧ-ಮುಕ್ತರಿಗೆ ವ್ಯತ್ಯಾಸವೆಲ್ಲಿ[51] ?" ಇದಕ್ಕೆ ತತ್ತ್ವಾರ್ಥ ಸಂಗ್ರಹಾಧಿಕಾರದಲ್ಲಿ ಪ್ರತ್ಯಭಿಜ್ಞಾದರ್ಶನದವರು ಹೀಗೆ ಉತ್ತರವಿತ್ತರು: ಅಮೃತವಾಗಲಿ ಅಥವಾ ವಿಷವಾಗಲಿ, ಬಂಗಾರವಾಗಲಿ ಅಥವಾ ಕಲ್ಲಾಗಲಿ—ಈ ಸಕಲ ಪ್ರಮೇಯ ಪದಾರ್ಥಗಳೂ ತನ್ನಿಂದ ಅಭಿನ್ನವಾದ ಪದಾರ್ಥಗಳೆಂದೇ 'ಮುಕ್ತ'ನು ತಿಳಿಯುತ್ತಾನೆ. ಆದುದರಿಂದಲೇ ಮಹೇಶ್ವರನಂತೆ ಮುಕ್ತನಿಗೆ ಅಮೃತದಲ್ಲಾಗಲಿ, ವಿಷದಲ್ಲಾಗಲಿ—ಸಕಲ ಪದಾರ್ಥದಲ್ಲಿಯೂ 'ಸಮದೃಷ್ಟಿ'ಯು ಏರ್ಪಡುತ್ತದೆ. ಬದ್ಧನಾದರೋ ಸಕಲ ಪ್ರಮೇಯ ಪದಾರ್ಥಗಳೂ ತನ್ನಿಂದ ಅತ್ಯಂತವಾಗಿ ಭಿನ್ನವೆಂದೇ ತಿಳಿಯುತ್ತಾನೆ; ವಸ್ತುತಃ ಅವು ಅಭಿನ್ನವಾದರೂ ಬದ್ಧನಿಗೆ ಅಭೇದಸಾಕ್ಷಾತ್ಕಾರವಿಲ್ಲದಿರುವುದರಿಂದ ಅಮೃತದಲ್ಲಿಯೂ ವಿಷದಲ್ಲಿಯೂ 'ಸಮದೃಷ್ಟಿ' ಇರುವುದಿಲ್ಲ. ಅವನಿಗೆ ಪ್ರಮೇಯ ಪದಾರ್ಥಗಳ ವಿಷಯದಲ್ಲಿ ಇರುವುದು 'ಅಸಮ' ಅಥವಾ ವಿಷಮದೃಷ್ಟಿಯೇ. ಈ ತೆರನಾಗಿ ಪ್ರಮೇಯದ ವಿಷಯದಲ್ಲಿ ತೋರುವ ಸಮ ಮತ್ತು ವಿಷಮದೃಷ್ಟಿಯ ಆಧಾರದ ಮೇಲೆ ಬದ್ಧ-ಮುಕ್ತರಿಗೆ ನಾವು ವ್ಯತ್ಯಾಸವನ್ನು ಹೇಳಬಹುದು.[52]

## ಮುಕ್ತಿಮಾರ್ಗ

ಪರಸಿದ್ಧಿರೂಪವಾದ ಮುಕ್ತಿಯನ್ನು ಸಂಪಾದಿಸುವುದೇ ಮುಮುಕ್ಷುವಿನ ಗುರಿಯಾದರೆ, ಅದನ್ನು ಸಂಪಾದಿಸುವ ಮಾರ್ಗವಾದರೂ ಏನು?—ಎಂಬುದು ಸಹಜವಾಗಿ ಏಳುವ ಪ್ರಶ್ನೆ. ಪ್ರಕೃತದರ್ಶನದವರು ಇದಕ್ಕಾಗಿ ಸೂಚಿಸುವುದು ಮೊಟ್ಟಮೊದಲನೆಯದಾಗಿ ಭಕ್ತಿಮಾರ್ಗ. 'ಪರಮೇಶ್ವರನ ದಾಸನು ನಾನು' ಎಂದು ಭಾವಿಸಿ, ಪರಮೇಶ್ವರನಿಗಾಗಿ ಹಾತೊರೆಯುವುದೇ ದಾಸ್ಯರೂಪವಾದ ಭಕ್ತಿ.[53] ಈ ಭಕ್ತಿಮಾರ್ಗವನ್ನು ಹಿಡಿದರೆ ಪರಮೇಶ್ವರ ಲಾಭವು ಆಗಿಯೇ ಆಗುತ್ತದೆ. ಪರಮೇಶ್ವರಲಾಭವಾದಲ್ಲಿ ಸಕಲ ಸಂಪತ್ಪ್ರವಾಹವೂ ಸಿದ್ಧವಾದಂತೆಯೇ; ಸುವರ್ಣ ಪರ್ವತವೇ ವಶವಾದಾಗ ಅಲ್ಲಿನ ಸಕಲ ಸಂಪತ್ತೂ ನಮ್ಮ ವಶವಲ್ಲವೇ? ಇದನ್ನೇ ಕುರಿತು ಉತ್ಪಲಾಚಾರ್ಯರೆಂದುದು: "ಯಾರಿಗೆ ಭಕ್ತಿಯೆಂಬ ಲಕ್ಷ್ಮಿಯು ದೊರಕಿರುವಳೋ, ಅವರಿಗೆ ಯಾಚಿಸಬೇಕಾದ ಬೇರೊಂದು ಪದಾರ್ಥವೇನಿದ್ದೀತು? ಯಾರಿಗಾದರೆ ಈ ಭಕ್ತಿರೂಪ ಲಕ್ಷ್ಮಿ ಇಲ್ಲವೋ ಅವರಿಗೆ ಯಾವುದು ತಾನೆ ಸಿದ್ಧಿಸೀತು?"[54]

ಭಕ್ತಿಯಷ್ಟೇ ಮುಖ್ಯವಾದ ಮತ್ತೊಂದು ಕಾರಣವು "ಭಾವನಾ." "ನಾನು ಶಿವ" ಎಂಬುದಾಗಿ ಅನವರತವೂ ಚಿಂತಿಸುವಿಕೆಯೇ 'ಭಾವನಾ' ಎಂಬ ಶಬ್ದದ ಅರ್ಥ.[55] ಈ ವಿಧವಾದ ಚಿಂತನೆಯು ಪರಮೇಶ್ವರನಲ್ಲಿ ಭಕ್ತಿಮಾಡುವುದಕ್ಕೂ, ಇದಕ್ಕಿಂತಲೂ ಮಿಗಿಲಾಗಿ 'ಆ

---

51 "ನನು ಪ್ರಮೇಯಸ್ಯ ಪ್ರಮಾತ್ರಭಿನ್ನತ್ವೇ ಬದ್ಧಮುಕ್ತಯೋಃ ಪ್ರಮೇಯಂ ಪ್ರತಿ ಕೋ ವಿಶೇಷಃ?" (ಪು. 199)

52 ಅತ್ರಾಪ್ಯುತ್ತರಮುಕ್ತಂ ತತ್ತ್ವಾರ್ಥಸಂಗ್ರಹಾಧಿಕಾರೇ:
"ಮೇಯಂ ಸಾಧಾರಣಂ ಮುಕ್ತಃ ಸ್ವಾತ್ಮಾಭೇದೇನ ಮನ್ಯತೇ |
ಮಹೇಶ್ವರೋ ಯಥಾ ಬದ್ಧಃ ಪುನರತ್ಯಂತಭೇದವತ್ ||" (ಪು. 199)

53 "ಭಕ್ತಿಃ ಪರಮೇಶ್ವರಸ್ಯ ದಾಸ್ಯಂ"
—ವ್ಯಾಖ್ಯಾ, ಪು. 193.

54 ತದುಕ್ತಂ ಉತ್ಪಲಾಚಾರ್ಯೈಃ—
"ಭಕ್ತಿಲಕ್ಷ್ಮೀಸಮೃದ್ಧಾನಾಂ ಕಿಮನ್ಯದುಪಯಾಚಿತಮ್ |
ಏತಯಾ ವಾ ದರಿದ್ರಾಣಾಂ ಕಿಮನ್ಯದಪಯಾಚಿತಮ್ ||" (ಪು. 193)

55 "ಶಿವೋಽಹಮಿತ್ಯನವರತಂ ಚಿಂತನಂ ಭಾವನಾ" (ಪು. 192)

ಪರಮೇಶ್ವರನೇ ನಾನು' ಎಂಬ ಪ್ರತ್ಯಭಿಜ್ಞೆಯನ್ನು ಹೊಂದುವುದಕ್ಕೂ ಮೆಟ್ಟಲಾಗಿ ನಿಲ್ಲುತ್ತದೆ. ಆದರೆ ಪ್ರತ್ಯಭಿಜ್ಞೆಯು ಉದಯಿಸಿದೊಡನೆ 'ಭಾವನೆ'ಗೆ ಯಾವ ಕೃತ್ಯವೂ ಇರುವುದಿಲ್ಲ. ಇದನ್ನೇ 'ಶಿವದೃಷ್ಟಿ'ಯಲ್ಲಿ ಪರಮಗುರುಗಳಾದ ಭಗವಾನ್ ಸೋಮಾನಂದನಾಥಪಾದರು ಹೇಳಿರುವುದು—"ಒಂದೇ ಒಂದು ಬಾರಿ ಪ್ರಮಾಣದಿಂದಾಗಲಿ, ಶಾಸ್ತ್ರದಿಂದಾಗಲಿ, ಗುರುವಿನ ಮಾತಿನಿಂದಾಗಲಿ, ಶಿವನು ಸರ್ವಸ್ಥನೆಂದು ತಿಳಿದಮೇಲೆ, ಅಂತಹ ಅಭಿಪ್ರಾಯದಲ್ಲಿ ದೃಢವಾದ ಮನಸ್ಸಾದ ಮೇಲೆ, ಉಪವಾಸಾದಿ ವ್ರತಗಳಿಂದಾಗಲಿ ಅಥವಾ ಭಾವನೆಯಿಂದಾಗಲಿ ಏನೂ ಪ್ರಯೋಜನವಿಲ್ಲ. ಹೇಗೆಂದರೆ, "ಇದು ಸುವರ್ಣ" ಎಂಬ ಜ್ಞಾನಬಂದಮೇಲೆ, ಅದರ ತಿಳಿವಳಿಕೆಗಾಗಿ ಒರೆಗಲ್ಲನ್ನು ಯಾರಾದರೂ ತರಲು ಯತ್ನಿಸುವರೇ? ಅಥವಾ "ಸುವರ್ಣವಿದು" ಎಂಬುದು ದೃಢವಾದಮೇಲೆ ಯಾರಾದರೂ ಆ ವಿಷಯದಲ್ಲಿ ಸಾಮಾನ್ಯ ಚಿಂತನೆಗೆ ತೊಡಗುವರೇ?"[56] ಎಂದಮೇಲೆ, ರೋಗದಿಂದ ಪಾರಾದವನಿಗೆ ಔಷಧಿಯು ಹೇಗೆ ಅನಾವಶ್ಯಕವೋ, ಅದರಂತೆ ಅನುಭವ, ಪ್ರತ್ಯಭಿಜ್ಞಾಶಾಸ್ತ್ರ ಮತ್ತು ಅನುಮಾನಾದಿಗಳಿಂದ ತಾನು ಶಿವನೆಂದು ತಿಳಿದ ಅನಂತರ ಈ ಅನುಮಾನವೇ ಮೊದಲಾದ ಪ್ರಮಾಣಗಳಿಂದಾಗಲಿ, ಭಾವನಾರೂಪ ಚಿಂತನೆಯಿಂದಾಗಲಿ ಹೆಚ್ಚು ಪ್ರಯೋಜನವಿಲ್ಲವೆಂದಾಯಿತು.

ಪರಸಿದ್ಧಿರೂಪ ಮುಕ್ತಿಗೆ ಅತ್ಯಂತ ಪ್ರಮುಖ ಮಾರ್ಗವಾದ "ಪ್ರಜ್ಞಾನ" ಅಥವಾ ಪ್ರತ್ಯಭಿಜ್ಞೆಗೆ ಯಾವ ತರಹವಾದ ಪರಿಮಿತಿಯೂ ಇಲ್ಲ. ಪ್ರತ್ಯಭಿಜ್ಞಾರೂಪವಾದ ಉತ್ತಮ ಜ್ಞಾನವೇ ಪರಮಾರ್ಥವಾದ ಫಲವನ್ನು ಕೊಡುವುದು.[57] ಸಮಸ್ತಸಂಪತ್ತಿನ ಪ್ರಾಪ್ತಿಗೂ ಮತ್ತು ಪರಸಿದ್ಧಿಗೂ ಸಾಕ್ಷಾತ್ತಾದ ಕಾರಣವು ಈ "ಪ್ರತ್ಯಭಿಜ್ಞೆ" ಎಂದು ಎಲ್ಲ ಪ್ರತ್ಯಭಿಜ್ಞಾ ದರ್ಶನಕಾರ ಮತ. ಅಭಿಮುಖವಾದ ವಸ್ತುವಿನಲ್ಲಿ "ಅವನೇ ಈ ಚೈತ್ರ" ಎಂಬಾಕಾರವಾದ ಜ್ಞಾನವನ್ನು ಹೊಂದುವೆವೋ, ಅದರಂತೆ "ಆ ಈಶ್ವರನೇ ನಾನು" ಎಂಬ ಜ್ಞಾನವಾಗಲು, ಆಗ 'ಪರಸಿದ್ಧಿ' ನಿಶ್ಚಯವೆಂದು ಸಾರಿರುವುದರಿಂದ, ಪ್ರತ್ಯಭಿಜ್ಞೆಯು ಮುಕ್ತಿಗೆ ಪರಮ ಕಾರಣವಾಯಿತು.

## ಪ್ರತ್ಯಭಿಜ್ಞಾ ಮತ್ತು ಇತರ ದರ್ಶನಗಳು

ಪ್ರತ್ಯಭಿಜ್ಞಾದರ್ಶನವು ಶೈವದರ್ಶನನನ್ನೇ ಬಹು ಭಾಗ ಹೋಲುತ್ತಿದ್ದರೂ, ಕೆಲವು ಸೂಕ್ಷ್ಮ ವ್ಯತ್ಯಾಸಗಳು ಒಂದೆರಡಂಶದಲ್ಲಿ ತೋರಿಬರುವುವು. ಶೈವದರ್ಶನದಲ್ಲಿ ವಿದ್ಯೇಶ್ವರಾರಾಧನೆಯಿಂದಲೂ ದೀಕ್ಷಾದಿ ವಿಧಿಯಿಂದಲೂ ಯಾರು ಅತ್ಯಂತ ಪರಿಪಕ್ವರಾಗುವರೋ ಅವರು ಮೋಕ್ಷಕ್ಕೆ ಹೋಗುವರೆಂದು ಹೇಳಿದೆ. ಕೇವಲ ಜ್ಞಾನದಿಂದ ಮಲನಿವೃತ್ತಿಯೂ ಮೋಕ್ಷವೂ ಇಲ್ಲವೆಂದು ಆ ದರ್ಶನದ ಹೃದಯ. ದೀಕ್ಷಾದಿ ವಿಧಿಗಳಿಂದ ಸಂಪಾದಿಸಲ್ಪಟ್ಟ ಪರಮಶಿವಾನುಗ್ರಹದಿಂದಲೇ ಮೋಕ್ಷವೆಂದು ಸಿದ್ಧಾಂತ. ಪ್ರತ್ಯಭಿಜ್ಞೆಯಲ್ಲಾದರೋ ಜ್ಞಾನದ ಮೇಲೆ ಹೆಚ್ಚು ಪ್ರಾಶಸ್ತ್ಯ ಮತ್ತು ಮೋಕ್ಷಕ್ಕಾಗಿ ಬಾಹ್ಯ ಚರ್ಯಗಳಾಗಲಿ ಅಭ್ಯಂತರಚರ್ಯವಾಗಲಿ, ಪ್ರಾಣಾಯಾಮವೇ ಮೊದಲಾದ ಕ್ಲೇಶವಾಗಲಿ ಬೇಕಿಲ್ಲವೆಂದು ತಿಳಿಸುತ್ತಾರೆ. ಈ ದೃಷ್ಟಿಯಿಂದ ತಮ್ಮ ಸಿದ್ಧಾಂತವು ಅತಿ ಸುಲಭವೆಂದೂ ಹೇಳುತ್ತಾರೆ.[59] ಮಾಯಾವಾದದಲ್ಲಿ ವಾಕ್ಯಾರ್ಥ

---

[56] "ಏಕವಾರಂ ಪ್ರಮಾಣೇನ ಶಾಸ್ತ್ರಾದ್ವಾ ಗುರುವಾಕ್ಯತಃ |
ಜ್ಞಾತೇ ಶಿವತ್ವೇ ಸರ್ವಸ್ಥೇ ಪ್ರತಿಪತ್ತ್ಯಾ ದೃಢಾತ್ಮನಾ ||
ಕರಣೇನ ನಾಸ್ತಿ ಕೃತ್ಯಂ ಕ್ವಾಪಿ ಭಾವನಯಾಪಿ ವಾ |
ಜ್ಞಾತೇ ಸುವರ್ಣೇ ಕರಣಂ ಭಾವನಾಂ ವಾ ಪರಿತ್ಯಜೇತ್ ||" (ಪು. 192)

[57] "ಪ್ರಜ್ಞಾನಸ್ಯೈವ ಪರಮಾರ್ಥಫಲತ್ವಾತ್" ಪು. 192.

[58] "ತಥಾ ಚ ಸಮಸ್ತ ಸಂಪತ್ಸಮವಾಪ್ತೇಃ ಪ್ರತ್ಯಭಿಜ್ಞಾಹೇತುತ್ವಮ್ ಸಿದ್ಧಮ್"
—ವ್ಯಾಖ್ಯಾ, 193.

[59] "ಬಾಹ್ಯಾಭ್ಯಂತರಚರ್ಯಾ ಪ್ರಾಣಾಯಾಮಾದಿ ಕ್ಲೇಶಪ್ರಯಾಸಕಲಾಪವೈಧುರ್ಯೇಣ ಸರ್ವ ಸುಲಭಮ್ . . ." (ಪು. 190)

ಜ್ಞಾನ ಮಾತ್ರದಿಂದಲೇ ಭ್ರಮರೂಪವಾದ ಸರ್ವಬಂಧ ನಿವೃತ್ತಿಯಾಗುವುದೆಂದು ತಿಳಿಸುವರು ; ಪ್ರತ್ಯಭಿಜ್ಞೆಯವರು ಇದರಂತೆಯೇ ಜ್ಞಾನಶಕ್ತಿಯನ್ನು ಸಂಪಾದಿಸಿ "ನಾನು ಪರಮಶಿವ"ನೆಂದು ತೋರುವ ಪ್ರತ್ಯಭಿಜ್ಞಾ ಮಾತ್ರದಿಂದಲೇ ಪರಮಶಿವ ಭಾವದ ಪ್ರಾಪ್ತಿರೂಪವಾದ ಮೋಕ್ಷವು ಪ್ರಾಪ್ತವಾಗುತ್ತದೆ ಎನ್ನುತ್ತಾರೆ. ಮಾಯಾವಾದಿಗಳಂತೆ ಇವರೂ ಜೀವ-ಈಶ್ವರರ ಅಭೇದ ವನ್ನು ವಿವರಿಸುತ್ತಾರೆ; ಹಾಗೂ ಮಾಯೆಯೇ ಜೀವನ ಮೋಹಕ್ಕೂ ಸಂಸಾರಕ್ಕೂ ಕಾರಣ ವೆನ್ನುತ್ತಾರೆ. ಆದರೆ "ಸಏವ ಈಶ್ವರೋಽಹಂ" ಎಂಬಾಕಾರವಾದ ಪ್ರತ್ಯಭಿಜ್ಞೆಯು ಈ ದರ್ಶನಕ್ಕೇ ಮೀಸಲಾದುದು. ಚಾರ್ವಾಕಮತದವರು ಕಾರ್ಯ-ಕಾರಣಭಾವವನ್ನು ಒಪ್ಪುವುದಿಲ್ಲ; ಇವ ರದ್ದು ಸ್ವಭಾವವಾದ ಎಂದರೆ ಪ್ರತ್ಯಕ್ಷವಾದ ಕಾರಣಶಕ್ತಿಯೆಂಬ ವಸ್ತುಸ್ವಭಾವದಿಂದಲೇ ಪರಿಣಾಮಗಳು ಪ್ರತ್ಯಕ್ಷಗಳಾಗಿರುತ್ತವೆ. ಒಂದು ಬೀಜವು ಭೂಮಿಯಲ್ಲಿ ಬಿದ್ದರೆ, ಬೀಜಶಕ್ತಿ ಯಿಂದಲೇ ಮೊಳಕೆಯಾಗಿ, ಕ್ರಮೇಣ ಫಲವಾಗುತ್ತದೆ. ಇದೇ ಸ್ವಭಾವವಾದ. ಇಲ್ಲಿ ನಿಮಿತ್ತ ಕಾರಣವು ಕಂಡುಬರುವುದಿಲ್ಲ. ಎಂದರೆ ಚಾರ್ವಾಕಮತದ್ದು 'ನಿರಪೇಕ್ಷವಾದ'–ಒಬ್ಬ ಪುರುಷನ ಬುದ್ಧಿಪೂರ್ವಕ ಅಥವಾ ಇಚ್ಛೆ–ಸಂಕಲ್ಪ—ಪ್ರಯತ್ನಗಳಿಂದ ಈ ಪರಿಣಾಮ ಪರಂಪರೆಯುಂಟಾ ಗುವುದಿಲ್ಲ. ಇವರ ಪ್ರಕಾರ ಕಾರ್ಯವು 'ಯಾದೃಚ್ಛಿಕ.' ಪ್ರತ್ಯಭಿಜ್ಞೆಯಾದರೋ ಸಕಲಕ್ಕೂ ಈಶ್ವರೇಚ್ಛೆಯೇ ಕಾರಣವೆಂದು ಸಾರಿ ನಿಮಿತ್ತಕಾರಣತಾ ವಾದವನ್ನು ಎತ್ತಿ ಹಿಡಿಯುತ್ತದೆ. ಪೂರ್ಣಪ್ರಜ್ಞದರ್ಶನದವರು ಜೀವೇಶ್ವರರ ಭೇದವನ್ನು ನಿರೂಪಿಸುವರು ; ಪ್ರತ್ಯಭಿಜ್ಞಾದರ್ಶನ ದವರಾದರೋ ಜೀವ-ಪರರ ಅಭೇದವನ್ನು ಸಾರುವರು. ಪೂರ್ಣಪ್ರಜ್ಞದರ್ಶನದಲ್ಲಿ ಆತ್ಮನು ಪರ ಮಾತ್ಮನ ಸದೃಶನಾದ ಚೇತನ; ಪ್ರತ್ಯಭಿಜ್ಞೆಯಲ್ಲಿ ಜೀವೇಶ್ವರರ ಚೈತನ್ಯ ಒಂದೇ ಎಂದು ಹೇಳು ವರು. ಪ್ರತ್ಯಭಿಜ್ಞಾದರ್ಶನದಲ್ಲಿ ನ್ಯಾಯ—ವೈಶೇಷಿಕ ದರ್ಶನದವರು ಒಪ್ಪುವಂತೆ ಅನುಮಾನದ ಆಕಾರವು ಪ್ರತಿಜ್ಞಾ, ಹೇತು, ಉದಾಹರಣ, ಉಪನಯ, ನಿಗಮನವೆಂಬ ಐದು ಅವಯವ ಗಳಿಂದ ಕೂಡಿರಬೇಕೆಂದು ತಿಳಿಸುತ್ತಾರೆ. ಪಂಚಾವಯವಗಳಿರಲೇಬೇಕೆಂಬ ನಿಯಮವಿಲ್ಲವೆಂದು ಸಾರುವ ರಾಮಾನುಜೀಯ ಮತ್ತು ಪೂರ್ಣಪ್ರಜ್ಞರ ಮತವು ಇವರಿಷ್ಟವಲ್ಲ. ಈ ಪಂಚಾವ ಯವಗಳಿಂದ ಕೂಡಿದ ಆಧಾರದ ಮೇಲೆಯೇ ಪ್ರತ್ಯಭಿಜ್ಞಾದಾರ್ಶನಿಕರು ಪ್ರತ್ಯಭಿಜ್ಞೆಯನ್ನು ಸಾಧಿಸುತ್ತಾರೆ.[60] ನೈಯಾಯಿಕರು ಈಶ್ವರೇಚ್ಛೆಯಿಂದ ಪರಮಾಣುಗಳಲ್ಲಿ ಕ್ರಿಯೆಯುಂಟಾಗಿ ದ್ವ್ಯಣುಕ-ತ್ರ್ಯಣುಕಾದಿಗಳ ಮೂಲಕ ಜಗತ್ಸೃಷ್ಟಿಯನ್ನು ಹೇಳುತ್ತಾರೆ. ಪ್ರತ್ಯಭಿಜ್ಞೆಯವ ರಾದರೋ ಪರಮೇಶ್ವರನು ಸ್ವತಂತ್ರವಾಗಿ, ಯಾವ ಸಾಮಗ್ರಿಯನ್ನೂ ಅಪೇಕ್ಷಿಸದೆ ಸೃಷ್ಟಿಸ ಬಲ್ಲನೆಂದು ತಿಳಿಸುತ್ತಾರೆ. ಇದೇ ಹಿಂದೆ ನಿರೂಪಿಸಿದ "ನಿರುಪಾದಾನಸಂಭಾರ" ಎಂಬ ವಸುಗುಪ್ತಾಚಾರ್ಯರ ಮಾತಿನ ತಾತ್ಪರ್ಯ. ಮೀಮಾಂಸಕರಿಗೆ ವೈದಿಕಕ್ರಿಯಾಕಲಾಪವು ಬಹುಮುಖ್ಯ; ಪ್ರತ್ಯಭಿಜ್ಞಾದರ್ಶನಕ್ಕೆ ಇದು ಅಮುಖ್ಯ. ಮೀಮಾಂಸಕರು "ಕರ್ಮವಾದ" ವನ್ನು ಎತ್ತಿ ಹಿಡಿಯುವರು ; ಪ್ರತ್ಯಭಿಜ್ಞಾದರ್ಶನಕಾರರಿಗಾದರೋ ಈಶ್ವರನು ಮುಖ್ಯನೇ ಹೊರತು, ಕರ್ಮವಾದದಲ್ಲಿ ಅಷ್ಟು ಆದರವಿಲ್ಲ. ಕೊನೆಯದಾಗಿ ಸಾಂಖ್ಯಮತದವರು ಸ್ವತಂತ್ರ ಪ್ರಕೃತಿಕಾರಣವಾದಿಗಳು ; ಪ್ರತ್ಯಭಿಜ್ಞಾದರ್ಶನಕಾರರಾದರೋ, ಪ್ರಧಾನಕ್ಕೆ ಅಪೇಕ್ಷಾ ಬುದ್ಧಿ ಇಲ್ಲವಾಗಿ, ಅದಕ್ಕೆ ಜಗತ್ಕಾರಣತ್ವವನ್ನು ಒಪ್ಪುವುದಿಲ್ಲ. ಅಂತೂ ಈ ರೀತಿಯಾಗಿ

---

[60] "ಅಯಮಾತ್ಮಾ ಪರಮೇಶ್ವರಃ (ಪ್ರತಿಜ್ಞಾ)
ಜ್ಞಾನಕ್ರಿಯಾಶಕ್ತಿಮತ್ತ್ವಾತ್ (ಹೇತು)
ಯೋ ಯಾವತಿ ಜ್ಞಾತಾ ಕರ್ತಾ ಚ ಸಃ ತಾವತೀಶ್ವರಃ ಪ್ರಸಿದ್ಧೇಶ್ವರವದ್ರಾಜವದ್ವಾ |
(ಉದಾಹರಣ)

ಆತ್ಮಾ ಚ ವಿಶ್ವಜ್ಞಾತಾ ಕರ್ತಾ ಚ (ಉಪನಯ)
ತಸ್ಮಾದೀಶ್ವರೋಽಯಂ (ನಿಗಮನ)

—ಸರ್ವ. ಸಂ., 194.

ಪ್ರತ್ಯಭಿಜ್ಞಾದರ್ಶನವು ಅನೇಕ ದರ್ಶನಗಳ ಅಂಶಗಳನ್ನೂ ಒಳಗೊಂಡರೂ ತನ್ನದೇ ಆದ ವೈಶಿಷ್ಟ್ಯವನ್ನೂ ಉಳಿಸಿಕೊಂಡು ಬಂದಿದೆ.[61]

## ಉಪಸಂಹಾರ

ಇದುವರೆಗೂ ಪ್ರತ್ಯಭಿಜ್ಞಾದರ್ಶನದ ಅತಿ ಮುಖ್ಯವಾದ ತತ್ತ್ವಗಳನ್ನು ನಿರೂಪಿಸಿದು ದಾಯಿತು. ಮುಂದೆ, ಪ್ರತ್ಯಭಿಜ್ಞಾದರ್ಶನದ ಮೇಲೆ ಪ್ರಬಲವಾಗಿ ಎದ್ದ ಆಕ್ಷೇಪಣೆಯೊಂದನ್ನು ಪರಿಗಣಿಸಬೇಕಾಗಿದೆ. ಈ ಆಕ್ಷೇಪಣೆಯ ಆಕಾರವನ್ನು ಈ ರೀತಿಯಾಗಿ ರೂಪಿಸಬಹುದು: "ನೀವು ಹೇಳುವಂತೆ ಆತ್ಮನಿಗೆ ಪರಮೇಶ್ವರತ್ತ್ವವು ಸ್ವಾಭಾವಿಕವಾದರೆ, 'ಪ್ರತ್ಯಭಿಜ್ಞೆ'ಯಿಂದ ಉಂಟಾಗುವ ಪ್ರಯೋಜನವಾದರೂ ಏನು? ಬೀಜವು ಮೊಳಕೆಯಾಗಬೇಕಾದರೆ ಅದಕ್ಕೆ "ನಾನು ಬೀಜ" ಎಂಬ ಜ್ಞಾನವೇ ಬೇಕಾಗಿಲ್ಲ. ಬೀಜವಿದ್ದರಾಯ್ತು; ಸಹಕಾರಿಯಾದ ಮಳೆ ಹೊಯ್ಯಲು, ಬೀಜವು ತಾನಾಗಿಯೇ ಮೊಳಕೆಯಾಗಲೇ ಆಗುತ್ತದೆ. ಅದಕ್ಕೆ "ನಾನು ಬೀಜ" ವೆಂಬ ಜ್ಞಾನವು ಸರ್ವಥಾ ಬೇಕಿಲ್ಲವಷ್ಟೆ."[62] ಈ ಪ್ರಕಾರವಾದ ಪ್ರಬಲವಾದ ಪೂರ್ವಪಕ್ಷಕ್ಕೆ ಪ್ರತ್ಯಭಿಜ್ಞಾದರ್ಶನವು ಸಮರ್ಪಕವಾದ ಉತ್ತರ ಕೊಡುತ್ತದೆ.

ಈ ಪ್ರಪಂಚದಲ್ಲಿ ಅರ್ಥಕ್ರಿಯಾಕಾರಿಯಾದ ಪದಾರ್ಥಗಳು ಎರಡು ವಿಧವಾಗಿರುತ್ತವೆ: ಒಂದು 'ಬಾಹ್ಯ.' ಈ ಪಂಗಡಕ್ಕೆ ಬೀಜ ಮುಂತಾದ ಪದಾರ್ಥಗಳು ಸೇರುವುವು. ಅಂಕುರೋತ್ಪತ್ತಿಯನ್ನು ಮಾಡುವುದೇ ಬೀಜದ ಅರ್ಥಕ್ರಿಯಾಕಾರಿತ್ವ. ಎರಡನೆಯದು 'ಆಂತರ'. ಇದು ಪುತ್ರಜನನವೇ ಮೊದಲಾದ ಪ್ರಕಾರವಾದುದು. ಪುತ್ರಜನನದ ಅರ್ಥಕ್ರಿಯಾಕಾರಿತೆಯು ಆನಂದವನ್ನುಂಟುಮಾಡುವುದೇ. ಹೀಗಿರಲು ಈ ಎರಡರಲ್ಲಿ ಮೊದಲನೆಯದಾದ ಬೀಜವೇ ಮೊದಲಾದ ಬಾಹ್ಯ ಪದಾರ್ಥಗಳು ಯಾವ ತೆರನಾದ ಪ್ರತ್ಯಭಿಜ್ಞೆಯನ್ನೂ ಅಪೇಕ್ಷಿಸುವುದಿಲ್ಲ. ಎಂದರೆ ಬೀಜಕ್ಕೆ "ನಾನು ಬೀಜ" ಎಂಬ ಜ್ಞಾನವು ಬೇಕಿಲ್ಲ—ಅರ್ಥಕ್ರಿಯಾಕಾರಿಯಾಗ ಬೇಕಾದಲ್ಲಿ; ಆದರೆ ಎರಡನೆಯ ವಿಧವಾದ ಅಂತಃಕರಣರೂಪವಾದುದು ಪ್ರತ್ಯಭಿಜ್ಞೆಯನ್ನು ಅಪೇಕ್ಷಿಸುತ್ತದೆ. ಜೀವನು ಎರಡನೆಯ ಪಂಗಡಕ್ಕೆ ಸೇರಿದವನು. ಆದುದರಿಂದ ಜೀವನು ತನ್ನ ಅರ್ಥಕ್ರಿಯಾಕಾರಿತ್ವ ಸಂಪಾದಿಸಲಾಗಿ ಅಥವಾ ಆನಂದಪಡಬೇಕಾದರೆ "ನಾನು ಆ ಈಶ್ವರ" ಎಂಬ ಜ್ಞಾನವನ್ನು ಹೊಂದಲೇಬೇಕು. ಲೋಕದಲ್ಲಿ ಇದಕ್ಕೆ ತಕ್ಕ ದೃಷ್ಟಾಂತ ಉಂಟು. ಒರ್ವ ಕಾಮಿನಿಯು ನಾಯಕನ ಗುಣಗಳನ್ನು ಕೇಳಿ ಅವನನ್ನು ಕಾಣಲು ಕಾತರಳಾಗಿದ್ದಾಳೆ. ಆಕೆಯು ತನ್ನ ಕಾಂತನಿಂತಹವನು—ಎಂಬ ಜ್ಞಾನವನ್ನು ಸ್ಪಷ್ಟವಾಗಿ ಹೊಂದಿಲ್ಲವಾದುದರಿಂದ, ಆತನು ಆಕೆಯ ಸಮೀಪ ಓಡಾಡುತ್ತಿದ್ದರೂ, ಅವಳಿಗೆ ಸಂತೋಷವಾಗುವುದಿಲ್ಲ. ಆದರೆ ಯಾವಾಗ ದೂತಿಯೊರ್ವಳು ನಾಯಿಕೆಯನ್ನು ಕುರಿತು "ಅವನೇ ಈತ" ಎಂಬುದಾಗಿ ತೋರಿಸಿ, ನಾಯಕನ ಗುಣವನ್ನು ವರ್ಣಿಸುವಳೋ, ಆಗ ನಾಯಿಕೆಗೆ "ಆ ನನ್ನ ನಾಯಕನೇ ಈತ"— ಎಂಬ ಜ್ಞಾನವಾಗಿ, ಆನಂದಪರವಶಳಾಗುತ್ತಾಳೆ. ಇದರಂತೆಯೇ ಜೀವನಲ್ಲೇ ಈಶ್ವರತ್ವ ವಿದ್ದರೂ, ಅದನ್ನರಿಯದೆ ಜೀವನು ಪರಿತಪಿಸುತ್ತಾನೆ. ಯಾವಾಗಲಾದರೆ ಗುರೂಪದೇಶದಿಂದ ತಾನೇ ಸರ್ವಶಕ್ತನಾದ ಪರಮೇಶ್ವರನೆಂದು ತಿಳಿಯುತ್ತಾನೆಯೋ, ಆಗ ಅಂತಹ ಜ್ಞಾನೋದಯ ದಿಂದ ಆನಂದಪಡುತ್ತಾನೆ. ಆದುದರಿಂದ "ಸ ಏವ ಈಶ್ವರೋಽಹಂ" ಎಂಬಾಕಾರವಾದ

---

61 "ಏವಂ ಪ್ರತ್ಯಭಿಜ್ಞಾದರ್ಶನಂ ಪ್ರಸಿದ್ಧಂ ಬಹುದರ್ಶನಸಂಕೀರ್ಣಮಿತಿ ದಿಙ್ಮಾತ್ರಮುಪದರ್ಶಿತಮ್"
—ದರ್ಶನೋದಯ, ಪು. 255

62 "ನನು ಆತ್ಮನಃ ಪರಮೇಶ್ವರತ್ವಂ ಸ್ವಾಭಾವಿಕಂ ಚೇತ್ ನಾರ್ಥಃ ಪ್ರತ್ಯಭಿಜ್ಞಾಪ್ರಾರ್ಥನಯಾ। ನ ಹಿ ಬೀಜಂ ಅಪ್ರತ್ಯಭಿಜ್ಞಾತಂ ಸತಿ ಸಹಕಾರಿ ಸಾಕಲ್ಯೇಂಕುರಂ ನೋತ್ಪಾದಯತಿ। ತಸ್ಮಾತ್ ಕಸ್ಮಾದಾತ್ಮಪ್ರತ್ಯಭಿಜ್ಞಾನೇ ನಿರ್ಬಂಧಃ?" (ಪು. 200)

ಪ್ರತ್ಯಭಿಜ್ಞಾರೂಪವಾದ ಜ್ಞಾನವು ಅತ್ಯಾವಶ್ಯಕವೇ ಆಯಿತು. ಈ ಅಭಿಪ್ರಾಯವನ್ನೇ ಸಂಗ್ರಹಿಸಿ, ಪ್ರತ್ಯಭಿಜ್ಞಾದರ್ಶನದವರು ಈ ರೀತಿ ತಿಳಿಸುತ್ತಾರೆ:

"ತೈಸ್ತೈರಪ್ಯುಪಯಾಚಿತೈರುಪನತಸ್ತನ್ವ್ಯಾಃ ಸ್ಥಿತೋಪ್ಯಂತಿಕೇ
ಕಾಂತೋ ಲೋಕಸಮಾನ ಏವಮಪರಿಜ್ಞಾತೋ ನ ರಂತುಂ ಯಥಾ |
ಲೋಕಸ್ಯೈಷ ತಥಾನವೇಕ್ಷಿತಗುಣಃ ಸ್ವಾತ್ಮಾಪಿ ವಿಶ್ವೇಶ್ವರೋ
ನೈವಾಯಂ ನಿಜವೈಭವಾಯ ತದಿಯಂ ತತ್ಪ್ರತ್ಯಭಿಜ್ಞೋದಿತಾ" || (ಪು. 201)

ಅಂತೂ ಪ್ರತ್ಯಭಿಜ್ಞೆಯಿಂದಲೇ ಶಿವಸಾಕ್ಷಾತ್ಕಾರರೂಪವಾದ 'ಪರಸಿದ್ಧಿ'ಯೂ ದೇವಲೋಕಪ್ರಾಪ್ತಿ ರೂಪವಾದ 'ಅಪರಸಿದ್ಧಿ'ಯೂ ಉಂಟಾಗುವುದೆಂದು ಪ್ರತ್ಯಭಿಜ್ಞಾದರ್ಶನದ ಹೃದಯವಾಯಿತು.

ಎಸ್. ರಾಮಚಂದ್ರರಾವ್

# ನಾಲಡಿಯಾರ್

ದಕ್ಷಿಣ ದೇಶದಲ್ಲಿ ಒಂದುಸಲ ಅತ್ಯಂತ ಘೋರವಾದ ಕ್ಷಾಮ ಬಂದಿತು. ಆಗ ಎಂಟು ಸಾವಿರ ಜೈನಸನ್ಯಾಸಿಗಳು ಆಹಾರವಿಲ್ಲದೆ ತೊಳಲುತ್ತ ಪಾಂಡ್ಯರಾಜನ ರಾಜಧಾನಿಗೆ ಬಂದರು. ರಾಜ ಅವರನ್ನು ತನ್ನಲ್ಲಿ ಇರಿಸಿಕೊಂಡು ಆತಿಥ್ಯಮಾಡುತ್ತಿದ್ದನು. ಕೆಲವು ಕಾಲದನಂತರ ಕ್ಷಾಮ ಇಲ್ಲದಂತಾಗಲು ಸನ್ಯಾಸಿಗಳು ತಮ್ಮ ನಾಡಿಗೆ ಹೊರಟರು. ರಾಜನಿಗೆ ಅವರಲ್ಲಿ ಹೆಚ್ಚು ಗೌರವವೂ ಪ್ರೀತಿಯೂ ಉಂಟಾಗಿದ್ದುದರಿಂದಲೂ, ಯೋಗ್ಯರಿಂದ ಮಾತ್ರ ಆಸ್ಥಾನ ಶೋಭಿಸುವುದೆಂದು ಅವನು ನಂಬಿದ್ದುದರಿಂದಲೂ, ತನ್ನ ರಾಜಧಾನಿಯಲ್ಲಿಯೇ ಸನ್ಯಾಸಿಗಳನ್ನು ಉಳಿಸಿಕೊಳ್ಳಲು ಅವನು ಬಯಸಿದನು. ಸನ್ಯಾಸಿಗಳು ತಮ್ಮ ನಾಡಿಗೆ ಹಿಂದಿರುಗಲು ಆತುರ ರಾಗಿದ್ದರು. ಉಪಕಾರಿಯಾದ ರಾಜನ ಮನಸ್ಸನ್ನು ನೋಯಿಸಬಾರದೆಂದು ಅವರು ರಾತ್ರಿ ರಹಸ್ಯವಾಗಿ ಅರಮನೆಯಿಂದ ಪ್ರಯಾಣಮಾಡಿದರು. ಬೆಳಗಾದ ಮೇಲೆ ದೊರೆ ಬಂದು ನೋಡಿ ದಾಗ ಪ್ರತಿಸನ್ಯಾಸಿಯೂ ತನ್ನ ತನ್ನ ಆಸನದ ಮೇಲೆ ಒಂದು ಚೌಪದಿ (ನಾಲಡಿ)ಯನ್ನು ಬರೆದ ಓಲೆಗರಿಯನ್ನು ಬಿಟ್ಟುಹೋಗಿದ್ದನು. ರಾಜನು ಪಂಡಿತರಿಂದ ಆ ಎಂಟುಸಾವಿರ ನಾಲಡಿಗಳನ್ನೂ ಪರೀಕ್ಷೆಮಾಡಿಸಿದನು. ಎಲ್ಲವುಗಳ ಯೋಗ್ಯತೆಯೂ ಒಂದೇ ಸಮನಾಗಿರಲಿಲ್ಲ; ಅವುಗಳಲ್ಲಿ ಉತ್ತಮ ಮಧ್ಯಮ ಸಾಧಾರಣ ಎಲ್ಲವೂ ಇದ್ದವು. ಯಾವುದನ್ನು ಉಳಿಸಿಕೊಳ್ಳಬೇಕು ಯಾವು ದನ್ನು ನಾಶಮಾಡಬೇಕು ಎಂಬುದು ರಾಜನಿಗೂ ಪಂಡಿತರಿಗೂ ಸಮಸ್ಯೆಯಾಯಿತು. ಅಂದಿನ ಪದ್ಧತಿಯಂತೆ ರಾಜ ಎಂಟುಸಾವಿರ ಓಲೆಗರಿಗಳನ್ನೂ "ವೈಗೈ" ನದಿಗೆ ಹಾಕಿಸಿದನು. ನಾಲ್ಕು ನೂರು ಪದ್ಯಗಳ ತಾಳೆಗರಿಗಳನ್ನು ನದಿಯ ಅಲೆಗಳು ದಡಕ್ಕೆ ತೇಲಿಸಿದುವು. ದೊರೆ ಈ ನಾಲ್ಕು ನೂರಕ್ಕೆ ನಾಲಡಿಯಾರ್ ಎಂದು ಹೆಸರಿಟ್ಟನು. ಇನ್ನೂ ಕೆಲವು ಗರಿಗಳು ಪ್ರವಾಹದಲ್ಲಿ ದೂರ ತೇಲಿಹೋಗಿ ಕೊನೆಯಲ್ಲಿ ದಡವನ್ನು ಸೇರಿದುವು. ಅವೂ ಸಹ ಪಟಮೊಟಿ (ಪ್ರಾಚೀನ ಉಕ್ತಿಗಳು) ಮತ್ತು ಅಱನೆಱಿಸಾರಂ (ಸನ್ಮಾರ್ಗಪುರುಳ್) ಎಂಬ ಹೆಸರಿನ ಎರಡು ಗ್ರಂಥಗಳಾಗಿವೆ. ಆದರೆ ಅವು 'ನಾಲಡಿಯಾರ್'ಗಳಷ್ಟು ಪ್ರಸಿದ್ಧವಾಗಿಲ್ಲ. ಬರಿಯ ಅನುಕರಣೆಯಾಗಿ ಮಾತ್ರ ತೋರು ತ್ತವೆ.

ಮೇಲಿನದು ನಾಲಡಿಗಳನ್ನು ಕುರಿತು ಪ್ರಚಾರದಲ್ಲಿರುವ ದಂತಕಥೆ. ಹೀಗೆ ತೇಲಿಬಂದ ನಾಲ್ಕುನೂರು ಚೌಪದಿಗಳನ್ನು ಪದುಮನಾರ್ ಎಂಬುವರು ಹತ್ತು ಹತ್ತು ನಾಲಡಿಗಳುಳ್ಳ ನಲವತ್ತು ಪ್ರಕರಣಗಳಾಗಿ ವಿಷಯಗಳಿಗೆ ಅನುಗುಣವಾಗಿ ವಿಂಗಡಿಸಿದ್ದಾರೆ.

ಸಂಸ್ಕೃತ ಸಾಹಿತ್ಯದ ನೀತಿಶಾಸ್ತ್ರ ಸುಭಾಷಿತಗಳಂತೆ ಪ್ರಾಚೀನ ತಮಿಳರ ಕುರಳ್ ಮತ್ತು ನಾಲಡಿಯಾರ್ ಎಂಬ ಗ್ರಂಥಗಳು. ಅವುಗಳಲ್ಲಿ ಸಾರ್ವಕಾಲಿಕವಾದ ಸರ್ವಮಾನ್ಯ ವಾದ ಗಂಭೀರವಾದ ತತ್ವಗಳು, ಜೀವನವನ್ನು ಕುರಿತ ಚಿಂತನೆಗಳು ಆಧ್ಯಾತ್ಮಬೋಧನೆಗಳು, ಪ್ರಾಸಬದ್ಧವಾದ ಕವಿತೆಯಲ್ಲಿ ಅಡಕವಾಗಿವೆ. ಸಂಸ್ಕೃತದ ಭರ್ತೃಹರಿ ನಮ್ಮ ಸರ್ವಜ್ಞರಂತೆ ತಮಿಳುನಾಡಿನಲ್ಲಿ ಕುಱಳುಕಾರ ಮತ್ತು ನಾಲಡಿಯಾರ್. ಈ ಎರಡು ಗ್ರಂಥಗಳು ತಮಿಳು ಇರುವೆಡೆಗಳಲ್ಲೆಲ್ಲ ಪ್ರಚಾರದಲ್ಲಿವೆ. ಈ ಎರಡು ಗ್ರಂಥಗಳನ್ನೂ ಇಂದಿಗೂ ತಮಿಳುನಾಡಿನಲ್ಲಿ ಬೋಧನೆಮಾಡದ ಶಾಲೆಗಳು ಇಲ್ಲ. ಇವುಗಳ ಪೈಕಿ ಕುಱಳ್ ಈಗಾಗಲೇ ಎಲ್ಲೆಲ್ಲಿಯೂ ಪ್ರಸಿದ್ಧವಾಗಿ ಜನರಿಗೆ ಪರಿಚಿತವಾಗಿದೆ. ಈ ಲೇಖನದಲ್ಲಿ ನಾಲಡಿಯಾರನ್ನು ಕುರಿತು ಸಂಕ್ಷೇಪವಾಗಿ ಪರಿಚಯಮಾಡಿಕೊಡಲು ಯತ್ನಿಸಿದೆ.

ಹೆಸರೇ ಸೂಚಿಸುವಂತೆ ನಾಲಡಿ ಎಂಬುದು ನಾಲ್ಕು ಪಾದಗಳ ಪ್ರಾಸಬದ್ಧ ಕವಿತೆ. ಚೌಪದಿ ಕನ್ನಡದ ಅಕ್ಕರಗಳಂತೆ ಅದು ತಮಿಳು ಸಾಹಿತ್ಯದ ಪ್ರಾಚೀನ ಛಂದಸ್ಸು. ಈ

ಛಂದಸ್ಸಿನ ಪದ್ಯಗಳು ಜ್ಞಾಪಕದಲ್ಲಿಟ್ಟುಕೊಳ್ಳಲು ಸುಲಭಾಗಿ ಬಾಯಿಪಾಠ ಮಾಡಿಕೊಳ್ಳಲು ಸರಾಗವಾಗಿ ಯಾವ ಸಂದರ್ಭಕ್ಕಾದರೂ ಪಠಿಸಲು ಅನುಕೂಲವಾಗುವಂತಹ ವೈವಿಧ್ಯಗಳುಳ್ಳ ವಾಗಿವೆ. ಪುರಾಣ ಹರಿಕಥೆಗಳ ಪ್ರಕರಣದಲ್ಲಿ, ವೇದಾಂತ ಪ್ರಚಾರದಲ್ಲಿ, ಗೃಹಸ್ಥಧರ್ಮ ವೈರಾಗ್ಯ ಮೋಕ್ಷ ಬೋಧನೆಗಳಲ್ಲಿ, ಮಧ್ಯೆ ಮಧ್ಯೆ ಸಂಜಿಕೊಳ್ಳುವ ಉಪ್ಪಿನಕಾಯಿಯಂತೆ—ಆದರೆ ಅತ್ಯಂತ ಗಂಭೀರವಾದ ಉನ್ನತಮಟ್ಟದ ತತ್ವಗಳನ್ನೊಳಗೊಂಡು—ಇವು ಇಂದಿಗೂ ಪಂಡಿತ ಪಾಮರರ ಬಾಯಲ್ಲಿ ಉಚ್ಚಾರವಾಗುತ್ತಿವೆ. ನಾಲಡಿಯಾರ್ ನೀತಿಬೋಧೆಗಾಗಿ ಸತ್ಯಪ್ರಚಾರಕ್ಕಾಗಿ ಉನ್ನತ ಆದರ್ಶಪ್ರಚಾರಕ್ಕಾಗಿ ಸುಲಭವಾಗಿ ಜ್ಞಾಪಕದಲ್ಲಿಟ್ಟುಕೊಳ್ಳಲು ಅನುಕೂಲವಾಗುವಂತೆ ರಚಿತವಾಗಿರುವ ಚೌಪದಿ. ಆದರೂ ಇವುಗಳಲ್ಲಿ ಕೆಲವೆಡೆ ಅತ್ಯುತ್ತಮ ಕವಿತಾಗುಣಗಳು ಇವೆ. ಇವುಗಳನ್ನು ರಚಿಸಿದವರು ಮುಖ್ಯವಾಗಿ ನೀತಿಬೋಧಕರೂ ಧರ್ಮ ಸ್ಥಾಪಕರೂ ಆಗಿದ್ದರೂ ಸಹ ಅವರು ಕವಿಗಳೂ ಆಗಿದ್ದರು. ಕೆಲವು ನಾಲಡಿಗಳನ್ನು ನೋಡಿದ ರಂತೂ ಹುಟ್ಟುಕವಿಗಳು ನೀತಿಬೋಧಕರಾಗಲು ಇಚ್ಛಿಸಿದರೆಂದು ಭಾವಿಸಬಹುದು. ಹೀಗೆ ನಾಲಡಿಗಳಲ್ಲಿ ಕಾವ್ಯಗುಣ ವಿಶೇಷವಾಗಿರುವುದರಿಂದ ಇವು ಸಂದರ್ಭೋಚಿತ ಉಕ್ತಿಗೆ ಅರ್ಹವಾಗಿವೆ. "ನಾಲುಂ ಇರಂಡುಂ ಶೊಲ್ಲುಕ್ಕು ಉರುದಿ" ಕುರುಳಿನ ದ್ವಿಪದಿಗಳೂ ನಾಲಡಿ ಯಾರ್ ಚೌಪದಿಗಳೂ ನೀತಿ ಪ್ರಚಾರೋಕ್ತಿಗಳಿಗೆ ಅತ್ಯುತ್ತಮವಾದುವು.

ವಿಶಾಲವಾದ ತಮಿಳು ಗ್ರಂಥರಾಶಿಯಲ್ಲಿ ನಾಲಡಿ (ಚೌಪದಿ)ಗಳು ಹೇರಳವಾಗಿವೆ. ಆದರೆ ನಾಲಡಿ ಎಂದ ಕೂಡಲೇ ತಮಿಳರಿಗೆ ಈ ನಾಲ್ಕುನೂರು ನಾಲಡಿಗಳೇ ಎಂದು ಅರ್ಥವಾಗು ವುದರಿಂದ ಇವು ಅತ್ಯಂತ ಪ್ರಾಚೀನವಾದುವುಗಳಿರಬೇಕು. ಇವು ಹುಟ್ಟಿ ಒಂದೂವರೆ ಸಾವಿರ ವರುಷಗಳಾಗಿರಬಹುದೆಂದು ಪಂಡಿತರು ಅಭಿಪ್ರಾಯಪಡುತ್ತಾರೆ.

ಜೈನಸನ್ಯಾಸಿಗಳು ಇವನ್ನು ರಚಿಸಿದರೂ ಇವುಗಳಲ್ಲಿ ಜೈನಧರ್ಮ ಪ್ರಚಾರ ಎಲ್ಲಿಯೂ ಅಷ್ಟೇನೂ ಇಲ್ಲ. ಇವುಗಳಲ್ಲಿ ಹೇಳಿರುವುದು ಸರ್ವರಿಗೂ ಸರ್ವಕಾಲಕ್ಕೂ ಬೇಕಾಗುವ ಸತ್ಯ ಗಳು. ಅನೇಕ ನಾಲಡಿಗಳಲ್ಲಿ ಸಂಸ್ಕೃತ ಸುಭಾಷಿತ ಮತ್ತು ಮಹಾಭಾರತ ಶ್ಲೋಕಗಳ ಅಭಿ ಪ್ರಾಯಗಳು ಅಡಕವಾಗಿವೆ. ಇದರಲ್ಲಿರುವ ಚೌಪದಿಗಳೆಲ್ಲ ಹೆಚ್ಚಾಗಿ ನಿವೃತ್ತಿಮಾರ್ಗ ಪರವೇ ಆಗಿವೆ; ಮನುಷ್ಯಜನ್ಮ ಬರಿಯ ಸೌಖ್ಯಕ್ಕಾಗಿ ಅಲ್ಲ. ಸುಖ ಶಾಶ್ವತವಲ್ಲ, ಅದನ್ನು ಇತರ ರೊಂದಿಗೆ ಹಂಚಿಕೊಳ್ಳಿ; ಯೌವನ ಶಾಶ್ವತವಲ್ಲ, ಯೌವನದಲ್ಲಿಯೇ ವಿವೇಕ ಗಳಿಸಿಕೊಳ್ಳಿ; ದೇಹ ಅಶಾಶ್ವತ; ಸತ್ಯ ಸರ್ವಶಕ್ತ; ಶುದ್ಧರಾಗಿರಿ, ತ್ಯಾಗಿಗಳಾಗಿ, ಕ್ರೋಧ ಬಿಡಿ, ಸಹನೆ ಇರಲಿ, ಪರಸ್ತ್ರೀಯ ಆಸೆ ಬಿಡಿ, ಉದಾರಿಗಳಾಗಿ, ನಿಮ್ಮ ಕರ್ಮಫಲವನ್ನು ನೀವು ಅನುಭವಿಸಿಯೇ ತೀರ ಬೇಕು, ದುಷ್ಕಾರ್ಯಗಳಿಂದ ಹಿಂದೆಗೆಯಿರಿ, ಜ್ಞಾನವನ್ನು ಸಂಪಾದಿಸಿ, ಹಿರಿಯರನ್ನು ಅವಮಾನ ಗೊಳಿಸಬೇಡಿ, ಒಳ್ಳೆಯವರೊಂದಿಗೇ ಸೇರಿ, ನೈತಿಕ ಆದರ್ಶ ಹಿಡಿದು ಕೆಲಸಮಾಡಿ, ಬಂಧುಗಳನ್ನು ರಕ್ಷಿಸಿ, ವಿವೇಕದಿಂದ ಸ್ನೇಹಿತರನ್ನು ಆರಿಸಿಕೊಳ್ಳಿ, ಮಿತ್ರರ ದೋಷಗಳನ್ನು ಸಹಿಸಿಕೊಳ್ಳಿ; ಇವು ನಾಲಡಿಯಾರ್‌ನ ಬೋಧನೆಗಳ ಸಾರಾಂಶ. ಉನ್ನತವಾದ ನೈತಿಕ ಆದರ್ಶ, ಸತ್ಯಪ್ರೇರಣೆ, ಸ್ವಾರ್ಥತ್ಯಾಗ ಔದಾರ್ಯ ಆತ್ಮಜ್ಞಾನ ಇವುಗಳನ್ನು ಸ್ಥಾಪಿಸುವುದೇ ನಾಗರಿಕ ಮತ್ತು ಸುಸಂಸ್ಕೃತ ಜೀವನದ ಗುರಿ. ಪ್ರಾಚೀನ ತಮಿಳು ಸಾಹಿತ್ಯ ಈ ಗುರಿಯನ್ನು ಎಂದಿಗೂ ಮರೆಯ ಲಿಲ್ಲ. ಬಿಗಿಯಾದ ಶೈಲಿ, ಅತಿ ಮಿತವಾದ ಮಾತು, ಎಲ್ಲರಿಗೂ ತಿಳಿಯುವ ಉದಾಹರಣೆಗಳು, ಜ್ಞಾಪಕದಲ್ಲಿಟ್ಟುಕೊಳ್ಳಲು ಅನುಕೂಲವಾಗುವ ಶ್ಲೇಷಾರ್ಥಗಳುಳ್ಳ ಪದಸಮೂಹ ಇವುಗಳಿಂದ ನಾಲಡಿಯಾರ್ ತಮಿಳರಿಗೆ ಅತ್ಯಂತ ಪ್ರಿಯವಾಗಿದೆ. ಸಂಸ್ಕೃತವು ವಿದ್ವಜ್ಜನರ ಭಾಷೆ ಯಾದರೂ, ದೇಶಭಾಷೆಯಲ್ಲಿ ನೀತಿಬೋಧೆಮಾಡುವ ಉದ್ದೇಶದಿಂದ ಪ್ರಾಚೀನ ಕಾಲ ದಲ್ಲಿಯೇ, ಈ ತಮಿಳು ಗ್ರಂಥಗಳು ಹುಟ್ಟಿದವು. ಈ ದೃಷ್ಟಿಯಲ್ಲಿ ಕನ್ನಡದಲ್ಲಿ ಹೇಗೋ ಹಾಗೆ ತಮಿಳಿನಲ್ಲಿಯೂ ಜೈನರು ಸಂಸ್ಕೃತ ತಿಳಿಯದವರಿಗೆ ತುಂಬ ಸೇವೆಮಾಡಿರುವುದು ವೇದ್ಯವಾಗುತ್ತದೆ.

ಪ್ರತಿಯೊಂದು ನಾಲಡಿಯೂ ತನ್ನಲ್ಲಿಯೇ ಪೂರ್ಣವಾಗಿದೆ. ಉದಾಹರಣೆಗಳನ್ನು ಆರಿಸಿ ಕೊಡುವುದು ಕಷ್ಟ. ಎಲ್ಲವೂ ಉತ್ತಮವಾಗಿದೆ. ಅವುಗಳ ಬೋಧನೆಗಳಲ್ಲಿ ಕೆಲವನ್ನು ಹೀಗೆ ಸಂಗ್ರಹಿಸಬಹುದು: "ಆನೆಯೇರಿ ಶ್ವೇತಛತ್ರಿಯನ್ನು ಹಿಡಿಸಿಕೊಂಡು ಸೇನೆಯ ಮುಖಂಡರಾಗಿ ಇಂದು ಹೋದವರು ನಾಳೆ ಶತ್ರುಗಳಿಂದ ನಾಶಹೊಂದುವರು, ಅವರ ಹೆಂಡಿರನ್ನು ಶತ್ರುಗಳು ಸೆರೆಹಿಡಿದು ಎಳೆದುಕೊಂಡು ಹೋಗುವರು; ಇದು ಶಾಶ್ವತ ಇದು ಶಾಶ್ವತ ಎಂದು ನೀನು ಹೇಳಿಕೊಂಡವೆಲ್ಲ ಒಂದೂ ನಿಲ್ಲಲಿಲ್ಲ, ನಿನ್ನ ಬಾಳ ದಿನಗಳು ಕಳೆಯುತ್ತಿವೆ, ಕಳೆಯುತ್ತಿವೆ, ಮರಣ ಬರುತ್ತಿದೆ, ನಿನ್ನ ಕರ್ತವ್ಯವನ್ನು ಮಾಡು; ಮನೆ ಯೌವನ ಸೌಂದರ್ಯ ಅಧಿಕಾರ ಧನ ಶಕ್ತಿ ಎಲ್ಲ ನಾಶವಾಗುವುದನ್ನು ಅರಿತು ವಿವೇಕಿಗಳು ವಿರಕ್ತಿಮಾರ್ಗವನ್ನು ಅವಲಂಬಿಸುತ್ತಾರೆ; ತಮ್ಮನ್ನು ಗೌರವಿಸುವವರು ಗೌರವಿಸಲಿ, ದೂರುವವರು ದೂರಲಿ, ಆದರೆ ತಮ್ಮ ತಲೆಯೇರಿದ ಒಂದು ಕೊಳಕು ಸೂಣವನ್ನು ಸಹ ಜ್ಞಾನಿಗಳು ನಾಶಮಾಡುವುದಿಲ್ಲ; ಚೆನ್ನಾಗಿ ಯೋಚಿಸದೆ ಮಾತನಾಡುವವನ ಮಾತು ಬೆಂಕಿಯಂತೆ ಅವನನ್ನೇ ಸುಡುವುದು, ನಿಧಾನವಾಗಿ ಯೋಚಿಸುವ ವಿವೇಕಿಗಳು ಕೋಪದಲ್ಲಿ ಸಹ ಕ್ರೂರವಾಗಿ ಮಾತನಾಡುವುದಿಲ್ಲ; ಯುವಕನ ಸಂಯಮವೇ ಸಂಯಮ, ದರಿದ್ರನು ಮಾಡುವ ದಾನವೇ ದಾನ, ಶಿಕ್ಷಿಸಲು ಶಕ್ತಿಯಿರುವವನ ಕ್ಷಮೆಯೇ ಕ್ಷಮೆ; ನಾಯಿಯು ನಮ್ಮನ್ನು ಕಡಿದರೆ ನಾವು ಅದನ್ನು ಕಡಿಯುವುದಿಲ್ಲ, ಹಾಗೆಯೇ ನೀಚರು ಕೆಟ್ಟಮಾತುಗಳನ್ನಾಡಿದರೆ ವಿವೇಕಿಗಳು ತಾವೂ ಅಂತಹ ಮಾತುಗಳನ್ನು ಎಂದಿಗೂ ಆಡುವುದಿಲ್ಲ; ತಿಳಿಯಬೇಕಾದುದನ್ನು ತಿಳಿದು ಅದಕ್ಕೆ ವಿಧೇಯರಾಗಿ, ಹೆದರಬೇಕಾದುದಕ್ಕೆ ಹೆದರಿ ತಮ್ಮ ಕರ್ತವ್ಯವನ್ನು ಲೋಕೋಪಕಾರಕ್ಕಾಗಿ ಮಾಡುತ್ತ ದೊರೆತ ಸುಖವನ್ನು ಅನುಭವಿಸುವವರಿಗೆ ಕಷ್ಟಗಳು ಸಂಭವಿಸುವುದಿಲ್ಲ; ನೀನು ಕೆಟ್ಟರೂ ಇತರರಿಗೆ ಕೇಡೆಣಿಸಬೇಡ, ಹಸಿವಿನಿಂದ ಸಾಯುತ್ತಿದ್ದರೂ ಅಯೋಗ್ಯನ ಕೈಯ ಅನ್ನವನ್ನು ತಿನ್ನಬೇಡ, ಅಂತರಿಕ್ಷವೇ ಗುಮ್ಮಟವಾದ ಭೂಮಂಡಲವೇ ನಿನಗೆ ದೊರೆತರೂ ಸುಳ್ಳು ಆಡಬೇಡ; ಲಜ್ಜಾಹೀನರೇ ನಿಮ್ಮ ನೆರೆಯವರ ಹೆಂಡಿರನ್ನು ಬಯಸಬೇಡಿ, ಅದರಲ್ಲಿ ಭಯ ಅಧಿಕ, ಅದರಿಂದ ಉಂಟಾಗುವ ಸುಖ ಕ್ಷಣಿಕ, ದಿನದಿನವೂ ಅದು ಪ್ರಕಟವಾದರೆ ಮರಣದ ಭಯ, ಅದರಿಂದ ಎಂದಿಗೂ ನೋವು, ಅಪಾಯ; ನೆರೆಯವರ ಹೆಂಡಿರನ್ನು ಬಯಸುವವನ ಸದ್ಗುಣ ಸ್ನೇಹ ಹೆಚ್ಚುಗಾರಿಕೆ ಘನತೆ ಯಾವುದಕ್ಕೂ ಬೆಲೆಯಿಲ್ಲ, ಹಗೆತನ ಕೇಡು ಪಾಪ ಭಯ ಇವು ನಾಲ್ಕು ಎಂದಿಗೂ ಅಂತಹವರ ಮಿತ್ರರು; ಪ್ರವೇಶಿಸುವಾಗ ಭಯ, ಹಿಂದಿರುಗುವಾಗ ಭಯ, ಒಳಗಿರುವಾಗ ಭಯ, ರಹಸ್ಯವನ್ನು ಕಾಯ್ದುಕೊಳ್ಳಬೇಕಾದ ಭಯ, ಯಾವಾಗಲೂ ಭಯವೇ, ಹೀಗಿದ್ದರೂ ಯಾಕೆ ನೆರೆಯುವನ ಮನೆ?; ಎಷ್ಟೇ ಕಡಿಮೆಯಾದರೂ ಸರಿಯೆ ನಿತ್ಯ ಸ್ವಲ್ಪವಾದರೂ ದಾನಮಾಡಿದ ನಂತರವೇ ನಿಮ್ಮ ಊಟಮಾಡಿ, ಇಲ್ಲದಿದ್ದರೆ ಅದು ಎಂತಹ ಗೃಹಸ್ಥನ ಮನೆ!; ಪ್ರತ್ಯುಪಕಾರ ಮಾಡಲು ಶಕ್ತಿಯಿಲ್ಲದವನಿಗೆ ಕೊಡಿ, ಪ್ರತ್ಯುಪಕಾರ ಮಾಡುವವನಿಗೆ ಕೊಡುವುದು ಬಡ್ಡಿಗಾಗಿ ಹಣಕೊಟ್ಟಂತೆ; ಹಸುಗಳು ಹಲವು ಬಗೆ, ಆದರೂ ಅವು ಕೊಡುವ ಹಾಲು ಒಂದೇ ಬಗೆ, ಹಾಗೆಯೇ ಸತ್ಯ ಒಂದು, ಅದನ್ನು ಪ್ರಚಾರಮಾಡುವ ಮತಗಳೂ ಧರ್ಮಗಳೂ ಬೇರೆ ಬೇರೆ; ಯೋಚಿಸಿ ನೋಡಿ, ಜಗತ್ತಿನ ದೂಷಣೆಗೆ ಪಾತ್ರರಾಗದವರು ಯಾರು? ವಿವೇಕ ಉಪಾಯಗಳಿಂದ ತಮ್ಮ ಉನ್ನತಿ ಸಾಧಿಸಿಕೊಳ್ಳದವರು ಯಾರು, ಬಾಳಿನಲ್ಲಿ ತೀವ್ರವಾದ ದುಃಖವನ್ನು ಅನುಭವಿಸದವರು ಯಾರು, ತಮ್ಮ ಜೀವಮಾನ ಪೂರ್ತ ತಾವು ಸಂಪಾದಿಸಿದ ಐಶ್ವರ್ಯವನ್ನು ಇಟ್ಟುಕೊಂಡವರು ಯಾರು?; ಕುರುಳ ಸೌಂದರ್ಯ ನಿಜವಾದ ಸೌಂದರ್ಯವಲ್ಲ, ಉಡುಪಿನ ಸೌಂದರ್ಯವೂ ಸೌಂದರ್ಯವಲ್ಲ, ಜ್ಞಾನದಿಂದ ಮನಶ್ಶಾಂತಿಯುಂಟುಮಾಡುವ ಹೃದಯದ ಸೌಂದರ್ಯವೇ ಸೌಂದರ್ಯ; ನದಿಯನ್ನು ದಾಟುವವನು, ಅಂಬಿಗ ಕೀಳುಜಾತಿಯವನೆನ್ನುವುದಿಲ್ಲ, ಹಾಗೆಯೇ ಜ್ಞಾನ ಯಾರಲ್ಲಿರಲಿ ಅವನು ಯಾವ ಜಾತಿಯವನಾಗಿರಲಿ, ಆ ಜ್ಞಾನವನ್ನು ನಾವು ಸಂಪಾದಿಸಿಕೊಳ್ಳಬೇಕು; ಅಸೂಯಾರಹಿತರಾದ ತೀಕ್ಷ್ಣಬುದ್ಧಿಯ ರಸಿಕರ ನಗುವಿಗೆ ಸಮ

ನಾದ ಸುಖ ಸ್ವರ್ಗದಲ್ಲಿಯೂ ಇಲ್ಲ; ಲಾಭವಾಗಲಿ ನಷ್ಟವಾಗಲಿ ವಿವೇಕಿಗಳು ಯೋಗ್ಯ ವಾದ ಕೆಲಸವನ್ನೇ ಮಾಡುತ್ತಾರೆ; ಸಿಂಹಕ್ಕೆ ಇಟ್ಟ ಗುರಿ ತಪ್ಪಿದರೂ ಅದು ನರಿಯನ್ನು ಕೊಲ್ಲು ವುದಕ್ಕಿಂತ ಉತ್ತಮವಲ್ಲವೆ?; ಇತರರ ರಹಸ್ಯದ ವಿಷಯದಲ್ಲಿ ಮೂಗನಾಗಿರು, ನೆರೆಯವನ ಹೆಂಡತಿಯ ವಿಷಯದಲ್ಲಿ ಕುರುಡನಾಗಿರು, ಹಿಂದೆ ನಿನ್ನನ್ನು ದೂರುವವರ ವಿಷಯದಲ್ಲಿ ಮೂಗ ನಾಗಿರು, ಇವನ್ನು ಅರಿತು ನಡೆಯುವವನು ಅರಿಯಬೇಕಾದ ಜ್ಞಾನ ಯಾವುದೂ ಇಲ್ಲ; ದೊಡ್ಡವರ ಗುಣ ಅವರ ವಿನಯವೇ, ಸಂಯಮವೇ ಸಂಪಾದಿಸಬಹುದಾದ ದೊಡ್ಡ ಆಸ್ತಿ, ತನ್ನನ್ನು ಬೇಡುವವರ ಕಷ್ಟವನ್ನು ಪರಿಹರಿಸುವವರೇ ನಿಜವಾದ ಧನಿಕರು; ಮೃದುವಾಗಿರು ವವರಲ್ಲಿ ಅವರಗಿಂತ ಹೆಚ್ಚು ಮೃದುವಾಗಿರು, ವಿರೋಧಿಗಳಿಗಿದಿರಾಗಿ ಅವರಿಗಿಂತ ಹೆಚ್ಚು ಕೋಪ ತೋರಿಸು, ಛಲವುಳ್ಳವರೊಡನೆ ವ್ಯವಹರಿಸುವಾಗ ಅವರಿಗಿಂತ ಹೆಚ್ಚು ಛಲವುಳ್ಳವನಾಗು, ಒಳ್ಳೆಯವರೊಂದಿಗೆ ಒಳ್ಳೆಯವನಾಗಿರು, ಇದೇ ನಿನ್ನ ಜೀವನದ ನಿಯಮವಾಗಿರಲಿ; ಹಿಡಿದ ಕಾರ್ಯದಲ್ಲಿ ಜಯವಾಗದಿದ್ದರೂ ವಿಚಲಿತನಾಗದೆ ಧೀರನಾಗಿರುವುದೇ ಪುರುಷತ್ವ, ಎಲ್ಲವೂ ಸುಖವಾಗಿರುವಾಗ ಹೆಂಗಸರು ಸಹ ಉತ್ಸಾಹದಿಂದ ಬಾಳುತ್ತಾರೆ; ಧನಿಕರು ಕರುಣೆಯಿಂದ ಕೊಡುವ ಮೃಷ್ಟಾನ್ನದಿಂದ ಜೀವಿಸುವವನು ಅಧಮ, ಆದರೆ ತನ್ನ ಕಷ್ಟದಿಂದ ಸಂಪಾದಿಸಿದ ನೀರು ಸಹ—ಮೃಷ್ಟಾನ್ನದ ಹೆಸರನ್ನೂ ಅರಿಯದವರಿಗೆ—ಅಮೃತವಾಗುತ್ತದೆ; ಉರಿಬಿಸಿಲಿನಲ್ಲಿ ತನ್ನಲ್ಲಿ ಬಂದವರಿಗೆ ನೆಳಲು ಕೊಡುವ ಮರದಂತೆ ಎಲ್ಲರಿಗೂ ಆಶ್ರಯನಾಗಿ ಹಣ್ಣು ಬಿಡುವ ಮರದಂತೆ, ಎಲ್ಲರಿಗೂ ಉಪಕಾರಿಯಾಗಿ ಜೀವಿಸುವುದೇ, ನಿಜವಾದ ಪುರುಷತ್ವದ ಲಕ್ಷಣ; ಪ್ರೇಮವಿಲ್ಲ ದವರ ಮನೆಯ ಹಾಲುಸಕ್ಕರೆ ಬೆರೆದ, ಹುಲಿಯುಗುರಿನಂತೆ ಬೆಳ್ಳಗಿರುವ ಸೊಗಸಾದ ಸಣ್ಣಕ್ಕಿಯ ಅನ್ನಕ್ಕಿಂತ ಪ್ರಿಯರಾದ ಬಂಧುಗಳ ಮನೆಯ ಉಪ್ಪಿಲ್ಲದ ಊಟ ಹೆಚ್ಚು ಹಿತವಾಗಿರುತ್ತದೆ; ಮೂರ್ಖರ ಸ್ನೇಹಕ್ಕಿಂತ ಅವರ ದ್ವೇಷವೇ ಉತ್ತಮ, ಗುಣವಾಗದ ರೋಗಕ್ಕಿಂತ ಮರಣವೇ ಮೇಲು, ತಿರಸ್ಕಾರಕ್ಕಿಂತ ಸಾವು ಉತ್ತಮ, ತನಗೆ ಅರ್ಹತೆಯಿಲ್ಲದೆ ಹೊಗಳಿಸಿಕೊಳ್ಳುವುದಕ್ಕಿಂತ ಬೈಗಳವೇ ಉತ್ತಮ; ಜ್ಞಾನದ ದಾರಿದ್ರ್ಯವೇ ದಾರಿದ್ರ್ಯ, ಜ್ಞಾನವಿರುವುದೇ ದೊಡ್ಡ ಐಶ್ವರ್ಯ, ಪುರುಷರೂ ಸಹ ಸ್ತ್ರೀಯರಿಗಿಂತ ಹೆಚ್ಚು ಸ್ತ್ರೀಯರಾಗಿ ಆಭರಣಗಳನ್ನು ಸಹ ಧರಿಸುತ್ತಾರಲ್ಲ!; ಬಾಲ್ಯದಲ್ಲಿ ತನ್ನ ತಂದೆ 'ವ್ಯಾಸಂಗಮಾಡು' ಎಂದು ಆಗ್ರಹದಿಂದ ಬಲಾತ್ಕರಿಸಿದಾಗ ತಿರಸ್ಕರಿ ಸಿದವನು, ಸಭೆಯಲ್ಲಿ ಒಬ್ಬನು ವಿನಯದಿಂದ ಅವನಿಗೆ ಓದಲು ಒಂದು ಓಲೆ ಕೊಟ್ಟಾಗ ಅವಮಾನಿತ ನಾದವನಂತೆ, ಓಲೆ ಕೊಟ್ಟವನ ಮೇಲೆಯೇ ತಿರುಗಿಬಿದ್ದನು; ಅವಿವೇಕಿಗಳು ದಾರಿದ್ರ್ಯ ಅಥವಾ ರೋಗ ಬಂದಾಗ ವಿರಕ್ತರಾಗುತ್ತಾರೆ, ಹಣ ಸಂಪಾದನೆಯಾಗುತ್ತಿದ್ದರೆ ಪರವನ್ನು ಕುರಿತು ಸಾಸಿವೆಯಷ್ಟೂ ಯೋಚಿಸುವುದಿಲ್ಲ; ಅಲ್ಪರಿಗಿಂತ ಕಲ್ಲುಗಳೇ ಉತ್ತಮ, ಯಾಕೆಂದರೆ ಕಲ್ಲು ಗಳಿಗೂ ನಾವು ಹೇಳುವ ಮಾತುಗಳು ತಿಳಿಯದಿದ್ದರೂ ಅವು ಉಪಯೋಗಿಸುವವರಿಗೆ ಕೆಲಸಕ್ಕೆ ಒದಗುತ್ತವೆ, ಎಲ್ಲಿ ಅವುಗಳನ್ನು ಇಟ್ಟರೆ ಅಲ್ಲಿ ಇರುತ್ತವೆ; ಜಾಡಿಯಲ್ಲಿ ತುಪ್ಪವಿದ್ದರೆ ಒಳಕ್ಕೆ ಪ್ರವೇಶಿಸಲು ಆಗದಿದ್ದರೂ ಅದರ ಬಾಯಿನಲ್ಲಿ ಇರುವೆಗಳು ಮುತ್ತಿರುತ್ತವೆ, ಹಾಗೆ ಧನಿಕರು ಏನನ್ನೂ ಕೊಡುವುದಿಲ್ಲವೆಂದು ತಿಳಿದಿದ್ದರೂ ಜನರು ಅವರ ಸುತ್ತ ತಿರುಗುತ್ತಿರುತ್ತಾರೆ; ಯೋಗ್ಯರಿಗೆ ಏನಾದರೂ ಒಳ್ಳೆಯದು ಸಂಭವಿಸಿದರೆ ಅದರಿಂದ ಅವರ ಸ್ವಭಾವ ವ್ಯತ್ಯಾಸ ವಾಗುವುದಿಲ್ಲ, ಅವರು ಎಂದಿನಂತೆ ಯೋಗ್ಯರಾಗಿಯೇ ಉಳಿಯುತ್ತಾರೆ, ಹಾಗೆಯೇ ನೀಚನಿಗೆ ಒಳ್ಳೆಯದಾದರೆ ಅವನ ಸ್ವಭಾವವೂ ಬದಲಾಯಿಸುವುದಿಲ್ಲ, ಅಂದರೆ ಅವನೂ ತನ್ನ ನೀಚತನ ವನ್ನು ಬಿಡುವುದಿಲ್ಲ: ಮೋಡಗಳನ್ನು ಮುಟ್ಟುವ ಮಹಡಿಮನೆ, ಅದಕ್ಕೆ ಒಪ್ಪುವ ಕಾವಲು ಗಾರರು, ಒಳಗೆ ದೀಪಗಳಂತೆ ಜ್ವಲಿಸುವ ಮುತ್ತು, ರತ್ನಗಳು, ಆದರೇನು? ಸುಂದರಿಯಾದ ಹೆಂಡತಿಯಿಲ್ಲದ ಮೇಲೆ ಆ ಮನೆ, ಪ್ರವೇಶಿಸಲು ಕಷ್ಟವಾದ ಕಾಡು; ಗಂಡನನ್ನು ಎದುರಿಸುವ ಹೆಂಡತಿಯೇ ಸಾವು, ಎದ್ದವಳೇ ಅಡಿಗೆಮನೆ ಸೇರದ ಹೆಂಡತಿ ಒಂದು ರೋಗ, ಮಾಡಿದುದನ್ನು ಅತಿಥಿಗಳಿಗೆ ಸಂತೋಷದಿಂದ ಬಡಿಸದವಳು ಒಂದು ಪಿಶಾಚಿ, ಈ ಮೂರು ಪತಿಯನ್ನೇ

ಕೊಲ್ಲುವ ಕತ್ತಿಗಳು ; ಉತ್ತಮರು ಜ್ಞಾನ ಸಂಪಾದನೆಗಾಗಿಯೇ ಕಾಲ ಕಳೆಯುತ್ತಾರೆ, ಮಧ್ಯಮರು ಸುಖಭೋಗದಲ್ಲಿ ಕಳೆಯುತ್ತಾರೆ, ಅಧಮರು ನಮಗೆ ಹೊಟ್ಟೆತುಂಬ ಸುಖ ಭೋಜನ ಸಿಕ್ಕಲಿಲ್ಲವಲ್ಲ ಎಂದು ಕೋಪಿಸಿಕೊಂಡು ನಿದ್ರೆ ಕೆಡುತ್ತಾರೆ ; ಪ್ರಿಯ ಬಂಧುಗಳು ತಮ್ಮ ಹೃದಯ ವೇದನೆಯನ್ನು ಹೇಳಿದರೆ ಅದನ್ನು ಅರಿಯಲಾರದವರು ಯೋಗ್ಯರಾದರೆ ಕಮರಿಯಿಂದ ದುಮುಕಿ ಸಾಯುವುದು ಲೇಸು ; ವೇಶ್ಯೆಯರ ಪ್ರೇಮವೂ ದೀಪದ ಬೆಳಕೂ ಎರಡೂ ಒಂದೇ, ಎಣ್ಣೆ ಮುಗಿದ ಕೂಡಲೇ ದೀಪ ಆರುತ್ತದೆ, ಧನಿಕನ ಹಣವೆಲ್ಲ ಮುಗಿದ ಕೂಡಲೇ ವೇಶ್ಯೆಯ ಪ್ರೇಮವೂ ಸಿಲ್ಲುತ್ತದೆ ; ಶೆಂಗಣ್‌ಮಾಲ್ (ಲಕ್ಷ್ಮಿ)ಯಂತೆ ವಿಟನು ಎಷ್ಟೇ ಉದಾರಿಯಾಗಿದ್ದರೂ, ಅವನಲ್ಲಿ ಧನವಿಲ್ಲದಾಗ ಮೊಗ್ಗು ಬೆರಳಿನ ವೇಶ್ಯೆಯರು ಅವನನ್ನು ಕೈಜೋಡಿಸಿ ನಮಸ್ಕರಿಸಿ ತಿರಸ್ಕರಿಸಿ ಬಿಡುತ್ತಾರೆ ; ಸ್ತ್ರೀಯರು ಇಂದ್ರಾಣಿಯರಂತೆ ಸುಂದರಿಯರೂ ಪತಿವ್ರತೆಯರೂ ಆಗಿರಬಹುದು, ಆದರೆ ಅವರೂ ಸಹ ತಮ್ಮನ್ನು ಅನುಸರಿಸುವ ಕಾಮುಕರ ಕಣ್ಣುಗಳಿಂದ ಮರೆಯಾಗಿರುತ್ತಾರೆ, ಯಾಕೆಂದರೆ ಅಂತಹ ಎಚ್ಚರಿಕೆಯಿಂದ ಸುಗಂಧಯುಕ್ತ ಸಿರಿಮುಡಿಯರಿಗೆ ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಸುಲಭವಾಗುವುದು ; ಒಡತನದಿಂದ ಸಂಸಾರವೆಲ್ಲ ಬರಿಯ ನೀರನ್ನೇ ಕುದಿಸಿ ಕುಡಿಯುತ್ತಿರುವ ಕಾಲದಲ್ಲಿ ಸಹ, ಸಮುದ್ರದ ನೀರನ್ನೆಲ್ಲ ಹೀರುವಷ್ಟು ಮಂದಿ ಬಂಧುಗಳು ಬಂದರೂ, ಔದಾರ್ಯ ಸಮುದ್ರವೇ ಆಗುವ ಗೃಹಿಣಿಯೇ ಮನೆಗೆ ಭೂಷಣ ; ಮನೆಯ ಗೋಡೆಗಳು ನಾಲ್ಕು ಕಡೆಯೂ ಬೀಳುತ್ತಿರಬಹುದು, ಎಲ್ಲೆಲ್ಲಿಯೂ ಮಳೆ ಸೋರುತ್ತಿರಬಹುದು, ಆದರೂ ಗೃಹಿಣಿ ಎಲ್ಲರ ಬಾಯಿನಿಂದಲೂ ಹೊಗಳಿಸಿಕೊಳ್ಳುವ ಸದ್ಗುಣಿಯಾದರೆ, ಅದೇ ನಿಜವಾದ ಮನೆ ; ಕಣ್ಣಿಗೆ ಇಂಪಾಗಿ ಗಂಡನಿಗೆ ಪ್ರೇಯಸಿಯಾಗಿ, ಎಲ್ಲರ ಗೌರವಕ್ಕೆ ಪಾತ್ರಳಾಗಿ, ತನ್ನ ಗಾಂಭೀರ್ಯ ಸಂಯಮ ಲಜ್ಜೆಯಿಂದ ಊರವರನ್ನು ನಾಚಿಸುವಳಾಗಿ ವಿನಯಶೀಲಳಾಗಿ ಆವಶ್ಯಕವಾದಲ್ಲಿ ಖಂಡಿತವಾಗಿ—ಆದರೂ ಮೃದುವಾಗಿರುವವಳೇ ನಿಜವಾದ ಹೆಂಡತಿ ; ಆಲಿಂಗನವಿಲ್ಲದಿದ್ದರೆ ಆಕೆಯ ಮುಖ ಕಪ್ಪು ಆಗುವುದು, ಪ್ರೇಮಕಲಹವಿಲ್ಲದಿದ್ದಲ್ಲಿ ಪ್ರೇಮಕ್ಕೆ ಕಾವು ಇಲ್ಲ, ಕಲಹ ಆಲಿಂಗನ ಇದೇ ಪ್ರೇಮದ ಮಾರ್ಗವೆಂದು ತೋರುತ್ತದೆ ; ಎಲ್ಲರೂ ವಿಶ್ರಾಂತಿ ಹೊಂದುವ ಸಂಧ್ಯಾಕಾಲ, ಆಕೆ ತೋಟದ ಹೂವುಗಳನ್ನೆಲ್ಲ ಆಯ್ದು ಒಂದು ಹಾರವನ್ನು ಕಟ್ಟಿದಳು, ಅನಂತರ ಅದನ್ನು ನೆಲಕ್ಕೆ ಎಸೆದು 'ಒಂಟಿಯಾಗಿ ಕೊರಗುತ್ತಿರುವ ನನಗೆ ಈ ಹಾರದಿಂದ ಏನು ಪ್ರಯೋಜನ ?' ಎಂದು ಅತ್ತಳು ; ಮುಳುಗುತ್ತಿರುವ ಸೂರ್ಯನನ್ನು ನೋಡುತ್ತ ಅತ್ತು ಅತ್ತು ಕೆಂಪಾದ ಕಣ್ಣುಗಳುಳ್ಳವಳಾಗಿ, ಕಣ್ಣುಗಳಲ್ಲಿ ತುಂಬುತ್ತಿರುವ ನೀರು ಹನಿಗಳನ್ನು ತನ್ನ ಮೃದುವಾದ ಬೆರಳುಗಳಿಂದ ತೊಡೆಯುತ್ತಾ, ಮಂಚದಮೇಲೆ ಒರಗಿಕೊಂಡು ಆಕೆ ಕುಳಿತಿದ್ದಾಳೆ, ಅದೇ ಮೃದುವಾದ ಬೆರಳುಗಳಿಂದ ಆಕೆ ಕಳೆದುಹೋದ ದಿನಗಳನ್ನು ಎಣಿಸುತ್ತಿದ್ದಾಳೆ, 'ಅಯ್ಯೋ ಅವಳು ಎಣಿಸುತ್ತಿರುವುದು ನನ್ನ ಅಪರಾಧಗಳನ್ನು ಇರಬಹುದೆ?' ಎಂದು ತಿರಸ್ಕೃತ ಪ್ರಿಯನು ಯೋಚಿಸುತ್ತಾನೆ ;—ದಾನಮಾಡುವ ಶಕ್ತಿ ಹೋಯಿತು, ಯೌವನ ಒಹಳ ಹಿಂದೆಯೇ ಕಳೆದುಹೋಯಿತು, ನಮ್ಮನ್ನು ಪ್ರೀತಿಸಿದವರಾರೂ ಈಗ ನಮ್ಮನ್ನು ನೆನೆಯುತ್ತಿಲ್ಲ, ಭವಿಷ್ಯದ ಸುಖವನ್ನು ಹುಡುಕುವ ಆಸೆಯನ್ನು ಬಿಟ್ಟು ವಿರಕ್ತನಾಗಿ ಸನ್ಯಾಸಿಯಾಗುವುದೇ ಮೇಲು."

ಹೀಗೆ ನಿರರ್ಗಳವಾಗಿ ಹರಿಯುತ್ತದೆ ನಾಲಡಿಯಾರ್‌ನ ವಿಚಾರಸರಣಿ. ನಾಲಡಿಗಳಲ್ಲಿರುವ ಮುಖ್ಯ ಸ್ವಾರಸ್ಯ ಅವುಗಳ ಛಂದಸ್ಸು ಮತ್ತು ಅತ್ಯಂತ ಬಿಗಿಯಾದ ಮಿತವಾದ ಪದಪ್ರಯೋಗ. ಈ ಕವನಕಾರರು ಒಂದು ಮಾತ್ರೆಯನ್ನು ಸಹ ಹೆಚ್ಚಾಗಿ ಉಪಯೋಗಿಸಲು ಒಪ್ಪುವವರಲ್ಲ. ಇದರ ಛಂದಸ್ಸನ್ನು ಅರಿಯಲು ಒಂದೆರಡು ಉದಾಹರಣೆ ಕೊಡಬಹುದು:

ಈಟ್ಟಲುಂ ತುನ್ಬಂ ಮಟ್ರೀಟ್ಟಿಯವೊಣ್‌ಪೊರುಳೈ
ಕ್ಕಾತ್ತಲುಂ ಆಂಗೇ ಕಡುಂತುನ್ಬಂ ಕಾತ್ತಲ್
ಕುಱೈಪಡಿನ್ ತುನ್ಬಂ ಕೆಡಿನ್ ತುನ್ಬಂ | ತುನ್ಬ
ಕ್ಕುಱೈಪದಿ ಮಟ್ರೈ ಪ್ಪೊರುಳ್.

(ಹಣವನ್ನು ಶೇಖರಿಸಿಡುವುದು ಕಷ್ಟ, ಅದನ್ನು ಕಾಯುವುದು ಹೆಚ್ಚು ಕಷ್ಟ, ಧನ ಕಡಿಮೆಯಾಗುವುದಲ್ಲ ಎಂಬ ಕಷ್ಟ, ನಾಶವಾದರೆ ಅದೂ ಕಷ್ಟ, ಹೀಗೆ ಧನ ಕಷ್ಟಕ್ಕೆ ಆವಾಸಸ್ಥಾನ.)

ಪುಕ್ಕವಿಡತ್ತಚ್ಚಂ ಪೋದರುಂ ಪೋದಚ್ಚಂ
ತುಯ್ಕ್ಕುವಿಡತ್ತಚ್ಚಂ ತೋನ್ರಾಮಯ್ಕ್ಕಾಪಚ್ಚಂ
ಎಕ್ಕಾಲುಂ ಅಚ್ಚಂ ತರುಮಾಲ್ ಎವನ್ ಕೊಲೋ
ಉಟ್ಕಾನ್ ಪಿಜಿನಿಲ್ ಪುಗಲ್.

(ವ್ಯಭಿಚಾರಿ ಸೆರೆಯುವನ ಮನೆಗೆ ಹೋಗುವಲ್ಲಿ ಭಯ, ಹಿಂದಿರುಗುವಲ್ಲಿ ಭಯ, ಒಳಗಿರುವಾಗ ಭಯ, ರಹಸ್ಯವನ್ನು ಕಾಯ್ದುಕೊಳ್ಳುವುದು ಭಯ, ಯಾವಾಗಲೂ ಭಯವೆ. ಹೀಗಿದ್ದರೂ ಸೆರೆಯುವನ ಮನೆಗೆ ಯಾಕೆ ಹೋಗದೆ ಇರುವುದಿಲ್ಲ!)

ಕಲ್ವಿ ಕರೈಯಿಲ ಕಟ್ಪವರ್ ನಾಳ್ ಶಿಲ
ಮೆಲ್ಲ ನಿನೈಕ್ಕಿಱ್ ಪಿಣಿ ಪಲ—ತೆಳ್ಳಿದಿನ್
ಆರಾಯ್ನ್ದಮೈವುಡೈಯ ಕಟ್ಪವೇ ನೀರೊಟಿಯ
ಪ್ಪಾಲುಣ್ಕುರುಕಿಲ್ ತೆರಿಂದು.

(ಜ್ಞಾನವು ಸಮುದ್ರ. ಕಲಿಯುವವನ ಆಯಸ್ಸು ಅಲ್ಪ, ಅದರಲ್ಲಿಯೂ ರೋಗವೂ ಬರಬಹುದು. ಆದುದರಿಂದ ವಿವೇಕದಿಂದ ಕಲಿಯಬೇಕಾದುದನ್ನೇ ಕಲಿಯಿರಿ! ಹಂಸಕ್ಷೀರ ನ್ಯಾಯದಂತೆ).

ನೀರಿನುಂ ನುಣ್ಣಿದು ನೆಯ್ ಎನ್ಬರ್, ನೆಯ್ಯಿನುಂ
ಯಾರುಂ ಅರಿವರ್ ಪುಗೈನುಟ್ಪಂ, ತೇರಿನ್
ನಿರಪ್ಪಿಡುಂಪೈಯಾಳನ್ ಪುಕುಮೇ, ಪುಕೈಯುಂ
ಪುಗಲ್ಕಿರಿಯ ಪೂಲ್ಮೈ ನುಳೈಂದು.

(ನೀರು ಪ್ರವೇಶಿಸಲಾರದ ಕಡೆ ತುಪ್ಪ ಒಳಕ್ಕೆ ನುಗ್ಗುತ್ತದೆ. ಹೊಗೆ ತುಪ್ಪಕ್ಕಿಂತ ಸೂಕ್ಷ್ಮ, ತುಪ್ಪ ಹೋಗದೆಡೆ ಹೋಗುತ್ತದೆ. ಭಿಕ್ಷುಕ, ಹೊಗೆ ಸಹ ಪ್ರವೇಶಿಸದ ಕಡೆ ಪ್ರವೇಶಿಸುತ್ತಾನೆ.)

ಈ ಚೌಪದಿಕಾರರು ನಿಜವಾದ ಕವಿಗಳಾದುದರಿಂದ ಇವರು ಕೊಟ್ಟಿರುವ ಹೋಲಿಕೆಗಳು ತುಂಬ ಉಚಿತವಾಗಿವೆ: "ತಾನೂ ಅನುಭವಿಸದೆ ಇತರರಿಗೂ ಕೊಡದ ಹಣ, ಜೇನುಹುಳು ಕೂಡಿಹಾಕಿದ ಜೇನಿನಂತೆ ಕಂಡವರ ಪಾಲಾಗುವುದು." "ಸಾವಿರಾರು ಗೋವುಗಳ ನಡುವೆ ತನ್ನ ತಾಯಿ ಇದ್ದರೂ ಅದನ್ನು ಎಳಗರು ಹೋಗಿ ಹಿಡಿಯುವಂತೆ, ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಗಳು ತಮ್ಮ ಕರ್ತೃವನ್ನು ಕಂಡುಹಿಡಿದು ಅವನಿಗೆ ಫಲವನ್ನು ತಲಪಿಸುವುವು." "ಇತರರ ಹೆಂಡತಿಯನ್ನು ಬಯಸುವುದು ಸರ್ಪದ ಹೆಡೆಯನ್ನು ನೆಕ್ಕಿದಂತೆ."

ನಾಲಡಿಕಾರರು ಪ್ರಕೃತಿಯನ್ನೂ ಪರಮಾತ್ಮನನ್ನೂ ಒಂದಾಗಿ ಸೇರಿಸಿ ವರ್ಣನೆ ಮಾಡಿದ್ದಾರೆ. ಅವರಿಗೆ ಸಮುದ್ರವೂ ಬಹಳ ಪ್ರಿಯ. ನಾಲ್ಕು ಪಂಕ್ತಿಗಳಲ್ಲಿ ಒಂದು ಪಂಕ್ತಿ ಪರಮಾತ್ಮನಿಗೆ ಸಂಬೋಧನೆ: "ತಂಪಾದ ಬೆಟ್ಟಗಳಿಂದ, ಹೂವಿನ ಹಾರಗಳಂತೆ ಹರಿಯುವ ಝರಿಗಳುಳ್ಳ ಸೊಗಸಾದ ನೆಲದ ಒಡೆಯನೆ, ಪ್ರಕಾಶಮಾನವಾದ ದುಂಬಿಗಳು ಹೂವಿನ ಸುತ್ತ ಅಲೆಯುತ್ತಿರುವ ಸಮುದ್ರದ ತಂಪಾದ ತೀರದ ಒಡೆಯನೆ, ಗಂಭೀರವಾಗಿ ಧ್ವನಿಮಾಡುವ ಜಲಪಾತಗಳುಳ್ಳ ಎತ್ತರವಾದ ಪರ್ವತ ಪ್ರದೇಶಗಳ ಒಡೆಯನೆ, ಸೈದಿಲೆಯ ಸುವಾಸನೆಯನ್ನು ಎಲ್ಲೆಲ್ಲಿಯೂ ಹರಡುವ ಇಂಪಾದ ಸಮುದ್ರತೀರದ ಒಡೆಯ, ಪರ್ವತದ ಇಳಿಜಾರಿನಲ್ಲಿ ಶ್ರೇಷ್ಠವಾದ ಮಣಿಗಳು ಹೊಳೆಯುತಿರುವ ಪ್ರದೇಶದ ಒಡೆಯನೆ, ಹಸಿರುಹುಲ್ಲು ಬೆಳೆದ ಪ್ರದೇಶದಲ್ಲಿ ಅನರ್ಘ್ಯ

ಗಳಾದ ವಸ್ತುಗಳನ್ನು ಸಾಗಿಸುತ್ತಿರುವ ಝುರಿಗಳುಳ್ಳ ಪುಷ್ಪಭರಿತ ಗುಡ್ಡಗಳ ಒಡೆಯನೆ, ಬಿಡದೆ ಒಂದೇ ಸಮನಾಗಿ ಏಳುತ್ತಿರುವ ದೊಡ್ಡ ದೊಡ್ಡ ಅಲೆಗಳುಳ್ಳ ಸಮುದ್ರತೀರದ ಒಡೆಯನೆ, ಸುವರ್ಣವರ್ಣದ ಕಾಡುಕೋಳಿಯನ್ನು ಜಲಪಾತ ಹೆದರಿಸಿ ಓಡಿಸುತ್ತಿರುವ ಪುಷ್ಪಭರಿತ ಗಿರಿಯೊಡೆಯನೆ, ಅನರ್ಘ್ಯರತ್ನಗಳನ್ನು ಸಮಗೆ ಕೂಡುವ ಅಂತರಿಕ್ಷವನ್ನು ಮುಟ್ಟುವ ಉದ್ದವಾಗುತ್ತಿರುವ ಸೆರಳುಗಳುಳ್ಳ ಗುಡ್ಡಗಳ ಒಡೆಯನೆ, ಜೇನು ಹರಿಯುವ ಪರ್ವತದ ಒಡೆಯನೆ, ಕಲ್ಲುಹೊಡೆದು ಪಾರಿವಾಳಗಳನ್ನು ಓಡಿಸುತ್ತಿರುವ ಗುಡ್ಡದ ಒಡೆಯನೆ, ಸಮುದ್ರಗಳು ಪಾದವನ್ನು ತೊಳೆಯುತ್ತಿರುವ ಪರ್ವತದ ಒಡೆಯ.''

ಉತ್ತರ–ದಕ್ಷಿಣದ ವಿರೋಧ ಆಗಲೂ ಇದ್ದಿತೆಂದು ಕಾಣುತ್ತದೆ: “ಯಾವ ಭೂಮಿಯಲ್ಲಿ ನಂಜಿನ ಕೊರಡನ್ನು ಬಿತ್ತಿದರೂ ಅದು ತೆಂಗಿನಮರವಾಗಿ ಬೆಳೆಯುವುದಿಲ್ಲ. ದಕ್ಷಿಣದವರೂ ಸ್ವರ್ಗಕ್ಕೆ ಹೋಗಿದ್ದಾರೆ. ಮನುಷ್ಯನ ಭವಿಷ್ಯವನ್ನು ನಿರ್ಧರಿಸುವುದು ಅವನ ಜೀವನ ಕ್ರಮ. ಉತ್ತರದ ಅನೇಕರೂ ನರಕವಾಸಿಗಳಾಗಿದ್ದಾರೆ.''

ಈ ಗ್ರಂಥವು ಎಂದಿನಿಂದಲೂ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಓರಿಯೆಂಟಲ್ ಆನರ್ಸ್ ಪರೀಕ್ಷೆಯ ಪಠ್ಯಪುಸ್ತಕವಾಗಿದೆ. ಇದನ್ನು ಅದೇ ವಿಶ್ವವಿದ್ಯಾಲಯದ ಪೌರ್ವಾತ್ಯ ಭಾಷೆ ಸಂಸ್ಕೃತಿಗಳ ಅಧ್ಯಾಪಕರಾದ ರೆವರೆಂಡ್ ಜಿ. ಯು. ಪೋಪ್‌ರು ಇಂಗ್ಲಿಷಿಗೆ ತರ್ಜುಮೆಮಾಡಿದರು. ಹಾಗೆಯೇ ಎಲ್ಲಿಸ್ ಎಂಬುವರೂ ಸಹ ಇದರ ಬಹುಭಾಗವನ್ನು ಇಂಗ್ಲಿಷಿಗೆ ತರ್ಜುಮೆ ಮಾಡಿದ್ದಾರೆ.

ಈ ಪ್ರೌಢಗ್ರಂಥದ ಪರಿಚಯ ಲೇಖನ, ಅಷ್ಟೇ ಪ್ರೌಢರೂ ವಿದ್ವಜ್ಜನರೂ ಆದ ಶ್ರೀಮಾನ್ ಪ್ರೊಫೆಸರ್ ಡಿ. ಎಲ್. ನರಸಿಂಹಾಚಾರ್ಯರವರ ಅರ್ಹತೆಗೆ ಯೋಗ್ಯವಾದ ಕಾಣಿಕೆಯಾಗಲಿ.

**ಗೊರೂರು ರಾಮಸ್ವಾಮಿ ಅಯ್ಯಂಗಾರ್**

# ಒರಿಸ್ಟಿಯ ನಾಟಕಮಂಜರಿಯಲ್ಲಿ ಈಸ್ಕೈಲಸ್ಸನ ವಿಚಾರಲಹರಿ

ಈಸ್ಕೈಲಸ್ ಅಥೆನ್ಸಿನ ಸ್ವರ್ಣಯುಗದಲ್ಲಿ ಬಾಳಿದ ನಾಟಕಕಾರ. ಇಂದಿಗೂ ಜಗತ್ತಿನ ಐವರು ಮಹಾ ನಾಟಕಕಾರರಲ್ಲಿ ಒಬ್ಬನೆಂದು ಪ್ರಸಿದ್ಧನಾದವನು. ಆತನ ಅಗಮೆಮ್ನಾನ್, ಕೀಫೋರಿ ಮತ್ತು ಯೂಮಿನೈಡಿಸ್ ನಾಟಕಗಳನ್ನು ಒರಿಸ್ಟಿಯ ಮುಕ್ಕೂಟ ನಾಟಕವೆಂದು ಕರೆಯುತ್ತಾರೆ. ಅಗಮೆಮ್ನಾನ್ ನಾಟಕದಲ್ಲಿ ಈಸ್ಕೈಲಸ್‌ನ ಪ್ರತಿಭೆ ಪರಮಾವಧಿಯನ್ನು ಮುಟ್ಟಿದೆ. " . . . . the greatest achievement of the human mind " ಎಂದು ವಿಮರ್ಶಕರು ಕೈವಾರಿಸಿದ ಕೃತಿಯದು.

ಈಸ್ಕೈಲಸ್ಸನ ವಿಚಾರಶ್ರೀಮಂತತೆಗೆ ಪ್ರತಿಭಾವಿಲಾಸಕ್ಕೆ ಅಮಾನುಷವಾತಾವರಣ ಬೇಕು. ಹೀಗಾಗಿ ಅವನ ಪಾತ್ರಗಳು ಪೌರಾಣಿಕ ವ್ಯಕ್ತಿಗಳು. ಇನ್ನು ವಸ್ತುವೊ—ಜೀವನ ಅನಂತ ಸಮಸ್ಯೆಗಳ ನೆಲೆವೀಡು. ಕವಿ ಆಳವಾದ ಆಲೋಚನೆಯಿಂದ ಪ್ರತಿಭೆಯ ಹೊಳಹಿಂದ ಆ ಸಮಸ್ಯೆಗಳನ್ನು ಎಳೆಎಳೆಯಾಗಿ ಬಿಡಿಸಿ ಸೂಕ್ತಮಾರ್ಗದರ್ಶನಗಳೊಡನೆ ಪ್ರತಿಮಾರೂಪವಾಗಿ ಚಿತ್ರಿಸುತ್ತಾನೆ. ಈಸ್ಕೈಲಸ್ಸನ ಪ್ರತಿಮೆ ಅವನ ದೈತ್ಯಪ್ರತಿಭೆಗೆ ಸಾಕ್ಷಿಯಾಗಿದೆ.

ಈಸ್ಕೈಲಸ್‌ನಲ್ಲಿ ಬಲಿಷ್ಠವಾದ ಮನಸ್ಸೊಂದು ಜೀವನವನ್ನು ಧರ್ಮವನ್ನು ಕುರಿತು ಮಾಡಿದ ಆಳವಾದ ಆಲೋಚನೆಗಳೇ ಮೈದುಂಬಿ ರುದ್ರನಾಟಕಗಳಾಗಿವೆ. ಪಾಪ ಶಿಕ್ಷೆ ಕ್ಷಮೆ ಇವುಗಳ ಸಮಸ್ಯೆ, ಧರ್ಮ ನಿಯಮಗಳು—ಇವು ಮಾನವರ ಕುರುಡು ನಂಬಿಕೆಯೇ ಅಥವಾ ನಿಜವಾಗಿ ಇರುವಂಥವೆ? ಈ ವಿಷಯಗಳು ಅವನನ್ನು ಆಗಾಗ ಕಾಡಿವೆ. ಆತನಿಗೆ ನೀತಿ ನಿಯಮಗಳಲ್ಲಿ ದೃಢ ವಿಶ್ವಾಸ. ಅಂದಿನಿಂದ ಇಂದಿನವರೆಗೂ ನೂರಾರು ಜನರು ಈ ನಂಬಿಕೆಯಲ್ಲಿ ಬಾಳಿದ್ದಾರೆ.

'ಅತಿ ಸರ್ವತ್ರ ವರ್ಜಯೇತ್' ಎನ್ನುವುದು ಗ್ರೀಕ ಧರ್ಮದ ಮುಖ್ಯ ತತ್ವ. ಸಮಾಜ ಜೀವನದಲ್ಲಿ ಪ್ರತಿಯೊಂದು ಜೀವಿಗೂ ಒಂದೊಂದು ಹಂಚಿಕೆ ಇರವು ಇರುತ್ತದೆ. ಯಾರೊಬ್ಬರು ಅಹಂಕಾರದಿಂದ ನೀತಿಮೀರಿದರೂ ಧರ್ಮ ಅವರ ತಲೆಯ ಮೇಲೆ ಪೆಟ್ಟಿ ಗೊಂದಲವನ್ನು ಮತ್ತೆ ಸುವ್ಯವಸ್ಥೆಗೊಳಿಸುತ್ತದೆ. ಗ್ರೀಕರು ಜೀವನದ ಈ ಏಳು ಬೀಳನ್ನು ಚರಿತ್ರೆಯಲ್ಲಿ ಸಾಮ್ರಾಟರ, ಚಕ್ರಾಧಿಪತ್ಯಗಳ ಅಳಿವು ಉಳಿವಿಗೂ ಅನ್ವಯಿಸುತ್ತಾರೆ. ಋತುಗಳ ಬದಲಾವಣೆಗೂ ಇದೇ ಕಾರಣ ಎನ್ನುತ್ತಾರೆ.

ಸಂಚಿತ ಪಾಪಕರ್ಮಗಳ ಬಿಗಿತ ಅತಿಯಾದಾಗ, ಪಾಪಿಗಳಿಗೆ ಅವರ ಪೀಳಿಗೆಗೆ ಶಿಕ್ಷೆ ವಿಧಿಸಲು, ನೊಂದವರ ನಿಟ್ಟುಸಿರೇ ಪ್ರತೀಕಾರ ಶಕ್ತಿಗಳಾಗಿ ಮೂಡಿ ಬರುತ್ತದೆ. ಹೀಗೆ ಅಗಮೆಮ್ನಾನ್ ನಾಟಕದಲ್ಲಿ ಅವನ ಸಾವಿಗೆ ಒಂದು ಕಾರಣವಲ್ಲ. ಅವರ ಪೀಳಿಗೆಯನ್ನೇ ಕಾಡುತ್ತಿರುವ ನೊಂದ ಅಟ್ರಿಯಸ್ಸನ ಭೂತವೊಂದು ಕಡೆ, ಕ್ಲೈಟಿಮ್ನೆಸ್ಟ್ರಳ ದ್ವೇಷ, ಮಗಳನ್ನು ಬಲಿಗೊಟ್ಟ ಕೊರೆ, ಟ್ರಾಯ್ ಪಟ್ಟಣದ ಗೆಲುವಿನಲ್ಲಿ ಹಿಗ್ಗಿ ಅವನು ಮಾಡಿದ ದೈವದ್ರೋಹದ ಕರಾಳಛಾಯೆ, ಗ್ರೀಸಿನ ನೊಂದ ಜನರ ನಿಟ್ಟುಸಿರಿನ ಪಾಶ—ಹೀಗೆ ಎಲ್ಲವೂ ಸೇರಿ ಬೆಂಕಿಯುಂಗುರಗಳ ಬಲೆಯಾಗಿ ಅವನನ್ನು ಪೂರೈಸುತ್ತದೆ. ಅಗಮೆಮ್ನಾನ್ ಇಷ್ಟೆಲ್ಲ ಪಾಪಗಳನ್ನು ಮಾಡಲು ಅವನ ಮನಸ್ಸನ್ನು ಕವಿದಿದ್ದ ಅಟ್ರಿಯಸ್ಸನ ಭೂತವೇ ಕಾರಣ ಎಂದು ಈಸ್ಕೈಲಸ್ಸನ ಅಭಿಪ್ರಾಯ. ಕೀಫೋರಿ ನಾಟಕದಲ್ಲಿಯೂ ಎರಡು ಧರ್ಮಗಳ ಘರ್ಷಣೆ ಇದೆ: ಮಾತೃಹತ್ಯೆಯ ಭೀತಿ ಮತ್ತು ದೈವದಲ್ಲಿ ಅವಿಧೇಯತೆ. ಒರಿಸ್ಟಿಸ್ ಅಪಾಲೋ ದೇವನಾಣತಿಯಿಂದ ಮಾತೃಹತ್ಯೆಯನ್ನು ಮುಗಿಸಿ ಪ್ರತೀಕಾರ ಶಕ್ತಿಗಳಿಗೆ ಹೆದರಿ, ಅಪಾಲೊವಿನ ಮರೆ

ಹೊಕ್ಕು ಅಲ್ಲಿಂದ ಅಥೀನೆಯ ಬಳಿಗೆ ನ್ಯಾಯ ತೀರ್ಮಾನಕ್ಕೆ ಬರುತ್ತಾನೆ. ಬಾಂಧವರ ರಕ್ತ ಚೆಲ್ಲುವುದು ಪಾಪ; ಅದಕ್ಕೆ ಶಿಕ್ಷೆಯಾಗಬೇಕು. ಇಲ್ಲಿ ಒರಿಸ್ಟಿಸ್ ಬೇಕೆಂದು ಮಾಡಿದ ಪಾಪವಲ್ಲ ಇದು. ಆದರೂ ಶಿಕ್ಷೆಯಾಗಬೇಕೆಂದು ಸೇಡಿನ ಮಾರಿಯರ (Furies) ವಾದ. ಆದರೆ ಸ್ಯೂಸ್ ದೇವನು ಆಲೋಚಿಸಬಲ್ಲವನು, ಅವನು ಅನುಭವಗಳಿಂದ ಪಾಠಕಲಿತು ಬುದ್ಧಿವಂತನಾಗಬಲ್ಲ ಎಂಬುದು ಈಸ್ಕೈಲಸನ ವಿಚಾರ. ಅವನ ಅಥಿನಾದೇವಿ ಹೇಳುವಂತೆ 'ಮರೆಹೊಕ್ಕವರನ್ನು ಕ್ಷಮಿಸದೆ ಹೋಗುವ ದೇವತೆ ಸಮಾಧಿಯಲ್ಲೂ ಅಕ್ಷಮ್ಯ ಅಪರಾಧಿ!' ಎಂದು ಸ್ಯೂಸ್ ದೇವನ ಆಣತಿ. ಶಿಕ್ಷೆ ಮಾಡುವುದೇನೋ ಸರಿ; ಆದರೆ ದಯೆ ಅದಕ್ಕಿಂತ ಹಿರಿದು. ಸೇಡಿನ ಮಾರಿಯರು ವಿಶಾಲಮನಸ್ಕರಾಗಿ ಮಂಗಳದೇವತೆಯರಾಗಿ ಮಾರ್ಪಡುವುದು ಈಸ್ಕೈಲಸನ ಹೊಸ ವಿಚಾರ—ಆಲೋಚನೆ.

ಹಲವು ಶತಮಾನಗಳ ನಂತರ ಬಂದ ತತ್ವಜ್ಞಾನಿಗಳೂ, ಮೇಧಾವಿಗಳೂ ಆದ ಪ್ಲೇಟೊ ಮತ್ತು ಅರಿಸ್ಟಾಟಲರ ಅಭಿಪ್ರಾಯಗಳನ್ನು ಇಲ್ಲಿ ಗಮನಿಸಬಹುದು. "ಜ್ಞಾನಿಯೂ ಉದಾತ್ತನೂ ಆದವನ ಆಳಿಕೆ ಬರಿಯ ನಿಯಮ ತತ್ವಗಳ ಆಳಿಕೆಗಿಂತ ಮೇಲು" ಎಂದು ಪ್ಲೇಟೊ ಹೇಳಿದರೆ, ಅರಿಸ್ಟಾಟಲ್ "ಯಾವ ನಿಯಮವನ್ನೇ ಆಗಲಿ ವೈವಿಧ್ಯಮಯ ಜೀವನಕ್ಕೆ ಅನ್ವಯಿಸುವಾಗ ಎಡರಾಗುತ್ತದೆ. ಅದನ್ನು ತಿದ್ದುವ ಅಧಿಕಾರ ಜ್ಞಾನಿಯಾದವನಿಗೆ ಇರಬೇಕು" ಎನ್ನುತ್ತಾನೆ. ಇಲ್ಲಿ ಅಥಿನಾದೇವತೆ ವಹಿಸಿದ ಪಾತ್ರವೇ ಈ ತತ್ವದ ಸಜೀವ ಚಿತ್ರಣ. ಒರಿಸ್ಟಿಯ ನಾಟಕದ ಸುರುಳಿ ತನ್ನ ಆಗಿನ ಪ್ರೇಕ್ಷಕರಿಗೆ ತಮ್ಮ ಧರ್ಮದ ಮುಂದಿನ ಹಲವು ಶತಮಾನಗಳ ಬೆಳವಣಿಗೆಯನ್ನು ಪ್ರತಿಮಾರೂಪದಲ್ಲಿ ಬಿಂಬಿಸಿದ ಪರಿಯೇನು?

ಅಟ್ರಿಯಸ್ ಮತ್ತು ಥೆಸ್ಟೀಸ್ ಎಂಬವರು ಪೆಲೊಪ್ಸ್ ದೊರೆಯ ಮಕ್ಕಳು. ಥೆಸ್ಟೀಸನು ಅಟ್ರಿಯಸನ ಪತ್ನಿಯಲ್ಲಿ ಅನುರಕ್ತನಾಗಿದ್ದುದರಿಂದ ಅಣ್ಣತಮ್ಮಂದಿರಲ್ಲಿ ದ್ವೇಷಹುಟ್ಟಿತು. ಅಟ್ರಿಯಸ್ ತಂತ್ರದಿಂದ ಥೆಸ್ಟೀಸ್‌ನನ್ನು ಊಟಕ್ಕೆ ಕರೆದು, ಅವನ ಮಕ್ಕಳನ್ನೇ ಕೊಂದು ಆ ಮಾಂಸವನ್ನು ಅವನಿಗೆ ಉಣಬಡಿಸಿದನು. ಅಂದಿನಿಂದ ಆ ವಂಶದ ಮೇಲೆ ಪಾಪದ ಕಾರ್ಮೋಡ ಕವಿಯಿತು. ಅಟ್ರಿಯಸ್ ಗತಿಸಿದ ನಂತರ ಅವನ ಮಕ್ಕಳಾದ ಅಗಮೆಮ್ನಾನ್ ಮತ್ತು ಮೆನಿಲೆಯಾಸ್ ಎಂಬವರು ಆರ್ಗೊಸಿನಲ್ಲಿ ಆಳುತ್ತಿದ್ದರು. ಅಗಮೆಮ್ನಾನ್ ಕ್ಲೈಟೆಮ್ನೆಸ್ಟ್ರ ಎಂಬುವಳನ್ನೂ, ಮೆನಿಲೆಯಾಸ್ ಅವಳ ತಂಗಿ ಹೆಲೆನಳನ್ನೂ ಮದುವೆಯಾಗಿದ್ದರು. ತ್ರಿಲೋಕ ಸುಂದರಿ ಎಂದು ಹೆಸರು ಪಡೆದಿದ್ದ ಹೆಲೆನಳನ್ನು ಟ್ರಾಯ್ ನಗರದ ರಾಜಪುತ್ರ ಪ್ಯಾರಿಸ್ ಅಪಹರಿಸಲು, ಅದಕ್ಕೆ ಪ್ರತೀಕಾರ ಮಾಡುವ ಉದ್ದೇಶದಿಂದ ಗ್ರೀಸಿನ ದೊರೆಗಳೆಲ್ಲ ಸೇರಿ ಅಗಮೆಮ್ನಾನನ ನಾಯಕತ್ವದಲ್ಲಿ ದಂಡೆತ್ತಿ ಹೊರಟರು. ಹತ್ತು ವರ್ಷ ಯುದ್ಧ ನಡೆದು ಎರಡು ಪಕ್ಷದಲ್ಲೂ ವೀರರನೇಕರು ಮಡಿದ ಮೇಲೆ ಟ್ರಾಯ್ ಪಟ್ಟಣ ಕೈವಶವಾಯಿತು.

ಇತ್ತ ಆರ್ಗೊಸಿನಲ್ಲಿ ರಾಣಿ ಕ್ಲೈಟೆಮ್ನೆಸ್ಟ್ರಳಿಗೂ, ಥೆಸ್ಟೀಸನ ಮಗ ಈಜಿಸ್ಥಸನಿಗೂ ಪ್ರಣಯ ಬೆಳೆದಿತ್ತು. ಟ್ರಾಯ್‌ಗೆ ಹೋಗುವಾಗ ದಾರಿಯಲ್ಲಿ ಆಲಿಸ್ ಎಂಬ ಸ್ಥಳದಲ್ಲಿ ಗ್ರೀಕರ ಹಡಗುಗಳು ಗಾಳಿಯಿಲ್ಲದೆ ನಿಂತುಹೋದವು. ಆರ್ಟೆಮಿಸ್ ದೇವತೆಯ ಕೋಪವೇ ಇದಕ್ಕೆ ಕಾರಣ ವೆಂದು ತಿಳಿದು ಆಕೆಯನ್ನೊಲಿಸಿಕೊಳ್ಳಲು ಅಗಮೆಮ್ನಾನ್ ತನ್ನ ಮಗಳು ಇಫಿಜೆನಿಯಾಳನ್ನು ಬಲಿಗೊಡಬೇಕಾಯಿತು. ಇದರಿಂದ ಕ್ಲೈಟೆಮ್ನೆಸ್ಟ್ರಳಿಗೆ ಗಂಡನ ಮೇಲೆ ದ್ವೇಷ ಹುಟ್ಟಿತು. ಅವನ ಮೇಲೆ ಸೇಡು ತೀರಿಸಿಕೊಂಡು ತನ್ನ ಉಪಪತಿ ಈಜಿಸ್ಥಸನೊಡನೆ ಸುಖವಾಗಿರಲು ಅವಳು ಹಂಚಿಕೆ ಹೂಡಿ ಕಾದಿದ್ದಳು. ಟ್ರಾಯ್ ವಶವಾದ ತಕ್ಷಣವೇ ಸಮೀಪದ ಬೆಟ್ಟದ ಮೇಲೆ ಉರಿಯೆಬ್ಬಿಸಿ ಹಾಗೆಯೇ ಬೆಟ್ಟದಿಂದ ಬೆಟ್ಟಕ್ಕೆ ಬೆಂಕಿಯ ಮೂಲಕ ಸುದ್ದಿಕೊಟ್ಟು ಅದೇ ದಿನವೇ ಆರ್ಗೊಸಿಗೂ ತಲಪುವಂತೆ ವ್ಯವಸ್ಥೆಯಾಗಿದ್ದಿತು. ಇಷ್ಟು ಪೂರ್ವಕಥೆ.

ಆರ್ಗೊಸಿನ ಅರಮನೆಯ ಬಳಿ ವಿಜಯದ ಸುದ್ದಿಗಾಗಿ ಸೇವಕನೊಬ್ಬ ಕಾಯುತ್ತಿದ್ದಾನೆ. ಒಂದು ವರ್ಷಕಾಲದಿಂದ ಹೀಗೇ ನಿದ್ದೆಗೆಟ್ಟು ಕಾಯುತ್ತಿರುವ ಅವನಿಗೆ ಜುಗುಪ್ಸೆಯಾಗಿದೆ.

ತನ್ನ ದೊರೆಯ ಮನೆತನದ ಕ್ರೂರ ಚರಿತ್ರೆಯನ್ನೂ ಕ್ಲೈಟೆಮ್ನೆಸ್ಟ್ರಳ ಅಸಹ್ಯ ಪ್ರಣಯವನ್ನೂ ನೆನೆದು ಇವರಿಗಿನ್ನಾವ ಶಿಕ್ಷೆ ಕಾದಿದೆಯೋ ಎಂದು ಯೋಚಿಸುವಾಗ ದೂರದ ಬೆಟ್ಟದಲ್ಲಿ ಉರಿ ಯೇಳುತ್ತದೆ. ಗ್ರೀಕರ ವಿಜಯದ ಅಗ್ನಿಪತಾಕೆ! ಇನ್ನೇನು ದೊರೆ ಹಿಂದಿರುಗುತ್ತಾನೆ. ರಾಜ್ಯ ಸುಗಮವಾದೀತು . . ಆದರೂ ಆ ಬಡಸೇವಕನಿಗೆ ಮನಸ್ಸಿನಲ್ಲಿ ಶಂಕೆ.

ಆ ವೇಳೆಗೆ ಆ ಪಟ್ಟಣದ ಹಿರಿಯರು—ನಾಟಕದ ಮೇಳದವರು –ಬರುತ್ತಾರೆ. ರಾಣಿಯ ಆಜ್ಞಾನುಸಾರ ಬಲಿಪೀಠಗಳಲ್ಲಿ ಸುಗಂಧದ ಹೊಗೆ ಏಳುತ್ತಿದೆ. ಅವರ ಮನಸ್ಸಿನಲ್ಲಿಯೂ ಆಸೆ ಅಂಕುರಿಸಿದೆ. ತಮ್ಮ ದೊರೆ ಹೊರಗಿನ ಶತ್ರುಗಳನ್ನು ಜಯಿಸಿ ಬರುತ್ತಲಿದ್ದಾನೆ . . ಆದರೂ ತಮ್ಮ ಅಧರ್ಮದಿಂದಲೇ ಈ ವಂಶದವರಿಗೆ ಏಳಿಗೆಯಿಲ್ಲ. ಶ್ರೀಮಂತರಲ್ಲಿ ಹೊಟ್ಟೆಕಿಚ್ಚು ಪಟ್ಟು ದೇವತೆಗಳು ಅವರನ್ನು ತುಳಿಯುತ್ತಾರೆ ಎಂಬ ಕುರುಡುನಂಬಿಕೆ ಈಸ್ಕೈಲಸನಿಗೆ ಹಿಡಿಸದು. ಬಡವನಾಗಲಿ ಶ್ರೀಮಂತನಾಗಲಿ ನ್ಯಾಯ ಮಾರ್ಗದಲ್ಲಿ ನಡೆದವನು ವಿಪತ್ತಿನಿಂದ ದೂರವಿರು ತ್ತಾನೆ. ಅಧರ್ಮ ಪ್ರವರ್ತಕನ ಮನೆಯಲ್ಲಿ ಅವನ ಏಳಿಗೆಯಂತೆಯೇ ಪಾಪವೂ ಮರಿಗೆ ಮರಿ ಇಡುತ್ತದೆ. ಅವರ ಮನಸ್ಸು ಪಾಪದ ಕಡೆಗೇ ಒಲಿಯುತ್ತದೆ, ದೇವರಿಂದ ಶಿಕ್ಷಿಸಲ್ಪಡುತ್ತದೆ, ಎಂಬುದು ಅವನ ವಿಚಾರ. ನಾಟಕದುದ್ದಕ್ಕೂ ಇಂತಹ ಕಾರ್ಯಕಾರಣ ಬದ್ಧತೆಯನ್ನು ಈಸ್ಕೈಲಸ್ ತರುತ್ತಾನೆ.

ಕಣ್ಣಿನಲ್ಲಿ ನೀರುತುಂಬಿದ್ದರೂ ಮಗಳನ್ನು ಬಲಿಗೊಟ್ಟವನು ಅಗಮೆಮ್ನಾನ್. ಟ್ರಾಯನ್ನು ಗೆಲ್ಲಬೇಕೆಂಬ ಮಹತ್ವಾಕಾಂಕ್ಷೆಯಿಂದ ಮಗಳ ಮೇಲಿನ ಪ್ರೇಮವನ್ನು ಕಡೆಗಣಿಸುತ್ತಾನೆ. 'ಹೊಟ್ಟೆಗೇನೂ ಡೆಯದ ಆಪ್ಲೊಟ್ಟುಗಳಾಗವು' ಎಂದ ನವೋಲಿಯನ್ನಿನಂತೆ ಅವನು ಮುಂದು ವರಿಯುತ್ತಾನೆ. "My path is narrow wheresoe'ver I go" ಎಂದುಕೊಂಡರೂ ಎದೆ ಯನ್ನು ಕಲ್ಲುಮಾಡಿ ಅಧರ್ಮಕ್ಕೆ ಎಡೆಗೊಟ್ಟನು. "ಅವನು ಮಗಳಿಗೆ ಮೃತ್ಯುವಾದಂತೆ ಅವನ ಪತ್ನಿಯೇ ಅವನಿಗೆ . . ಅಮಂಗಳವನ್ನಾಡಬಾರದು ಜ್ಯೂಸ್ ದೇವನೇ ಶರಣು" ಎಂದು ಮೇಳದವರು ತಮ್ಮ ಗೀತೆಯನ್ನು ಮುಗಿಸುತ್ತಾರೆ.

ಕ್ಲೈಟೆಮ್ನೆಸ್ಟ್ರ ಪ್ರವೇಶಿಸುತ್ತಾಳೆ. ಇದುವರೆಗೂ ಕಾಯುತ್ತಿದ್ದ ಗಳಿಗೆ ಹತ್ತಿರವಾಗು ತ್ತಿದೆ . . ಅವಳಿಗೆ ಒಂದು ಬಗೆಯ ಸಂಭ್ರಮ. ಗ್ರೀಕರ ವಿಜಯವನ್ನು ತಿಳಿಸುವ ನೆವದಲ್ಲಿ ಆಕೆ ಟ್ರಾಯ್ ನಗರದವರ ದುಃಖವನ್ನೂ, ನರಳಾಟವನ್ನೂ ನಷ್ಟವನ್ನೂ ಕುರಿತು ಆಡುತ್ತಾಳೆ. ಗ್ರೀಕರು ಎಚ್ಚರಿಕೆಯಿಂದ ಇದ್ದರೆ ಸಾಕು ವಿಜಯದ ಮತ್ತಿನಲ್ಲಿ ಅವರು ಅಧರ್ಮವೆಸಗದಿದ್ದರೆ ಸಾಕು . . ಅದಕ್ಕೆ ಶಿಕ್ಷೆ ದೂರವಿಲ್ಲ ಎನ್ನುತ್ತಾ ಅವಳ ಒಳ ಮನಸ್ಸಿನ ಉದ್ದೇಶವನ್ನು ಸ್ವಲ್ಪ ಸೂಚಿಸುತ್ತಾಳೆ.

ಆ ವೇಳೆಗೆ ದೂತನೊಬ್ಬ ಪ್ರವೇಶಿಸಿ ಗ್ರೀಕರು ಟ್ರೋಜನರಿಗೆ ಶಿಕ್ಷೆವಿಧಿಸಿ ಅಷ್ಟಕ್ಕೆ ತೃಪ್ತರಾಗದೆ ಹದಗೆಟ್ಟು ವರ್ತಿಸಿದ್ದನ್ನೂ ದೇವಾಲಯಗಳನ್ನು ಮುರಿದು ಬಲಿಪೀಠಗಳನ್ನು ಹಾಳು ಮಾಡಿದ ಸಂಗತಿಯನ್ನೂ ತಿಳಿಸುತ್ತಾನೆ.

ಇನ್ನೇನು ಅಗಮೆಮ್ನಾನ್ ಬರುತ್ತಿದ್ದಾನೆ. ಆದರೆ ಯಾರಿಗೂ ಉತ್ಸಾಹವಿಲ್ಲ. ನಾಟಕದಲ್ಲಿ ಒಂದು ವಿಧವಾದ ಭಯಾನಕ ಆವರಣ ಕಲ್ಪಿತವಾಗಿದೆ. ಏನೋ ವಿಪತ್ತು ಸನ್ನಿಹಿತವಾಗಿದೆ ಎಂಬ ಭಾವ ಪ್ರೇಕ್ಷಕರ ಮನಸ್ಸನ್ನು ಕವಿದಿದೆ. ಮುಂದೆ ಅಗಮೆಮ್ನಾನ್ ಹಿಗ್ಗಿನಿಂದ ತನ್ನ ಪ್ರಣಯ ದಾಸಿ ಕ್ಯಾಸ್ಸಾಂಡ್ರಳೊಡನೆ ಪ್ರವೇಶಿಸುತ್ತಾನೆ. ಕ್ಲೈಟೆಮ್ನೆಸ್ಟ್ರ ಅವನನ್ನು ಕೃತ್ರಿಮ ವಾಗ್ಝರಿ ಯಿಂದ ಸ್ವಾಗತಿಸಿ ರಕ್ತವರ್ಣದ ನಡೆಮುಡಿಯ ಮೇಲೆ ಕೈಹಿಡಿದೊಯ್ಯುತ್ತಾಳೆ. ಇತ್ತ ಕ್ಯಾಸ್ಸಾಂಡ್ರ ತನ್ನ ಭವಿಷ್ಯದರ್ಶನವನ್ನು ಹೇಳುತ್ತಿರುವಂತೆಯೇ ಒಳಗೆ ಅಗಮೆಮ್ನಾನನ ಕೊಲೆಯಾಗುತ್ತದೆ. ಮುಂದೆ ಮೇಳದವರಿಗೂ ರಾಣಿಗೂ ಬಿರುಸುಮಾತು ನಡೆಯುತ್ತದೆ. ರಾಣಿ ಅವರನ್ನು ಶಾಂತಗೊಳಿಸಿ ಈ ವಂಶದಲ್ಲಿ ಸ್ವಜನರ ಸಾವಿಗೆ ಇದೇ ಕೊನೆಯಾಗಲಿ ಎಂದಳು.

ಕ್ಲೈಟೆಮ್ನೆಸ್ಟ್ರ ಮತ್ತು ಈಜಿಸ್ಥನು ತಮ್ಮ ಪಾಪದ ಜೀವನ ನಿರುಪಾಧಿಕವಾಗಿ

ಸಾಗಲೂ, ಮಗಳ ಕೊಲೆಗೆ ಪ್ರತೀಕಾರ ಮಾಡಲೂ ಅಗಮೆಮ್ನಾನನನ್ನು ಕೊಂದರು. ವಂಶದ ಪಾಪ ಅಗಮೆಮ್ನಾನನನ್ನು ಬಲಿತೆಗೆದುಕೊಂಡರೂ ಈ ಹೊಸ ಪಾಪಕ್ಕೆ ಶಿಕ್ಷೆಯಾಗಬೇಕಲ್ಲ! ಹೀಗೆ ವಂಶದ ಜೊತೆಗೆ ಪಾಪವೂ ಬೆಳೆದರೆ ಇದಕ್ಕೆ ಕೊನೆಯೆಲ್ಲಿ?

ಒರಿಸ್ಟಿಯ ಮುಕ್ಕೂಟದ ಉಳಿದೆರಡು ನಾಟಕಗಳಲ್ಲಿ ಕವಿ ಈ ಚರಿತ್ರೆಯನ್ನು ಕೊನೆಗಾಣಿಸಿದ್ದಾನೆ. ಒರಿಸ್ಟೀಸನು ದೊಡ್ಡವನಾದ ಮೇಲೆ ಅಪಾಲೊವಿನ ಆಜ್ಞೆಯಂತೆ, ತನ್ನ ಅಕ್ಕ ಎಲೆಕ್ಟ್ರಾಳ ಸಹಾಯದಿಂದ ಈಜಿಸ್ಥಸನನ್ನೂ, ತನ್ನ ತಾಯಿಯನ್ನೂ ಕೊಲ್ಲುತ್ತಾನೆ. ಆದರೆ ಅವನ ಮನಸ್ಸಿನಲ್ಲಿ ದುರುದ್ದೇಶವಿಲ್ಲ, ಸ್ವಾರ್ಥದ ಕಳಂಕವಿಲ್ಲ. ಅವನಿಗೆ ಧರ್ಮಸಂಕಟ. ತಾಯಿಯನ್ನು ಕೊಲ್ಲದಿದ್ದರೆ ಅಪಾಲೊ ದೇವನ ಆಜ್ಞೆಯನ್ನು ಮೀರಿದಂತಾಗುತ್ತದೆ. ಕೊಂದರೆ ಮಾತೃಹತ್ಯಾದೋಷ ತಪ್ಪದು. ಹೀಗೆ ಧರ್ಮದೃಷ್ಟಿಯಿಂದ ತನಗೆ ಇಷ್ಟವಿಲ್ಲದಿದ್ದರೂ ತಾಯನ್ನು ಕೊಲ್ಲುತ್ತಾನೆ. ಮಾತೃಹತ್ಯಾದೋಷ ಮಾಡಿದವನಿಗೆ ಶಿಕ್ಷೆಯಿಲ್ಲದಿದ್ದರೆ ಸಮಾಜದಲ್ಲಿ ಕಟ್ಟು ಸಡಿಲವಾಗಬಹುದು. "The doer must suffer." ಆದ್ದರಿಂದ ಸೇಡಿನ ಹೆಮ್ಮಾರಿಯರು ಆತನನ್ನು ಬೆನ್ನುಹತ್ತುವರು. ಅವನು ಆ ಘೋರರೂಪಿಗಳಿಂದ ತಪ್ಪಿಸಿಕೊಳ್ಳಲು ಅಪಾಲೊ ದೇವನ ಮರೆಹೊಕ್ಕು ಪಾಪದ ಸೋಂಕನ್ನು ಕಳೆದುಕೊಂಡು ಅಲ್ಲಿಂದ ಪಲಾಸ್ ಅಥೀನೆಯ ಬಳಿಗೆ ನ್ಯಾಯ ತೀರ್ಮಾನಕ್ಕಾಗಿ ಹೋಗುತ್ತಾನೆ. ಆಕೆ ಇವನ ಮತ್ತು ಅಪಾಲೊವಿನ ವಾದವನ್ನೂ, ಸೇಡಿನ ಮಾರಿಯರ ವಾದವನ್ನೂ, ಅಥೆನ್ಸಿನ ಪುರಜನರ ಸಹಾಯದಿಂದ ಪರಿಶೀಲಿಸಿ ಒರಿಸ್ಟೀಸನ ಪರವಾಗಿಯೇ ತೀರ್ಪುಕೊಡುವಳು. ಮಾರಿಯರ ವಾದದಲ್ಲಿಯೂ ಹುರುಳಿದೆ. ಆದರೂ ನ್ಯಾಯಕ್ಕಿಂತ ದಯೆ ಹೆಚ್ಚು. ತತ್ವವೇ ಕೊನೆಯಲ್ಲ. ಸನ್ನಿವೇಶಕ್ಕೆ ತಕ್ಕಂತೆ ಅದು ಬದಲಾಗಬೇಕು. ಪುನಃ ಪುನಃ ಆಲೋಚನೆಮಾಡಿ ಸ್ಯೂಸ್ ದೇವನು ಅಥಿನಾ ಮತ್ತು ಅಪಾಲೊ ದೇವತೆಗಳ ಮೂಲಕ ಮರೆಹೊಕ್ಕವರನ್ನು ಕ್ಷಮಿಸುತ್ತಾನೆ. ಈ ತೀರ್ಪನ್ನು ಕೇಳಿ ಪ್ರತೀಕಾರ ಶಕ್ತಿಗಳು (ಸೇಡಿನ ಮಾರಿಯರು) ರೋಷಾವಿಷ್ಟರಾಗುತ್ತಾರೆ. ಅಥಿನಾ ಅವರನ್ನು ಸಮಾಧಾನ ಪಡಿಸಿ ಅವರಿಗೆ ಕೆಂಪುವಸ್ತ್ರ ಹೊದಿಸಿ ಊರೆಲ್ಲ ಮೆರವಣಿಗೆ ಮಾಡಿಸಿ ತನ್ನ ಗುಡಿಯ ಹತ್ತಿರದಲ್ಲೇ ಸ್ವಲ್ಪ ಕೆಳಗೆ ಅವರಿಗೂ ಒಂದು ಗುಡಿಯನ್ನು ನಿರ್ಮಾಣಮಾಡಿಸಿ—ಅವರು ಮಂಗಳದೇವತೆಯರಾಗುವಂತೆ ಅನುಗ್ರಹಿಸುತ್ತಾಳೆ. ಅಂದರೆ ತತ್ವವನ್ನು ಪರಿಷ್ಕರಿಸಿ ಅದರ ವ್ಯಾಪ್ತಿಯನ್ನು ಹಿರಿದು ಮಾಡುತ್ತಾಳೆ. ಅಲ್ಲಿಗೆ ಅಟ್ರಿಯಸ್ ವಂಶದವರ ಕರ್ಮ ಸವೆದು ಅವರು ಶಾಪಮುಕ್ತರಾಗುತ್ತಾರೆ.

ಅಗಮೆಮ್ನಾನ್ ನಾಟಕದಲ್ಲಿ ಉದ್ದಕ್ಕೂ ತಪ್ಪಿಗೆ ಶಿಕ್ಷೆ ನಡೆಯುತ್ತಲೇ ಹೋಗಿದೆ. ಆದರೆ ಪ್ರತಿಯೊಂದು ಬಾರಿಯೂ ಮತ್ತೊಂದು ಪಾಪಕರ್ಮದ ಮೂಲಕ. ಅದೂ ಸ್ಯೂಸ್ ದೇವನ ಆಜ್ಞೆಗೆ ಅನುಸಾರವಾಗಿ. ಉದಾಹರಣೆಗೆ ಅಗಮೆಮ್ನಾನನನ್ನು ಪ್ಯಾರಿಸ್‌ನಿಗೆ ಶಿಕ್ಷೆ ವಿಧಿಸಲು ಸ್ಯೂಸ್ ದೇವನೇ ಕಳಿಸಿದ್ದಾನೆ. ಸ್ಯೂಸ್ ದೇವನ ಬಲೆ ಟ್ರಾಯ್ ನಗರವನ್ನೇ ಆವರಿಸಿದೆ. ಅದರ ಹಿಡಿತದಿಂದ ಎಳೆಯರಾಗಲಿ, ಹಿರಿಯರಾಗಲಿ ಯಾರೂ ತಪ್ಪಿಸಿಕೊಳ್ಳಲಾರರು. ಆದರೂ ಇಲ್ಲಿ ಅಗಮೆಮ್ನಾನ್ ಮಾಡುವ ರಕ್ತಪಾತ ಆರ್ಟೆಮಿಸ್ ದೇವತೆಯನ್ನು ಕೆರಳಿಸುತ್ತದೆ. ಅವನಿಂದ ಗ್ರೀಸಿನ ಮನೆಮನೆಗೂ ದುಃಖ ಪ್ರಾಪ್ತಿಯಾಗಿದೆ. ಇಲ್ಲಿ ಸ್ಯೂಸ್ ದೇವನ ನ್ಯಾಯಮಾರ್ಗ ಅಚತುರವೂ ನಿಷ್ಪ್ರಭಾವಿಯೂ ಆದುದು. ಅದು ಇನ್ನೊಬ್ಬ ಒಲಂಪಿಯದ ದೇವತೆಯ ನಿಷ್ಠುರವನ್ನು ಕೆದಕುತ್ತದೆ.

ನಾವು ಕೀಫೋರಿಗೆ ಬಂದಾಗ ಆ ಗೊಂದಲಕ್ಕೆ ಒಂದು ಸುವ್ಯವಸ್ಥೆ ಸೂಚಿತವಾಗಿರುವುದು ಕಂಡುಬರುತ್ತದೆ. ಇಲ್ಲಿ ತನ್ನದೇ ಆದ ಯಾವೊಂದು ದುರ್ಭಾವವೂ ಇಲ್ಲದೆ ಸೇಡು ತೀರಿಸಲು ಒರಿಸ್ಟಿಸ್ ಬರುತ್ತಾನೆ. ಘೋರ ಕರ್ಮಕ್ಕೆ ಮನಸ್ಸು ಹಿಂಜರಿದರೂ ದೇವನ ವ್ಯಕ್ತ ಆಣತಿಗೆ ಎದುರು ಹೇಳಲಾರದವನು ಈತ. ದೇವರೇ ಈ ಕರ್ಮದ ಜವಾಬ್ದಾರಿ ಹೊತ್ತಿರುವುದರಿಂದ ಇಲ್ಲಿ ಪಾಪಕರ್ಮಕ್ಕೂ ಬೇರೆಯ ದೆಸೆ. ಆದರೆ ಏನೇ ಆದರೂ ಮಗ ತಾಯಿಯನ್ನು ಕೊಲ್ಲುವುದು ಸರಿಯೆ? ಇದು ಒಪ್ಪಲಾರದಂಥ ಮಾತು.

ಪ್ರತೀಕಾರ ಶಕ್ತಿಗಳೂ ಇದನ್ನು ಒಪ್ಪುವುದಿಲ್ಲ. ಹುಟ್ಟರಿವಿನಿಂದಲೇ ಬರುವ ಈ ಪವಿತ್ರತೆಯನ್ನು ಕಾಪಾಡುವುದೇ ಅವರ ಕೆಲಸ. ಇದನ್ನು ಅಪಾಲೊ ಇಲ್ಲವೆನ್ನಿಸುತ್ತಿದ್ದಾನೆ. ಅವರು ನಿಯಮ ರಕ್ಷಣೆಗೆ ಬಂಡು ಹೂಡಿದ್ದಾರೆ. ಅವರು ಸ್ಯೂಸ್ ದೇವನಿಂದ ನಿಯಮಿತರಾದ ಅಧಿಕಾರಿಣಿಯರು. ಅವರ ಬಂಡು ಕೊನೆಗೆ ಸಾರ್ಥಕವಾಗಿ ಅವರ ಆಡಳಿತಕ್ಕೆ ವಿಶಾಲವ್ಯಾಪ್ತಿ ದೊರಕೊಳ್ಳುತ್ತದೆ.

ಅವ್ಯವಸ್ಥೆಗೀಡಾದ ಸಮಾಜ ಮತ್ತು ನೈತಿಕ ಜೀವನಗಳನ್ನು ವ್ಯವಸ್ಥೆಗೊಳಿಸಲು ಅಪಾಲೊ ಇವರ ಆಡಳಿತವನ್ನು ಅತಿಕ್ರಮಿಸಬೇಕಾಯಿತು.

ಗ್ರೀಕರ ಧರ್ಮದ ಪ್ರಕಾರ ಅಪಾಲೊ, ಅಥಿನಾ ಮುಂತಾದ ಒಬ್ಬಿಬ್ಬರು ದೇವತೆಗಳು ಅಲ್ಲಿನ ಸಮಾಜ ಜೀವನದ ರಕ್ಷಕರು. ಒರಿಸ್ಟಿಯ ಮತ್ತು ಪ್ರೊಮಿಥಿಯ ಈ ಎರಡು ಮುಕ್ಕೂಟ ನಾಟಕಗಳಲ್ಲಿಯೂ ಈಸ್ಕೈಲಸನು, ಪ್ರಾಚೀನ ಸಮಾಜದಲ್ಲಿ ನೈತಿಕ, ರಾಜಕೀಯ ವ್ಯವಸ್ಥೆ ವಿಕಾಸವಾದುದನ್ನೂ, ಮೊದಲು ಬರಿಯ ಅಧಿಕಾರ ಶಕ್ತಿಯ ಪ್ರತಿಮೆಯಾಗಿದ್ದ ಸ್ಯೂಸನು ಜ್ಞಾನಿಯೂ ದಯಾಶೀಲನೂ ಆಗಿ ಮಾರ್ಪಟ್ಟುದನ್ನೂ ಚಿತ್ರಿಸಿದ್ದಾನೆ. (ಪ್ಲೇಟೋ ಜ್ಞಾನಕ್ಕೂ ಮಹತ್ತರ ಶಕ್ತಿಗೂ ಇರುವ ಪರಸ್ಪರ ಆಕರ್ಷಣೆಯನ್ನು ಉದಾಹರಣೆಗಳ ಮೂಲಕ ವಿವರಿಸುತ್ತಾ, ಟೈರೀಸಿಯಸ್ಸಿಗೂ ಕ್ರಿಯೋನಿಗೂ ಇಂತಹ ಸಂಬಂಧ ಸಾಮರಸ್ಯಗಳುಂಟಾದವೆಂದು ಹೇಳಿ ಮುಂದೆ ಪ್ರೊಮಿಥಿಯಸ್ ಮತ್ತು ಸ್ಯೂಸ್ ಇಬ್ಬರೂ ಇಂತಹ ಸಂಬಂಧದಲ್ಲೇ ಪುರಾತನರ ಪ್ರಕಾರ ಬಂದಾದರು ಎಂದಿದ್ದಾನೆ.)

ಸ್ಯೂಸ್ ದೇವನು ಜ್ಞಾನಿ ಎಂದರೂ ಅವನ ಬುದ್ಧಿವಂತಿಕೆಯಾಗಲಿ ಅಪ್ರತಿಹತ ಆಡಳಿತವಾಗಲಿ ಅಗಮೆಮ್ನಾನ್ ನಾಟಕದಲ್ಲಿ ಅಷ್ಟಾಗಿ ಕಾಣಬರುವುದಿಲ್ಲ. ಅಲ್ಲಿನ 'ಹದ್ದುಗಳ ದುಷ್ಟ ಔತಣ'ವನ್ನು ಕಂಡು ಆರ್ಟೆಮಿಸ್ ದೇವತೆ ತಿರುಗಿ ಬೀಳುತ್ತಾಳೆ.

ಅಗಮೆಮ್ನಾನ್ ಪಾಪಕ್ಕೆ ಶಿಕ್ಷೆವಿಧಿಸುವುದರಲ್ಲಿ ಮತ್ತೆ ಮತ್ತೆ ಪಾಪಮಾಡುತ್ತಾನೆ. ಆದರೆ ಕೀಫೋರಿಯಲ್ಲಿ ಅಗಮೆಮ್ನಾನ್ ಬರಿಯ ಪಾಪಿಯಾಗಿ ಕಾಣುವುದಿಲ್ಲ. ತನ್ನ ಹೆಂಡತಿಯಿಂದ ಅವನು ನಿಯಮರಹಿತವಾದ ಭೀಕರ ಕೊಲೆಗೆ ಒಳಗಾಗಿದ್ದಾನೆ. ಸ್ಯೂಸ್ ದೇವನ ಅನುಜ್ಞೆಯಂತೆ ಆಳುವವರು ರಾಜರು. ಅಂತಹವರ ಕೊಲೆ ಸ್ಯೂಸನ ಅಧಿಕಾರ ಕ್ರಮಕ್ಕೇ ಕೊಡಲಿಯ ಪೆಟ್ಟು. ಸಮಾಜ ಜೀವನಕ್ಕೆ ವಿವಾಹ ಬಂಧನವೇ ಮೂಲ. ಇಲ್ಲಿ ಪತಿಯ ಅಧಿಕಾರ ರಾಜನ ಅಧಿಕಾರಕ್ಕೆ ಪ್ರತಿರೂಪವಾದದ್ದು. ಕ್ಲೈಟೆಮ್ನೆಸ್ಟ್ರ ಸಾಮಾಜಿಕ ಜೀವನಕ್ಕೆ ಎರಡು ಬಗೆಯ ತಪ್ಪುಗಳಿಂದ ಕೊಡಲಿ ಏಟು ಹಾಕಿದ್ದಾಳೆ. ಅವಳು ಶಿಕ್ಷಾರ್ಹಳು.

ಈ ಶಿಕ್ಷೆಯ ಜವಾಬ್ದಾರಿಯನ್ನು ಅಪಾಲೊ ವಹಿಸಿಕೊಂಡು ಒರಿಸ್ಟೀಸನನ್ನು ಕಾಪಾಡುವ ಭರವಸೆ ಕೊಡುತ್ತಾನೆ. ಆದರೆ ಆ ಹೊಣೆಯನ್ನು ಹೊರಲು ಅವನೊಬ್ಬನಿಂದಲೇ ಸಾಧ್ಯವಿಲ್ಲ. ಇಲ್ಲಿಯ ದೈವನಿಯಮದ ರಚನೆಯಲ್ಲಿ ಅಪೂರ್ಣತೆ ಕಂಡುಬರುತ್ತದೆ. ಅಪಾಲೊ ಎಲ್ಲ ವಿಧದಿಂದಲೂ ತಂದೆಯ ಮತ್ತು ಪತಿಯ ಅಧಿಕಾರವನ್ನು ಎತ್ತಿಹಿಡಿಯಬಹುದು. ಆದರೆ ಸೇಡಿನ ಮಾರಿಯರು ರಕ್ತಬಾಂಧವ್ಯವನ್ನು ಅತಿಕ್ರಮಿಸಲು ಒಪ್ಪುವುದಿಲ್ಲ. ಘರ್ಷಣೆಯಲ್ಲಿ ಎರಡು ಕಡೆಯೂ ಹುರುಳಿದೆ. ತಾಯಿಯ ಕೊಲೆ ಸಹನಾತೀತವಾದದ್ದು. ಇಂತಹುದನ್ನು ತಡೆಗಟ್ಟದೆ ಸಮಾಜ ಬಾಳಲಾರದು. ಇದು ನ್ಯಾಯವಾದದ್ದೇ. ಇನ್ನೊಂದು ದೃಷ್ಟಿಯಿಂದ ನೋಡಿದಾಗ ಸಮಾಜ ಪೈತೃಕವಾದದ್ದು. ಕ್ಲೈಟೆಮ್ನೆಸ್ಟ್ರಳದು ಘೋರವಾದ ಪಾತಕ. ಅಲ್ಲದೆ ಸೇಡಿನ ಮಾರಿಯರು ವಿವೇಚನಾಹೀನರು, ನಿರ್ದಯರು, ಸಮಾಧಾನಪಡಿಸಲಾಗದಂಥವರು. ಇತರ ದೇವತೆಗಳು ಇನ್ನೂ ಉತ್ತಮ ದರ್ಜೆಯ ಪ್ರತಿಜ್ಞೆಯನ್ನುಳಿಸಿಕೊಳ್ಳುವುದು ಅವರಿಗೆ ಒಪ್ಪದ ಮಾತು. ಈ ಒಳತೋಟಿ ಕವಿಯೇ ಹೇಳುವಂತೆ ನಿರಂಕುಶತೆಗೂ ಅನಾಯಕತೆಗೂ ನಡೆದಿದೆ. ನಿಯಮ ನಿರೂಪಣೆಗಳು ನಮ್ಮ ಸ್ವಾಭಾವಿಕವಾದ ಪವಿತ್ರ ಭಾವನೆಗಳನ್ನು ತುಳಿಯಕೂಡದು. ಆದರೆ ನಿಯಮವ್ಯವಸ್ಥೆಗಳು ರಕ್ಷಿಸಲ್ಪಡಬೇಕು. ಇದು ಈಸ್ಕೈಲಸನ ವಿಚಾರ.

ಒಲಂಪಿಯನ್ ದೇವತೆಗಳು ಗೆಲ್ಲುತ್ತಾರೆ. ಸೇಡಿನ ಮಾರಿಯರ ಪ್ರಾಮುಖ್ಯತೆಗೂ ಧಕ್ಕೆ ಒರುವುದಿಲ್ಲ. ಇಂತಹ ಸ್ಥಿತಿ ಸ್ಯೂಸ್ ದೇವನ ಹೊಸ ಹಂಚಿಕೆಯಿಂದ ಅಥಿನಾದೇವಿಯ ಮೂಲಕ ಸಾಧಿಸಲ್ಪಡುತ್ತದೆ. ಇಲ್ಲಿಂದ ಮುಂದೆ ನ್ಯಾಯತೀರ್ಮಾನ ಕುರುಡುಸಂಜಿಕೆಯಿಂದಲ್ಲ, ಪ್ರತಿಯಾದ ಕೊಲೆಯಿಂದಲೂ ಅಲ್ಲ. ಒರಿಸ್ಟೀಸನಂತೆ ತಪ್ಪುಮಾಡಿಯೂ ಮಾಡದವರಿಂದಲೂ ಅಲ್ಲ. ಆದರೆ ನಿಷ್ಪಕ್ಷಪಾತವೂ, ನಿಸ್ಸಂಗವೂ ಆದ ನ್ಯಾಯಾಲಯದಿಂದ. ಹೀಗೆ ಪುರಾಡಳಿತದ ನ್ಯಾಯಾಲಯ ಪ್ರಪಂಚಕ್ಕೆ ಮಾದರಿಯಾಯಿತು. ಈಸ್ಕೈಲಸನ ಕಲ್ಪನಾ ಪ್ರತಿಭೆ ಇಲ್ಲಿ ಅಥಿನಾದೇವಿಯನ್ನು ನ್ಯಾಯಾಲಯದ ತೀರ್ಪುಗಾರರಲ್ಲಿ ಒಬ್ಬಳನ್ನಾಗಿ ಮಾಡಿ ಅಥೆನ್ಸಿನ ನ್ಯಾಯಾಲಯಕ್ಕೊಂದು ಮಾದರಿಯನ್ನು ಮಾಡಿಕೊಟ್ಟಿದೆ.

ಆದರೆ ಸ್ವರ್ಗದಲ್ಲೂ ನಿಯಾಮಕತೆ ಏರ್ಪಟ್ಟಿದೆ. ಟೈಟನರ ಮೇಲೆ ಸ್ಯೂಸನ ಅಪ್ರತಿಹತ ಆಡಳಿತ ಶಾಂತಿ ಸಮಾಧಾನ ಪೂರ್ವಕವಾಗಿ ಏರ್ಪಟ್ಟಿದೆ. ಸೇಡಿನ ಹೆಮ್ಮಾರಿಯರು ಹೊಸ ಆವರಣಕ್ಕೆ ಹೊಂದಿಕೊಂಡು ನಿಯಮಕ್ಕೆ ಒಳಗಾಗಿ ತಮ್ಮ ವಿಶೇಷ ಅಧಿಕಾರಗಳನ್ನು ಉಳಿಸಿ ಕೊಂಡು ಇನ್ನೂ ವಿಶಾಲವ್ಯಾಪ್ತಿಯ ಆಡಳಿತವುಳ್ಳವರಾಗಿ ನಿಲ್ಲುವುದೇ ಇದಕ್ಕೆ ಸಾಕ್ಷಿ. ಅವರು ಬಾಂಧವ್ಯದ ಪವಿತ್ರತೆಯನ್ನು ಕಾಯುವುದಷ್ಟೇ ಅಲ್ಲದೆ ಇತರ ಘರ್ಷಣೆಗಳನ್ನು ನಿವಾರಿಸು ವವರೂ ಆಗಿದ್ದಾರೆ. ಈ ಮುಕ್ಕೂಟ ನಾಟಕದ ಮಹತ್ತರವಾದ ಮುಕ್ತಾಯಗೀತೆಯಲ್ಲಿ ಅಥೆನ್ಸಿನ ಜನರು ತಮ್ಮ ಧರ್ಮದ ಶತಶತಮಾನಗಳ ಬೆಳವಣಿಗೆಯನ್ನು ನಾಟ್ಯಮಯ ಪ್ರತಿಮಾ ರೂಪದಲ್ಲಿ ಕಂಡರು.

**ಬಿ. ಎಸ್. ರುಕ್ಕಮ್ಮ**

# ಉಲ್ಚಕಮ್ಮೆ

"ಉಲ್ಚಕಮ್ಮೆಗಳು" ಎಂದು ಕರೆಯಲ್ಪಡುವ ಸ್ಮಾರ್ತ ಬ್ರಾಹ್ಮಣ ಪಂಗಡಕ್ಕೆ ಸೇರಿದ ಅನೇಕ ಮನೆತನಗಳು ಮೈಸೂರುದೇಶದ ನಾನಾ ಭಾಗಗಳಲ್ಲಿ ನೆಲಸಿವೆ ಎಂಬುದು ಎಲ್ಲರಿಗೂ ತಿಳಿದ ವಿಷಯ. ಈ ಪಂಗಡದ ಬಹು ಜನರು ಬೆಂಗಳೂರು, ಕೋಲಾರ, ತುಮಕೂರು, ಬಳ್ಳಾರಿ ಜಿಲ್ಲೆಗಳಲ್ಲಿಯೂ, ಸ್ವಲ್ಪ ಮಂದಿ ಇತರ ಜಿಲ್ಲೆಗಳಲ್ಲಿಯೂ ವಾಸವಾಗಿದ್ದಾರೆ. ಅಷ್ಟೇ ಅಲ್ಲದೆ, ಮೈಸೂರುದೇಶದ ಎಲ್ಲೆಗಳಲ್ಲಿರುವ ಈಗಿನ ಆಂಧ್ರ ಪ್ರದೇಶದ ಅನಂತಪುರ, ಕರ್ನೂಲು ಜಿಲ್ಲೆಗಳಲ್ಲಿಯೂ ಈ ಪಂಗಡದ ಕೆಲ ಮನೆತನಗಳು ಇವೆ. ಆದರೆ "ಉಲ್ಚಕಮ್ಮೆ" ಎಂಬ ಪದದ ಅರ್ಥವಾಗಲಿ ಅದರ ಮೂಲವಾಗಲಿ ಏನು ಎಂಬುದು ಖಚಿತವಾಗಿ ತಿಳಿದಂತೆ ತೋರುವುದಿಲ್ಲ. ಕೆಲವು ವಿದ್ವಾಂಸರು ಬೇರೆ ಬೇರೆ ರೀತಿ ಇದರ ಅರ್ಥವನ್ನು ಹೇಳಿದ್ದಾರೆ. ಇವುಗಳಲ್ಲಿ ಯಾವುದನ್ನು ಅಂಗೀಕರಿಸಬೇಕೆಂದು ನಿರ್ಧರಿಸುವುದು ಕಷ್ಟವಾಗಿದೆ. ಈ ಪದಕ್ಕೆ ಸಮಂಜಸವಾದ ಅರ್ಥವೊಂದನ್ನು ಸೂಚಿಸಬೇಕೆಂಬುದೇ ಈ ಲೇಖನದ ಉದ್ದೇಶ.

ನಮ್ಮ ದೇಶದಲ್ಲಿರುವ ಅನೇಕ ಬ್ರಾಹ್ಮಣ ಪಂಗಡಗಳು ಒಂದು ಪ್ರಾಂತದ ಅಥವಾ ಒಂದು ಊರಿನ ಹೆಸರಿನಿಂದ ನಿರ್ದೇಶಿಸಲ್ಪಡುತ್ತಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ವಿವೇಚಿಸಬಹುದು. "ಹೊಯಿಸಳಕರ್ಣಾಟಕರು" ಹೊಯಿಸಳದೇಶದ ನಿವಾಸಿಗಳಾದ ಕನ್ನಡ ಮಾತನಾಡುವ ಸ್ಮಾರ್ತಬ್ರಾಹ್ಮಣರು. "ಸೀರನಾಡು" ಜನರು ತುಮಕೂರು ಜಿಲ್ಲೆಯಲ್ಲಿರುವ ಸೀರ್ಯವೇ (ಈಗ ಸಿರಾ) ಮುಖ್ಯಪಟ್ಟಣವಾದ ನಾಡಿನ ನಿವಾಸಿಗಳು. "ಮುಲುಕಿನಾಡು," "ವೆಲನಾಡು," "ಆರವೇಲು" ಎಂಬ ಹೆಸರುಗಳಿಂದ ಕರೆಯಲ್ಪಡುವ ಬ್ರಾಹ್ಮಣರು ಆಯಾ ಪ್ರಾಂತದ ಅಂದರೆ ಮುಲುಕಿನಾಡು, ವೆಲನಾಡು, ಆರವೇಲು ಪ್ರಾಂತಗಳಿಂದ ಮೈಸೂರುದೇಶಕ್ಕೆ ಬಂದವರು. "ಮುಲುಕಿನಾಡು" ಎಂಬ ಪ್ರಾಂತವು ಕಡಪ ಜಿಲ್ಲೆಯ ಕೆಲಭಾಗಗಳನ್ನು ಒಳಕೊಂಡಿತ್ತೆಂಬುದು ಅನೇಕ ಶಾಸನಗಳಿಂದಲೂ ಇತರ ಆಧಾರಗಳಿಂದಲೂ ಗೊತ್ತಾಗಿದೆ. ಕಡಪಕ್ಕೆ ಸುಮಾರು ಎಂಟುಮೈಲಿ ದೂರದಲ್ಲಿರುವ ಪುಷ್ಪಗಿರಿಯ ಸುತ್ತುಮುತ್ತಲಿನ ಪ್ರದೇಶಕ್ಕೆ "ಮುಳಿಕಿ 300," "ಮುಲಿಕಿನಾಡು" "ಮುಲುಕಿನಾಡು" ಎಂದು ಶಾಸನಗಳಲ್ಲಿ ಹೆಸರಿದೆ. ಇದರಂತೆಯೇ ವೆಲನಾಡು ಪ್ರಾಂತವು ಗುಂಟೂರು ಜಿಲ್ಲೆಯ ರೇಪಲ್ಲೆ ಮತ್ತು ತೆನಾಲಿ ತಾಲ್ಲೂಕುಗಳನ್ನೊಳಗೊಂಡಿತ್ತು. ಆರವೇಲು ಪ್ರಾಂತವು "ಕೃಷ್ಣವೇಣ್ಯಾ ನದೀದಕ್ಷಿಣ ಷಟ್‌ಸಹಸ್ರ ಗ್ರಾಮಾವನೀ" ಎಂದು ಶಾಸನಗಳಲ್ಲಿ ವರ್ಣಿತವಾಗಿದೆ. ಅಂದರೆ ಕೃಷ್ಣಾನದಿಯ ದಕ್ಷಿಣತೀರದಲ್ಲಿ ಆರುಸಾವಿರ (ತೆಲುಗಿನಲ್ಲಿ ಆರುವೇಲು) ಗ್ರಾಮಗಳನ್ನೊಳಗೊಂಡ ಪ್ರಾಂತಕ್ಕೆ ಈ ಹೆಸರಿತ್ತೆಂದು ಗೊತ್ತಾಗುತ್ತದೆ. ಇದನ್ನು "ಕೋಟ" ಎಂಬ ಮನೆತನದ ಸಾಮಂತರು ತಮ್ಮ ರಾಜಧಾನಿಯಾದ ಧಾನ್ಯಕಟಕದಿಂದ ಆಳುತ್ತಿದ್ದರೆಂದು ಶಾಸನಗಳು ಹೇಳುತ್ತವೆ. ಈ ಧಾನ್ಯಕಟಕವು ಬೌದ್ಧ ಶಿಲ್ಪಕಲೆಗೆ ಪ್ರಖ್ಯಾತವಾದ ಅಮರಾವತಿಯ ಬಳಿಯಲ್ಲಿರುವ ಈಗಿನ "ಧರಣಿಕೋಟ" ಎಂದು ಹೆಸರುಳ್ಳ ಸಣ್ಣ ಗ್ರಾಮ. ಅಮರಾವತಿಯು ಗುಂಟೂರಿನಿಂದ ಸುಮಾರು ಇಪ್ಪತ್ತೊಂದು ಮೈಲಿ ದೂರದಲ್ಲಿ ಕೃಷ್ಣಾನದಿಯ ದಕ್ಷಿಣತೀರದಲ್ಲಿದೆ. ಆದ್ದರಿಂದ ಧರಣಿಕೋಟೆಯ ಸುತ್ತುಮುತ್ತಲಿನ ಪ್ರಾಂತವೇ ಆರವೇಲು ಪ್ರಾಂತವೆಂದು ಹೆಸರು ಪಡೆದಿತ್ತೆಂಬುದು ವ್ಯಕ್ತವಾಗುತ್ತದೆ. ಮೈಸೂರು ಮತ್ತು ಇತರ ಪ್ರಾಂತಗಳಲ್ಲಿ ಬಂದು ನೆಲಸಿರುವ ಆರುವೇಲು ಬ್ರಾಹ್ಮಣರು ಅಲ್ಲಿಂದ ಬಂದವರು.

ಇದೇರೀತಿಯಾಗಿ ಮೈಸೂರು ದೇಶದಲ್ಲಿರುವ ದೇಶಸ್ಥ ಬ್ರಾಹ್ಮಣರು "ದೇಶ" ಎಂಬ

ದಕ್ಖನ್ ಪ್ರಸ್ಥಭೂಮಿಯ (Deccan plateau) ನಿವಾಸಿಗಳು. ಕೊಂಕಣಸ್ಥ ಬ್ರಾಹ್ಮಣರು ಕೊಂಕಣದಿಂದ ಬಂದವರು. ಕೊಂಕಣವು ಪಶ್ಚಿಮಘಟ್ಟಕ್ಕೂ ಸಮುದ್ರಕ್ಕೂ ನಡುವೆ ಇರುವ ಪ್ರದೇಶ, ಅಂದರೆ ಠಾಣಾಜಿಲ್ಲೆಯಿಂದ ದಕ್ಷಿಣಕ್ಕೆ ಗೋವೆಯ ವರಗಿನ ಪ್ರದೇಶವೆಂದು ಸ್ಥೂಲವಾಗಿ ಹೇಳಬಹುದು.

ಇವುಗಳೆಲ್ಲವೂ ನಾಡುಗಳ ಹೆಸರುಗಳಿಂದ ನಿರ್ದೇಶಿಸಲ್ಪಟ್ಟ ಪಂಗಡಗಳು. ಇನ್ನು ಊರುಗಳ ಹೆಸರುಗಳಿಂದ ಕರೆಯಲ್ಪಡುವ ಕೆಲವು ಪಂಗಡಗಳ ವಿಷಯವನ್ನು ಪರಿಶೀಲಿಸ ಬಹುದು. "ಮೂಗೂರು ಕರ್ಣಾಟಕರು" ಮೈಸೂರು ಜಿಲ್ಲೆಯಲ್ಲಿರುವ ಮೂಗೂರು ಗ್ರಾಮದವರು. "ಶಿವಳ್ಳಿ ಬ್ರಾಹ್ಮಣ" ಎಂಬವರು ಮಂಗಳೂರು ಜಿಲ್ಲೆಯ ಉಡುಪಿಯ ಬಳಿ ಇರುವ ಶಿವಳ್ಳಿ ಎಂಬ ಹಳ್ಳಿಯವರು. "ಕೋಟ" ಬ್ರಾಹ್ಮಣರು ಇದೇ ಮಂಗಳೂರು ಜಿಲ್ಲೆಯ "ಕೋಟ" ಎಂಬ ಸ್ಥಳದವರು. "ಮಂಡ್ಯಂ ಅಯ್ಯಂಗಾರ್" ಎಂಬ ಶ್ರೀವೈಷ್ಣವ ಪಂಥದವರು ಮಂಡ್ಯಜಿಲ್ಲೆಯ ಮುಖ್ಯ ಪಟ್ಟಣವಾದ ಮಂಡ್ಯ ಸ್ಥಳದವರು. "ಸಂಕೇತಿಗಳು" ಮದರಾಸ್ ರಾಜ್ಯದ ತಿರುನೆಲ್‌ವೇಲಿ ಜಿಲ್ಲೆಯ "ಶೆಂಕೋಟ್ಟ" ಎಂಬ ಊರಿನಿಂದ ಮೈಸೂರು ದೇಶಕ್ಕೆ ಬಂದು ನೆಲಸಿದವರೆಂದು ಈ ಜನಗಳಲ್ಲಿ ಕೆಲವರ ಹೇಳಿಕೆ. ತಮಿಳು ಮಾತೃಭಾಷೆಯಾಗಿರುವ "ಬೃಹಚ್ಚರಣಂ" ಎಂಬ ಸ್ಮಾರ್ತ ಬ್ರಾಹ್ಮಣಪಂಗಡದಲ್ಲಿ ಎರಡು ಮೂರು ಬಗೆಗಳಿವೆ. ಕಂಡ್ರಮಾಣಿಕ್ಯಂ, ಸತ್ಯಮಂಗಲಂ, ತಿರುವಣ್ಣಾಮಲೈ ಎಂಬ ಈ ಬಗೆಗಳವರ ಹೆಸರುಗಳೇ ಈ ಜನರು ಈ ಊರುಗಳ ನಿವಾಸಿಗಳಾಗಿದ್ದಾರೆಂದು ಸೂಚಿಸುತ್ತವೆ. "ನಂದವರೀಕುಲು" ಎಂಬ ಹೆಸರನ್ನುಳ್ಳ ತೆಲುಗು ಬ್ರಾಹ್ಮಣರು ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯಲ್ಲಿರುವ ನಂದವರಂ ಎಂಬ ಊರಿನಿಂದ ಬಂದವರು. "ಗೋಲ್ಕೊಂಡ ವ್ಯಾಪಾರುಲು" (ಈಗ ವ್ಯಾಪಾರಿಗಳಲ್ಲ) ಎಂಬ ಬ್ರಾಹ್ಮಣರು ಹೈದರಾಬಾದ್ ಸಮೀಪದಲ್ಲಿರುವ ಜಗದ್ವಿಖ್ಯಾತ ವಾದ ಗೋಲ್ಕೊಂಡ ಸ್ಥಳದವರು. ಹೀಗೆಯೇ ಪುದೂರು ದ್ರಾವಿಡಿಗಳು, ತುಮ್ಮಕುಂಟಿ ದ್ರಾವಿಡಿಗಳು ಮೊದಲಾದ ಬ್ರಾಹ್ಮಣ ಪಂಗಡಗಳು ಊರುಗಳ ಹೆಸರುಗಳಿಂದ ಪ್ರಸಿದ್ಧಿ ಯಾಗಿವೆ.

ಊರು ಅಥವಾ ನಾಡಿನ ಹೆಸರನ್ನು ಒಂದು ಪಂಗಡಕ್ಕೆ ಕೊಡುವ ಪದ್ಧತಿಯು ದಕ್ಷಿಣ ಭಾರತದಲ್ಲಿ ಹೆಚ್ಚು ಪ್ರಚಾರದಲ್ಲಿದ್ದರೂ, ಭಾರತದ ಇತರ ಪ್ರದೇಶಗಳಲ್ಲಿಯೂ ಈ ಪದ್ಧತಿಯನ್ನು ಕಾಣಬಹುದು. ಉದಾಹರಣೆಗಾಗಿ ಮಹಾರಾಷ್ಟ್ರ ದೇಶದ "ಕರ್ಹಾಡೀ" ಬ್ರಾಹ್ಮಣರು ಸಾತಾರಾ ಜಿಲ್ಲೆಯ ಕರಹಾಡ (ಈಗಿನ ಕರಾಡ) ಸ್ಥಳೀಕರು. ಉತ್ತರ ಪ್ರದೇಶ (U P.) ಮತ್ತು ಮಧ್ಯಪ್ರದೇಶ (M.P.)ಗಳಲ್ಲಿ ಬಹು ಸಂಖ್ಯಾತರಾದ "ಕಾನ್ಯಕುಬ್ಜ" ಬ್ರಾಹ್ಮಣರು ಇತಿಹಾಸದಲ್ಲಿ ಪ್ರಖ್ಯಾತಿಯನ್ನು ಹೊಂದಿದ ಕಾನ್ಯಕುಬ್ಜ ವಿನಿರ್ಗತರು. ಈ ಕಾನ್ಯಕುಬ್ಜವು ಉತ್ತರಪ್ರದೇಶದ ರಾಜಧಾನಿಯಾದ ಲಖನೌ ಸಮೀಪದಲ್ಲಿರುವ ಅತ್ತರ್ ತಯಾರಿಕೆಗೆ ಪ್ರಸಿದ್ಧ ವಾದ ಕನ್ನೌಜ್ ಎಂಬ ಪಟ್ಟಣ. "ವರೇಂದ್ರೀ" ಬ್ರಾಹ್ಮಣರೆಂಬುವರು ಬಂಗಾಳಾದೇಶದ ವರೇಂದ್ರೀ ಪ್ರಾಂತದವರು (ಈಗಿನ ರಾಜಶಾಹೀ ಡಿವಿಷನ್).

ಈ ರೀತಿ ನಾಡುಗಳ ಮತ್ತು ಊರುಗಳ ಹೆಸರಿನಿಂದ ವಿದಿತವಾದ ಅನೇಕ ಬ್ರಾಹ್ಮಣ ಪಂಗಡಗಳು ಭಾರತದ ಎಲ್ಲಾ ಭಾಗಗಳಲ್ಲಿದ್ದಂತೆ, ಮೈಸೂರುದೇಶದಲ್ಲಿ ನೆಲಸಿವೆ ಎಂಬುದನ್ನು ವ್ಯಕ್ತಪಡಿಸಿದಂತಾಯಿತು. ಹೀಗೆಯೇ "ಉಲ್ಚ ಕಮ್ಮೆ" ಎಂಬ ಪಂಗಡವೂ ಒಂದು ಊರಿನ ಹೆಸರಿನಿಂದಲೇ ಹುಟ್ಟಿದೆ ಎಂಬುದು ನನ್ನ ಅಭಿಪ್ರಾಯ. "ಉಲ್ಚ ಕಮ್ಮೆ" ಎಂಬ ಪದವು "ಉಲ್ಚ" ಮತ್ತು "ಕಮ್ಮೆ" ಎಂಬ ಎರಡು ಪದಗಳನ್ನೊಳಗೊಂಡಿದೆ. "ಕಮ್ಮೆ" ಎಂಬುದು "ಕರ್ಮಿನ್" ಎಂಬ ಸಂಸ್ಕೃತ ಪದದ ಕನ್ನಡರೂಪ. "ಕರ್ಮಿನ್" ಎಂದರೆ ವೈದಿಕ ಕರ್ಮ ಗಳನ್ನು ಶ್ರದ್ಧೆಯಿಂದ ಅನುಷ್ಠಾನ ಮಾಡುತ್ತಿರುವ ಬ್ರಾಹ್ಮಣ ಎಂಬುದನ್ನು ಹೊಸದಾಗಿ

ಹೇಳಬೇಕಾಗಿಲ್ಲ.[1] ಇನ್ನು "ಉಲ್ಚ" ಎಂಬ ಪದಕ್ಕೆ ಅರ್ಥ. "ಉಲ್ಚ" ಎಂಬ ಪದವು "ಉಳ್ಚಳ್" ಎಂಬ ಊರಿನ ಹೆಸರಿನ ರೂಪಾಂತರ. "ಉಳ್ಚಳ್" ಪದವು "ಉಲ್ಚಳ್" ಆಗಿ ಆಮೇಲೆ "ಉಲ್ಚ"ವಾಗಿದೆ. ಇದು ಹೀಗಿರಬೇಕೆಂದು ನಾನು ಶಾಸನಸಂಗ್ರಹಕ್ಕಾಗಿ ಸಂಚಾರಮಾಡುತ್ತಿರುವ ಸಂದರ್ಭದಲ್ಲಿ ಕರ್ನೂಲು ಜಿಲ್ಲೆಯ "ಉಲಚಾಲ" ಗ್ರಾಮದಲ್ಲಿ ಒಂದು ಶಿಲಾಶಾಸನವನ್ನು ಪರೀಕ್ಷಿಸುತ್ತಿದ್ದಾಗ ಹೊಳೆಯಿತು. ಈ ಶಾಸನವು ಬಾದಾಮಿಯ ಚಾಲುಕ್ಯವಂಶದ ವಿಜಯಾದಿತ್ಯ ಮಹಾರಾಜನ ಮೂವತ್ತೈದನೆಯ ರಾಜ್ಯಸಂವತ್ಸರದಲ್ಲಿ, ಅಂದರೆ ಕ್ರಿ.ಶ.730 ನೆಯ ಇಸವಿಯಲ್ಲಿ ಕೊಟ್ಟ ಒಂದು ದಾನಪತ್ರ. ಇದರಲ್ಲಿ ವಿಜಯಾದಿತ್ಯನ ಮಗನಾದ ಯುವರಾಜ ವಿಕ್ರಮಾದಿತ್ಯನು ಕಾಂಚೀಪಟ್ಟಣವನ್ನು ಮುತ್ತಿ ಅಲ್ಲಿಯ ರಾಜನಾದ ಪರಮೇಶ್ವರ ಪಲ್ಲವನಿಂದ ಕಪ್ಪವನ್ನು ಕೊಂಡು ಹಿಂತಿರುಗುತ್ತಿದ್ದಾಗ "ಉಳ್ಚಳು" ಮತ್ತು "ಪರಿಯಳು" ಎಂಬ ಗ್ರಾಮಗಳನ್ನು ಕೊಂಗುಣಿವಂಶೀಯನಾದ "ದುರ್ವಿನೀತ ಪೆರಿಯಪ್ಪೋರ್" ಎಂಬ ಸಾಮಂತನಿಗೆ ಕೊಟ್ಟಂತೆ ಹೇಳಿದೆ. ಈ ಶಾಸನವು ಉಲಚಾಲಗ್ರಾಮದಲ್ಲೇ ಇರುವುದರಿಂದ ಇದರಲ್ಲಿ ನಿರ್ದಿಷ್ಟವಾದ "ಉಳ್ಚಳು" ಉಲಚಾಲವೇ ಎಂದು ಸ್ಪಷ್ಟವಾಗಿದೆ. ಈ ವಿಜಯಾದಿತ್ಯನ ತಂದೆಯಾದ ವಿನಯಾದಿತ್ಯನ ಶಾಸನವೊಂದರಲ್ಲಿ ಈ ಗ್ರಾಮದ ಹೆಸರು "ಉಳ್ಚಳ್" ಎಂದಿದೆ. ಮೇಲೆ ತೋರಿಸಿದಂತೆ "ಉಲ್ಚಕಮ್ಮಿ"ಯ "ಉಲ್ಚ" ಎಂಬ ಪೂರ್ವಾರ್ಧ ಪದವು "ಉಳ್ಚಳ್" ಎಂಬ ಪದದ ಸಂಕ್ಷಿಪ್ತಸ್ವರೂಪ. ಈ ಉಲಚಾಲ ಗ್ರಾಮವು ಕರ್ನೂಲಿನ ವಾಯುವ್ಯದಿಕ್ಕಿನಲ್ಲಿ ಹತ್ತು ಮೈಲಿ ದೂರದಲ್ಲಿದೆ. ಕನ್ನಡನಾಡಾದ ರಾಯಚೂರ್ ಜಿಲ್ಲೆಯ ಅಂಚಿನಲ್ಲಿರುವ ಈ ಗ್ರಾಮದ ಸುತ್ತುಮುತ್ತಲಿನ ಪ್ರದೇಶವು ಈಗ ತೆಲುಗು ರಾಜ್ಯದಲ್ಲಿದ್ದರೂ ಕೆಲವು ಶತಮಾನಗಳ ಹಿಂದೆ ಕರ್ಣಾಟಕದೇಶಕ್ಕೇ ಸೇರಿತ್ತು. ಈ ಸಂದರ್ಭದಲ್ಲಿ ಪ್ರಸ್ತುತ ಶಾಸನವು[2] ಕನ್ನಡ ಭಾಷೆಯಲ್ಲಿಯೇ ಇದೆ ಎಂಬುದು ಗಮನಾರ್ಹವಾದ ವಿಷಯ. ಇದೊಂದು ಮಾತ್ರವಲ್ಲದೆ ಅನೇಕ ಕನ್ನಡ ಶಾಸನಗಳು ಈ ಪ್ರಾಂತದಲ್ಲಿ ದೊರೆತಿವೆ. ಆದುದರಿಂದ ಕನ್ನಡವೇ ಮಾತೃಭಾಷೆಯಾಗಿರುವಂತಹ "ಉಲ್ಚಕಮ್ಮಿ" ಜನರು ಕನ್ನಡನಾಡಾಗಿದ್ದ ಈ ಭಾಗದವರೆಂಬುದು ಅಸಂಭವವಲ್ಲ. ಯಾವ ರೀತಿಯಾಗಿ ಬಬ್ಬೂರಿನ ಕಮ್ಮಿಗಳು "ಬಬ್ಬೂರು ಕಮ್ಮಿ"ಗಳಾದರೋ ಅದೇ ರೀತಿ "ಉಳ್ಚಳು" ಅಥವಾ "ಉಳ್ಚಳ್" ಗ್ರಾಮದ ಕಮ್ಮಿಗಳು "ಉಲ್ಚಕಮ್ಮಿ"ಗಳಾದರು.

ಎಸ್. ಲಕ್ಷ್ಮೀನಾರಾಯಣರಾವ್

---

[1] ಬಸವರಾಜದೇವರ ರಗಳೆ (1.98), ಯಶೋಧರಚರಿತೆ (1.20) ಮೊದಲಾದ ಗ್ರಂಥಗಳಲ್ಲೂ (ಇವುಗಳನ್ನು ತೋರಿಸಿಕೊಟ್ಟು ಉಪಕಾರ ಮಾಡಿದವರು ಪ್ರೊ|| ತೀ. ನಂ. ಶ್ರೀಕಂಠಯ್ಯನವರು). ಕೆಲವು ಕನ್ನಡ ಶಾಸನಗಳಲ್ಲೂ (ಉದಾ *Bombay-Karnatak Epigraphical Collection*, No. 207 of 1926-27) "ಕವ್ಮೆಕುಲ"ವೆಂಬ ಹೆಸರಿನ ಬ್ರಾಹ್ಮಣಕುಲವೊಂದು ಉಲ್ಲಿಖಿತವಾಗಿದೆ. ಇಲ್ಲಿಯ "ಕವ್ಮೆ" ಪದವು "ಕವ್ಮಿ" ಎಂಬುದರ ರೂಪಾಂತರವಿದ್ದಂತೆ ತೋರುತ್ತದೆ.

[2] ಪಲ್ಲವರಾಜರ ಕಾಲಮಾನವನ್ನು ನಿರ್ಧರಿಸುವುದಕ್ಕೆ ಈ ಶಾಸನದಲ್ಲಿ ಉಲ್ಲಿಖಿತವಾದ ಕಾಲವು (ಕ್ರಿ. ಶ. 730) ಬಹಳ ಮಹತ್ವದ್ದಾಗಿದೆ. ಈ ಶಾಸನವು ಸಿಕ್ಕುವವರೆಗೂ ನಂದಿವರ್ಮ ಪಲ್ಲವನ ರಾಜ್ಯದ ಪ್ರಾರಂಭ ಕಾಲನಿರ್ಣಯದ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿದ್ದವು. ಈ ಶಾಸನದಲ್ಲಿ ನಂದಿವರ್ಮನಿಗಿಂತ ಮೊದಲು ಆಳುತ್ತಿದ್ದ ಪರಮೇಶ್ವರನು ಕ್ರಿ. ಶ. 730 ರಲ್ಲಿ ಇದ್ದನೆಂದು ತಿಳಿಯುವುದರಿಂದ ಇವಕ್ಕೆ ಮುಂಚೆ ನಂದಿವರ್ಮನು ಪಟ್ಟಕ್ಕೆ ಬಂದಿರಲಾರನು ಎಂದು ಸ್ಪಷ್ಟವಾಗುತ್ತದೆ (*Journal of Indian History, Vol* XXX, pt. iii, pp, 287 ff. ನಲ್ಲಿ ಪ್ರಕಟವಾದ "Date of Pallava Paramesvara" ಎಂಬ ನನ್ನ ಲೇಖನವನ್ನು ನೋಡಿ).

# ಕೆಲವು ಕಿರುಗತೆಗಳು

"ವಡ್ಡಾರಾಧನೆ," "ಪಂಚತಂತ್ರ," "ಧರ್ಮಾಮೃತ" ಮುಂತಾದ ಗ್ರಂಥಗಳು ಕನ್ನಡದಲ್ಲಿ ತುಂಬ ವಿಶಿಷ್ಟವಾದುವು. ಇವುಗಳಲ್ಲಿ ಮುಖ್ಯ ಕಥೆಗಳೂ ಉಪಕಥೆಗಳೂ ಒಂದರೊಡನೆ ಒಂದು ಹೆಣೆದುಕೊಂಡು ಓದುವವರನ್ನು ಆಶ್ಚರ್ಯಗೊಳಿಸುತ್ತವೆ. ಇದೇ ರೀತಿ, "ಭೇತಾಳ ಪಂಚವಿಂಶತಿ ಕಥೆಗಳು," "ಬತ್ತೀಸಪುತ್ಥಳಿ ಕಥೆಗಳು," "ಸೋಂಪಿಯ ಕಥೆಗಳು" ಮೊದಲಾದುವು ಶಾಸ್ತ್ರೀಯವಾಗಿ ಪರಿಷ್ಕರಣಗೊಂಡು ಪ್ರಕಟವಾಗಬೇಕಾಗಿವೆ. ಕನ್ನಡ ಸಾಹಿತ್ಯದಲ್ಲಿ ಸಾಕಷ್ಟು ದೊರೆಯುವ ಈ ಕಥಾಸಾಹಿತ್ಯವನ್ನು ಕುರಿತು ವ್ಯಾಸಂಗ ಮಾಡಬೇಕಾದ ಹಲವಾರು ಅಂಶಗಳಿವೆ. ಈ ನಾನಾ ಕಥೆಗಳ ಮೂಲ, ಸ್ವರೂಪ, ಆಗಿಂದಾಗ್ಗೆ ಆಗಿರಬಹುದಾದ ಬದಲಾವಣೆ, ಆಯಾ ಕವಿಯ ಧ್ಯೇಯ, ಶೈಲಿ ಮುಂತಾದ ವಿಚಾರಗಳ ವಿಮರ್ಶೆ ಆಗಬೇಕಾಗಿದೆ. ಪ್ರಕೃತದಲ್ಲಿ, ಈ ಸಮುದಾಯಕ್ಕೆ ಸೇರಿದ ಕೆಲವು ಕಥೆಗಳನ್ನು ಆರಿಸಿಕೊಂಡು ಅವುಗಳ ಪರಂಪರೆಯನ್ನು ಕುರಿತು ವಿಚಾರಮಾಡಲು ಪ್ರಯತ್ನಿಸಿರುತ್ತೇನೆ.

ಇಂಥ ಸಣ್ಣ ಸಣ್ಣ ಕಥೆಗಳು ಹೇಗೆ, ಎಂದು ಜನ್ಮತಾಳುತ್ತವೆ ಎನ್ನುವುದನ್ನು ಖಚಿತವಾಗಿ ಹೇಳುವುದು ಕಷ್ಟವೇ ಸರಿ. ಭರತಖಂಡದ ಸಾಹಿತ್ಯದಲ್ಲಿ ವೇದೋಪನಿಷತ್ತುಗಳು, ಬೌದ್ಧ ಮತ್ತು ಜೈನಗ್ರಂಥಗಳು, ರಾಮಾಯಣ, ಭಾರತ, ಭಾಗವತಗಳಲ್ಲಿ ಅನೇಕ ಕಿರುಗತೆಗಳು ಕಣ್ಣಿಗೆ ಬೀಳುತ್ತವೆ. ಎಲ್ಲಕ್ಕಿಂತಲೂ ಹೆಚ್ಚಾಗಿ ವಿಷ್ಣುಶರ್ಮನ "ಪಂಚತಂತ್ರ," ಕ್ಷೇಮೇಂದ್ರನ "ಬೃಹತ್ಕಥಾಮಂಜರಿ," ಸೋಮದೇವನ "ಕಥಾಸರಿತ್ಸಾಗರ"ಗಳು ಈ ರೀತಿಯ ಕಥೆಗಳ ಭಂಡಾರವೇ ಸರಿ. ಗುಣಾಢ್ಯನ "ಬೃಹತ್ಕಥೆ" ನಮ್ಮ ಪಾಲಿಗೆ ಈವರೆಗೆ ಇಲ್ಲದೆ ಹೋದರೂ, ಅದನ್ನು ಅವಲಂಬಿಸಿ ಬರೆದ ಉದ್ಗ್ರಂಥಗಳು ಉಳಿದು ಬಂದಿರುವುದು ನಮ್ಮ ಪುಣ್ಯ. ಈ ಅಪೂರ್ವವಾದ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು ಸಂಸ್ಕೃತ ಕಥಾಸಾಹಿತ್ಯ ಬೆಳೆದಂತೆಯೇ, ದೇಶಭಾಷೆಗಳ ಕಥಾಕೋಶವೂ ಸಮೃದ್ಧಿಯಾಯಿತು ಎನ್ನಬಹುದು. ಕವಿಗಳು ಮನರಂಜನೆಗಾಗಿಯೋ ಮತ ಪ್ರಚಾರಕ್ಕಾಗಿಯೋ ಈ ಕಥೆಗಳನ್ನು ಧಾರಾಳವಾಗಿ ಬಳಸಿಕೊಂಡಿದ್ದಾರೆ. ಹಾಗೆ ಉಪಯೋಗಿಸಿದಾಗ ಅಷ್ಟೋ ಇಷ್ಟೋ ಬದಲಾವಣೆಯನ್ನು ತಿಳಿದೋ ತಿಳಿಯದೆಯೋ ಮಾಡಿರುವುದೂ ಉಂಟು. ಈ ರೂಪಪರಿವರ್ತನೆಯ ಪರಿಶೀಲನೆ ತುಂಬ ಸ್ವಾರಸ್ಯವಾದದ್ದು.

"ದೊಂಬರ ಚೆನ್ನಿ"ಯ ಕಥೆ ಕನ್ನಡ ಜನಪದ ಸಾಹಿತ್ಯದಲ್ಲಿ ಬಹು ಪ್ರಿಯವಾದ ಒಂದು ರಚನೆ ("ಜನಪದಗೀತೆ", ಪು. ೫೩-೫೮ ; ಸಂಗ್ರಹಕಾರರು : ಶ್ರೀ ಎಸ್. ಕೆ. ಕರೀಂಖಾನ್). ದೊಂಬರ ಗುಂಪೊಂದು ಬಂದು ಆಟ ಕಟ್ಟುವುದು. ಅವರ ಆಟವನ್ನು ಮೆಚ್ಚಿ ಬಲ್ಲಾಳರಾಯನು ಬೇಕಾದ ಹಾಗೆ ಉಡುಗೊರೆಗಳನ್ನು ಕೊಟ್ಟು ಸನ್ಮಾನಿಸುವನು. ಈ ಮಧ್ಯೆ ರಾಜಗುರು ಆಟ ಕಟ್ಟಿದ ದೊಂಬರ ಚೆನ್ನಿಯ ರೂಪಕ್ಕೆ ಮರುಳಾಗಿ, ಆಕೆಯನ್ನು ಕಂಡು "ಏನೆ ದೊಂಬರ ಚೆನ್ನಿ ಭಾಳಾ ಭ್ರಮೆಪಟ್ಟೆ ಬರಬೇಕು ನಿನ್ನಿಂದೆ ನಾ" ಎಂದು ಕೇಳಿಕೊಳ್ಳುವನು. ಆಕೆ ಜಾತಿಯ ಪ್ರಶ್ನೆ ಎತ್ತಲು ಗುರು "ಹೆಣ್ಣೀನ ಕುಲವೊಂದು ಗಂಡೀನ ಕುಲವೊಂದು ಮನವೆರಡು ಕೂಡಿದ್ಮೇಲೆ ದೊಂಬರ ಚೆನ್ನಿ ಭಿನ್ನಗಳೊದಗುವೇನ?" ಎಂದು ಸಮಾಧಾನ ಹೇಳುವನು. ಆಗ, ಆಕೆ ಬಗೆಬಗೆಯಾದ ಷರತ್ತುಗಳನ್ನು ಹಾಕುವಳು. ಗುರುಗಳು ಎಲ್ಲಕ್ಕೂ ಸಮ್ಮತಿಸುವರು. ಕಡೆಗೆ "ಮಠದ ಬಾಗಿಲಿಗೆಲ್ಲ ಬೀಗಮುದ್ರೆಯ ಹಾಕಿ" ಆಕೆಯ ಹಿಂದೆ ಹೊರಡುವರು. ಬಲ್ಲಾಳರಾಯನು ಗುರುವನ್ನು ಕಾಣದೆ, ಹುಡುಕಿ ಹುಡುಕಿ, ಕಡೆಗೆ ದೊಂಬರ ಚೆನ್ನಿಯ ಸಂಗಡ

ಮಣ್ಣಿನ ಬಟ್ಟಲಲ್ಲಿ ಅನ್ನವನ್ನು ತಿನ್ನುತ್ತಿದ್ದ ಅವರನ್ನು ಕಾಣುವನು. ತನ್ನ ಪೂಜಾಭಾವನೆಯನ್ನು ತೊರೆಯದೆ "ತಾರೋ ಪ್ರಸಾದವನ್ನು ಗುರುಸ್ವಾಮಿ ತಾರೋ ಪ್ರಸಾದವನ್ನು" ಎಂದು ಪ್ರಾರ್ಥಿಸುವನು. ಅವರು ತಾವು ಪರಾಧೀನರೆಂದೂ, ರಾಜನು ಬೇರೊಬ್ಬ ಗುರುವನ್ನು ಹುಡುಕಿಕೊಳ್ಳಬೇಕೆಂದೂ ಹೇಳುವರು. ರಾಜನಾದರೋ ಆದಿಗುರುವನ್ನು ಬಿಡಲಾರೆನೆಂದು ಅವರ ಮಾತನ್ನು ನಿರಾಕರಿಸುವನು. ಶಿವಭಕ್ತರು ಬಲ್ಲಾಳರಾಯನ ಗುರುಭಕ್ತಿಗೆ ಮೆಚ್ಚಿ ಅವನನ್ನು ಕೈಲಾಸಕ್ಕೆ ಕರೆದೊಯ್ಯಲು ಬರುವರು. ಆಗಲೂ ಮಹಾರಾಜನು "ಶಿವದೂತರೆ ಕೇಳಿ ನಾನೊಂದ ಹೇಳುವೆ ಗುರುವನ್ನ ಬಿಟ್ಟಿರಲಾರೆ" ಎನ್ನುವನು. ಅವರು ಗುರುವನ್ನು ಕೇಳಲು ಆತ "ಶಿವದೂತರೆ ಕೇಳಿ ನಾನೊಂದ ಹೇಳುವೆ ಚೆನ್ನೀನ ಬಿಟ್ಟಿರಲಾರೆ" ಎನ್ನುವನು. ಕಡೆಗೆ ಅವರು ಎಲ್ಲರಿಗೂ ಆಹ್ವಾನವೀಯುವರು. ಈ ಕಥೆ ಹೇಗೋ ಜನರ ಮನದಲ್ಲಿ ಮೂಡಿ ಕುಡಿಯೊಡೆದು ಬೆಳೆದು ಇಂದಿನವರೆಗೂ ಜನಪದ ಸಾಹಿತ್ಯದಲ್ಲಿ ಉಳಿದಿದೆ. ಇದು ಮೊದಲು ಯಾವ ರೂಪದಲ್ಲಿತ್ತೋ ಏನೋ! ಇಲ್ಲಿ ಹೇಳಿರುವ ಬಲ್ಲಾಳರಾಯನ ವೃತ್ತಾಂತವು ಎಷ್ಟರ ಮಟ್ಟಿಗೆ ಐತಿಹಾಸಿಕವೋ ಏನೋ! ಅಂತೂ, ಈ ಮನಃಪ್ರಿಯವಾದ ಕಥೆ ಬೇರೆ ಬೇರೆ ಸಂದರ್ಭಗಳಲ್ಲಿ ಹೇಗೆ ಹಬ್ಬಿ ಬಂದಿದೆಯೆಂಬುದು ತುಂಬ ಕುತೂಹಲಕಾರಿಯಾಗಿದೆ.

"ಕುಮಾರರಾಮನ ಕಥೆ"ಯನ್ನು ಕುರಿತು ಬರೆದಿರುವ ಮಹಲಿಂಗಸ್ವಾಮಿ ಈ ಕಥೆಯನ್ನು ತನ್ನ ಕಾವ್ಯದಲ್ಲಿ ಪ್ರಾಸಂಗಿಕವಾಗಿ ಬಳಸಿಕೊಂಡಿರುತ್ತಾನೆ (ಸಂಧಿ xv, ಪ. ೧೧೩-೧೧೯). ನೇಮಿಯು ಎರಡನೆಯ ಬಾರಿ ಕಂಪಿಲನ ಮೇಲೆ ದಂಡೆತ್ತಿ ಬರುವಾಗ ಆ ಸೈನ್ಯದಲ್ಲಿ ಅನೇಕ ಬಿಬ್ಬಿಯರೂ ಇರುತ್ತಾರೆ. ಅವರು ಮಲ್ಲುಕರನ್ನು ಕುರಿತು, ಕುಮಾರರಾಮನನ್ನು ಅವರು ಸೆರೆ ಹಿಡಿಯಲಾರದೆ ಹೋದರೆ ತಮ್ಮನ್ನು ಬಿಟ್ಟು ನೋಡಬೇಕೆಂದೂ, ದೊಂಬರ ಚೆನ್ನಿಯು ಜಂಗಮನನ್ನು ಮರುಳುಮಾಡಿ ಒಲಿಸಿದಂತೆ ಅವನನ್ನು ವಶಪಡಿಸಿಕೊಳ್ಳುವುದಾಗಿಯೂ ಸವಾಲು ಹಾಕುವರು. ಈ ಸಂದರ್ಭದಲ್ಲಿ ಅವರು ದೊಂಬರ ಚೆನ್ನಿಯ ಕಥೆಯನ್ನು ಹೇಳುವರು. ಇಲ್ಲಿನ ನಿರೂಪಣೆ ಹೀಗಿದೆ: "ಒಂದು ದೊಂಬರ ಗುಂಪಿನವರು ತಮ್ಮ ಚಾತುರ್ಯವನ್ನು ಪ್ರದರ್ಶಿಸಬೇಕೆಂದು ರಾಜನ ಸಂದರ್ಶನಕ್ಕಾಗಿ ಬಗೆಬಗೆಯಾಗಿ ಪ್ರಯತ್ನಿಸುವರು. ಆತ ತನ್ನ ಗುರುಪೂಜೆಯಲ್ಲಿಯೇ ನಿರತನಾಗಿದ್ದುದರಿಂದ ದೊಂಬರನ್ನು ಕಾಣಲು ಆಗುವುದಿಲ್ಲ. ಆಗ ಆ ಗುಂಪಿನಲ್ಲಿದ್ದ ಚೆನ್ನಿಗೆ ಕೋಪವುಂಟಾಗಿ ಆತನ ಗುರುವನ್ನೇ ಮರುಳುಮಾಡಿ ಸ್ವಾಧೀನಪಡಿಸಿಕೊಳ್ಳುವಳು." ಜನಪದ ಸಾಹಿತ್ಯದ ಕಥಾವಸ್ತುವಿಗೂ ಇದಕ್ಕೂ ಹೆಚ್ಚು ವ್ಯತ್ಯಾಸವೇನೂ ಇಲ್ಲ. ಎರಡು ಕಡೆಗಳಲ್ಲಿಯೂ ರಾಜನ ಗುರುವೇ ವ್ರತಭಂಗಕ್ಕೆ ಗುರಿಯಾಗುತ್ತಾನೆ. ಆದರೆ, ಎರಡನೆಯ ನಿದರ್ಶನದಲ್ಲಿ ಚೆನ್ನಿ ಚಲಗಾತಿಯಾಗಿ ಪರಿವರ್ತನಗೊಂಡಿದ್ದಾಳೆ. ಸುಮಾರು ೧೮ನೆಯ ಶತಮಾನದಲ್ಲಿ ರಚಿತವಾಗಿರಬಹುದಾದ ಮಹಲಿಂಗಸ್ವಾಮಿಯ ಈ ಕೃತಿಯಲ್ಲಿ ಜನಜನಿತವಾದ ಕಥೆಗೆ ಮನ್ನಣೆ ದೊರೆತಿರುವುದೊಂದು ವಿಶೇಷ ಸಂಗತಿ. ಇಷ್ಟೇ ಅಲ್ಲದೆ, ಇದೇ ಕಾವ್ಯದಲ್ಲಿ, ಕಂಪಿಲನು ರತ್ನಾಜಿ ಎಂಬ ಹೆಂಗಸನ್ನು ಮದುವೆಯಾದ ಸಂದರ್ಭವೂ ಬಹುಮಟ್ಟಿಗೆ ಇದೇ ಕಥೆಯನ್ನು ಹೋಲುತ್ತದೆ. ದೊಂಬರ ಗುಂಪಿನಲ್ಲಿದ್ದ ಚೆಲುವೆ ರತ್ನಾಜಿ ಕಂಪಿಲನ ಸಮ್ಮುಖದಲ್ಲಿ ಅದ್ಭುತವಾಗಿ ತನ್ನ ಚಾತುರ್ಯವನ್ನು ತೋರಿಸುವಳು. ಆಕೆಯ ರೂಪಕ್ಕೆ ಮಾರುಹೋದ ಮಹಾರಾಜನು ಆಕೆಯನ್ನು ಮೆಚ್ಚಿ ಮದುವೆಯಾಗುವನು (ಸಂಧಿ I, ಪ. ೧೧೭-೧೯೧). ಹೆಣ್ಣಿನ ವ್ಯಾಮೋಹಜಾಲ ಗುರುವಿನ ಕಡೆಯಿಂದ ರಾಜನ ಕಡೆಗೆ ತಿರುಗಿರುವ ಬದಲಾವಣೆ ಗಮನಾರ್ಹವಾದುದು. ಅಂತೂ, ಈ ಕಥೆ ಕನಿಷ್ಠಪಕ್ಷ ಇನ್ನೂರು ವರ್ಷಗಳಷ್ಟಾದರೂ ಹಳೆಯದು ಎನ್ನುವುದು ಈ ಮೂಲಕ ಅರಿವಾಗುತ್ತದೆ.

"ಬುಕ್ಕರಾಯನ ಚರಿತ್ರೆ"ಯಲ್ಲಿ ಪವಾಡಪ್ಪನಾಯಕನೆಂಬ ಪಾಳೆಯಗಾರನನ್ನು ಕುರಿತು ಪ್ರಸ್ತಾಪಿಸುವಾಗ ಇಂಥ ಸನ್ನಿವೇಶವೇ ಬರುತ್ತದೆ (ಕಸಾಪಪ., ಸಂ. VIII. ಸಂ. ೧., ಪು ೪೪). ಪವಾಡಪ್ಪನಾಯಕನು "ರಾಯದುರ್ಗದೊಳಗೆ ನೇರದುದುರಾದ ಕೂಟ್ಲದಿಂದ ಕೂಡೇಟಿ

11976



ಸಂಗಮೇಶ್ವರ ದೇವರ ರಥೋತ್ಸವಕ್ಕೆ" ಬಂದಿರುವಾಗ, ಅಲ್ಲಿ ಗಣೆಯ ಮೇಲೆ ಆಟ ಹೂಡಿದ್ದ ಪೆನ್ನಮ್ಮ ಎಂಬಾಕೆಯನ್ನು ಕಂಡು ಮೋಹಗೊಳ್ಳುತ್ತಾನೆ. ಆಕೆಯ ತಂದೆತಾಯಿಗಳಿಗೆ ಭೂಮಿ ಕಾಣಿಗಳನ್ನು ಕೊಟ್ಟು ಆಕೆಯನ್ನು ಮದುವೆಯಾಗುತ್ತಾನೆ. ಈ ಕೃತಿಯ ಕಾಲವನ್ನು ರಾ. ನರಸಿಂಹಾಚಾರ್ಯರು ಕ್ರಿ. ಶ. ೧೮೧೧ ಎಂದು ಸೂಚಿಸಿರುತ್ತಾರೆ (ಕ. ಚ., ಸಂ. III, ಪು. ೩೯೭). ಆದ್ದರಿಂದ, ಹಿಂದೆ ಉದಾಹರಿಸಿದ ಗ್ರಂಥಕ್ಕಿಂತ ಒಂದು ಶತಮಾನಕ್ಕೆ ಈಚೆಗೂ ಈ ಕಥಾವಸ್ತು ಎಷ್ಟು ಪ್ರಿಯವಾಗಿತ್ತೆಂದೂ, ಹೇಗೆ ಸೂಕ್ಷ್ಮವಾಗಿ ಮಾರ್ಪಟ್ಟಿರುವುದೆಂದೂ ವಿದಿತವಾಗುತ್ತದೆ.

ಅಲ್ಲಿಂದ ಈಚೆಗೆ ಈ ಕಥಾವಸ್ತುವನ್ನು ಶ್ರೀ ಪಂಜೆ ಮಂಗೇಶರಾಯರು ತಮ್ಮ 'ಡೊಂಬರ ಚೆನ್ನೆ" ಎಂಬ ಕವನದಲ್ಲಿ ("ಪಂಜೆಯವರ ನೆನಪಿಗಾಗಿ," ಪು. ೧೫೯-೧೬೧). ಪುನಃ ಎರಕಹೊಯ್ದಿರುತ್ತಾರೆ. ಡೊಂಬರ ಚೆನ್ನೆ ಅರಸನ ಮುಂದೆ ಆಟಕಟ್ಟಿ ಅವನ ಕಣ್ಮನಗಳನ್ನು ಸೂರೆಗೊಳ್ಳುತ್ತಾಳೆ. ಆತನಿಗೆ ಆಕೆಯಲ್ಲಿ ಅನುರಾಗವುಂಟಾಗುತ್ತದೆ. ಡೊಂಬರವನನ್ನು ಕಂಡು ಆಕೆಯನ್ನು ತನಗೆ ಒಪ್ಪಿಸಿಕೊಡುವಂತೆ ಕೇಳುತ್ತಾನೆ. ಡೊಂಬರವನಿಗಾದರೋ ಮನಸ್ಸಿಲ್ಲ. "ಮಗಳ ಹೆಸರಿನ ಮೈಗೆ ಸೂಳೆಯ ಬೆಡಗ ಸೀರೆಯ ಉಡಿಸೆನು, ನಗರೆ? ಹೆಸರಿನ ತಲೆಗೆ ಪಾದರಿ ಮುಗುಳು ಹೂವನು ಮುಡಿಸೆನು" ಎಂದು ನಿರಾಕರಿಸುತ್ತಾನೆ. ಗಲಭೆಯಾಗುವುದು. ಡೊಂಬರವನೂ ಆತನ ಮಗಳೂ ಹತ್ತಿರದಲ್ಲೇ ಇದ್ದ ಹೊಳೆಗೆ ಹಾರುವರು. ರಾಜಭಟರು ಇಬ್ಬರನ್ನೂ ಹೊರಕ್ಕೆಳೆದು ತರುವರು. ಕಂಠಗತ ಪ್ರಾಣನಾಗಿದ್ದ ಡೊಂಬರವನು "ಹಿಂದೆ ನಾಲ್ಕೈ ವರ್ಷಗಳ ಕೆಳಗೊಂದು ಸಲ ನಾನಿಲ್ಲಿಗೆ ಬಂದು ಗೈದಾಟಕ್ಕೆ ಪಾದದ ತಂದೆ ತಂಗಿ ಸುನಂದೆಯು" ತನ್ನ ಮಗಳಾದ ರತ್ನಾವತಿಯೊಂದಿಗೆ ತನ್ನ ಹಿಂದೆ ಬಂದಳೆಂದೂ, ಅಂದು ಹಸುಗೂಸಾಗಿದ್ದ ಹೆಣ್ಣುಮಗುವೇ ಈ ಚೆನ್ನೆಯೆಂದೂ ತಿಳಿಸಿ "ಕಡಲಿನ ನೀರೆ ಕಡಲಿಗೆ ಸೇರಿತು" ಎಂದು ನುಡಿದು ಕಣ್ಣುಮುಚ್ಚುವನು. ರಾಜನಿಗೆ ತನ್ನ ಸಹೋದರಿಯ ಮಗಳೇ ಅವಳೆಂದು ತಿಳಿದುಬಂದಂತಾಯಿತು. ಚೇತರಿಸಿಕೊಂಡ ಆಕೆಯನ್ನು ವರಿಸಿ, ಆಕೆಗೆ ಬೇಕಾದ ಹಾಗೆ ಸನ್ಮಾನಮಾಡುವನು. ಮುಖ್ಯವಾಗಿ, ಎಂದೋ ಹೇಗೋ ಮೊಳಕೆದೋರಿದ ಈ ಕಥೆ ಕಾಲಕಾಲಕ್ಕೆ ಮಾರ್ಪಟ್ಟಿರುವ ರೀತಿ ತುಂಬ ಸ್ವಾರಸ್ಯವಾಗಿದೆ. ಗುರುವಿನ ವ್ಯಾಮೋಹ ಹಿಂದೆಬಿದ್ದು, ಮಹಾರಾಜನ ಮನೋನುರಾಗವೇ ಮಿಗಿಲಾಗಿ ನಿಲ್ಲುತ್ತದೆ. ಜನಪದ ಕವಿಯಿಂದ ಹಿಡಿದು ಆಧುನಿಕ ಕವಿಯವರೆಗೆ ಇದರ ಪರಂಪರೆ ಬೆಳೆದುಬಂದಿದೆ.

"ವಡ್ಡಾರಾಧನೆ"ಯೊಂದು ಅಪೂರ್ವವಾದ ಕನ್ನಡ ಕಥೆಗಳ ಗಣಿ. ಈವರೆಗೆ ಅದರ ಮೂಲವನ್ನು ಕಾಣಲು ಸಾಧ್ಯವಾಗದಿದ್ದರೂ ಅದರ ಕಥೆಗಳಂತೆಯೇ ಇರುವ ರಚನೆಗಳು ಅಲ್ಲಿ ಇಲ್ಲಿ ಕಂಡುಬರುತ್ತವೆ. "ವಡ್ಡಾರಾಧನೆ"ಯ ಹತ್ತೊಂಬತ್ತು ಕಥೆಗಳಿಗೂ, ಹರಿಷೇಣನ ಬೃಹತ್ಕಥಾಕೋಶದ ೧೨೬ ರಿಂದ ೧೪೪ ರ ವರೆಗಿನ ಕಥೆಗಳಿಗೂ ಹೋಲಿಕೆಯಿದೆಯೆಂಬ ಅಂಶವನ್ನು ಡಾ|| ಎ. ಎನ್. ಉಪಾಧ್ಯೆ ಅವರು ತೋರಿಸಿಕೊಟ್ಟಿರುತ್ತಾರೆ (Bṛhatkathā Kośa, Introduction, P. 65). "ಸುಕುಮಾರಸ್ವಾಮಿ"ಯ ಕಥೆಯಲ್ಲಿ ಪ್ರಾಸಂಗಿಕವಾಗಿ ಒಂದು ಕನ್ನೆಯ ಕಥೆ ಬರುತ್ತದೆಯಷ್ಟೆ. ಅದರಲ್ಲಿ ಅಡಕವಾಗಿರುವ ಮೂರು ಉಪಕಥೆಗಳಲ್ಲಿ ಮೊದಲನೆಯ ಕಥೆ ಹೀಗಿದೆ: "ಪಾಟಲೀಪುತ್ರದಲ್ಲಿ ಸುದತ್ತನೆಂಬ ಒಬ್ಬ ಸೆಟ್ಟಿ ಇದ್ದನು. ಆತನಿಗೆ ಸುದಾಮೆ ಎಂಬ ಮಗಳಿದ್ದಳು. ಅವಳು ಗಂಗಾಸ್ನಾನ ಮಾಡುತ್ತಿರುವಾಗ ಒಂದು ಮೊಸಳೆ ಬಂದು ಹಿಡಿದುಕೊಂಡಿತು. ಅಲ್ಲಿಯೇ ಇದ್ದ ತನ್ನ ಬಂಧುವಾದ ಧನದತ್ತನನ್ನು ಬಿಡಿಸಬೇಕೆಂದು ಕೇಳಿಕೊಂಡಳು. ಅವನ ಅಪೇಕ್ಷೆಯನ್ನು ನೆರವೇರಿಸುವುದಾಗಿ ವಾಗ್ದಾನಮಾಡಲು, ಅವನು ಆಕೆಯನ್ನು ವಿಪತ್ತಿನಿಂದ ಪಾರುಮಾಡಿದನು. ಅವನು ಆ ತರುಣಿಯನ್ನು ಕಂಡು "ನೀನು ಮದುವೆಯ ದಿನ ಅಲಂಕೃತಳಾಗಿ ನನ್ನ ಬಳಿಗೆ ಬಂದು ಕಾಣಬೇಕು" ಎಂದು ಹೇಳಿದನು. ಆಕೆ ಒಪ್ಪಿಕೊಂಡಳು. ವಯಸ್ಸಾಗಲು ಆಕೆಗೆ ಮದುವೆಯಾಯಿತು. ತನ್ನ ಮಾತಿನ ಮೇರೆಗೆ ಸರ್ವಾಲಂಕಾರ

ಭೂಷಿತೆಯಾಗಿ ತನ್ನ ಬಂಧುವಿನ ಎಡೆಗೆ ಹೊರಟಳು. ಆಗ ದಾರಿಯಲ್ಲಿ ಒಬ್ಬ ಕಳ್ಳನು ಅಡ್ಡಗಟ್ಟಿ, ಆಕೆಯ ಆಭರಣಗಳನ್ನೆಲ್ಲ ಕೊಡಬೇಕೆಂದು ಕೇಳಿದನು. ಆಕೆ ತಾನು ಹಿಂತಿರುಗಿ ಬರುವಾಗ ಕೊಡುವುದಾಗಿ ಹೇಳಿದಳು. ಮತ್ತೆ ಸ್ವಲ್ಪದೂರ ಹೋದಮೇಲೆ ಒಬ್ಬ ತಳಾರನೂ, ಅನಂತರ ಒಬ್ಬ ಬ್ರಹ್ಮರಾಕ್ಷಸನೂ ಅಡ್ಡಗಟ್ಟಿದರು. ಅವರಿಗೂ ಹಿಂದೆ ಹೇಳಿದಂತೆಯೇ ಹೇಳಿ, ನಂಟನ ಬಳಿಗೆ ಬಂದಳು. ಹುಡುಗಿಯ ಸತ್ಯಸಂಧತೆಗೆ ಮೆಚ್ಚಿ ಅವನು ಅವಳನ್ನು ಹಿಂತಿರುಗಿ ಕಳುಹಿಸಿ ಕೊಟ್ಟನು. ಆಕೆಯನ್ನು ಅಡ್ಡಗಟ್ಟಿದ್ದ ಮೂವರೂ ಆಕೆಯ ಬೆನ್ನಹಿಂದೆಯೇ ಹೋಗಿದ್ದರು. ಆಕೆ ಹಿಂತಿರುಗುವ ವೇಳೆಗೆ ತಮ್ಮ ತಮ್ಮ ಸ್ಥಾನಗಳಲ್ಲಿ ಬಂದು ನಿಂತಿದ್ದರು. ಸುದಾಮೆಯ ಸತ್ಯಕ್ಕೆ ತಲೆದೂಗಿ ಎಲ್ಲರೂ ಆಕೆಯನ್ನು ಬೀಳ್ಕೊಟ್ಟರು" ("ವಡ್ಡಾರಾಧನೆ," ಪು. ೧೫-೧೭, ಸಂ. ಶ್ರೀ. ಡಿ. ಎಲ್. ನರಸಿಂಹಾಚಾರ್).

ಈ ಮೇಲೆ ಸೂಚಿಸಿರುವ ಉಪಕಥೆ ತುಂಬ ಮಹತ್ವವಾದುದು. ಹರಿಷೇಣನು ಯಾವ ಉಪಕಥೆಯನ್ನೂ ಬಳಸಿಕೊಂಡಿಲ್ಲ. ಕಥೆಗೆ ಹಿನ್ನೆಲೆಯಾಗಿ ಬರುವ ಸೆಟ್ಟಿಯ ಮಗನು ಹಾವು ಕಚ್ಚಿ ಸಾಯುವುದನ್ನು ಮಾತ್ರ ಹೇಳಿರುತ್ತಾನೆ. "ವಡ್ಡಾರಾಧನೆ"ಯನ್ನೇ ಅನುಸರಿಸಿ ಬರೆದಿರ ಬಹುದಾದ ಶಾಂತಿನಾಥನು ತನ್ನ "ಸುಕುಮಾರ ಚರಿತೆ"ಯಲ್ಲಿ "ವಡ್ಡಾರಾಧನೆ"ಯಲ್ಲಿ ಬರುವ ಮೂರು ಉಪಕಥೆಗಳಲ್ಲಿ ಮೇಲೆ ಹೇಳಿರುವ ಒಂದನ್ನು ಮಾತ್ರ ಇಟ್ಟುಕೊಂಡಿದ್ದಾನೆ (VII, ಪ. ೧೬ ವ-೨೮ ವ.). ಎಂದಿನಂತೆಯೇ ಈ ಕಥೆಯನ್ನು ಕಳ್ಳನನ್ನು ಕಂಡುಹಿಡಿಯುವುದಕ್ಕಾಗಿ ತಳಾರನ ಮಗಳೇ ಹೇಳುವಳು. ಬ್ರಹ್ಮರಾಕ್ಷಸ, ಕಳ್ಳ ಮತ್ತು ತಳಾರರು ಅಡ್ಡಗಟ್ಟುವರು. ಭಾವನ ಹೆಸರು ಧನದೇವ ಎಂದು ಹೇಳಿದೆ. ಹುಡುಗಿಯ ಹೆಸರು ಸುದಾಮೆಯೆಂದೂ, ಆಕೆಯ ತಂದೆಯ ಹೆಸರು ವಸುದತ್ತನೆಂದೂ ಬರುತ್ತದೆ. "ವಡ್ಡಾರಾಧನೆ"ಯ ಸರಣಿಗೂ ಇಲ್ಲಿನ ಸರಣಿಗೂ ಹೋಲಿಕೆ ಕಂಡುಬರುತ್ತದೆ. (ಕಥೆಗೆ ಹಿನ್ನೆಲೆಯಾಗಿ ಬರುವ ಮುಖ್ಯ ಘಟನೆಯಲ್ಲಿ ಸತ್ತವಳು ಸುಮಿತ್ರನೆಂಬ ವರ್ತಕನ ಮಗಳು ವಸುಕಾಂತೆ ಎಂದು ಬದಲಾಯಿಸಿದೆ.)

ಈ ಕಥೆ ಕ್ಷೇಮೇಂದ್ರನ "ಬೃಹತ್ಕಥಾಮಂಜರಿ" (IX ಶಶಾಂಕವತಿ ಲಂಬಕ, ವೇತಾಲ ಪಂಚವಿಂಶತಿಕಾ, ಕಥೆ ೧೦) ಯಲ್ಲಿಯೂ ಸೋಮದೇವನ "ಕಥಾಸರಿತ್ಸಾಗರ" (ಶಶಾಂಕವ ತೀಲಂಬಕ, ವೇತಾಲ ಪಂಚವಿಂಶತಿಕಾ, ಕಥೆ ೧೦) ದಲ್ಲಿಯೂ ಒಂದೇ ರೀತಿಯಾಗಿ ಬರುತ್ತದೆ. ಅರ್ಥದತ್ತನ ಮಗಳಾದ ಮದನಸೇನೆಯನ್ನು ಆಕೆಯ ಅಣ್ಣನ ಸ್ನೇಹಿತನಾದ ಧರ್ಮದತ್ತ ನೆಂಬುವನು ಅನಿರೀಕ್ಷಿತವಾಗಿ ಕಂಡು ಮೋಹಿಸುತ್ತಾನೆ. ಆಕೆಗೆ ಈ ವೇಳೆಗಾಗಲೆ ಸಮುದ್ರ ದತ್ತನೆಂಬಾತನಿಗೆ ಕೊಟ್ಟು ವಿವಾಹಮಾಡಬೇಕೆಂದು ನಿಶ್ಚಯವಾಗಿರುತ್ತದೆ. ಆದ್ದರಿಂದ ಆಕೆ ಧರ್ಮದತ್ತನನ್ನು ಕಂಡಾಗ, ತನ್ನ ಮದುವೆಯ ದಿನದಂದು ಆತನ ಬಳಿಗೆ ಬರುವುದಾಗಿ ಭಾಷೆ ಮಾಡುತ್ತಾಳೆ. ಅಂತೆಯೇ ಆಕೆ ತನ್ನ ಮಾತನ್ನು ನೆರವೇರಿಸಲು ಹೋಗುತ್ತಿರಬೇಕಾದರೆ, ದಾರಿಯಲ್ಲಿ ಒಬ್ಬ ಕಳ್ಳನು ಆಕೆಯನ್ನು ಅಡ್ಡಗಟ್ಟುತ್ತಾನೆ. ಆಕೆ ತನ್ನ ಮಾತನ್ನು ನೆರವೇರಿಸಿ ಬರುವುದಾಗಿ ಅವನಿಗೆ ಸಮಾಧಾನ ಹೇಳಿ ಧನದತ್ತನನ್ನು ಬಂದು ಕಾಣುತ್ತಾಳೆ. ಆಕೆಯ ಸತ್ಯ ಸಂಧತೆಗೆ ಮೆಚ್ಚಿ ಧನದತ್ತನು ಆಕೆಯನ್ನು ಹಿಂತಿರುಗಿ ಕಳುಹಿಸುತ್ತಾನೆ, ಕಳ್ಳನೂ ಸಹ ಹಾಗೆಯೇ ಮಾಡುತ್ತಾನೆ. ಹೆಂಡತಿಯ ನಿಷ್ಠೆಯನ್ನು ಕಂಡು ಗಂಡನು ಸಂತೋಷಗೊಂಡು ಆಕೆಯೊಂದಿಗೆ ಸುಖವಾಗಿರುತ್ತಾನೆ. (ಈ ಕಥೆಯ ಸಾರಾಂಶವನ್ನು ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳ "ಕಥಾಮೃತ"ದಲ್ಲಿ ನೋಡಬಹುದು. ಪು. ೩೪೫-೩೪೭.) ಇಲ್ಲಿಯೂ ಕಳ್ಳನ ಬಗ್ಗೆ ತ್ರಿವಿಕ್ರಮ ಸೇನನು ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಾನೆ.

ಜಂಬಲದತ್ತನ "ವೇತಾಳ ಪಂಚವಿಂಶತಿ"ಯಲ್ಲಿ ಈ ಕಥೆ ಎಂದಿನಂತೆಯೇ ಹತ್ತನೆಯ ದಾಗಿ ಬರುತ್ತದೆ (Jambaladatta's Version of the Vetāla Pañcaviṁśati, pp. 66-73, Ed. by Dr. M. B. Emeneau, American Oriental Series, Vol. 4.). "ಅನಂಗಪುರ ದಲ್ಲಿ ವಿಕ್ರಮಸೇನನೆಂಬ ರಾಜನು ಆಳುತ್ತಿರುತ್ತಾನೆ. ಅಲ್ಲಿ ಅರ್ಥದತ್ತನೆಂಬ ವೈಶ್ಯನೂ, ಆತನ

ಮಗ ಧನದತ್ತನೂ ಮಗಳು ಲಾವಣ್ಯವತಿಯೂ ಇರುತ್ತಾರೆ. ಈಕೆಗೆ ಕಂದರ್ಪನೆಂಬ ವರ ನಿಶ್ಚಯವಾಗಿರುತ್ತದೆ. ಈ ಮಧ್ಯೆ, ಧರ್ಮದತ್ತನೆಂಬಾತನು ಲಾವಣ್ಯವತಿಯನ್ನು ಕಂಡು ಮೋಹಗೊಳ್ಳುತ್ತಾನೆ. ಆತನ ಸಂಕಟವನ್ನು ಚಿಂತಾಮಣಿಯೆಂಬ ಆತನ ಸ್ನೇಹಿತನು ನೋಡಿ ಸಹಿಸಲಾರದೆ, ಲಾವಣ್ಯವತಿಯನ್ನು ಕಂಡು ಮಾತನಾಡಿಸಬೇಕೆಂದು ಸಲಹೆ ಮಾಡುತ್ತಾನೆ. ಆಕೆ ತನ್ನ ಸಂದಿಗ್ಧ ಸ್ಥಿತಿಯನ್ನು ಹೇಳಿ, ಕಾತರನಾಗಿದ್ದ ಧರ್ಮದತ್ತನಿಗೆ ಎಂದಿನಂತೆಯೇ ಮದುವೆಯ ದಿನದಂದು ಬಂದು ಕಾಣುವುದಾಗಿ ವಾಗ್ದಾನ ಮಾಡುವಳು. ಆಕೆಯನ್ನು ದಾರಿಯಲ್ಲಿ ಕಳ್ಳ ಬ್ರಹ್ಮರಾಕ್ಷಸರು ಅಡ್ಡಗಟ್ಟುವರು. ಕಡೆಗೆ ಆಕೆಯ ಸತ್ಯನಿಷ್ಠೆಗೆ ಎಲ್ಲರೂ ಮೆಚ್ಚಿ ಆಕೆಯನ್ನು ಕೊಟ್ಟು ಕಳುಹಿಸುವರು. ಹಿಂತಿರುಗಿ ಬಂದ ಹೆಂಡತಿಯನ್ನು ಕಂದರ್ಪನು ಸ್ವೀಕರಿಸುವುದಿಲ್ಲ. ಲಾವಣ್ಯವತಿಯನ್ನು ತ್ಯಜಿಸಿದವರಲ್ಲಿ ಕಂದರ್ಪನೇ ಮಿಗಿಲೆಂದು ಈ ಕಥೆಯಲ್ಲಿ ವಿಕ್ರಮಾದಿತ್ಯನು ಹೇಳುತ್ತಾನೆ."

ಶಿವದಾಸನ "ವೇತಾಳ ಪಂಚವಿಂಶತಿ"ಯಲ್ಲಿ ಈ ಕಥೆ ಒಂಬತ್ತನೆಯದು ಎಂಬುದಾಗಿ ಡಾ|| ಎಂ. ಬಿ. ಎಮೆನೋ ಅವರು ಸೂಚಿಸಿರುತ್ತಾರೆ (Ibid, Introduction, p. XV). ಈ ಕೃತಿಯ ಆಧಾರದ ಮೇಲೆ ರಚಿತವಾಗಿರುವ ಹಿಂದೂಸ್ತಾನಿಯ "ಭೇತಾಳ ಪಂಚವಿಂಶತಿ" ಯಲ್ಲಿಯೂ ಇದು ಒಂಬತ್ತನೆಯ ಕಥೆಯೇ ಆಗಿದೆ. (Baital pachisi, Ed. Duncan Forbes, pp. 65-69). (ಸಿ. ಎಚ್. ಟಾನಿ ಅವರು ಡಬ್ಲ್ಯು. ಬಿ. ಬಾರ್ಕರ್ ಅವರಿಂದ ಪ್ರಕಟಿತವಾದ ಮತ್ತೊಂದು ಹಿಂದಿ ಭಾಷೆಯ ಕೃತಿಯಲ್ಲಿಯೂ ಇದು ಒಂಬತ್ತನೆಯದೇ ಎಂದು ಹೇಳಿರು ತ್ತಾರೆ. ಈ ಕೃತಿ ನನ್ನ ಗಮನಕ್ಕೆ ಬಂದಿಲ್ಲ.) ಬೀರ್‌ಬರ್ ಎಂಬುವನು ಮದನಪುರದ ರಾಜ. ಹಿರಣ್ಯದತ್ತನ ಮಗಳೇ ಮದನಸೇನೆ. ಧರ್ಮದತ್ತನ ಮಗನಾದ ಸೋಮದತ್ತನು ಆಕೆಯನ್ನು ಕಂಡು ಅನುರಕ್ತನಾಗುತ್ತಾನೆ. ಆತನು ತನ್ನ ಸ್ನೇಹಿತನೊಂದಿಗೆ ಹೇಳಲು ಅವನು ಆಕೆಯನ್ನು ಕಂಡು ಮಾತನಾಡುವಂತೆ ಸಲಹೆಮಾಡುತ್ತಾನೆ. ಎಂದಿನಂತೆಯೇ ಆಕೆ ತನ್ನ ಅಸಹಾಯಕತೆ ಯನ್ನು ಹೇಳಿ ತನ್ನ ಮದುವೆಯ ದಿನದಂದು ಬಂದು ಕಾಣುವುದಾಗಿ ಹೇಳುತ್ತಾಳೆ. ಕಥೆ ಯಾವ ವ್ಯತ್ಯಾಸವೂ ಇಲ್ಲದೆ ಸಾಗುತ್ತದೆ. ದಾರಿಯಲ್ಲಿ ಕಳ್ಳನೊಬ್ಬನೇ ಅಡ್ಡಗಟ್ಟುವವನು. ಕಡೆಗೆ ಅವನಿಗೇ ಪ್ರಶಸ್ತಿ ದೊರೆಯುವುದು.

ಕನ್ನಡದಲ್ಲಿರುವ "ಭೇತಾಳ ಪಂಚವಿಂಶತಿ"ಯಲ್ಲಿಯೂ ಇದು ಒಂಬತ್ತನೆಯ ಕಥೆಯೇ ಆಗಿದೆ. ಪ್ರಕೃತ ಹಸ್ತಪ್ರತಿಯಲ್ಲಿ ಕವಿಯ ಹೆಸರು ಉಕ್ತವಾಗಿಲ್ಲ. ಕವಿಚರಿತೆಕಾರರು ಸೂಚಿಸುವ ಚಂದ್ರಗುಪ್ತನೆಂಬ ಕವಿಯ ಕೃತಿ (ಕಚ., III, ಪು. ೯೯) ಇದೇ ಏನೋ ಎಂಬುದನ್ನು ಬೇರೆ ಆಧಾರದಿಂದ ನಿರ್ಧರಿಸಬೇಕಾಗಿದೆ. ಮೈಸೂರು ಪ್ರಾಚ್ಯ ವಿದ್ಯಾಸಂಶೋಧನಾಲಯದಲ್ಲಿರುವ ಈ ಹಸ್ತಪ್ರತಿಯಲ್ಲಿ (K. A. 226, ಭೇತಾಳ ಪಂಚವಿಂಶತಿ ಕಥೆಗಳು, ಕಾಗದದ ಪ್ರತಿ, ಪು. ೭೫-೭೯) ಈ ಕಥೆಯು ಹೀಗಿದೆ: "ವಿಕ್ರಮಸೇನನೆಂಬುವನು ಪಿಪೀಲಿಕ ಎಂಬ ಪಟ್ಟಣದ ಮಹಾರಾಜ. ಅಲ್ಲಿದ್ದ ವೈಶ್ಯನೊಬ್ಬನಿಗೆ ಧನಸಮರ್ಥ ಎಂಬ ಮಗನೂ, ಮದನಮೋಹಿನಿ ಎಂಬ ಮಗಳೂ ಇರುತ್ತಾರೆ. ಧನಸಮರ್ಥನ ಸ್ನೇಹಿತನಾದ ಹೇಮದತ್ತನು ಆಕೆಯನ್ನು ಕಂಡು ಮೋಹವಶ ನಾಗುತ್ತಾನೆ. ಆಕೆಗೆ ಈ ಮೊದಲೇ ಮದುವೆ ನಿಶ್ಚಯವಾಗಿರುತ್ತದೆ. ಆದರೂ ಆಕೆ ಆ ಪ್ರಣಯಿಗೆ ಮಾತುಕೊಟ್ಟು ಅದೇಮೇರೆಗೆ ಮದುವೆಯ ದಿನದಂದು ಬಂದು ಕಾಣುತ್ತಾಳೆ. ದಾರಿಯಲ್ಲಿ ಕಳ್ಳನು ಅಡ್ಡಗಟ್ಟುತ್ತಾನೆ. ಕಡೆಗೆ ಆಕೆಯ ಸತ್ಯನಿಷ್ಠೆಗೂ, ಕಳ್ಳನ ಔದಾರ್ಯಕ್ಕೂ ಮನ್ನಣೆ ದೊರೆಯುತ್ತದೆ. ದಂಪತಿಗಳು ಸುಖವಾಗಿರುತ್ತಾರೆ."

ಪೇಟೆಯ ಪ್ರತಿಗಳಾದ "ಭೇತಾಳ ಪಂಚವಿಂಶತಿ ಕಥೆಗಳು" (ಪ್ರಕಾಶಕರು : ಶ್ರೀ. ಟಿ. ನಾರಾಯಣ ಅಯ್ಯಂಗಾರ್, ೧೯೫೭), "ಬೃಹತ್ಕಥಾಮಂಜರಿ" (ಲೇ : ಶ್ರೀ. ಬಿ. ಸಿ. ಶ್ರೀನಿವಾಸಯ್ಯಂಗಾರ್, ಪ್ರ : ಟಿ. ಎನ್. ಕೃಷ್ಣಯ್ಯಶೆಟ್ಟಿ ಅಂಡ್ ಸನ್ಸ್, ೧೯೫೭) ಗಳಲ್ಲಿಯೂ ಈ ಕಥೆ ಕಂಡುಬರುತ್ತದೆ. "ಭೇತಾಳ ಪಂಚವಿಂಶತಿ ಕಥೆಗಳ"ಲ್ಲಿ ಹತ್ತನೆಯದೇ ಆಗಿದೆ.

“ಸುಬಾಹು ಎಂಬಾತನು ಅಂಗದೇಶದ ರಾಜ. ಧನವಂತನೆಂಬ ವರ್ತಕನ ಮಗಳೇ ಮದನಾವತಿ. ಆಕೆ ಒಬ್ಬ ಬ್ರಾಹ್ಮಣನ ಬಳಿ ವಿದ್ಯಾಭ್ಯಾಸ ಮಾಡುತ್ತಿದ್ದಳು. ಅವಳೊಂದಿಗೆ ವ್ಯಾಸಂಗಮಾಡುತ್ತಿದ್ದ ಬ್ರಾಹ್ಮಣನ ಮಗನಿಗೆ ಆಕೆಯಲ್ಲಿ ಅನುರಾಗವುಂಟಾಯಿತು. ಆಕೆ ಅವನಿಗೆ ಎಷ್ಟು ಸಮಾಧಾನ ಹೇಳಿದರೂ ಅವನು ಕೇಳುವುದಿಲ್ಲ. ಎಂದಿನಂತೆಯೇ ವಾಗ್ದಾನಮಾಡಿದಳು. ಮದುವೆಯ ದಿನದಂದು ರಾತ್ರಿ ಬರುತ್ತಿರಬೇಕಾದರೆ ಚೋರನೊಬ್ಬನು ಅಡ್ಡಗಟ್ಟಿದನು. ಅವನಿಗೆ ಸಮಾಧಾನ ಹೇಳಿ, ಗುರುಪುತ್ರನನ್ನು ಕಂಡಳು. ಅವನು ಆಶೀರ್ವಾದಮಾಡಿ ಕಳುಹಿಸಿದನು. ಚೋರನೂ ಸಹ ಆಕೆಯನ್ನು ಮುಟ್ಟದೆ ಕಳುಹಿಸಿದನು. ಆಕೆಯನ್ನೇ ಹಿಂಬಾಲಿಸಿ ಹೋಗಿದ್ದ ಪತಿಗೆ ತನ್ನ ಹೆಂಡತಿಯ ವರ್ತನೆಯನ್ನು ಕಂಡು ಸಂತೋಷವಾಯಿತು, ಅವರು ಸುಖವಾಗಿದ್ದರು (ಪು. ೨೨-೨೪).”

“ಬೃಹತ್ಕಥಾಮಂಜರಿ”ಯಲ್ಲಿ ಈ ಕಥೆಯು “ಗುಣವತಿಯು ಸಾಮತಿಯಾಗಿ ಪೇಳುವ ಕಥೆ (ಕಲಾವತಿ ಮಾನಭಂಗವೆಂಬ ಮೂರನೆಯ ಭಾಗ, ಪು. ೧೩೦-೧೩೫.)” ಎಂಬುದಾಗಿ ಬರುತ್ತದೆ. ಧರ್ಮದೇವತೆ ಎಂಬ ಬ್ರಾಹ್ಮಣನ ಮಗಳನ್ನು ಕಂಡು, ಆಕೆಯ ಒಡನೆ ಓದಿದ ವೈಶ್ಯ ಬಾಲಕನೊಬ್ಬನು ಅನುರಕ್ತನಾದನೆಂದೂ, ಆಕೆ ತನ್ನ ಮಾತನ್ನು ನೆರವೇರಿಸಲು ಹೊರಟಾಗ, ಕಳ್ಳ, ಹುಲಿ, ತಳವಾರರು ಅಡ್ಡಗಟ್ಟುವರೆಂದೂ, ಅವಳ ಸತ್ಯನಿಷ್ಠೆಗೆ ಎಲ್ಲರೂ ಮೆಚ್ಚಿದರೆಂದೂ ನಿರೂಪಿತವಾಗಿದೆ.

ಬತ್ತೀಸ ಪುತ್ಥಳಿ ಕಥೆಗಳನ್ನು ಒಳಗೊಂಡ “ವಿಕ್ರಮಾದಿತ್ಯರಾಯನ ಚರಿತ್ರೆ” (ಗುರುರಾಯನಿಂದ ಪರಿಶೋಧಿಸಲ್ಪಟ್ಟಿದ್ದು ; ಪ್ರಕಾಶಕರು : ಎಂ. ಎನ್. ಮಹದೇವಯ್ಯ, ಶ್ರೀ ಸರಸ್ವತಿ ಬುಕ್‌ಡಿಪೋ, ಹಳೇ ಅಗ್ರಹಾರ, ಮೈಸೂರು.) ಎಂಬ ಪೇಟೆಯ ಪ್ರತಿಯೊಂದರಲ್ಲಿ ಇದೇ ಕಥೆ ಮೂವತ್ತನೆಯದಾಗಿ ಬರುತ್ತದೆ. ಗುರುವೊಬ್ಬನು ರಾಜಕುಮಾರಿಗೆ ಪಾಠ ಹೇಳಿಕೊಡುತ್ತಾನೆ. ಗುರುವಿನ ಅಪೇಕ್ಷೆಯಂತೆ, ಆಕೆ ತನ್ನ ಮದುವೆಯ ದಿನದ ರಾತ್ರಿ ಅಲಂಕೃತಳಾಗಿ ಗುರುವಿನ ಬಳಿಗೆ ಹೊರಟುಬರುತ್ತಾಳೆ. ದಾರಿಯಲ್ಲಿ ಆಕೆಯನ್ನು ಕೆಲವು ಕಳ್ಳರು ಅಡ್ಡಗಟ್ಟುತ್ತಾರೆ. ಅವರಿಗೆ ಮತ್ತೆ ಬರುವುದಾಗಿ ಸಮಾಧಾನ ಹೇಳಿ, ಗುರುವನ್ನು ಬಂದು ಕಾಣುತ್ತಾಳೆ. ಕಡೆಗೆ, ಆಕೆಯ ಸತ್ಯಸಂಧತೆಗಾಗಿ ಆ ಗುರುವೂ ಕಳ್ಳರೂ ಮೆಚ್ಚಿ, ಸುರಕ್ಷಿತವಾಗಿ ಕಳುಹಿಸಿಕೊಡುತ್ತಾರೆ (ಪು. ೧೧೦-೧೧೪). (ಈ ಕಥೆ ಡಾ|| ಎಫ್. ಎಜರ್ಟನ್ ಅವರ ‘Vikrama's Adventures’ ಎಂಬ ಪರಿಷ್ಕೃತ ಗ್ರಂಥದಲ್ಲಾಗಲಿ, ಇತರ ಕನ್ನಡ ಪ್ರತಿಗಳಲ್ಲಾಗಲಿ ಕಂಡುಬರುವುದಿಲ್ಲ.)

ಹೀಗೆ ಈ ಕಥೆಯ ಚರಿತ್ರೆ ತುಂಬ ದೀರ್ಘವಾದುದು. ಕಥೆಯ ಉದ್ದೇಶ, ಬೆಳೆಸಿರುವ ಕ್ರಮ, ವ್ಯಕ್ತಿಗಳ ಹೆಸರುಗಳನ್ನು ಕಾಲಕಾಲಕ್ಕೆ ಬದಲಾಯಿಸಿರುವುದನ್ನು ನೋಡಬಹುದು. ಇದನ್ನೇ ಹೋಲುವ ಇನ್ನೊಂದು ಕಥೆಯನ್ನು ಸಿ. ಎಚ್. ಟಾನಿ ಅವರು “ಕಥಾರತ್ನಾಕರ”ದಿಂದ ಎತ್ತಿ ತೋರಿಸಿರುತ್ತಾರೆ (The Ocean of Story, Vol. I, p, 201). ಪ್ರಕೃತ ಕಥೆಯಲ್ಲಿ ಹುಡುಗಿಯ ಸತ್ಯಸಂಧತೆಯೂ ಕಳ್ಳನ ಔದಾರ್ಯವೂ ಪ್ರಶಂಸಾರ್ಹವಾದ ಗುಣಗಳೆಂದೂ, ಈ ಜನಪ್ರಿಯವಾದ ವಸ್ತುವಿನಿಂದಲೇ ಈ ಕಥೆ ದೇಶ ವಿದೇಶಗಳಲ್ಲಿ ವ್ಯಾಪಿಸಿದೆಯೆಂದೂ ಅವರು ಅಭಿಪ್ರಾಯಪಡುತ್ತಾರೆ.*

* “As a matter of fact the tale is highly moral and is a lesson in magnanimity. As such it has migrated towards the west and has found a place in every important literature in the world. In fact it is one of the most intersting stories with which we have to deal and a volume could easily be written on its ramifications and the different uses of its chief motifs . . . (The Ocean of Story, Vol. I, p. 200)”; “Apart from the ‘Noble Thief’ motif our tale contains another one which is found throughout folklore stories of all lands, namely, the ‘promise to return’ motif (Ibid., pp. 202-203)”; “Now to return to the story of the damsel's rash promise we find that it soon spread to neighbouring countries—Burma, Persia, Palestine, Arabia, and so on to Turkey and across to Europe . . .” (Ibid., p. 203.)

"ವಡ್ಡಾರಾಧನೆ"ಯಲ್ಲಿ ಇದು ಒಂದು ಉಪಕಥೆಯಾಗಿ ಬಂದರೂ ಇದರ ಕೀರ್ತಿ ಎಷ್ಟು ಹಿರಿದಾದುದು ಎಂಬುದು ವ್ಯಕ್ತವಾಗುತ್ತದೆ. ಸಂಸ್ಕೃತದಲ್ಲಿ "ಬೃಹತ್ಕಥಾಮಂಜರಿ" ಮತ್ತು "ಕಥಾಸರಿತ್ಸಾಗರ"ಗಳಲ್ಲಿ ಬಹುಮಟ್ಟಿಗೆ ಏಕರೀತಿಯಾಗಿಯೂ ಸಂಕ್ಷಿಪ್ತವಾಗಿಯೂ ಇದ್ದದ್ದು "ವೇತಾಲ ಪಂಚವಿಂಶತಿ"ಯಲ್ಲಿ ಬೆಳೆದಿರುವುದನ್ನು ಕಾಣಬಹುದು. ಇತ್ತ ಕನ್ನಡದಲ್ಲಿಯಾದರೋ "ವಡ್ಡಾರಾಧನೆ"ಯ ಕಾಲಕ್ಕಾಗಲೇ ಇದರ ವಿಸ್ತೃತವಾದ ಪಾಠವೇ ಕಂಡುಬರುತ್ತದೆ. ಶಾಂತಿನಾಥನ "ಸುಕುಮಾರ ಚರಿತೆ"ಯಲ್ಲಿ ಮಾತ್ರ ಸಂಗ್ರಹವಾಗಿ ತೋರಿಬಂದು, ಅಲ್ಲಿಂದ ಮುಂದೆ ಒಂದೇ ರೀತಿಯಾಗಿ ಬೆಳೆದಿದೆ. ಸಣ್ಣ ಪುಟ್ಟ ಬದಲಾವಣೆಗಳೂ ಆಗಿಂದಾಗ್ಗೆ ಆಗಿವೆ. ಚೋರನನ್ನು ಪತ್ತೆಮಾಡುವುದಕ್ಕಾಗಿಯೋ, ಇಲ್ಲವೇ ಪಂಚಾಣುವ್ರತಗಳಲ್ಲಿ ಒಂದಾದ ಅಸ್ತೇಯವನ್ನು ಕುರಿತು ಪ್ರಸ್ತಾಪಿಸುವಾಗಲೋ, ಇಲ್ಲವೇ ಕೇವಲ ಮನರಂಜನೆಗಾಗಿಯೋ ಇದನ್ನು ಬಳಸಿಕೊಂಡಿರುತ್ತಾರೆ. ಅಪೂರ್ವವಾದ ಕಥೆಗಳನ್ನು ಒಳಗೊಂಡಿರುವ "ವಡ್ಡಾರಾಧನೆ"ಯಲ್ಲಿ ಇಂಥ ಜನಪ್ರಿಯ ಕಥೆಗಳು ಇನ್ನೂ ಎಷ್ಟು ಹುದುಗಿವೆಯೋ ಏನೋ! ಅವುಗಳ ಇರವನ್ನು ಕಂಡುಹಿಡಿದಿದ್ದೇ ಆದರೆ ಈ ಗ್ರಂಥದ ವ್ಯಾಸಂಗಕ್ಕೆ ತುಂಬ ಸಹಾಯಕವಾದೀತು; ಕಾಲ ನಿಷ್ಕರ್ಷೆಗೂ ಈ ಮೂಲಕ ಸಾಕಷ್ಟು ನೆರವು ಆದೀತು.

ದುರ್ಗಸಿಂಹನ "ಕರ್ಣಾಟಕ ಪಂಚತಂತ್ರ" ಮತ್ತೊಂದು ಅಪೂರ್ವ ಕೃತಿ. ಇದರಲ್ಲಿ ವಿಷ್ಣುಶರ್ಮನ ಪಂಚತಂತ್ರದ ಪಾಠದೊಂದಿಗೆ ಹೋಲಿಕೆಯಿರುವ ೪೬ ಕಥೆಗಳೂ, ವಸುಭಾಗ ಭಟ್ಟನ ಪಾಠಕ್ಕೆ ಸೇರಿದ ೮ ಕಥೆಗಳೂ, ಈ ಎರಡು ವರ್ಗಗಳಿಗೂ ಸೇರದ ೧೧ ಕಥೆಗಳೂ ಇರುವುವೆಂದು ಡಾ|| ಎ. ವೆಂಕಟಸುಬ್ಬಯ್ಯನವರು ತಿಳಿಸುತ್ತಾರೆ ("ವಸುಭಾಗನ ಪಂಚತಂತ್ರ", ಅಭಿವಂದನೆ, ಪು. ೫೨೩). ವಸುಭಾಗನ ಪಂಚತಂತ್ರವನ್ನು ಅವಲಂಬಿಸಿ ಬರೆದಿರುವ ಮತ್ತೆ ಎರಡು ಕೃತಿಗಳನ್ನು ಶ್ರೀಯುತರು ಕನ್ನಡಿಗರಿಗೆ ಪರಿಚಯಮಾಡಿಕೊಟ್ಟಿರುತ್ತಾರೆ. ಇವುಗಳಲ್ಲಿ ಒಂದು ಯವದ್ವೀಪದ ಭಾಷೆಯಲ್ಲಿ ರಚಿತವಾದ "ತಂತ್ರಿ" ಎಂಬ ಗ್ರಂಥ; ಇನ್ನೊಂದು ಲೇಯಾಸ್ ಭಾಷೆಯಲ್ಲಿರುವ "ಮುಲ್ಲಾ ತಂತೈ" ಎಂಬ ಗ್ರಂಥ. ಇವುಗಳಲ್ಲಿ "ಮುಲ್ಲಾ ತಂತೈ" ಗ್ರಂಥದ ಪರಿಚಯವನ್ನು ವಿಸ್ತಾರವಾಗಿ ಮಾಡಿಕೊಟ್ಟಿರುತ್ತಾರೆ ("ಲೇಯಾಸ್ ದೇಶದ ಪಂಚತಂತ್ರ" ಪ್ರಕ., ಸಂ. XL, ಸಂ. ೪, ಪು. ೫-೨೨; ಸಂ. XLI, ಸಂ. ೧, ಪು. ೩-೩೦). ಈ "ತಂತೈ" ಗ್ರಂಥವನ್ನೇ ಬಹುಮಟ್ಟಿಗೆ ಹೋಲುವ "ತಂತ್ರೋಪಾಖ್ಯಾನ" ಎಂಬ ಸಂಸ್ಕೃತ ಗ್ರಂಥವೊಂದರಲ್ಲಿಯೂ ವಸುಭಾಗನ ಹೆಸರು ಬರುವುದಾಗಿ ಹೇಳಿ, ಅದರ ಪರಿಚಯವನ್ನೂ ಮಾಡಿಕೊಟ್ಟಿರುತ್ತಾರೆ (ಪ್ರಕ. ಸಂ. XXXIX, ಸಂ. ೪, ಪು. ೨೩-೬೦). ಹೀಗೆಯೇ ಸಯಾಂ ದೇಶದಲ್ಲಿ "ತಂತ್ರೈ" ಎಂಬ ಬೇರೊಂದು ಕೃತಿಯೂ ಇರುವುದಾಗಿ ತಿಳಿದುಬರುತ್ತದೆ. ಅಂತೂ, ವಸುಭಾಗನ ಬಳಗ ದಿನದಿನಕ್ಕೂ ಬೆಳೆಯುತ್ತಿರುವುದು ಕುತೂಹಲಕಾರಿಯಾಗಿದೆ. ("ತಂತ್ರೋಪಾಖ್ಯಾನ" ಮತ್ತು "ತಂತೈ"ಗಳು ಬಹುಮಟ್ಟಿಗೆ ಒಂದೇ ರೀತಿಯಾಗಿರುವುದರಿಂದಲೂ, "ತಂತ್ರಿ" ಮತ್ತು "ತಂತ್ರೈ"ಗಳ ಕಥಾವಿವರಗಳು ಪ್ರಕೃತದಲ್ಲಿ ನನಗೆ ದುರ್ಲಭವಾಗಿರುವುದರಿಂದಲೂ, ಇಲ್ಲಿ "ತಂತೈ" ಒಂದನ್ನೇ ಹೆಚ್ಚಾಗಿ ಅವಲಂಬಿಸಿರುತ್ತೇನೆ.) ದುರ್ಗಸಿಂಹನಲ್ಲಿ ಮಾತ್ರವೇ ಕಂಡುಬರುವ ಕಥೆಗಳು, ನಮಗೆ ಪೂರ್ತಿಯಾಗಿ ಲಭಿಸದೆ ಇರುವ ವಸುಭಾಗನ ಕೃತಿಗೆ ಸೇರಬೇಕೋ, ಇಲ್ಲವೇ ಅವನೇ ಬರೆದು ಸೇರಿಸಿದ್ದಾನೆಯೋ ಎನ್ನುವುದನ್ನು ಖಂಡಿತವಾಗಿ ಹೇಳುವಂತಿಲ್ಲ. ವಿಷ್ಣುಶರ್ಮನ "ಪಂಚತಂತ್ರ"ದೊಂದಿಗೆ ಹೋಲಿಕೆಯಿರುವ ಕಥೆಗಳನ್ನು ಕೂಲಂಕಷವಾಗಿ ವಿಮರ್ಶಿಸುವುದು ಅಗತ್ಯ. ಗುಣಾಢ್ಯನ ಕೃತಿಯಲ್ಲಿ ಪಂಚತಂತ್ರದ ಕಥೆಗಳು ಇದ್ದುವೋ ಇಲ್ಲವೋ ಎಂದು ಲಕೋತ್, ಡಾ|| ಜೆ. ಹರ್ಟೆಲ್ ಮತ್ತು ಡಾ|| ಎಫ್. ಎಜರ್ಟನ್ ಅವರು ಸಂದೇಹಪಡುವುದೂ ಉಂಟು (History of Sanskrit Literature, by S. N. Dasagupta and S. K. De, Vol. I, FN. P. 89). "ಬೃಹತ್ಕಥಾಮಂಜರಿ" ಮತ್ತು "ಕಥಾಸರಿತ್ಸಾಗರ"ಗಳಲ್ಲಿಯೇನೋ

ಈ ಕಥೆಗಳು ವ್ಯಕ್ತವಾಗುತ್ತವೆ. ದುರ್ಗಸಿಂಹನು ಗುಣಾಢ್ಯ ಮತ್ತು ವಸುಭಾಗಭಟ್ಟನ ಹೆಸರನ್ನು ಅನುಕ್ರಮವಾಗಿ ಹೇಳುವುದರಿಂದ ಗುಣಾಢ್ಯನ ಕೃತಿಯಲ್ಲಿಯೇ ಈ ಕಥೆಗಳು ಅಡಕವಾಗಿದ್ದಿರ ಬಹುದೆ ಎಂಬ ಶಂಕೆಯೂ, ವಸುಭಾಗಭಟ್ಟನೂ ವಿಷ್ಣುಶರ್ಮನೂ ಗುಣಾಢ್ಯನ ಕೃತಿಯಿಂದ ನೇರವಾಗಿ ಯಾಕೆ ತೆಗೆದುಕೊಂಡಿರಬಾರದು ಎಂಬ ಸಂದೇಹವೂ ಇಲ್ಲಿ ಆಗದೆ ಇರದು. ಯಾವು ದನ್ನೂ ಶಾಸ್ತ್ರೀಯವಾಗಿ ಪರಿಶೀಲಿಸಬೇಕಾಗಿದೆ.

ಪ್ರಕೃತದಲ್ಲಿ 'ತಂತ್ರಿ' ಮತ್ತು 'ತಂತ್ರೈ' ಕಥೆಗಳೊಂದಿಗೆ ಸಮಾನವಾಗಿರುವ ಒಂದು ಕಥೆಯನ್ನು ನೋಡಬಹುದು. ಕನ್ನಡ "ಪಂಚತಂತ್ರ"ದ ಮೊದಲನೆಯ ತಂತ್ರದಲ್ಲಿ ಬರುವ ಕಚದ್ರುಮನ ಕಥೆ ತುಂಬ ಚಿಕ್ಕದು. ಮಹಾದ್ರುಮನೆಂಬ ಮಹಾರಾಜನ ಮಗನಾದ ಕಚದ್ರುಮನು ಶುದ್ಧ ಅವಿವೇಕಿ. ಆತನ ತಂದೆಯು ಗತಿಸಿದ ಅನಂತರ ಅವನು ಪಟ್ಟಕ್ಕೆ ಬರುವನು. ಆಗ, ಮೊದಲಿನಿಂದಲೂ ಕೆಲಸದಲ್ಲಿದ್ದ ಯೋಗ್ಯರನ್ನೆಲ್ಲ ತೆಗೆದುಹಾಕಿ, ಅವರ ಸ್ಥಾನದಲ್ಲಿ ದುಷ್ಟ ರನ್ನು ತಂದು ಕೂಡಿಸುವನು. ರಾಜ್ಯಭಾರ ಹದಗೆಡುವುದು. ದಾಯಾದಿಯಾದ ಸಿಂಹಬಳನೆಂಬು ವನು ದಂಡೆತ್ತಿಬರುವನು. ಎಲ್ಲರೂ ರಾಜನನ್ನು ಕೈಬಿಡುವರು. ಕಚದ್ರುಮನು ಶತ್ರುಗಳ ಕೈವಶ ನಾಗುವನು (ತಂತ್ರ I, ಕಥೆ ೨, ಪು. ೨೭-೨೯).

ಈ ಕಥೆ ವಿದೇಶೀಯ ಕೃತಿಗಳಾದ "ತಂತ್ರಿ" ಮತ್ತು "ತಂತ್ರೈ"ಗಳಲ್ಲಿ ಇರುವುದಾಗಿ ತಿಳಿದು ಬರುತ್ತದೆ. "ತಂತ್ರೈ"ಯಲ್ಲಿನ ಕಥೆಯನ್ನು ಇಲ್ಲಿ ಪರಿಶೀಲಿಸಬಹುದು. "ರಥನಗರದಲ್ಲಿದ್ದ ಮಹಾರಥನೆಂಬ ರಾಜನಿಗೆ ಕೇಸದುಮ ಎಂಬ ಮಗನಿದ್ದನು. ಇವನು ರಾಜ್ಯವನ್ನು ಸಂರಕ್ಷಿಸು ತ್ತಿದ್ದ ಎಂಟು ಮಂದಿ ಆಟವಿಕರಿಗೆ ಧನಕನಕಗಳನ್ನು ಕಳುಹಿಸುವಂತೆ ಕಾಗದ ಬರೆದನು. ಅವರು ಕಳುಹಿಸಿಕೊಟ್ಟ ಅಮೂಲ್ಯವಸ್ತುಗಳನ್ನು ಯುವರಾಜನ ಧೂರ್ತಮಿತ್ರರು ಅಪಹರಿಸಿ, ಆಟವಿಕರ ಮೇಲೆ ದೂರು ಹೇಳಿದರು. ಕೇಸದುಮನು ತಂದೆಯ ಅನಂತರ ಪಟ್ಟಕ್ಕೆ ಬಂದಕೂಡಲೆ, ಎಂಟು ಮಂದಿ ಆಟವಿಕರನ್ನೂ ಪದಚ್ಯುತರನ್ನಾಗಿ ಮಾಡಿದನು. ಅವರ ಬದಲಾಗಿ ಅಸಮರ್ಥರನ್ನು ನೇಮಿಸಿದನು. ಸ್ವಲ್ಪಕಾಲದಲ್ಲಿಯೇ ಕೇಸದುಮನ ರಾಜ್ಯವು ಶತ್ರುಗಳ ಪಾಲಾಯಿತು. ದೇಶ ಭ್ರಷ್ಟನಾದ ಅವನು ತನ್ನ ಮಾರ್ಗದಲ್ಲಿ ಎರಡು ಗಿಣಿಗಳನ್ನು ಸಂಧಿಸಿದನು. ಅವುಗಳು ಒಂದೇ ತಾಯಿಯ ಮಕ್ಕಳಾದರೂ ಸಹವಾಸದೋಷದಿಂದ, ಒಂದು ನಿರ್ದಯವಾದ ನುಡಿಗಳನ್ನೂ ಮತ್ತೊಂದು ಮೃದುವಾದ ನುಡಿಗಳನ್ನೂ ಆಡುವುದನ್ನು ಕಲಿತಿದ್ದುವು. [ಈ ಗಿಣಿಗಳ ಕಥೆ ಹರಿಷೇಣನ "ಬೃಹತ್ಕಥಾ ಕೋಶ" ದಲ್ಲಿಯೂ (ಕಥೆ ೩೩), ದುರ್ಗಸಿಂಹನ "ಪಂಚತಂತ್ರ" ದಲ್ಲಿಯೂ (ತಂತ್ರ I, ಕಥೆ ೧೨) ಬರುತ್ತದೆ. ಇದರಲ್ಲಿ ಬರುವ ಎರಡು ನೀತಿಶ್ಲೋಕಗಳೂ ಈ ಎರಡು ಕೃತಿಗಳಲ್ಲಿಯೂ ಬಹುಮಟ್ಟಿಗೆ ಒಂದೇ ತೆರನಾಗಿವೆ.] ಕಾಲಕ್ರಮದಲ್ಲಿ ಕೇಸದುಮನಿಗೆ ತನ್ನ ತಪ್ಪಿನ ಅರಿವಾಯಿತು. ಅವನು ನಿಷ್ಕಾರಣವಾಗಿ ದಂಡಿಸಿದ್ದ ಆಟವಿಕರೇ ಅವನಿಗೆ ನೆರವನ್ನೂ ನೀಡಲು, ಅವನಿಗೆ ಕೈತಪ್ಪಿದ್ದ ರಾಜ್ಯವು ಲಭಿಸಿತು." ಇದರಿಂದ ರಾಜನು ದುಡುಕಿ ನಡೆಯಬಾರ ದೆಂದು ವ್ಯಕ್ತವಾಗುತ್ತದೆ ("ಲೇಯಾಸ್ ದೇಶದ ಪಂಚತಂತ್ರ", ಪ್ರಕ. ಸಂ. XL, ಸಂ. ೪, ಪು. ೧೧-೧೨).

ಕನ್ನಡ "ಪಂಚತಂತ್ರ"ದ ಕಥೆಗೂ ಇದಕ್ಕೂ ನಿರ್ದಿಷ್ಟವಾದ ಒಂದು ವ್ಯತ್ಯಾಸವು ಗೋಚರವಾಗುತ್ತದೆ. ಕೇಸದುಮ ಮತ್ತು ಗಿಣಿಗಳ ಕಥೆಗಳು ಹೆಣೆದುಕೊಂಡಿವೆ. ರಾಜನು ರಾಜ್ಯವನ್ನು ಕಳೆದುಕೊಂಡಿದ್ದಲ್ಲದೆ ಮತ್ತೆ ಪಡೆಯುತ್ತಾನೆ. ಕನ್ನಡ ಕೃತಿಯ ಕಾಲ ೧೧ ನೆಯ ಶತಮಾನವಾದರೆ, "ತಂತ್ರಿ" ಮತ್ತು "ತಂತ್ರೈ"ಗಳ ಕಾಲವು ಕ್ರಿ. ಶ. ೧೨೦೦ ಕ್ಕಿಂತ ಪ್ರಾಚೀನ ವೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ (ಪ್ರಕ. ಸಂ. XXXIX, ಸಂ. ೪, ಪು. ೨೭). ಆದ್ದರಿಂದ, ಈ ಕಥೆ ಕ್ರಮೇಣ ಬೆಳೆಯಿತೋ ಏನೋ!

ದುರ್ಗಸಿಂಹನ ಕೃತಿಯಲ್ಲಿ ಬರುವ "ಅಜಿತನ ಕಥೆ" ಲೇಯಾಸ್ ದೇಶದ "ಪಂಚತಂತ್ರ"

ದಲ್ಲಿಯೂ ಕಂಡುಬರುತ್ತದೆ. ಕನ್ನಡದಲ್ಲಿನ ಕಥೆ ಹೀಗಿದೆ: "ಅಮರಾವತಿ ಎಂಬ ಪಟ್ಟಣದಲ್ಲಿ ವಿಮಳಮತಿ ಎಂಬ ವರ್ತಕನಿದ್ದನು. ಆತನು ತನ್ನಲ್ಲಿದ್ದ ಧನವನ್ನೆಲ್ಲ ದಾನ ಧರ್ಮಮಾಡಿ ಕಡೆಗೆ ಕಡುಬಡವನಾದನು. ಸಾಯುವಾಗ ತನ್ನ ಮಗನನ್ನು ಕರೆದು, ಅವನಿಗೆ ಅಮೂಲ್ಯವಾದ ವಸ್ತುವೊಂದನ್ನು ಪುಸ್ತಕದಲ್ಲಿ ಇಟ್ಟಿರುವುದಾಗಿ ಹೇಳಿ ಕಣ್ಣುಮುಚ್ಚಿದನು. ಅಜಿತನು ತನ್ನ ತಂದೆ ಹೇಳಿದ್ದ ಮೇರೆಗೆ ಹುಡುಕಿ ನೋಡಲು ಅದರಲ್ಲಿ ಒಂದು ಗಾಹೆ ಬರೆದಿದ್ದುದನ್ನು ಕಂಡನು. ಸಮರ್ಥನಾದವನು ಸ್ವಯಾರ್ಜಿತವನ್ನು ಭೋಗಿಸುವನೆಂದೂ, ಪರಾರ್ಜಿತವು ಆತನಿಗೆ ಗುರುಪತ್ನೀ ಸಮಾನವೆಂದೂ ಬರೆದಿತ್ತು. ಅಜಿತನಿಗೆ ಆ ಗಾಹೆಯ ಅಭಿಪ್ರಾಯ ತಿಳಿಯಿತು. ಕೂಡಲೆ, ಆಗ ರಾಜನಾಗಿದ್ದ ವಿಕ್ರಮಾದಿತ್ಯನ ಬಳಿಗೆ ಬಂದು ಅವನ ಸೇವೆ ಮಾಡತೊಡಗಿದನು. ರಾಜನು ಅವನನ್ನು ಶಯ್ಯಾಗೃಹದ ಕಾವಲಿಗಾಗಿ ನೇಮಿಸಿಕೊಂಡನು. ಒಂದು ದಿನ, ರಾಜನು ಬೇಟೆಗೆ ಹೋಗಿರುವಾಗ, ಆತನ ಮಹಾರಾಣಿಯರಿಬ್ಬರು, ರಾಮ ಮತ್ತು ಸೀತೆಯರ ವೇಷ ಧರಿಸಿ, ನಾಟಕವನ್ನಾಡಿ, ಬಳಲಿ, ಶಯ್ಯಾಗೃಹಕ್ಕೆ ಬಂದು ಮಲಗಿದ್ದರು. ಬೇಟೆಯಿಂದ ಹಿಂತಿರುಗಿ ಬಂದ ಮಹಾರಾಜನು ಅವರನ್ನು ತಪ್ಪಾಗಿ ಭಾವಿಸಿ, ಅವರನ್ನು ಕತ್ತರಿಸಲು ಕತ್ತಿಯನ್ನು ಮೇಲಕ್ಕೆ ಎತ್ತಿದನು. ಅದು ನಾಗವೇದಿಕೆಗೆ ತಗಲಿತು. ಆಗ ಅಲ್ಲಿ ಬರೆದಿದ್ದ ಒಂದು ಪ್ರಾಕೃತಗಾಹೆ ಅವನ ಕಣ್ಣಿಗೆ ಬಿದ್ದಿತು. ಅದರಲ್ಲಿ ಯಾವ ಕೆಲಸವನ್ನೇ ಆಗಲಿ ಚೆನ್ನಾಗಿ ವಿಚಾರಿಸಿ ಮಾಡಬೇಕೆಂದೂ, ಅವರಿವರು ಹೇಳಿದ್ದನ್ನು ಕೇಳಿಯಾಗಲಿ, ಅಜ್ಞಾನದಿಂದ ದುಡುಕಿಯಾಗಲಿ ಮಾಡಬಾರದೆಂದು ಬರೆದಿದ್ದಿತು. ಪ್ರಕೃತದಲ್ಲಿ, ಕುಪಿತನಾಗಿದ್ದ ಮಹಾರಾಜನಿಗೆ ಅದು ಎಚ್ಚರಿಕೆಯನ್ನಿತ್ತಿತು. ಅದನ್ನು ಬರೆದವರಾರೆಂದು ವಿಚಾರಿಸಲು, ಅಜಿತನೆಂದು ತಿಳಿದುಬಂದಿತು. ಕೂಡಲೆ ಆತನನ್ನು ಕರೆಸಿ ಸನ್ಮಾನಿಸಿದನು. ರತ್ನಕ್ಕಾದರೋ ಬೆಲೆ ಕಟ್ಟಬಹುದು. ಸುಭಾಷಿತರತ್ನವಾದರೋ ಬೆಲೆಗೆ ಮೀರಿದ್ದು ಎಂದು ಹಿಗ್ಗಿದನು (ತಂತ್ರ II, ಕಥೆ ೩, ಪು. ೧೯೨-೧೯೭).

ಈ ಕಥೆ ಲೇಯಾಸ್ ದೇಶದ "ಪಂಚತಂತ್ರ"ದಲ್ಲಿ ಎರಡು ಕಥೆಗಳೊಂದಿಗೆ ಕೂಡಿಕೊಂಡು ಬರುವುದು. ಒಬ್ಬ ಬ್ರಾಹ್ಮಣನು ದುಡುಕಿ, ತನ್ನ ಮಗುವನ್ನು ಕಚ್ಚಲು ಬಂದ ಹಾವನ್ನು ಕೊಂದ ಮುಂಗುಸಿಯನ್ನೇ ಸಂಹರಿಸುವನು. [ಈ ಕಥೆ ವಿಷ್ಣುಶರ್ಮನ "ಪಂಚತಂತ್ರ"ದಲ್ಲಿಯೂ (ತಂತ್ರ IV ಕಥಾಮುಖ), ದುರ್ಗಸಿಂಹನ "ಪಂಚತಂತ್ರ"ದಲ್ಲಿಯೂ (ತಂತ್ರ II, ಕಥಾಮುಖ), ಪ್ರತ್ಯೇಕವಾಗಿ ಬರುತ್ತದೆ. ಈ ಮುಂಗುಸಿಯ ಕಥೆ ಹರಿಷೇಣನ "ಬೃಹತ್ಕಥಾಕೋಶ"ದಲ್ಲಿಯೂ ಬರುತ್ತದೆ (ಕಥೆ ೧೦೨-೨)]. ನಿಜವಾದ ವೃತ್ತಾಂತವು ಗೊತ್ತಾಗಲು ಪಶ್ಚಾತ್ತಾಪಪಟ್ಟು, ಒಂದು ಗಾಹೆಯನ್ನು ಬರೆದು ತನ್ನ ಹೆಂಡತಿಗೆ ಕೊಟ್ಟು, ಪ್ರಾಯಶ್ಚಿತ್ತಾರ್ಥವಾಗಿ ಕಾಶಿಗೆ ಹೊರಡುವನು. ಆ ಬ್ರಾಹ್ಮಣಿಯು ಆ ಓಲೆಯನ್ನು ಒಬ್ಬ ವರ್ತಕನ ಹೆಂಡತಿಗೆ ಮಾರುವಳು. ಆಕೆಯ ಗಂಡ ವ್ಯಾಪಾರಕ್ಕಾಗಿ ದೇಶಾಂತರ ಹೊರಟಾಗ ಆಕೆ ಗರ್ಭಿಣಿಯಾಗಿದ್ದಳು. ಆಕೆಯ ಹೊಟ್ಟೆಯಲ್ಲಿ ಹುಟ್ಟಿದ ಕುಮಾರನು ದೊಡ್ಡವನಾಗಿ ತಂದೆಯಂತೆಯೇ ತಾನೂ ವ್ಯಾಪಾರದಲ್ಲಿ ನಿರತನಾಗುವನು. ಅವನು ತನ್ನ ತಾಯಿಯ ಬಳಿಯಲ್ಲಿದ್ದ ಸುಭಾಷಿತವನ್ನು ಕಂಡು, ಮೆಚ್ಚಿ, ಅದನ್ನು ತನ್ನ ಕತ್ತಿಯ ಮೇಲೆ ಕೆತ್ತಿಸಿಕೊಳ್ಳುವನು. ದೇಶಾಂತರ ಹೋಗಿದ್ದ ವರ್ತಕನು ಅನಿರೀಕ್ಷಿತವಾಗಿ ಹಿಂದಿರುಗುವನು. ತನ್ನ ಹೆಂಡತಿಯು ಸಮೀಪದಲ್ಲಿ ಮಲಗಿದ್ದ ತನ್ನ ಮಗನನ್ನೇ, ಪರಪುರುಷನೆಂದು ಭಾವಿಸಿ, ಅಲ್ಲೇ ಇಟ್ಟಿದ್ದ ಕತ್ತಿಯನ್ನು ತೆಗೆದುಕೊಂಡು ಕಡಿಯಲು ಕೈ ಎತ್ತುವನು. ಆಗ, ಅದರಲ್ಲಿನ ಗಾಹೆ ಕಣ್ಣಿಗೆ ಬೀಳುವುದು. ಯಾವ ಕೆಲಸವನ್ನೂ ಮುಂದಾಲೋಚನೆಯಿಲ್ಲದೆ ಮಾಡಬಾರದೆಂದೂ, ಹಾಗೆ ಮಾಡಿದ್ದೇ ಆದರೆ ಮುಂಗುಸಿಯನ್ನು ಕೊಂದ ಬ್ರಾಹ್ಮಣನಂತಾಗುವುದೆಂದೂ ಅದರಲ್ಲಿ ಬರೆದಿತ್ತು. ವರ್ತಕನು ಕ್ಷಣಕಾಲ ವಿಚಾರಪರವಶನಾಗಿ ನಿಂತನು. ಈ ವೇಳೆಗೆ ಮಲಗಿದ್ದ ಮಡದಿಯು ಎದ್ದು, ತನ್ನ ಮಗನನ್ನು ತೋರಿಸುವಳು. ಆಗ ವರ್ತಕನಿಗೆ ಅಪರಿಮಿತವಾದ

ಆನಂದವಾಗುವುದು. ಆ ಗಾಹೆಯನ್ನು ಕೊಟ್ಟ ಬ್ರಾಹ್ಮಣಿಗೆ ಮತ್ತಷ್ಟು ಧನವಿತ್ತು ಸನ್ಮಾನಿಸುವನು (ಪ್ರಕ. ಸಂ. XLI, ಸಂ. ೧, ಪು. ೨೮-೨೯).

ಮೇಲಿನ ಈ ಎರಡು ಕಥೆಗಳೂ ಒಂದೇ ಮುಖ್ಯಾಂಶವನ್ನು ಕುರಿತು ಬರೆದಿದ್ದರೂ, ಇತರ ವಿವರಗಳು ಬೇರೆ ಬೇರೆಯಾಗಿವೆ. ಗಾಹೆಗಳ ತಿರುಳು, ವ್ಯಕ್ತಿಗಳ ವಿಷಯ, ಸನ್ನಿವೇಶ ರಚನೆಗಳು ಒಂದೇ ರೀತಿಯಾಗಿಲ್ಲ. ಒಂದೇ ಕಥಾವಸ್ತು ಹೇಗೆ ಬೇರೆಬೇರೆ ತೆರನಾಗಿ ಬೆಳೆಯಬಲ್ಲುದು ಎಂಬುದಕ್ಕೆ ಇದು ಒಂದು ಉತ್ತಮ ನಿದರ್ಶನ.

ಈಗ, ಕನ್ನಡ "ಪಂಚತಂತ್ರ", ವಿಷ್ಣುಶರ್ಮನ "ಪಂಚತಂತ್ರ", "ತಂತ್ರಿ" ಮತ್ತು "ತಂತ್ರೈ"ಗಳಲ್ಲಿ ಸಮಾನವಾಗಿ ಬರುವ ಒಂದು ಕಥೆಯನ್ನು ಪರಿಶೀಲಿಸಬಹುದು. ಸುಪ್ರಸಿದ್ಧವಾಗಿರುವ "ಕಪಿ ಮತ್ತು ಮೊಸಳೆಯ ಕಥೆ" ಈ ಎಲ್ಲ ಕೃತಿಗಳಲ್ಲಿಯೂ ಕಂಡುಬರುತ್ತದೆ.

"ನಾನಾ ಫಲಗಳಿಂದ ಸಮೃದ್ಧಿಯಾಗಿದ್ದ ಒಂದು ಅರಣ್ಯದಲ್ಲಿ ಕೃಷ್ಣವದನನೆಂಬ ಒಂದು ಮುದಿ ಕಪಿ ಇದ್ದಿತು. ಅದಕ್ಕೆ ಸಮೀಪದಲ್ಲಿಯೇ ಮತ್ತೊಂದು ಕಾಡಿನಲ್ಲಿ ಕಕುದ್ಮಲಿ ಎಂಬ ಇನ್ನೊಂದು ಕೋಡಗವಿತ್ತು. ಈ ಎರಡಕ್ಕೂ ಜಗಳವುಂಟಾಗಲು, ಕೃಷ್ಣವದನನು ತನ್ನ ಅರಣ್ಯವನ್ನು ತೊರೆದು, ಸಮುದ್ರದ ತೀರದಲ್ಲಿದ್ದ ಒಂದು ಅತ್ತಿಯ ಮರವನ್ನು ಆಶ್ರಯಿಸಿತು. ಅದು ಆ ಹಣ್ಣನ್ನು ತಿಂದು ತೃಪ್ತಿಪಟ್ಟುದಲ್ಲದೆ, ಕುತೂಹಲವುಂಟಾಗಿ ಅವುಗಳನ್ನು ಸಮುದ್ರಕ್ಕೆ ಎಸೆದು, ಶಬ್ದವನ್ನು ಕೇಳಿ ಸಂತೋಷಪಡುತ್ತಿತ್ತು. ಈ ಮಧ್ಯೆ, ಸಮುದ್ರದಲ್ಲಿ ಬಿದ್ದ ಆ ಅತ್ತಿಯ ಹಣ್ಣುಗಳನ್ನು ಕ್ರಕಚನೆಂಬ ಮೊಸಳೆ ಸವಿದು ಚಪ್ಪರಿಸಿ, ಅದು ಕೋತಿಯೊಂದಿಗೆ ಸ್ನೇಹ ಬೆಳಸಿತು. ತನ್ನ ಪ್ರಿಯನು ಸರ್ವದಾ ಕೋತಿಯ ಜೊತೆಯಲ್ಲಿಯೇ ಇರುತ್ತಿದ್ದುದನ್ನು ಕಂಡು, ಸುಕಥೆಯೆಂಬ ಹೆಣ್ಣುಮೊಸಳೆಗೆ ತುಂಬ ಸಂಕಟವಾಯಿತು. ಅದು ತನ್ನ ಪ್ರಿಯನನ್ನು ಕರೆದು ಆಕ್ಷೇಪಿಸಿದುದಲ್ಲದೆ, ತನಗೆ ವಾನರವ್ಯಾಧಿಯಾಗಿರುವುದಾಗಿಯೂ, ಆದ್ದರಿಂದ ಕೋತಿಯ ಎದೆಯನ್ನು ತಂದುಕೊಡಬೇಕೆಂದೂ ಕೇಳಿಕೊಂಡಿತು. ಮಾರನೆಯ ದಿನ, ಮೊಸಳೆಯು ತನ್ನ ಸ್ನೇಹಿತನಾದ ಕಪಿಯಲ್ಲಿಗೆ ಬಂದು, ಅದರ ಉಪಕಾರಕ್ಕಾಗಿ ತಾನು ಪ್ರತ್ಯುಪಕಾರವನ್ನು ಮಾಡಬಯಸುವುದಾಗಿ ತಿಳಿಸಿತು. ಸಮುದ್ರ ಮಧ್ಯದಲ್ಲಿ ಅಂತರ್ದ್ವೀಪವೊಂದು ಇದೆಯೆಂದೂ, ಅಲ್ಲಿ, ಅನೇಕ ವಾನರಿಯರು ಇದ್ದಾರೆಂದೂ ಅವರು ತಮಗೆ ತಕ್ಕ ಪ್ರಿಯನಿಲ್ಲದೆ ವ್ಯಾಕುಲರಾಗಿದ್ದಾರೆಂದೂ, ಅಲ್ಲಿನ ಹಣ್ಣುಹಂಪಲುಗಳನ್ನು ತಿಂದರೆ ಎಂಥ ಮುದಿತನವೂ ಹೋಗಿ ಯೌವನವು ಪ್ರಾಪ್ತವಾಗುವುದೆಂದೂ ಹೇಳಿ, ಕಪಿಯನ್ನು ತನ್ನೊಡನೆ ಬರುವಂತೆ ಕೇಳಿಕೊಂಡಿತು. ಚಪಲಚಿತ್ತವುಳ್ಳ ಮುದಿಕಪಿಗೆ ಬಾಯಲ್ಲಿ ನೀರೂರಿತು. ಮೊಸಳೆಯ ಬೆನ್ನಿನ ಮೇಲೆ ಹತ್ತಿ ಕುಳಿತುಕೊಂಡಿತು. ಸಮುದ್ರದ ಮಧ್ಯಕ್ಕೆ ಬಂದಂತೆಲ್ಲ ಅಲೆಗಳ ಹೊಡೆತ ಮೊರೆತಗಳಿಂದ ಅದಕ್ಕೆ ಹಿಂಸೆಯಾಯಿತು. ಅಂತರ್ದ್ವೀಪವು ಇನ್ನೂ ಎಷ್ಟು ದೂರವಿದೆಯೆಂದು ಮೊಸಳೆಯನ್ನು ಕೇಳಿತು. ಆಗ ಅದು, ಅಲ್ಲಿಯೇ ಸಮೀಪದಲ್ಲಿಯೇ ಇರುವುದೆಂದೂ, ತನ್ನ ಹೆಂಡತಿಗೆ ಮೈಚೆನ್ನಾಗಿಲ್ಲದಿದ್ದುದರಿಂದ ಕಪಿಯ ಎದೆ ಬೇಕೆಂದು ಹೇಳಿದ್ದಳೆಂದೂ, ಮೊದಲು ಅದನ್ನು ಕಂಡು ಹೋಗೋಣವೆಂದೂ ಹೇಳಿತು. ತಕ್ಷಣವೇ ಕಪಿಗೆ ಮೊಸಳೆಯ ದುರ್ಬುದ್ಧಿ ಅರ್ಥವಾಯಿತು. ಕೂಡಲೆ "ಅಹಾ, ಎಂಥ ಕೆಲಸಮಾಡಿದೆ. 'ಕೋಡಗದೆರ್ದೆ ಕೊಂಬೆಯ ಮೇಲೆ' ಎಂದು ತಿಳಿಯೆಯಾ? ಆಗಲೇ ಹೇಳಬಾರದಿತ್ತೆ? ನನ್ನ ಎದೆಯನ್ನೇ ತರುತ್ತಿದ್ದೆನಲ್ಲ" ಎಂದಿತು. ಮೊಸಳೆಯು "ಹೋಗಲಿ, ಆಪ್ತರನ್ನು ಕಂಡರೂ ಗುಣವಾಗಬಹುದು" ಎನ್ನಲು, ಕಪಿಯು "ಎಲ್ಲಾದರೂ ಉಂಟೆ! ನಿನ್ನ ಹೆಂಡತಿ ಔಷಧವನ್ನೇ ನಿರೀಕ್ಷಿಸುತ್ತಿರುವಾಗ ಬರಿಯ ಕೈಯಲ್ಲಿ ಹೋಗಬಹುದೆ? ಕೂಡದು. ಮೊದಲು ಹಿಂತಿರುಗು, ಒಂದುವೇಳೆ ನನ್ನೊಬ್ಬನ ಎದೆಯಿಂದಲೇ ರೋಗ ವಾಸಿಯಾಗವೆ ಹೋಗಬಹುದು. ಆದ್ದರಿಂದ, ಮರದಲ್ಲಿ ಜೋಲಾಡುತ್ತಿರುವ ಇತರ ಕಪಿಗಳ ಹೃದಯಗಳನ್ನೂ ತರಬಹುದು" ಎಂದು ಹೇಳಿತು. ಮೊಸಳೆಗೆ ಮರ್ಕಟನ ಮಾತು ಒಪ್ಪಿಗೆಯಾಯಿತು. ಒಡನೆಯೇ ಅತ್ತಿಯ ಮರದ ಬಳಿಗೆ ಹಿಂತಿರುಗಿತು. ಕೋತಿಯು ಛಂಗನೆ

ಮರಕ್ಕೆ ಹಾರಿತು. ಕೆಳಗಿಳಿದು ಬರುವ ಸೂಚನೆಯೇ ಕಾಣಲಿಲ್ಲ. ಮೊಸಳೆಯು ವಿನಯದಿಂದ "ಏಕೆ ಹೀಗೆ ಮಾಡುತ್ತಿದ್ದೀಯೆ? ನಿನ್ನ ತಂಗಿಯ ಸಮಾನಳಾದ ನನ್ನ ಪತ್ನಿಯ ಗತಿಯೇನು? ನಿನಗಾಗಿ ಕಾಯುತ್ತಿರುವ ಅಂತರ್ದ್ವೀಪದ ವಾನರಿಯರ ಗತಿಯೇನು?" ಎಂದು ಕೇಳಿತು. ಕಪಿಯು "ಅಯ್ಯಾ ಮಿತ್ರನೆ! ಔಷಧಿಗಾಗಿ ಕೋತಿಯ ಎದೆ ಬೇಕೆಂದು ನೀನು ಹೇಳಿದಾಗಲೇ ನನ್ನ ಹೃದಯ ದೆಸೆಗೆಟ್ಟು ಓಡಿಹೋಯಿತು. ನಿನ್ನ ಎದೆಯನ್ನೇ ಔಷಧವಾಗಿ ಬಳಸು" ಎಂದು ವ್ಯಂಗ್ಯವಾಗಿ ಉತ್ತರವಿತ್ತಿತು. ಆಗ ಮೊಸಳೆಗೆ ಮರ್ಕಟನ ವಂಚನೆ ಅರ್ಥವಾಯಿತು. ಆದರೂ ಅಷ್ಟಕ್ಕೇ ಬಿಡದೆ "ನನ್ನ ಹೆಂಡತಿಗೆ ಮದ್ದಿಲ್ಲದಿದ್ದರೂ ಚಿಂತೆಯಿಲ್ಲ. ವಾನರಿಯರನ್ನಾದರೂ ವರಿಸಲು ಬಾ" ಎಂದು ನುಡಿಯಿತು. ಕಪಿಯು "ಅಯ್ಯಾ ವಿಪತ್ತಿನಿಂದ ಪಾರಾಗಿ ಬಂದವನು ತಿಳಿದೂ ತಿಳಿದೂ ಮತ್ತೆ ಅದಕ್ಕೆ ಸಿಕ್ಕಿಬೀಳುವಷ್ಟು ಅವಿವೇಕಿ ನಾನಲ್ಲ" ಎಂದು ಪ್ರತ್ಯುತ್ತರ ವಿತ್ತಿತು (ಕನ್ನಡ "ಪಂಚತಂತ್ರ", ತಂತ್ರ IV, ಕಥಾಮುಖ).

ಲೇಯಾಸ್ ದೇಶದ "ಪಂಚತಂತ್ರ"ದಲ್ಲಿ ದುರ್ಗಸಿಂಹನಲ್ಲಿರುವಷ್ಟು ವಿವರಗಳು ಕಾಣ ಬರದಿದ್ದರೂ ಮೂಲವಸ್ತು ಹಾಗೆಯೇ ಉಳಿದುಕೊಂಡು ಬಂದಿದೆ. ಕಪಿಯು ಕೊಟ್ಟ ಹಣ್ಣು ಗಳನ್ನು ಮೊಸಳೆಯ ಹೆಂಡತಿಯೂ ತಿನ್ನುತ್ತದೆ. ಅದು ಗರ್ಭಿಣಿಯಾಗಿದ್ದುದರಿಂದ ಸವಿಯಾದ ಹಣ್ಣುಗಳನ್ನು ತಿನ್ನುವ ಕೋತಿಯ ಹೃದಯವನ್ನೇ ರುಚಿ ನೋಡಬೇಕೆಂದು ಅಪೇಕ್ಷಿಸುತ್ತದೆ. ಮೊಸಳೆಯು ತನ್ನ ಮಿತ್ರನಾದ ಕೋತಿಗೆ ಸಮುದ್ರವನ್ನು ತೋರಿಸುವ ನೆಪದಲ್ಲಿ ಕರೆದುಕೊಂಡು ಬರುತ್ತಿರುವಾಗ ನಿಜವಾದ ವೃತ್ತಾಂತವನ್ನು ಹೇಳಿಬಿಡುತ್ತದೆ. ಎಂದಿನಂತೆಯೇ ಕಪಿ ತನ್ನ ಹೃದಯ ಗಿಡದಲ್ಲಿಯೇ ಇದೆಯೆಂದು ಹೇಳಿ ಮತ್ತೆ ಹಿಂತಿರುಗಿ ಹೋಗುವ ಹಾಗೆ ಮಾಡು ತ್ತದೆ. ಗಿಡದಲ್ಲಿ ಜೋತಾಡುತ್ತಿದ್ದ ಪೊಟ್ಟಣಗಳನ್ನು ತೋರಿಸಿ, ಅವುಗಳನ್ನು ಜಿಚ್ಚುವುದ ಕ್ಕಾಗುವುದಿಲ್ಲವೆಂದೂ, ಮೊಸಳೆಯನ್ನೇ ಮೇಲಕ್ಕೆ ಎತ್ತುವುದು ಲೇಸೆಂದೂ ಹೇಳಿ, ಬಳ್ಳಿ ಯನ್ನು ಕಟ್ಟಿ ಹಾಗೆಯೇ ಮಾಡುತ್ತದೆ. ಇದು ಮೊಸಳೆಯ ಪ್ರಾಣಕ್ಕೇ ಸಂಚಕಾರವನ್ನು ತರುತ್ತದೆ (ಪ್ರಕ., ಸಂ. XLI, ಸಂ. ೧, ಪು. ೨೫-೨೬).

ಈ ಕಥೆ ವಿಷ್ಣುಶರ್ಮನ "ಪಂಚತಂತ್ರ"ದಲ್ಲಿ ಬಹುಮಟ್ಟಿಗೆ ಇದೇ ರೀತಿಯಾಗಿ ಬರು ತ್ತದೆ (ತಂತ್ರ IV, ಕಥಾಮುಖ). ಕಪಿಯ ಹೆಸರನ್ನು ವಲೀವದನ ಎಂದೂ, ಮೊಸಳೆಯ ಹೆಸರನ್ನು ಕೃಶಕ ಎಂದೂ ಕರೆಯಲಾಗಿದೆ. ಹೆಂಡತಿಯ ಸಲುವಾಗಿ ಮಿತ್ರನಾದ ಮರ್ಕಟ ನನ್ನು ಮೋಸಮಾಡಿ ಕರೆತರುವುದಕ್ಕೆ ಮೊಸಳೆ ತುಂಬ ಚಿಂತಿಸುತ್ತದೆ. ಕಡೆಗೆ ನಿರ್ವಾಹವಿಲ್ಲದೆ ಉಪಾಯದಿಂದ ಕೋತಿಯನ್ನು ಕರೆತರಲು ತೊಡಗುತ್ತದೆ. ಮುಂದೆ ಕಥೆಯಲ್ಲಿ ಹೆಚ್ಚಿನ ಬದ ಲಾವಣೆಯೇನೂ ಇಲ್ಲ. ಕ್ಷೇಮೇಂದ್ರನ "ಬೃಹತ್ಕಥಾಮಂಜರಿ"ಯಲ್ಲಿಯೂ (ಲಂ. XVI, ಪ. ೫೨೪-೬೩೨) ಸೋಮದೇವನ "ಕಥಾಸರಿತ್ಸಾಗರ"ದಲ್ಲಿಯೂ (ಲಂ. X, ತ. 7, ಪ. 97-123) ಒಂದೇ ರೀತಿಯಾಗಿವೆ. "ಕಥಾಸರಿತ್ಸಾಗರ"ದ ನಿರೂಪಣೆ ಸಾಕಷ್ಟು ವಿವರವಾಗಿದೆ. (ಇದರ ಸಾರಾಂಶವನ್ನು ಶ್ರೀ ಎ. ಆರ್. ಕೃ. ಅವರ 'ಕಥಾಮೃತ'ದಲ್ಲಿ ನೋಡಬಹುದು, ಪು. ೨೫೮).

ಸಂಸ್ಕೃತ ಸಾಹಿತ್ಯದಲ್ಲಿ ಜನಪ್ರಿಯವಾದ ಕಥೆಗಳನ್ನು ಒಳಗೊಂಡ "ಶುಕಸಪ್ತತಿ" ಯಲ್ಲಿಯೂ ಈ ಕಥೆ ಕಾಣಿಸಿಕೊಳ್ಳುತ್ತದೆ (Story 67, pp. 117-120, The Enchanted Parrot, by B. Hale Wortham). ಕೋತಿಗೂ ಮೊಸಳೆಗೂ ಅನಿರೀಕ್ಷಿತವಾಗಿ ಸ್ನೇಹ ವಾಗುತ್ತದೆ. ಕಪಿಯು ತಂದಿತ್ತ ಹಣ್ಣುಗಳನ್ನು ಮೊಸಳೆಯ ಹೆಂಡತಿಯು ತಿಂದು ತಣಿದುದಲ್ಲದೆ, ಆ ಕಪಿಯು ತಿನ್ನುವ ಇತರ ಹಣ್ಣುಗಳೂ ತನಗೆ ಬೇಕೆಂದು ಹೇಳುತ್ತದೆ. ಇಲ್ಲದಿದ್ದಲ್ಲಿ ತಾನು ಸಾಯುವುದಾಗಿ ತಿಳಿಸುತ್ತದೆ. ಮೊಸಳೆಯು ಉಪಾಯದಿಂದ ಕಪಿಯನ್ನು ಕರೆತರುತ್ತಿರುವಾಗ ಕಪಿಗೆ ಶಂಕೆಯುಂಟಾಗುವಂತೆ ಮಾತಾಡುತ್ತದೆ. ಚತುರನಾದ ಮರ್ಕಟನು ಎಂದಿನಂತೆಯೇ ಮೊಸಳೆಯನ್ನು ವಂಚಿಸಿ, ಹಾರಿ ಮರವೇರುತ್ತದೆ.

ಈ ಕಥೆ ಎಲ್ಲ ಕೃತಿಗಳಲ್ಲಿಯೂ ಬಹುಮಟ್ಟಿಗೆ ಒಂದೇ ರೀತಿಯಾಗಿ ಬರುವುದು ಗಮನಾರ್ಹವಾದುದು. ಸಿ. ಎಚ್. ಟಾನಿ ಅವರು ಈ ಕಥೆಯನ್ನು ಹೋಲುವ ವಿದೇಶೀ ಕಥೆಗಳೆರಡನ್ನು ಕೊಟ್ಟಿರುತ್ತಾರೆ. ಒಂದರಲ್ಲಿ "ಷಾರ್ಕ್" (Shark) ಎಂಬ ಒಂದು ಬಗೆಯ ಮೀನು ತಮ್ಮ ಸುಲ್ತಾನನ ಸಲುವಾಗಿ ಮರ್ಕಟಹೃದಯವು ಬೇಕೆಂದು ಹೇಳಿ ಒಂದು ಕಪಿಯನ್ನು ಕರೆದೊಯ್ಯುವ ಸಂಗತಿ ಬರುತ್ತದೆ (The Ocean of Story, Vol. V, pp. 127-130). ಇನ್ನೊಂದು ಜಪಾನ್‌ದೇಶದಲ್ಲಿ ಪ್ರಚಾರದಲ್ಲಿರುವ ಕಥೆ. ಕಡಲ ರಾಣಿಗೆ ಕಪಿಯ ಕರುಳು ಬೇಕೆಂಬುದಾಗಿ ಒಂದು ಮೀನು ಒಂದು ಕಪಿಯನ್ನು ಕರೆದೊಯ್ಯುವ ಸಂದರ್ಭವು ಬರುತ್ತದೆ (Ibid, p. 128). ಒಟ್ಟಿನಲ್ಲಿ ಈ ಕಥೆಯ ವ್ಯಾಪ್ತಿ ಎಷ್ಟು ಮಿಗಿಲಾದುದೆಂದು ಈ ನಿದರ್ಶನಗಳ ಮೂಲಕ ವಿದಿತವಾಗುತ್ತದೆ.

ನಯಸೇನನ "ಧರ್ಮಾಮೃತ"ವು ಕನ್ನಡದ ಕಥಾಸಾಹಿತ್ಯದಲ್ಲಿ ತುಂಬ ಅಚ್ಚುಮೆಚ್ಚಾದ ಮತ್ತೊಂದು ಕೃತಿ. ಇಲ್ಲಿ ಬರುವ ಪುಂಖಾನುಪುಂಖವಾದ ಗಾದೆಗಳು, ಉಪಮಾನಗಳು, ಉಪಕಥೆಗಳು ಮೊದಲಾದುವು ಯಾರನ್ನಾದರೂ ಬೆರಗುಗೊಳಿಸುವಂಥವು. ಒಮ್ಮೊಮ್ಮೆ ಇಲ್ಲಿನ "ಅತಿ"ಯೂ ಅತಿಶಯವಾಗುವಂಥವು. ನಯಸೇನನು ತನ್ನ ಕೃತಿಗೆ ಯಾವ ಆಧಾರಗ್ರಂಥವನ್ನೂ ಸೂಚಿಸಿಲ್ಲ. ಆದರೆ, ಜೈನ ಸಾಹಿತ್ಯದಲ್ಲಿ ಅಪಾರವಾಗಿರುವ "ಕಥಾಕೋಶ"ಗಳನ್ನಾಗಲಿ, "ಆರಾಧನ ಗ್ರಂಥ"ಗಳನ್ನಾಗಲಿ ತಿರುವಿಹಾಕಿದರೆ ಇಲ್ಲಿನ ಹಲಕೆಲವು ಕಥೆಗಳ ಹುಟ್ಟುಗುಟ್ಟುಗಳು ಬಯಲಾಗಬಹುದು. ಪ್ರಕೃತದಲ್ಲಿ ಇಲ್ಲಿ ಬರುವ "ಅಹಿಂಸಾವ್ರತ"ದ ಕಥೆಯನ್ನು ಮಾತ್ರ ಪರಿಶೀಲಿಸಲಾಗುವುದು. ಈ ಕಥೆ ಕೆಳಗೆ ಕಂಡಂತೆ ಉಕ್ತವಾಗಿದೆ:—

"ಶ್ರೀದತ್ತನೆಂಬುವನು ತನ್ನ ಆಶ್ರಯದಲ್ಲಿದ್ದ ಸ್ನೇಹಿತನ ಮಡದಿಯ ಮಗನು ಮುಂದೆ ಮಹಾರಾಜನಾಗುವನೆಂಬ ಭವಿಷ್ಯವನ್ನು ಕೇಳಿ, ಅಸೂಯೆ ಪಡುತ್ತಾನೆ. ಆ ಕೂಸು ಹುಟ್ಟುವುದೇ ತಡ ತಾಯಿಗೆ ಸುಳ್ಳುಹೇಳಿ, ಅದನ್ನು ಕೊಲ್ಲಲು ಒಬ್ಬ ಹೊಲೆಯನ ಕೈಗೆ ಕೊಡುವನು. ಅವನಿಗೇಕೋ ಆ ಹಸುಳೆಯನ್ನು ಕಂಡು ಕನಿಕರವುಂಟಾಗಿ, ಅದನ್ನು ನಿರ್ಜನವಾದ ಕಾಡಿನಲ್ಲಿ ಮಲಗಿಸಿ ಬರುವನು. ಆ ಎಳೆಯ ಮಗು ಶ್ರೀದತ್ತನ ಭಾವನಿಗೆ ಲಭಿಸಲು, ಅವನು ಪ್ರೀತಿಯಿಂದ ಸಲಹುವನು. ಇದು ಶ್ರೀದತ್ತನಿಗೆ ಗೊತ್ತಾಗಲು, ಆತನು ತನ್ನ ತಂಗಿಯನ್ನೂ ಭಾವನನ್ನೂ ಬರಮಾಡಿಕೊಂಡು, ಅವರಿಗೆ ಮೋಸಮಾಡಿ ಆ ಮಗುವನ್ನು ಅಪಹರಿಸಿ, ಮತ್ತೆ ಒಬ್ಬ ಮಾದಿಗನ ಕೈಗೆ ಒಪ್ಪಿಸುವನು. ಆತನೂ ಸಹ ಆ ಮಗುವನ್ನು ಕೊಲ್ಲದೆ ಒಂದು ಹೊಳೆಯ ಬಳಿ ಮಲಗಿಸಿ ಹೋಗುವನು. ಗೋವಿಂದನೆಂಬ ಗೋಪಾಲಕನು ಅದನ್ನು ಕಂಡು ಅದಕ್ಕೆ ಧನಕೀರ್ತಿಯೆಂದು ಹೆಸರಿಟ್ಟು ಸಾಕುವನು. ಶ್ರೀದತ್ತನಿಗೆ ಈ ವಿಷಯ ಹೇಗೋ ಗೊತ್ತಾಗುವುದು. ತನ್ನ ಮಗಳ ಮದುವೆಗಾಗಿ ತುಪ್ಪವನ್ನು ಕೊಳ್ಳಲು ಬಂದಿದ್ದ ಆತನು ಧನಕೀರ್ತಿಯನ್ನು ತನ್ನ ಊರಿಗೆ ಕಾಗದ ಕೊಟ್ಟು ಬರಲು ನೇಮಿಸುವನು. ಕಾಗದದಲ್ಲಿ ತನ್ನ ಮಗನನ್ನು ಕುರಿತು, ಓಲೆ ತರುವನನ್ನು ವಿಷಕೊಟ್ಟು ಕೊಲ್ಲುವಂತೆ ಬರೆದಿರುತ್ತಾನೆ. ದಾರಿಯಲ್ಲಿ ನಿದ್ರಿಸುತ್ತಿದ್ದ ಧನಕೀರ್ತಿಯನ್ನು ಕಂಡ ಒಬ್ಬ ವೇಶ್ಯೆ ಅವನಲ್ಲಿದ್ದ ಕಾಗದದ ಒಕ್ಕಣೆಯನ್ನು ತಿದ್ದುವಳು. ಕಾಗದವನ್ನು ಓದಿಕೊಂಡ ಶ್ರೀದತ್ತನ ಮಗನು ಧನಕೀರ್ತಿಗೆ ತನ್ನ ತಂಗಿಯನ್ನು ಕೊಟ್ಟು ಮದುವೆ ಮಾಡುವನು. ಶ್ರೀದತ್ತನಿಗೆ ಈ ವಿಷಯ ತಿಳಿದು ಕೈಕೈ ಹಿಸುಕಿಕೊಳ್ಳುವಂತಾಯಿತು. ಆದರೂ ಅವನ ಛಲ ಹೋಗುವುದಿಲ್ಲ. ಅಳಿಯನ ಕೈಯಲ್ಲಿ ಹಣ್ಣುಹಂಪಲನ್ನು ಕೊಟ್ಟು ಪೂಜೆಗಾಗಿ ನಾಗಾಲಯಕ್ಕೆ ಕಳುಹಿಸುವನು. ಅಲ್ಲಿ ಧನಕೀರ್ತಿಯ ಬರವನ್ನೇ ನಿರೀಕ್ಷಿಸುತ್ತ ಕಟುಕರು ಕಾದಿದ್ದರು. ಈ ನಡುವೆ ಭಾವಮೈದುನನಾದ ಮಹಾಬಲನು ಭಾವನನ್ನು ಸಂಧಿಸಿ ತಾನು ಆ ಕಾರ್ಯವನ್ನು ಮಾಡಿಸಿಕೊಂಡು ಬರುವುದಾಗಿ ಹಣ್ಣುಹಂಪಲಿನ ತಟ್ಟೆಯನ್ನು ತೆಗೆದುಕೊಂಡು ಹೋಗಿ, ಅಲ್ಲಿದ್ದ ಕಟುಕರ ಕೈಯಿಂದ ಹತನಾಗುವನು. ಶ್ರೀದತ್ತನ ವೈರ ಶಮನವಾಗುವುದಿಲ್ಲ. ವಿಷದ ಲಡ್ಡುಗೆಗಳನ್ನು ಮಾಡುವಂತೆ ಹೆಂಡತಿಗೆ ಹೇಳುವನು. ಆಕೆ ವಿಷಮಿಶ್ರಿತವಾದ ದೊಡ್ಡ

ಲಡ್ಡುಗೆಗಳನ್ನೂ, ಇತರ ಚಿಕ್ಕ ಲಡ್ಡುಗೆಗಳನ್ನೂ ಮಾಡಿ, ಮಗಳನ್ನು ಕರೆದು ತಂದೆಗೂ, ಪತಿಗೂ ಬಡಿಸುವಂತೆ ಹೇಳಿ ಹೋಗುವಳು. ಆ ಹುಡುಗಿ ಗಂಡನಿಗೆ ಪಕ್ಷಪಾತಮಾಡಬಾರದೆಂದು ಎಣಿಸಿ ವಿಶಮಿಶ್ರಿತವಾದ ದೊಡ್ಡ ಲಡ್ಡುಗೆಗಳನ್ನು ತಂದೆಗೂ, ಉಳಿದುದನ್ನು ಗಂಡನಿಗೂ ಬಡಿಸು ವಳು. ಶ್ರೀದತ್ತನು ಸಾಯಲು, ಆತನ ಹೆಂಡತಿಯು ಧನಕೀರ್ತಿಯ ಜನ್ಮ ರಹಸ್ಯವನ್ನೆಲ್ಲ ಮಗಳಿಗೆ ಹೇಳಿ ತಾನೂ ಸಾಯುವಳು. ಜೈನಗುರುಗಳೊಬ್ಬರು ಧನಕೀರ್ತಿಯು ಪೂರ್ವಜನ್ಮದಲ್ಲಿ ಒಬ್ಬ ಬೆಸ್ತರವನಾಗಿದ್ದನೆಂದೂ, ಆಗ ತನ್ನ ಗುರುಗಳ ಉಪದೇಶದ ಮೇರೆಗೆ ತನಗೆ ಮೊದಲು ಸಿಕ್ಕಿದ ಮೀನನ್ನು ಐದುಸಲ ಬಿಟ್ಟನೆಂದೂ, ಆ ಪುಣ್ಯವೇ ಇಂದು ಅವನನ್ನು ಕಂಟಕಗಳಿಂದ ಪಾರು ಮಾಡಿತೆಂದೂ ತಿಳಿಸುವರು" ("ಧರ್ಮಾಮೃತ," ಆಶ್ವಾಸ X, ಪ. ೮-೨೮೦).

ಮೇಲಿನ ಕಥೆಗೂ ಚಂದ್ರಹಾಸನ ಕಥೆಗೂ ಇರುವ ಹೋಲಿಕೆ ಯಾರ ಕಣ್ಣಿಗಾದರೂ ಬೀಳದೆ ಇರದು. ಚಂದ್ರಹಾಸನ ಕಥೆಯ ಚರಿತ್ರೆ ಬಹಳ ದೊಡ್ಡದು. ಇದರ ವಸ್ತು ದೇಶ ವಿದೇಶಗಳಲ್ಲಿ ನಾನಾ ರೂಪಗಳಲ್ಲಿ ವ್ಯಾಪಿಸಿದೆ. ಇದರ ಮಹತ್ವವನ್ನು ಕುರಿತು ಶ್ರೀ ಕೆ. ವೆಂಕಟರಾಮಪ್ಪನವರು "ಯೂರೋಪಿನ ಬೇರೆ ಬೇರೆ ಜನಾಂಗಗಳಲ್ಲಿ ಚಂದ್ರಹಾಸನ ಕಥೆಯನ್ನು ಹೋಲುವ ಹಲವು ಕಥೆಗಳು ಸಿಕ್ಕುತ್ತವೆ. ಬೌದ್ಧ ಮತ್ತು ಜೈನ ಸಾಹಿತ್ಯಗಳಲ್ಲಿ, ಯೆಹೂದ್ಯರ ಕಥೆಗಳಲ್ಲಿ ಚಂದ್ರಹಾಸೋಪಾಖ್ಯಾನದ ಪ್ರತಿಬಿಂಬಗಳಂತೆ ಇರುವ ಕೆಲವು ಕಥೆಗಳು ಸಿಕ್ಕಿವೆ ("ಚಂದ್ರಹಾಸನ ಕಥೆ, ಅದರ ಪ್ರಸಾರ", ಸಂಭಾವನೆ, ಪು. ೨೪೧)" ಎಂದು ಹೇಳಿ ಈಗಾಗಲೆ ಈ ವಿಷಯವನ್ನು ಪ್ರಸ್ತಾಪಿಸಿರುತ್ತಾರೆ. ಈ ಸಂದರ್ಭದಲ್ಲಿ, ಶ್ರೀಯುತರು ಸೂಚಿಸುವ "ದಾಮನ್ನಕನ ಕಥೆ" ಮೇಲೆ ಹೇಳಿರುವ "ಧನಕೀರ್ತಿಯ ಕಥೆ" ಯನ್ನೇ ಹೋಲುತ್ತದೆ. ಸುನಂದ ಎಂಬ ಬೆಸ್ತರವನು, ದಯೆಯಿಂದ ತಾನು ಹಿಡಿದಿದ್ದ ಮೀನು ಗಳನ್ನು ಮೂರುಬಾರಿ ಬಿಟ್ಟದ್ದರಿಂದ ತನ್ನ ಮರುಜನ್ಮದಲ್ಲಿ ದಾಮನ್ನಕ ಎಂಬ ಹೆಸರಿನಿಂದ ಜನ್ಮವೆತ್ತಿ, ಸಾಗರಪೋತ ಎಂಬ ವರ್ತಕನು ಹೂಡಿದ ಮೂರು ಕಂಟಕಗಳಿಂದ ಪಾರಾಗು ತ್ತಾನೆ. ಧನಕೀರ್ತಿಗೆ ಶ್ರೀದತ್ತನು ಸಂಚುಮಾಡಿದ್ದಂತೆಯೇ ಸಾಗರಪೋತನು ತಂದೆ ತಾಯಿ ಯಿಲ್ಲದ ದಾಮನ್ನಕನನ್ನು ಸಂಹರಿಸಲು ಮೊದಲು ಒಬ್ಬ ಚಂಡಾಲನಿಗೆ ಒಪ್ಪಿಸುತ್ತಾನೆ. ಅವನು ಆ ಹುಡುಗನ ಕಿರುಬೆರಳನ್ನು ಮಾತ್ರ ಕತ್ತರಿಸಿಕೊಂಡು ಜೀವಸಹಿತ ಬಿಟ್ಟುಬಿಡುತ್ತಾನೆ. ದಾಮನ್ನಕನು ಗೋಪಾಲಕರ ಮಧ್ಯೆ ಬೆಳೆಯುತ್ತಿರಬೇಕಾದರೆ ಸಾಗರಪೋತನ ಕಣ್ಣಿಗೆ ಬೀಳು ತ್ತಾನೆ. ಎಂದಿನಂತೆಯೇ ಕಾಗದವನ್ನು ಬರೆದು ಊರಿಗೆ ಕಳುಹಿಸಲು ನಡುದಾರಿಯಲ್ಲಿ ಸಾಗರದತ್ತನ ಮಗಳೇ ಅದನ್ನು ತಿದ್ದುತ್ತಾಳೆ. ದಾಮನ್ನಕನು ತನ್ನ ಬದ್ಧದ್ವೇಷಿಯ ಅಳಿಯ ನಾಗುತ್ತಾನೆ. ಅನಂತರ ಗುಡಿಯಲ್ಲಿ ತಲೆ ಕಡಿಸುವ ಏರ್ಪಾಡಾಗುತ್ತದೆ. ಸಾಗರಪೋತನ ಮಗ ಸಮುದ್ರದತ್ತನು ಬಲಿಯಾಗುತ್ತಾನೆ. ಮಗನ ಮರಣದಿಂದ ತಂದೆ ಎದೆಯೊಡೆದು ಸಾಯುತ್ತಾನೆ. ದಾಮನ್ನಕನು ಸಾಗರಪೋತನ ಆಸ್ತಿಗೆ ಉತ್ತರಾಧಿಕಾರಿಯಾದುದಲ್ಲದೆ, ಆ ಊರಿನ ರಾಜಾನುಗ್ರಹಕ್ಕೆ ಪಾತ್ರನಾಗಿ ಪಟ್ಟಣದ ಪ್ರಮುಖ ವರ್ತಕನೆನ್ನಿಸುತ್ತಾನೆ (The Kathākośa, story, 36, pp. 168-174, Ed. C. H. Tawney, 1895).

"ಕಥಾಕೋಶ"ದ ಕಥೆಗೂ "ಧರ್ಮಾಮೃತ"ದ ಕಥೆಗೂ ಇರುವ ಸಾಮ್ಯ ಗಣನೀಯ ವಾದದ್ದು. ಜೈನಧರ್ಮವನ್ನು ಪ್ರತಿಪಾದಿಸುವ ಇಂಥ "ಕಥಾಕೋಶ"ಗಳೂ "ಆರಾಧನಾ ಗ್ರಂಥ"ಗಳೂ ಹೇರಳವಾಗಿವೆ. ಡಾ|| ಎ. ಎನ್. ಉಪಾಧ್ಯೆ ಅವರು ಇವುಗಳ ಪರಿಚಯವನ್ನು ಸಂಗ್ರಹವಾಗಿ ಮಾಡಿಕೊಟ್ಟಿರುತ್ತಾರೆ ("Introduction", PP. 39-80, Bṛhatkathākośa). ಮೇಲ್ಕಂಡ "ಕಥಾಕೋಶ"ದ ಕಾಲವಾಗಲಿ, ಕರ್ತೃವಿನ ಹೆಸರಾಗಲಿ ತಿಳಿದುಬರುವುದಿಲ್ಲ. ಇದರಲ್ಲಿ ಅಡಕವಾಗಿರುವ ಕಥೆಗಳು ಭಾರತೀಯ ಜನಪದ ಸಾಹಿತ್ಯಕ್ಕೆ ಸೇರಿದುವೆಂದೂ, ಧರ್ಮ ಪ್ರಚಾರಕ್ಕಾಗಿ ಅವುಗಳನ್ನು ಬಳಸಿಕೊಳ್ಳಲಾಗಿದೆಯೆಂದೂ ಇದರ ಸಂಪಾದಕರಾದ ಸಿ. ಎಚ್. ಟಾನಿ ಅವರು ಅಭಿಪ್ರಾಯಪಡುತ್ತಾರೆ (Ibid, preface, P. VI). ಈ "ಕಥಾಕೋಶ"ದಲ್ಲಿ

ಬರುವ ಕರ್ಕ, ಅರಿಕೇಸರಿನ್ ಮತ್ತು ಮಮ್ಮಣ ಮೊದಲಾದ ಮಹಾರಾಜರು ಕರ್ಣಾಟದಲ್ಲಿ ರಾಜ್ಯವಾಳಿದ ಅರಸರಿರಬಹುದೆಂದೂ, ಆದ್ದರಿಂದ ಅವರ ಕಾಲದಿಂದ ಈಚೆಗೆ, ಎಂದರೆ ೧೧ ನೆಯ ಶತಮಾನದ ಪೂರ್ವಾರ್ಧದಲ್ಲಿ ಈ ಕೃತಿ ರಚನೆಯಾಗಿರಬಹುದೆಂದೂ ಡಾ|| ಸಾಲೆತೊರ್ ಅವರು ಭಾವಿಸುವುದಾಗಿ ಡಾ|| ಎ. ಎನ್. ಉಪಾಧ್ಯೆ ಅವರು ತಮ್ಮ "ಪೀಠಿಕೆ"ಯಲ್ಲಿ ಸೂಚಿಸಿರುತ್ತಾರೆ (P. 40). ಈ ಅಭಿಪ್ರಾಯವು ದೃಢವಾದರೆ, "ಧರ್ಮಾಮೃತ"ದ ಕಥೆಗಿಂತಲೂ "ಕಥಾಕೋಶ"ದ ಪಾಠ ಹಳೆಯದಾಗುತ್ತದೆ. ನಯಸೇನನ ಕಥೆಯಲ್ಲಿ ಕಂಡುಬರುವ ಒಂದೆರಡು ಅಧಿಕಾಂಶಗಳಿಗೆ ಸಮಾಧಾನವೂ ಲಭಿಸಿದಂತಾಗುತ್ತದೆ. ಮುಖ್ಯವಾಗಿ "ಧರ್ಮಾಮೃತ"ದ ರಚನೆಯಲ್ಲಿ ಜೈನರ ಯಾವ ಯಾವ "ಕಥಾಕೋಶ"ಗಳು ಎಷ್ಟೆಷ್ಟರಮಟ್ಟಿಗೆ ಪಾತ್ರವಹಿಸಿವೆ ಎಂಬ ಸಂಶೋಧನೆ ತುಂಬ ಉಪಯುಕ್ತವಾದೀತು. ಕನ್ನಡದಲ್ಲಿರುವ ಈ ತೆರನಾದ ಇತರ ಕೃತಿಗಳಿಗೂ ಈ ಮಾತು ಅನ್ವಯಿಸುತ್ತದೆ. ಇಂಥ ರಚನೆಗಳಲ್ಲಿ ವಿದಿತವಾಗುವ ಪರಸ್ಪರ ಪ್ರಭಾವಗಳ ಪರಿಶೀಲನೆಯೂ ಅಗತ್ಯ.

ಉಜ್ಜಯಿನಿಯ ವಿಕ್ರಮಾದಿತ್ಯನ ಸಾಹಸ ಔದಾರ್ಯಗಳನ್ನು ಚಿತ್ರಿಸುವ "ಭೇತಾಳ ಪಂಚವಿಂಶತಿ" ಮತ್ತು "ಬತ್ತೀಸ ಪುತ್ಥಳಿ ಕಥೆ"ಗಳು ಮನರಂಜನೆಯನ್ನೇ ಮುಖ್ಯ ಗುರಿಯಾಗುಳ್ಳವು. ನಮ್ಮ ಕನ್ನಡ ಕವಿಗಳು ಈ ಕೃತಿಗಳನ್ನು ಚಂಪೂ ಮತ್ತು ಗದ್ಯ ರೂಪಗಳಲ್ಲಿ ರಚಿಸಿರುತ್ತಾರೆ. ಪ್ರಕೃತದಲ್ಲಿ ಗದ್ಯ ರೂಪದಲ್ಲಿರುವ ಪೇಟೆಯ ಪ್ರತಿಗಳು ಕೆಲವಿವೆ. ಅಲ್ಲದೆ ಶ್ರೀ ಎಂ. ಎ. ರಾಮಾನುಜ ಐಯಂಗಾರ್ ಅವರು ಎರಡು ಹಸ್ತ ಪ್ರತಿಗಳನ್ನು ಅವಲಂಬಿಸಿ ಪ್ರಕಟಿಸಿರುವ "ಭಾಳಲೋಚನ ವಿರಚಿತ ಬತ್ತೀಸ ಪುತ್ಥಳಿ ಕಥೆ" ಎಂಬ ಗ್ರಂಥವೊಂದು ಇದೆ (ಕರ್ಣಾಟಕ ಕಾವ್ಯಕಲಾನಿಧಿ ಮಾಲೆ, ಸಂ. ೨೫, ಕ್ರಿ.ಶ. ೧೯೦೮). ಇದರಲ್ಲಿ ವಿಕ್ರಮಾದಿತ್ಯನ ಕಥೆಗಳಲ್ಲದೆ ಭೋಜರಾಜನ ಕಥೆಗಳೂ ಇವೆ. (ಈ ಗ್ರಂಥದ ವಿಚಾರವನ್ನು ನನ್ನ ಗಮನಕ್ಕೆ ತಂದ ನನ್ನ ಗುರುಗಳಾದ ಶ್ರೀ ಡಿ. ಎಲ್. ನರಸಿಂಹಾಚಾರ್ ಅವರಿಗೆ ನಾನು ಕೃತಜ್ಞನಾಗಿದ್ದೇನೆ). ಕನ್ನಡದ "ಬತ್ತೀಸ ಪುತ್ಥಳಿ ಕಥೆಗಳ"ಲ್ಲಿ ವ್ಯಾಸಂಗಮಾಡಬೇಕಾದ ಹಲವಾರು ವಿಚಾರಗಳು ಹುದುಗಿವೆ. ಜನಪ್ರಿಯವಾದ ಈ ಕಥೆಗಳಲ್ಲಿ ಕಂಡುಬರುವ ಮಾರ್ಪಾಟುಗಳೂ, ಸಂಸ್ಕೃತದ "ವಿಕ್ರಮಾರ್ಕ ಚರಿತ್ರೆ"ಯಲ್ಲಿ ಕಂಡುಬರದ ಭೋಜರಾಜನ ಸವಾಲು ಕಥೆಗಳೂ ಮೊದಲಾದುವು ಗಮನಾರ್ಹವಾಗಿವೆ. ಇಲ್ಲಿ, ಕನ್ನಡ "ಬತ್ತೀಸ ಪುತ್ಥಳಿ ಕಥೆಗಳ"ಲ್ಲಿ ಬರುವ "ಭರ್ತೃಹರಿಯ ವೈರಾಗ್ಯದ ಕಥೆ"ಯನ್ನು ಮಾತ್ರ ಗಮನಿಸಿ ಕೆಲವು ಮಾತುಗಳನ್ನು ಹೇಳ ಬಯಸುತ್ತೇನೆ.

"ಭದ್ರಶರ್ಮ ಎಂಬ ಬ್ರಾಹ್ಮಣನು ಬಹು ಬಡವನಾಗಿರುತ್ತಾನೆ. ಆತನ ಹೆಂಡತಿ ಭೂತಾಂಡಿ ಗಂಡನನ್ನು ಹಂಗಿಸುತ್ತಾಳೆ. ಆತನು ತಪಸ್ಸನ್ನು ಮಾಡಿ ಕಾಳಿಯ ಅನುಗ್ರಹದಿಂದ ಅಮರತ್ವವನ್ನು ನೀಡುವ ಒಂದು ಮಾವಿನ ಹಣ್ಣನ್ನು ಪಡೆಯುತ್ತಾನೆ. ಮೊದಲೇ ಬಡತನ; ಸಾಲದ್ದಕ್ಕೆ ಅಮರತ್ವ! ಇದನ್ನು ಕೇಳಿ ಭೂತಾಂಡಿ ಗಂಡನ ಮೇಲೆ ಕೋಪಗೊಳ್ಳುತ್ತಾಳೆ. ಕಡೆಗೆ, ಭದ್ರಶರ್ಮನು ಮಹಾರಾಜನಾಗಿದ್ದ ಭರ್ತೃಹರಿಗೆ ಅದನ್ನು ಕೊಟ್ಟು ಬೇಕಾದಷ್ಟು ಹಣವನ್ನು ಪಡೆಯುತ್ತಾನೆ. ಭರ್ತೃಹರಿ ತನ್ನ ಪ್ರಿಯೆಯಾದ ಅನಂಗಸೇನೆಗೆ ಅದನ್ನು ಕೊಡುತ್ತಾನೆ. ಆಕೆ ತಾನು ತಿನ್ನದೆ, ತನ್ನ ಮನದನ್ನನಾದ ಒಬ್ಬ ಅಶ್ವಪಾಲಕನಿಗೆ ಕೊಡುತ್ತಾಳೆ. ಅವನು ಲಾಯದ ಕೆಲಸಮಾಡುವ ಹೆಂಗಸೊಬ್ಬಳಿಗೆ ಕೊಡುತ್ತಾನೆ. ಅವಳು ಆ ಹಣ್ಣನ್ನು ತನ್ನ ಹೆಡಗೆಯಲ್ಲಿಟ್ಟು ತರುತ್ತಿರುವಾಗ ಭರ್ತೃಹರಿಯ ಕಣ್ಣಿಗೆ ಬೀಳುವುದು. ಅವನು ಬೆಚ್ಚಿಬಿದ್ದವನಾಗಿ ವಿಚಾರಿಸುವನು. ಅನಂಗಸೇನೆಯ ವರ್ತನೆಗಾಗಿ ಜುಗುಪ್ಸೆಗೊಂಡು, ವಿರಕ್ತನಾಗುತ್ತಾನೆ (ಎ. ೧ "ದೇವಿಯರ ಬತ್ತೀಸ ಪುತ್ಥಳಿಯ ಕಥೆ", ಕಾಗದದ ಪ್ರತಿ, ಪು. ೧೨-೧೩, ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು).

ಈ ಕಥೆ ಕನ್ನಡದ ಇತರ "ಬತ್ತೀಸ ಪುತ್ಥಳಿ ಕಥೆಗಳ" ಪ್ರತಿಗಳಲ್ಲಿಯೂ ಹೀಗೆಯೇ

ಕಂಡು ಬರುತ್ತದೆ. ಸಂಸ್ಕೃತದ "ವಿಕ್ರಮಾರ್ಕ ಚರಿತ್ರೆ"ಯಲ್ಲಿ ಎಂದಿನಂತೆಯೇ ಕಥಾಮುಖದಲ್ಲಿಯೇ ಇದು ಅಡಕವಾಗಿ ಬರುತ್ತದೆ (Vikrama's Adventures, Part I, Translation pp. 5-14; Part II, Original pp. 5-13, Ed. F. Edgerton). ಇಲ್ಲಿ ಬ್ರಾಹ್ಮಣ ಮತ್ತು ಬ್ರಾಹ್ಮಣಿಯರ ಹೆಸರುಗಳು ಉಕ್ತವಾಗಿಲ್ಲ. ಹಣ್ಣು ಅಶ್ವಪಾಲಕನಿಂದ ಗೌಡಿಯೊಬ್ಬಳ ಕೈಗೂ, ಆಕೆಯಿಂದ ಗೋಪಾಲಕನೊಬ್ಬನ ಕೈಗೂ, ಅವನಿಂದ ಕಸ ಬಳಿಯುವವಳ ಕೈಗೂ ಬರುತ್ತದೆ. ಕಡೆಗೆ ಭರ್ತೃಹರಿ ನಿರ್ವೇಗಗೊಂಡು ತನ್ನ ತಮ್ಮನಾದ ವಿಕ್ರಮನಿಗೆ ರಾಜ್ಯಭಾರವನ್ನು ಒಪ್ಪಿಸಿ ತಾನು ತಪಸ್ಸಿಗಾಗಿ ಕಾಡಿಗೆ ತೆರಳುತ್ತಾನೆ.

ಈ ಜನಪ್ರಿಯವಾದ ಕಥೆಯನ್ನು ಪುನಃ ಕನ್ನಡ ಕವಿಯಾದ ಮಹಲಿಂಗಸ್ವಾಮಿಯು ತನ್ನ "ಬಾಲ ಕುಮಾರರಾಮನ ಸಾಂಗತ್ಯ"ದಲ್ಲಿ ಬಳಸಿಕೊಂಡಿರುತ್ತಾನೆ. ಮಾತಂಗಿಯನ್ನು ಕೊಲ್ಲಲು ಹಿಂತೆಗೆದ ಕುಮಾರರಾಮನು, "ಹೆಂಡತಿಯ ಮೇಲೆ ಕೈಮಾಡಲು ಹೇಸಿ, ರಾಮಚಂದ್ರನೆಂಬ ರಾಜನು ಮಚ್ಛೇಂದ್ರ ಮುನಿಯಾದನು" ಎಂದು ಹೇಳುವ ಸಂದರ್ಭದಲ್ಲಿ ಇದು ಉಪಕಥೆಯಾಗಿ ಬರುತ್ತದೆ. ಉಜ್ಜಯಿನಿಯ ಭರ್ತೃಹರಿಯೇ ಇಲ್ಲಿನ ಉಜ್ಜಯಿನಿಯ ರಾಮಚಂದ್ರ. ಮೇಲೆ ಹೇಳಿರುವ ಕಥೆಯ ಬ್ರಾಹ್ಮಣ, ಮಾವಿನಹಣ್ಣು, ಮಹಾರಾಣಿ, ಸಾಣಿ, ಗೌಡಿ, ಗೋಪಿ (ಗೋಪ?), ಕಸ ಬಳಿಯುವವಳು ಮೊದಲಾದ ಇತರ ವಿವರಗಳೂ ಬರುತ್ತವೆ. ನಿಜವಾದ ವೃತ್ತಾಂತವನ್ನು ಅರಿತ ರಾಮಚಂದ್ರನು, ವಿರಕ್ತನಾಗಿ ಕಾಶಿಯಾತ್ರೆಯನ್ನು ಕೈಕೊಂಡು, ಮಚ್ಛೇಂದ್ರನೆಂಬ ಮುನಿಯಾಗುತ್ತಾನೆ (ಸಂಧಿ XIX, ಪ. ೭೭-೮೭). ಈ ನಿರೂಪಣೆಯಲ್ಲಿ ಮೂಲವಸ್ತುವು ಹಾಗೆಯೇ ಉಳಿದುಬಂದಿದೆ. ವ್ಯಕ್ತಿಗಳ ಹೆಸರುಗಳು ಬದಲಾಯಿಸಿವೆ. ಕೆಲವು ವಿವರಗಳು ಪಲ್ಲಟವಾಗಿರುವುದೂ ಉಂಟು. ಇವುಗಳೆಲ್ಲ ಸಹಜವೇ ಸರಿ. ಮನರಂಜನೆ ಮತ್ತು ನೀತಿಗಳು ಹೆಣೆದುಕೊಂಡು ಬಂದಿರುವುದನ್ನೂ ಕಾಣಬಹುದು.

ಇಂಥ ಕಥಾಸಾಹಿತ್ಯವನ್ನು ಒಳಗೊಂಡಿರುವ ಕನ್ನಡದ ಒಂದೊಂದು ಕೃತಿಯನ್ನೂ ಸಮಗ್ರವಾಗಿ ಪರಿಶೀಲಿಸುವ ಅಗತ್ಯವಿದೆ. ಎಲ್ಲೆಲ್ಲಿ ಸಂಸ್ಕೃತದ ಮೂಲ ಲಭಿಸುವುದೋ ಅಲ್ಲೆಲ್ಲ ಕಥೆ ಹೇಗೆ ಮಾರ್ಪಟ್ಟಿರಬಹುದು ಎಂಬ ವ್ಯಾಸಂಗವು ತುಂಬ ಕುತೂಹಲಕಾರಿಯಾದುದು. ಈ ಸಣ್ಣ ಸಣ್ಣ ಕಥೆಗಳ ಜನಪ್ರಿಯತೆ, ಪರಂಪರೆ, ಕಾಲಕಾಲಕ್ಕೆ ಇವುಗಳಲ್ಲಿ ಆಗಿರುವ ಮಾರ್ಪಾಟುಗಳು, ಬೇರೆಬೇರೆ ಕವಿಗಳು ಇವುಗಳನ್ನು ಬಳಸಿಕೊಂಡಿರುವ ಸಂದರ್ಭಗಳು, ಅವರು ಸಾಧಿಸಿರುವ ಧ್ಯೇಯ ಮೊದಲಾದ ಅಂಶಗಳನ್ನು ಕುರಿತು ವಿಚಾರ ಮಾಡಿದ್ದೇ ಆದರೆ ಕನ್ನಡದ ಕಥಾಸಾಹಿತ್ಯದ ವ್ಯಾಪ್ತಿ, ವೈವಿಧ್ಯ, ವೈಶಿಷ್ಟ್ಯಗಳು ವಿದಿತವಾಗುತ್ತವೆ.

**ಜಿ. ವರದರಾಜರಾವ್**

[ಈ ಲೇಖನವನ್ನು ಸಿದ್ಧಪಡಿಸಲು, ಕೆಲವು ಹಸ್ತಪ್ರತಿಗಳನ್ನು ನೋಡಬೇಕಾಗಿ ಬಂದಿತು. ಅವುಗಳನ್ನು ಪರಿಶೀಲಿಸಲು ಅವಕಾಶವಿತ್ತ ಮೈಸೂರಿನ ಪ್ರಾಚ್ಯ ವಿದ್ಯಾ ಸಂಶೋಧನಾಲಯದ ಮುಖ್ಯಾಧಿಕಾರಿಗಳಾದ ಶ್ರೀ ಎಚ್. ದೇವೀರಪ್ಪ, ಎಂ.ಎ. ಅವರಿಗೆ ನಾನು ಕೃತಜ್ಞನಾಗಿದ್ದೇನೆ.]

# ಪಾರಸಿಯಲ್ಲಿ ಸಂಸ್ಕೃತದ ಗುರುತುಗಳು

ಇಲ್ಲಿ ಪಾರಸಿ ಎಂದರೆ ಫರ್ದೂಸಿ ಕವಿಯ ಷಾಹನಾಮ ಗ್ರಂಥದಲ್ಲಿ ಬಳಸಿರುವ ಪಾರಸಿ ಭಾಷೆಯೆಂದು ಅರ್ಥಮಾಡಿದೆ. ಅದು ಈಗಿನ ಪಾರಸಿಯ ಮೊಡಲು ಮೊದಲಿನ ಗ್ರಂಥಗಳಲ್ಲಿ ಬಂದು, ಹೊಸ ಪಾರಸಿ ಭಾಷೆ ರೂಪುಗೊಂಡಮೇಲೆ ಇನ್ನೂ ಅರಬ್ಬಿ ಬೆರಕೆ ಹೆಚ್ಚಾಗಿ ಆಗದೆ ಇದ್ದಕಾಲದಲ್ಲಿ ಬರೆದದ್ದು ಎನ್ನಬಹುದು. ಸುಮಾರು ಹತ್ತನೆಯ ಶತಮಾನಕ್ಕೆ ಸೇರಿದ್ದು ಎಂದ ಮೇಲೆ ತಕ್ಕಷ್ಟು ಹಿಂದಿನಿಂದ ಬಂದಿರುವ ಗ್ರಂಥವೇ.

ಹೊಸ ಪಾರಸಿ ಭಾಷೆ ಈರಾನಿನಲ್ಲಿ ಮೊದಲು ಇದ್ದ ಒಂದು ಭಾಷೆಯ ಆಧಾರದ ಮೇಲೆ ರಚಿತವಾದದ್ದು ಹೌದೇ ಎಂದು ಪಂಡಿತರು ಸಂದೇಹ ಪಟ್ಟಿದ್ದಾರೆ. ನಾವು ಸಂಸ್ಕೃತಕ್ಕೆ ಸಮೀಪವರ್ತಿಯಾಗಿದ್ದಿರಬಹುದು ಎಂದು ಯಾವುದನ್ನು ಭಾವಿಸುತ್ತೇವೆ ಆ ಭಾಷೆ ಈರಾನಿನಲ್ಲಿದ್ದು ಅದರಿಂದ ಹೊಸಭಾಷೆ ಹುಟ್ಟಿದ್ದರೆ ಈ ಗುರುತುಗಳು ತೀರ ಅಳಿಸಿಹೋಗಿರಬೇಕು; ಅಥವಾ ಏನೋ ಕಾರಣದಿಂದ ಹಳೆಯ ಭಾಷೆ ಹೇಳ ಹೆಸರಿಲ್ಲದ ಹಾಗೆ ಹೋಗಿರಬೇಕು—ಇದು ಒಂದು ಪ್ರಬಲವಾದ ಅಭಿಪ್ರಾಯ.

ಅರಬ್ಬಿ ಹೆಚ್ಚಾಗಿ ಬೆರೆತಮೇಲಂತೂ ಈ ಗುರುತು ಇನ್ನೂ ಹೋಗಿಬಿಟ್ಟಿರಬೇಕು. ಆದರೆ ಪಾರಸಿ ಸಂಸ್ಕೃತ ಸಾಮರಸ್ಯಗಳನ್ನು ಹುಡುಕುವುದು ಒಂದು ಸಾಕಷ್ಟು ಸಕಾರಣವಾದ ಕುತೂಹಲವಾಗಿರುತ್ತದೆ. ಏಕೆಂದರೆ ಅರಬ್ಬಿ ಲಿಪಿ ಮತ್ತು ಅಭಿಪ್ರಾಯಗಳನ್ನು ಕೂಡಿಸಿಕೊಂಡ ಪಾರಸಿ ಒಂದುಕಡೆ ಜೀವಂತವಾಗಿರುವ ಒಂದು ಸಮಸ್ಯೆ, ಹಾಗೆಯೇ ಭಾರತದ ಭಾಷೆಗಳಿಗೆಲ್ಲ ತಳಹದಿಯಂತಿರುವ ಸಂಸ್ಕೃತ ಒಂದುಕಡೆ ಅದೂ ಜೀವಂತ ಸಮಸ್ಯೆ. ಈ ಕಡೆ ಮಾತನಾಡುವ ಬಳಕೆಯಲ್ಲಿಲ್ಲದೆ ಇರುವ ಸಂಸ್ಕೃತ ಮತ್ತು ಗುರುತಿಲ್ಲದೆ ಹೋಗಿರುವ ಈಗಿನ ಪಾರಸಿಯ ಹಿಂದಿನ ಭಾಷೆ ಇವುಗಳ ಶೋಧನೆ ಔಪಚಾರಿಕವಾದರೂ ಆದೀತು; ಆದರೆ ಪ್ರಚಲಿತ ಸಂಬಂಧ ಪರಿಚಯದಲ್ಲಿ ಕಾಣಬಹುದಾದ ಒಂದು ಪರಂಪರಾ ಪ್ರಕಟನೆಯಲ್ಲ ಉಪಯುಕ್ತತೆಯ ಅಂಶ ಉಂಟೆಂಬುದು ತಪ್ಪಾಗದು. ಈ ಲೇಖನದ ಸಾಧನೆಗೆ ತೆಗೆದುಕೊಂಡಿರುವುದು ಆ ಕಡೆ ಷಾಹನಾಮದ ಪಾರಸಿ ಇದ್ದಂತೆ, ಈ ಕಡೆ ಭಾರತೀಯರ ಸರ್ವಸಾಧಾರಣ ಸ್ವಯಂಪರಿಚಿತ ಸಂಸ್ಕೃತ.

ಷಾಹನಾಮಾದಲ್ಲಿ ಸಂಸ್ಕೃತ ಪಾರಸಿ, ಅಥವಾ ಭಾರತ—ಈರಾನುಗಳ ಸಂಬಂಧವನ್ನು ಅರಸಲು ಹಲಕೆಲವು ಕಥಾಭಾಗಗಳನ್ನು ಆರಿಸಿಕೊಳ್ಳಬಹುದು. ಈರಾನಿನ ಪೌರಾಣಿಕ ಅರಸರುಗಳ ಚರಿತ್ರೆಯಲ್ಲಿ ಭಾರತೀಯವೆನಿಸಿಕೊಳ್ಳಬಹುದಾದ ಹಲವು ಅಂಶಗಳನ್ನು ಕಾಣಬಹುದು. ಉದಾಹರಣೆಗೆ ಜಮ್ಷೀದನ ಕತೆ ಹೇಳುವಾಗ ಆತನು ಈರಾನಿನ ಸಮಾಜವನ್ನು ನಾಲ್ಕು ಗುಂಪುಗಳಾಗಿ ವಿಂಗಡಿಸಿದ ವರ್ಣನೆ ಬರುತ್ತದೆ. ಭಾಷಾಸಂಬಂಧದ ದೃಷ್ಟಿಯಿಂದ ಅಲ್ಲಿ 'ಬ್ರಾಹ್ಮಣ' ಎನ್ನುವುದಕ್ಕೆ ಏನು ಹೇಳಿದೆ ಎಂದು ಕೇಳಬೇಕೆನ್ನಿಸುವುದು. **'ಪರಸ್ತಂದಗಾಂ'** ಎಂದರೆ **'ಪೂಜೆಸಲ್ಲಿಸುವವರು'** ಎಂಬ ಪಾರಸಿ ಮೂಲದ ಶಬ್ದ ಬರುತ್ತದೆ. ಸಂಸ್ಕೃತ ಛಾಯೆಯ ಪದಗಳು ಬಂದಿಲ್ಲ, ಇರಲಿ. ಕಥೆಯ ಇನ್ನೊಂದು ಭಾಗ ದಖೀಖಿ ಕವಿ ಜರತುಷ್ಟ್ರನ ಆಗಮನವನ್ನು ವರ್ಣಿಸುವ ಸಂದರ್ಭ, ಅಗ್ನಿಪೂಜೆ ಮುಂತಾದ ವಿಷಯಗಳು ಬರುತ್ತವೆ. **'ಅಗ್ನಿಪೂಜೆಗೆ' 'ಆತಿಷ್ ಪರಸ್ತೀ'** ಎಂದು ಹೇಳಿರುತ್ತದೆ. ಅಲ್ಲಿಯೂ ಈರಾನಿನಲ್ಲಿ ಹುಟ್ಟಿದ್ದಿರಬಹುದಾದ ಆದಿ ಸಂಸ್ಕೃತದ ಛಾಯೆ ಒರಲವಕಾಶವಿದ್ದೂ ಬಂದಿರುವುದು ಕಾಣುವುದಿಲ್ಲ. ಕಾವ್ಯದ ಕಡೆಕಡೆಯ ಭಾಗದಲ್ಲಿ ಎಂದರೆ ನೌಷೇರವಾನ್ ದೊರೆಯ ಕಾಲದಲ್ಲಿ ಭಾರತ—ಈರಾನುಗಳ ಸಂಪರ್ಕ ಉಂಟಾದದ್ದು ವರ್ಣಿತವಾಗಿದೆ. ಭಾರತದಿಂದ ಈರಾನಿಗೆ 'ಪಂಚ

ತಂತ್ರದ' ಪ್ರತಿಗಳನ್ನು ತೆಗೆದುಕೊಂಡು ಹೋದರಂತೆ. ಈ ಗ್ರಂಥವನ್ನು ಅಲ್ಲಿ '**ಕಲೀಲ ಒ ದಮನ**' ಎಂದು ಕರೆದಿದೆ. ಈ ರೂಪಾಂತರದಲ್ಲಿ ನಮ್ಮ '**ಕರಟಕ—ದಮನಕ**ಗಳನ್ನು' ಗುರುತಿಸಬಹುದು. ಈ ಕಥೆಗೆ ಬರುವಹೊತ್ತಿಗೆ ನಾವು ಚಾರಿತ್ರಿಕ ಕಾಲಕ್ಕೆ ಕಾಲಿಟ್ಟಿರುವುದರಿಂದ ಶಬ್ದಗಳ ಹಿಂದಿನ ಒಂದು ಪರಸ್ಪರ ಪರಂಪರೆಯ ಭಾವನೆಗೆ ಅಷ್ಟು ಆಧಾರ ಕಾಣದೆ ಹೋದರೂ, ದೇಶದೇಶಕ್ಕೆ ಶಬ್ದಗಳಲ್ಲಿಯ ಭೇದ ಎಷ್ಟು ಬರಬಹುದೆಂಬುದು ಮಂದಟ್ಟಾಗದೆ ಇರದು.

ದೇಶ, ಆಚರಣೆ ಇತ್ಯಾದಿ ಪಾರಿಭಾಷಿಕ ಸಂದರ್ಭಗಳಲ್ಲಿ ಬರಬಹುದಾಗಿತ್ತೆಂಬ ಕಡೆ ಸಂಸ್ಕೃತ ಛಾಯೆಯ ಪದಗಳು ಬರದೆ ಉದ್ದಕ್ಕೆ ಭಾಷೆಯನ್ನು ಬಳಸುತ್ತಾ ಹೋಗುತ್ತಿರುವಾಗ ಅದಾಗಿ ಅದು ಬರುವ ಪದ, ಇದು ಸಂಸ್ಕೃತಗುಂಪಿನದಿದ್ದೀತು ಎಂದು ಕಂಡುಬರುವುದು ಭಾಷೆಗೆ ಸಹಜವಾಗಿ ಆ ಒಂದು ಬಾಂಧವ್ಯ ಇರುವುದನ್ನು ಸೂಚಿಸುತ್ತದೆ ಎಂದರೆ ತಪ್ಪಾಗದು. ಈ ದೃಷ್ಟಿಯಿಂದ ಷಾಹನಾಮದ ಹಾಳೆಗಳನ್ನು ತಿರಿವಿ ಹಾಕುತ್ತ ಗಮನಕ್ಕೆ ಬಂದ ಕೆಲವು ಮಾತುಗಳನ್ನು ಇಲ್ಲಿ ವಿವರಿಸಿದೆ. ಫರ್ದೋಸಿಕವಿ ತನ್ನ ಕಾವ್ಯದಲ್ಲಿ

'**ಗಹರ್**ಹಾಯೆ ಮಾನೇ ಬಸೇ ಸುಫ್ತ ಅವ್'
'ಅನೇಕ ರಹಸ್ಯಗಳನ್ನು ಹೆಣೆದಿದ್ದೇನೆ'

ಎಂದು ಹೇಳುತ್ತಾನೆ. '**ಗಹರ್**', '**ಗಹನ**' ಇವುಗಳಲ್ಲಿ ಸಾಮರಸ್ಯವನ್ನು ಕಾಣಬಹುದೆ?

'ನ ಈಂ ನಾವು ಬರ್‌ನಾಮೆ ಮಹಮೂದ್ ಗುಫ್ತ್
ಬನಾಮೆ ನಬೀ ಬ ಅಲೀ ಗುಫ್ತ ಅವ್'

'ಈ ಕತೆ ದೊರೆ ಮಹಮೂದನ ಹೆಸರಿನಲ್ಲಿ ಹೇಳಿದ್ದಲ್ಲ, ನಮ್ಮ ಪ್ರವಾದಿ ಮತ್ತು ಅಲೀ ಅವರ ಹೆಸರಿನಲ್ಲಿ ಹೇಳಿದ್ದೇನೆ'

**'ನಾವು', ಕತೆ, ಚರಿತ್ರೆ; 'ನಾವ್,' ಹೆಸರು; 'ರಾಮನಾವು'** ಇದಕ್ಕೆ ಹೋಲಿಸಿ.

'ಒ ಗರ್ ಮಾದರೇ ಷಾಹ ಬಾನೂ ಬುದೇ
ಮರಾ ಸೀಮ್ ಒ ಸರ್ ತಾ ಬ ಜಾನೂ ಬುದೇ'

'ಷಾಹನ ತಾಯಿ ರಾಜಕುಮಾರಿಯೇ ಆಗಿದ್ದರೆ ನನ್ನ ಮೊಳಕಾಲುಗಳ ವರೆಗೂ ಬಂಗಾರ ಬೆಳ್ಳಿ ರಾಶಿಯಾಗುತ್ತಿತ್ತು.'

**'ಮಾದರ್', ತಾಯಿ, ಮಾತೃ; 'ಜಾನೂ', ಜಾನು, ಮೊಳಕಾಲು.**

'ಚೊ ಕೂದಕ್ ಲಬ್ ಅಸ್ ಷೀರೆ ಮಾದರ್ ನಷುಸ್ತ್
ಬ ಗಹ್ವಾರ ಮಹಮೂದ್ ಗೋಯದ್ ನುಖುಸ್ತ್'

'ಮಗು ಇನ್ನೂ ತುಟಿಯನ್ನು ತಾಯಿಯ ಹಾಲಿಸಿಂದ ಒದ್ದೆಮಾಡಿಕೊಳ್ಳಲಿಲ್ಲ. ತೊಟ್ಟಿಲಿನಲ್ಲಿ ಆ ಮೊದಲೇ ಮಹಮೂದನ ಹೆಸರು ಹೇಳುತ್ತದೆ.'

**'ಷೀರ್', ಹಾಲು, ಕ್ಷೀರ; 'ಮಾದರ್', ಮಾತೃ.**

'ಚುನೀಂ ಗುಫ್ತ್ ಆಯೀನ್ ತಖ್ತ್ ಒ ಕುಲಾಃ
ಗಯೂಮರ್ಸ್ ಆವುರ್ದ್ ಕೋ ಬೂದ್ ಷಾಃ'

'ಕಥೆ ಹೇಳುವಂತೆ ಗಯೂಮರ್ಸ್ ದೊರೆ ಆದೊಡನೆ ಸಿಂಹಾಸನ ಕಿರೀಟಗಳನ್ನು ತಂದುಕೊಂಡ.'

'ಆಯೀನ್', ಕತೆ, ಚರಿತ್ರೆ, ಇತಿಹಾಸ; 'ರಾಮಾಯಣ', ಇದಕ್ಕೆ ಹೋಲಿಸಿ. 'ಗಯೂಮರ್ಸ್', ಈ ಶಬ್ದದಲ್ಲಿ 'ಗಯೂ', 'ಗಾವ್', ಗಾವಃ, ಹಸು, ವೃಷಭ.

ಜಮ್ಷೀದನು ವಿಂಗಡಿಸಿದ ಸಮಾಜದ ನಾಲ್ಕು ಗುಂಪುಗಳಲ್ಲಿ ಒಂದು.

'ಕುಜಾ ಕಾರಶಾಂ ಹಮ್‌ಕುನಾಂ ಪೀಶ ಬೂದ್'

'ಕೆಲಸಮಾಡುವುದು ಅವರ ಉದ್ಯೋಗವಾಗಿತ್ತು'. 'ಕಾರ್', ಕೆಲಸ, ಕಾರ್ಯ.

ಕತೆ: 'ಫರೀದೂನ್ ಜಂದಲ್ ರಾ ಫರಸ್ತಾದ್ ಬ ಖಾಸ್ತಗಾರೀಯೆ ದೊಖ್ತರಾನೆ ಶಾಹೆ ಯಮನ್ ಬರಾಯೆ ಪಿಸ್ರಾನೆ ಖುದ್.' 'ಫರೀದೂನನು ತನ್ನ ಗಂಡುಮಕ್ಕಳಿಗಾಗಿ ಯಮನ್ನಿನ ದೊರೆಯ ಮೂವರು ಹೆಣ್ಣುಮಕ್ಕಳನ್ನು ಕೇಳಲು ಜಂದಲನನ್ನು ನೇಮಿಸಿ ಕಳುಹಿಸಿದನು.' 'ದೊಖ್ತರಾಂ', ಹೆಣ್ಣುಮಕ್ಕಳು; 'ದೊಖ್ತರ್', ಮಗಳು, ದುಹಿತೃ.

ಕಾವ್ಯದಲ್ಲಿ ಬರುವ ಅನೇಕಾನೇಕ ಪಾತ್ರಗಳನ್ನು ವರ್ಣಿಸುವ ಸಂದರ್ಭದಲ್ಲಿ 'ಕೆಹಾನೋ ಮಹಾನ್', 'ಕೆಹ್ತರಾಂ ಒ ಮಹತರಾಂ', 'ಪಹಿಲ್ವಾನ್', ಈ ಶಬ್ದಗಳು ಬರುತ್ತವೆ. 'ಕೆಹಾನ್', ಸಣ್ಣವರು; 'ಮಹಾನ್', ದೊಡ್ಡವರು; 'ಕೆಹತರಾಂ' ಸಣ್ಣವರು; 'ಮಹತರಾಂ', ದೊಡ್ಡವರು, ಮಹತ್ತುಳ್ಳವರು. 'ಪಹಿಲ್ವಾನ್', ಶಬ್ದದಲ್ಲಿನ 'ವಾನ್' ಭಾಗ ಅನೇಕ ಸಂಸ್ಕೃತಪದಗಳಲ್ಲಿ ಬರುವುದನ್ನು ಕಾಣಬಹುದು, 'ಬಲ' ಮತ್ತು 'ವಾನ್', 'ಬಲವಾನ್', ಬಲವುಳ್ಳವರು, ಆಗುತ್ತದೆ 'ಪಹಿಲ್ವಾನ್' ಮತ್ತು 'ಬಲವಾನ್' ಶಬ್ದಗಳಲ್ಲಿ ಸಾಮರಸ್ಯವನ್ನು ಕಾಣಬಹುದಲ್ಲವೆ?

ಒಂದು ಕಥಾಭಾಗದಲ್ಲಿ ಬರುವ ದೊರೆಯ ಹೆಸರು 'ಮಿಹಿರಾಬ್' ಎಂದಿರುತ್ತದೆ. 'ಮಾಹ್ ಒ ಮಿಹಿರ್' ಒಂದು ಪದಸರಣಿ. 'ಮಾಹ್', ಚಂದ್ರ; 'ಮಿಹಿರ್', ಸೂರ್ಯ. 'ಮಿಹಿರ' ಇದಕ್ಕೆ ಸಂಸ್ಕೃತದಲ್ಲಿಯೂ ಸೂರ್ಯ, ಎಂಬ ಅರ್ಥವಿದೆ. 'ಸೂರ್ಯ ವಂಶದವರು', 'ಮಿಹಿರ ವಂಶದವರು.' 'ಮಾಹ್' ಶಬ್ದವನ್ನು ಉಚ್ಚಾರಣಾ ರೂಪ ದಲ್ಲಲ್ಲದಿದ್ದರೂ, ಭಾವನಾ ರೂಪದಲ್ಲಿ 'ಮಾಹ್ ರೂ' ಎಂಬ ಶಬ್ದದಲ್ಲಿ ಕಾಣಬಹುದು. ಅರ್ಥ, 'ಚಂದ್ರವದನ.' 'ಮಿಹಿರಾಬ್' ಪದದಲ್ಲಿ 'ಆಬ್' ಒಂದು ಭಾಗವಿದೆ. 'ಆಬ್' ಆಪಃ, ನೀರು. ಪ್ರಾಂತಗಳ ಹೆಸರುಗಳನ್ನು ಹೇಳುವಾಗ, 'ಪಂಜಾಬ್' ಮುಂತಾಗಿ ಹೇಳುವುದುಂಟು. 'ಮಿಹಿರಾಬ್' ಮುಂತಾದ ಹೆಸರುಗಳಲ್ಲಿ ಇರುವ ಹೊಂದಾಣಿಕೆ ನೋಡ ಬೇಕಾದದ್ದು. 'ಆಬ್' ಗಂಡು, 'ಆಬ' ಹೆಣ್ಣು ಆಗಬಹುದೆ? 'ಮಿಹಿರಾಬನ' ಮಗಳು 'ರೂದಾಬ.' 'ರೂದ್' ಹೊಳೆ; 'ಆಬ್' ನೀರು; ಊಹೆ ಆಗಬಹುದೆ?

ಹೆಸರುಗಳಲ್ಲಿ 'ಆಬ್' ಸೇರುವುದಕ್ಕಿಂತ ಸಾಮಾನ್ಯವಾಗಿ 'ಅಸ್ಪ್' ಸೇರಿರುವುದು ಕಾಣುತ್ತದೆ, 'ಅರ್ಜಾಸ್ಪ್' 'ಲಹರ್ರಾಸ್ಪ್' 'ಗಷ್ತಾಸ್ಪ್', ಮುಂತಾದ ಹೆಸರುಗಳಂತೆ. 'ಅಸ್ಪ್', ಅಶ್ವ, ಕುದುರೆ; 'ಯೌವನಾಶ್ವ,' ಈ ಹೆಸರನ್ನು ಹೋಲಿಸಿ.

ಹಾಗೆ ಮುಖ್ಯ ಶಬ್ದಗಳೊಂದಿಗೆ ಸೇರಿ ಅರ್ಥಕೊಡುವ ಪ್ರತ್ಯಯಗಳಲ್ಲಿ ಪಾರಸಿ, ಸಂಸ್ಕೃತಗಳಿಗೆ ಸಾಮಾನ್ಯವಾದದ್ದು 'ಸ್ತಾನ್' 'ಸ್ಥಾನ' ಎಂಬುದು. 'ಕಾಬೂಲಿಸ್ತಾನ್,' 'ಕಾಬುಲ್‌ದೇಶ,' 'ಹಿಂದೂಸ್ತಾನ್,' 'ಹಿಂದೂದೇಶ,' ರೇಗಿಸ್ತಾನ್', ಮರಳುಕಾಡು, 'ಗುಲಿಸ್ತಾನ್,' 'ಹೂಗಳ ತೋಟ,' 'ದೇವಸ್ಥಾನ'—ಈ ಶಬ್ದಗಳನ್ನು ನೋಡಿ.

ಮಾಜಿಂದರಾನ್ ಒಂದು ಸೊಗಸಾದ ಪ್ರದೇಶ. ಅದರ ವರ್ಣನೆಯಲ್ಲಿ ಒಂದು ಸಾಲು ಹೀಗೆ ಬರುತ್ತದೆ.

'ಕೆ ಮಾಜಿಂದರಾಂ ಷಹರೆ ಮಾ ಯಾದ್ ಬಾದ್
ಹಮೇಷ ಬರೋ ಬೂಮುಸ್ ಆ ಬಾದ್ ಬಾದ್'

'ನಮ್ಮ ಮಾಜಿಂದರಾನಿನ ನೆನಪು ನಿಮಗೆ ಯಾವಾಗಲೂ ಇರಲಿ, ಯಾವಾಗಲೂ ಅಲ್ಲಿಯ ಭೂಮಿ ಸಮೃದ್ಧಿಯಾಗಿರಲಿ.'

'**ಬೂಮ್**' ಶಬ್ದಕ್ಕೆ **ಭೂಮಿ** ಎಂದೇ ಅರ್ಥ.

'**ತನ್**' ಎಂಬುದು ಹಾಗೆಯೇ ಎರಡು ಭಾಷೆಗಳಲ್ಲಿಯೂ ಒಂದೇ ಆಗಿ ಕಾಣುವ ಶಬ್ದ. '**ಪೀಲ್‌ತನ್**', ಆನೆಯಂತೆ **ಮೈಯುಳ್ಳವಳು**; '**ತನ್**', ತನು.

ಕೆಲವು ಕ್ರಿಯಾಪದಗಳಲ್ಲಾದರೂ ಸಂಸ್ಕೃತ ಛಾಯೆಯನ್ನು ಗುರುತಿಸಬಹುದು. '**ಖರೀದನ್**', **ಕೊಳ್ಳುವುದು**; **ಕ್ರಿ**, ಹಿಂದಿಯಲ್ಲಿ **ಕಿರಾಯೆ**, ಇದನ್ನು ಹೋಲಿಸಿ. '**ಚೋಷೀದನ್**' ರಸ ಎಳೆದುಕೊಳ್ಳುವುದು, **ಚಷು**. '**ಷುನೀದನ್**' **ಕೇಳುವುದು**, **ಶೃಣು**. '**ಪೇಚೀದನ್**', **ಪೇಚಾಡುವುದು**, ಸಂಸ್ಕೃತದಲ್ಲಿ ಹೇಗೊ? ಕನ್ನಡದಲ್ಲಂತೂ ಇದೆ.

ರುಸ್ತುಮನ ಕುದುರೆಯ ಹೆಸರು '**ರಖಷ್**' ಎಂದಿದೆ. '**ರಕ್ಷ**' '**ರಕ್ಷೆ**' ಎಂದೇ ಏಕೆ ಕರೆಯಬಾರದು?

'ಬಾಯಾರಿಕೆ' ಎಂಬುದಕ್ಕೆ '**ತಷ್ಣಗೀ**' ಎಂಬ ಶಬ್ದ ಬಂದಿದೆ. ಸಂಸ್ಕೃತ '**ತೃಷ್ಣೆ**'.

'**ಅಷ್ದಹಾ**', **ಮಹಾಸರ್ಪ**, **ಕಾಳಸರ್ಪ**, '**ಅಜಗರ**'—ಇದನ್ನು ಹೋಲಿಸಿ.

ಪ್ರಾಣಿಗಳ ಹೆಸರುಗಳು ಎರಡು ಭಾಷೆಗಳಲ್ಲಿಯೂ ಒಂದೇ ಇರಬಹುದು ಎನ್ನುವುದಕ್ಕೆ '**ಉಷ್ತರ್**', **ಒಂಟೆ**, **ಉಟ್ರಿಷ** ಇದನ್ನು ದೊಡ್ಡ ಉದಾಹರಣೆಯನ್ನಾಗಿ ಇಟ್ಟುಕೊಳ್ಳಬಹುದು. ಈರಾನಿನ ಮೊಟ್ಟಮೊದಲಿನ ಪ್ರವಾದಿಯ ಹೆಸರು '**ಜರತುಷ್ತ್ರ**' ಎಂದಿರುತ್ತದೆ. ಷಾಹನಾಮಾದಲ್ಲಿ ಈ ಪ್ರವಾದಿಯ ಹೆಸರು ಹೇಳುವ ಹೊತ್ತಿಗೆ ಅರಬ್ಬಿ ಭಾಷೆ ಸ್ವಲ್ಪಸೇರಿತ್ತು ಎಂದು ಕಾಣುತ್ತದೆ. ಆದುದರಿಂದ '**ಜರತುಷ್ತ್ರನ**' ಬಾಯಲ್ಲಿ.

'ಬಷಾಹೇಜಹಾಂ ಗುಫ್ತ್ ಪೈಗಂಬರಮ್'

'ಚಕ್ರವರ್ತಿಗೆ ಆತ ಹೇಳಿದನು, **ನಾನು ಪೈಗಂಬರನು**' ಎಂದು ಹೇಳಿಸಿದೆ. ಹಾಗೆಯೇ 'ಮತ' ಅಥವಾ 'ಧರ್ಮ' ಎಂಬುದನ್ನು 'ದೀನ್' ಎಂದು ಹೇಳಿಸಿದೆ. '**ಜರತುಷ್ತ್ರ**' ದೊರೆಗೆ—

'ಬಯಾಮೋಸ್ ಆಯೀನೆ ದೀನೇ ಬಿಹೀ
ಕೆ ಬೇ ದೀನ್ ನ ಖೂಬ್ ಅಸ್ತ್ ಷಾಹನ್ಷಹೀ'

'ಸ್ವರ್ಗದ ಧರ್ಮದ ರೀತಿಯನ್ನು ಕಲಿ, ಧರ್ಮವಿಲ್ಲದ ದೊರೆತನ ಸೊಗಸದು'

ಎಂದು ಹೇಳಿದನಂತೆ. '**ಆಯೀನ್**' ಎಂಬ ಶಬ್ದದಲ್ಲಿ '**ಆಚರಣೆ**' ಎಂಬ ಶಬ್ದದ ಧ್ವನಿ ಇದೆ ಎಂದರೆ ತಪ್ಪಾಗದು.

'**ಅಸ್ತ್**', '**ಹಸ್ತ್**', **ಇದೆ**, **ಇರುವುದು**; '**ನೀಸ್ತ್**', **ಇಲ್ಲ**, **ಇಲ್ಲವಾಗಿರುವುದು**—ಈ ಪ್ರಯೋಗಗಳು, '**ಅಸ್ತಿ**', '**ನಾಸ್ತಿ**' ಮೊದಲಾದ ಸಂಸ್ಕೃತ ಪ್ರಯೋಗಗಳಿಗೆ ಸಮನಾಗಿರುತ್ತವೆ.

'**ಯಕ್**', **ಏಕ**; '**ದೋ**', **ದ್ವಿ**; '**ಚಾರ್**', **ಚೌ**; '**ಪಂಜ್**', **ಪಂಚ**; '**ಷಷ್**' **ಷಟ್**; '**ಹಫ್ತ್**' **ಸಪ್ತ**; '**ಹಷ್ತ್**' **ಅಷ್ಟ**; '**ನಹ**', **ನವ**; '**ದಹ**', **ದಶ**;

ಇತ್ಯಾದಿ ಸಂಖ್ಯಾವಾಚಕಗಳು ಎರಡು ಭಾಷೆಗಳಲ್ಲಿಯೂ ಸಮಸಮವಾದ ಛಾಯೆಗಳಲ್ಲಿ ಕಾಣುತ್ತವೆ. ಇಂತಹ ಸಾಮಾನ್ಯ ಪ್ರಯೋಗಗಳ ವಿಪುಲತೆಯಿಂದ ಪದಶಃ ಭಾಷಾಭೇದ ವಿದ್ದರೂ ಧ್ವನಿಯಲ್ಲಿ ಒಂದು ಸಂಬಂಧದ ಎಳೆ ಪರಿಚಯಕ್ಕೆ ಬರುತ್ತದೆ ಎನ್ನಬಹುದು.

ಕಡೆಯದಾಗಿ ಸಮಗ್ರವಾಗಿ ಭಗವಂತನಲ್ಲಿ ತನಗೆ ಇರುವ ಅಭಿಪ್ರಾಯವನ್ನು ಕವಿ ಇಲ್ಲಿ ಸೂಚಿಸಿದ್ದಾನೆ ಎಂದು ಪ್ರತೀತಿ ಇರುವ ಎರಡು ಪದ್ಯಪಾದಗಳನ್ನು ನೋಡಬಹುದು.

'ಜಹಾಂ ರಾ ಬಲಂದೀ ಒ ಪಸ್ತೀ ತು ಯೀ,
ನ ದಾನಂ ಚಿಯೀ, ಹರ್‌ಕೆ ಹಸ್ತೀ ತು ಯೀ

'ಜಗತ್ತಿಗೆ ದೊಡ್ಡವನು ಸಣ್ಣವನು ನೀನೇ
ನೀನು ಏನೋ ನಾನು ಅರಿಯೆ, ಇರುವುದೆಲ್ಲ ನೀನೇ'

**'ಜಹಾಂ,' ಜಗತ್ತು; 'ತೂ,' ನೀನು, ತ್ವಂ; 'ನ,' ಸಂಸ್ಕೃತದಲ್ಲಿಯೂ ಇದೆ; 'ದಾನಂ,' ತಿಳಿದಿದ್ದೇನೆ—'ನ ದಾನಂ' ತಿಳಿಯದಾಗಿದ್ದೇನೆ; 'ಹಸ್ತೀ' ಇರುವುದು; 'ತು,' ನೀನು; 'ದಾನಂ,' ಜಾನಾಮಿ—**ಇವುಗಳನ್ನು ಹೋಲಿಸಿ.

ಪಾರಸಿ ಕವಿ ಹೀಗೆ ಹೇಳಿರುವುದರಲ್ಲಿಯೂ, ಸಂಸ್ಕೃತದ ಕವಿ

'ಜಾನಾಮಿ ನ ತ್ವಾಂ ವಿನಾ'

ಎಂದು ಹೇಳಿರುವುದರಲ್ಲಿಯೂ ಶಬ್ದಗಳ ಏಕರೂಪತೆಯೇ ಅಲ್ಲ, ಭಾವಗಳ ಏಕರೂಪತೆಯೂ ವ್ಯಕ್ತಪಡುತ್ತದೆ.

**ಎಂ. ವಾಸುದೇವಮೂರ್ತಿ**

[ಸಂಸ್ಕೃತ ಭಾಷೆಯೂ ಪ್ರಾಚೀನ ಪಾರಸೀಭಾಷೆಯೂ ಇಂದೋ-ಇರಾನಿಯನ್ ಮೂಲಭಾಷೆಯಿಂದ ಬಂದವುಗಳೆಂಬುದು ತೌಲನಿಕ ಭಾಷಾಶಾಸ್ತ್ರದಲ್ಲಿ ಪ್ರಸಿದ್ಧವಾದ ವಿಷಯ. ಆದಕಾರಣ ಸಂಸ್ಕೃತ ಮತ್ತು ಪಾರಸಿ ಈ ಭಾಷೆಗಳಲ್ಲಿನ ಅನೇಕ ಶಬ್ದರೂಪಗಳಿಗೆ ನಿಕಟಸಾಮ್ಯವಿರುವುದು ಸಹಜ. ಅವು ಜ್ಞಾತಿಶಬ್ದಗಳು; ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಎರವಲಾಗಿ ಬಂದವುಗಳಲ್ಲ. ಪ್ರಕೃತಲೇಖನದಲ್ಲಿ ಎತ್ತಿ ತೋರಿಸಿರುವ ಸಮಾನರೂಪಗಳನ್ನು ಭಾಷಾಶಾಸ್ತ್ರದ ದೃಷ್ಟಿಯಿಂದಲೂ ಪರಿಶೀಲಿಸುವುದು ಉಚಿತ.

—ಸಂ.]



# ಕುಮಾರವ್ಯಾಸನ ದೃಷ್ಟಿ—ದರ್ಶನದ ದಿವ್ಯದ್ವಾರ

ಕನ್ನಡದ ಕುಮಾರವ್ಯಾಸ ನಿಸ್ಸೀಮ ಕೃಷ್ಣಭಕ್ತ, ವೀರನಾರಾಯಣನ ಸಾಕ್ಷಾತ್ಕಾರವನ್ನು ತನ್ನ ಕಾವ್ಯದಲ್ಲಿ ಕಂಡ ವೀರಭಕ್ತ. ಅವನ ಬಾಳುಬದುಕೆಲ್ಲ ಕೃಷ್ಣಮಯ! ವಿಶ್ವವೆಲ್ಲ ಕೃಷ್ಣಲೀಲೆ! ಶ್ರೀಮನ್ನಾರಾಯಣನ ದಿವ್ಯಶಕ್ತಿಯ ಲೀಲಾವಿಲಾಸದ ಪಾರಮ್ಯವನ್ನು ಪ್ರತಿಪಾದಿಸುವ 'ಭಾಗವತ ಮಸ್ತಕರತುನ' ಕುಮಾರವ್ಯಾಸ. ಮಾನವ ಜೀವನ ವಾಹಿನಿಗಳೆಲ್ಲ ಪ್ರವಹಿಸಿ, ಕೊನೆಗೆ ಕ್ಷೀರಸಾಗರಶಾಯಿಯಲ್ಲಿಯೇ ಪರಮಗಂತವ್ಯವನ್ನು ಕಂಡುಕೊಳ್ಳಬೇಕೆಂಬ ದರ್ಶನವನ್ನು ಕಂಡ ದ್ರಷ್ಟಾರ. ಮಾನವಜೀವಿಗಳು ಹಾಹೆಗಳು, ಸೂತ್ರದ ಗೊಂಬೆಗಳು! ಆ ಸೂತ್ರಧಾರನ ಇಚ್ಛೆಯಂತೆ ಸೃಷ್ಟಿಯ ಆಗುಹೋಗುಗಳು ಆಗಿಹೋಗಬೇಕೆಂಬ ಅರಿವನ್ನು ಕಂಡುಕೊಂಡ ಅನುಭಾವಿ. ಬರಿಯ 'ತೊಳಸಿಯ' ಉದಕದಲ್ಲಿಯೇ, ಸರ್ವಪಾಪಹರವಾದ, ಸರ್ವಜೀವ ಪ್ರೇರಕ-ತಾರಕವಾದ ಅಮೃತತ್ವವನ್ನು ಕಂಡ ಹರಿಶರಣ. ಅವನ ಕಾಣಿಕೆಯನ್ನೇ ಕೃಷ್ಣಚರಿತಾಮೃತವಾದ ಮಹಾಭಾರತದಲ್ಲಿ ಕಾಣಿಸಿ, ಅಥವಾ ಕಂಡುಕೊಂಡು, 'ಯುಗಯುಗದ ಜನಕಭಯವೈತರಣಿ'ಯಾಗುವಂತಹ ಕಾಣಿಕೆಯನ್ನೊಪ್ಪಿಸಿ, ಬಾಳಿನ ಸಾರ್ಥಕತೆಯನ್ನು ಕಂಡುಕೊಂಡಿದ್ದಾನೆ. ಅಲ್ಲಿ ಅವನು 'ವಿಶಿಷ್ಟಶಕ್ತಿಯ ಸರ್ವಸ್ವತಂತ್ರ ಕವಿಯಾಗಿ ಮೆರೆದಿದ್ದಾನೆ, ತನ್ನನ್ನು ತಾನೇ ಮರೆತಿದ್ದಾನೆ. 'ಪಂಪನನ್ನೂ ದ್ವಿತೀಯ'ನನ್ನಾಗಿ ಮಾಡಿದಂಥ 'ಅದ್ವಿತೀಯ ಕವಿ'ಯಾಗಿದ್ದಾನೆ. ಕುಲಗೋತ್ರಗಳ, ಕಾಲದೇಶಗಳ ಎಲ್ಲೆಯನ್ನು ದಾಟಿ, 'ನಿತ್ಯಸತ್ಯ'ವನ್ನು ನಿದರ್ಶನ ರೂಪದಲ್ಲಿ ಚಿತ್ರಿಸಿ, ಅವನು ಕಲಿಯುದವರಿಗೂ ಕಾಮಧೇನುವಾಗಿದ್ದಾನೆ.

ಕುಮಾರವ್ಯಾಸನ 'ಭಾರತಕಥಾಮಂಜರಿ' 'ಕೃಷ್ಣಚರಿತಾಮೃತ' ; ಹಾಗೆಯೇ, ಕೇಳುವವರ ಕರ್ಣಾಮೃತ, ಭಾವುಕರ ದಿವ್ಯಾಮೃತ, ಕನ್ನಡಿಗರ ಕಾವ್ಯಾಮೃತ. ಇದು 'ಭಾರತಾಕೃತಿಯು ಪಂಚಮಶ್ರುತಿ,' 'ಇಲ್ಲಿ ನೋಳ್ಪುದು ಪದುಮನಾಭನ ಮಹಿಮೆಯನು!' ಧರ್ಮವಿಚಾರ ಮಾತ್ರವನು.' ಇದು 'ಪರಮವೇದದ ಸಾರ . . . ತತ್ವವಿಚಾರ.' ಇದು ಕಥಾಮಂಜರಿಯಾದಂತೆ, ಕಾವ್ಯ ಮಂಜರಿಯೂ ಅಹುದು. ಅಷ್ಟಲ್ಲದೆ ಕಥೆಕಾವ್ಯಗಳಿಗೆ 'ನಿತ್ಯತ್ವ'ವನ್ನು ತಂದುಕೊಡುವ 'ಸತ್ಯದರ್ಶನ'ವೂ ಇಲ್ಲಿದೆ. ಈ ದರ್ಶನಕ್ಕೆ ಈ ಕಾವ್ಯ ಪ್ರತಿಮೆ, ಅಪ್ರತಿಮ ಪ್ರತಿಮೆ. ಕವಿಕಂಡ ಅನುಭಾವ ಸತ್ಯ ಪ್ರತಿಮಾರೂಪದಲ್ಲಿ ಪ್ರದರ್ಶಿತವಾಗಿದೆ. 'ದರ್ಶನಪ್ರತಿಭಾವಶಿಯಾಗಿ, ಭಗವಾನ್ ವೀರನಾರಾಯಣ ಕೃಪಾಸೂತ್ರ ಚಾಲಿತನಾಗಿ ಹಾಡಿದ ಈ ಭಕ್ತ ಕವೀಶ್ವರನ ನಿತ್ಯಪಾಠವಾದ ಈ ಭಾರತ ನಮಗೆಲ್ಲ ನಿತ್ಯಪಾರಾಯಣ. ಸರ್ವವನ್ನೂ ಸರ್ವರನ್ನೂ ಸರ್ವಕಾಲದಲ್ಲಿಯೂ ಸರ್ವಭಾವದಲ್ಲಿಯೂ ಭಗವದ್ ಭಕ್ತಿಯ ಶ್ರೀಮಂತ ಕಾಂತಿಯ ಕಣ್ಣಿನಿಂದಲೇ ಕಾಣುವ ವಿರಾಡ್ ದರ್ಶನ ಕುಮಾರವ್ಯಾಸ ಯೋಗೀಂದ್ರನಿಗಿದೆ. ಅದು ಇಲ್ಲಿ ಮೂಡಿದೆ.

ವಿಶ್ವದ ರಹಸ್ಯವನ್ನು ವಿವರಿಸುವಾಗ ನಮ್ಮ ವೇದಾಂತಿಗಳು ಅಂಡ-ರಸ ನ್ಯಾಯದ ಹೋಲಿಕೆ ಕೊಡುವುದುಂಟು. ನವಿಲಿನ ಮೊಟ್ಟೆಯನ್ನೇ ಬ್ರಹ್ಮಾಂಡವೆನ್ನೋಣ. ಅದರಲ್ಲಿರುವ 'ರಸ'ವೇ ಈ ಲೋಕದ ಮೂಲ 'ಜೀವ ದ್ರವ'.

ಅದರಲ್ಲಿ ಮರಿ ಮೂಡಿದಾಗ ಕಾಣಿಸುವ ನವಿಲಿನ ಕಾಲು, ಕಣ್ಣು, ಕೊಕ್ಕು, ಪುಕ್ಕ, ಅದರ ನೂರಾರು ಬಣ್ಣ ಮುಂತಾದುವುಗಳೆಲ್ಲ ಆ ಮೂಲರಸದಲ್ಲಿಯೇ ಸಂಸ್ಕಾರ ರೂಪದಲ್ಲಿಯೇ ಹುದುಗಿಕೊಂಡಿದ್ದುವೆಂದರೆ ಅದೆಂಥ ಆಶ್ಚರ್ಯ! ಅಂತೆಯೇ ನಮ್ಮಾ ವಿಶ್ವದ 'ಮೂಲಪ್ರಾಣ'ದಲ್ಲಿ ಸೃಷ್ಟಿಯ ಅಂಶಗಳೆಲ್ಲ 'ಸಂಕಲ್ಪ' ರೂಪದಲ್ಲಿ ಅಡಗಿವೆ. ಸ್ವಯಂ ಚಾಲಿತ ಇಚ್ಛಾಶಕ್ತಿ ಪ್ರೇರಣೆಯಿಂದ ತನ್ನ ಲೀಲೆಗಾಗಿ ಅದು ವಿಕಾಸದ ಹಾದಿಯನ್ನು

ಹಿಡಿಯುತ್ತದೆ. ಸೂರಾರು ರೂಪಗಳನ್ನು ಪಡೆದುಕೊಳ್ಳುತ್ತದೆ. ಅದರ ಲೀಲಾವಿಲಾಸ ಮುಗಿದ ಮೇಲೆ, ಈ ವೈವಿಧ್ಯತೆಯನ್ನೆಲ್ಲ ಏಕವಾಗಿಸಿಕೊಂಡು, ತನ್ನಲ್ಲಿ ತನ್ನನ್ನು ತಾನೇ ಅಡಗಿಸಿಕೊಳ್ಳುತ್ತದೆ, ಒಪ್ಪೊಮ್ಮೆ ಸಪಲಿನ ಮೊಟ್ಟೆಗಳ ಹದ ತಪ್ಪಿದಾಗ ಒಳಗಿನ ರಸವೆಲ್ಲ ಒಳಗೇ ಬತ್ತಿಹೋಗಿ ಬರಿಯ ಆವರಣವೊಂದೇ ಉಳಿದಿರುವಂತೆ! ಅಂತೆಯೇ ಅಂತ್ಯದಲ್ಲಿ ಈ ವಿಶ್ವ. ಈಚೆಗೆ ವೈಜ್ಞಾನಿಕವಾಗಿಯೂ ಈ ತತ್ವವನ್ನು ಸ್ಥಾಪಿಸಲು ಸಾಧ್ಯವಾಗುವಂತಿದೆ. 'Matter is indestructable' ಎಂಬ ಸಿದ್ಧಾಂತ ಇದನ್ನು ವಿವರಿಸುತ್ತದೆ. ಒಂದು ಅಣು ಕೇಂದ್ರದ ಸುತ್ತ ಅಮೇಯವಾದ ವೇಗದಿಂದ ತಿರುಗುತ್ತಿವೆ ಎಂದು ಹೇಳಲಾಗುವ ಪಾಸಿಟ್ರಾನ್, ಟಿಟ್ರಾನ್‌ಗಳ ಅರಿವಿನಿಂದಲೂ, 'ಜಡವೆಂಬುದೆಲ್ಲ ಚೇತನದ ಸುಪ್ತಸ್ಥಿತಿ! ಸೋಟಕ್ಕೆ ಜಡವಾದ ಪೆಟ್ರೋಲು, ಯಂತ್ರದಲ್ಲಿ ಪ್ರವೇಶಿಸಿದಾಗ 'ಚಲಸಶಕ್ತಿ'ಯಾಗುತ್ತದೆ. ನೀರು ಸಾಂದ್ರವಾಗಿ ಗಡ್ಡೆಯಾಗುತ್ತದೆ. ಅದೇ ಕರಗಿ ನೀರಾಗುತ್ತದೆ, ಅದು ಕರಗಿ ಆವಿಯಾಗುತ್ತದೆ. ಅಲ್ಲದೆ ಈ 'ಅಣು ಪ್ರಪಂಚ'ವನ್ನು ಪ್ರಚೋದಿಸುವ 'ಶಕ್ತಿ' ಅಣೋರಣೀಯವಾದ ಸಚ್ಚಿದಾನಂದ ಶಕ್ತಿ, ಈ ಚೇತನ—ಜಡ ಮುಂತಾದುವು ಆ ಶಕ್ತಿಯ ಪ್ರಕೃತಿ ರೂಪಗಳು ಎಂದು ಸಮನ್ವಯಿಸಿದರಂತೂ ವಿಜ್ಞಾನ—ವೇದಾಂತ ತತ್ವಗಳಿಗೆ ಸಾಮರಸ್ಯವನ್ನೇ ಸಾಧಿಸಿದಂತಾಗುವುದು. ಅದು ನಮ್ಮವರ ವಿಶ್ವರಹಸ್ಯ ಭೇದನ ದೃಷ್ಟಿಗೆ ಪೂರಕವಾಗಿದೆ.

ಇಂಥ ಶಾಶ್ವತ ಸತ್ಯವನ್ನು ಪ್ರಣಾಳಿಕಾ ರೂಪದಲ್ಲಿ ಅಲ್ಲದಿದ್ದರೂ, ಅಂತಃಪ್ರಮಾಣ ರೂಪದಲ್ಲಿ ಕಂಡುಕೊಂಡು ಅದರಿಂದ ಚೋದಿತರಾದ ಅನುಭಾವಿಗಳು ವಿಶ್ವ ಸ್ಥಿತಿಗತಿಗಳನ್ನು ಅರಿತುಕೊಂಡಿದ್ದಾರೆ. ಅದನ್ನು ವಿವರಿಸುವಾಗ ಮಾತ್ರ ವಿಜ್ಞಾನಿಗಳು ಬಳಸುವ ಕೆಲವು ಸಂಕೇತಗಳಂತೆ—ಕೆಲವು ಧಾರ್ಮಿಕ ಪರಿಭಾಷೆಯ ಸಂಕೇತಗಳನ್ನು ಬಳಸಿಕೊಂಡಿದ್ದಾರೆ. "ಇಹದಲ್ಲಿರುವುದೆಲ್ಲವು ಅಣು ರೇಣು ತೃಣ ಕಾಷ್ಠದಿಂದ ಹಿಡಿದು ಭಗವದ್‌ವಿಭೂತಿಯವರೆಗೆ ಎಲ್ಲದೂ ಛದ್ಮವೇಷದ ನಾರಾಯಣನೇ. ಅವನೇ ಇವನ್ನೆಲ್ಲವನ್ನೂ ಅವನ ಶುದ್ಧ ಸುವರ್ಣಲೋಹದಲ್ಲಿಯೇ ಸೃಷ್ಟಿಸಿ, ಮೇಲೆ ಪ್ರಕೃತಿಯೆಂಬ ಕೀಳುಲೋಹದ 'ನೀರುಕುಡಿಸಿ'ದ್ದಾನೆ. ನಮ್ಮನ್ನು ಇಲ್ಲಿಗೆ ತಂದು ಭಿನ್ನವನ್ನುಂಟುಮಾಡಿದ್ದಾನೆ. ಆದರೆ, ವಾಸ್ತವವಾಗಿ ನಾವು ಅವನಿಗೆ ಅನ್ಯರಲ್ಲ. ಈ ಭಿನ್ನಭಾವ ಕೇವಲ ನಮ್ಮ ಅಜ್ಞಾನಜನ್ಯವಾದುದು. ಅನಂತವಾದ ಆತ್ಮದ ಅಂಗವಾದ ಈ ಸಾಂತಜೀವ ಮತ್ತೆ ಅನಂತತೆಯನ್ನು ಪಡೆಯಲು, ಅನಂತತೆಯಲ್ಲಿ ಆಗಿಹೋಗಲು, ಅನಂತವೇ ಆಗಲು ಹಾರೈಸುತ್ತದೆ. ('ಅನಂತ' ಎನ್ನುವ ಮಾತಿಗೆ ಪರಾತ್ಪರ ಶಕ್ತಿಯಾದ 'ವಿಷ್ಣು' ಎಂಬ ಅರ್ಥವಿವರಿಸಿದರೆ, ಇಲ್ಲಿನ ಭಾವ ಇನ್ನೂ ಗಮ್ಯವಾಗುತ್ತದೆ.) ಆದರೆ, ಇಂಥ 'ಅಂಗ-ಲಿಂಗ' ಸಾಮರಸ್ಯವು ಒಂದು ಜನ್ಮದಲ್ಲಿ ಒಂದು ಯುಗದಲ್ಲಿ ಆಗುವ ಸುಲಭ ಕಾರ್ಯವಲ್ಲ. ಅದಕ್ಕೆ ಬಹುಕಾಲ ದೇಶಗಳ, ಬಹು ನಾಮರೂಪಗಳ ಸಂಸ್ಕಾರ ಆಗಬೇಕು. ಜೀವ ಪ್ರಕೃತಿಯೊಡನೆ ಘೋರ ಅಘೋರ ಸಂಗ್ರಾಮವನ್ನೇ ಹೂಡಬೇಕು."

'ಮಾನವರ ಬದುಕೆಲ್ಲ ಸಂಸ್ಕಾರದ ಸರಪಳಿ,
ಸಂಸಾರದ ಸಂಸ್ಕಾರವೋ, ಅತಿಮಧುರ ಅತಿಶೀಘ್ರ.

ಎಂದೊಬ್ಬ ಆಧುನಿಕ ಕವಿ ಹೇಳಿದ್ದಾನೆ. ಇದೇ ಕುಮಾರವ್ಯಾಸನ—ಅಷ್ಟೇ ಅಲ್ಲ—ಭಾರತೀಯ 'ತತ್ವದರ್ಶನ'. ಆದಿಶಕ್ತಿಯ ವಿಶ್ವರೂಪವನ್ನು ಬಣ್ಣಿಸುವಾಗ ಕುಮಾರವ್ಯಾಸ ಈ ತತ್ವದರ್ಶನವನ್ನು ಬಿಂಬಿಸಿದ್ದಾನೆ. 'ವಿಶ್ವರೂಪಿ, ವಿಹಾರಿ ಮುರವೈರಿ'ಯನ್ನು ದುರ್ಯೋಧನನ ಆಸ್ಥಾನದಲ್ಲಿ

'ಲೋಕ ಮೈಮಱೆವೆಂದು ಜಲಧಿಗಳಾಕಿ ಹಳಚುವ ಹೊತ್ತು,
ತಾನಿಹನೇಕಮೇವಾದ್ವಿತಿಯ ಪರಮೇಕೋಹನೆಂದೆಂಬ
ಏಕನಾತುಮನೆಂಬ ವೇದಾನೀಕ ಕೈವಾರಿಸಲು,
ಮೆಱೆವ ನಿರಾಕೃತಿಯ ಪರಬೊಮ್ಮ ತತ್ವವದೀತ ನೋಡೆಂದ'

ಇಂತಹ ಪರಬ್ರಹ್ಮ ತತ್ವಲೀಲೆಯಿಂದ ರಜೋಗುಣಕ್ಕೆ ತಿರುಗಿದರೆ, ಭುವನದ ಸೃಷ್ಟಿ ಸಾತ್ವಿಕ ಗುಣಕ್ಕೆ ಮೇಳವಾದರೆ, ಭುವನದ ಸ್ಥಿತಿ, ರಕ್ಷಣೆ ಮತ್ತೆ ತಾಮಸಗುಣಕ್ಕೆ ತಿರುಗಿದರೆ ಲಯ! ಆದ್ದರಿಂದ ಆತ ಗುಣಸಂಮೇಳದಲಿ ಗುಣರಹಿತ.' ಅವನಿಂದಲೇ ಬೈಗು-ಬೆಳಗು, ಪವನ—ಪಾವಕರು, ಬ್ರಹ್ಮ—ವಿಷ್ಣು—ಶಿವರು! 'ಬಸಿರೊಳಗೆ ಬ್ರಹ್ಮಾಂಡಕೋಟಿಯನಿರಿಸಿಕೊಂಡಿಹನು' 'ಈತನಂತರ್ಯಾಮಿ, ಜೀವವ್ರಾತದಲಿ ಜನಜನಿತನ್, ಈ ಜಗ ಈತನಾಜ್ಞೆಯೊಳೊಲೆವುದು' 'ಭಿನ್ನನಂತಿರೆತೋರಿ, ಭಿನ್ನಾಭಿನ್ನನೆನಿಸಿಯೆ ಮೆಱೆವನು, ತಿಳಿಯಲಭಿನ್ನನು'.

> ಹಳಚುವುವು ಹಾಹೆಗಳು ಸೂತ್ರವನಲುಗಿದರೆ,
> ತತ್ಪುಣ್ಯಪಾಪಾವಳಿಗಳಾ ಹಾಹೆಗಳಿಗುಂಟೇ,
> ಸೂತ್ರಧರನಿರಲು?
> ಕೊಲುವನ್, ಅನ್ಯರನ್ ಅನ್ಯರಿಂದವೆ ಕೊಲಿಸುವನು, ಕಮಲಾಕ್ಷ,
> ಅಲ್ಲದೆ, ಉಳಿದ ಜೀವವ್ರಾತಕೇ ಸ್ವಾತಂತ್ರ್ಯವಿಲ್ಲೆಂದ.

ಇಂತಹ ವಿಶ್ವದಲ್ಲಿ ಪ್ರತಿಯೊಂದು ಜೀವಿಯೂ ಚಲಿಸಲೇಬೇಕು, ಅಂದರೆ ಸಂಸ್ಕಾರ ಹೊಂದಲೇಬೇಕು. ಈ ಲೋಕದಲ್ಲಿ ಪುಣ್ಯಮಾಡುವುದಾಗಲಿ, ಪಾಪ ಮಾಡುವುದಾಗಲಿ, ಅವುಗಳ ಉದ್ದೇಶ ಆತ್ಮ ಸಂಸ್ಕರಣ, ಅದು ಸಾಕ್ಷಾತ್ಕಾರದ ಹಾದಿ. ಅಂತೂ ಚಲನೆ, ವಿಕಾಸ, ವಿಶ್ವಶಕ್ತಿಯ ಇಚ್ಛೆ, ಅದು ಜೀವ ಜೀವಿಗಳ ನಿಷ್ಠೆ. ಅರಿತೋ ಅರಿಯದೆಯೋ, ಆ ದಾರಿಯನ್ನು ತುಳಿಯುತ್ತವೆ ಜೀವರಾಶಿಗಳು. ಈ ಪ್ರಾಣದ 'ಅಯನ'ವೇ ಭಾರತ. ಇಲ್ಲಿ ಕಥೆ, ಕಥಾನಕ, ವರ್ಣನೆ, ರೂಪಕಗಳೆಲ್ಲ ಈ ಅಯನದ ನಿದರ್ಶನಗಳು. ಮಹಾಭಾರತದಲ್ಲಿರುವ ಮಾನವ ಜೀವನದ ಜಟಿಲ ಕಥೆಯನ್ನು ಕಲಾಮಯವಾಗಿ ಚಿತ್ರಿಸುತ್ತಲೇ, ಅದಕ್ಕೆ ಪ್ರೇರಕ, ತಾರಕವಾಗಿರುವ ಭಗವತ್ ಶಕ್ತಿಯ ಲೀಲೆಯನ್ನು, ಮಹಿಮೆಯನ್ನು ಬಾಯ್ತುಂಬ ಬಣ್ಣಿಸಬೇಕೆಂಬುದರಲ್ಲಿ ಸಮನ್ವಯವಿದೆ, ಕುಮಾರವ್ಯಾಸನ ವಿಶಿಷ್ಟವಾದ ಸಮ್ಯಕ್ ದರ್ಶನವಿದೆ. ಇಂತಹ ಸಮ್ಯಕ್ ದರ್ಶನದ ಸಕೃದ್ದರ್ಶನವನ್ನು ತನ್ನ ಮಹಾಭಾರತದ ಪ್ರಾರ್ಥನಾಪದ್ಯದಲ್ಲಿಯೇ ಮೂಡಿಸಿದ್ದಾನೆ ಕುಮಾರವ್ಯಾಸ, ಸಾಸುವೆಯಲ್ಲಿ ಸಾಗರವಡಗಿದಂತೆ.

> ಶ್ರೀವನಿತೆಯರಸನೆ,
> ವಿಮಲ ರಾಜೀವ ಪೀಠನ ಪಿತನೆ
> ಜಗಕತಿ ಪಾವನನೆ,
> ಸನಕಾದಿ ಸಜ್ಜನ ನಿಕರ ದಾತಾರ
> ರಾವಣಾಸುರ ಮಥನ
> ಶ್ರವಣ ಸುಧಾ ವಿನೂತನ ಕಥನ ಕಾರಣ
> ಕಾವುದಾನತ ಜಗವ, ಗದುಗಿನ ವೀರನಾರಯಣ ||

ಮಹಾಕಾವ್ಯವು ಮಂಗಳಾಶಂಸೆಯಿಂದ, ಇಲ್ಲವೆ ನಮಸ್ಕಾರದಿಂದ, ಇಲ್ಲವೇ ವಸ್ತುನಿರ್ದೇಶದಿಂದ ಆರಂಭವಾಗಬೇಕೆಂಬುದು ಸಂಪ್ರದಾಯ. ಗದುಗಿನ ವೀರನಾರಾಯಣನು ಶ್ರೀವನಿತೆಗೆ ಅರಸನಾಗಿರುವನೆಂದೂ, ನಿರ್ಮಲ ಕಮಲಾಸನನಾದ ಬ್ರಹ್ಮನ ಪಿತನೆಂದೂ, ಸನಕ, ಸನಂದನ ಮುಂತಾದ ಸಜ್ಜನರನ್ನು ರಕ್ಷಿಸುವವನೆಂದೂ, ರಾಕ್ಷಸನಾದ ರಾವಣನನ್ನು ಕೊಂದವನೆಂದೂ, ಯಾವಾಗಲೂ ಕರ್ಣಾಮೃತವಾದಂತಹ ಕಾವ್ಯಕ್ಕೆ ಕಾರಣ ಪುರುಷನೆಂದೂ, ಶ್ರೀಮನ್ನಾರಯಣನ ಲೀಲೆಗಳನ್ನು ಹೊಗಳಿದ್ದಾನೆ. ನಮಸ್ಕೃತರಾದ ಜಗದ ಜನತೆಯನ್ನು ಕಾವುದು ಎಂದೂ ಬೇಡಿಕೊಂಡಿದ್ದಾನೆ. ಹೀಗೆ ಕುಮಾರವ್ಯಾಸ ಸಂಪ್ರದಾಯದ ಮಂಗಳಾಶಂಸೆ, ಮತ್ತು ನಮಸ್ಕಾರ ಕರ್ಮಗಳನ್ನು ಈ ಪ್ರಾರ್ಥನೆಯಲ್ಲಿ ಸಾಧಿಸಿದ್ದಾನೆ. ಇಷ್ಟಲ್ಲದೆ, ತನ್ನ ಕಾವ್ಯದ ಅಥವಾ ಜೀವನದ (ಏಕೆಂದರೆ, ಮಹಾಕವಿಗೆ ಅವೆರಡೂ ಬೇರೆ ಬೇರೆಯಲ್ಲ!) 'ಮೂಲದರ್ಶನ'ವಾದಂಥ 'ಸೃಷ್ಟಿ ರಹಸ್ಯ'ವನ್ನೂ ಇಲ್ಲಿ ಹೊಳಲಿಡಿಸಿದ್ದಾನೆ!

ವಿಶ್ವದಲ್ಲಿ ಸೃಷ್ಟಿ, ಸ್ಥಿತಿ, ಲಯ ಕಾರ್ಯಗಳು ಮೂಲಭೂತವಾದುವುಗಳು. ಅವಕ್ಕೆಲ್ಲ ಕಾರಣಶಕ್ತಿಯೊಂದಿದೆ. ಅದು ಆದಿಶಕ್ತಿ, 'ಏಕಂ ಸತ್'. ಪುರುಷ ಪ್ರಕೃತಿ ಸಂಯೋಗವೇ ಈ ಸೃಷ್ಟಿ. ಕುಮಾರವ್ಯಾಸ ತನ್ನ ಪ್ರಾರ್ಥನೆಯ ಪ್ರಾರಂಭದಲ್ಲಿ ಶ್ರೀವನಿತೆಯ+ಅರಸನೆ ಎಂದು ಸಂಬೋಧಿಸಿರುವಲ್ಲಿ ಈ ಪುರುಷ+ಪ್ರಕೃತಿ ಸಂಯೋಗವನ್ನು ಸೂಚಿಸುವಂತೆ ಕಾಣುತ್ತದೆ. ಅಂಥ ಲಕ್ಷ್ಮೀಪತಿ ಈ ವಿಶ್ವದ ಕರ್ತೃ ಅಥವಾ ಅವನೇ ಈ ವಿಶ್ವ. 'ವಿಮಲ ರಾಜೀವ ಪೀಠನ **ಪಿತನೆ**' ಎನ್ನುವಲ್ಲಿ ನಿರ್ಮಲವಾದ ಎಂದರೆ ನಿರ್ಗುಣಾತ್ಮಕವಾದ 'ರಾಜೀವಪೀಠ'ನಾದ ಬ್ರಹ್ಮನನ್ನು ಸ್ಮರಿಸಿರುವುದರಿಂದ, ವಿಶ್ವದ ಸೃಷ್ಟಿಕಾರ್ಯವನ್ನು ಸೂಚಿಸಿ, 'ಪಿತನೆ' ಎಂಬ ಮಾತಿನಿಂದ ಅದಕ್ಕೆ 'ಜನಕ'ನಾದವನೇ ಎಂಬ ಅರ್ಥ ಸೂಚನೆ ಮಾಡಿದ್ದಾನೆಂದು ತೋರುತ್ತದೆ. ಅಂದರೆ, ಇಲ್ಲಿ ಈ ಸೃಷ್ಟಿ (ಹಾಗೆಯೇ, ಕಾವ್ಯಸೃಷ್ಟಿ)ಯ **ಸೃಷ್ಟಿ**ಕಾರ್ಯವನ್ನು ಸ್ಮರಿಸಿದ್ದಾನೆ. ಈ ಸೃಷ್ಟಿಕರ್ತ, ಮೂಲಪುರುಷ; ಜಗತ್ತಿನಲ್ಲಿಯೇ ಅತ್ಯಂತ ಪಾವನನು. ತಾನೇ ಪಾವನನಾಗಿರುವುದರ ಜೊತೆಗೆ, ಜಗತ್ತನ್ನೂ ಪಾವನಗೊಳಿಸುವ ಕಲ್ಯಾಣಕಾರಕ ಶಕ್ತಿ ಎಂದು ಹೊಗಳಿದ್ದಾನೆ. ಅಂಥ ಪಾವನ ಶಕ್ತಿ ಸನಕಾದಿ ಸಜ್ಜನ ನಿಕರ**ದಾತಾರ**' ಹೇತುವಾದುದು. ಸನಕ, ಸನಂದನ, ಸನತ್ಸುಜಾತ ಮುಂತಾದವರು ಬ್ರಹ್ಮಮಾನಸಪುತ್ರರು ಹಾಗೂ ಮಾನವ ಜನಾಂಗದ ಮೂಲಪುರುಷರು. ಅವರು ಮಾನವಕೋಟಿಯ ಸಂಕೇತ ಮಾತ್ರರು. ಅಂಥವರನ್ನು ರಕ್ಷಿಸುವವನೇ ಎಂದು ಹೊಗಳಿರುವುದರಿಂದ, 'ದಾತಾರ' ಎನ್ನುವ ಮಾತಿನಲ್ಲಿ ಸೃಷ್ಟಿಯ '**ಸ್ಥಿತಿ**' ಕಾರ್ಯವನ್ನು ಸೂಚಿಸಿದಂತೆ ಭಾಸವಾಗುತ್ತದೆ. ಹಾಗೆಯೇ, 'ರಾವಣಾಸುರ **ಮಥನ**' ಎನ್ನುವಲ್ಲಿ, ರಾವಣ, ಅಜ್ಞಾನ, ಅವಿದ್ಯೆ, ಅಧರ್ಮದ ಲೋಕಪಾಪದ ಸಂಕೇತ, ಅಂಥ ಕರಾಳವಾದ, ರಾವಣವಾದ, ಪಾಪದ ಮರ್ದನ, ಮಥನ ಕಾರ್ಯಕ್ಕೂ ಮೂಲನಾದವನೇ ಎನ್ನುವ ಮಾತಿನಲ್ಲಿ, ಸೃಷ್ಟಿಯ **ಲಯ** ಕಾರ್ಯವನ್ನು ಸೂಚಿಸಿದಂತೆನಿಸುತ್ತದೆ. ಅನಂತರ 'ಶ್ರವಣ ಸುಧಾ ವಿನೂತನ ಕಥನ **ಕಾರಣ**' ಎಂಬ ಮಾತುಗಳಲ್ಲಿ ಕಿವಿಗಳಿಗೆ ಇಂಪಾದ, ಅಮೃತಮಯವಾದ, ನಿತ್ಯ ನೂತನವಾದ ಕಾವ್ಯರಚನೆಗೆ ಅಥವಾ ಕಾವ್ಯಕ್ಕೇ ಮೂಲಪುರುಷ, ಕಾರಣಿಕ ಎಂಬ ಮಾಮೂಲಿನ ಅರ್ಥದ ಸೇತುವೆಯ ಕೆಳಗೆ ಇನ್ನೂ ವಿಶೇಷವಾದ ಭಾವದ ಹೊಳೆ ಹರಿಯುತ್ತದೆ. ಈ ವಿಶ್ವದ ಆಗುಹೋಗುಗಳ ಕಥೆ, ಕಥಾನಕ, ನಿತ್ಯನೂತನ, ಅಮೃತ—ಅಂದರೆ, ಮೃತಿ,-ಮೃತ್ಯು-ಕೊನೆಯಿಲ್ಲದ, ಶಾಶ್ವತ ಹಾಗೂ ನಿತ್ಯ ಪರಿವರ್ತನ ಶೀಲವಾದುದು. ಅದಕ್ಕೆಲ್ಲ ಕಾರಣ ಪುರುಷ ಈ 'ಗದುಗಿನ ವೀರನಾರಯಣ.' ಅಷ್ಟಲ್ಲದೆ, ಕನ್ನಡ ಕಾವ್ಯ ಪ್ರಪಂಚದ ಕಾರಣಪುರುಷನಾದ ಕುಮಾರವ್ಯಾಸನ ಕಾವ್ಯರಚನೆಗೂ ಕಾರಣಪುರುಷ, ಹಾಗೂ ಮಹಾಭಾರತದ ಕಥೆಯ 'ಪಾತ್ರಧಾರಿಯಾದ ಸೂತ್ರಧಾರ' ಶ್ರೀಕೃಷ್ಣ. (ಈ ಭಾವವನ್ನು, ಪೀಠಿಕಾ ಸಂಧಿಯ ಕೊನೆಯ ಪದ್ಯವಾದ 'ವೇದ ಪುರುಷನ ಸುತನ . . .' ಎಂಬ ಪದ್ಯದಲ್ಲಿ ಇನ್ನೂ ಚೆನ್ನಾಗಿ ಸ್ಥಾಪಿಸಿದ್ದಾನೆಂದು ಕಾಣಬಹುದು). ಆ ಸರ್ವಶಕ್ತ, ಆ ಭಕ್ತಬಾಂಧವ, ಆನತರಾದ ಜನರನ್ನು ರಕ್ಷಿಸಲಿ ಎಂದು ಬೇಡಿಕೊಂಡಿದ್ದಾನೆ. ಹೀಗೆ, ಜಗತ್ತಿನ ಮೂಲ ತತ್ವಗಳಾದ, ಸೃಷ್ಟಿ-ಸ್ಥಿತಿ-ಲಯ ಕಾರ್ಯಗಳನ್ನು ಈ ಪ್ರಾರ್ಥನೆಯಲ್ಲಿ ಸೂಚಿಸಿದ್ದಾನೆ. ಅಲ್ಲದೆ, ವಿಷ್ಣುವಿನ ಅವತಾರಗಳ ಮೂಲ ಉದ್ದೇಶವಾದ 'ದುಷ್ಟಶಿಕ್ಷಣ—ಶಿಷ್ಟರಕ್ಷಣ' ಕಾರ್ಯವನ್ನೂ ಇಲ್ಲಿ ಸೂಚಿಸಿದ್ದಾನೆ.

ಇನ್ನು ವಸ್ತು ನಿರ್ದೇಶನವೆಲ್ಲಿದೆ, ಈ ಪ್ರಾರ್ಥನೆಯಲ್ಲಿ ? ಈ ಮಹಾಭಾರತ ಕೌರವರ, ಪಾಂಡವರ ರಾಕ್ಷಸರ ಹಾಗೂ ವೈಷ್ಣವ ಭಕ್ತರ ಸೃಷ್ಟಿ—ಸ್ಥಿತಿ—ಲಯ ಕಾರ್ಯಗಳ ಕಥನ. ಇವರ ಹುಟ್ಟನ್ನೂ ಇವರನ್ನು ರಕ್ಷಿಸುವ ಕಾರ್ಯವನ್ನೂ ವಿವರಿಸಿ, ಮಹಾಭಾರತ ಯುದ್ಧದ ಅಂತ್ಯದಲ್ಲಿ, ಕೌರವರಂಥ ದುಷ್ಟಶಕ್ತಿಗಳ ಅಂತ್ಯವನ್ನೂ ಸ್ವರ್ಗಾರೋಹಣ ಪರ್ವ (ಕುಮಾರವ್ಯಾಸ ಬರೆಯಲಾಗಿಲ್ಲ, ನಿಜ)ದಲ್ಲಿ ಪಾಂಡವರ ಅಂತ್ಯವನ್ನೂ, ಭೀಷ್ಮ, ಕರ್ಣ, ವಿದುರ, ಮುಂತಾದವರ ಹುಟ್ಟು—ಬೆಳವಣಿಗೆ—ಮುಕ್ತಿಯನ್ನೂ ವಿಸ್ತಾರವಾಗಿ ಪ್ರಸ್ತಾಪಿಸಿದೆ ಈ

ಮಹಾಭಾರತ. ಹಾಗೆಯೇ, ಈ ಎಲ್ಲ ಭಾರತ ಕಥಾಚಕ್ರಕ್ಕೆ ಕೇಂದ್ರವಾಗಿರುವ ಕೃಷ್ಣನ ಲೀಲಾವಿಲಾಸದ ಲಾಸ್ಯವೇ ಈ ಭಾರತ ಕಥಾಮಂಜರಿ! ಆ ಕೃಷ್ಣನ ಮಹಿಮೆಯನ್ನು ಈ ವಿವಿಧ ಪಾತ್ರಗಳ ವ್ಯಾಜದಲ್ಲಿ ವರ್ಣಿಸಿದ್ದಾನೆ.

ಈ ಭಾರತ ವೈವಿಧ್ಯಮಯ ಪಾತ್ರಗಳ ಚಿತ್ರಶಾಲೆಯಾದಂತೆ, ಅದು ವಿವಿಧ ಚಿತ್ತ ಶಾಲೆಯೂ ಆಗಿದೆ. ವಿದುರ ಭೀಷ್ಮ ರಂತಹ ಪಾತ್ರಗಳು ಸಾತ್ವಿಕ ಗುಣದ ಪ್ರತೀಕಗಳಾಗಿಯೂ, ಪಾಂಡವರು ರಾಜಸ ಗುಣದ ಸಂಕೇತರಾಗಿಯೂ, ಕೌರವರು ತಾಮಸ ಗುಣದ ಪ್ರತಿಮೆ ಗಳಾಗಿಯೂ, ಚಿತ್ರಿತರಾಗಿರುವರೆಂದಿಟ್ಟುಕೊಂಡರಂತೂ, ಮಹಾಭಾರತದ ಅರ್ಥ ತ್ರಿವಿಕ್ರ ಮತ್ವಕ್ಕೇರುತ್ತದೆ. ಅದನ್ನೂ ಪ್ರಾರ್ಥನಾ ಪದ್ಯದಲ್ಲಿ ಸೂಚಿಸಿದ್ದಾನೆಂದು ಅನಿಸುತ್ತದೆ. ಹೀಗೆ, ರೂಪಕರಾಜ್ಯದ ಚಕ್ರವರ್ತಿ ತನ್ನ ಪ್ರಾರ್ಥನೆಯಲ್ಲಿಯೇ ಅತ್ಯದ್ಭುತವಾದ 'ರೂಪಕ' ವೊಂದನ್ನು ಕಡೆದಿದ್ದಾನೆ. ಹೀಗೆ, ಕುಮಾರವ್ಯಾಸನ ಪ್ರಾರ್ಥನಾ ಪದ್ಯ ಮೇಲು ನೋಟಕ್ಕೆ ಅಣೋರಣೀಯವಾಗಿ ಕಂಡರೂ, ಭಾವಿಸಿದರೆ, ಅದರ ಅರ್ಥ ಮಹತೋಮಹೀಯಕ್ಕೇರಿದೆ! ಅದು, ಅವನ ಸಮ್ಯಕ್ ದೃಷ್ಟಿ-ದರ್ಶನಗಳ ಹೆಬ್ಬಾಗಿಲಾಗಿದೆ. ಸಹೃದಯ ಬಾಗಿಲೊಳು ಕೈಮುಗಿದೇ ಮುಂದರಿಯಬೇಕು.

ಎಸ್. ಎಂ. ವೃಷಭೇಂದ್ರಸ್ವಾಮಿ

# 'ವೃಷಲ'—ಶಬ್ದಾರ್ಥವಿಚಾರ

## ಮೊದಲ ಮಾತುಗಳು

ಭಾಷೆಯ ಪ್ರಾಯೋಗಿಕ ರೀತಿಯನ್ನು ಮತ್ತು ಅರ್ಥವನ್ನು ಕಂಡುಕೊಳ್ಳುವಲ್ಲಿ ಆಯಾ ಶಬ್ದಗಳ ಮೂಲವೇನೆಂದೂ, ಅರ್ಥವೇನೆಂದೂ, ಆಯಾ ಶಬ್ದವು ಕಾಲಾಂತರದಲ್ಲಿ ಹೊಂದಿದ ರೂಪಾಂತರ ಮತ್ತು ಅರ್ಥಾಂತರಗಳೇನೆಂದೂ ತಿಳಿಯಬೇಕು. ಅದು ಮಾತ್ರವಲ್ಲದೆ, ಆಯಾ ಭಾಷೆಗೆ ಒಳಪಟ್ಟ ಬೇರೆ ಭಾಷೆಯ ಶಬ್ದಗಳು ಯಾವುವೆಂದೂ, ಅವುಗಳ ಅರ್ಥಗಳೇನೆಂದೂ ಗೊತ್ತು ಹಚ್ಚುವುದು ಅವಶ್ಯವಾಗಿದೆ. ಈ ಕ್ರಮವು ಪ್ರಾಚೀನದಲ್ಲಿ—ಪ್ರಾಚೀನರಲ್ಲಿ ಬಳಕೆಯಿದ್ದರೂ ಆಧುನಿಕ ಯುಗದಷ್ಟು—ಆಂಗ್ಲರಷ್ಟು ಪ್ರಬಲವಾಗಿಲ್ಲೆಂದರೆ ಅತ್ಯುಕ್ತಿಯಾಗದು. ಈ ಶಾಸ್ತ್ರೀಯ—ವೈಜ್ಞಾನಿಕ ದೃಷ್ಟಿಯಿಂದ ಆಗಾಗ ಕೆಲವೊಂದು ಶಬ್ದಗಳ ಮೂಲರೂಪ ಮತ್ತು ಅರ್ಥಗಳ ಬಗೆಗೆ ಸೂಚನೆ- ವಿವರಣೆಗಳು ವಿದ್ವಾಂಸರಿಂದ ಪ್ರಚುರಗೊಳ್ಳುತ್ತಿರುತ್ತವೆ, ಚರ್ಚೆಗಳೂ ನಡೆಯುತ್ತವೆ.

> 'ಏಕಂ ಶಾಸ್ತ್ರಮಧೀಯಾನೋ ನ ವಿದ್ಯಾತ್ ಶಾಸ್ತ್ರನಿಶ್ಚಯಂ |
> ತಸ್ಮಾದ್ಬಹುಶ್ರುತಃ ಶಾಸ್ತ್ರಂ ವಿಜಾನೀಯಾಚ್ಚಿಕಿತ್ಸಕಃ ||'

ಎಂಬೀ ಶ್ಲೋಕವು ವೈದ್ಯಕೀಯ ಗ್ರಂಥದಲ್ಲಿ ಬಂದಿದ್ದರೂ, ಇತರ ವಿಚಾರಗಳಲ್ಲಿ—ಮುಖ್ಯವಾಗಿ ಶಬ್ದಾರ್ಥವಿಚಾರದಲ್ಲಿ ಸಂಬಂಧಿಸಬರುವುದು. "ಸಂಶೋಧನೆಯ ಕಾರ್ಯ ತುಂಬ ಕ್ಲೇಶಕರವಾದದ್ದು. ಇದಕ್ಕೆ ಮುಖ್ಯವಾಗಿ ವೈಜ್ಞಾನಿಕ ಮನೋಧರ್ಮ ಬೇಕು . . . ಹತ್ತು ಅಂಶಗಳು ಇತರರ ಸಂಶೋಧನೆಯ ಫಲವಾಗಿ ಬಂದಿದ್ದರೂ ಹನ್ನೊಂದನೆಯದು ತನ್ನದೇ ಆಗಿರುವುದು ಮೇಲು" ಎಂದು ಕನ್ನಡದ ಪ್ರಾಧ್ಯಾಪಕಾಚಾರ್ಯರೂ, ಚಾರಿತ್ರಿಕ ವಿದ್ವಾಂಸರೂ ಆದ **ಶ್ರೀ ಡಿ. ಎಲ್. ನರಸಿಂಹಾಚಾರ್ಯರು** ಬರೆದಿದ್ದಾರೆ (ಸಾಹಿತ್ಯದ ಹಿನ್ನೆಲೆಯೆಂಬ ನನ್ನ ಗ್ರಂಥಕ್ಕೆ ಶ್ರೀಯುತರು ಬರೆದ ಮುನ್ನುಡಿಯಲ್ಲಿದೆ). ಆ ಮೇರೆಗೆ, ಇದೀಗಣ ಬರೆಹದಲ್ಲಿ 'ವೃಷಲ' ಶಬ್ದಾರ್ಥವಿಚಾರವಾಗಿ ಈ ಮೊದಲು ಪ್ರಕಟವಾದುವೆಂದು ತಿಳಿದಷ್ಟರ ಮಟ್ಟಿಗೆ—ಸಾಧ್ಯವಾದಷ್ಟರಮಟ್ಟಿಗೆ ಒಂದೆರಡು ಲೇಖನಗಳನ್ನು ಕಲೆತುಹಾಕಿ, ಅದರಿಂದ ಪ್ರೇರಣೆಯಾದಂತೆ ನನಗೆ ತೋಚಿದ ಬೇರೆಯೊಂದು ಆಶಯವನ್ನು ನಮೂದಿಸಲೆಳಸಿದ್ದೇನೆ. ಇಲ್ಲಿನ ಸಂಗತಿಗಳಿಂದಾಗಿ ಈ ಬಗೆಗೆ—ಸತ್ಯಾರ್ಥವನ್ನು ತಿಳಿಯಲು ಅದೇನಾದರೂ ಮುನ್ನಡೆಯಾಗಬಹುದೆಂದು ಭಾವಿಸುತ್ತೇನೆ.

## ವಿಷಯಸೂಚನೆ

'ವೃಷಲ'ನೆಂದು ವಿಶಾಖದತ್ತನ 'ಮುದ್ರಾರಾಕ್ಷಸನಾಟಕ'ದಲ್ಲಿ ಹಲವಾರು ಸಲ ಬರುವುದು. ಈ ಶಬ್ದದ ಸಾಮಾನ್ಯಾರ್ಥವು (ಶೂದ್ರ ಎಂಬ ಅರ್ಥ) ಅಲ್ಲಿ ಹೊಂದಿಕೆಯಿಲ್ಲೆಂದೂ, ಕ್ರಿಸ್ತಪೂರ್ವಕಾಲದ ಗ್ರೀಕರ ನಾಣ್ಯಗಳಲ್ಲಿರುವ 'Basileus' ಎಂಬ ರಾಜಬಿರುದು ನುಡಿಯು ಭಾರತೀಯ ಪುರಾಣಗಳಲ್ಲಿ ಹೇಳಿದ ಬೇರೆ ರಾಜವಂಶಗಳ ಹೆಸರುಗಳ ಸಾಮ್ಯ—ರೂಪಾಂತರದಂತೆ ಅಲ್ಲಿ ಬಳಕೆಗೊಂಡಿತ್ತೆಂದೂ, ಇದರ ಅರ್ಥವಾದರೋ ಮಹಾರಾಜ—ರಾಜಾಧಿರಾಜ—ರಾಜರಾಜ ಎಂದೂ ಆಶಿಸುವ ವಿದ್ವಲ್ಲೇಖಗಳು ಪ್ರಕಟವಾಗಿವೆ!

(ಶ್ರೀ ಎಂ. ಗೋವಿಂದ ಪೈ, ಅವರ ಕನ್ನಡ ಲೇಖನವೊಂದು—ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳ ಸಂಭಾವನಾಗ್ರಂಥ 'ಅಭಿವಂದನೆ'ಯಲ್ಲಿದೆ. ಡಾ. ಎಚ್. ಸಿ. ಸೇಥ್ ಅವರ ಆಂಗ್ಲ ಲೇಖನವೊಂದು—'ಇಂಡಿಯನ್ ಹಿಸ್ಟೋರಿಕಲ್ ಕ್ವಾರ್ಟರ್ಲಿ' ಎಂಬುದರ ಇಸ್ವಿ 1939 ರ ಹದಿನೈದನೆಯ ಸಂಪುಟದಲ್ಲಿದೆ. ಈ

ಆಂಗ್ಲ ಲೇಖವನ್ನು ಕೈಯಾರೆ ಬರೆಯಿಸಿ ಕಳುಹಿದ ಪುಣೆಯ ಭಾಂಡಾರ್ಕರ್ ಪ್ರಾಚ್ಯ ಸಂಶೋಧನಾಲಯದ ಕ್ಯುರೇಟರ್ ಡಾ. ಪಿ. ಕೆ. ಗೋಡೆ ಅವರ ಉಪಕಾರಸ್ಮರಣೀಯ. ಇದರ ಸಾರಾಂಶ 1939 ರ 'ಪ್ರಬುದ್ಧ ಕರ್ಣಾಟಕ'ದಲ್ಲಿದೆ).

ಆದರೆ 'ವೃಷಲ' ಶಬ್ದದ ಪ್ರಯೋಗವು ಆ ನಾಟಕಕ್ಕಿಂತ—ಗ್ರೀಕ್ ನಾಣ್ಯಗಳಿಗಿಂತ ಹಿಂದು ಮುಂದು ಬರೆದ ಗ್ರಂಥಗಳಲ್ಲಿದೆ. ಆಯಾ ಸಂದರ್ಭಗಳಿಂದ ಆ ತೆರದ ಮೂಲರೂಪ—ಅರ್ಥಗಳು ಬಗೆಯಬರುವಂತಿಲ್ಲವೆಂದು ತೋರುತ್ತದೆ. ಅಂತಹ ಕೆಲವು ಸಂದರ್ಭಗಳನ್ನು ಇಲ್ಲಿ ಸಂಕಲಿಸಿದ್ದೇನೆ. ಆ ಬಗೆಗೆ ಇನ್ನೂ ತುಸ ವಿಚಾರಣ—ವಿಮರ್ಶನ—ವಿವೇಚನಗಳಿಂದ ಪರಿಕಿಸಿದರೆ ಒಳ್ಳಿತೆಂದು ತೋರುತ್ತದೆ.

## 'ವೃಷಲ' ಶಬ್ದಸಂದರ್ಭಗಳು

೧. ಜಗತ್ತಿನ ಅತಿ ಪ್ರಾಚೀನ ಜ್ಞಾನಭಾಂಡಾಗಾರವಾದ ಋಗ್ವೇದದಲ್ಲಿ 'ಅಕ್ಷ ಸೂಕ್ತ'ವೆಂಬ ಸೂಕ್ತವಿದೆ. ಅಲ್ಲಿ 'ಜೂಜುಗಾರನ ಅಳಲು' ಚೆನ್ನಾಗಿ ಹೇಳಿದೆ. ಅದರ ಎರಡು ಸಾಲುಗಳಿವು—

'ಸ್ತ್ರಿಯಂ ದೃಷ್ಟ್ವಾಯ ಕಿತವಂ ತತಾಪಾನ್ಯೇಷಾಂ ಜಾಯಾಂ ಸುಕೃತಂ ಚ ಯೋನಿಂ| ಪೂರ್ವಾಹ್ಣೇ ಅಶ್ವಾನ್ ಯುಯುಜೇ ಹಿ ಬಭ್ರೂನ್ ಸ ಅಗ್ನೇರಂತೇ **ವೃಷಲಃ** ಪಪಾದ||' (7 ಅ. 8 ಅ. 3 ವ. 11 ಋಕ್).

ಇದರ ಭಾವಾನುವಾದವಿದು—

'ಅನ್ಯಸತಿಯರ ಮನೆಯ ಅಚ್ಚುಕಟ್ಟನು ಕಂಡು|
ಜೂದಿಗನ ಹೃದಯ ನೊಂದಶ್ರು ಸುರಿಸುವುದು||
ಆದರೂ ಉದಯದಲಿ ಕಂದುಬಣ್ಣದ ಕುದುರೆ|
ಹೂಡಿ, ರವಿ ತಾನಳಿಯೆ, ತಿರುಕನಾಗಿಹನು||'

(ಮೈಸೂರು ವಿಶ್ವವಿದ್ಯಾಲಯ ಪ್ರಚಾರಪುಸ್ತಕಮಾಲೆ, ೩೪)

ಇಲ್ಲಿಯ ಮೂಲದ 'ವೃಷಲ'ವೆಂಬ ಶಬ್ದವು ಲೌಕಿಕಸಾಹಿತ್ಯ ಗ್ರಂಥಗಳ ಮಟ್ಟಿಗೆ ಬಹಳ ಪ್ರಾಚೀನ—ಪ್ರಾಮುಖ್ಯ ಆಗಿದೆ. ಇಲ್ಲಿಯ ಸಂದರ್ಭ ನೋಡುವಾಗ ಇದು ಸದರ್ಥದಲ್ಲಿಲ್ಲವೆಂದು ಸ್ಪಷ್ಟವಾಗುತ್ತದೆ. 'ವೃಷಲ=ಕೀಳು (ವೃಷಲಕರ್ಮ)' ಎಂದು ಇದಕ್ಕೆ ಅರ್ಥವಿಸಲಾಗಿದೆ (ಋಗ್ವೇದಭಾಷ್ಯ—ಈ ವಿಷಯವನ್ನು ಮಂಗಳೂರಿನ ಶ್ರೀ ರಾಮಕೃಷ್ಣಾಶ್ರಮದ ಶ್ರೀ ಆದಿದೇವಾನಂದ ಸ್ವಾಮಿಯವರು ತಿಳಿಸಿ ಉಪಕರಿಸಿದ್ದಾರೆ).

೨. ಭಾರತದೇಶದ ಐದನೆಯ ವೇದವೆಂದು—ಇತಿಹಾಸಗ್ರಂಥವೆಂದು ಹೆಸರುಗೊಂಡ ಮಹಾಭಾರತದಲ್ಲಿ 'ವೃಷಲ' ಶಬ್ದಪ್ರಯೋಗವಿದೆ:

(೧) 'ಯಸ್ಮಿನ್ ಧರ್ಮೋ ವಿರಾಜೇತ ತಂ ರಾಜಾನಂ ಪ್ರಚಕ್ಷತೇ|
ಯಸ್ಮಿನ್ ವಿಲೀಯತೇ ಧರ್ಮಸ್ತಂ ದೇವಾ ವೃಷಲಂ ವಿದುಃ||
ವೃಷೋ ಹಿ ಭಗವಾನ್ ಧರ್ಮೋ ಯಸ್ತಸ್ಯ ಕುರುತೇ ಹ್ಯಲಂ|
**ವೃಷಲಂ** ತಂ ವಿದುರ್ದೇವಾಸ್ತಸ್ಮಾದ್ಧರ್ಮಂ ವಿವರ್ಧಯೇತ್||'

(ಶಾಂತಿಪರ್ವ, 90-15, 16. ಕಲ್ಕತ್ತಾ ಪ್ರತಿ)

(೨) 'ಯಸ್ಯ ವೇದಶ್ರುತಿರ್ನಷ್ಟಾ ಕರ್ಷಕಶ್ಚಾಪಿ ಯೋ ದ್ವಿಜಃ|
ವಿಕರ್ಮಸೇವೀ ಕೌಂತೇಯ ಸವೈ ವೃಷಲ ಉಚ್ಯತೇ|
ವೃಷೋ ಹಿ ಧರ್ಮೋ ವಿಜ್ಞೇಯಸ್ತಸ್ಯ ಯಃ ಕುರುತೇ ಲಯಂ|
**ವೃಷಲಂ** ತಂ ವಿದುರ್ದೇವಾ ನಿಕೃಷ್ಟಂ ಶ್ವಪಚಾದಪಿ||'

(ಅಶ್ವಮೇಧಪರ್ವದ ಉಪಪರ್ವವಾದ ವೈಷ್ಣವಧರ್ಮಪರ್ವ, 21—12, 13. ಕುಂಭಕೋಣ ಪ್ರತಿ)

(೩) 'ಪ್ರಾಚ್ಯಾ ದಾಸಾ(ಶಾ) ವೃಷಲಾ ದಾಕ್ಷಿಣಾತ್ಯಾಃ
ಸ್ತೇನಾ ಬಾಹ್ಲೀಕಾಃ ಸಂಕರಾ ವೈ ಸುರಾಷ್ಟ್ರಾಃ ||'
(ಕರ್ಣಪರ್ವ, 45-28. ಗೀತಾ ಪ್ರೆಸ್ಸಿನ ಪ್ರತಿ)

ಇಲ್ಲಿ 'ವೃಷಲ'ನೆಂದರೆ ಧರ್ಮಘಾತಿಯೆಂದು ತಿಳಿಯುತ್ತದೆ.

೩. ಮಾನವಧರ್ಮವನ್ನು ಸವಿಸ್ತಾರವಾಗಿ ನಿರೂಪಿಸಿದ ಸ್ಮೃತಿಗಳಲ್ಲಿ ಪ್ರಧಾನತಮವಾದ ಮನುಸ್ಮೃತಿಯಲ್ಲಿ 'ವೃಷಲ'ದ ವಿಶೇಷಾರ್ಥವಿದೆ:

(೧) 'ವೃಷೋಹಿ ಭಗವಾನ್ ಧರ್ಮಸ್ತಸ್ಯ ಯಃ ಕುರುತೇ ತ್ವಲಂ |
ವೃಷಲಂ ತಂ ವಿದುರ್ದೇವಾಸ್ತಸ್ಮಾದ್ಧರ್ಮಂ ನ ಲೋಪಯೇತ್ ||'
(ಕಲ್ಕತ್ತಾ ಪ್ರತಿ, 8-16).

(೨) 'ಶನಕೈಸ್ತು ಕ್ರಿಯಾಲೋಪಾದಿಮಾಃ ಕ್ಷತ್ರಿಯಜಾತಯಃ |
ವೃಷಲತ್ವಂ ಗತಾ ಲೋಕೇ ಬ್ರಾಹ್ಮಣಾತಿಕ್ರಮೇಣ ಚ ||'
(ಕಲ್ಕತ್ತಾ ಪ್ರತಿ, 10-43). ಇತ್ಯಾದಿ.

ಲೌಕಿಕಗ್ರಂಥರತ್ನಗಳಾದ ಮಹಾಭಾರತ ಮತ್ತು ಮನುಸ್ಮೃತಿಗಳಲ್ಲಿ ಹೇಳಿದಂತೆ, ಧರ್ಮ—ಜಾತಿಧರ್ಮ—ಆಶ್ರಮಧರ್ಮಗಳ ಘಾತಕತೆಯಿಂದ ಹಾಗೂ ಕ್ರಿಯಾಲೋಪದಿಂದ 'ವೃಷಲ—ವೃಷಲತ್ವ' ಎಂದು ತಿಳಿಯುತ್ತದೆ:

೪. ಅಷ್ಟಾದಶ ಪುರಾಣಗಳಲ್ಲಿ ಕೆಲವೆಡೆ ರಾಜವಂಶಾವಳಿ ಹೇಳಿದೆ. 'ವೃಷಲ' ಶಬ್ದವು ಅಂತಹ ಶಬ್ದಗಳಲ್ಲೊಂದಾಗಿದೆ.

(೧) 'ಮುರುಂಡಾ ವೃಷಲೈಃ ಸಾರ್ಧಂ ಭಾವ್ಯಾನ್ಯಾ ಮ್ಲೇಚ್ಛಜಾತಯಃ |'
(ವಾಯುಪುರಾಣ, 99-393)

(೨) 'ಮುರುಂಡಾ ವೃಷಲೈಃ ಸಾರ್ಧಂ ಭೋಕ್ಷ್ಯಂತೇ ಮ್ಲೇಚ್ಛಸಂಭವಾಃ' |
(ಮತ್ಸ್ಯಪುರಾಣ, 273-22)

'ಗುರುಂಡಾ ವೃಷಲೈಃ ಸಾರ್ಧಂ' ಇತ್ಯಾದಿ ಪಾಠಾಂತರವಿದೆ.
(ಮೈಸೂರು ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲೆಯ ಪ್ರತಿ)

ಇವೆರಡು ಮಹಾಪುರಾಣಗಳಲ್ಲಿ 'ವೃಷಲ'ರನ್ನು ಮ್ಲೇಚ್ಛಜಾತಿಗಳೆಂದು ಸ್ಪಷ್ಟವಾಗಿ ಹೇಳಿದೆಯಲ್ಲದೆ, 'ಇವುಗಳು ಬಿರುದುಗಳು' ಎಂದು ಅರ್ಥವಿಸಲು ಎಡೆಯಿಲ್ಲ! (ಇಂ. ಹಿ. ಕ್ವಾರ್ಟರ್ಲಿ). ಏಕೆಂದರೆ, 'ಮ್ಲೇಚ್ಛರೆಂದರೆ ಶಕ'ರೆಂದು ಶ್ರೀ ಆರ್. ಜಿ. ಭಾಂಡಾರ್ಕರರು (ದ. ಪ್ರಾ. ಚರಿತ್ರೆ. ಪುಟ. 177, ಇ) ಆಶಿಸಿದ್ದು ಸರಿಯಾದರೆ; 'ವೃಷಲ'ರೂ ಮ್ಲೇಚ್ಛರ—ಶಕರ ಒಂದು ಶಾಖೆಯವರು—ಪಂಗಡದವರು—ಜಾತಿಯವರು ಎಂದೇ ತಿಳಿಯಬೇಕಾಗುತ್ತದೆ. ಹಾಗಾಗಿ 'ವೃಷಲ'ವು ಬಿರುದು ಆಗದು!

೫. ಕೌಟಿಲ್ಯನ ಅರ್ಥಶಾಸ್ತ್ರವು ಪ್ರಾಚೀನ ರಾಜಕೀಯ ಹಾಗೂ ಸಾಮಾಜಿಕ ರೀತಿನೀತಿಗಳನ್ನು ತಿಳಿಯಲು ತುಂಬಾ ಸಹಾಯಕಾರಿಯೂ ಪ್ರಾಮಾಣಿಕವೂ ಆಗಿದೆ. ಅದರಲ್ಲಿ ದಂಡನೀಯ ವಿಚಾರದಲ್ಲಿ ಒಂದೆಡೆ ಹೇಳಿದೆ—

"ಕುಲನೀವೀಗ್ರಾಹಕಸ್ಯ ಅಪನಯನೇ, ವಿಧವಾಂ ಛಂದವಾಸಿನೀಂ ಪ್ರಸಹ್ಯ ಅತಿಚರತಃ, ಚಂಡಾಲಸ್ಯ ಆರ್ಯಾಂ ಸ್ಪೃಶತಃ, ಪ್ರತ್ಯಾಸನ್ನಮಾಪದಿ ಅನಭಿಧಾವತಃ, ನಿಷ್ಕಾರಣಮಭಿಧಾವನಂ ಕುರ್ವತಃ, ಶಾಕ್ಯಾಜೀವಿಕಾದೀನ್ **ವೃಷಲ** ಪ್ರವ್ರಜಿತಾನ್ ದೇವಪಿತೃಕಾರ್ಯೇಷು ಭೋಜಯತಃ ಶತ್ಯೋ ದಂಡಃ" (ಶ್ಯಾಮಶಾಸ್ತ್ರೀ ಸಂಗ್ರಹೀತಪ್ರತಿ, 74—5 ಪ್ರ. 20 ಅ. 3 ಅಧಿ.)

ಇದರ ಮರಾಠೀ ಭಾಷಾಂತರವು ಶ್ರೀ ಕರಂದೀಕರರಿಂದ ಬರೆದಿದ್ದು, 'ವೃಷಲ'ನೆಂದರೆ 'ಶೂದ್ರ'ನೆಂದು ಮಾತ್ರ ಅರ್ಥವಿಸಲಾಗಿದೆ.

ಇದರ ಆಂಗ್ಲಾನುವಾದವು ಡಾ. ಶ್ಯಾಮಶಾಸ್ತ್ರಿಗಳಿಂದ ಬರೆಯಲಾಗಿ, 'ವೃಷಲ' ನೆಂದರೆ 'ಶೂದ್ರ'ನೆಂದೇ ಹೇಳಲಾಗಿದೆ (ಈ ಸಂಸ್ಕೃತ, ಮರಾಠಿ, ಆಂಗ್ಲ ಕೃತಿವಿಚಾರಗಳನ್ನು ತಿಳಿಸಿ ಡಾ. ಪಿ. ಕೆ. ಗೋಡೆ ಅವರು ಉಪಕರಿಸಿದ್ದಾರೆ). ಇಲ್ಲಿಯ 'ವೃಷಲ' ಶಬ್ದದ ಹಿಂದು ಮುಂದಿನ ಶಬ್ದಗಳ—ಅರ್ಥಗಳ ಪರ್ಯಾಲೋಚನೆಯಿಂದ 'ವೃಷಲ'ನೆಂದರೆ ಕೇವಲ ಶೂದ್ರನೆನ್ನುವುದಕ್ಕಿಂತ ಮಹಾಭಾರತ ಮತ್ತು ಮನುಸ್ಮೃತಿಗಳಂತೆ ಧರ್ಮಘಾತಕ ಹಾಗೂ ಕ್ರಿಯಾಲೋಪಕಾರಕನೆನ್ನುವುದು ಸೂಕ್ತವೆಂದು ತೋರುತ್ತದೆ. ಮತ್ತೆಯೂ ಭಾರತೀಯ ಸಂಸ್ಕೃತಿಗಳಲ್ಲಿ ಆ ಕಾಲಕ್ಕೆ—ನಾಟಕ ನಾಣ್ಯಗಳ ಮೊದಲೇನೇ 'ವೃಷಲ' ಶಬ್ದದ ಪ್ರಯೋಗವಿದ್ದು, ನೀಚಾರ್ಥವನ್ನು ಸೂಚಿಸುತ್ತದೆಯೆನ್ನಬಹುದು! ಭಾರತೀಯ ಶಬ್ದಗಳ ಪರಿಶೀಲನೆಗೆ ಭಾರತೀಯ ಕೃತಿಗಳೇ ಮೂಲಾಧಾರಗಳು.

## ಇತರ ಶಬ್ದಗಳೂ ರೂಪಾಂತರಗಳೂ

ಋಗ್ವೇದ ಮತ್ತು ಇತರ ಕೃತಿಗಳಲ್ಲಿ ಕಾಣುವ ಕೆಲವು ಬೇರೆ ನುಡಿಗಳ ರೂಪಾಂತರಗಳನ್ನು ಪರಿಶೀಲಿಸುವುದು ಅಪ್ರಕೃತವಾಗಲಾರದು. ಏಕೆಂದರೆ, ಸಂಸ್ಕೃತ ಹಾಗೂ ವಿದೇಶೀಯ ಶಬ್ದಗಳು ಹೇಗೆ ರೂಪಾಂತರಗೊಂಡಿವೆಯೆಂದೂ, ಯಾವ ಅರ್ಥದಲ್ಲಿವೆಯೆಂದೂ ತಿಳಿಯುವುದು ಪ್ರಕೃತೋಪಯುಕ್ತವಾದುದು.

೧. ಋಗ್ವೇದದ ಲಘುಪರಿಚಯಾತ್ಮಕವನ್ನು ಶ್ರೀ ಎಂ. ಎ. ಕೃಷ್ಣಸ್ವಾಮಿ ಅವರು ಬರೆದಿದ್ದಾರೆ (ಮೈ.ವಿ.ಪ್ರ.ಪು. ೩೪). ಅದರಲ್ಲಿವೆ—

(೧) "ವೃತ್ರಘ್ನನಾದ ವೇದದ ಇಂದ್ರನು ಪುರಾತನು ಪಾರಸೀಕರ 'ವೆರೆತ್ರಘ್ನ'ನಾಗಿದ್ದು ವಿಜಯಾಭಿಮಾನದೇವತೆಯಾಗಿರುವುದು ಗಮನದಲ್ಲಿಡಬೇಕಾದ ಅಂಶ" (ಪುಟ. 23).

(೨) "ವರುಣನಿಗೆ ಸರಿಸಮನಾಗಿ ಪ್ರಾಚೀನ ಗ್ರೀಕರ 'ಔರನಸ್' ಅಥವಾ 'ಯೂರೆನಸ್' ಎಂಬ ಜಲದೇವತೆಯನ್ನು ಕಾಣಬಹುದು" (ಪುಟ 32).

(೩) "ಅಲ್ಲದೆ ವರುಣನಿಗೇ ವಿಶಿಷ್ಟವಾದ ಒಂದು ಪದದ ಪ್ರಯೋಗವಿದೆ, ಆ ಪದ 'ಅಸುರ'. — — — ಅವೆಸ್ತದಲ್ಲಿನ 'ಅಹುರ ಮಜ್ದ'ನು ವರುಣದೇವನನ್ನು ಬಹುಮಟ್ಟಿಗೆ ಹೋಲುತ್ತಾನೆ" (ಪುಟ 32).

(೪) "ವರುಣನೊಡನೆ ಸ್ತುತನಾದ ದೇವತೆಯೆಂದರೆ 'ಮಿತ್ರ.' — — —ಅವೆಸ್ತದಲ್ಲಿಯೂ 'ಮಿಥ್ರ' ಎಂಬ ಶ್ರದ್ಧಾಭಿಮಾನಿ ದೇವನನ್ನು ಕಾಣುತ್ತೇವೆ" (ಪುಟ 33).

(೫) "ವೇದದಲ್ಲಿ 'ಸೋಮ'ದಂತೆಯೇ ಅವೆಸ್ತದಲ್ಲಿಯೂ 'ಹಓಮ' ಎಂಬ ಲತೆಯ ರಸ ದೇವತ್ವಕ್ಕೆ ಏರಿರುವಂತೆ ಕಾಣುತ್ತದೆ" (ಪುಟ 40).

(೬) "ಯಮ-ಯಮಿ ಸಂವಾದರೂಪವಾದ ಮಂತ್ರವೊಂದು ಋಗ್ವೇದದಲ್ಲಿದೆ. — — ಅವೆಸ್ತದಲ್ಲಿಯೂ 'ಯಿಯಿ' ಮತ್ತು 'ಯಿಮೇ' ಎಂಬ ಅಣ್ಣ ತಂಗಿಯರಿಬ್ಬರ ಹೆಸರುಗಳು ಇರುತ್ತವೆ" (ಪುಟ 41).

ಇಲ್ಲಿನ ನುಡಿಗಳು ರೂಪಾಂತರಿತವಾದ—ಏಕರೂಪವಾದ ಬಗೆಯನ್ನು ನಾವು ಲಕ್ಷ್ಯದಲ್ಲಿ ಇರಿಸಬೇಕು. ಇನ್ನು ಕೆಲವು ಚಾರಿತ್ರಿಕ ಶಬ್ದಗಳನ್ನು ನೋಡುವ:

೨. 'ದಕ್ಷಿಣದ ಪ್ರಾಚೀನ ಚರಿತ್ರೆ'ಯನ್ನು ಶ್ರೀ ಆರ್. ಜಿ. ಭಾಂಡಾರ್ಕರ್ ಅವರು ಬರೆದಿದ್ದಾರೆ, ಹಲವು ವಿಷಯಾಂಶಗಳನ್ನು ಮಂಡಿಸಿದ್ದಾರೆ. ಅಲ್ಲಿನ ಒಂದು ಮಾತು:—"ಪ್ರಾಚೀನ ರಾಜರಲ್ಲಿ ಹೆಸರಾಂತ 'ವಿಲಿವಾಯಕೂರ'ನೆಂಬುದು ಗ್ರೀಕರಲ್ಲಿ 'Baleocuros' ಎಂದು ರೂಪಾಂತರಿತವಾಗಿದೆ"ಯೆಂದು. (ಪುಟ 61)

ಇಲ್ಲಿ ಈ ಗ್ರೀಕ್ ರೂಪಾಂತರ ಪರಿಶೀಲಿಸಬೇಕಾದುದು. ಇಲ್ಲಿನ ಮೂಲದ 'ವಿ' ಕಾರವು ಗ್ರೀಕರಲ್ಲಿ 'ಬ'ಕಾರವಾಗಿದೆ. ಅಂತೆ, ಪ್ರಸ್ತುತ 'ವೃಷಲ'ದ ರೂಪಾಂತರ—ಮೂಲ ರೂಪವೆನ್ನುವ 'Basileus' ಎಂಬುದರ ಪ್ರಥಮಾಕ್ಷರ 'ಬ'ಕಾರವಾಗಿದೆಯಾದರೂ ಒಂದೆಡೆಯ 'ವ್—ಋ' ಕಾರದಂತೆ ಇನ್ನೊಂದೆಡೆ 'ಬ್—ಋ (ರ್)' ಕಾರವಿಲ್ಲದುದನ್ನು ಗಮನಿಸಬೇಕು. ಗ್ರೀಕ್ ನಾಣ್ಯಗಳಿಗಿಂತಲೂ ಪ್ರಾಚೀನತಮಗಳಾದ—ಈ ಮೊದಲು ಉಲ್ಲೇಖಿಸಿದ ಪ್ರಯೋಗ ಗಳನ್ನು ಕಂಡರೆ, 'ವೃಷಲ'ದ 'ಋ ರೇಫ'ವು ನಿರರ್ಥಕವೆನ್ನಲಾಗುವುದಿಲ್ಲ.

'ವಿಲಿವಾಯಕೂರ'ವು 'Baleocuros' ಎಂದು ರೂಪಾಂತರವಾಗುವಲ್ಲಿ, 'Basileus' ಶಬ್ದದ ರೂಪಾಂತರದಲ್ಲೂ 'ವಿ'ಕಾರ ಇರಬೇಕು. ಹಾಗಾದರೆ, 'Basileus' ಎಂಬುದು ಸಂಸ್ಕೃತೀಕರಿಸಲ್ಪಡುವಾಗ—ಅಥವಾ ಅದೊಂದು ಸಂಸ್ಕೃತ ಶಬ್ದವೇ ಗ್ರೀಕರಲ್ಲಿ ಹಾಗೆ ರೂಪಾಂತರವಾಗುವಾಗ—ಆ ಮೂಲ ಸಂಸ್ಕೃತಶಬ್ದವು 'ವಿಶಲ್ಯ' ಅಥವಾ 'ವಿಚಲ'ವೆಂದಿರ ಬಹುದು. ಏಕೆಂದರೆ, 'ಸಂದ್ರಕೊಟ್ಟಸ್' ಎಂದು ಯವನರು ಹೇಳುವುದು ಮೌರ್ಯವಂಶ ಸ್ಥಾಪಕನಾದ ಚಂದ್ರಗುಪ್ತನನ್ನು ಎಂದು ಬಲ್ಲವರು ಹೇಳುತ್ತಾರೆ (ಶ್ರೀ ನಾ. ಕಸ್ತೂರಿ—ಅಶೋಕ. ಪುಟ 17 ಮತ್ತು ಶ್ರೀ ಡಿ. ಎಸ್. ತ್ರಿವೇದಿ—ಪುಣೆಯ ಭಾಂಡಾರ್‌ಕರ್ ಸಂಸ್ಥೆಯ ರಜತೋತ್ಸವ ಸಂಚಿಕೆ ನೋಡಿರಿ). 'ಚಂದ್ರಗುಪ್ತ'ನೆಂಬುದರ ಮೊದಲ 'ಚ'ಕಾರವು ಯವನರಲ್ಲಿ 'ಸ'ಕಾರವಾಗಿರುವುದನ್ನು ಕಾಣುವಾಗ, 'Basileus' ಎಂಬುದು 'ವಿಚಲ (ಲಿ)'ಯೆಂದಾಗ ಬಹುದು. ಗ್ರೀಕ್ ಸಾಹಿತ್ಯಾದಿಗಳಿಂದ ಈ ಬಗ್ಗೆ ಮೂಲ—ಸಾಮ್ಯ—ಅರ್ಥ ತಿಳಿಯಬೇಕು. ಪ್ರಕೃತ 'ವೃಷಲ' ಹಾಗೂ 'Basileus' ಶಬ್ದಗಳು ಸಾಮ್ಯರೂಪ—ಅರ್ಥೈಕದಾಯಿಗಳೆನ್ನಲು ಬರುವುದಿಲ್ಲ!

## ಶಬ್ದಕೋಶಗಳು

ಶಬ್ದಕೋಶ (ನಿಘಂಟು)ಗಳಲ್ಲಿ ವೃಷಲ ಶಬ್ದಕ್ಕೆ ಅರ್ಥವಿಸಿದುದು ಪ್ರಕೃತಾನುಗುಣ ವಾಗಿದೆ; ಜನತೆಯಲ್ಲಿ ಪ್ರಚುರವಾದ ಹಾಗೂ ಕೃತಿಗಳಲ್ಲಿ ಪ್ರಯೋಗವಾದ ಅರ್ಥವನ್ನೇ ಕೋಶಗಳಲ್ಲಿ ಬರೆಯಲಾಗಿದ್ದುದೆಂದು ಪರಿಶೀಲನಾರ್ಹವಾಗಿದೆ—

(೧) ವಾಚಸ್ಪತ್ಯಕೋಶದಲ್ಲಿ ವೃಷಲ ಶಬ್ದದ ನಾನಾರ್ಥಗಳನ್ನು ಹೇಳುತ್ತಾ 'ಚಂದ್ರ ಗುಪ್ತೇ', 'ಅಧಾರ್ಮಿಕೇ' ಎಂದೆರಡು ತೆರ ಹೇಳಿದ್ದು ಇಲ್ಲಿ ಹೊಂದಿಕೆಯಾಗುತ್ತದೆ (ಈ ಸಂಗತಿ ಉಡುಪಿಯ ಶ್ರೀ ಅದಮಾರು ಸ್ವಾಮಿಗಳು ತಿಳಿಸಿ ಉಪಕರಿಸಿದ್ದಾರೆ).

(೨) ಶಬ್ದಕಲ್ಪದ್ರುಮದಲ್ಲಿ ವೃಷಲನೆಂದರೆ 'ಚಂದ್ರಗುಪ್ತರಾಜ', 'ಅಧಾರ್ಮಿಕ'ವೆಂದು ಹೇಳಲಾಗಿದೆ.

(೩) ಸಂಸ್ಕೃತ—ಆಂಗ್ಲ ಕೋಶಗಳಲ್ಲಿ ಮೋನಿಯರ್ ವಿಲಿಯಂಸ್ ಬರೆದುದು ಲೋಕ ಪ್ರಸಿದ್ಧವಾಗಿದೆ. ಅದರಲ್ಲಿ ಹೇಳಿದ ಅರ್ಥವಿದು (ಓಕ್ಸ್‌ಫರ್ಡ್ ಪ್ರತಿ, ಪುಟ 1013)—

(i) A little or contemptible man, A low, mean or wicked fellow, (in latter language 'a Sudra').

(ii) Name of King Chandragupta (who was a sudra by birth).

ಈ ಕೋಶದ ಸಂಗತಿಗಳನ್ನು ಡಾ. ಪಿ. ಕೆ. ಗೋಡೆ ತಿಳಿಸಿದ್ದರು. ಇವೆಲ್ಲಾ ಕಡೆ 'ವೃಷಲ'ನೆಂಬುದರ ಅರ್ಥ ಬರೆಯುವಲ್ಲಿ ಲೌಕಿಕ ಗ್ರಂಥ ಪ್ರಸಿದ್ಧಿಯಿಂದಾಗಿ ಚಂದ್ರಗುಪ್ತ ರಾಜನ ಹೆಸರು ಕೂಡಿಬಂದಿದೆ. ವೃಷಲವು ಶೀತಲ, ಬಹುಳ ಇತ್ಯಾದಿಗಳಂತಿದ್ದರೆ ಧರ್ಮಶೀಲನೆನ್ನು ವಂತಿದ್ದರೂ, ಅಧಾರ್ಮಿಕನೆಂದೇ ಪ್ರಚುರವದೆ! ಆ ನಿರುಕ್ತ ಅರ್ಥ ಇದಕ್ಕಿಲ್ಲ!

## ಮೌರ್ಯ ಕುಲದ ವಿಚಾರಗಳು

ಮೌರ್ಯಕುಲದ ವಿಚಾರಗಳು ಪುರಾಣಗಳು ಮತ್ತು ಚಾರಿತ್ರಿಕ ಪುಸ್ತಕಗಳಲ್ಲಿ ಬಂದಿದೆ. ಅವುಗಳನ್ನು ನಿರೀಕ್ಷಿಸದೆ—ತೀರಾ ಬಿಟ್ಟು ಸಾಗುವುದು ಉಚಿತವಲ್ಲ. ಏಕೆಂದರೆ, ಚಾರಿತ್ರಿಕರು ಅಲ್ಲಲ್ಲಿನ ವಿಷಯಗಳನ್ನು ಆಯ್ದು, ಸಾಮರಸ್ಯವನ್ನು ಕಾಣುವರು. ಅಂತಹ ಕೆಲವು ಸಂಗತಿಗಳು ಎತ್ತಿ ಬರೆಯಲಾಗಿವೆ.

೧. ವಿಷ್ಣುಪುರಾಣವು ಹದಿನೆಂಟು ಪುರಾಣಗಳಲ್ಲಿ ಒಂದಾಗಿದೆ, ಅದು ಮಾತ್ರವಲ್ಲ, ಚಾರಿತ್ರಿಕರು ಎತ್ತಿ ಬರೆಯುವಂತಹದಾಗಿದೆ. ಅದರಲ್ಲಿಯ ಸಾರಾಂಶವಿದು—"ಮಹಾನಂದಿಗೆ ಶೂದ್ರಸ್ತ್ರೀಯಲ್ಲಿ ಹುಟ್ಟಿದ್ದು ಮಹಾಪದ್ಮ ನಾಮಕ ನಂದನು. — — —ನಂದನಿಗೆ ಮುರಾ ಎಂಬ ಶೂದ್ರಸ್ತ್ರೀಯಲ್ಲಿ ಚಂದ್ರಗುಪ್ತನು ಹುಟ್ಟಿದುದರಿಂದ ಮೌರ್ಯನೆಂದು ಹೆಸರುಂಟಾಗುತ್ತದೆ" (ಶ್ರೀ ಸಕ್ರೆಪಟ್ಟಣದ ಶ್ರೀನಿವಾಸೈಯ್ಯಂಗಾರ್ ಬರೆದ ಪುಸ್ತಕ, ಪುಟ 264).

೨. ವ್ಯಾಸ ಭಾಗವತದಲ್ಲೂ ಕಲಿಯುಗೀಯ—ಭವಿಷ್ಯದ್ರಾಜವಂಶಕಥನ ವಿಚಾರ ಇದೆ:

> 'ಮಹಾನಂದಿಸುತೋ ರಾಜನ್ ಶೂದ್ರೀಗರ್ಭೋದ್ಭವೋ ಬಲೀ ||
> ಮಹಾಪದ್ಮಪತಿಃ ಕಶ್ಚಿನ್ನಂದಃ ಕ್ಷತ್ರವಿನಾಶಕೃತ್ |
> — —ನವನಂದಾನ್ ದ್ವಿಜಃ ಕಶ್ಚಿತ್ ಪ್ರಪನ್ನಾನುದ್ಧರಿಷ್ಯತಿ |
> ತೇಷಾಮಭಾವೇ ಜಗತೀಂ ಮೌರ್ಯಾ ಭೋಕ್ಷ್ಯಂತಿ ವೈ ಕಲೌ ||
> (ಗೋರಖಪುರದ ಗೀತಾ ಪ್ರೆಸ್ಸಿನ ಪ್ರತಿ,—೧೨ ಸ್ಕಂಧ. ೧ ಅ. ೮—೧೨. ಶ್ಲೋ)

ಇವೆರಡು ಮಹಾಪುರಾಣಗಳಲ್ಲಿ ಇಮ್ಮಡಿಯಾಗಿ ಶೂದ್ರಸ್ತ್ರೀಯಲ್ಲಿ ರಾಜ ಸಂತತಿಯೂ, ಕ್ಷತ್ರ ವಿನಾಶವೂ ಹೇಳಿದೆ. ಒಂದೆಡೆಯ ವಿವರಣವನ್ನು ಇನ್ನೊಂದೆಡೆಗೆ ಜತೆಗೂಡಿಸಬೇಕು. ಅಂತೂ ಇಲ್ಲಿ ಜಾತಿ ರೀತಿಗಳ ವಿಷಯ ಇಳಿಮೊಗವು ಸಾಗಿದಂತೆ ಹೇಳಿದೆ. ಮಹಾಭಾರತ ಮತ್ತು ಮನುಸ್ಮೃತಿಗಳಲ್ಲಿ ಹೇಳಿದ 'ವೃಷಲ—ತ್ವ'ಕ್ಕೆ ಇಲ್ಲಿ 'ಒಪ್ಪ'ಗೂಡುತ್ತದೆ.

೩. ಕ್ರಿಸ್ತಪೂರ್ವದ ರಾಜರಲ್ಲಿ ಸುಪ್ರಸಿದ್ಧನಾದ ಅಶೋಕನು ಈ ಮೌರ್ಯವಂಶದಲ್ಲಿ ಹುಟ್ಟಿದವನು. ಇವನ ಶಿಲಾಲೇಖಾದಿಗಳು ದೊರಕಿ ಹಲವು ಹಿಂದಣ ಸಂಗತಿಗಳು ತಿಳಿಯ ಬಂದವು. ಅಂತಹ ವಿಚಾರಾತ್ಮಕ ಪುಸ್ತಕಗಳಲ್ಲಿ ಶ್ರೀ ನಾ. ಕಸ್ತೂರಿ ಅವರು ಬರೆದ 'ಅಶೋಕ'ವು ಒಂದಾಗಿದೆ (ವೈ. ವಿ. ಗ್ರಂಥಮಾಲೆ). ಅದರಿಂದ ಈ ಕೆಲವು ವಿಚಾರಗಳು ಎತ್ತಿಕೊಂಡಿವೆ: "ಧನಮದದಿಂದ ಪ್ರಜಾವಿಶ್ವಾಸವನ್ನು ಕಳೆದುಕೊಂಡಿದ್ದ ನಂದರನ್ನು ಸುಲಭದಲ್ಲಿ ಸೋಲಿಸಿಬಿಡಬಹುದೆಂದು ಅವರ ಸಂಬಂಧಿಕನಾದ 'ಸಂದ್ರಕೊಟ್ಟಸ್' (ಚಂದ್ರಗುಪ್ತ) ಎಂಬ ಯುವಕನೊಬ್ಬನು ಅಲೆಕ್ಸಾಂಡರನ ಕಿವಿಯಲ್ಲಿ ಉಸುರಿದನಂತೆ. — — —ನಂದರಾಜರು ಅಧಾರ್ಮಿಕರು, ನೀಚಕುಲದವರು ಎಂದು ಮುಂತಾಗಿ ಪುರಾಣಗಳು ದೂಷಿಸುತ್ತವೆ. ಈ ಅಪವಾದಗಳಿಗೆ ಅಲ್ಪ ಸ್ವಲ್ಪವಾದರೂ ಆಧಾರವಿದ್ದಿರಬೇಕು" (ಪು 14). ಇದಕ್ಕೆ ಆಧಾರಗಳಾಗಿ ಈ ಮೇಲೆ ಹೇಳಿದ ಪುರಾಣಗಳು ಮತ್ತು 'ಕೇಂಬ್ರಿಜ್ ಹಿಸ್ಟರಿ ಒಫ್ ಇಂಡಿಯಾ' ಇತ್ಯಾದಿಗಳಿವೆ.

೪. "ಜಯಸ್ವಾಲ್ ಮುಂತಾದವರು ಮೇಲಿನ (ಮುದ್ರಾರಾಕ್ಷಸ ನಾಟಕದ) ಭರತವಾಕ್ಯದಲ್ಲಿ ಬರುವ 'ಅಧುನಾ', 'ಚಂದ್ರಗುಪ್ತ' ಎಂಬ ಮಾತುಗಳ ಆಧಾರದ ಮೇಲೆ ಇದು (ನಾಟಕವು) ಇಮ್ಮಡಿ ಚಂದ್ರಗುಪ್ತನ ಕಾಲದಲ್ಲಿ ರಚಿತವಾಗಿರಬಹುದೆಂದು ಅಭಿಪ್ರಾಯಪಡುತ್ತಾರೆ. ಇದು ನಿರ್ವಿವಾದವಾಗಿಲ್ಲದಿದ್ದರೂ ಸಂಭವವೆಂಬುದು ಬಹುಜನ ವಿದ್ವಾಂಸರ ಮತವಾಗಿದೆ" (ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು ಬರೆದ 'ಸಂಸ್ಕೃತ ನಾಟಕ', ಪುಟ 150). ಈ ನಾಟಕದ 'ಮೌರ್ಯಪುತ್ರೀ' (2-6) 'ನವವಯಸಿ' (3-3), ಮೌರ್ಯೇ ನವೇ ರಾಜನಿ' (4-15) ಎಂಬಿವುಗಳಿಂದ ಚಂದ್ರಗುಪ್ತನ ಪ್ರಾಯದ ಹೊಸತಿನಲ್ಲಿ ಈ ತೆರದ

ಹೊಯಿಕೈ ನಡೆದಿರಬೇಕು. ಮೌರ್ಯನೆಂದರೇನೇ ಮುರಾಪುತ್ರನೆಂದು ಸ್ಪಷ್ಟವಾಗುತ್ತದೆ. ಚಂದ್ರಗುಪ್ತನು ಮೌರ್ಯಪುತ್ರನು—ವೃಷಲನೆಂದು ಇಲ್ಲಿ ಹೇಳಿದೆ. ಈ ಮೇರೆಗೆ ಚಂದ್ರಗುಪ್ತನು 'ವೃಷಲ'ನೆಂದರೆ ಮಹಾರಾಜನೆಂದೇ ಶಬ್ದಾರ್ಥವೆನ್ನಲು ಅವಶ್ಯವೆನ್ನಿಸುವುದಿಲ್ಲ!

## ಮುದ್ರಾರಾಕ್ಷಸನಾಟಕದ ವಿಚಾರಗಳು

ಇನ್ನು ಕೊನೆಯದಾಗಿ ವಿಶಾಖದತ್ತನ ಕೃತಿಯ ಹೊರ-ಒಳಗಿನ ಕೆಲವು ವಿಚಾರಗಳನ್ನು ಬರೆದು ಈ ಲೇಖನವನ್ನು ಪೂರಯಿಸುತ್ತೇನೆ.

೧. ಈ ನಾಟಕದಲ್ಲಿ ಮೌರ್ಯ-ವೃಷಲನ ಕತೆ ಬಂದಿದೆ. "ಚಂದ್ರಗುಪ್ತನ ಕಥೆಯು ವ್ಯಾಸಭಾಗವತ, ವಿಷ್ಣುಪುರಾಣ ಮುಂತಾದೆಡೆಗಳಲ್ಲಿ ಸಂಕ್ಷೇಪವಾಗಿ ದೊರೆಯುತ್ತದೆ. ಆದರೆ, ಮುದ್ರಾರಾಕ್ಷಸಕ್ಕೆ ಮೂಲವು ಧನಿಕನು ಹೇಳುವಂತೆ 'ಬೃಹತ್ಕಥೆ'ಯಾಗಿರಬಹುದು. ಇದಲ್ಲದೆ ಮತ್ತಾವುದಾದರೂ ಚರಿತ್ರಗ್ರಂಥ ಇತ್ತೆಂದು ಹೇಳಲು ಆಧಾರವಿಲ್ಲ. ಕಥೆಯ ತಿರುಳು ಚರಿತ್ರೆಯಲ್ಲಿ ನಡೆದದ್ದು, ಇದನ್ನು ಕವಿಯು ಕಲ್ಪನೆಯಿಂದ ಪುಷ್ಟಿಗೊಳಿಸಿಕೊಂಡಿದ್ದಾನೆಂಬುದರಲ್ಲಿ ಸಂದೇಹವಿಲ್ಲ" (ಶ್ರೀ. ಎ. ಆರ್. ಕೃಷ್ಣಶಾಸ್ತ್ರಿಗಳು—ಸಂಸ್ಕೃತನಾಟಕ ಪುಟ 155). ಈ ಕೃತಿಯ ಪೂರ್ವವೃತ್ತವನ್ನು ಕುರಿತು ಉದ್ದ ಕತೆಗಳಿವೆ (ಸಂಸ್ಕೃತ ಕವಿಚರಿತ್ರೆ, ಮುದ್ರಾರಾಕ್ಷಸನಾಟಕದ ಕಾಶೀಪ್ರತಿ, ಇ). ಈ ಕತೆಗಳ ಎಲ್ಲಾ ಅಂಶಗಳೂ ನಂಬಲು ಕಷ್ಟವಾದರೂ, ಈ ನಾಟಕಕ್ಕೆ ಪೂರ್ವಭಾಗವೇನೆಂಬಲ್ಲಿ ಆ ಕೆಲವು ಅವಶ್ಯಕವಾಗಿವೆ. ಬೃಹತ್ಕಥೆಯ ಆಧಾರದಿಂದ ಬರೆದ ಕೃತಿಗಳಿಂದಲೂ ಭಾಗವತಾದಿಗಳಿಂದಲೂ, ಚಾರಿತ್ರಿಕ ಗ್ರಂಥಗಳಿಂದಲೂ ಈ ಬಗೆಗೆ ಒಂದು ಇಡಿ ನೋಟವು ಅಪೇಕ್ಷಣೀಯವಹದೆ. ಪರಂತು, ಅಪ್ರಕೃತವೆಂದು ಮುಂದೆ ಸಾಗಬೇಕಾಗಿದೆ.

೨. ಈ ನಾಟಕದ 'ವೃಷಲ' ಶಬ್ದದ ಅರ್ಥಕ್ಕೆ ಸಾಗುವಲ್ಲಿ ಈ ಕೆಲವು ವಿಷಯಗಳು ನೆನಪಿಡತಕ್ಕವು ಇವೆ—ಇಲ್ಲಿ ಚಂದ್ರಗುಪ್ತನನ್ನು 'ವೃಷಲ'ನೆಂದು ಹಲವು ಬಾರಿಗೂ ಹೇಳುವುದು ಚಾಣಕ್ಯನೊಬ್ಬನೇ! ಒಂದೊಮ್ಮೆ 'ಮೌರ್ಯ-ವೃಷಲ'ನನ್ನು ರಾಜನಾಗಿ ಮಾಡಿದೆನೆಂದು ಹೇಳುತ್ತಾನೆ. ಕೆಲವೆಡೆ ಚಾಣಕ್ಯನೇ ಚಂದ್ರಗುಪ್ತನೆಂದು, ಮೌರ್ಯೇಂದುವೆಂದು ಹೇಳುವುದುಂಟು. ಪರಂತು, ನಾಟಕದ ಇತರ ಪಾತ್ರಗಳಾರೂ ಚಂದ್ರಗುಪ್ತನನ್ನು 'ವೃಷಲ'ನೆಂದು ಹೇಳುವುದಿಲ್ಲ; ಮೌರ್ಯೇಂದು, ಚಂದ್ರಗುಪ್ತ, ಚಂದ್ರಶ್ರೀಯೆನ್ನುತ್ತಾರೆ. ಅಮಾತ್ಯರಾಕ್ಷಸನು ಹೇಳುವ 'ಗತಾ ಭಿದ್ರೇಣ ಶ್ರೀರ್ವೃಷಲಮವಿನೀತೇವ ವೃಷಲೀ' ಎನ್ನುವಲ್ಲಿಯ ವಿಶೇಷಣ ಯುಕ್ತ ಉಪಮಾನಪದವನ್ನು ಲಕ್ಷಿಸಬೇಕು. ಅದೇ ಮಾತಿನ ಹಿಂದೊಮ್ಮೆ ಅವನೇ 'ಗೋತ್ರಾಂತರಂ ಶ್ರೀರ್ಗತಾ' ಎಂದುದನ್ನೂ, ಆ ಮೇಲೊಮ್ಮೆ ಶಂಖಾದಿಧ್ವನಿಯನ್ನು ಕೇಳಿ 'ಏಷ ಹಿ ಮಲಯಕೇತು ಸಂಯಮನ ಸಂಜಾತಃ ರಾಜಕುಲಸ್ಯ (ಇತ್ಯರ್ಧೋಕ್ತೇ ಸಾಸೂಯಂ) ಮೌರ್ಯಕುಲಸ್ಯ ಅಧಿಕಪರಿತೋಷಂ ಪಿಶುನಯತಿ' ಎಂಬಲ್ಲಿ ಈ ಧ್ವನಿಯು 'ರಾಜಕುಲದ– ಅಲ್ಲ, ಮೌರ್ಯಕುಲದ ಸಂತೋಷ ಸೂಚನೆ'ಯೆಂಬ ಭಾವವನ್ನೂ ಹೊಂದಿಸಬೇಕು. ಕಂಚುಕಿಯಾದರೋ ಮೂರನೆಯ ಅಂಕದಲ್ಲಿ ಚಾಣಕ್ಯನ ಆಶ್ರಮವನ್ನು ವರ್ಣಿಸಿ 'ತತಃ ಸ್ಥಾನೇ ಖಲ್ವಸ್ಯ ವೃಷಲೋ ದೇವಶ್ಚಂದ್ರಗುಪ್ತ ಇತಿ' ಎನ್ನುವುದು, ಆ ಹಿಂದಣ 'ರಾಜಾಧಿರಾಜನ ಮಂತ್ರಿ'ಯೆಂದುದಕ್ಕಿಂತ ರಾಜನತ್ತ ಕೀಳುನೋಟದಲ್ಲಿದ್ದು, "ಇವನಿದಿರು ದೇವ(ರಾಜ)ನಾದ ಚಂದ್ರಗುಪ್ತನೂ 'ವೃಷಲ'ನಾಗಿರುವುದು ಯುಕ್ತವೇ ಸೈ!" ಎಂದು ಅರ್ಥವಿಸುವುದು ಚೆನ್ನು! "ಮಹಾರಾಜ ಚಂದ್ರಗುಪ್ತನು ಅವನಿಗೆ 'ವೃಷಲ' ಮಾತ್ರ" ಎಂದು ವಿದ್ವಾಂಸರೂ ಆಶಿಸಿದ್ದಾರೆ (ಸಂಸ್ಕೃತನಾಟಕ, ಪುಟ 158). ಅದೇ ಅಂಕದಲ್ಲಿ ಚಾಣಕ್ಯನು ಚಂದ್ರಗುಪ್ತನಲ್ಲಿಗೆ ನಡೆದು 'ಅಧ್ಯಾಸಿತಂ ಚ ವೃಷಲೇನ ವೃಷೇಣ ರಾಜ್ಞಾಂ'—ಅಂದರೆ ರಾಜಶ್ರೇಷ್ಠನಾದ ವೃಷಲನಿಂದ ಸಿಂಹಾಸನವು ಏರಲಾಗಿದೆ'ಯೆಂಬಲ್ಲಿ 'ವೃಷಲ'ನೆಂದರೆ

'ರಾಜಾಧಿರಾಜ'ನೆಂಬ ಅರ್ಥಗಾರಿಕೆಯು ಸರಿಗೂಡುವುದಿಲ್ಲ, ಪುನರುಕ್ತಿಯಾಗುತ್ತದೆ. ಆ ಅಂಕದ ಕೊನೆಗೆ ಕಂಚುಕಿಯು 'ದಿಷ್ಟ್ಯಾ ದೇವ ಇದಾನೀಂ ದೇವಃ ಸಂವೃತ್ತಃ' (3-22) ಎನ್ನುವಲ್ಲಿ, ಆ ಹಿಂದಣ ತನ್ನ (ಕಂಚುಕಿಯ) ಮಾತು ಮತ್ತು ಚಾಣಕ್ಯನ ಮಾತುಗಳಲ್ಲಿರುವ 'ವೃಷಲ' ಶಬ್ದವನ್ನು ಪ್ರಯೋಗಿಸಲಿಲ್ಲ. 'ರಾಜನು ಭಾಗ್ಯದಿಂದ ಇದೀಗ ರಾಜನಾಗಿಯೇ ಸಂಭವಿಸಿದನು' ಎಂದರೆ, ಚಾಣಕ್ಯನನ್ನು ಕೂಡಿರುವ ಅದುತನಕ 'ರಾಜಧಿರಾಜ'ನಾದರೂ 'ವೃಷಲ'ನಾಗಿದ್ದ ದೇವನು ಇದೀಗ ನಿಜವಾಗಿ ರಾಜನೇ ಆದನೆಂದು ತಿಳಿಯಲಾಗುವುದು. ಹಾಗಾಗಿ, ಇಲ್ಲಿನ ಬೆಂಬಲದಿಂದ ಈ ನಾಟಕದ ಎಲ್ಲೆಡೆ 'ವೃಷಲ'ನೆಂದರೆ ರಾಜರಾಜನೆಂದು ಮುಂತಾಗಿ ಹೇಳಬರುವುದಕ್ಕೆ ಆಧಾರವಿಲ್ಲ. ಈ ನಾಟಕದಲ್ಲಿ ರಾಜಾಧಿರಾಜ (3-14), ಅಧಿರಾಜ (4-12), ಪೃಥಿವೀಪತಿ (4-10), ನರಾಧಿಪತಿ (4-11), ಮಹಾರಾಜ (5-9), ಭರ್ತೃ (5-24), ನರಪತಿ (6-16), ರಾಜ (7-12), ಪಾರ್ಥಿವ (7-19) ಎಂದು ಸಂದರ್ಭೋಚಿತವಾಗಿ ಹೇಳುವೆಡೆಗಳಲ್ಲಿ ಆ ಶಬ್ದಗಳ ಬದಲು 'ವೃಷಲ'ನೆಂದು ಒಮ್ಮೆಯಾದರೂ ಪ್ರಯೋಗವಿಲ್ಲೆಂದು ಗಮನಿಸಿದರೆ 'ವೃಷಲ'ನೆಂದರೆ ರಾಜಾಧಿರಾಜನೆನ್ನಲು ಬರುವುದಿಲ್ಲ!

೩. "ಗ್ರೀಕರು ಆತನ ಚಂದ್ರಗುಪ್ತ ಎಂಬ ಹೆಸರನ್ನು ಸರ್ವಥಾ ನೇರಾಗಿ ಸುಲಭವಾಗಿ ಉಚ್ಚರಿಸಲಾರದ ಕಾರಣ, ಅವರೆಲ್ಲರು ಚಂದ್ರಗುಪ್ತನನ್ನು ಕುರಿತು ಬಳಸುವ ಹೆಸರಾದರೊ ಅವರ ಭಾಷೆಯಲ್ಲಿ 'Basileus' ಎಂದೇ ವಿನಾ ಬೇರೆಯಲ್ಲ"ವೆಂದು (ಅಭಿವಂದನೆ, ಪುಟ 249) ಹೇಳಲಾಗದು. ಏಕೆಂದರೆ, ಚಂದ್ರಗುಪ್ತನನ್ನು 'ಸಂದ್ರಕೊಟ್ಟಸ್ (Sandrakottas)' ಎಂದು ಯವನರು ಕರೆಯುತ್ತಿದ್ದರೆಂದು ತಿಳಿಯಲಾಗಿದೆ (ಅಶೋಕ, ಪುಟ 17, ಮತ್ತು ಪುಣೆಯ ಭಾಂಡಾರ್ಕರ್ ಸಂಸ್ಥೆಯ ಪತ್ರಿಕೆಯಲ್ಲಿ ಶ್ರೀ ಡಿ. ಎಸ್. ತ್ರಿವೇದಿಯವರ ಲೇಖನ).

"ಅತ ಏವ ಚಾಣಕ್ಯನು ಪುನಃ ಪುನಃ ಆ ಹೆಸರಿನಿಂದ ಕರೆಯುತ್ತಿರುವುದಾದರೊ ಚಂದ್ರಗುಪ್ತನು ರಾಜಾಧಿರಾಜನು, ಮಹಾರಾಜನು ಎಂಬರ್ಥದಲ್ಲಿ ಯಥಾರ್ಥವಾಗಿ ವೃಷಲನಾಗಿದ್ದ ವಸ್ತುಸ್ಥಿತಿಗೆ ಅಚ್ಚುಕಟ್ಟಾಗಿ ಒಪ್ಪುತ್ತಿದೆ ಮಾತ್ರವಲ್ಲ, ಗ್ರೀಕ್ ಅರಸನಾದ ಸೆಲ್ಯೂಕಸ್ಸನನ್ನು ಸೋಲಿಸುವೊಂದಿಗೆ ಚಂದ್ರಗುಪ್ತನು ಆತನ 'Basileus' ಎಂಬ ಬಿರುದನ್ನೂ ಆತನಿಂದ ಕಿತ್ತುಕೊಂಡಿರಬೇಕು ಎಂಬ ಸಂಭಾವ್ಯತೆಯನ್ನು ಸೂಚಿಸುವಂತಿದೆ"ಯೆಂದು (ಅಭಿವಂದನೆ, ಪುಟ 250) ಹೇಳಲೂ ಬರುವುದಿಲ್ಲ. ಸೆಲ್ಯೂಕಸ್ಸನೂ ಚಂದ್ರಗುಪ್ತನೂ ಪರಸ್ಪರವಾಗಿ ರಾಜ್ಯವನ್ನೂ ಗಜಗಳನ್ನೂ ವಿನಿಮಯಮಾಡಿಕೊಂಡರು, 'ಕೊಟ್ಟು ಕೊಳ್ಳುವ ಸಂಬಂಧ' ಮಾಡಿದರು; ಆ ಮುಂದೆ ಸ್ನೇಹದಿಂದಿರಬೇಕೆಂದು ಕರಾರುಮಾಡಿಕೊಂಡರೆಂದೂ ತಿಳಿಯುತ್ತದೆ. (ಅಶೋಕ, ಪುಟ 20).

"—ವೃಷಲವು ಸಂಸ್ಕೃತೇತರ ಶಬ್ದವೆಂದು ಆತನು (ವಿಶಾಖದತ್ತನು) ಅರಿತಿರಲಾರನು" ಎಂದು (ಅಭಿವಂದನೆ, ಪುಟ. 250) ಇಲ್ಲಿ ಹೇಳಲೂ ಅವಕಾಶವಿಲ್ಲ. ಈ ವೊದಲು ಕಂಡ ಪ್ರಾಚೀನ ಗ್ರಂಥಗಳ ಉದಾಹರಣಗಳಿಂದ ಈ ಮಾತು ಸಲ್ಲದು! 'ವೃಷಲ'ನೆಂದರೆ ಶೂದ್ರನೆಂಬ ಸಾಮಾನ್ಯಾರ್ಥಕ್ಕಿಂತ ಬೇರೆಯಾದ ಅರ್ಥವಿರುವುದನ್ನು ಕಂಡು, ಚಂದ್ರಗುಪ್ತನು ಧರ್ಮದಿಂದ—ಕ್ರಿಯಾಲೋಪದಿಂದ ಪತಿತನಾಗಿದ್ದುದರಿಂದ, ಈ ನಾಟಕಕಾರನೂ ಕೋಶಕಾರರೂ ಚಂದ್ರಗುಪ್ತನು ಮಾತ್ರ ಪ್ರತ್ಯೇಕಶಃ 'ವೃಷಲ'ನೆಂದೂ ಹೇಳಿರಬೇಕೆಂಬುದು ಉಚಿತವಾಗುವುದು. ಇತಿ ಶಮ್!

**ವಿದ್ವಾನ್ ಕೆ. ವೆಂಕಟರಾಯಾಚಾರ್ಯ**

# ಶಂಕರಕವಿಯ ಪಂಚತಂತ್ರ

ಶಂಕರಕವಿಯಿಂದ ರಚಿತವಾದ ಕನ್ನಡ ಪಂಚತಂತ್ರದ ಒಂದು ಓಲೆ ಪುಸ್ತಕವು ಮೈಸೂರು ಪ್ರಾಚ್ಯ ಸಂಶೋಧನ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಎಚ್. ದೇವೀರಪ್ಪನವರ ಬಳಿಯಲ್ಲಿರುವುದು. ಕರ್ಣಾಟಕ ಕವಿಚರಿತೆಯಲ್ಲಿ ಈ ಗ್ರಂಥದ ಪ್ರಸ್ತಾಪವಿಲ್ಲವಾದ್ದರಿಂದ ಈ ಪುಸ್ತಕದಲ್ಲಿನ ವಿಷಯಗಳನ್ನು ನಾವು ಇಲ್ಲಿ ಸಂಕ್ಷೇಪವಾಗಿ ನಿರೂಪಿಸುತ್ತೇವೆ. ಈ ಪುಸ್ತಕವನ್ನು ನಮಗೆ ಒದಗಿಸಿಕೊಟ್ಟದ್ದಕ್ಕಾಗಿ ಶ್ರೀ ಎಚ್. ದೇವೀರಪ್ಪನವರಿಗೂ ಮತ್ತು ಪ್ರೊ|| ಡಿ. ಎಲ್. ನರಸಿಂಹಾಚಾರ್ ಅವರಿಗೂ ನಾವು ಋಣಿಗಳಾಗಿದ್ದೇವೆ.

ಈ ಪುಸ್ತಕದಲ್ಲಿ ೧ ರಿಂದ ೫೪ ರ ವರೆಗಿನ ಸಂಖ್ಯೆಗಳಿಂದ ಅಂಕಿತವಾದ ೫೧ ಪತ್ರಗಳಿರುವುವು[1] (ಪತ್ರಗಳ ಉದ್ದ ೨೫ ಸೆಂಟಿಮೀಟರ್, ಅಗಲ ೫ ಸೆಂಟಿಮೀಟರ್). ೧ ರಿಂದ ೫೦ ರ ವರೆಗಿನ ಪತ್ರಗಳು ಪಂಚತಂತ್ರದ ಮುಖಕಥೆಯನ್ನೂ, ಮಿತ್ರಭೇದವೆಂಬ ಒಂದನೇ ತಂತ್ರವನ್ನೂ, ಸುಹೃಲ್ಲಾಭವೆಂಬ ಎರಡನೇ ತಂತ್ರವನ್ನೂ ಒಳಗೊಂಡಿರುವುವು. ೫೦ ರಿಂದ ೫೪ ನೇ ವರೆಗಿನ ಪತ್ರಗಳು ಸಂಧಿವಿಗ್ರಹವೆಂಬ ಮೂರನೇ ತಂತ್ರದ ಮುಖಕಥೆಯನ್ನೂ, 'ಮೊಲಗಳೂ ಆನೆಯೂ' ಎಂಬ ಕಥೆಯ ಸ್ವಲ್ಪಭಾಗವನ್ನೂ ಒಳಗೊಂಡಿರುವುವು. ೫೪ ನೇ ಪತ್ರದ ಕೊನೆಯ ಎರಡು ಪಂಕ್ತಿಗಳಲ್ಲಿ—'ರಕ್ಷಣಕ್ಕನ್ನಂ ಕಳುಪಿದನೊಡೆಯನೆಂದುದೆನೆ(ನೆ)| ಈ ಸರೋರಕ್ಷಕ ರೆನ್ನವರೆನ್ನ ಶರೀರಪ್ರಾಯರೆಂಬರದರಿಂದೆಮಗೆ ಶಶಂಗಳೆಂಬ ಪ್ರಸಿದ್ಧಿ ಬಂದುದೆಂದಾ ಮಾತಂ ಪೇಳೆ ಹಸ್ತಿರಾಜಂ ವಿಹಸ್ತನಾಗಿ ಪೇಳ್ದನೀಗ ನಾವೆಸಗಿದುದಗ್ಗಾನಕೃತಮದಂ ಕ್ಷಮಿಸುವದಿನ್ನು ಬರ್ಪ್ಪವರಲ್ಲವೆಂದು' ಎಂಬ ವಾಕ್ಯವಿರುವುದು. ಈ ಪುಸ್ತಕವು ಇಲ್ಲಿಗೆ ಮುಗಿಯಿತೆಂದಾಗಲಿ ಪುಸ್ತಕವನ್ನು ಬರೆದವನಿಂತಹವನೆಂದಾಗಲಿ ಸೂಚಿಸುವ ಯಾವ ಮಾತೂ ಅಲ್ಲಿಲ್ಲವಾದ್ದರಿಂದ ಈ ೫೪ ನೇ ಪತ್ರದನಂತರವೂ ಅನೇಕ ಪತ್ರಗಳಿದ್ದುವೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಆ ಪತ್ರಗಳೆಲ್ಲವೂ ನಷ್ಟವಾಗಿರುವುವು. ಒಂದುವೇಳೆ ಸಮಗ್ರವಾದ ಪಂಚತಂತ್ರವು ಪುಸ್ತಕದಲ್ಲಿ ಇದ್ದರೂ ಇದ್ದಿರಬಹುದು. ಅಂತೂ ಈ ಪುಸ್ತಕವು ಅಸಮಗ್ರವೆಂಬುದು ಸ್ಪಷ್ಟ. ಈ ಪುಸ್ತಕದ ಆರಂಭದಲ್ಲಿ—

ವೃ|| ಶ್ರೀಪತಿಪದ್ಮಗರ್ಭಪುರುಹೂತಪುರಃಸರದೇವತೌಘ ವಾಂ|
ಛಾಪರಿಪೂರಣಕ್ಷಮ ಕೃಪಾರಸಪೂರ್ಣಕಟಾಕ್ಷವೀಕ್ಷಣಂ|
ತಾಪಸಚಕ್ರವರ್ತಿ ಕಲಶೋದ್ಭವಸೇವಿತಪಾದಪದ್ಮನಾ|
ದಾ ಪರಮಾತ್ಮರೂಪ ಕಲಶೇಶ್ವರನೀಗೆಮಗಿಷ್ಟಸಿದ್ಧಿಯಂ||

ತೆಂಕಣ ಕಾಶಿಯೆಂದೆನಿಸಿಕೊಂಬುದು ಭೂಮಿಗಿದೊಂದೆ ತಾಣವೆಂ|
ದಂಕಮನಿಕ್ಕಿದಂ ಬಿದ್ರೆಯೆನಿಪ್ಪ ಪೊಲೊಪ್ಪುವ ತುಂಗಭದ್ರೆಯಿಂ|
ದಂಕಿತಮಾಗಿ ತೋರ್ಪ ಕಲಶಕ್ಷಿತಿಯೊಳ್ನೆಲೆಗೊಂಡು ನಿಂದ ವೀ|
ನಾಂಕಮದಾಪಹಾರಿ ಕಲಶೇಶ್ವರನೀಗೆಮಗಿಷ್ಟಸಿದ್ಧಿಯಂ||

ಕಂ|| ಕರಿಮೊಗನಂ ಮೊತ್ತಮೊದಲ್|
ಬಲಗೊಂಡಾಂ ಬಾಸೆವೆಣ್ಣಂ ಮಣಿದರೆದಿಂಗಳ್|
ತಲೆಯನನುಂ ಬಿದ್ರಿಯ ಪೊಡೆ|
ಯಲರನನುಂ ನೆನೆದು ಪೇಳ್ವೆನೀ ಮೆಲ್ಕಥೆಯಂ ||೩||

---

[1] ೩೯ ನೇ, ೫೨ ನೇ ಮತ್ತು ೫೩ ನೇ ಪತ್ರಗಳು ಪುಸ್ತಕದಲ್ಲಿಲ್ಲ. ಸುಮಾರು ೧೦ ಪತ್ರಗಳ ಮೇಲ್ಭಾಗವೂ, ಮೂರುನಾಲ್ಕು ಪತ್ರಗಳ ಅಂಚೂ ತ್ರುಟಿತವಾಗಿ ಹಲವು ಅಕ್ಷರಗಳು ನಷ್ಟವಾಗಿರುವುವು.

ನಿಚ್ಚಟದ ಭಕ್ತಿಯಿಂದೆ ಶಿ|
ವಾಚ್ಯುತರಂ ಭಜಿಸಿ ಭಾವಶುದ್ಧಿ[ಯಂ] ಪಡೆದಾ|
ಸಚ್ಚಿದಾನಂದ ಮುನಿಯ ಲ|
ಸಚ್ಚರಣಾಂಭೋಜಯುಗವನಭಿವಂದಿಸುವೆಂ ||೪||

ಮನು ಗುರು ಶುಕ್ರ ಪರಾಶರ|
ವಿನುತವ್ಯಾಸಾ . . . ನಿಪ ಚಾಣಿಕ್ಯಗಾರ್ಗ್ಗ್ರಂ|
ಮನದೊಳಭಿನವಿಸಿ ಸತ್ಕವಿ|
ಜನಶೇಖರ ತಿರುಮಲೇಂದ್ರನಂ ವಂದಿಸುವೆಂ ||೫||

ಶ್ರೀಕಲಶೇಶಂ ಸ್ವಪ್ನದೊ
ಳೇಕಾಂತದೊಳೆ . . . ಪಂಚತಂತ್ರ ಮಹಾಕಥೆಯಂ|
ಸಂಸ್ಕೃತ . . . . . . . |
. . . . . . . . ||

. . . . . . . . |
. . . ಭೀರುಗಳಾದ ಬಾಲರಂ ಬೋಧಿಸಲಾಂ|
ಜನವಿನುತ ಪಂಚತಂತ್ರಾ
ಖ್ಯ ನವೋಜ್ವಲ ನೀತಿಶಾಸ್ತ್ರಮಂ ನೆರೆ ಪೇಳ್ವೆಂ ||೭||

ಬಾಲಬೋಧಾ . . . ದೊಡ|
ವೀ ಲೋಕಹಿತಾರ್ಥಮಾದ ಸತ್ಕೃತಿಯವನೀ|
ಪಾಲರ್ ಮಂತ್ರಿಗಳಾಢ್ಯರು
ಮಾಲಿಸೆ ಸಕಲೇಷ್ಟಸಿದ್ಧಿಸಾಧನಮಕ್ಕುಂ ||೮||

ದೊರೆ [ಯುಂ ಪ್ರ]ಧಾನನುಂ ಸಾ|
ದರದಿಂದೀ ನೀತಿಶಾಸ್ತ್ರಮಂ ಕೇಳ್ದೊಡೆ ದು|
ಸ್ತರಮಾದೆಡರಂ ಕಳೆವರು|
ಪರಮೈಶ್ವರ್ಯವನೆ ಪಡೆವರೆಂಬುದೆ ಸತ್ಯಂ ||೯||

ಸಕ್ಕರೆ ಪಾಲ್ಬೆರೆದಂತೆ|
ಸಕ್ಕದಮುಂ ಕನ್ನಡಕ್ಕೆ ಬೆರೆದಿರೆ ಮೆರೆಗುಂ|
ಚೊಕ್ಕಮೆನಲುಭಯ ಭಾಷೆಯ|
ಲಕ್ಕಣಮಂ ತಿಳಿದ ಕ[ವಿ]ಯೆ ಕವಿಕುಲತಿಲಕಂ ||೧೦||

ಆದರಿಂದೀಕೃತಿಯಂ ನೀಂ|
ಮುದದಿಂ ಪೇಳೆಂದು ಬಲ್ಲವರ್ ಬೆಸಸಲ್ ಸಂ|
ಮುದದಿಂ ಶಂಕರ ಕ [ವಿ] ರಚಿ|
ಸಿದನೀ ಕರ್ನಾಟ ಪಂಚತಂತ್ರದ ಕಥೆಯಂ ||೧೧||

||ವಚನ|| ಈ ಮಹಾಕಥೆಯವತಾರಿಕೆಯದೆಂತೆನೆ . . . .

ಎಂಬ ಪದ್ಯಗಳೂ ವಚನವೂ, ಒಂದನೇ ತಂತ್ರದ ಕೊನೆಯಲ್ಲಿ—

ಉಭಯ ಭಾಷಾ ಸುಕವಿವ|
ಲ್ಲಭ ಶಂಕರಸೂರಿವರ್ಯ ರಚಿತ ಸುಧಾಸ|
ನ್ನಿಭ ಪಂಚತಂತ್ರದೊಳ್ ವಿ
ತ್ರಭೇದವೆಂಬಾದಿ ತಂತ್ರಮಾದುದು ಸಂಪೂರ್ಣಂ||

ಎಂಬ ಪದ್ಯವೂ, ಎರಡನೇ ತಂತ್ರದ ಕೊನೆಯಲ್ಲಿ—

ಮಲ್ಲಿಕಾರ್ಜುನ ಪದಾಬ್ಜಾ |
ಮೃತ . . . . ಶಂಕರಕವಿಯಾ |
ಸಲ್ಲಲಿತ ಕೃತಿಯೊಳಾಯ್ತು ಸು |
ಹೃಲ್ಲಾಭಾಖ್ಯಂ ದ್ವಿತೀಯ ತಂತ್ರಂ ಸಂಪೂರ್ಣಂ ||

ಎಂಬ ಪದ್ಯವೂ ಇರುವುವು. ಎರಡನೇ ತಂತ್ರದ ಆದಿಯಲ್ಲಿ—

ಜಲಜಾಸ್ತ್ರನನುಂಗಂಣಿಂ(ದ) |
ಛಲದಿಂ ಸುಟ್ಟುರುಪಿದತುಳ ದೋಷಂಗಳೆಯಲ್ |
ಲಲನೆಗರಮ್ಮೆಯನಿತ್ತಾ |
ಕಲಶೇಶಂ ಕೊಡುಗೆ ನಿನಗಭೀಪ್ಸಿತಫಲಮಂ ||

ಎಂಬ ಮಂಗಳಪದ್ಯವಿರುವುದು. ಈ ಪುಸ್ತಕದಲ್ಲಿರುವ ಕಥೆಗಳು ಯಾವುವೆಂದರೆ—

(I) ಕಥಾಮುಖ: ಪಾಟಲಿಪುತ್ರವೆಂಬ ನಗರವನ್ನು ಆಳುತ್ತಿದ್ದ ಸುದರ್ಶನರಾಜನಿಗೆ ನೀತಿಶಾಸ್ತ್ರವನ್ನರಿಯದ ನಿರಕ್ಷರಕುಕ್ಷಿಗಳಾದ ಲಘುಶಕ್ತಿ, ಉಗ್ರಶಕ್ತಿ, ಅನೇಕಶಕ್ತಿಯೆಂಬ ಮೂವರು ಪುತ್ರರಿದ್ದರು. ಅವರನ್ನು ನೀತಿಶಾಸ್ತ್ರ ಕಲಾಕೋವಿದರನ್ನಾಗಿ ಮಾಡುತ್ತೇನೆಂದು ರಾಜನ ಆಸ್ಥಾನದಲ್ಲಿದ್ದ ವಿಷ್ಣುಶರ್ಮನೆಂಬ ಪಂಡಿತನು ಒಪ್ಪಿಕೊಂಡು 'ವರಮಿತ್ರಭೇದವದ ರಂತರದ ಸುಹೃಲ್ಲಾಭ ಸಂಧಿವಿಗ್ರಹವೆರಡುಂ | ಪರಲಬ್ಧನಾಶವೀಕ್ಷಿಸದುರುಕಾರ್ಯಂ ಮಾಳ್ಪ ದುದೀ ತಂತ್ರಮಯ್ದೆದಂ ||' ರಚಿಸಿ ಅವನ್ನು ರಾಜಪುತ್ರರಿಗೆ ಹೇಳಿದನು.

(II) ಮಿತ್ರಭೇದವೆಂಬ ೧ ನೇ ತಂತ್ರದ ಮುಖಕಥೆ: ಸಿಂಹಕ್ಕೂ ಎತ್ತಿಗೂ ನಡುವೆ ಬೆಳೆಯುತ್ತಿದ್ದ ಸ್ನೇಹವನ್ನು ನರಿಯು ನಾಶಮಾಡಿದ ಕಥೆ. ೧. ಕೀಲನ್ನು ಕಿತ್ತ ಕಪಿಯ ಕಥೆ. ೨. ನರಿಯೂ ತಮಟೆಯೂ. ೩. ಆಷಾಢಭೂತಿಯ ಕಥೆ (ಸ್ವಯಂಕೃತವಾದ ಮೂರು ತಪ್ಪುಗಳು). ೪. ಕಾಗೆಯು ಸರ್ಪವನ್ನು ನಾಶಮಾಡಿದ ಕಥೆ. ೫. ಬಕನೂ ಏಡಿಯೂ. ೬. ಮೊಲವೂ ಸಿಂಹನೂ. ೭. ಕೂರೆಯೂ ತಿಗಣೆಯೂ. ೮. ಸಿಂಹವೂ ಅದರ ಮಂತ್ರಿಗಳಾದ ಕಾಗೆ, ಹುಲಿ, ನರಿಗಳೂ ಮತ್ತು ಒಂಟೆಯೂ. ೯. ಟಿಟ್ಟಿಭಗಳೂ ಸಮುದ್ರವೂ. ೧೦. ಹಂಸಗಳೂ ಆಮೆಯೂ. ೧೧. ಮೂರು ಮತ್ಸ್ಯಗಳ ಕಥೆ. ೧೨. ಗೊಲ್ಲನ ಹೆಂಡತಿಯೂ ಅವಳ ಇಬ್ಬರು ಜಾರರೂ. ೧೩. ಬುದ್ಧಿಹೇಳಿದ ಪಕ್ಷಿಯನ್ನು ಕಪಿಯು ಕೊಂದ ಕಥೆ. ೧೪. ಧರ್ಮಬುದ್ಧಿಯೂ ದುಷ್ಟಬುದ್ಧಿಯೂ. ೧೫. ಬಕದ ಮರಿಗಳೂ ಸರ್ಪವೂ ಮುಂಗುಸಿಯೂ. ೧೬. ಕಬ್ಬಿಣವನ್ನು ತಿಂದ ಇಲಿಯ ಕಥೆ.

(III) ಸುಹೃಲ್ಲಾಭವೆಂಬ ೨ ನೇ ತಂತ್ರದ ಮುಖಕಥೆ: ಕಾಗೆ, ಇಲಿ, ಜಿಂಕೆ ಮತ್ತು ಆಮೆಯ ಕಥೆ. ೧. ಚಿತ್ರಗ್ರೀವನೆಂಬ ಕಪೋತರಾಜನ ಕಥೆ. ೨. ಅತಿಲೋಭಿಯಾದ ನರಿಯ ಕಥೆ. ೩. (ಕಾಮಂದಕಿಯೆಂಬ?) ಬ್ರಾಹ್ಮಣಿಯ ತಿಲವಿಕ್ರಯದ ಕಥೆ. ೪. ಚಿತ್ರಾಂಗನ ಕಥೆ.

(IV) ಸಂಧಿವಿಗ್ರಹವೆಂಬ ಮೂರನೇ ತಂತ್ರದ ಮುಖಕಥೆ: ಕಾಗೆಗಳಿಗೂ ಗೂಬೆಗಳಿಗೂ ಯುದ್ಧ. ೧. ಮೊಲಗಳೂ ಆನೆಯೂ (ಈ ಕಥೆಯು ಅಸಂಪೂರ್ಣವಾಗಿದೆ).

ಈ ಗ್ರಂಥದ ಒಂದನೇ ತಂತ್ರದಲ್ಲಿ 'ಗೊಲ್ಲನ ಹೆಂಡತಿಯೂ ಅವಳ ಇಬ್ಬರು ಜಾರರೂ' ಎಂಬ ಕಥೆಯು (೧೨ ನೇ ಕಥೆ) ಬಂದಿದೆಯೆಂಬುದು ಗಮನಾರ್ಹವಾದ ವಿಷಯ. ಈ ಕಥೆಯು ದಾಕ್ಷಿಣಾತ್ಯ ಪಂಚತಂತ್ರದಲ್ಲಿ ಮಾತ್ರ ದೊರೆತಿರುವುದೇ ವಿನಾ ಕಾಶ್ಮೀರಪಂಚತಂತ್ರ ಲಾಟೀಯಪಂಚತಂತ್ರ ಮೊದಲಾದ ಇತರ ಪಂಚತಂತ್ರಗಳಲ್ಲಿ[1] ದೊರೆಯುವುದಿಲ್ಲ. ಆದ್ದರಿಂದ

[1] ಈ ಕಥೆಯು ದುರ್ಗಸಿಂಹನ ಪಂಚತಂತ್ರದಲ್ಲಾಗಲಿ ವಸುಭಾಗನ ಹೆಸರನ್ನು ಹೇಳುವ ಯವದ್ವೀಪದ ತಂತ್ರಿ, ಲೇಯಾಸ್ ದೇಶದ ತಂತ್ಯೆ, ತಾಯಿದೇಶದ ತಂತ್ರೈಯಲ್ಲಾಗಲಿ ಸಂಸ್ಕೃತ ತಂತ್ರೋಪಾಖ್ಯಾನದಲ್ಲಾಗಲಿ ದೊರೆಯುವುದಿಲ್ಲವಾದ್ದರಿಂದ ವಸುಭಾಗಕೃತವೆಂದು ಹೇಳಿಕೊಳ್ಳುವ ಸಂಸ್ಕೃತ ಪಂಚತಂತ್ರದಲ್ಲಿ ಈ ಕಥೆ ಇರಲಿಲ್ಲವೆಂದು ನಾವು ಊಹಿಸಬಹುದು.

11976



ಶಂಕರಕವಿಯ ಪ್ರಕೃತಗ್ರಂಥವು ಒಂದು ದಾಕ್ಷಿಣಾತ್ಯ ಪಂಚತಂತ್ರ ಪುಸ್ತಕದ ಕನ್ನಡ ಅನುವಾದವಾಗಿದೆಯೆಂದು ಸ್ಪಷ್ಟವಾಗಿ ಹೊರಪಡುವುದು. ಗ್ರಂಥಾವತಾರದಲ್ಲಿರುವ 'ಭೀರುಗಳಾದ ಬಾಲರಂ ಬೋಧಿಸಲಾಂ| ಜನವಿನುತ ಪಂಚತಂತ್ರಾಖ್ಯನವೋಜ್ವಲ ನೀತಿಶಾಸ್ತ್ರಮಂ ನೆರೆ ಪೇಳ್ವೆಂ' ಎಂಬ ೮ ನೇ ಪದ್ಯದಿಂದಲೂ ಕೂಡ ಈ ವಿಷಯವು ದೃಢಪಡುವುದು. ಈ ಪದ್ಯವು ದಾಕ್ಷಿಣಾತ್ಯ ಪಂಚತಂತ್ರದ ಗ್ರಂಥಾವತಾರದಲ್ಲಿರುವ—

ಗ್ರಂಥವಿಸ್ತರಭೀರೂಣಾಂ ಬಾಲಾನಾಮಲ್ಪ ಚೇತಸಾಂ|
ಬೋಧಾಯ ಪಂಚತಂತ್ರಾಖ್ಯಮಿದಂ ಸಂಕ್ಷಿಪ್ಯ ವಕ್ಷ್ಯತೇ ||

ಎಂಬ ಶ್ಲೋಕದ ಅನುವಾದವು; ಈ ಶ್ಲೋಕವೂ ಸಹ ದಾಕ್ಷಿಣಾತ್ಯ ಪಂಚತಂತ್ರದಲ್ಲಿ ಮಾತ್ರ ದೊರೆಯುವುದೇ ವಿನಾ ಇತರ ಪಂಚತಂತ್ರಗಳಲ್ಲಿ ದೊರೆಯುವುದಿಲ್ಲ.

ತಾನು ಕೈಗೊಂಡ ಕಾರ್ಯವನ್ನು ಶಂಕರಕವಿಯು ಹೇಗೆ ನಿರ್ವಹಿಸಿದ್ದಾನೆಂದು ನಿದರ್ಶಿಸುವುದಕ್ಕಾಗಿ ಈ ಪಂಚತಂತ್ರದಿಂದ ಕೆಲವು ಭಾಗಗಳನ್ನು ಉದ್ಧರಿಸಿ ಬರೆಯುವೆವು. ಹಾಗೆಯೇ ಅವುಗಳಿಗೆ ಸಂವಾದಿಯಾದ ದಾಕ್ಷಿಣಾತ್ಯ ಪಂಚತಂತ್ರದ ಭಾಗಗಳನ್ನೂ ಹರ್ಟೆಲ್‌ರವರ ಮುದ್ರಿತ ಗ್ರಂಥದಿಂದ ಉದ್ಧರಿಸಿ ಅವುಗಳ ಕೆಳಗೆ ಕೊಡುವೆವು[2].

೧. "ಒಂದು ಸರಸ್ಸಿನೊಳ್ ಕಂಬುಗ್ರೀವಮೆಂಬುದೊಂದಂಚೆ| ಅದಕ್ಕೆ ಮಿತ್ರರಾದ ವಿಕಟ ಸಂಕಟಗಳೆಂಬಂಚೆಗಳಿರ್ಪುವಾ ಹಂಸಗಳೆರಡುಂ ಅನಾವೃಷ್ಟಿಯಿಂದತಿಕ್ಷೀಣಮಾಗಿ ತಮ್ಮೊಳನ್ಯೋನ್ಯಮಾಲೋಚಿಸಿ ಮತ್ತೊಂದು ಜಲಪೂರ್ಣವಾದ ಜಲಾಶಯಮನೈದುವುದೆ ಕಾರ್ಯಮೀಯರ್ಥಮನಿಂದು ಪ್ರಿಯಮಿತ್ರನಾದ ಕಂಬುಗ್ರೀವಂಗೆ ಪೇಳಲ್ವೇಕೆಂದು ಪೇಳಲದಂ ಕೇಳ್ದು ಕಂಬುಗ್ರೀವನಾನುಂ ಬರ್ಪೆನೆನಲ್ ಆ ಹಂಸಂಗಳಂಗೀಕರಿ(ಸಿ)ಸಲಾ ಕೂರ್ಮನೆಂದುದೆಲೆ ಮಿತ್ರರಿರಾ ನೀವಿರ್ವರುಂ ಪಕ್ಷಚಾರಿಗಳಾನೆಂತು ದೇಶಾಂತರಕ್ಕೆ ಬರ್ಪೆನೆನೆ ನೀನೆಮ್ಮ ಮಾತಂ ಮಿೀರದಿರ್ದೊಡೆ ನಿನ್ನನುಂ ನಾವಿರ್ವರುಂ ಕೊಂಡುಪೋಪೆವಾಸಮಯದೊಳ್ ನೀನೇನುಂ ಮಾತನಾಡಬೇಡವೆಂದು ಒಂದು ಯಷ್ಟಿಯುಂ ತಂದು ಕೂರ್ಮಂಗೆಂದವೆಲೆ ಮಿತ್ರ ನೀನಾ ಯಷ್ಟಿಯಂ ನಡುವೆ ದೃಢವಾಗಿ ಕರ್ಚಿಕೊಂಡರಾವಿರ್ವರುಂ ಎರಡು ಕಡೆಯುಂ ಕಚ್ಚಿ ಪಿಡಿದು ಗಗನಾಂಗಣಕ್ಕೆ ನೆಗೆವೆವೆಂದು ಪೇಳಿ ಪಾರಲಾ ಮಧ್ಯಮಾರ್ಗದೊಳಾ ಸರಸ್ಸು ಸಮೀಪಮಾಗಲಾ ಸರಸ್ಸಿನ ಸಮೀಪದ ಪಟ್ಟಣದ ಜನರೆಲ್ಲರುಂ ಕಂಡು ಕಡು ವಿಸ್ಮಯದಿಂದೇನಪೂರ್ವಮೆಂಬ ಕಳಕಳಮಂ ಕೇಳ್ದಾ ಕೂರ್ಮಂ ತಾನಿದೇನಪೂರ್ವಂ ಕಳಕಳಮೆಂಬನಿತರೊಳ್ ಕೆಳಗೆ ಬಿಳ್ದು ಮಾಂಸಲುಬ್ಧರಾದ ಭಟರಿಂ ಕೊಲ್ಲಲ್ಪಟ್ಟುದು."

ದಾಕ್ಷಿಣಾತ್ಯ ಪಂಚತಂತ್ರ (ಪಂಕ್ತಿ ೫೫೬ ಆದಿ, ಪುಟ ೨೧)—"ಅಸ್ತಿ ಕಸ್ಮಿಂಶ್ಚಿತ್ ಸರಸಿ ಕಂಬುಗ್ರೀವೋ ನಾಮ ಕಚ್ಛಪಃ| ತಸ್ಯ ಚ ಸುಹೃದೌ ಸಕಂಟಕ—ವಿಕಂಟಕ—ನಾಮಾನೌ[3] ರಾಜಹಂಸೌ| ತೌ ಅನಾವೃಷ್ಟಿಪರಿಕ್ಷೀಣೌ ಅನ್ಯೋನ್ಯಮೂಚತುಃ| ಅನ್ಯಂ ಜಲಾಶಯಮಶೋಷಂ ಗಚ್ಛಾವಃ| ಕಿಂ ತು ಪ್ರಿಯಸುಹೃದಿ ಕಂಬುಗ್ರೀವೇ ಕಥ್ಯತಾಮಿತಿ| ಕಥಿತೇ ಚ ತೇನೋಕ್ತಂ[4]| ಯುವಾಂ ಪಕ್ಷಚಾರಿಣೌ| ಮಯಾ ದೇಶಾಂತರಂ ಕಥಂ ಗಂತವ್ಯಮಿತಿ| ತಾವೂಚತುಃ| ತ್ವಂ ತು ಯದಿ ಅಸ್ಮದ್ವಚನಾನ್ನ ಚಲಸಿ ತದಾ ತ್ವಾಂ ನಯಿಷ್ಯಾವಃ| ಮಾ

---

[2] ಆ ಗ್ರಂಥದ ಮುನ್ನುಡಿಯಲ್ಲಿ (ಪುಟ xxxiii) ಹರ್ಟೆಲ್‌ರವರು ದಾಕ್ಷಿಣಾತ್ಯ ಪಂಚತಂತ್ರ ಪಾಠದಲ್ಲಿ ನಾಲ್ಕು ಪ್ರಭೇದಗಳಿರುವುವೆಂದೂ ಈ ಪಾಠಭೇದಗಳಲ್ಲಿ ಪರಿಷ್ಕರಿಸಲು ಸಾಧ್ಯವೆಂದು ತಮಗೆ ಕಂಡುಬಂದ ಪಾಠವನ್ನು ೧೬ ಲಿಖಿತಪುಸ್ತಕಗಳ ಆಧಾರದ ಮೇಲೆ ತಾವು ಪರಿಷ್ಕರಿಸಿ ಮುದ್ರಿಸುತ್ತೇವೆಂದೂ ಹೇಳಿದ್ದಾರೆ. ಈ ಲಿಖಿತ ಪುಸ್ತಕಗಳನ್ನು ಅವರು A. B. C. ಎಂದು ಮೊದಲಾದ ಅಕ್ಷರಗಳಿಂದ ನಿರ್ದೇಶಿಸಿದ್ದಾರೆ. ಮುಂದೆ ೩೩೯-೩೪೨ ನೇ ಪುಟಗಳಲ್ಲಿನ ಟಿಪ್ಪಣಿಗಳಲ್ಲಿನ ಅಕ್ಷರಗಳು ಈ ಲಿಖಿತ ಪುಸ್ತಕಗಳನ್ನು ನಿರ್ದೇಶಿಸುವುವು.

[3] C. ವಿಕಟ ಸಂಕಟನಾಮಾನೌ.

[4] C. ಅಹಮಪ್ಯಾಗಚ್ಛಾಮೀತಿ ತೇನೋಕ್ತಂ.

ತ್ವಂ ನೀಯಮಾನಃ ಕಿಮಪಿ ವದ। ಇತ್ಯುಕ್ತ್ವಾ ಯಷ್ಟಿಮಾಸೀಯ ಆಗತ್ಯ ಇಮಾವುಪಿಕಲಾಂ ಯಷ್ಟಿಂ ದಶನೈರ್ಗೃಹಾಣ। ಆವಾಮಪಿ ಅಂತಯೋರ್ಗೃಹೀತ್ವಾ ಯಾಸ್ಯಾವಃ। ಏವಂ ಚ ಸಂವೃತ್ತೇ ಪ್ರತ್ಯಾಸನ್ನೇ ನಗರೇ ಅಪೂರ್ವಂ ದೃಷ್ಟ್ವಾ ಕಿಮಿತಿ ಕಲಕಲಃ ಕೃತಃ। ತಚ್ಛ್ರುತ್ವಾ ಸೋಽಬ್ರವೀತ್। ಕೋಽಯಂ ಕಲಕಲಃ। ಇತ್ಯುಚ್ಚರಮಾಣ ಏವ ಕಾಷ್ಠಾತ್ ಭ್ರಷ್ಟೋ ನಿಪತಿತೋ ಮಾಂಸಲುಬ್ಧೈಃ ವ್ಯಾಪಾದಿತಶ್ಚ ||"

(೨) "... ಕಳಿಸಲಂದು ಮೊದಲಾಗೊಂದು ಪ್ರಾಣಿಯಂ ಪ್ರತಿದಿಸಂ ಭಕ್ಷಿಸುತಿರ್ಪುದಾಸಂತರದೊಳೊಂದು ವೃದ್ಧಧೂರ್ತನಾದ ಮೊಲಸ ಬಾರಿದಿಸಂ ಬರಲಾ ಮೊಲಂ ಚಿಂತಿಸುತಕಟ ಕೆಟ್ಟೆಸಿದಕೂಂದುಪಾಯಾಂತರಮಂ ಚಿಂತಿಸುವೆನೆತಿಬುದ್ಧಿವಂತಂಗಶಕ್ಯವೇನದರಿಂದೀ ಸಿಂಹನನೊಂದು ಕಪಟೋಪಾಯದಿಂದ ಕೊಂದು ಮುಂದೆ ಸುಖದಿಂದಿರ್ಪೆನೆಂದು ನಿಶ್ಚಯಿಸಿ ಬಳಿಕಂ ಬಾರಿಯ ವೇಳೆಯನತಿಕ್ರಮಿಸಿ ಮೆಲ್ಲಮೆಲ್ಲನೈತರಲದಂ ಕ್ಷುತ್ಪೀಡಾಭಿಭೂತನಾದ ಸಿಂಹಂ ಕಡುಗೋಪದಿಂದೆಲವೋ ಮೊಲ ನೀನೇಕೆ ವಿಲಂಬಿಸಿ ಬಂದೆಯೆನೆ ಕೇಳಲೆ ಮೃಗರಾಜ ನಿನಗಾನಪರಾಧಿಯಲ್ಲ ಮಧ್ಯಮಾರ್ಗದೊಳ್ ಮತ್ತೊಂದು ಸಿಂಹಂ ಮೊಗಂದೆರದೆನ್ನಂ ನುಂಗಲೈತರಲದನತಿಪ್ರಯಾಸದಿಂ ತಪ್ಪಿಸಿಕೊಂಡು ಬಂದೆನೆನೆ ಕೇಳ್ದಾ ಸಿಂಹನಾ ದುರಾತ್ಮನೆಲ್ಲಿರ್ಪುದೆನೆ ದೇವ ನೀನತಿತ್ವರಿತದಿಂ ಬಂದೊಡೆ ತೋರುವೆನೆಂದೊಂದು ಕಡುಭಯಂಕರಮಾದ ಕೂಪದ ಸಮೀಪಕ್ಕೆ ಬಂದು ಸಿಂಹನಿಲ್ಲಿರ್ಪುದು ನೋಡೆಂದು ಪ್ರತಿಬಿಂಬಮಂ ತೋರಲದನತಿಕ್ರೋಧಪರವಶನಾದ ಹರ್ಯಕ್ಷನೀಕ್ಷಿಸಿ ತಾನದರ ಮೇಲೆರಗಿ ಪಂಚತ್ವವನೈದಿತದರಿಂದಂ ಪೇಳ್ವೆಂ ಬುದ್ಧಿವಂತನೆ ಬಲಯುತನೆನೆ ..."

ದಾ. ಪಂಚತಂತ್ರ (ಪಂಕ್ತಿ ೨೯೬ ಆದಿ, ಪು. ೧೩)—"... ತತಃ ಪ್ರಭೃತಿ ಪ್ರತಿದಿನಂ ತೈಃ ಪ್ರೇಷಿತಮೇಕೈಕಂ ಮೃಗಂ ಭಕ್ಷಯನ್ ಸ್ಥಿತಃ। ಅಥ ಕದಾಚಿತ್ ಧೂರ್ತಶಶಕಸ್ಯ[5] ವಾರ ಆಯಾತಃ। ಸೋಽಚಿಂತಯತ್। ಮೃತೋಽಹಂ। ಕಿಂ ಕರೋಮಿ। ಕ್ವ ಯಾಸ್ಯಾಮಿ। ಯದ್ವಾ ಯೇನ ಜೀವಾಮಿ ತಮುಪಾಯಂ ಚಿಂತಯಾಮಿ। ಕಿಮಶಕ್ಯಂ ಬುದ್ಧಿಮತಾಂ। ಅತಃ ಸಿಂಹಮೇವ ಉಪಾಯಾಂತರೇಣ ವ್ಯಾಪಾದಯಾಮೀತಿ। ತತೋ ವೇಲಾತಿಕ್ರಮಂ ಕೃತ್ವಾ ಕಥಂಚಿತ್ ಮಂದಂ ಮಂದಂ ಅಗಚ್ಛತ್। ಸಿಂಹೋಽಪಿ ಕ್ಷುತ್ಪಿಪಾಸಾಭಿಭೂತಃ ಕ್ರೋಧಾದುವಾಚ। ಕುತಸ್ತ್ವಂ ವಿಲಂಬ್ಯಾಗತಃ। ಸೋಽಬ್ರವೀತ್। ನಾಹಮಪರಾದ್ಧಃ। ಪಥಿ ಸಿಂಹಾಂತರೇಣ ಸಂರುಧ್ಯ ಭಕ್ಷಿತುಮುಪಕ್ರಾಂತಃ। ತಸ್ಮಾತ್ ಕಥಮಪಿ ಪಲಾಯ್ಯ ಆಗತೋಽಸ್ಮಿ। ಸಿಂಹ ಆಹ। ಕ್ವಾಸೌ ದುರಾತ್ಮಾ। ಸ ಆಹ। ತ್ವರಿತಮಾಗಚ್ಛ ಸ್ವಾಮಿನ್ ತಂ ದರ್ಶಯಾಮೀತಿ। ತತಸ್ತಂ ಗೃಹೀತ್ವಾ ಅತೀವನಿರ್ಮಲಜಲಪೂರ್ಣಕೂಪಂ ಗತಃ। ತತ್ರ ಪಶ್ಯೇತಿ ತಸ್ಯ ಪ್ರತಿಬಿಂಬಂ ದರ್ಶಯಾಮಾಸ। ಸ ಚಾತಿಕೋಪವಶಾತ್ ಆತ್ಮನಃ ಪ್ರತಿಬಿಂಬಂ ದೃಷ್ಟ್ವಾ ಸಿಂಹಾಂತರಭ್ರಾಂತ್ಯಾ ಜಲೇ ತಸ್ಯೋಪರಿ ನಿಪತ್ಯ ಪಂಚತ್ವಮುಪಗತಃ। ಅತೋಽಹಂ ಬ್ರವೀಮಿ। ಬುದ್ಧಿರ್ಯಸ್ಯ ಬಲಂ ತಸ್ಯೇತಿ।"

(೩) "ಕರಟಕಂ ಪೇಳ್ದುದು ನೀನೀ ಸೇವಾಧರ್ಮಮನೆಂತರಿವೆಯೆನೆ ದಮನಕನೆಂದುದು. ಈ ಸೇವಾಧರ್ಮಮೆಂಬುದೇನದೆ ಸಕಲಾನುಜೀವಿಧರ್ಮಮುಮನಾನರಿಯದುದಲ್ಲ. ಕಂದ || ಅತಿ ಭಾರಮೇಂ ಸಮರ್ಥಂ ಗತಿದೂರಮದೇಂ ಮಹೋದ್ಯಮಂಗೆ ಸುವಿದ್ಯಂ। ಗತುಲ ವಿದೇಶಮದಾವುದು ಸತತಂ ಪ್ರಿಯವಾದಿಗಾಗದಿರ್ಪವನಾವಂ || ಎನೆ ಕರಟಕಂ ಪೇಳ್ದುದು ಕೇಳ್ದಮನಕ ನೀನಪ್ರಸ್ತಾವದೊಳ್ ಪ್ರವೇಶಿಸಲಾವೇಳೆಯೊಳೊಡೆಯನನಾದರಂಗೈಯದಿರನೆನೆ ದಮನಕನೆಂದುದು ನೀಂ ಪೇಳ್ದುದು ಸತ್ಯಮಪ್ಪುದಂತಾದೊಡಂ ಭೃತ್ಯನವಮಾನಮುಮಂ ಸೈರಿಸಿ ಸ್ವಾಮಿ ಸಮೀಪವ ಸೇರಿ ಸೇವಿಸಲ್ವೇಕು ಅದೇಕೆನೆ || ಕಂದ || ಅರಸಂ ಹತ್ತಿರ ಸೇರಿದ ನರಸಂ ತನ್ನ ಕೈವಿಡಿದವನೆನಿತು ಗುಣಮಿಲ್ಲದೊಡಂ। ದೊರೆಯುಂ ಸತಿಯುಂ ಲತೆಯುಂ

[5] B. ಧೂರ್ತವೃದ್ಧಶಶಸ್ಯ.

ಪೊರೆಯಲ್ಲಿರ್ದುದನೆ ಪರಿವೇಷ್ಟಿಸುವರ್ || ಕೋಪಪ್ರಸಾದದೊಳವಂ ಭೂಪನೊಳಡಿಗಡಿಗೆ ನೋಡಿ ನಡೆವ ಮನುಷ್ಯಂ| ಭೂಪಂ ಕೈಕೊಡಹಲ್ಬಿಡದೇ ಪೊತ್ತುಂ ಕಾದು ಪಡೆಯಬೇಕವ ನೊಲವಂ || ವಚನ || ಎನಲಾ ಕರಟಕನೆಂದುದು ಇಂದು ನೀನೊಡೆಯನೆಡೆಗೆ ಪೋಗಿ ಪೇಳ್ವು ದೇನೆನೆ ದಮನಕನೆಂದುದು || ಕಂದ || ಉತ್ತರದ ಮೇಲಣೊಳ್ನುಡಿಯುತ್ತರದಿಂದೊಗೆವುದೆಂಬುದೆ ಸಿದ್ಧಾಂತಂ| ಸುತ್ತಲ್ಮಳೆಯೊಡಗೂಡಿದ ಬಿತ್ತಿಂ ಮತ್ತೊಂದು ಬಿತ್ತು ಮೊಳೆದೂರುವವೊಲ್ || ಮುನ್ನಮುಪಾಯದೆ ಪುಟ್ಟುವ ತನ್ನೆಡರನುಪಾಯದಿಂದೊಗೆವ ಸಿದ್ಧಿಯಸುಂ| ಸನ್ನೀತಿ ವಿಧಿ ಯರಿದ ಬುಧರನ್ನಂ ಮುಂದಿರಿಸಿ ತಂದೆಮಗೆ ತೋರಿಸುವಂ || ವಚನ || ಅದರಿಂದೀಗಲಾನನಾಗತ ಕಾಲವಚನಮುಮಂ ಪೇಳ್ವುದುಚಿತಮಲ್ಲ || ಕಂದ || ಅಪ್ರಾಪ್ತಕಾಲವಚನವನಪ್ರಸ್ತುತದಲ್ಲಿ ಪೇಳೆ ಸುರಗುರುವುಂ| ತಾಂ ಪ್ರತಿಭಾದೋಷವನುಂ ಕ್ಷಿಪ್ರದೊಳವಮಾನವನುಮವಶ್ಯಂ ಪಡೆವಂ || ಪರಿಪಕ್ವೇಂದ್ರಿಯನೊಳ್ ಬಂಧುರ ಗುಣನೊಳ್ ದೇಶ ಕಾಲವರಿದುಚಿತಜ್ಞಂ| ನಿರವಿಪ ಕಜ್ಜಂ ಸುಮನೋಹರಮುಕ್ಕುಂ ಪೇಳ್ವ ನುಡಿಯದೆಲ್ಲಂ ಸಫಲಂ || ವೃತ್ತಿಯದೇತರಿನ ಪ್ಪುದು ಸತ್ತ್ರಮರಿಂದಾವ ಗುಣದೆ ಪೊಗಳಿಸಿಕೊಂಬಂ| ಮತ್ತಾ ಗುಣವನೆ ವರ್ಧಿಪುದುತ್ತಮನಾ ಗುಣವನೊಲ್ದು ರಕ್ಷಿಪುದುಚಿತಂ || ಅದಂ ಕರಟಕಂ ಕೇಳ್ದು || ಅರಸುಗಳ್ ದುರಾರಾಧ್ಯರದ್ರಿ ಯಂತೆ ಪ್ರಕೃತಿವಿಷಮರ್ ಛಲಗ್ರಾಹಿಗಳೆನೆ ದಮನಕನೆಂದುದು . . ."

ದಾ. ಪಂಚತಂತ್ರ (ಪಂಕ್ತಿ ೧೧೬ ಆದಿ, ಪುಟ ೭)—" ಕರಟಕಃ| ಭದ್ರ| ತ್ವಂ ಸೇವಾನ ಭಿಜ್ಞಃ| ದಮನಕಃ| ಭದ್ರ| ಕಥಮಹಂ ಸೇವಾನಭಿಜ್ಞಃ| ನನುಮಯಾ ಸಕಲಾನುಜೀವಿ ಧರ್ಮೋಽ ಜ್ಞಾತಃ| ಉಕ್ತಂ ಚ|

ಕೋಽತಿಭಾರಃ ಸಮರ್ಥಾನಾಂ ಕಿಂ ದೂರಂ ವ್ಯವಸಾಯಿನಾಂ|
ಕೋ ವಿದೇಶಃ ಸುವಿದ್ಯಾನಾಂ ಕಃ ಪರಃ ಪ್ರಿಯವಾದಿನಾಂ||

ಕರಟಕಃ| ಕದಾಚಿತ್ ತ್ವಾಂ ಅನವಸರ ಪ್ರವೇಶಾತ್ ಅವಮನ್ಯತೇ ಸ್ವಾಮೀ| ಸೋಽಬ್ರವೀತ್| ಅಸ್ತ್ವೇವಂ| ತಥಾಪಿ ಅವಶ್ಯಮನುಜೀವಿನಾಂ ಸಾನ್ನಿಧ್ಯಂ ಕರಣೀಯಂ| ಉಕ್ತಂ ಚ|

ಆಸನ್ನಮೇವ ನೃಪತಿರ್ಭಜತೇ ಮನುಷ್ಯಂ|
ವಿದ್ಯಾವಿಹೀನಮಕುಲೀನಮಪಂಡಿತಂ ವಾ|
ಪ್ರಾಯೇಣ ಭೂಮಿಪತಯಃ ಪ್ರಮದಾ ಲತಾಶ್ಚ|
ಯಃ ಪಾರ್ಶ್ವತೋ ವಸತಿ ತಂ ಪರಿವೇಷ್ಟಯಂತಿ || ೨೧ ||

ಕೋಪಪ್ರಸಾದ ವಸ್ತೂನಿ ವಿಚಿನ್ವಂತಃ ಪದೇ ಪದೇ|
ಆರೋಹಂತಿ ಶನೈರ್ಭೃತ್ಯಾ ಧುನ್ವಂತಂ ಪಾರ್ಥಿವದ್ರುಮಂ[6] || ೨೨ ||

ಕರಟಕಃ| ಅಥ ಭವಾಂಸ್ತತ್ರ ಕಿಂ ವಕ್ಷ್ಯತಿ| ಸೋಽಬ್ರವೀತ್|

ಉತ್ತರಾದುತ್ತರಂ ವಾಕ್ಯಮುತ್ತರಾದೇವ ಜಾಯತೇ|
ಸುವೃಷ್ಟಿಗುಣಸಂಪರ್ಕಾತ್ ಬೀಜಾದ್ಬೀಜಮಿವಾಪರಂ || ೨೩ ||

ಕಿಂ ಚ|

*ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ ನ ಬ್ರೂಯಾತ್ ಸತ್ಯಮಪ್ರಿಯಂ|
ಪ್ರಿಯಂ ಚ ನಾನೃತಂ ಬ್ರೂಯಾದೇಷಧರ್ಮಃ ಸನಾತನಃ || ೨೪ ||

ಕರಟಕಃ| ದುರಾರಾಧ್ಯಾ ನೃಪಾಃ ಪರ್ವತಾ ಇವಾಜಸ್ರಂ ಪ್ರಕೃತಿವಿಷಮಾ ಹರಿಣಾ ಇವ ಚಾಪಲಗ್ರಾಹಿಣಶ್ಚ| ದಮನಕಃ| ಏವಮೇತತ್| ತಥಾಹಿ|

---

[6] NABC-" ಧುನ್ವಂತಮಪಿ ಪಾರ್ಥಿವಂ " ಎಂದು ನಾಲ್ಕನೇ ಪಾದದಲ್ಲಿರುವ ಪಾಠ.

ಯಸ್ಯ ಯಸ್ಯ ಹಿ ಯೋ ಭಾವಸ್ತೇನ ತೇನ ಹಿ ತಂ ನರಂ
ಅನುಪ್ರವಿಶ್ಯ ಮೇಧಾವೀ ಕ್ಷಿಪ್ರಮಾತ್ಮವಶಂ ನಯೇತ್ || ೨೫ ||

ಲುಬ್ಧಮರ್ಥೇನ ಗೃಹ್ಣೀಯಾತ್ ಸ್ತಬ್ಧಮಂಜಲಿಕರ್ಮಣಾ |
ಮೂರ್ಖಂ ಛಂದಾನುವೃತ್ತ್ಯಾ ಚ ಯಥಾತಥ್ಯೇನ ಪಂಡಿತಂ* || ೨೬ ||

ಅಪಾಯ ಸಂದರ್ಶನಜಾಂ ವಿಪತ್ತಿಂ
ಉಪಾಯ ಸಂದರ್ಶನಜಾಂ ಚ ಸಿದ್ಧಿಂ |
ಮೇಧಾವಿನೋ ನೀತಿಪದಪ್ರಯುಕ್ತಾಃ
ಪುರಃ ಸ್ಫುರಂತೀಮಿವ ದರ್ಶಯಂತಿ || ೨೭ ||

ನ ಚಾಹಂ ಅಪ್ರಾಪ್ತಕಾಲೇ ವಕ್ಷ್ಯಾಮಿ | ತಥಾ ಹಿ |

ಅಪ್ರಾಪ್ತಕಾಲೇ ವಚನಂ ಬೃಹಸ್ಪತಿರಪಿ ಬ್ರುವನ್ |
ಲಭತೇ ಬುದ್ಧ್ಯವಜ್ಞಾನಂ ಅವಮಾನಂ ಚ ತತ್ಕ್ಷಣಂ || ೨೮ ||

ನಾದೇಶೇ ನಾಕಾಲೇ ನಾಪರಿಪಕ್ವೇಂದ್ರಿಯೇ ನ ಗುಣಹೀನೇ |
ಕಥಯತಿ ಕಥಾಂ ಹಿ ತಜ್ಜ್ಞೋ ನ ಚ ತಸ್ಯ ಕಥಾ ಭವತಿ ವಂಧ್ಯಾ || ೨೯ ||

ಅಪಿ ಚ |

ಕಲ್ಪಯತಿ ಯೇನ ವೃತ್ತಿಂ ಲೋಕೇ ಯೇನ ಪ್ರಶಸ್ಯತೇ ಸದ್ಭಿಃ |
ಸ ಗುಣಸ್ತೇನ ಗುಣವತಾ ವಿವರ್ಧನೀಯಶ್ಚ ರಕ್ಷಣೀಯಶ್ಚ || ೩೦ ||"

(೪) "ಅತಿ ದೃಢಸಂಧಾನದೊಳಂ ಪಕ್ಷಿ (Read ಶತ್ರು)ಗಳೊಡನೆ ಸಂಧಿಯೆಂಬುದೆ ಸಲ್ಲಂ | ಸತತಂ ಕುದಿದೊಡಮುದಕಂ ಹುತವಹನೊಳ್ ಪೊಯ್ದಡದನದಂ ತಗ್ಗಿಸದೆ || ಆವುದಶಕ್ಯಮಶಕ್ಯಮದಾವಗಮುಂ ಶಕ್ಯಮಾದುದೆ ಸಲೆ ಶಕ್ಯಂ | ನಾವೆ ನೆಲನಲ್ಲಿ ನಡೆಯದು ತೀವಿದಾ ಬಂಡಿ ಜಲದೊಳೇಂ ನಡೆದಪುದೇ || ಖಳನೊಳುಪಕರಿಸಲಂತದು ಫಲಿಯಿಸದು ಮಿತ್ರನೆಂಬುದಾಶಾಮಾತ್ರಂ | ಸಲೆ ಮಿತ್ರನೆಂಬ ನುಡಿ ಕೇವಲ ಶಾಸ್ತ್ರಂ ಧನನಿಬಂಧನಂ ಜನವೆಲ್ಲಂ || ಹಿತಮನೆಸಗಿದೊಡಮಾಪಚ್ಛತದಿಂ ಸಲಹಿದೊಡಮಿಷ್ಟಶಿಷ್ಟನುಮಾಗಿ |ರ್ದತಿ ಖಳನೆಸಗಂ ಲೇಸಂ ಸತತಂ ತೊಡೆಯೊಳ್ಮಲಂಗಿದುರಗನ ತೆರದಿಂ || ಮಹದುಪಕಾರವನೆಸಗಿಯುಮಹಿತನೊಳಂ ಕುಹಕಬುದ್ಧಿಯಾದಬಲೆಯೊಳಂ | ಬಹುನಂಬಿಗೆನೆತ್ತಮಸಿಸೆ ಮಹಿಯೊಳ್ ಜೀವಿಪ್ಪುದದೇಂ ಘುಣಾಕ್ಷರಮಲ್ತೆ || ಒರ್ಮೆ ವಿರೋಧವನೆಸಗಿದ ದುರ್ಮಿತ್ರನ ಮರಳಿ ನಂಬಿ ನಡೆವ ಮನುಷ್ಯಂ | ನಿರ್ಮಲನಪ್ಪವನಿಳೆಯೊಳ್ ಪೆರ್ಮೆಗೆ ಪೊಡೆದಾ ತಪ್ಪಿಲ್ಲೆನ್ನೊಳೆನುತ್ತಂ || ಖಳರಪ್ಪವರೊಳ್ ಕೆಳೆಯನೆಸಗಲಾಗದು ತನ್ನೊಳ್ ತಪ್ಪಿಲ್ಲದೊಡೇಂ | ಖಳರಿಂ ತಪ್ಪದು ಭಯಮಮಲಮತಿಗಂ ಭೂತಳದೊಳ್",

ದಾ. ಪಂಚತಂತ್ರ (ಪಂಕ್ತಿ ೮೩೭ ಆದಿ, ಪುಟ ೩೧)—

"ಶತ್ರುಣಾ ನ ಹಿ ಸಂದಧ್ಯಾತ್ ಸುಶ್ಲಿಷ್ಟೇನಾಪಿ ಸಂಧಿನಾ |
ಸುತಪ್ತಮಪಿ ಪಾನೀಯಂ ಶಮಯತ್ಯೇವ ಪಾವಕಂ || ೧೩ ||

ಸಾಮವಾದಾಃ ಸಕೋಪಸ್ಯ ತಸ್ಯ ಪ್ರತ್ಯುತ ದೀಪಕಾಃ |
ಪ್ರತಪ್ತಸ್ಯೇವ ಸಹಸಾ ಸರ್ಪಿಷಸ್ತೋಯಬಿಂದವಃ || ೧೪ ||[7]

ಯದಶಕ್ಯಂ ನ ತಚ್ಛಕ್ಯಂ ಯಚ್ಛಕ್ಯಂ ಶಕ್ಯಮೇವ ತತ್ |
ನೋದಕೇ ಶಕಟಂ ಯಾತಿ ನ ನೌರ್ಗಚ್ಛತಿ ಸ್ಥಲೇ || ೧೫ ||

---

*—* ಈ ಗುರುತುಗಳ ಮಧ್ಯದಲ್ಲಿರುವ ಭಾಗವು NABC ಯಲ್ಲಿಲ್ಲ. ಈ ಭಾಗವು ಕಾಶ್ಮೀರ ಪಂಚತಂತ್ರದಲ್ಲಿಯೂ ಇಲ್ಲ '. . . ವಿವರ್ಧನೀಯಶ್ಚ ರಕ್ಷಣೀಯಶ್ಚ' ಎಂಬ ೩೦ ನೇ ಶ್ಲೋಕದ ನಾಲ್ಕನೇ ಪಾದವು ಅಲ್ಲಿ 'ವಿವರ್ಧನೀಯಶ್ಚ ರಕ್ಷ್ಯಶ್ಚ ಎಂದಿರುವುದು. ಮತ್ತು ತದನಂತರ— ಕರಟಕಃ | ದುರಾರೋಹಾಶ್ಚ ನರಪತಯಃ ಪರ್ವತಾ ಇವಾಜಸ್ರಂ ಪ್ರಕೃತಿ ವಿಷಮಾ ರಂಧ್ರಾನ್ವೇಷಿಣಶ್ಚಲಗ್ರಾಹಿಣಶ್ಚ' ಎಂದಿರುವುದು.

[7] ಈ ಶ್ಲೋಕವು NA ಪುಸ್ತಕಗಳಲ್ಲಿಲ್ಲ.

ಅಪಿ ಚ |

ಸುಹೃದಯಮಿತಿ ದುರ್ಜನೇಪಿ ಕಾಶಾ
ಬಹುಕೃತಮತ್ರ ಮಮೈವ ಮುಕ್ತಮೇತತ್ |
ಸುಜನ ಇತಿ ಪುರಾಣ ಏಷ ಶಬ್ದೋ
ಧನಲವಮಾತ್ರನಿಬಂಧನೋಽದ್ಯ ಲೋಕೇ || ೧೬ ||

ಇಷ್ಟೋ ವಾ ಬಹು ಸುಕೃತೋಪಲಾಲಿತೋ ವಾ
ಶಿಷ್ಟೋ ವಾ ವ್ಯಸನಶತಾಭಿರಕ್ಷಿತೋ ವಾ |
ದೌಶ್ಶೀಲ್ಯಾತ್ ಜನಯತಿ ನೈವ ಜಾತ್ವಸಾಧುಃ
ವಿಸ್ರಂಭಂ ಭುಜಗ ಇವಾಂಕಮಧ್ಯಸುಪ್ತಃ || ೧೭ ||

ಮಹತಾಪ್ಯರ್ಥಸಾರೇಣ ಯೋ ವಿಶ್ವಸಿತಿ ಶತ್ರುಷು |
ಭಾರ್ಯಾಸು ಸವಿಕಾರಾಸು ತದಂತಂ ತಸ್ಯ ಜೀವಿತಂ || ೧೮ ||

ಸಕೃದ್ದುಷ್ಟಂ ತು ಯೋ ಮಿತ್ರಂ ಪುನಃ ಸಂಧಾತುಮಿಚ್ಛತಿ |
ಸ ಮೃತ್ಯುಮುಪಗೃಹ್ಣಾತಿ ಗರ್ಭಮಶ್ವತರೀ ಯಥಾ || ೧೯ ||

ಅಪರಾಧೋ ನ ಮೇಽಸ್ತೀತಿ ನೈತತ್ ವಿಶ್ವಾಸಕಾರಣಂ |
ವಿದ್ಯತೇ ಹಿ ನೃಶಂಸೇಭ್ಯೋ ಭಯಂ ಮತಿಮತಾಮಪಿ" || ೨೦ ||

ಮೇಲೆ ನಾವು ಉದ್ಧರಿಸಿರುವ ಭಾಗಗಳಿಂದ ಶಂಕರಕವಿಯು ಮೂಲಸಂಸ್ಕೃತದ ಪದ್ಯಗಳನ್ನು ಪದ್ಯಗಳಲ್ಲಿಯೂ ಗದ್ಯಭಾಗಗಳನ್ನು ಗದ್ಯದಲ್ಲಿಯೂ ಯಥಾವತ್ತಾಗಿ ಕನ್ನಡಕ್ಕೆ ಅನುವಾದಿಸಿದ್ದಾನೆಂದು ಸ್ಪಷ್ಟವಾಗುವುದಷ್ಟೆ. ಆದರೆ ಸಂಸ್ಕೃತಮೂಲದಲ್ಲಿ (ಎಂದರೆ ಮುದ್ರಿತ ಪಾಠದಲ್ಲಿ ಮತ್ತು ಮುದ್ರಿತ ಪುಸ್ತಕದಲ್ಲಿ ತೋರಿಸಿರುವ ಪಾಠಾಂತರಗಳಲ್ಲಿ) ಇಲ್ಲದಿರುವ ವಾಕ್ಯಗಳೂ ಪದ್ಯಗಳೂ ಈ ಕನ್ನಡ ಪಂಚತಂತ್ರದಲ್ಲಿ ಅಲ್ಲಲ್ಲಿ ಕಂಡುಬರುವುವು. ಉದಾಹರಣೆಗಾಗಿ—

1. "ಪಾಟಲಿಪುತ್ರ"ವೆಂಬ ಪದದ ಹಿಂದೆ "ಸಕಲದೇವತಾಧಿಷ್ಠಾನಂ ನಿಖಿಲಗುಣಗಣಾನ್ವಿತ ವಿವಿಧ ಬುಧಜನಾಶ್ರಯಂ ಸಂಚರಚ್ಚಂಚಲಾಕ್ಷೀ ಚರಣಾಲಕ್ತಕ ಪಾಟಲಿತರಾಜಪಥಂ" ಎಂಬ ಮೂರು ವಿಶೇಷಣಗಳಿರುವುವು. ಇವುಗಳಲ್ಲಿ ಮೂರನೆಯ ವಿಶೇಷಣಕ್ಕೆ ಸಂವಾದಿಯಾದ ಪದಗಳು ಸಂಸ್ಕೃತ ಮೂಲದಲ್ಲಿಲ್ಲ.

2. "ನೀತಿ ಚತುರತೆ ವಿವೇಕ
ಖ್ಯಾತಿ ಕಲೌದಾರ್ಯ ಧೈರ್ಯ ಶೌರ್ಯ ಸುವಿದ್ಯಾ |
ಪ್ರೀತಿ ಪರಹಿತಗುಣಂಗಳ್
ಸಾತಿಶಯಂ ಪೆರ್ಚಿ ಮೆರೆವುವವನಾಳ್ವಿಳೆಯೊಳ್ ||
ಕಳವು ಕೊಲೆ ಪಾದರಂ ತ
ಳವಾರಡಿ ತಗಹು ಕೋಪ ತಳ್ಕಂಕೆವಳಲ್ |
ಮುಳಿಸು ಮೊರೆ ಮೋಸಮೆಂಬಿವು
ಮೊಳೆದೋರವು ತನ್ನೃಪಾಲನವನೀತಳದೊಳ್ ||"

ಎಂಬ ಪದ್ಯಗಳು ಸುದರ್ಶನನು ಆಳುತ್ತಿದ್ದ ರಾಜ್ಯದ ವರ್ಣನೆಯಲ್ಲಿ ಬಂದಿವೆ. ಈ ಪದ್ಯಗಳಿಗೆ ಸಂವಾದಿಯಾದ ಗ್ರಂಥವು ಮೂಲದಲ್ಲಿಲ್ಲ.

3. "ಕಮಲ ಕಹ್ಲಾರ ಕುಮುದ ಸುಮನೋಹರಮಾದ ಯಮುನಾತಟಮಂ" ಎಂದು ಯಮುನಾ ತಟಕ್ಕೆ ಹೇಳಿರುವ ವಿಶೇಷಣವು ಮೂಲದಲ್ಲಿಲ್ಲ.

4. ಪಿಂಗಳಕನು ಯಮುನಾ ತಟಕ್ಕೆ ಹೋದನೆಂದು ಹೇಳಿದನಂತರ "ಕೈಲಾಸ ಶೈಲ ಶಿಖರದೊಳ್ ದಕ್ಷಾರಿಮಹೋಕ್ಷಮೆಂತಂತೆ ಚಂದ್ರಿಕಾಧವಳಸಾಂದ್ರನಿಜದೇಹಪ್ರಭೆ

ಯಿಂದಾ ನದೀತಟವನಲಕ್ಷ್ಮಿಗೆ ಶ್ರೀಚಂದನಾನುಲೇಪನಂಗೈದಂ | ತಾಂ ಸಂಜೀವಕನುದಿತ ಮದಾತಿಶಯದಿಂ ತಟನಿಕಟ ವಿಕಟಗಿರಿ ಗುಹಾನಿಬದ್ಧ ಪ್ರತಿಧ್ವನಿ ದೀರ್ಘಮತಿ ಭಯಂಕರಮಾದ ನಿನಾದದಿಂ ದ್ಯಾವಾಭೂಮಿಗಳಾವಗಂ ಕಂಪಿಸುವಂತೆ ಗರ್ಜನಂಗೈಯಲ್ " ಎಂಬ ವಾಕ್ಯಕ್ಕೆ ಸಂವಾದಿಯಾದ ಪದಗಳು ಮೂಲದಲ್ಲಿಲ್ಲ. ಶಂಕರಕವಿಗೆ ಆಕರವಾದ ಪುಸ್ತಕದಲ್ಲಿ ಈ ಹೊಸ ಅಂಶಗಳು ಇದ್ದುವೋ ಏನೋ ! ಒಟ್ಟಿನಲ್ಲಿ ಶಂಕರಕವಿಯು ತಾನು ಕೈಕೊಂಡ ಅನುವಾದ ಕಾರ್ಯವನ್ನು ಚೆನ್ನಾಗಿಯೇ ನಿರ್ವಹಿಸಿರುವನೆಂದು ನಾವು ಹೇಳಬಹುದು. ಈತನ ಭಾಷೆಯು ಪಂಡಿತರಿಗೆ ಮಾತ್ರವಲ್ಲದೆ ಸಾಮಾನ್ಯ ಜನರಿಗೂ ಪ್ರಿಯವಾಗುವಷ್ಟು ಸರಳವಾಗಿದೆ.

ನಮಗೆ ದೊರೆತಿರುವ ಅಸಮಗ್ರಗ್ರಂಥದಲ್ಲಿ ಕವಿಯ ಕುಲ ಕಾಲಗಳ ವಿಷಯವಾಗಿ ಏನೂ ಹೇಳಲ್ಪಟ್ಟಿಲ್ಲ. ಗ್ರಂಥಾರಂಭ ಪದ್ಯಗಳಲ್ಲಾದರೆ ಸಚ್ಚಿದಾನಂದಮುನಿ ಮತ್ತು ಕವಿಜನಶೇಖರ ತಿರುಮಲೇಂದ್ರರು ಸ್ತುತರಾಗಿರುವರಲ್ಲದೆ, ತುಂಗಭದ್ರಾನದಿಯ, ಕಲಶ, ಬಿದ್ರೆ ಎಂಬ ಊರುಗಳ, ಕಲಶದ ಕಲಶೇಶ್ವರದೇವರ, ಬಿದ್ರೆಯ ವಿಷ್ಣುದೇವರ ಮತ್ತು ಮಲ್ಲಿಕಾರ್ಜುನದೇವರ (೨ ನೇ ತಂತ್ರದ ಅಂತ್ಯ ಪದ್ಯ) ಪ್ರಸ್ತಾವವಿರುವುದು. ಬಿದ್ರೆ (ಬಿದುರೆ) ಅಥವಾ ಬಿದಿರೂರು (ಬಿದನೂರು) ಕ್ರಿ.ಶ. ಸುಮಾರು ೧೬೫೦ ರಲ್ಲಿ ಕೆಳದಿಯ ನಾಯಕರ ರಾಜಧಾನಿಯಾಗಿ ಪ್ರಸಿದ್ಧಿಯನ್ನೈದಿತು. ಕಲಶವೂ ಕೂಡ ಸುಮಾರು ಅದೇ ಕಾಲದಲ್ಲಿ ಕಾರ್ಕಳದ ಭೈರಸವೊಡೆಯರ ರಾಜಧಾನಿಯಾಗಿತ್ತು. ಅಲ್ಲಿರುವ ಕಲಶೇಶ್ವರ ದೇವಾಲಯವು ಸುಮಾರಾಗಿ ದೊಡ್ಡದಾಗಿದೆ. ಆ ಊರಿಗೆ ಪಶ್ಚಿಮದಲ್ಲಿ ಸುಮಾರು ಎಂಟುಮೈಲಿ ದೂರದಲ್ಲಿ ಭದ್ರಾನದಿಯು ಹುಟ್ಟಿ ಊರಬಳಿಯಿಂದಲೇ ಹರಿದು ಹೋಗುವುದು.

ಸಚ್ಚಿದಾನಂದ [ಭಾರತಿ] ಎಂಬ ಹೆಸರಿನ ಇಬ್ಬರು ಗುರುಗಳು ಕ್ರಿ.ಶ. ೧೬೨೦-೧೭೨೦ ರಲ್ಲಿ ಶೃಂಗೇರಿ ಪೀಠದಲ್ಲಿದ್ದರೆಂದು ಆ ಮಠದ ಗುರುಪರಂಪರೆಯನ್ನು ವರ್ಣಿಸುವ ಗುರುವಂಶ ಮಹಾಕಾವ್ಯವೆಂಬ ಗ್ರಂಥದಿಂದ ತಿಳಿದುಬರುವುದು (ಮೈಸೂರು ಶಾಸನ ಇಲಾಖೆಯ ೧೯೨೮ ನೇ ವರ್ಷದ ವರದಿಯ ೧೫ ಆದಿ ಪುಟಗಳನ್ನು ನೋಡಿ). ಒಬ್ಬನು ಅಭಿನವನೃಸಿಂಹ ಭಾರತಿಯ ಶಿಷ್ಯನು ; ಕ್ರಿ.ಶ. ೧೬೨೯-೪೫ ರಾಜ್ಯಭಾರಮಾಡಿದ ಕೆಳದಿಯ ವೀರಭದ್ರ ನಾಯಕನಿಂದಲೂ ಅವನ ನಂತರ ೧೬೬೦ ರ ವರೆಗೆ ರಾಜ್ಯವಾಳಿದ ಶಿವಪ್ಪನಾಯಕನಿಂದಲೂ ಈ ಗುರುವು ಮಾನಿತ ನಾಗಿದ್ದನು. ಇವನ ಶಿಷ್ಯನು ನೃಸಿಂಹಭಾರತಿ ; ಈತನ ಶಿಷ್ಯನಾದ (೨ ನೇ) ಸಚ್ಚಿದಾನಂದ ಭಾರತಿಯು ಕ್ರಿ.ಶ. ೧೭೦೫ ರಲ್ಲಿ ಪೀಠಕ್ಕೆ ಬಂದನು. ಆ ಕಾಲದಲ್ಲಿ (ಕ್ರಿ.ಶ. ೧೬೯೭-೧೭೧೪) ಕೆಳದಿಯ ರಾಜ್ಯವಾಳುತ್ತಿದ್ದ ಬಸವನಾಯಕನಿಂದ ಇವನು ಮಾನಿತನಾಗಿದ್ದನು.

ತೀರ್ಥಹಳ್ಳಿ ತಾಲ್ಲೋಕಿನಲ್ಲಿರುವ ಮುಳುವಾಗಿಲ್ ಊರಿನ ಸ್ಮಾರ್ತಮಠದ ಗುರುಪೀಠ ದಲ್ಲಿಯೂ ಕೂಡ ಕ್ರಿ.ಶ. ಹದಿನೇಳನೇ ಶತಮಾನದಲ್ಲಿ (ಸುಮಾರು ೧೬೩೦ ರಲ್ಲಿ) ಸಚ್ಚಿದಾನಂದ ಎಂಬ ಹೆಸರಿನ ಗುರುವಿದ್ದನೆಂದು ಮೈಸೂರು ಶಾಸನದ ಇಲಾಖೆಯ ೧೯೧೯ ನೇ ವರ್ಷದ ವರದಿ ಯಿಂದ (ಪುಟ ೩೭) ತಿಳಿದುಬರುವುದು. ಈಗುರುವಿನ ಶಿಷ್ಯನಾದ ಅಗ್ನಿ ಮೂರ್ಧ—ಕೃಷ್ಣಾನಂದ ಸ್ವಾಮಿಗೆ ಆರವೀಟಿವಂಶದ (೨ ನೇ) ಶ್ರೀರಂಗರಾಯನು (ಶಕ ೧೫೪೨ ನೆಯ) ಶಾರ್ವರಿ ಸಂವತ್ಸರದ ಪುಷ್ಯ ಅಮಾವಾಸ್ಯೆ ಅರ್ಧೋದಯ ಯೋಗದ ದಿವಸ (ಎಂದರೆ ಕ್ರಿ.ಶ. ೧೬೬೧ ನೇ ಜನವರಿ ೨೦ ನೇ ತಾರೀಖು ಆದಿತ್ಯವಾರದಂದು) ಒಂದು ದತ್ತಿಯನ್ನು ಕೊಟ್ಟನೆಂದು ಹೇಳುವ ತಾಮ್ರಪಟದ ಸಾರವು ಅಲ್ಲಿ ಕೊಡಲ್ಪಟ್ಟಿರುವುದು. ಇದೇ ರಾಜನಿಂದ ಇದೇ ಸ್ವಾಮಿಗೆ ಶಕವರ್ಷ ೧೫೮೨ ನೇ ಪ್ಲವಸಂವತ್ಸರದಲ್ಲಿ ಒಂದು ದತ್ತಿಯು ಕೊಡಲ್ಪಟ್ಟಿತೆಂದು ಮೇಲ್ಕಂಡ ಇಲಾಖೆಯ ೧೯೧೬ ನೇ ವರ್ಷದ ವರದಿಯಲ್ಲಿ (ಪುಟ ೬೩) ಪ್ರಸ್ತುತವಾದ ತಾಮ್ರಪಟಶಾಸನದಿಂದ ತಿಳಿದುಬರುವುದು.

ನಾವು ಮೇಲೆ ೩೩೮ ನೆಯ ಪುಟದಲ್ಲಿ ಉದ್ಧರಿಸಿ ಬರೆದಿರುವ ಎರಡನೇ ತಂತ್ರದ ಕೊನೇ ಪದ್ಯದಲ್ಲಿರುವ 'ಮಲ್ಲಿಕಾರ್ಜುನ ಪದಾಬ್ಜಾಮೃತ' ಎಂಬ ಪದದಲ್ಲಿರುವ 'ಮಲ್ಲಿ

ಕಾರ್ಜುನ' ಎಂಬ ಪದವು ಶೃಂಗೇರಿಯಲ್ಲಿ ಬೆಟ್ಟದ ಮೇಲಿರುವ ಮಲ್ಲಿಕಾರ್ಜುನ ದೇವರನ್ನು ನಿರ್ದೇಶಿಸುವಂತೆ ಕಾಣುತ್ತದೆಯಾದ್ದರಿಂದ ಶಂಕರಕವಿಯಿಂದ ಸ್ತುತನಾದ ಸಚ್ಚಿದಾನಂದನು ಮೇಲೆ ಹೇಳಿದ ಶೃಂಗೇರಿ ಮಠದ ಇಬ್ಬರು ಗುರುಗಳಲ್ಲಿ ಒಬ್ಬನಾಗಿರಬೇಕೇ ವಿನಾ ಅವನು ಮುಳುವಾಗಿಲ್ ಊರಿನ ಸ್ಮಾರ್ತಮಠದ ಅಗ್ನಿಮೂರ್ಧ—ಕೃಷ್ಣಾನಂದಯತಿಯ ಗುರುವಾದ ಕ್ಷೀರಸ್ವಾಮಿ—ಸಚ್ಚಿದಾನಂದ ಯೋಗೀಂದ್ರನಾಗಿರಲಾರನು.

ಮೇಲ್ಕಂಡ ೧೯೧೬ ನೇ ವರ್ಷದ ವರದಿಯ ೬೬ ನೇ ಪುಟದಲ್ಲಿ ಕೆಳದಿ ಶಿವಪ್ಪ ನಾಯಕನು ಶೃಂಗೇರಿಯ ಸಚ್ಚಿದಾನಂದ ಭಾರತೀಸ್ವಾಮಿಗಳಿಗೆ ಕಳಿಸಿಕೊಟ್ಟ ಐದಾರು ನಿರೂಪಗಳ ಪ್ರಸ್ತಾವವಿರುವುದು. ಇವುಗಳಲ್ಲಿ ಒಂದು ಕ್ರಿ. ಶ. ೧೬೫೭ ನೇ ವರ್ಷದಲ್ಲಿ ತಿಮ್ಮಣ್ಣ ಸೇನ ಬೋವನಿಗೆ ಬರೆಯಲ್ಪಟ್ಟದ್ದು; ಇದರಲ್ಲಿ ಕವಿ ತಿರುಮಲಭಟ್ಟನ ಪ್ರಸ್ತಾವವಿರುವುದು. ಈತನೇ ಶಂಕರಕವಿಯಿಂದ ಕೀರ್ತಿತನಾದ 'ಕವಿಶೇಖರ ತಿರುಮಲೇಂದ್ರ'ನೆಂದು ತೋರುತ್ತದೆ. ಆದ್ದರಿಂದ ಶಂಕರಕವಿಯು ಸ್ತುತಿಸುವ ಸಚ್ಚಿದಾನಂದನು ಶೃಂಗೇರಿಯ ಪೀಠವನ್ನು ಕ್ರಿ.ಶ. ೧೬೨೨—೧೬೬೩ ರಲ್ಲಿ ಅಲಂಕರಿಸಿದ್ದ ನಾವು ಮೇಲೆ ಹೇಳಿದ ೧ ನೇ ಸಚ್ಚಿದಾನಂದ ಭಾರತಿಯಾಗಿರಬೇಕು. ಆದ್ದರಿಂದ ಈ ಕವಿಯು ಈ ಗ್ರಂಥವನ್ನು ಕ್ರಿ.ಶ. ಸುಮಾರು ೧೬೪೦—೧೬೬೦ ರಲ್ಲಿ ಬರೆದಿರಬಹುದೆಂದು ಹೇಳುವುದರಲ್ಲಿ ಪ್ರಾಯಃ ವಸ್ತುಸ್ಥಿತಿ ವಿರೋಧ ವೇನೂ ಇರಲಾರದು.

ಅ. ವೆಂಕಟಸುಬ್ಬಯ್ಯ
ಎಂ. ಚಿದಾನಂದ ಮೂರ್ತಿ

# ಕನ್ನಡದಲ್ಲಿ ವರ್ಣಪಲ್ಲಟದ ಕೆಲವಂಶಗಳು

ದ್ರಾವಿಡಭಾಷೆಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಕೆಲವು ವೈಲಕ್ಷಣ್ಯಗಳಲ್ಲಿ ವರ್ಣಪಲ್ಲಟವೂ ಒಂದು. ಕನ್ನಡದಲ್ಲಿಯೂ ಇದರ ನಿದರ್ಶನಗಳು ಕಾಣುತ್ತವೆ. ವರ್ಣಪಲ್ಲಟವನ್ನು ವರ್ಣವ್ಯತ್ಯಯ, ವರ್ಣವಿಪರ್ಯಯ, ಅಕ್ಷರಪಲ್ಲಟ ಎಂದೂ ವ್ಯವಹರಿಸುತ್ತಾರೆ. ಹಲಕೆಲವು ಕಾರಣಗಳಿಂದ ಕೆಲವು ಶಬ್ದಗಳಲ್ಲಿ, ಸಾಮಾನ್ಯವಾಗಿ ಕೆಲವು ವಿಶಿಷ್ಟ ಪರಿಸರಗಳಲ್ಲಿ, ಸ್ವರ ಮತ್ತು ವ್ಯಂಜನಗಳಲ್ಲಿ ಈ ಪಲ್ಲಟವು ನಡೆಯುವುದು. ಇಂತಹ ಕೆಲವು ಪರಿಸರಗಳನ್ನು ನಿದರ್ಶನಪೂರ್ವಕವಾಗಿ ಇಲ್ಲಿ ಸ್ವಲ್ಪಮಟ್ಟಿಗೆ ಗುರುತಿಸಿದೆ.

**ಸ್ವರಪಲ್ಲಟ :** "ಸಾಮಾನ್ಯವಾಗಿ ಸ್ವರಾದಿಯಾದ ಮೂರು ಲಘ್ವಕ್ಷರಗಳಿದ್ದಾಗ, ಮುಖ್ಯವಾಗಿ ಸರ್ವನಾಮಶಬ್ದಗಳಲ್ಲಿ, ಮತ್ತಿತರ ಕೆಲವು ನಾಮಪ್ರಕೃತಿಗಳಲ್ಲಿ ಉಚ್ಚಾರ ಸೌಕರ್ಯಕಾರಣವಾಗಿ, ಎರಡನೆಯ ಸ್ವರ ಲೋಪಗೊಂಡು, ಪದಾದಿಯ ಮೊದಲ ಸ್ವರ ಎರಡನೆಯ ಅಕ್ಷರಕ್ಕೆ ವರ್ಗಾಂತರವಾಗಿ, ನಷ್ಟಸ್ವರದ ಕೊರೆಯನ್ನು ತುಂಬಲು ಆಗಲೇ ದೀರ್ಘವೂ ಆಗಿರುತ್ತದೆ. ಎರಡನೆಯ ಸ್ವರ ಬಿಟ್ಟುಹೋಗುವುದೂ ಅದರ ಪೂರೈಕೆಗೆ ಮೊದಲದರ ದೀರ್ಘರೂಪ ಬರುವುದೂ ಈ ಪಲ್ಲಟದ ಕಾರಣವಿರಬಹುದು. ಸ್ವರಗಳ ಈ ಅಸ್ಥಿರತೆ ಮುಖ್ಯವಾಗಿ ಲಕಾರ ರಕಾರಗಳ ಮತ್ತು ಇತರ ಮೃದುವ್ಯಂಜನಗಳ ಉಚ್ಚಾರಣೆಯನ್ನು ಹೊಂದಿಕೊಂಡಿರುತ್ತದೆ"—ಎಂದು ಅರ್ಥ ಬರುವಂತೆ ರೆ. ಕಾಲ್ಡ್‌ವೆಲ್ ತೆಲುಗು ಭಾಷೆಯನ್ನು ಮುಖ್ಯವಾಗಿ ಲಕ್ಷ್ಯವಾಗಿರಿಸಿಕೊಂಡು ಅಭಿಪ್ರಾಯಪಟ್ಟಿದ್ದಾರೆ.

"ಕಾಲ್ಡ್‌ವೆಲ್ ಹೇಳಿರುವ ಸೂತ್ರ ಸರಿಹೋಗದು. ತೆಲುಗಿನಲ್ಲಿ ಪದಾದಿಯಲ್ಲೆ ಒತ್ತು ಉಂಟು. ಆ ಒತ್ತು ಕೆಲವು ಕಾರಣಗಳಿಂದ ಕೆಲವು ಶಬ್ದಗಳಲ್ಲಿ ಪ್ರಾಚೀನಕಾಲದಲ್ಲಿಯೇ ಭ್ರಷ್ಟವಾಗಿ ಎರಡನೆಯಕ್ಷರದ ಮೇಲೆ ಜಾರಿದೆ. ಪ್ರಥಮಾಕ್ಷರದ ಒತ್ತು ತಪ್ಪಿಹೋಗಲು, ಆ ಅಕ್ಷರವು ಲೋಪಗೊಂಡು, ಎರಡನೆಯ ಅಕ್ಷರಕ್ಕೆ ಆಯಾ ಪದಕ್ಕುಚಿತವಾದ, ಅನುಕೂಲವಾದ ಮಾರ್ಪುಂಟಾಯಿತು. ಈ ಮಾರ್ಪಾಟನ್ನು ಸ್ವರದ ಮೇಲಿನ ಒತ್ತಿನ ದೆಸೆಯಿಂದಾದ ಮಾರ್ಪಾಟೆಂದು ಹೇಳಬೇಕಾಗಿರುವಾಗ ಇವನ್ನು ಕೆಲವರು ಕೇವಲ ವರ್ಣವ್ಯತ್ಯಯವೆಂದು ಭ್ರಾಂತಿಪಟ್ಟರು"—ಎಂದು ಅರ್ಥ ಬರುವಂತೆ ಪ್ರೊ. ಜಿ. ಜೆ. ಸೋಮಯಾಜಿ "ಆಂಧ್ರ ಭಾಷಾವಿಕಾಸಮು" ಗ್ರಂಥದಲ್ಲಿ ಬರೆದಿದ್ದಾರೆ.

ವಾಸ್ತವವಾಗಿ ಈಯೆರಡು ಅಭಿಪ್ರಾಯಗಳು ಸೇರಿಯೇ ಸ್ವರಪಲ್ಲಟದ ಪ್ರಕ್ರಿಯೆಗೆ ವಿವರಣೆಯನ್ನು ನೀಡುವುದೆನ್ನಬೇಕು. ಈ ವಿಚಾರದ ತೆಲುಗಿನ ಪದಸಮುದಾಯದಲ್ಲಿ ಸ್ವರಾಘಾತದ (ಸ್ವರಭಾರದ) ಸ್ಥಾನಾಂತರದ ಪರಿಣಾಮವಾಗಿಯೇ ಆದ್ಯಸ್ವರ ಸ್ಥಾನಾಂತರವು ನಡೆಯುವುದೆಂದು ಹೇಳಬಹುದು.[1] ಪದಾದಿಯಲ್ಲಿ ಸ್ವರಾಘಾತವು ತಪ್ಪಿ, ದ್ವಿತೀಯ ವ್ಯಂಜನದ ಮೇಲಾದಾಗ, ಲೋಪಿಸಿದ ಪದಾದಿಯ ಆದ್ಯಸ್ವರವು ದ್ವಿತೀಯ ವ್ಯಂಜನವನ್ನು ಕೂಡುತ್ತದೆ. ಆಗ ಕೆಲಕೆಲವು ಪದಗಳಲ್ಲಿ ತಮತಮಗೆ ಅನುರೂಪವಾದ ಇಂಥ ಕೆಲವು ಮಾರ್ಪಾಟುಗಳಾಗಿ ಶಬ್ದರೂಪಗಳು ಮಾರ್ಪಡುತ್ತವೆ: (i) ದ್ವಿತೀಯಸ್ವರವನ್ನಳಿಸಿ ಅದರ ಸ್ಥಾನವನ್ನು ದೀರ್ಘಾ

---

[1] ಸ್ವರಾಘಾತವಲ್ಲದ ಅನ್ಯವಿಧಿಯಿಂದಲೂ, ಸ್ವರಯುಕ್ತ ವ್ಯಂಜನಾದಿಯ ಸ್ವರವು ದ್ವಿತೀಯ ಸ್ವರವನ್ನಳಿಸಿ ಆ ವ್ಯಂಜನವನ್ನು ಕೂಡುವುದೂ (ಉದಾ : ಪೊೞಲ್>ಪ್ರೋಲು, ಕೊಱತ> ಕ್ರೊತ್ತ), ಎರಡನೆಯಕ್ಷರವಾದ ಸಂಯುಕ್ತಾಕ್ಷರದ ಮೊದಲ ವ್ಯಂಜನವನ್ನು ಹಾಗೆಯೇ ಕೂಡುವುದೂ (ಉದಾ : ಪೊರ್ದು>ಪ್ರೊದ್ದು, ಬರ್ದುಕು>ಬ್ರದುಕು) ಕಾಣುತ್ತದೆ.

ದೇಶಗೊಂಡ (ಅಳಿದ ಸ್ವರದಿಂದ ಕೊರೆಯಾದ ಏಕಮಾತ್ರಾಕಾಲದ ಉಚ್ಚಾರಣೆಯ ಪೂರೈಕೆಗಾಗಿ ಈ ದೀರ್ಘವು ಬರುತ್ತದೆ.) ಆದ್ಯಸ್ವರವು ಆಕ್ರಮಿಸುತ್ತದೆ (ಉದಾ : ಅದಿಸಿ>ದಾನಿ, ಇದಿನಿ>ದೀನಿ). (ii) ಆದ್ಯಸ್ವರವು ದೀರ್ಘಾದೇಶಗೊಳ್ಳುವುದೇ ಅಲ್ಲದೆ ಅಂತ್ಯವ್ಯಂಜಸವು ಸ್ವರಯುಕ್ತವೂ ಆಗುವುದು (ಉದಾ : ಅವರ್>ವಾರು, ಇವರ್>ವೀರು). (iii) ಆದ್ಯಸ್ವರವು ದೀರ್ಘಾದೇಶದ ಅನ್ಯಸ್ವರವಾಗಿ ಮಾರುಗೊಳ್ಳಬಹುದು (ಉದಾ : ಉಕಿರ್>ಗೋರು). (iv) ಏಕ ಹ್ರಸ್ವಸ್ವರಾದಿ ಶಬ್ದದಲ್ಲಿ ಆ ಸ್ವರವು ದೀರ್ಘಾದೇಶಗೊಂಡು ಇಲ್ಲವೆ ದೀರ್ಘಾದೇಶದ ಅನ್ಯಸ್ವರವಾಗಿ ಮಾರುಗೊಂಡು ಅಂತ್ಯವ್ಯಂಜನದೊಡನೆ ಕೂಡಬಹುದು[2] (ಉದಾ : ಎಳ>ಲೇ ಏಬ್>ಲೇ ; ಉಳ್>ಲೋ, ಇಲ್ಲ>ಲೇ).

ತೆಲುಗಿನಲ್ಲಿ ಈ ರೂಪವ್ಯತ್ಯಾಸದ ಚರ್ಯೆಯನ್ನು ವರ್ಣಪಲ್ಲಟವೆಂದು ಕರೆಯಲಾಗದು ಎಂಬ ಮತ ಒಂದು ದೃಷ್ಟಿಯಿಂದ ಸರಿ. ಏಕೆಂದರೆ ಇಲ್ಲಿ ವ್ಯಂಜನಪಲ್ಲಟದಂತೆ ವರ್ಣಗಳಲ್ಲಿ ಪರಸ್ಪರ ಸ್ಥಾನಾಂತರ ನಡೆಯದೆ ಕೇವಲ ಆದ್ಯಸ್ವರವು ಸ್ಥಾನಾಂತರಗೊಳ್ಳುವುದು ಕಾಣುತ್ತದೆ. ಶಬ್ದಾರ್ಥವು ಬೇರೆಯಾಗದೆ ಅಕ್ಷರಗಳು ಎಂದರೆ ಸ್ವರಯುಕ್ತ ವ್ಯಂಜನಗಳೆರಡು ಪರಸ್ಪರವಾಗಿ ಸ್ಥಾನಾಂತರವಾಗುವ ವೈಲಕ್ಷಣ್ಯವನ್ನು ವರ್ಣಪಲ್ಲಟವೆಂದು ಸಾಮಾನ್ಯವಾಗಿ ವ್ಯವಹರಿಸುವುದು ರೂಢಿಯಾಗಿದೆ.

ಇದನ್ನು ದೃಷ್ಟಿಯಲ್ಲಿರಿಸಿಕೊಂಡು ಕನ್ನಡದಲ್ಲಿ ಸ್ವರಪಲ್ಲಟವನ್ನು ಹೀಗೆಯೇ ವಿವೇಚಿಸಬೇಕಾಗುವುದು. ಇಂತಹ ಸ್ವರಪಲ್ಲಟದ ನಿದರ್ಶನಗಳು ತೆಲುಗಿನಲ್ಲಿ ಸಾಮಾನ್ಯ · ಕನ್ನಡದಲ್ಲಿ ವಿರಳ.

ಆದ್ಯಸ್ವರದ ಸ್ಥಾನಾಂತರ: (i) ನಡುಗನ್ನಡ ಕಾವ್ಯಗಳಲ್ಲಿ ಕಾಣಿಸಿಕೊಂಡಿರುವ ಅಹಗೆ, ಇಹಗೆ, ಎಹಗೆ ಎಂಬ ಪದಗಳಲ್ಲಿ ಸ್ವರಾಘಾತವು ಪದಾದಿಯ ಆದ್ಯ ಸ್ವರದಿಂದ ದ್ವಿತೀಯ ವ್ಯಂಜನದ ಮೇಲಾಗುವಾಗ, ದ್ವಿತೀಯಸ್ವರ ಲೋಪಿಸಿ, ನಷ್ಟಸ್ವರದ ಉಚ್ಚಾರಣೆಯ ಪೂರೈಕೆಗೆ ಆದ್ಯಸ್ವರವು ದೀರ್ಘರೂಪದಲ್ಲಿ ಅದನ್ನು (ದ್ವಿತೀಯ ವ್ಯಂಜನವನ್ನು) ಕೂಡಿ ಹಾಗೆ, ಹೀಗೆ, ಹೇಗೆ ಎಂಬ ಹೊಸಗನ್ನಡ ರೂಪಗಳು ಬರುತ್ತವೆ. ಇದು ಉಚ್ಚಾರಣೆಯಲ್ಲಿ ಸೌಲಭ್ಯಾಕಾಂಕ್ಷೆಯ ಪರಿಣಾಮವಾಗಿ ಆದಂಥವು. ಇದೇ ದಾಟಿಯಲ್ಲಿ ನಡೆಯುವಂಥವು ಅಹಂಕಾರ> ಹಾಂಕಾರ, ಅಹಂ>ಹಮ್ಮು ಮುಂತಾದುವು.

(ii) ಕರ್ಣಾಟಕದ ಕೆಲವೆಡೆ (ಬಿಜಾಪುರ ಜಿಲ್ಲೆ) ನಡುಗನ್ನಡದ ಅಹನ್, ಅಹರ್ ಇತ್ಯಾದಿ ಶಬ್ದರೂಪಗಳನ್ನು ಹಾನ, ಹಾರ ಮುಂತಾಗಿ ಹೇಳುತ್ತಾರೆ. ಇಲ್ಲಿ ಪಲ್ಲಟಗೊಂಡ ಆದ್ಯಸ್ವರವು ಪೂರ್ವೋಕ್ತ ವಿಧಿಯಲ್ಲಿ ದೀರ್ಘಾದೇಶಗೊಳ್ಳುವುದೇ ಅಲ್ಲದೆ ವ್ಯಂಜನಾಂತವು ಮಾತ್ರಾಸಮತೆಗಾಗಿ ಸ್ವರಾಂತವೂ ಆಗಿದೆ. ಇವು ಉಚ್ಚಾರಣೆಯಲ್ಲಿ ಪ್ರದೇಶ ರೂಢಿಮೂಲವಾದ ಸೌಲಭ್ಯಾಕಾಂಕ್ಷೆಯ ಪರಿಣಾಮವಾಗಿ ಆದಂಥವು.

(iii) ಹೊಸಗನ್ನಡದ ಹೌದು ಎಂಬುದು ಅಪ್ಪುದು>ಅಹುದು ಎಂಬುದರ ಮುಂದಿನ ರೂಪ. ಇಲ್ಲಿ ಆದ್ಯಸ್ವರವು ದ್ವಿತೀಯ ವ್ಯಂಜನದೊಡನೆ ಕೂಡುವಾಗ ಹಿಂದೆ ನೋಡಿದಂತೆ ದ್ವಿತೀಯಸ್ವರವಳಿಯದು. ಅದರೊಡನೆ ಸೇರಿ ಅವು—ಔ ಎಂಬ ಸಂಧಿಸ್ವರವಾಗಿ ಮಾರ್ಪಟ್ಟು (ಅ+ಉ>ಅವು>ಔ) ಹೌದು (<ಹವುದು) ಎಂಬ ರೂಪವು ಸಿದ್ಧಿಸುತ್ತದೆ.[3]

(iv) **ಎಱಂಕೆ** ಎಂಬ ಶಬ್ದದಲ್ಲಿ ಆದ್ಯಸ್ವರವು ದ್ವಿತೀಯಸ್ವರವನ್ನಳಿಸಿ, ದ್ವಿತೀಯವ್ಯಂಜನ

---

[2] ಪಲ್ಲಟವಿಧಿಯಲ್ಲಿ ಪದೋಚಿತವಾದ, ಶ್ರಾವ್ಯತಾನುಸಾರವಾದ ಬೇರೆ ಮಾರ್ಪುಗಳಾಗಬಹುದು.

[3] 'ಮುಖ್ಯವಾಗಿ ದ್ವಿತೀಯಾಕ್ಷರವು ಹಕಾರವಾಗಿದ್ದಾಗ (ಉದಾ : ಅಹಗೆ ಹಾಗೆ ; ಇಹಗೆ ಹೀಗೆ ; ಎಹಗೆ ಹೇಗೆ ; ಅಹುದು ಹವುದು ; ಅಹೆನು ಹೇನು ; ಅಹನು ಹಾನು ; ಇತ್ಯಾದಿ) ಒಂದೆರಡನೆಯ ಅಕ್ಷರಗಳು ಪರಸ್ಪರ ಸ್ಥಾನಾಂತರವಾಗುವ ಚರ್ಯೆಯು ಹೊಸಗನ್ನಡದಲ್ಲಿಯೂ ಉಂಟು' ಎಂಬರ್ಥದಲ್ಲಿ ರಾ. ನರಸಿಂಹಾಚಾರ್ಯರು ಹೇಳಿರುವ ಮಾತನ್ನು ಇಲ್ಲಿ ನೆನೆಯಬಹುದು.

ದೊಡನೆ ಸೇರಿ ಱೆಂಕೆ ಎಂದಾಗಿ ಕಾಲಕ್ರಮದಲ್ಲಿ ಱೆಕ್ಕೆ >ರೆಕ್ಕೆ ಆಗುತ್ತದೆ[4]. ಇಲ್ಲಿ ಮಾತ್ರಾ ಸಮತೆ ಕಾಣದಿರುವುದು ಗಮನಾರ್ಹವಾಗಿದೆ.

ಈ ಮೇಲಣ ನಿದರ್ಶನಗಳಿಂದ ಸಾಮಾನ್ಯವಾಗಿ ಸ್ವರಾಘಾತದ ಸ್ಥಾನಾಂತರದಿಂದ ಆದ್ಯಸ್ವರವು ಸ್ಥಾನಾಂತರಿಸುವುದು ಸ್ವರಪಲ್ಲಟದ ಸಾಧಾರಣ ಲಕ್ಷಣವೆಂದು ತಿಳಿಯಬಹುದು.[5] ಇದಲ್ಲದೆ, ಸ್ವರಾಘಾತಕಾರಣದಿಂದಲ್ಲದೆ, ಸಾಮೀಪ್ಯಸಂಬಂಧವುಳ್ಳ ಭಿನ್ನಸ್ವರಗಳೂ ಪರಸ್ಪರ ವಾಗಿ ಸ್ಥಾನಾಂತರಗೊಳ್ಳುವ ನಿದರ್ಶನಗಳು ಕೆಲವೆಡೆ ಕಾಣುತ್ತವೆ. ಸೌಲಭ್ಯಾಕಾಂಕ್ಷೆ, ಲೇಖನ ಪ್ರಮಾದ ಮತ್ತು ಅಂಧಾನುಸರಣೆ ಇವರ ಮುಖ್ಯಕಾರಣವಿರಬಹುದು. ಉದಾ: (i) ಚೆಲ್ಲ (ಪಂಪಭಾರತ ೭-೯೪ ವ. ಚಂದ್ರಪ್ರಭಪುರಾಣ ೭-೫೧, ೪-೪೩ ವ.; ಇ.) >ಚಲ್ಲೆ (ಶಬ್ದಮದ. ೧೧೮) ಚೆಲ್ಲಗಣ್ (ಪುಷ್ಪದಂತಪುರಾಣ ೫-೨೪)>ಚಲ್ಲೆಗಣ್ (ಧರ್ಮಾಮೃತ ೮-೧೯೬ ವ.; ಜಗನ್ನಾಥವಿಜಯ ೧೧-೧೫).

(ii) ಜನ್ನವಿರಂ (ಕಾವ್ಯಸಾರ ೫೩೫, ಪಂಪಭಾ. ೨-೯೭ ವ. ೬-೮.)>ಜನ್ನಿವರಂ (ಚಾವುಂಡರಾಯಪುರಾಣ ೩೫-೧೫, ಸೌಂದರಪುರಾಣ ೪-೩೦, ಇ.).

ಯಜ್ಞಸೂತ್ರವೆಂಬರ್ಥದಲ್ಲಿ ಈ ಯೆರಡು ಪದಗಳಲ್ಲದೆ ಜನ್ನವಾರ, ಜನ್ನಿವಾರ, ಜನ್ನದಾರ, ಜನಿವಾರ ಮುಂತಾದ ಶಬ್ದಗಳು ಹಳೆಯ ಪ್ರಯೋಗಗಳಲ್ಲಿ ಕಾಣುತ್ತವೆ. ಈ ಶಬ್ದರೂಪಗಳ ಕಾಲಕ್ರಮದ ಬೆಳೆವಣಿಗೆ, ವ್ಯುತ್ಪತ್ತಿಯನ್ನು ಗುರುತಿಸುವುದು ತೊಡಕಿನ ಕೆಲಸ. ಗುಣವರ್ಮನ ಶೂದ್ರಕದ ಮತ್ತು ಪಂಪಭಾರತದ ಪ್ರಯೋಗಗಳಿಂದ ಜನ್ನವಿರಂ ಎಂಬುದೇ ಮೂಲರೂಪವಿರು ವಂತೆ ಕಾಣುತ್ತದೆ. ಇವರಲ್ಲಿ ಶೂದ್ರಕದ ಪ್ರಯೋಗವೇ ಸದ್ಯಕ್ಕೆ ಮೊದಲಿನದು.[6] ಪಂಪಭಾರತ ನಿಘಂಟಿನಲ್ಲಿ ಈ ಶಬ್ದವನ್ನು ದೇಶ್ಯವಾಗಿ ಸೂಚಿಸಿರುವುದು ಗಮನಾರ್ಹವಾಗಿದೆ.

ಇಂಥ ಶಬ್ದಗಳೊಂದಿಗೆ ಅಂಬಲಿ ಅಂಬಿಲ,[7] ವಾರಾಣಸೀ>ವಾರಣಾಸಿ, ಬಟ್ಟಲು> ಬಟ್ಟುಳ (ಜಾನಪದ ಕಥನ ಗೀತೆಗಳು ೪೬೫) ಮೊದಲಾದುವು ಸೇರುತ್ತವೆ.

**ವ್ಯಂಜನಪಲ್ಲಟ :** "ದ್ರಾವಿಡ ಭಾಷೆಗಳಲ್ಲಿ, ಪ್ರಧಾನವಾಗಿ ಗ್ರಾಮ್ಯರ ನುಡಿಯಲ್ಲಿ, ಕೆಲವೊಮ್ಮೆ ವ್ಯಂಜನಗಳು ತ್ವರೆಯ ಕಾರಣ, ಉಚ್ಚಾರಸೌಕರ್ಯದ ಕಾರಣ ಸ್ಥಳಾಂತರ ಗೊಳ್ಳುತ್ತವೆ; ಆದರೆ ಇದು ಇತರತ್ರವೂ ಆಗಬಹುದು. ಹಲವೆಡೆ ಈ ಪಲ್ಲಟದ ದೆಸೆಯಿಂದಾಗಿ ತಮಿಳಿನಲ್ಲಿ ಶಬ್ದದ ಒಂದು ರೂಪವೂ, ತೆಲುಗು ಕನ್ನಡಗಳಲ್ಲಿ ಸ್ವಲ್ಪ ಬೇರೆಯೇ ಆದ ಅದರ ಇನ್ನೊಂದು ರೂಪವೂ ಕಂಡುಬರುತ್ತದೆ.[8] ಈ ಸೋದರ ಭಾಷೆಗಳಲ್ಲಿ ಶಬ್ದಗಳನ್ನು ಹೋಲಿಸು

---

[4] 'ಬಹುಶಃ ಎರಡನೆಯಕ್ಷರದ ಮೇಲಣ ಒತ್ತಿನ ಕಾರಣವಾಗಿ ಆದ್ಯಸ್ವರವಾದ 'ಎ' ಕಾರ ಹೋಗು ತ್ತದೆ'—ಎಂಬರ್ಥದಲ್ಲಿ ಬರೆದಿರುವ ಜಿ. ಎಸ್. ಗಾಯಿ ಅವರ ವಿವರಣೆ ಅಸಮಗ್ರವೆನ್ನಬಹುದು.

[5] ಕಿಟ್ಟೆಲ್ ನಿಘಂಟಿನಲ್ಲಿ ಹೋಲಿಕೆಗೆಂದು ಕೊಟ್ಟಿರುವ ಹಾಗೂ ಮೂಲವಿರಬಹುದೆಂದು ಸೂಚಿಸಿರುವ ಈ ಮೊದಲಾದ ಪದಗಳನ್ನೂ ಗಮನಿಸಬಹುದು : ಒರಸು—ರೊಷ್ಟು (ರೋಸು ?), ಅರಚು—ರಚ್ಚೆ (ರಚ್ಚು ?) ಅರಣೆ—ರಾಣಿ (ರಾಣೆ ?), ಉಗುರುಳಿ—ಗೋರುಳಿ, ಅರಟೆ—ರಾಟೆ ಇತ್ಯಾದಿ.

ಸಹಜವಾಗಿ ಕನ್ನಡದಲ್ಲಿ ರಾದಿಲಾದಿಯಾದ ಶಬ್ದಗಳು ಇಲ್ಲವೆಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡು ಈ ಪದಗಳನ್ನೂ ಗಮನಿಸಬಹುದು : ಱೊಪ್ಪ (>ಒಱಗು ?), ಱೊಪ್ಪಂ (<ಒಱಲ್ ?), ರುಬ್ಬು (<ಉರುಬು ?), ಲೆಂಕ (<ಎಲಂಕ ?), ರೇಗು (<ಎಱಗು ?), ಗೋರಂಟಿ (<ಉಗುರಂಟಿ ?) ಇತ್ಯಾದಿ.

[6] ಈಯಂಶವನ್ನು ನನ್ನ ಗಮನಕ್ಕೆ ತಂದವರು ಶ್ರೀ ಎನ್. ಬಸವಾರಾಧ್ಯರು. ಜನ್ನವಿರಂ ಎಂಬುದನ್ನು ಮೂಲರೂಪವಾಗಿ ಗ್ರಹಿಸಿ ಹೀಗೆ ಪದದ ಬಳವಿಯನ್ನು ಸೂಚಿಸಬಹುದೆ?: ಜನ್ನವಿರಂ>ಜನ್ನಿವರಂ>ಜನ್ನಿವಾರಂ> ಜನ್ನವಾರಂ>ಜನಿ(ನ)ವಾರ (?)

[7] 'ಅಂಬಿಲ' ಶಬ್ದವು ಸಂಸ್ಕೃತ ನಿಘಂಟುಗಳಲ್ಲಿರುವಂತಿಲ್ಲ. ಇದು ಸಂ. 'ಅಮ್ಲ'ದ ತದ್ಭವವಾಗಿರ ಬಹುದು. ಅಂಬಲಿ ಎಂಬುದು ಸಂಸ್ಕೃತೀಕರಣಗೊಂಡು 'ಅಂಬಿಲ'ವಾಗಿರಬಹುದೆ ? ಅಂಬಲಿ (ವಡ್ಡಾರಾಧನೆ ೭೨-೨೦, ಧರ್ಮಾಮೃ. ೨-೬೯), ಅಂಬಿಲ (ಚಾವುಂಪು. ೪೮-೧೨, ಖಮದ ೨-೭೪).

[8] ಇದಕ್ಕೆ ಅವರು ಕೊಟ್ಟಿರುವ ಉದಾ.ಗಳು : ಕೊಪ್ಪುಳ್ (ತ.) ಪೊಕ್ಕುಳ್—ಪೊಕ್ಕಿಳ್ (ಮಲೆ.) ಪೊಕ್ಕಿಲಿ (ತೆ.), ಪಡರ್ (ತ.) ಪರಡು (ಕ.). ಇವರೊಂದಿಗೆ ತಮಿಳಿನಲ್ಲಿ ವ್ಯಂಜನಪಲ್ಲಟದ ಒಂದೆರಡು

ವಾಗ ಈ ಪಲ್ಲಟದ ವ್ಯಾಪ್ತಿಯನ್ನು ಲಕ್ಷ್ಯದಲ್ಲಿರಿಸಿಕೊಳ್ಳಬೇಕು" ಎಂದು ರೆ. ಕಾಲ್ಡ್‌ವೆಲ್ ಬರೆದಿದ್ದಾರೆ. "ಶಬ್ದಗಳನ್ನು ಉಚ್ಚರಿಸುವಾಗ ಕೇವಲ ತ್ವರೆಯ ದೆಸೆಯಿಂದ ಅಕ್ಷರಗಳು ತಡವರಿಸಿ ಪರಸ್ಪರ ಸ್ಥಾನಾಂತರಗೊಳ್ಳುವುದು ವರ್ಣವ್ಯತ್ಯಯವೆನಿಸುವುದು.[9] ಇದು ಆಯಾ ಪದಕ್ಕೆ ಮಾತ್ರ ಸಂಬಂಧಪಟ್ಟದ್ದು" ಎಂದು ತೆಲುಗನ್ನು ಲಕ್ಷೀಕರಿಸಿಕೊಂಡು ಹೇಳಿದ ಇನ್ನೊಂದು ಮತವುಂಟು.

ಇವೆರಡೂ ಅಸಮಗ್ರವಾದ ಅಭಿಮತಗಳೆನ್ನಬಹುದು. ಏಕೆಂದರೆ ದ್ರಾವಿಡ ಭಾಷೆಗಳಲ್ಲಿ, ಕನ್ನಡವನ್ನು ಲಕ್ಷ್ಯವಾಗಿಟ್ಟು ಪರಿಶೀಲಿಸಿದರೆ, ಗ್ರಾಮ್ಯರ ನುಡಿಯಲ್ಲಿಯೂ ಅನ್ಯಪರಿಸರಗಳಲ್ಲಿಯೂ ಸಮಾನವಾಗಿ ವ್ಯಾಪ್ತವಾಗಿರುವ ವ್ಯಂಜನಪಲ್ಲಟವು, ತ್ವರೆ, ಉಚ್ಚಾರಸೌಕರ್ಯದ ಪರಿಣಾಮವಾಗಿಯೇ ಅಲ್ಲದೆ, ಪ್ರಾಸಸ್ಥಾನದಲ್ಲಿ ನಿರ್ದಿಷ್ಟ ಅಕ್ಷರದ ಆವಶ್ಯಕತೆ, ಶಬ್ದಾರ್ಥಗಳ ಸಂದಿಗ್ಧತೆ, ಪಾಠಾಂತರದ ಲೋಪದೋಷಗಳು ಮೊದಲಾದ ಕಾರಣಗಳಿಂದಲೂ ನಡೆಯಬಹುದೆಂದು ತಿಳಿಯುವುದು. ಎರಡನೆಯದಾಗಿ, ಕೆಲವು ಪದಗಳ ಮಟ್ಟಿಗೆ, ಅನಿರ್ದಿಷ್ಟ ಪರಿಸರಗಳಲ್ಲಿ, ಆಕಸ್ಮಿಕವಾಗಿ, ಪ್ರಮಾದಜನ್ಯವಾಗಿ, ಸ್ವಚ್ಛಂದವಾಗಿ ವರ್ಣಪಲ್ಲಟವು ತಲೆದೋರಿರುವ, ತಲೆದೋರುವ ಸಂದರ್ಭಗಳಿದ್ದರೂ, ಸಾಮಾನ್ಯವಾಗಿ ವರ್ಣೋತ್ಪತ್ತಿಸ್ಥಾನದಲ್ಲಿ ಪರಸ್ಪರ ಸಾಹಚರ್ಯವಿರುವ, ಏಕಸ್ಥಾನಿಗಳೆನಿಸುವ, ಅಸ್ಥಿರಸ್ವಭಾವದ ವರ್ಣಗಳು ಸೌಲಭ್ಯಾಕಾಂಕ್ಷೆ ಮೊದಲಾದ ಕಾರಣಗಳಿಂದ ಉಚ್ಚಾರಣೆಯ ಮತ್ತು ಬರೆವಣಿಗೆಯ ಅವಸರದಲ್ಲಿ ಸ್ಥಳಾಂತರಗೊಳ್ಳುವ ನಿರ್ದಿಷ್ಟ ಪರಿಸರಗಳು ಕಂಡುಬರುವುದನ್ನು ನಿದರ್ಶನಪೂರ್ವಕವಾಗಿ ತಿಳಿಯಬಹುದು. ಇದು ಬಹುಮಟ್ಟಿಗೆ ಕನ್ನಡೇತರ ದ್ರಾವಿಡ ನುಡಿಗಳಿಗೂ ಅನ್ವಯಿಸುತ್ತದೆ.

ವ್ಯಂಜನಪಲ್ಲಟಗಳಲ್ಲಿ ರೇಫ ಲಕಾರಗಳೂ ಕುಳರಳಗಳೂ ಪ್ರಧಾನಪಾತ್ರವನ್ನು ವಹಿಸುತ್ತವೆಂಬುದು ದೃಷ್ಟಪೂರ್ವಕವಾದುದು. ಇವು ನಾದಾನುಬಂಧಿಗಳು, ಬಹುಮಟ್ಟಿಗೆ ಏಕಸ್ಥಾನಿಗಳು, ಸಹಚರ ವರ್ಣಗಳು. ಅಂದಮೇಲೆ ಪಲ್ಲಟ ಸಹಜ.

ಈ ಪಲ್ಲಟ ಕೆಲವೆಡೆ ಸ್ಥಾಯಿ, ಕೆಲವೆಡೆ ತಾತ್ಕಾಲಿಕ, ಕೆಲವೆಡೆ ವರ್ಣವ್ಯತ್ಯಯವಾದ ಮೇಲೆ ಶಬ್ದದ ಮೂಲರೂಪವು ಬಹುಮಟ್ಟಿಗೆ ಇಲ್ಲವೆ ಪೂರ್ತಿಯಾಗಿಯೇ ಕಣ್ಮರೆಯಾಗಿ ವ್ಯತ್ಯಸ್ತರೂಪವು ಸಾರ್ವಕಾಲಿಕವಾಗಿ, ಸಾರ್ವತ್ರಿಕವಾಗಿ ಮುಂದುವರಿಯಬಹುದು. (ಉದಾ : ಅಸಗ>ಅಗಸ.) ಕೆಲವೆಡೆ ಆಯಾ ಪರಿಸರಗಳಲ್ಲಿ, ಆಯಾ ಉದಾಹರಣೆಯಲ್ಲಿ ಮಾತ್ರ ಕಾಣಿಸಿಕೊಂಡ ವ್ಯತ್ಯಸ್ತರೂಪವು ತಾತ್ಕಾಲಿಕವಾಗಿ ವೈಯಕ್ತಿಕವಾಗಿ ಅಲ್ಲಿಗೇ ನಿಂತುಹೋಗಬಹುದು (ಉದಾ : ಅಗಳು>ಅಳಗು), ಹಾಗಲ್ಲದೆ ಮೂಲರೂಪವೂ ವ್ಯತ್ಯಸ್ತರೂಪವೂ ಎಡೆಯೆಡೆಯಲ್ಲಿಯೇ ಬಳಕೆಯಲ್ಲಿ ಮುಂದುವರಿಯಬಹುದು (ಉದಾ : ಅಲುಗಾಡು>ಅಗಳಾಡು). ಇವುಗಳ ತಪ್ಪೊಪ್ಪುಗಳ ಉಚಿತಾನುಚಿತಗಳ ಎಣಿಕೆ ಬರಬಹುದು, ಬರದಿರಬಹುದು. ಇಂಥ ನುಡಿಸಿರಿಗೆ ವ್ಯಕ್ತಿಯ ಮನೋಧರ್ಮದಿಂದ ಪ್ರಭಾವಿತವಾದುದು.

ವ್ಯಂಜನಪಲ್ಲಟದ ಕೆಲವು ನಿರ್ದಿಷ್ಟ ಪರಸರಗಳು :—

1. ಪ್ರಾಸಸ್ಥಾನದಲ್ಲಿ : ಪದ್ಯದ ಪ್ರಾಸಸ್ಥಾನದಲ್ಲಿ ನಿರ್ದಿಷ್ಟ ಅಕ್ಷರದ ಆವಶ್ಯಕತೆಗಾಗಿ ರೂಢಿಯ ಪದದಲ್ಲಿ ವರ್ಣಪಲ್ಲಟವಾಗಬಹುದು :

ಉದಾ : (1) ತಳವರ>ತರವಳ (ಕುಮಾರವ್ಯಾಸ ಭಾರತ ೧೦-೯-೧೪)

---

ಉದಾಹರಣೆಗಳನ್ನೂ ನೋಡಬಹುದು : ಕುದಿರೈ : ಕುಂದಿರೈ, ತಶೈ : ಶದೈ, ಕಲ್ಯಾಣಂ : ಕಣ್ಣಾಲಂ, ಮಧುರೈ : ಮರುದೈ.

[9] ಇದಕ್ಕೆ ಕೊಟ್ಟಿರುವ ಉದಾ.ಗಳು : ನವ್ವುಲಾಟ—ನವ್ವುಟಾಲ, ಜೋನಡ—ಜೋಡನ, ವಾರುವಮು—ವಾವುರಮು, ಪಾರುವಮು—ಪಾವುರಮು.

ಇದರೊಂದಿಗೆ ಆವಶ್ಯಕವಿದ್ದಂತೆ ಪಡಗ (ಪಡಿಗ)—ಪಾಗಡ, ಪಾಡಗಮು—ಪಾಗಡಮು ಮೊದಲಾದುವನ್ನೂ ನೋಡಿಕೊಳ್ಳಬಹುದು.

(2) ತಳವರಿಕೆ>ತರವಳಿಕೆ (ಕುವ್ಯಾಭಾ. ೪-೮-೬೩)[10]

2. ಅನುಕರಣೆಯಲ್ಲಿ: ಕಾವ್ಯರೂಢಿಯಲ್ಲಿ ಮತ್ತು ಲೋಕರೂಢಿಯಲ್ಲಿ, ಕೆಲವು ಅನುಕರಣೆಯ ಶಬ್ದಗಳಲ್ಲಿ, ಸಾಮಾನ್ಯವಾಗಿ ಅರ್ಥವೈಪರೀತ್ಯವೇನೂ ಉಂಟಾಗದ ಎಡೆಗಳಲ್ಲಿ, ಉಚ್ಚಾರಕರ್ತನ ರೂಢಿ, ಅಪೇಕ್ಷೆ, ಶೀಘ್ರೋಚ್ಚಾರಣೆ ಮೊದಲಾದ ಕಾರಣಗಳ ಪರಿಣಾಮವಾಗಿ ವರ್ಣಪಲ್ಲಟವು ಘಟಿಸಬಹುದು.

ಉದಾ : (1) ಮಗಮಗಿಸು : ಗಮುಗಮಿಸು.

ಮಗಮಗಿಸು (ಪಂಪಭಾ. ೧೪-೨೫, ಭರತೇಶ್ವರಚರಿತೆ ೧-೯೪.)—ಗಮುಗಮಿಸು (ಭರಚ. ಸಂಗ್ರಹ ೪೦೪, ಹಳ್ಳಿಹಾ. ೧೬೪.)[11]

ಮಘಮಘಿಸು : ಘಮಘಮಿಸು

ಮಘಮಘಿಸು (ಮದನತಿಲಕ ೮, ಹರಿಹರನರಗಳೆಗಳು I-೨,೫,೯.) ಘಮಘಮಿಸು (ಭರಚ. ೧೬೦.)[12]

(2) ಗಿಜಿಗಿಜಿ : ಜಿಗಿಜಿಗಿ, ಪಟಪಟನೆ : ಟಪಟಪನೆ, ರಿಪಿರಿಪಿ : ಪಿರಿಪಿರಿ, ಕಬಕಬ : ಬಕಬಕ, ಮಾರಾಮಾರಿ : ರಮಾರಮಿ (?), ಕಳಕಳಿಸು : ಲಕಲಕಿಸು (?) ಇತ್ಯಾದಿ.

3. ಪಾಠಾಂತರಗಳಲ್ಲಿ : ಕಾಲಕ್ರಮದಲ್ಲಿ ಮೂಲಗ್ರಂಥದ ಪ್ರತಿಗಳನ್ನೆತ್ತುವಾಗ ಹಲವು ಬಗೆಯ ಪ್ರತಿಕಾರರು ಹಲವು ಬಗೆಯ ಲೇಖನ ಪ್ರಮಾದಗಳನ್ನು ಮಾಡಿರುವ ಸಂದರ್ಭಗಳಿವೆ. ಇವುಗಳಲ್ಲಿ ವರ್ಣಪಲ್ಲಟವೂ ಒಂದು. ಇದು ಕೇವಲ ಪ್ರಮಾದಜನ್ಯವಾಗಿರುವ ಕಾರಣದಿಂದ, ಅರ್ಥದ ದೃಷ್ಟಿಯಿಂದ ನೋಡಿದರೆ[13] ಇದನ್ನು ಇಲ್ಲಿ ಸೇರಿಸಲಾಗದು. ಆದರೆ ಇದರಿಂದ ವರ್ಣಪಲ್ಲಟವಿಧಿಯ ವೈಲಕ್ಷಣ್ಯಗಳನ್ನೂ, ಕೆಲವು ಸಾಮಾನ್ಯ ಪರಿಸರಗಳನ್ನೂ ತಿಳಿಯಲು ಸಹಾಯವಾಗುವುದು. ಪ್ರತಿಕಾರನ ಅನಭಿಜ್ಞತೆ, ಅನವಧಾನ, ಅಂಧಾನುಸರಣೆ, ಶಬ್ದಾರ್ಥಗಳ ಅಬೋಧತೆ, ಸಂದಿಗ್ಧತೆ ಮೊದಲಾದ ಕಾರಣಗಳಿಂದ ಈ ಪ್ರಮಾದವು ತಲೆದೋರಬಹುದು. ಅಂತಹ ಕೆಲವು ನಿದರ್ಶನಗಳನ್ನು ಇಲ್ಲಿ ಪ್ರಾತಿನಿಧಿಕವಾಗಿ ತೋರಿಸಿದೆ.

(i) ಅನವಧಾನ : ಚಂಪಾನಗರ : ಪಂಚಾನಗರ (ಛ) (ವಡ್ಡಾರಾಧನೆ ೧೦೧-೪)[14]' ಕರಗದಡಪದ : ಕರಗದಪಡದ (ಗ) (ಮದನತಿಲಕ ೮-೫೯).

(ii) ಸಂದಿಗ್ಧತೆ : ಮೇಲುರದ : ಮೇಲುದರ (ಹು) (ಚೆನ್ನಬಸವಪುರಾಣ ೩೭-೪೩)[15] ತಳರದಗಲದೆ : ತಳರದಲುಗದೆ (ನಂಬಿಯಣ್ಣನ ರಗಳೆ ೧೦೨).

(iii) ಅನಭಿಜ್ಞತೆ : ಗಜವರ್ತಿ, ಗಜವತ್ತಿ : ಜಗವರ್ತಿ : ಜಗಬತ್ತಿ (ಕಿ. ಖ.) (ಶಮುದ. ೨೬೩), ರತದೀಪಿಕೆಗಳ್ : ತರದೀಪಿಕೆಗಳ್ : (ಖ. ಬ.) (ಸೂಕ್ತಿಸುಧಾರ್ಣವ ೨೨೫.)

---

10 ಇವು ರಳ ವಿಪರ್ಯಯ ವ್ಯಾಪ್ತಿಯಲ್ಲಿಯೂ ಇರುವುದರಿಂದ ಈ ಪರಿಸರಕ್ಕೆ ಅಷ್ಟು ಒಳ್ಳೆಯ ಉದಾ.ಗಳಾಗುವುದಿಲ್ಲ. ಆದರೂ ಇಲ್ಲಿ ಪ್ರಾಸಸ್ಥಾನದ ಆವಶ್ಯಕತೆಗಾಗಿಯೇ ವರ್ಣಪಲ್ಲಟವಾಗಿದೆಯೆಂದು ತಿಳಿಯಬಹುದು. ಕಾವ್ಯಾಧಾರದ ದೃಷ್ಟಿಯಿಂದ ನೋಡಿದರೆ, ಇಲ್ಲಿಯ ವ್ಯತ್ಯಸ್ತರೂಪ ಬಹುಶಃ ತಾತ್ಕಾಲಿಕ ಹಾಗೂ ವೈಯಕ್ತಿಕವೆಂದು ಹೇಳಬಹುದು.

11 ಸಾಮಾನ್ಯವಾಗಿ ಹಳಗನ್ನಡ ನಡುಗನ್ನಡಗಳಲ್ಲಿ 'ಮಗಮಗಿಸು' ಎಂಬುದೇ ಬಹು ಪ್ರಚುರವಾದ ರೂಪವಾಗಿದ್ದು ಹೊಸಗನ್ನಡದಲ್ಲಿ ಗಮಗಮಿಸು ಎಂಬುದು ವ್ಯಾಪ್ತವಾಯಿತು. ಆದರೂ ಇವುಗಳಲ್ಲಿ ಕ್ವಚಿತ್ತಾಗಿ ಮೊದಲಿನದು ಹೊಸಕವಿಗಳಲ್ಲಿಯೂ, ಎರಡನೆಯದು ಹಳೆಯ ಕವಿಗಳಲ್ಲಿಯೂ ಬಳಕೆಯಾಗಿದೆ.

12 "ಗಡಿಗೆಯ ಪಾಲುರ್ವಿ ಘಮುಘಮೆನುತಿರೆ" ಎಂಬುದು ಲೀಲಾವತಿಯ ಪ್ರಯೋಗ (೫-೧೨೩.)

13 ವರ್ಣಪಲ್ಲಟದಲ್ಲಿ ಅರ್ಥಭೇದವಾಗಕೂಡದು. ಆದರೂ ಇದಕ್ಕೆ ಅಪವಾದವಾಗುವ ಒಂದೆರಡು ನಿದರ್ಶನಗಳುಂಟು. ಅಲ್ಲದೆ ಶಬ್ದಾಂತರದೊಡನೆ ಮೂಲಾರ್ಥದ ವ್ಯಾಪ್ತಿಯು ವಿಕಾಸಗೊಂಡ ಅರ್ಥಭೇದವೂ ಕಾಣಬಹುದು.

14 ವಡ್ಡಾರಾಧನೆಯ ಬೇರೆಯ ಕತೆಗಳಲ್ಲಿ ಚಂಪಾನಗರ ಎಂಬ ಹೆಸರು ವಿಶೇಷವಾಗಿ ಬರುತ್ತದೆ.

15 ಇಲ್ಲಿ ಪಾಠಾಂತರವೆಂದು ಸೂಚಿಸಿರುವುದೇ ಮೂಲಪಾಠವಾಗಿರಬೇಕೆಂದು ತೋರುತ್ತದೆ. ನೋಡಿ—ಮೇಲುದಱ ಸೆಱಂಗನೋಸರಿಸುವಂತಿರೆ—(ಶಮುದ. ೧೨೦-೪.)

(iv) ಅಂಧಾನುಸರಣೆ: ಜಗಂಗಳಂ: ಗಜಂಗಳಂ (ಕ. ಖ. ಗ.) (ಪಂಪಭಾ. ೧೧-೧೦೦)
ಗುರ್ದುಂ: ದುರ್ಗಂ (ಕ. ಖ. ಗ.) (ವಡ್ಡಾ. ೧೩೬—೧೦.)

(v) ಅಬೋಧತೆ:[16]

(1) ವೇರಣಿಗಿತಿ: ರೇವಣಗಿತಿ

ವೇರಣಿಗಿತಿ[17] (ಶಮದ. ಮೈಸೂರು ಮುದ್ರಣ, ೧೯೫೯. ಪು. ೧೬೨)—ರೇವಣಗಿತಿ (ಖ) ಪೇರಡಿಗಿತಿ (ಕಿ. ಪ.) ವೇರಡಿಗಿತಿ (ಶಮದ. ಮಂಗಳೂರು ಮುದ್ರಣ, ೧೯೨೦.) ಪೇರಡಗಿತ್ತಿ (ಸೂಕ್ತಿಸು. ೮-೧೦೬)—ವೇಡರಗಿತ್ತಿ (ಬ.)

(2) ಬೊಗಸೆ ಎಂಬರ್ಥದ ಬಗಸಿರೆ, ಬಗಸೆರೆ, ಬೆಲಗಸೆ ಮೊದಲಾದ ಶಬ್ದರೂಪಗಳಲ್ಲಿ:

ಬಗಸಿರೆ (ಪಂಪಭಾ. ೧೨-೧೫೩)—ಬೆಗಸಲೆ (ಖ) ಬೆಗೆಸರಿ (ಗ) ಬಗಸಲೆ (ಘ) ಬೆಲಗಸೆ (ಪ.)

ಬಗಸೆರೆ (ಗದಾಸಂ.: ಸಂ. ತೀ. ನಂ. ಶ್ರೀ. ಪು. ೧೨೪ರ ಟಿಪ್ಪಣಿಯಲ್ಲಿ ಬಗಸೆರೆ=ಬೆಸಲಗೆ=ಬೆಲಗಸೆ—ಬೊಗಸೆ ಎಂದು ಬರೆಯಲಾಗಿದೆ.)

—ಬೆಲಗಸೆ (ಗದಾಯುದ್ಧ: ಸಂ. ಕೆ. ವಿ. ಕೃಷ್ಣಭಟ್ಟ ೩-೨೮.)

—ಬೆಸಲಗೆ (ಗದಾಯು: ಸಂ. ಮಂ. ಆ. ರಾ. ಹಾಗೆಯೇ ಮದ್ರಾಸು ಓ. ಲೈ. ಪ್ರತಿಯ ನಕಲು)

ಅಜಿತಪುರಾಣದ ೬-೧೫ ನೆಯ ಪದ್ಯವನ್ನು ಉದಾಹರಿಸುವ:

(i) ಕಾವ್ಯಾವಲೋಕನದಲ್ಲಿ: ಬೆಲಗಸೆ (ಪ. ೮೫೫.)—ಬೆಲಸಗೆ (ಅ.)

(ii) ಸೂಕ್ತಿಸುಧಾರ್ಣವದಲ್ಲಿ: ಬೆಲಗಸೆ (೮-೨೬೯.)—ಬೆಳಸಿಗೆ (ಖ. ಬ.)

ಈ ಉದಾ.ಯಲ್ಲಿ ಶಬ್ದಾಂತರಗಳಿಂದ ಅರ್ಥಭೇದವೇನೂ ಆಗಿಲ್ಲ.[18] ಲೋಕರೂಢಿಯಲ್ಲಿ—ಹಲವು ಶಬ್ದಗಳ ಮೂಲರೂಪಗಳು ಗ್ರಾಂಥಿಕ ಪ್ರಯೋಗಗಳಲ್ಲಿ ಯಥಾರೀತಿಯಲ್ಲಿ ನಿಲ್ಲುವುದು ಹಲಮಟ್ಟಿಗೆ ಸಾಧ್ಯವಾದರೂ ಲೋಕರೂಢಿಯಲ್ಲಿ ಕೆಲಮಟ್ಟಿಗಾದರೂ ಅದು ಕಷ್ಟ. ಶಬ್ದೋಚ್ಚಾರಣೆಯ ಸಂದರ್ಭದಲ್ಲಿ ಸೌಲಭ್ಯಾಕಾಂಕ್ಷೆಯೋ ಮಿತವ್ಯಯಾಸಕ್ತಿಯೋ, ಶಬ್ದಕ್ಲೇಶವೋ ಉಚ್ಚಾರದೌರ್ಬಲ್ಯವೋ, ಪ್ರದೇಶರೂಢಿಯೋ ಅಂಧಾನುಸರಣೆಯೋ, ಅಶಿಕ್ಷಿತ ಪ್ರಕೃತಿಯೋ ನಿಜರೂಪಭ್ರಾಂತಿಯೋ ಕಾರಣವಾಗಿ, ವ್ಯವಹಾರ ಭಾಷೆಯಲ್ಲಾಗುವ ಇತರ ಮಾರ್ಪಾಡುಗಳಲ್ಲಿ ಒಂದಾಗಿ, ವರ್ಣಪಲ್ಲಟವೂ ಘಟಿಸುತ್ತಿರುತ್ತದೆ. ಇಂತಹ ಪಲ್ಲಟಗಳು ಸಾಮಾನ್ಯವಾಗಿ ನಿರ್ದಿಷ್ಟ ಪರಿಸರಗಳಲ್ಲಿಯೇ ನಡೆಯುವುದೆಂಬುದನ್ನು ನಿದರ್ಶನಗಳ ವಿಶ್ಲೇಷಣೆಯಿಂದ ತಿಳಿಯಬಹುದು. ಇಂತಹ ನಿದರ್ಶನಗಳು ಆಗಿಂದಾಗ್ಗೆ ಅನುಭವಗೋಚರವಾಗುವಂತೆ, ಮಾತಿನಲ್ಲಿ ಕಾಣಿಸಿಕೊಂಡು ಮಾಯವಾಗುವಂತೆ, ಕ್ವಚಿತ್ತಾಗಿ ರೂಢಿಯಲ್ಲಿಯೂ ಬರೆಹದಲ್ಲಿಯೂ ನೆಲೆನಿಲ್ಲಬಹುದು.

(i) ಕಿಟ್ಟೆಲ್ ನಿಘಂಟಿನಲ್ಲಿ ದೊರೆಯುವ ಉದಾಹರಣೆಗಳಲ್ಲಿ ಕೆಲವು: ಅರಳಿ—ಅಳಲಿ, ಕಣಗಿಲೆ—ಕಣಲಿಗೆ, ಕಾಲವೆ—ಕಾವಲೆ, ಹೆಳಲು—ಹೆರಳು, ತಿರುಳು—ತಿಳಲು, ರಾಮಾಯಣ—

---

[16] ಪ್ರಾಯಶಃ ಶಬ್ದಾರ್ಥವು ಅಬೋಧವಾಗಿದ್ದು, ಅವ್ಯುತ್ಪನ್ನಮತಿಯಾದ ಪ್ರತಿಕಾರನು ಒಮ್ಮೆ ಮಾಡುವ ಒಂದು ತಪ್ಪು ಮುಂದೆ ಹಲವು ಸಂಕ್ಲೇಶಗಳಿಗೆ ಎಡೆಮಾಡಬಹುದು.

[17] ವೇರಟಕಿ—ಎಂದರೆ ಅಲ್ಪ, ಅಕುಲೀನ ಎಂದು ಸಂ. ನಿಘಂಟಿನಲ್ಲಿ ಹೇಳಿದೆ. ಪ್ರಸ್ತುತ ಶಬ್ದವು ಸ್ತ್ರೀಲಿಂಗದ ತದ್ಧಿತಾಂತರೂಪ. 'ರೇವಣಗಿತಿ' ಎಂಬ ಶಬ್ದಕ್ಕೆ ಅರ್ಥವಿಲ್ಲ.

[18] ಇವರೊಂದಿಗೆ ಬರಡಗೆ: ಬರಗಡೆ (ಲೀಲಾವತಿ ೨-೧೦೧) ಎಂಬುದನ್ನೂ ನೋಡಿ. (ಪ್ರ. ಕ. ೪೨ ೧ ರಲ್ಲಿ, 'ಕನ್ನಡದ ಕಿಡಿಗಳು' ವಿಭಾಗದಲ್ಲಿ ಪ್ರೊ. ಡಿ. ಎಲ್. ಎನ್., ಅವರ ಲೇಖನ ನೋಡಿ.)

ರಾಮಾಣ್ಯ, ಗುಂಜು—ಜುಂಗು, ಅಲುಗು—ಅಗುಲು, ಕಾಸರಿಕೆ—ಕಾರಸಿಕೆ[19], ಚರವಿಗೆ—ಚವರಿಗೆ[20] ಇತ್ಯಾದಿ.

(ii) ವ್ಯವಹಾರದಲ್ಲಿ; ಸಾಮಾನ್ಯವಾಗಿ ಅಶಿಕ್ಷಿತ ಪ್ರಕೃತಿಯ ಜನಸಾಮಾನ್ಯದಲ್ಲಿ: ಅಲುಗಾಡು—ಅಗಳಾಡು,[21] ಹಣೇಬರಹ—ಹಣೀಭಾರ, ಫಲಾಹಾರ—ಫರಾಳ. ಕಾಗದ—ಕಾದಗ, ಒಳಲೆ—ಒರಳೆ, ತಳಿರು—ತರಿಳು, ಕಾಲವೆ—ಕಾವಲಿ[22] ಇತ್ಯಾದಿ.

(iii) ರೂಢಿಯ ಸಂಸ್ಕೃತ ಶಬ್ದಗಳನ್ನು ಅಶಿಕ್ಷಿತರಾದ ಗ್ರಾಮೀಣರು ಉಚ್ಚರಿಸುವಾಗ ಉಚ್ಚಾರದೌರ್ಬಲ್ಯಮೂಲವಾದ ಸೌಲಭ್ಯಾಕಾಂಕ್ಷೆಯ ಪರಿಣಾಮವಾಗಿ:

ಉತ್ಸವ-ಉಸ್ತವ; ವ್ಯತ್ಯಾಸ-ಯೆತ್ವಾಸ; ಪ್ರಹ್ಲಾದ-ಪಲ್ಹಾದ;[23] ಜಿಹ್ವೆ-ಜಿವ್ಹೆ.[23] ಇ.,

(iv) ತ್ವರೆ, ಅನವಧಾನ, ಮೊದಲಾದ ಕಾರಣಗಳಿಂದ:

ಪ್ರಣಾಮ=ಪ್ರಮಾಣ; ಬಹುವ್ರೀಹಿ=ಬಹುರ್ವೀಹಿ; ಬೆಗಡು=ಬೆಡಗು ಇತ್ಯಾದಿ ಗ್ರಂಥಗಳಲ್ಲಿ:

1. ರೇಫದ ಅಸ್ಥಿರತೆ:[24]

(i) ಕರ್ದುಂಕು:[25] ಕದ್ರುಂಕು, ಕದ್ರುಕು, ಕದೃಂಕು (ಭೈರವೇಶ್ವರಕಾವ್ಯ ೧೨-೭೮, ೮೧, ?)

(ii) ಅದಿರ್ಗಂತಿ: ಅದ್ರಗಂತಿ (ಕ.), ಅದೃಗಂಚಿ (ಖ.), ಅದ್ರಿಗಂತಿ (ಗ.) ಅದ್ರುಗಂತಿ (ಜ.), ಅದ್ರಿಗಂತಿ (ಜ.), (ನಂಬಿಯಣ್ಣನ ರಗಳೆ ೭೪.)

(iii) ಬಣ್ಣರಸಂ:<ಬಣ್ಣಸರಂ (?)[26]

---

[19] ಕಾಸರಕ (ಭರಚ. ಸಂ., ೨೯೫-೨೧.); ಕಾರಸಿಕೆ ಎಂಬುದು ನಾಚಿರಾಜೀಯದಲ್ಲಿ ಪಾಠಾಂತರವಾಗಿ ಬಂದಿದೆಯೆಂದು ಕಿಟ್ಟೆಲಿನಲ್ಲಿ ಹೇಳಿದೆ.

[20] ಚರುವಿಗೆ (ಸಿದ್ಧರಾಮಚರಿತೆ ೯-೩.)—ಇದೇ ಮೊದಲ ರೂಪವೆಂದು ಕಾಣುತ್ತದೆ. ಕಿಟ್ಟೆಲ್ ಈ ಶಬ್ದಕ್ಕೆ ಕನ್ನಡೇತರ ದ್ರಾವಿಡಗಳ ಪರ್ಯಾಯಶಬ್ದಗಳನ್ನು ಕೊಟ್ಟಿದ್ದಾರೆ: ಚವರಿಗೆ (ಜಾನಪದ ಕಥನ ಗೀತೆಗಳು—ಪು. ೪೬೨). ಈಗ ರೂಢಿಯಲ್ಲಿ ಚೌರಿಗೆ, ಚರಿಗೆ ಎನ್ನುತ್ತಾರೆ. ಚರುವಿಗೆ>ಚವುರಿಗೆ>ಚೌರಿಗೆ>ಚರಿಗೆ ಎಂದಾಗಿರಬಹುದು. (ಅರ್ಥ: ತಂಬಿಗೆ, ಬಿಂದಿಗೆ.)

[21] ಹೋಲಿಸಿ: ತಗುಲು—ತಲುಗು (ತೆ.) ಈ ಸಾಲಿನ ಉದಾ.ಗಳು ಬರೆಹದಲ್ಲಿಯೂ ಪ್ರವೇಶಿಸಿವೆ.

[22] ಉತ್ತರ ಕರ್ನಾಟಕದಲ್ಲಿ "ಶಾಸನಗಳ ಬಾಯ್ಕಾಲ್, ಅನಂತರ ಸಾಹಿತ್ಯದ ಕಾಲ್ವಾಯ್, ಕಾಲ್ವೆಯಾಗಿ, ಅಕ್ಷರ ಪಲ್ಲಟ ಪಡೆದು ಕಾವಲಿಯಾದಾಗ 'ಗಟಾರ' ಎನ್ನುವ ಹೀನಾರ್ಥವನ್ನು ಕೊಡಲು ಪ್ರಾರಂಭಿಸಿತು." (ಕನ್ನಡ ಭಾಷಾಶಾಸ್ತ್ರ: ಪು. ೧೨೫-೧೨೬) ಹಾಗೆಯೇ ಇದೇ ಕೃತಿಯಲ್ಲಿ ಎಲ್ಲಾಪುರ=ಏಲಾಪುರ>ಏಲೂರ>ಏರೂಳ>ವೇರೂಳ ಎಂಬುದರ ಸೂಚನೆಯನ್ನೂ ನೋಡಿ (ಪು. ೧೭೪.)

[23] ಇಂಥವು ಪ್ರದೇಶರೂಢಿ, ಅಂಧಾನುಸರಣೆಗಳ ದೆಸೆಯಿಂದಲೂ ಬಳಕೆಗೆ ಬಂದಿವೆ; ಬರೆಹವನ್ನೂ ಪ್ರವೇಶಿಸಿವೆ.

[24] (i) ರೇಫವು ಹೆಚ್ಚು ಜಾರಿಕೆಯ ವರ್ಣವಾದುದರಿಂದ ಪದದ ಯಾವ ಪರಿಸರದಲ್ಲಿದ್ದರೂ ಸ್ಥಾನಾಂತರಗೊಳ್ಳುವ ಸಂಭವವಿರುವಂತೆ ಕಾಣುತ್ತದೆ. (ii) (ಸಂ) ಸರಣಿ>ರಹಣಿ (ಕ.) (?) (ನೋಡಿ: ರಹಣಿಯೆನಲ್ ಸರಣಿ—ಭಾರತ ನಿಘಂಟು ೧೨೧.) (iii) "'ಪಾದರಸ' ವರ್ಣಪಲ್ಲಟವನ್ನು ಪಡೆದು 'ಪಾರದ'ವಾಯಿತು" ಎಂದು ಒಂದೆಡೆ ಸೂಚಿಸಿದೆ (ಕನ್ನಡ ಭಾಷಾಶಾಸ್ತ್ರ—೧೦೩). ಇದು ಸರಿಯಿರಲಾರದು. ಏಕೆಂದರೆ ಪಾರದದಿಂದಲೇ ಪಾದರಸ ಬಂದಿರುವುದು ಸಂಭವನೀಯ: ಪಾರದಃ+ರಸಃ (ಸಂ.)>ಪಾರದರಸ>ಪಾದರಸ (ಆದ್ಯರಕಾರಚ್ಯುತಿ) (?)

[25] ಕರ್ದುಂಕು—ಕದ್ರುಂಕು (ಕಿ.), ಕದೃಕು, ಕದೃಕ್ಕು, ಕದ್ರುಂಕು (ಜೈಮಿನಿಭಾರತದ ಹಳೆಯ ಮುದ್ರಣ: ೩-೧೧೩, ೧೧-೨೨.)

[26] ವರ್ಣ (ಬಣ್ಣ) ಮತ್ತು ಸ್ವರ (ಸರ) ಎಂಬ ಸಂಗೀತ ಪರಿಭಾಷೆಯ ಎರಡು ಶಬ್ದಗಳು ಸೇರಿ ಆದ ಸಮಾಸಶಬ್ದವಿದು. ಆದಿಪು. ದಲ್ಲಿ ತೀರ್ಥಕರ ಜನ್ಮಾಭಿಷೇಕೋತ್ಸವದ ಸಂದರ್ಭದಲ್ಲಿ ಇದು ಬಂದಿದೆ. ಬಣ್ಣಸರಂ ಎಂಬ ಶಬ್ದವೇ, ಸದೃಶಸಂದರ್ಭದಲ್ಲಿ, ಅದೇ ಅರ್ಥದಲ್ಲಿ ಅಜಿಪು. ದಲ್ಲಿ ವರ್ಣಪಲ್ಲಟಗೊಂಡು ಬಣ್ಣರಸಂ

ಬಣ್ಣರಸಂ (ಅಜಿತಪುರಾಣ ೧೫-೩೧.)<ಬಣ್ಣಸರಂ (ಆದಿಪುರಾಣ ೧೯-೩೧.)

(iv) ಅರಣ್ಯ (ಸಂ.): ಆರ್ನ್ಯಾಣ (ಗರತಿಯ ಹಾಡು—೧೭೪)

(v) (ಕವರೀ> ? ಸಂ.) ಕವುರಿ (ಕಿ.)—ಕುರವಿ (ಮಂಗನಿ. ೧೧೬.)

2. ಲಕಾರ ಳಕಾರಗಳ ಅಸ್ಥಿರತೆ—

(i) ಕುಲಾವಿ—ಕುವಾಲಿ (ಅವರ ನೆನೆದೇವು ೨೨-೩೧)[27]

(ii) ಅಗಳು—ಅಳಗು (ಭರತೇಶ್ವರ ವೈಭವ ಸಂಗ್ರಹ ೨೪೧-೩೧.)[28]

(iii) ಹಸಲುಗೂಳ್ (ಹರಿಶ್ಚಂದ್ರ ಕಾವ್ಯ ೩೯-೫೯): <ಹಳಸುಗೂಳ್ (?)[29]

3. ಅನುನಾಸಿಕ ವರ್ಣಗಳಲ್ಲಿ:

(i) ಪರಿಮಾಣ ವ್ರತ >ಪರಿಣಾಮ ವ್ರತ.

ಪರಿಮಾಣ ವ್ರತ (ಜೀವ ಸಂಬೋಧನಂ ೧೫೫-೯ ವ.)—ಪರಿಣಾಮ ವ್ರತ (ಜೀವಸಂ. ೧೫೫-೯೦.)[30]

---

ಎಂದು ಬಂದಿರುವಂತೆ ತೋರುತ್ತದೆ. ಬಣ್ಣಸರಂ ಎಂದು ಇದ್ದಲ್ಲದೆ, ಬಣ್ಣರಸಂ ಎಂದಿದ್ದರೆ, ಆ ಸಂದರ್ಭದಲ್ಲಿ ಆ ಪದ್ಯಾರ್ಥವು ಸ್ಪಷ್ಟವಾಗದು. ಅಜಿತಪು.ದ ಹಳೆಯ ಮತ್ತು ಹೊಸ ಮುದ್ರಣಗಳೆರಡರಲ್ಲಿಯೂ ಬಣ್ಣರಸಂ ಎಂದೇ ಇದೆ. ಇದು ಕವಿ ಪ್ರಯೋಗವೋ ಲೇಖನಪ್ರಮಾದವೋ ಸದ್ಯಕ್ಕೆ ಹೇಳುವುದು ಕಷ್ಟ.

27 ಸಂಪಾದಕರು ಅಡಿಟಿಪ್ಪಣಿಯಲ್ಲಿ ಕುವಾಲಿ=ಟೋಪಿ ಎಂದು ಬರೆದಿದ್ದಾರೆ. ಈ ಉದಾ.ಯೊಂದಿಗೆ ಲೋಕರೂಢಿಯ ಇತರ ಉದಾ.ಗಳನ್ನೂ ನೋಡಿಕೊಳ್ಳಬಹುದು.

28 ಉಗ್ರಾಣ ಮಂಗೇಶರಾಯರ ಗ್ರಂಥದಲ್ಲಿ ಅಗಳು (ಭರಚ. ೧೨-೯-೭೩) ಎಂದೇ ಇದೆ. ಶ್ರೀ ತ. ಸು. ಶಾಮರಾಯರು ಸಂಗ್ರಹ ಗ್ರಂಥದಲ್ಲಿ 'ಅಳಗು' ಎಂಬ ಪಾಠವನ್ನಿಟ್ಟುಕೊಂಡು, ಶಬ್ದಕೋಶದಲ್ಲಿ ಅಗಳು, ಕೆಂದಕ ಎಂಬರ್ಥವನ್ನು ಇದಕ್ಕೆ ಸೂಚಿಸಿದ್ದಾರೆ.

29 ಶ್ರೀ ರಾಮಾನುಜ ಅಯ್ಯಂಗಾರ್ಯರ ಮುದ್ರಿತ ಪ್ರತಿಯ ಪಾಠ ಕಲಸುಗೂಳ್ ಎಂದಿದೆ; ಉಳಿದೆಲ್ಲ ಪ್ರತಿಗಳಲ್ಲಿಯೂ ಹಸಲುಗೂಳ್ ಎಂದಿದೆಯೆಂದು ಹೊಸದಾಗಿ ಸಂಪಾದಿತವಾದ ಹರಿಶ್ಚಂದ್ರ ಕಾವ್ಯದ ಸಂಪಾದಕರು ತಿಳಿಸುತ್ತಾರೆ (ಪ್ರಕಾಶಕರು: ಪ್ರಾಚ್ಯ ಕಾವ್ಯಪ್ರಕಾಶ ಮಂದಿರ, ಮೈಸೂರು). ಈ ಶಬ್ದದ ಅರ್ಥವು ಸ್ಪಷ್ಟವಿಲ್ಲದೆಯೊ ಏನೋ, ಸದೃಶ ಸಂದರ್ಭಗಳಲ್ಲಿ ಅನ್ಯತ್ರ (ಉದಾ—ಲೀಲಾವತಿ ೧೫-೭೦) ಕಲಸುಗೂಳ್ ಇರುವುದರಿಂದಲೋ ಏನೋ, ಅದೇ ಪದವನ್ನು ಯೋಚಿಸಿರುವಂತಿದೆ. ಆದರೆ ಪ್ರಾಚ್ಯಕಾವ್ಯ ಪ್ರಕಾಶಮಂದಿರದ ಪ್ರತಿಯಲ್ಲಿ ಸರ್ವಪ್ರತಿಯ ಪಾಠವಾದ ಹಸಲುಗೂಳ್ ಪದವನ್ನಿರಿಸಿಕೊಂಡು, ಶಬ್ದಕೋಶದಲ್ಲಿ ತಂಗಳನ್ನ ಎಂಬರ್ಥವನ್ನು ಪ್ರಶ್ನಚಿಹ್ನೆಯೊಡನೆ ಸೂಚಿಸಿದೆ. ತಂಗಳನ್ನ ಎಂದರೆ ತಂಗೂಳು, ಬಿಸಿಯಾರಿದ ಅನ್ನ (ಬುತ್ತಿಗೂಳು ?) ಎಂಬರ್ಥವಿರಬಹುದಾದರೆ ಈ ಶಬ್ದವು ಬಹುಶಃ ಹಳಸುಗೂಳ್ ಎಂಬುದರ ವರ್ಣಪಲ್ಲಟ ಘಟಿತರೂಪವಿರಬಹುದೆಂದು ಸಂಪಾದಕರು ಗ್ರಹಿಸಿರುವಂತಿದೆ. ಅಲ್ಲದೆ ಅವರು ಕಲಸುಗೂಳ್ ಪದಕ್ಕಿಂತ ಹಸಲುಗೂಳ್ ಪದವೇ ಹೆಚ್ಚಿನ ಸಾರ್ಥಕತೆಯನ್ನು ಸಾಧಿಸುತ್ತದೆ ಎನ್ನುತ್ತಾರೆ. ಮೂಲಶಬ್ದದ ಳಕಾರ (ಹಳಸುಗೂಳ್) ಪಲ್ಲಟ ಶಬ್ದದಲ್ಲಿಯೂ ಯಥಾರೂಪದಲ್ಲಿ ಕಾಣುತ್ತಿದ್ದರೆ ಈ ಪಲ್ಲಟವನ್ನು ಖಚಿತವಾಗಿ ಒಪ್ಪಿಕೊಳ್ಳಬಹುದಾಗಿತ್ತು ಎಂದು ಕಾಣುತ್ತದೆ. (ಬಹುಶಃ ಇಲ್ಲಿ ನಾದಾನುಬಂಧಿಯಾಗಿ, ಳಕಾರದೆಡೆಗೆ ಪಾರ್ಶ್ವಿಕ ವರ್ಣವಾದ ಲಕಾರವು ಬಂದಿರಬಹುದು.)

30 ಜೈನಗೃಹಸ್ಥನಿಗೆ ವಿಧಿಸಿರುವ ಪಂಚಾಣುವ್ರತಗಳಲ್ಲಿ ಒಂದಾದ 'ಪರಿಗ್ರಹ ಪರಿಮಾಣವ್ರತ'ವನ್ನು ೧೫೫-೯೦ ನೆಯ ಪದ್ಯದಲ್ಲಿ ಮತ್ತು ಅದರ ಮುಂದಿನ ವಚನದಲ್ಲಿ ಪ್ರಸಂಗೋಚಿತವಾಗಿ ಹೇಳಿರುವಂತಿದೆ. ವಚನಭಾಗದಲ್ಲಿ ಪರಿಮಾಣವ್ರತವೆಂದು ಸರಿಯಾಗಿ ಇದ್ದು ಪದ್ಯದಲ್ಲಿ ಪರಿಣಾಮವ್ರತವೆಂದಿರುವುದು ಪ್ರಮಾದವಶದಿಂದಾಗಿರಬಹುದಾದ ಪಲ್ಲಟವೆಂದು ತೋರುತ್ತದೆ. 'ಪರಿಣಾಮ ಶುದ್ಧಿ' ಎಂಬ ಒಂದು ಪರಿಭಾಷೆಯ ಶಬ್ದವಿದೆಯಾದರೂ ಅದನ್ನು ವ್ರತವಾಗಿ ಹೇಳಿದಂತಿಲ್ಲ. ಸಂಪಾದಕರು ಬಹುಶಃ ಪದ್ಯದಲ್ಲಿರುವ ಪದವನ್ನು ಸರಿಯೆಂದು ಗ್ರಹಿಸಿ, ಅದರ ಆಧಾರದಿಂದ, ಮುಂದಿನ ವಚನಭಾಗದಲ್ಲಿರುವ ಮಾತನ್ನು ಪಲ್ಲಟವಿರಬಹುದೆಂದು ಭಾವಿಸಿ ಆವರಣ ಚಿಹ್ನೆಯಲ್ಲಿ (ಣಾಮ ?) ಎಂದು ಸೂಚಿಸಿದ್ದಾರೆ. (ಇನಿತಱಿಂದಗ್ಗಳಂ ಮಾಡೆನೆಂಬ—ಎನ್ನುವೆಡೆ 'ಪರಿಗ್ರಹಿಸೆನೆಂಬ' ಎಂಬ ಪಾಠಾಂತರ ಸಂದರ್ಭೋಚಿತವಾಗಿದೆ.) ಹೇಗಾದರೂ, ಎರಡರಲ್ಲೊಂದು ಶಬ್ದದಲ್ಲಿ, ಪಲ್ಲಟವಾಗಿರುವುದು ಕಾಣುತ್ತದೆ.

(ii) ಬಣ್ಣನೆ—ಬನ್ನಣೆ (ಭರಜ. ೧೪-೨೦, [31]ಹದಿಬದೆಯ ಧರ್ಮ ೧೧-೪೬, ೩-೩೦, ೮-೪೪, [32]ರಾಮಾಶ್ವಮೇಧಂ ೨೪-೬೧.)

4. ಯಕಾರ ವಕಾರಗಳಲ್ಲಿ : (ಅಂತಸ್ಥವರ್ಣಗಳು.)

ಕಯ್ವಾರ (ಕೈವಾರ) < ಕವೆಯಾರ (ವೃತ್ತ, ವೃತ್ತರೇಖೆ, ರೇಖಾಗಣಿತದ ಒಂದು ಉಪಕರಣ, 'ಕಂಪಾಸು')[33] ಕವೆಯಾರ (ಶಮದ. ಮೈ. ಪ್ರತಿ ೧೨—೨೭ ವೃ.)—ಕೈವಾರ (ಶಮದ. ಮಂ. ಪ್ರತಿ ಪು. ೩೨.)

ಕವೆಯಾರ> ಕವಯಾರ> ಕಯವಾರ> ಕಯ್ವಾರ (ಕೈವಾರ) (?)

5. ವರ್ಗೀಯ ವ್ಯಂಜನಗಳಲ್ಲಿ :

ಕುಂಗ : ಗುಂಕ.

[34]ಕುಂಗ (ಶಮದ. ೧೦-೫೬೨. ಕುಂಗರೆಂದು ಬೆಸದವರ್.)—ಗುಂಕ (ಕರ್ಣಾನಿ. ೬೭ ಗುಂಕರೆನಲ್ ಬೆಸದವರೊಳ್ ; ಅನಂತನಾಥ ಪುರಾಣ ೧೧-೧೨).

6. ರೇಫ ಳಕಾರಗಳಲ್ಲಿ :[35]

(i) ಮಳಾರ>ಮರಾಳ.

ಮರಾಳ (ಮಳಾರ) ಮೆಂದು ಕುದುರೆಯ ಪಟ್ಟಿ (ಶಮದ. ೩೮೩ ಪು.). ಇದರೊಂದಿಗೆ ಶಬ್ದಮಂಜರಿ ೪೨೦, ಕಬ್ಬಿಗರ ಕೈಪಿಡಿ ೬೭, ಇವನ್ನೂ ನೋಡಿ.

(ii) ನಾಳಿಕೇರ/ನಾರಿಕೇಳ.

ಸಂಸ್ಕೃತದಲ್ಲಿ ರಲಗಳ ಅಭಿನ್ನತೆಯಿಂದ ವಿವಿಧವಾಗಿ ಬರೆಯಲ್ಪಡುವ ನಾರಿಕೇರಃ ಪದವು ಕನ್ನಡದಲ್ಲಿ ರಳ ವಿಪರ್ಯಯ ವ್ಯಾಪ್ತಿಗೊಳಪಟ್ಟು ಮೇಲಿನ ಎರಡು ರೂಪಗಳಲ್ಲಿ ಪರ್ಯಾಯವಾಗಿ ಬಳಕೆಯಾಗುವುದೆನ್ನಬಹುದು. (ಉದಾ : ಸಂಬಿಯಣ್ಣನ ರಗಳೆ ಪು. ೬೭.)

---

[31] ಮೈ.ವಿ.ದ ಈ ಗ್ರಂಥದಲ್ಲಿ ಮೇಲಣ ಮೂರು ಆಕರಗಳಲ್ಲಿಯೂ ಬನ್ನಣೆ ಎಂಬುದೇ ಮೂಲ ಪಾಠವಿರಬೇಕೆಂದೂ, ಆಯೆಡೆಗಳಲ್ಲಿ [ಬಣ್ಣನೆ] ಎಂಬ ಸ್ವಕೀಯ ಪಾಠದ ಸೂಚನೆಯ ಆವಶ್ಯಕತೆ ಇರಲಿಲ್ಲ ವೆಂದೂ ಹೇಳಬಹುದು. ೧೯೩೫ ರ ಕಾವ್ಯಕಲಾನಿಧಿಯ ಪರಿಷ್ಕೃತ ದ್ವಿತೀಯ ಮುದ್ರಣದಲ್ಲಿ, ಈಯೆಡೆಗಳಲ್ಲಿ, ಬನ್ನಣೆಯೆಂದೇ ಪಾಠವಿದೆ. ಅರ್ಥಕೋಶದಲ್ಲಿ 'ವರ್ಣನೆ' ಎಂದು ಅರ್ಥವನ್ನು ಸೂಚಿಸಿದೆ.

[32] ಈ ಗ್ರಂಥದ ಕಾವ್ಯಾಲಯದ ಪ್ರಕಟನೆಯಲ್ಲಿ, ಎರಡು ಮುದ್ರಣಗಳಲ್ಲಿಯೂ ಮೊದಲು ಬನ್ನಣೆ ಯೆಂಬ ಪಾಠವನ್ನೊಪ್ಪಿ, ಅದನ್ನು ಪ್ರಮಾದವಾಗಿ ಭಾವಿಸಿ, ಆಮೇಲೆ ಬಣ್ಣನೆ ಎಂಬ ಪಾಠವನ್ನಿಟ್ಟಿರುವಂತೆ ಕಾಣುತ್ತದೆ. ಕಾವ್ಯಕಲಾನಿಧಿಯ ಮುದ್ರಣದಲ್ಲಿ ಬನ್ನಣೆಯೆಂದೇ ಇದೆ. ಇದೇ ಉಚಿತಪಾಠವೆನ್ನಬಹುದು.

[33] ಸೂಕ್ತಿಸುಧಾರ್ಣವದಲ್ಲಿ ಕವಯರ ಎಂಬ ಪ್ರಯೋಗವಿದೆ. (೧೪—೭೨—೭೭). ಕವೆಯಾರ> ಕವೆಯರ> ಕವಯರ—ಎಂದಾಗಿರಬಹುದು. ತಮಿಳಿನಲ್ಲಿ ಕವರಾಯ (ಜ) ಎಂಬ ರೂಪವಿರುವಂತೆ ಕಿ. ದಲ್ಲಿ ಹೇಳಿದೆ. ತೆಲುಗಿನಲ್ಲಿ 'ಕೈವಾರಮು' ಎಂಬ ಈಚಿನ ರೂಪ ಮಾತ್ರವೇ ಇರುವಂತಿದೆ.

[34] ಕಿ.ದಲ್ಲಿ ಕುಂಗ ಪದಕ್ಕೆ ವಿಾನುಗಾರ ಎಂಬ ಅರ್ಥವನ್ನು ಕೊಟ್ಟಿದೆ. ಈಯರ್ಥದಲ್ಲಿ ಈ ಶಬ್ದ ರೂಢಿಯಲ್ಲಿರಬಹುದೆಂದು ಕಾಣುತ್ತದೆ. ದ. ರಾ. ಬೇಂದ್ರೆಯವರ ಉಯ್ಯಾಲೆಯಲ್ಲಿ (೨೬—೩೧) ಇದೇ ಅರ್ಥ ದಲ್ಲಿ ಪ್ರಯೋಗವಿದೆ. ಅನಂಪು.ದ. ಗುಂಕ ಪದಕ್ಕೆ ಕೆಲಸದವನೆಂಬ ಅರ್ಥ ಒಪ್ಪುವುದಿಲ್ಲವೆಂದೂ, ಮರಾಠಿಯ 'ಗುಂಗ' ಎಂಬ ಪದಕ್ಕಿರುವ ದಡ್ಡ, ಗಾಂಪ ಎಂಬರ್ಥಗಳು ಹೊಂದುವಂತಿವೆಯೆಂದೂ, ಕುಂಗ ಶಬ್ದವೇ ಈ ಅರ್ಥದಲ್ಲಿ ಬೆಳೆದಿರಬಹುದೆಂದೂ ಶ್ರೀ ಎನ್. ಬಸವಾರಾಧ್ಯರು ಊಹಿಸುತ್ತಾರೆ. ಅಲ್ಲದೆ, ಈ ಅರ್ಥಗಳನ್ನು ಪೋಷಿಸುವುದೆಂಬಂತೆ ಈ ಪದ್ಯದ 'ಸೂಕ್ತಿ ಸುಧಾರ್ಣವ'ದ ಪಾಠದಲ್ಲಿ 'ಗುಂಕರುಂ' ಎಂಬ ಪದಕ್ಕೆ ಬದಲಾಗಿ 'ಗಾಂಪರುಂ' ಎಂಬ ಪದವೇ ಇರುವುದು ಗಮನಾರ್ಹವಾಗಿದೆ.

[35] ಈ ವಿಭಾಗದಲ್ಲಿಯೇ ಸೇರಿಸಬಹುದಾದ, ಪಲ್ಲಟವಿಧಿಯು ಸ್ಪಷ್ಟವಾಗಿ ತೋರದ ಕೆಲವು ಉದಾ ಹರಣೆಗಳು : (ತಬಿಲ್>) ತಳಲ್>ತರಳು (=ಮುತ್ತಕಾಯ್, ಶಮದ. ಪು. ೭೦.), (ನೆಬಿಲ್>) ನೆಳಲ್> ನೆರಳು, (ಮಬಿಲ್>) ಮಳಲ್>ಮರಳು. ಇವುಗಳಲ್ಲಿ ಪಲ್ಲಟವಿಧಿ ಳಲ>ಲಳ>ರಳ ಕ್ರಮದಲ್ಲಿ ನಡೆದಿರ ಬಹುದು.

(iii) ಅರಳಿ (ಧರ್ಮಾಮೃ. ೩೫-೧೩೨. ಇ.,) <ಅಳರಿ (ಬಟ್ಟಮತ ೪೪-೧೧.)[36]

(vi) ಅರಳಿಯೆಲೆ (ಅಶ್ವಶಾಸ್ತ್ರ ೧೮-೧೨.,) <ಅಳರಿಯೆಲೆ (ಅಶ್ವಶಾ. ೧೬-೬.)[37]

(v) [38]ಅರಳೆಲೆ (ಪಂಪಭಾ. ೨-೪. ಇ.,) <ಅಳರೆಲೆ (ಸೂಕ್ತಿಸುಧಾರ್ಣವ[39] ೧೭-೭೫-೧೩೧,[40] ಶಬ್ದಪಾ. ೫೪.)

ಕೆಲವು ಸಂದೇಹಗಳು :

(1) ತಳರ್/ತೆರಳ್

ಹಳಗನ್ನಡದಲ್ಲಿ ತಳರ್ (ತಳರ್ಚು), ತೆರಳ್ (ತೆರಳ್ಚು) ಎಂಬೆರಡು ಭಿನ್ನಾರ್ಥದ ಪ್ರತ್ಯೇಕ ಧಾತುಗಳಿದ್ದು ಅವರಲ್ಲಿ ಪ್ರಯೋಗಸಿದ್ಧವಾಗಿ, ತಳರ್ ಚಲನಾರ್ಥದಲ್ಲಿಯೂ ತೆರಳ್ ಚಯನಾರ್ಥದಲ್ಲಿಯೂ ವಿಶೇಷ ಪ್ರಚುರವಾಗಿದ್ದು, ಇವು ರಳ ವಿಪರ್ಯಯ ವ್ಯಾಪ್ತಿಯಲ್ಲಿರುವ ಕಾರಣ, ಬರುಬರುತ್ತ ಅರ್ಥಭೇದವು ಸಂದಿಗ್ಧವಾಗಿ, ಅಗಣ್ಯವಾಗಿ, ತೆರಳ್ ಶಬ್ದವು ಚಲನಾರ್ಥವನ್ನೂ ಪಡೆದು, ಉಭಯಶಬ್ದಗಳಲ್ಲಿಯೂ ಅರ್ಥಸಾಮ್ಯವೇರ್ಪಟ್ಟ ಪರಿಣಾಮವಾಗಿ, ರೂಢಿಯಲ್ಲಿಯೂ ಬರೆಹದಲ್ಲಿಯೂ ಇವನ್ನು ಪರ್ಯಾಯವಾಗಿ ಬಳಸುವುದು ತೊಡಗಿ, ತೆರಳ್ ಚಯನಾರ್ಥದಲ್ಲಿ ಮಸುಕಾಗಿ, ಲುಪ್ತವಾಗಿ, ಚಲನಾರ್ಥದಲ್ಲಿ ವ್ಯಾಪಕವಾಯಿತೇ ಎಂಬುದು ವಿಚಾರಾರ್ಹವಾದ ವಿಷಯ.

(2) ಕೆಳರ್/ಕೆರಳ್

ಕೆಳರ್—ವಿಜೃಂಭಣೇ, ಕೆರಳ್ಚು—ಆಸ್ಫೋಟನೇ ಎಂದು ಶಮುದ. ದ ಧಾತುಪಾಠದಲ್ಲಿ

---

[36] ಕಡೆಯ ಈ ಮೂರು ಉದಾಹರಣೆಗಳಲ್ಲಿ ಅಳರಿ, ಅಳರಿಯೆಲೆ, ಅಳರೆಲೆ ಎಂಬ ಶಬ್ದಗಳು ಪದ್ಯಾದಿಯಲ್ಲಿ ಆರಂಭಶಬ್ದಗಳಾಗಿ ಬಂದಿವೆ. ಆದಕಾರಣ ಇವು ಪ್ರಾಸಸ್ಥಾನದ ಆವಶ್ಯಕತೆಗಾಗಿ ಅರಳಿ, ಅರಳಿಯೆಲೆ, ಅರಳೆಲೆ ಎಂಬ ಪ್ರಚಲಿತರೂಪಗಳಿಂದ ವರ್ಣಪಲ್ಲಟಗೊಂಡು ಬಂದುವೆಂದು ಹೇಳಲು ಸಾಧ್ಯವಿಲ್ಲ. ಕಾವ್ಯಾಧಾರಗಳನ್ನು ಗಮನಿಸಿದರೆ ಅರಳಿಯೆಂಬ ಶಬ್ದವು ಧರ್ಮಾಮೃತ, ಸಮಯ ಪರೀಕ್ಷೆ (೧೦೦-೧೧೮), ಗಿರಿಜಾಕಲ್ಯಾಣ (೧-೭) ಮುಂತಾದೆಡೆಗಳಲ್ಲಿ ಮೊದಮೊದಲು ಕಣ್ಣಿಗೆ ಬೀಳುತ್ತವೆ. ಶಾಸನಾಧಾರಗಳನ್ನು ಗಮನಿಸುವಲ್ಲಿ ಅಳರಿ ಎಂಬ ರೂಪವೇ ಹೆಚ್ಚು ಪ್ರಚಲಿತವಾಗಿ ಕಾಣುತ್ತದೆ. ಉದಾಹರಣೆಗೆ ಈ ಶಾಸನಗಳ ಉಲ್ಲೇಖವನ್ನು ನೋಡಬಹುದು : ಇಂಡಿಯನ್ ಆಂಟಿಕ್ವೆರಿ XII, ಪು. ೧೬, 14 ಬಿ, ಕ್ರಿ.ಶ. ೭೩೫ ; ಇ. ಆ. XIV, ೨೩೩, ೧೫೭-೬೦೦, ೯ ನೇ ಶತಮಾನ; ಎಪಿಗ್ರಾಫಿಯ ಕರ್ಣಾಟಕ XII (5), ತಿಪಟೂರು ೧೪೦-೬೯, ಕ್ರಿ.ಶ. ೯೦೦. ಇವುಗಳನ್ನು ನೋಡುವಲ್ಲಿ ಅಳರಿ ಎಂಬ ಮಧ್ಯ ಳಕಾರ ರೂಪವೇ ಪ್ರಾಚೀನವಾಗಿದ್ದು, ಮೂಲರೂಪವಾಗಿದ್ದು, ಎರಡನೆಯ ಘಟ್ಟದಲ್ಲಿ ಅರಳಿಯೆಂಬ ಅದರ ಪಲ್ಲಟರೂಪವು ಅದರೊಂದಿಗೆ ಪರ್ಯಾಯವಾಗಿ ಬಳಕೆಯಾಗುತ್ತಿದ್ದು, ಮೂರನೆಯ ಘಟ್ಟದಲ್ಲಿ ಈಚೆಗೆ 'ಅರಳಿ' ಎಂಬ ಪಲ್ಲಟರೂಪವೇ ಸ್ಥಾಯಿಯಾದಂತೆ ಹೇಳಬಹುದು. ಆದರೆ ವ್ಯಾಪ್ತಿಯಲ್ಲಿ 'ಅಳರಿ' ಎಂಬ ರೂಪವು ಬಹು ಹಿಂದೆಯೇ ಕುಗ್ಗುತ್ತ ನಡೆದಂತೆಯೂ ಆ ಸ್ಥಾನವನ್ನು 'ಅರಳಿ' ರೂಪವು ಆಕ್ರಮಿಸುತ್ತ ಬಂದಂತೆಯೂ ಕಾಣುತ್ತದೆ. (ಈ ಸಂದರ್ಭಕ್ಕೆ ಶಾಸನಾಧಾರಗಳನ್ನು ಒದಗಿಸಿಕೊಟ್ಟು ಉಪಕರಿಸಿದ ಶ್ರೀ ಎನ್. ಬಸವಾರಾಧ್ಯರಿಗೆ ನಾನು ಕೃತಜ್ಞ.)

[37] ಇಲ್ಲಿ ಮೂಲರೂಪವೂ ಪಲ್ಲಟರೂಪವೂ ಒಂದೇ ಕಾವ್ಯದಲ್ಲಿ ಪರ್ಯಾಯವಾಗಿ ಬಳಕೆಯಾಗಿರುವುದು ಗಮನಾರ್ಹವಾಗಿದೆ.

[38] ಅಳರೆಲೆ ಎಂಬುದರ ವಿರಳ ಪ್ರಯೋಗಗಳನ್ನು ಬಿಟ್ಟರೆ ಸಾಮಾನ್ಯವಾಗಿ 'ಅರಳೆಲೆ' ಎಂಬುದೇ ಕಾವ್ಯ ಪ್ರಸಿದ್ಧವಾದ ಶಬ್ದರೂಪ. ಅಜಿಪು. ದಲ್ಲಿ ಲಕಾರ ಳಕಾರ ಪ್ರಾಸದೊಡನೆ, ಪದ್ಯಾದಿಯಲ್ಲಿ 'ಅರಳೆಲೆ' ಎಂದು ಪ್ರಾರಂಭವಾಗಿರುವುದು ಗಮನಾರ್ಹವಾಗಿದೆ.

[39] ಇಲ್ಲಿ ಅಳರೆಲೆಗೆ ಎರಡು ಪ್ರತಿಗಳಲ್ಲಿ ಅರಳೆಲೆ ಎಂಬ ಪಾಠಾಂತರವುಂಟು.

[40] ಈ ಪ್ರಯೋಗವನ್ನು ನನಗೆ ತೋರಿಸಿಕೊಟ್ಟ ಪ್ರೊ. ಡಿ. ಕೆ. ಭೀಮಸೇನರಾಯರಿಗೆ ನಾನು ಕೃತಜ್ಞ. ಉಸ್ಮಾನಿಯಾ ವಿಶ್ವವಿದ್ಯಾಲಯದ ಶಮುದ. ದ ಪ್ರತಿಯಲ್ಲಿ ವ್ಯಾಖ್ಯಾನಕಾರನು ಅರಲ್ ಗೆ ಅಲರ್‌ರೂಪವನ್ನು ಹೇಳುವುದಲ್ಲದೆ 'ಅಳರೆಂದುಮುಂಟು' ಎಂದೂ ಹೇಳಿ ಒಂದು ಪ್ರಯೋಗಾಧಾರವನ್ನು ಕೊಟ್ಟಿದ್ದಾನೆ. ಇದು ಭ್ರಾಂತಿಮೂಲವಾದ ಅಭಿಪ್ರಾಯ. ಏಕೆಂದರೆ ಅಳರ್ ಎಂಬ ರೂಪ ಅಲರ್ಗೆ, ಕನ್ನಡದಲ್ಲಿ ಪ್ರಯುಕ್ತವಲ್ಲ. ಇಲ್ಲಿಯ ಶಬ್ದ ಮಕ್ಕಳ ಆಭರಣ ವಿಶೇಷ ಎಂಬರ್ಥದಲ್ಲಿ, ಪೂರ್ವಪದ ಅಳರಿ ಎಂದಿರುವ ಅಳರೆಲೆ ಶಬ್ದ. ಇಲ್ಲವೆ ಅರಳೆಲೆಯ ಪಲ್ಲಟರೂಪವಾದ ಅಳರೆಲೆ. (ನೋಡಿ : ಶಬ್ದಮಣಿದರ್ಪಣದ ಪಾಠಾಂತರಗಳು ಪು. ೫೪-೫೫.)

ಹೇಳಿದೆ. ಆದರೆ ಹಳಗನ್ನಡದಲ್ಲಿ ಕೆರಳ್ (ಕೆರಳ್ಚು) ಧಾತುವು ಬಳಕೆಯಲ್ಲಿ ಅಪ್ಪಾಗಿ ಕಂಡುಬರದೆ ಕೆಳರ್ ಧಾತುವು ಬಹು ಪ್ರಚುರವಾಗಿದ್ದು, ಉಭಯ ಶಬ್ದಾರ್ಥವನ್ನೂ ಪಡೆದುಕೊಂಡಿದ್ದಂತೆ ಕಾಣುತ್ತದೆ. ಆದ್ದರಿಂದ ಕೆಳರ್>ಕೆರಳ್ ಆಗಿರಬಹುದು. ಇಲ್ಲವೆ ಎರಡೂ ಪ್ರತ್ಯೇಕಧಾತು ಗಳಾಗಿದ್ದರೆ, ರಳ ವಿಪರ್ಯಯ ವ್ಯಾಪ್ತಿಯಲ್ಲಿರುವುದರಿಂದಲೂ, ಅರ್ಥಸಾದೃಶ್ಯವಿರುವು ದರಿಂದಲೂ ಬಳಕೆಯಲ್ಲಿ ಪರ್ಯಾಯವಾಗಿ ಪ್ರಯೋಗವಾಗುತ್ತಿದ್ದಿರಬಹುದೇ ಎಂಬುದು ವಿಚಾರಾರ್ಹವಾದ ವಿಷಯ.

(3) ಒಳಟಿರ್/ಒಟಿಲ್

ಹಳಗನ್ನಡದಲ್ಲಿ ಒಳಟಿರ್—ರಾವೇ, ಒಟಿಲ್—ಸ್ನೇಹೇ ಎಂಬ ಭಿನ್ನಾರ್ಥಗಳಲ್ಲಿಯೇ ಮೊದಮೊದಲು ಈ ಶಬ್ದಗಳು ಪ್ರಯೋಗವಾಗುತ್ತಿದ್ದು, ರಳ ವಿಪರ್ಯಯ ವ್ಯಾಪ್ತಿಯಲ್ಲಿರುವ ಕಾರಣ ಬರುಬರುತ್ತ ಅರ್ಥವು ಸಂದಿಗ್ಧವಾಗಿ, ಅಗಣ್ಯವಾಗಿ, ಒಟಿಲ್ ಸ್ನೇಹಾರ್ಥದಲ್ಲಿ ಅಪಕರ್ಷ ಗೊಂಡು, ಧ್ವನ್ಯರ್ಥದಲ್ಲಿ ಉತ್ಕರ್ಷಗೊಂಡು, ರೂಢಿಯಲ್ಲಿಯೂ ಒರೆಹದಲ್ಲಿಯೂ ವ್ಯಾಪ್ತಿಯನ್ನು ಪಡೆಯಿತೇ ಎಂಬುದು ವಿಚಾರಾರ್ಹವಾದ ವಿಷಯ. ಹೊಸಗನ್ನಡದಲ್ಲಿ, ಧ್ವನ್ಯರ್ಥಪಲ್ಲಿ 'ಒರಲು' ಶಬ್ದವು ಸ್ಥಾಯಿಯಾಗಿರುವುದನ್ನು ಗಮನಿಸಬಹುದು.[41]

7. ರೇಫಲಕಾರಗಳಲ್ಲಿ :

ಅಲರ್/ಅರಲ್, ಎಲರ್/ಎರಲ್, ಮಲರ್/ ಮರಲ್.[42]

ರೇಫ ಲಕಾರಗಳಲ್ಲಿ ವರ್ಣಪಲ್ಲಟವು ಸ್ಪಷ್ಟವಾಗಿ, ಸ್ವೇಚ್ಛೆಯಾಗಿ, ವಿಪುಲವಾಗಿ ಕಾಣು ವುದು ಈ ಮೂರು ನಿದರ್ಶನಗಳಲ್ಲಿ. ಸಾಮಾನ್ಯವಾಗಿ ಎಲ್ಲ ಹಳೆಯ ಕವಿಗಳೂ[43] ಈ ಶಬ್ದಗಳ, ಉಭಯ ರೂಪಗಳನ್ನೂ ಆವಶ್ಯಕವಾದ ಎಡೆಗಳಲ್ಲೆಲ್ಲ, ಸ್ವೇಚ್ಛೆಯಾಗಿ ಅನಿರ್ಬಂಧವಾಗಿ, ಸ್ವತಂತ್ರ ಶಬ್ದವಾಗಿಯೂ, ಸಮಾಸ ಶಬ್ದವಾಗಿಯೂ, ಕ್ರಿಯಾರೂಪವಾಗಿಯೂ ನಾಮರೂಪವಾಗಿಯೂ (ಇದು ಎಲರ್/ಎರಲ್‌ಗೆ ಅನ್ವಯಿಸುವುದಿಲ್ಲ.) ಬಳಸುವುದು ಕಂಡುಬರುತ್ತದೆ. ಇವರಲ್ಲಿ ಮೊದಲ ರೂಪ ಯಾವುದಿರಬಹುದು ?

ಶಬ್ದಮಣಿದರ್ಪಣದ ಸೂತ್ರ ೩೮ ರಲ್ಲಿ ನಿತ್ಯಲಾಂತಗಳಾದ ಕೆಲವು ಶಬ್ದಗಳ ಪಟ್ಟಿಯಲ್ಲಿ ಈ ಶಬ್ದಗಳು ಮಧ್ಯ ರೇಫೆಯಾಗಿ ಬಂದಿವೆ. ಸೂತ್ರ ೩೯ ರ ಪ್ರಕಾರ ಮಧ್ಯರೇಫೆಯ ಈ ಶಬ್ದ ಗಳಿಗೆ ರ ಲಕಾರಗಳ ವಿಪರ್ಯಯದಿಂದ ಮಧ್ಯ ಲಕಾರ ಶಬ್ದಗಳು ವಿಕಲ್ಪವಾಗಿ ಬರುತ್ತವೆಂದು ತಿಳಿಯುವುದು. ಇದು ಎಷ್ಟರಮಟ್ಟಿಗೆ ಪ್ರಯೋಗಸಿದ್ಧವಾದ ಸೂತ್ರವೆಂಬುದು ವಿಚಾರಾರ್ಹ

---

[41] ಮೂಲದ ಮಧ್ಯ ಳಕಾರ ಶಬ್ದಗಳು ಬೆಳವಣಿಗೆಯ ಘಟ್ಟದಲ್ಲಿ ಮಧ್ಯ ರಕಾರ ಶಬ್ದಗಳಾಗಿ ಮಾರ್ಪು ಗೊಂಡು ಮುಂದೆ ಸ್ಥಾಯಿರೂಪಗಳಾಗುವುದು ವರ್ಣಪಲ್ಲಟ ವಿಧಿಯಲ್ಲಿ ಒಂದು ಸಾಮಾನ್ಯ ಲಕ್ಷಣವಾಗಿ ಕಾಣುತ್ತದೆ. ಈ ಮೊದಲಿನ ಉದಾಹರಣೆಗಳಂತೆ ಈ ಮೇಲಿನ ಉದಾಹರಣೆಗಳಲ್ಲಿಯೂ ಈ ಪಲ್ಲಟವಿಧಿಯ ಪ್ರಭಾವವನ್ನು ಕೆಲವುಟ್ಟಿಗೆ ಕಾಣಬಹುದು. ಇದು ಬಹುಮಟ್ಟಿಗೆ ಶಬ್ದೋಚ್ಚಾರಣೆಯಲ್ಲಿ ಸೌಲಭ್ಯಾಕಾಂಕ್ಷೆಯ ಪರಿಣಾಮವಾಗಿ ಆದಂಥವೆನ್ನಬಹುದು. ಆದರೆ ಒಮ್ಮೊಮ್ಮೆ ತ್ವರೆ, ಉಚ್ಚಾರ ದೌರ್ಬಲ್ಯ. ಗ್ರಾಮ್ಯ ಪ್ರಯೋಗಗಳ ದೆಸೆಯಿಂದ ಸ್ಥಾಯಿರೂಪವೆನ್ನಬಹುದಾದ ರೇಫ ಳಕಾರಯುಕ್ತ ಶಬ್ದಗಳಲ್ಲಿ ಮತ್ತೆ ವರ್ಣಪಲ್ಲಟಗಳುಂಟಾಗು ವುದು ಸಹಜ.

[42] ಈ ಶಬ್ದಗಳ ರೂಪ ಮತ್ತು ಅರ್ಥಗಳಲ್ಲಿ ವಿಚಾರದ ತೊಡಕುಂಟು. ಅದು ಇಲ್ಲಿಗೆ ಪ್ರಸ್ತುತವಲ್ಲ. ಇಲ್ಲಿ ಪುಷ್ಪಾರ್ಥದಲ್ಲಿ ಮಾತ್ರ ಇವನ್ನು ಪರಿಭಾವಿಸಿದೆ. ಆದರೆ ಇವುಗಳ ಅನ್ಯಾರ್ಥಗಳಲ್ಲಿ ಕೂಡ ವರ್ಣಪಲ್ಲಟ ಗಳಾಗದಿಲ್ಲ. ಇಂಥವು ಕವಿ ಪ್ರಯೋಗಗಳಲ್ಲಿಯೂ ಪ್ರತಿಕಾರರ ಕೈವಾಡದಲ್ಲಿಯೂ ಸಮಾನವಾಗಿ ಕಾಣುತ್ತವೆ.

[43] ಕಾವ್ಯಾಧಾರಗಳನ್ನು ಗಮನಿಸುವಲ್ಲಿ ಕೇಶಿರಾಜನ ಕಾಲಕ್ಕೆ ಮುಂಚಿನ ನಾಗವರ್ಮನ ಕಾದಂಬರಿಯಲ್ಲಿ ಅರಲ್-ಅಲರ್ ಎಂಬೆರಡೂ ರೂಪಗಳು ದೊರಕುತ್ತವೆ ಎಂಬರ್ಥದಲ್ಲಿ ಕನ್ನಡ ಭಾಷಾಶಾಸ್ತ್ರದಲ್ಲಿ ಹೇಳಿದೆ (ಪು. ೧೦೨.). ಹಾಗೆ ನೋಡಿದರೆ ಪಂಪನ ಆದಿಪುರಾಣದಲ್ಲಿಯೆ ಇದನ್ನು ಕಾಣಬಹುದು (ನೋಡಿ. ಅಲರ್ ೧೨-೬೫, ಅರಲ್ ೧೧೪-೧೧೮.) ಹಾಗೆಯೇ ನೋಡಿ : ಅಲರ್ (ಪಂಪಭಾ. ೧-೫೫)-ಅರಲ್ (ಪಂಪಭಾ. ೧-೫೮.), ಎಲರ್ (ಪಂಪಭಾ. ೨-೧೨)-ಎರಲ್ (ಪಂಪಭಾ. ೫-೩೩).

ವಾದ ವಿಷಯ. ವಾಸ್ತವವಾಗಿ ಮೊದಮೊದಲು ಹಳಗನ್ನಡ ಕೃತಿಗಳಲ್ಲಿ ಮಧ್ಯ ಲಕಾರ ಶಬ್ದಗಳೇ ಅತಿ ಪ್ರಚುರವಾಗಿದ್ದು ಬರುಬರುತ್ತ ಮಧ್ಯ ರೇಫೆಯ ಶಬ್ದಗಳು ಅತಿ ಪ್ರಚುರವಾದುವೆಂದು ಕಂಡುಬರುತ್ತದೆ.[44] ವಸ್ತುಕ ಕವಿಗಳ ಪ್ರೌಢಶೈಲಿಯಲ್ಲಿ ಮೂಲರೂಪವಾಗಿರಬಹುದಾದ ಮಧ್ಯ ಲಕಾರ ಶಬ್ದಗಳು ಬಹುಮಟ್ಟಿಗೆ ಸ್ಥಾಯಿಯಾಗಿದ್ದು, ವರ್ಣಕ ಕವಿಗಳ ಸುಲಭಶೈಲಿಯಲ್ಲಿ ವರ್ಣ ಪಲ್ಲಟ ಘಟಿತ ಮಧ್ಯರೇಫೆಯ ಶಬ್ದಗಳು ಬಹುಪಾಲು ಸ್ಥಾಯಿಯಾದಂತೆ ತೋರುತ್ತದೆ. ಲೋಕ ರೂಢಿಯಲ್ಲಿ ಸೌಲಭ್ಯಾಕಾಂಕ್ಷೆಯಿಂದಾದ ರಲವಿಪರ್ಯಯದ ಪರಿಣಾಮವೇ ಇದರ ಮುಖ್ಯ ಕಾರಣವಿರಬಹುದು. ದಂತಮೂಲೀಯಗಳಾದ ಈ ವರ್ಣಗಳಲ್ಲಿ ಪಲ್ಲಟ ಸಹಜ. ಅಲ್ಲದೆ ಮಧ್ಯ ಲಕಾರ ಳಕಾರ ಶಬ್ದಗಳು ಕೆಲವು, ಕಾಲಕ್ರಮದಲ್ಲಿ ಮಧ್ಯ ರೇಫೆಯ ಶಬ್ದಗಳಾಗಿ ಮಾರ್ಪಟ್ಟಿರು ವುದರಲ್ಲಿ ವರ್ಣಪಲ್ಲಟದ ಒಂದು ಸಾಮಾನ್ಯ ಲಕ್ಷಣವನ್ನು ಗುರುತಿಸಬಹುದು. ಇಂಥ ಶಬ್ದಗಳು ಬಹುಮಟ್ಟಿಗೆ ಸ್ಥಾಯಿಸ್ವರೂಪದವು, ಮಿತಪ್ರಮಾಣದವು. ಪ್ರಾಯಶಃ ಕೇಶಿರಾಜನ ಕಾಲ ಕ್ಕಾಗಲೇ ಇಂಥ ಮಧ್ಯ ರೇಫೆಯ ಶಬ್ದಗಳು ಮಾತು ಮತ್ತು ಬರೆಹಗಳಲ್ಲಿ ಅಧಿಕವ್ಯಾಪ್ತಿಯನ್ನು ಪಡೆಯುತ್ತಿದ್ದುದೇ ಈ ಬಗೆಯ ಸೂತ್ರರಚನೆಗೆ ಕಾರಣವಾಗಿರಬಹುದು.

ಅನ್ಯ ಪರಿಸರಗಳಲ್ಲಿ : (1) ಅಸಗ : ಅಗಸ.

ವರ್ಣಪಲ್ಲಟದ ಯಾವ ವಿಧಿಗನುಸಾರವಾಗಿ ಪಲ್ಲಟವು ನಡೆಯಿತೆಂದು ಹೇಳಲು ಸದ್ಯಕ್ಕೆ ಸಾಧ್ಯವಿಲ್ಲದಿರುವ ನಿದರ್ಶನಗಳಲ್ಲಿ ಅಸಗ : ಅಗಸ ಸೇರುತ್ತದೆ. ವರ್ಣಪಲ್ಲಟ ಪ್ರಕರಣದಲ್ಲಿ ಇದೊಂದು ಧ್ರುವ ನಿದರ್ಶನ. ಹಳಗನ್ನಡ ನಡುಗನ್ನಡ ಶಾಸನಗಳಲ್ಲಿ, ಕೃತಿಗಳಲ್ಲಿ ಅಸಗ ಶಬ್ದವು ಬಹು ಪ್ರಚುರವಾಗಿದ್ದು, ಆ ಕಾಲದಲ್ಲಿ ಬಹುಶಃ ಕೇವಲ ಕ್ವಚಿತ್ ಪ್ರಯೋಗವಾಗಿದ್ದಿರಬಹು ದಾದ,[45] ಅದರ ವರ್ಣಪಲ್ಲಟ ಘಟಿತರೂಪವಾದ ಅಗಸ ಶಬ್ದವು ಸು. ೧೭ನೆಯ ಶತಮಾನದಿಂದೀಚೆ ಬಹು ಪ್ರಚುರವೂ ಸ್ಥಾಯಿಯೂ ಆಯಿತೆಂದು ಪ್ರಯೋಗಾಧಾರಗಳಿಂದ ತಿಳಿಯಬಹುದು. ಸು. ೧೬ ನೆಯ ಶತಕದ ಹಲವು ಕೃತಿಗಳಲ್ಲಿ ಅಸಗ ರೂಪವೇ ನಿಚ್ಚಟವಾಗಿ ಕಂಡುಬರುವಂತೆ,[46] ಸು. ೧೭ ನೆಯ ಶತಕದ ಮತ್ತು ಅದರ ಮುಂದಿನ ಕೃತಿಗಳಲ್ಲಿ ಅಗಸ ರೂಪವೇ ನಿಚ್ಚಟವಾಗಿ ಕಾಣುವುದು ಹೀಗೆ ಹೇಳುವುದಕ್ಕೆ ಮುಖ್ಯಕಾರಣ.[47] ಅಸಗ>ಅಗಸ ಆದುದು ಎಂದು, ಎಲ್ಲಿ, ಹೇಗೆ ಎಂಬುದನ್ನು ಸದ್ಯಕ್ಕೆ ತಿಳಿಯುವುದು ಕಷ್ಟ. ಸೌಲಭ್ಯಾಕಾಂಕ್ಷೆಯ ಪರಿಣಾಮವಾದ ಉಚ್ಚಾರ ಪ್ರಮಾದದಿಂದಾಗಿ, ಈಚೀಚೆಗೆ ಲೋಕರೂಢಿಯಲ್ಲಿ 'ಅಗಸ' ಎಂದು ಹೆಚ್ಚು ಬಳಕೆ ಯಾಗುತ್ತಿದ್ದುದು ಬರೆಹವನ್ನೂ ಹೊಕ್ಕಿರಬಹುದು.

(2) (ಬಿರ್ದಿನಂ>) ಬಿದ್ದಿನ >ದಿಬ್ಬಣ (?)

ಕ್ರಮ : ಬಿರ್ದಿನಂ> ಬಿದ್ಬಿನ> ಬಿದ್ದನ>ಬಿದ್ದಣ>ದಿಬ್ಬಣ (?)> ನಿಬ್ಬಣ (?)

ಇದನ್ನು ಹೀಗೆ ಸ್ಥೂಲವಾಗಿ ಗುರುತಿಸಬಹುದೆ?

ಬಿರ್ದು = ಔತಣ (ಪಂಪಭಾ. ೧೩-೩೪ ವ., ೬-೩೩ ವ.)

---

[44] ತಮಿಳು ತೆಲುಗುಗಳಲ್ಲಿಯೂ ಅಲರ್/ಅರಲ್ ಶಬ್ದಗಳಲ್ಲಿ ಮಧ್ಯ ಲಕಾರ ರೂಪವೇ ಪ್ರಾಚೀನ ಪ್ರಯೋಗಗಳಲ್ಲಿ ಮಿಗಿಲಾಗಿದ್ದು, ತರುವಾಯ ಮಧ್ಯರಕಾರ ರೂಪವು ವ್ಯಾಪ್ತವಾದುದು ಕಾಣುತ್ತದೆ. ದ್ರಾವಿಡ ವ್ಯುತ್ಪತ್ತಿಕೋಶದಲ್ಲಿಯೂ ಅಲರ್, ಅರಲ್ ಎಂಬ ಕ್ರಮದಲ್ಲಿಯೇ ಕನ್ನಡ ಶಬ್ದಗಳನ್ನು ಗುರುತಿಸಿರುವುದು ಕಾಣುತ್ತದೆ (ನಂ. 289).

[45] ಇದ್ದಿರಲಾರದೆಂದು ತೋರುತ್ತದೆ. ಪಂಚತಂತ್ರ ೯೮೯-೧೯೧ರಲ್ಲಿ ಮತ್ತು ಧರ್ಮಾಮೃತ ೩೩-೭೩ರಲ್ಲಿ 'ಅಗಸ' ಎಂದು ಬರುವ ಕ್ವಚಿತ್ ಪ್ರಯೋಗಗಳನ್ನು ಪ್ರಮಾದಜನ್ಯಗಳೆಂದು ತಿಳಿಯಲವಕಾಶವಿದೆ.

[46] ತೊರವೆ ರಾಮಾಯಣ, ನೇಮಿಜಿನೇಶ ಸಂಗತಿ, ಕುಮಾರರಾಮನ ಸಾಂಗತ್ಯ, ಸಾಳ್ವಭಾರತ, ಮೋಹನ ತರಂಗಿಣಿ, ನಾಗಕುಮಾರ ಕಥೆ, ಚೆನ್ನಬಸವ ಪುರಾಣ ಇತ್ಯಾದಿ. ಇದೇ ಕಾಲದ ಪುರಂದರದಾಸರ ಕೃತಿಗಳಲ್ಲಿ, ೯೯-೯೮-೮ರಲ್ಲಿ ಬರುವ ಅಗಸ ಪ್ರಯೋಗವನ್ನು ಪ್ರಾಮಾಣಿಕವೆಂದು ಗ್ರಹಿಸುವಂತಿಲ್ಲ.

[47] ಬಿಜ್ಜಳರಾಯ ಚರಿತೆಯ ೪೮, ೬೦, ೬೧ ರ ಪ್ರಯೋಗಗಳನ್ನು ಪ್ರಾರಂಭದ ಖಚಿತ ಪ್ರಯೋಗಗಳೆಂದು ಗ್ರಹಿಸಬಹುದೇನೋ ?

ಬಿರ್ದಿನಂ=ಔತಣಕ್ಕರ್ಹನು, ಅತಿಥಿ (ಪಂಪಭಾ. ೪–೪೪.)

ಬಿದ್ದಿನ=ಆತಿಥ್ಯಕ್ಕೆ ಅರ್ಹನಾದ ಸಂಭಾವಿತ, ಬೀಗ (?) (ಕುವ್ಯಾಭಾ- ೩-೧೦, ೪೬ ; ೩-೧೯, ೨೫ ; ೮-೨೪, ೫೭. ನೋಡಿ : ಬಿದ್ದಿನರೆನೆ ಬೀಗರ್ : ಭಾರನಿ. ೮.)

ದಿಬ್ಬಣ=ಬೀಗರ ಕಡೆಯ ಮದುವೆಯ ಮೆರವಣಿಗೆ (ಭರಚ. ೨೦-೮, ೯.)

ನಿಬ್ಬಣ=ಅದೇ ಅರ್ಥ. (ತೊರರಾ. ೨೧-೧೬-೪೩, ೧೩-೪೩ ಇ.)

ಭಾರತ ನಿಘಂಟಿನ ಅರ್ಥವನ್ನು ಆಧರಿಸಿ ಬಿದ್ದಿನ–ದಿಬ್ಬಣಗಳಿಗೆ ಸಂಬಂಧವನ್ನು ಬೆಸೆಯುವುದು ಕಷ್ಟ. ಕುಮಾರವ್ಯಾಸಭಾರತದ ಯಾವ ಪ್ರಯೋಗವೂ 'ಬೀಗ' ಎಂಬರ್ಥದಲ್ಲಿ ಖಚಿತವಾದುದಲ್ಲ. 'ದಿಬ್ಬಣ' ಶಬ್ದದ ಪೂರ್ವ ಪ್ರಯೋಗಾಧಾರಗಳಿಂದ, ಇದು ವಿಶದಪಡಬಹುದೇನೊ? ಆದರೆ ದಿಬ್ಬಣ—ನಿಬ್ಬಣಗಳು ಬೀಗರ ಕಡೆಯ ಮದುವೆಯ ಮೆರವಣಿಗೆ, ಮದುವೆ ಮೆರವಣಿಗೆ ಎಂಬರ್ಥದಲ್ಲಿ ಪರಸ್ಪರ ಸಂಬಂಧವುಳ್ಳ, ಬಿದ್ದಿನದಿಂದ ಬೇರೆಯೇ ಆದ ಶಬ್ದಗಳೆಂದು ಕಾಣುತ್ತದೆ. ಈಯರ್ಥದಲ್ಲಿರುವ ನಿಬ್ಬಣ—ನಿಬ್ಬಣಿಗ ಎಂಬ ಶಬ್ದಗಳಿಗೆ ಪೂರ್ವ ಪ್ರಯೋಗಗಳು ಕಾಣುತ್ತವೆ. (ನೋಡಿ : ನಿಬ್ಬಣ : ವರ್ಧ ಪು. ೪೫-೫೦, ನಿಬ್ಬಣಿಗ : ಸಂಬಿರ. ಪು. ೭೩.) ಇದಲ್ಲದೆ ಬಹುಮಾನ, ಕಾಣಿಕೆ ಎಂಬರ್ಥದ ನಿಬ್ಬಣವು (ತೆಲ್ಲಂಟಿಯೆಂದು ನಿಬ್ಬಣಂ : ಶಮದ. ೧೦-೧೧೦.) ಸಂಸ್ಕೃತ 'ನಿರ್ವಪಣಂ' ಶಬ್ದದ ತದ್ಭವವಾದ ಬೇರೆಯೇ ಶಬ್ದವಿರಬಹುದು. ಈ ವರ್ಣಪಲ್ಲಟವೆಂದು ಒಪ್ಪಬೇಕಾದರೆ ಈಯೆಲ್ಲ ಅಂಶಗಳು ವಿಶದವಾಗಬೇಕು.*

**ಟಿ. ವಿ. ವೆಂಕಟಾಚಲಶಾಸ್ತ್ರೀ**

---

* ಕೆಲವು ಸಂಕೇತಗಳು : ಖಮದ : ಖಗೇಂದ್ರಮಣಿ ದರ್ಪಣ, ಗದಾಸಂ. : ಗದಾಯುದ್ಧ ಸಂಗ್ರಹ, ಮಂಗನಿ : ಅಭಿನವಾಭಿಧಾನಂ, ಭರಚ : ಭರತೇಶ್ವರ ಚರಿತೆ, ಕರ್ಣಾನಿ : ಕರ್ಣಾಟಕ ನಿಘಂಟು (ಕಬ್ಬಿಗರ ಕೈಪಿಡಿ), ಕಿ: ಕಿಟ್ಟೆಲ್ ನಿಘಂಟು,ಪ್ರ. ಕ. : ಪ್ರಬುದ್ಧ ಕರ್ಣಾಟಕ.

# ರಾಜಸ್ನೇಹ

ನ ಸಖ್ಯಮಜರಂ ಲೋಕೇ ಹೃದಿ ತಿಷ್ಠತಿ ಕಸ್ಯಚಿತ್
ನ ದರಿದ್ರೋ ವಸುಮತೋ ನಾವಿದ್ವಾನ್ ವಿದುಷಃ ಸಖಾ
ನ ಶೂರಸ್ಯ ಸಖಾ ಕ್ಲೀಬಃ ಸಖಿಪೂರ್ವಂ ಕಿಮಿಷ್ಯತೇ
ಯಯೋರೇವ ಸಮಂ ವಿತ್ತಂ ಯಯೋರೇವ ಸಮಂ ಶ್ರುತಮ್
ತಯೋರ್ವಿವಾಹಃ ಸಖ್ಯಂ ಚ ನ ತುಪುಷ್ಟವಿಪುಷ್ಟಯೋಃ
ನಾಶ್ರೋತ್ರಿಯಃ ಶ್ರೋತ್ರಿಯಸ್ಯ ನಾರಥೀ ರಥಿನಃ ಸಖಾ
ನಾರಾಜಾ ಪಾರ್ಥಿವಸ್ಯಾಪಿ ಸಖಿಪೂರ್ವಂ ಕಿಮಿಷ್ಯತೇ

ಕವಿಗಳು ತಮಗೆ ಆಶ್ರಯದಾತರಾದ ಅರಸರ ಚರಿತ್ರೆಯನ್ನು ಕಾವ್ಯವಾಗಿ ಬರೆಯುವುದು ಹೊಸದಲ್ಲ. ಸ್ವಯಂ ಬಾಣಭಟ್ಟನೇ ಶ್ರೀಹರ್ಷನ ಚರಿತ್ರೆಯನ್ನು ರಚಿಸಿದ್ದಾನೆ! ಅನೇಕ ಕವಿಗಳು ತಮ್ಮ ಕೃತಿಗಳನ್ನು ರಾಜರಿಗೆ ಅಂಕಿತ ಮಾಡಿದ್ದಾರೆ, ಕೃತಿಸಮರ್ಪಣೆ ಮಾಡಿದ್ದಾರೆ. ಕೆಲವರು ಇನ್ನೂ ಒಂದು ಹೆಜ್ಜೆ ಮುಂದಿಟ್ಟು ರಾಜರಿಗೆ ಕವಿಯಶಸ್ಸನ್ನು ಕೊಡಿಸುವುದಕ್ಕಾಗಿ ತಾವೇ ರಚಿಸಿದ ಕೃತಿಗಳನ್ನು ತಮ್ಮ ಅರಸರ ಹೆಸರಿನಲ್ಲಿ ಪ್ರಚುರಪಡಿಸಿದ್ದಾರೆ. ಆ ರಾಜರೇ ಕೃತಿರಚನೆ ಮಾಡಿದವರೆಂದು ಲೋಕ ನಂಬುತ್ತದೆ! ಇದೆಲ್ಲ ರಾಜರ ಔದಾರ್ಯಕ್ಕೂ ಅವರ ಆಶ್ರಿತರಾದ ಕವಿಗಳ ಕೃತಜ್ಞತೆಗೂ ಒಪ್ಪುವ ಸಂಗತಿಗಳಾಗಿವೆ. ಆದರೆ ನಮ್ಮ ಕನ್ನಡದ ಮೊದಲ ಕವಿಯಾದ ಪಂಪನು ಒಂದು ಹೊಸ ಸಂಪ್ರದಾಯವನ್ನೇ ಸ್ಥಾಪಿಸಿದ್ದಾನೆ. ಆತನು ರಚಿಸಿದ ಭಾರತಕ್ಕೆ ಆತನ ಆಶ್ರಯದಾತನಾದ ಅರಸ ಅರಿಕೇಸರಿಯೇ ನಾಯಕ!

ವ್ಯಾಸಭಾರತವನ್ನು ಕನ್ನಡದಲ್ಲಿ ಹೇಳಹೊರಟ ಪಂಪನು ಭಾರತಕಥೆಗೆ ಅರ್ಜುನನೇ ಕಥಾನಾಯಕನೆಂದು ಕಲ್ಪಿಸಿ ಆ ಅರ್ಜುನನೇ ಕಲಿಯುಗದಲ್ಲಿ ಹುಟ್ಟಿ 'ವಿಕ್ರಮಾರ್ಜುನ'ನೆಂಬ ಹೆಸರು ಪಡೆದನೆಂದು ಹೇಳಿ ತನ್ನ ಕಾವ್ಯಕ್ಕೆ 'ವಿಕ್ರಮಾರ್ಜುನವಿಜಯ'ವೆಂದೇ ನಾಮಕರಣ ಮಾಡಿದ್ದಾನೆ. ಅರಿಕೇಸರಿ ಮಹಾರಾಜನಿಗೂ ಅರ್ಜುನನಿಗೂ ಅಭೇದ! ಅರಿಕೇಸರಿಯ ಬಿರುದಾವಳಿಯೆಲ್ಲ ಅರ್ಜುನನಿಗೆ ಸಂದಿದೆ. ಅರ್ಜುನನ ಜನನಕಾಲದಲ್ಲಿ ಬಂದಿದ್ದ ಇಂದ್ರನು ಅವನಿಗೆ 'ಚಾಳುಕ್ಯ ವಂಶೋದ್ಭವಂ ಶ್ರೀಮದರಿಕೇಸರಿ ವಿಕ್ರಮಾರ್ಜುನನುದಾತ್ತನಾರಾಯಣಂ ಪ್ರಚಂಡಮಾರ್ತಾಂಡನುದಾರಮಹೇಶ್ವರಂ ಕದನತ್ರಿಣೇತ್ರಂ ಪ್ರತಿಜ್ಞಾಗಾಂಗೇಯಂ ಶೌಚಾಂಜನೇಯನಕಳಂಕರಾಮಂ . . . ಸಾಮಂತಚೂಡಾಮಣಿ ಯೆಂದಿಂತಿವು ಮೊದಲಾಗೆ ಪಲವು ಮಷ್ಟೋತ್ತರಶತನಾಮಗಳನಿಟ್ಟ'ನೆಂದು ಪಂಪನ ಹೇಳಿಕೆ! ಅರ್ಜುನನನ್ನೇ ಚಾಳುಕ್ಯ ವಂಶೋದ್ಭವನೆನ್ನಲು ಅವನು ಹಿಂದೆಗೆಯಲಿಲ್ಲ! ಅಷ್ಟೇ ಅಲ್ಲದೆ ಪಂಪನು ಅರ್ಜುನನೇ ಹಿಂದಿನ ಜನ್ಮದಲ್ಲಿ ಶ್ರೀರಾಮನಾಗಿದ್ದನೆಂದು ಕಲ್ಪಿಸಿದ್ದಾನೆ. ಇಂದ್ರಪ್ರಸ್ಥದಲ್ಲಿ ಧರ್ಮರಾಯನು ರಾಜ್ಯಭಾರಮಾಡುತ್ತಿದ್ದಾಗ ಒಂದೇ ಕಡೆ ಇರುವುದಕ್ಕೆ ಬೇಸರವಾಗಿ 'ದಿಗಂಗನಾಮುಖಾವಲೋಕನ' ಮಾಡ ಬಯಸಿ ಕ್ಷೇತ್ರಪರ್ಯಟನ ಮಾಡುತ್ತ ದಕ್ಷಿಣಸಮುದ್ರದ ತೀರಕ್ಕೆ ಹೋದಾಗ ಅಲ್ಲಿ "ರಾಮಜನ್ಮೋತ್ಪತ್ತಿಯೊಳಾದ ತನ್ನಯ ಮುನ್ನಿನ ಸಾಹಸಂಗಳಂ" ನೆನೆಸಿಕೊಂಡು ಅಲ್ಲಿನ ಅಗಸ್ತ್ಯತೀರ್ಥದಲ್ಲಿ ಸ್ನಾನಮಾಡಿದನಂತೆ! ಪಂಪನಿಗೆ ಅರಿಕೇಸರಿಯನ್ನು ಎಷ್ಟು ಬಗೆಯಾಗಿ ಹೊಗಳಿದರೂ ತೃಪ್ತಿಯಿಲ್ಲ. ಅವನಿಗೆ ಅರಿಕೇಸರಿಯು ಆಶ್ರಯದಾತನಷ್ಟೇ ಅಲ್ಲದೆ ಸ್ನೇಹಿತನೂ ಆಗಿದ್ದಿರಬೇಕೆಂದು ತೋರುತ್ತದೆ. ಅವನು ತನ್ನ ಅರಸನ ಒಳ್ಳೆಯತನವನ್ನು ಬಹಳ ಮೆಚ್ಚಿಕೊಂಡಿರಬೇಕು. 'ಗುಣಾರ್ಣವನೊಳ್ಪು ಮನ್ಮನೋವಾಸಮನೆಯ್ದೆ ಪೇೞ್ದಪೆನ್' 'ಪೋಲಿಪೊಡೀತನುದಾತ್ತಪೂರ್ವಭೂಮಿಪರುಮನೊಳ್ಪಿನೊಳ್ ತಗುಳೆವಂದೊಡೆ ಯೀಕಥೆಯೊಳ್ ತಗುಳ್ಚಿ ಪೋಲಿಪೊಡೆನಗಟ್ಟಿಯಾದುದು ಗುಣಾರ್ಣವಭೂಭುಜನಂ ಕಿರೀಟಿಯೊಳ್"

ಎಂದು ಮುಂತಾಗಿ ಪಂಪನು ತನ್ನ ಅರಸನ ಹಿರಿಮೆಯನ್ನು ಹಾಡಿ ಹೊಗಳಿದ್ದಾನೆ. ಅರಿಕೇಸರಿ ನಿಜವಾಗಿಯೂ ಬಹಳ ಉದಾತ್ತಚರಿತನೇ ಆಗಿದ್ದಿರಬೇಕು. ಇಲ್ಲದಿದ್ದರೆ 'ಹಿತಮಿತವಚನ'ನೆಂದು ತಾನೇ ಹೇಳಿಕೊಂಡಿರುವ 'ಜಿನಸಮಯದೀಪಕ'ನಾದ ಪಂಪನು ತನ್ನ ಕಾವ್ಯಕ್ಕೆ ಆ ಅರಸನನ್ನೇ ಕಥಾನಾಯಕನಾಗಿ ಮಾಡಿ ಪುರಾಣಪುರುಷನಾದ ಅರ್ಜುನನನ್ನೂ ಐತಿಹಾಸಿಕ ವ್ಯಕ್ತಿಯಾದ ಅರಿಕೇಸರಿಯನ್ನೂ ಐಕ್ಯಮಾಡಿ ಅವನ ಬಿರುದುಗಳನ್ನು ಇವನಿಗೆ ಕೊಟ್ಟು ಇವನ ಬಿರುದು ಗಳನ್ನು ಅವನಿಗಿಟ್ಟು ಕಲಸುಮೇಲೋಗರ ಮಾಡುತ್ತಿರಲಿಲ್ಲ.

ಆದರೆ ಪಂಪನು ರಾಜನ ಅನುಗ್ರಹಾಕಾಂಕ್ಷಿಯಾದ ಸ್ತೋತ್ರಪಾಠಕನೆಂದು ಬಗೆದರೆ ದೊಡ್ಡ ತಪ್ಪಾಗುತ್ತದೆ. ಅವನು ಸ್ವತಂತ್ರ ಮನೋವೃತ್ತಿಯ ಧೀರಪುರುಷ. "ಪೆಱರೀವುದೇಂ ಪೆಱರ ಮಾಡುವುದೇಂ ಪೆಱರಿಂದವಪ್ಪುದೇಂ" ಎಂದು ನುಡಿದು ಜಿನೇಂದ್ರನೊಬ್ಬನ ಅನುಗ್ರಹ ಮುಖ್ಯವೇ ಹೊರತು ಬೇರೆ ಯಾರ ಕೃಪೆಗೂ ಆಸೆಪಡುವವನಲ್ಲವೆಂದು ಸೂಚಿಸಿದ್ದಾನೆ. ಇವನು ಕವಿ ಮಾತ್ರನಲ್ಲ, ಕಲಿಯೂ ಹೌದು. "ಚತುರಂಗಬಲ ಭಯಂಕರಣಂ, ನಿಷ್ಕಂಪಂ" ಎಂದು ಪಂಪನೇ ತನ್ನ ವಿಷಯವಾಗಿ ಹೇಳಿಕೊಂಡಿದ್ದಾನೆ. ತನ್ನ ಅರಸನ ಯುದ್ಧಗಳಲ್ಲಿ ಪಂಪನು ಪಾಲ್ಗೊಂಡು ಅರಾತಿಗಳನ್ನು ಹೊಡೆದು ಓಡಿಸಿದ ಕೀರ್ತಿ ಅವನಿಗುಂಟು! ಇಂಥ ಸ್ವಯಂ ಯುದ್ಧವೀರನಾದ ಕವಿಯ ಪ್ರಶಂಸೆಗೆ ಪಾತ್ರನಾದ ಆ ದೊರೆ ನಿಸ್ಸಂದೇಹವಾಗಿಯೂ ಶೂರನೂ ಧರ್ಮಾತ್ಮನೂ ಆಗಿದ್ದಿರಬೇಕು.

ಪಂಪನು ಅರಿಕೇಸರಿಯನ್ನು ಮೆಚ್ಚಿ ಹೊಗಳಿದ ಮಾತ್ರಕ್ಕೇ ಅವನನ್ನು ರಾಜಪಕ್ಷಪಾತಿ ಯೆಂದು ಹೇಳುವಂತಿಲ್ಲ. ಪಂಪಭಾರತದಲ್ಲಿಯೇ ಹಲವು ಸನ್ನಿವೇಶಗಳಲ್ಲಿ ರಾಜರ ಸ್ವಭಾವವನ್ನು ಕುರಿತು ಬಹಳ ಕಟುವಾಗಿ ಟೀಕಿಸಿದ್ದಾನೆ. ಅಂಥವುಗಳಲ್ಲಿ ಒಂದು ದ್ರೋಣ ದ್ರುಪದನನ್ನು ಕಂಡ ಸನ್ನಿವೇಶ. ದ್ರೋಣ ದ್ರುಪದರಿಬ್ಬರೂ ಚಿಕ್ಕಂದಿನಲ್ಲಿ ಒಟ್ಟಿಗೆ ಧನುರ್ವಿದ್ಯಾಭ್ಯಾಸ ಮಾಡಿ ದವರು. ಅವರಿಬ್ಬರಿಗೂ ಸಾಕಷ್ಟು ಗೆಳೆತನವೂ ಇತ್ತು. ಆದರೆ ದ್ರುಪದ ತನ್ನ ತಂದೆಯ ಮರಣಾ ನಂತರ ಅರಸನಾಗಿ ಸಿಂಹಾಸನಾರೂಢನಾದನು. ದ್ರೋಣ ಬಡವನಾಗಿಯೇ ಉಳಿದು ಜೀವ ನೋಪಾಯಕ್ಕಾಗಿ ಹಲವು ನಾಡುಗಳಲ್ಲಿ ತೊಳಲಿ ಬಳಲಬೇಕಾಯಿತು. ಪರುಶುರಾಮನು ಸರ್ವನಿವೇದಕವೆಂಬ ಯಜ್ಞಮಾಡುತ್ತಿರುವನೆಂದೂ ಬೇಡಿದವರಿಗೆಲ್ಲ ಧನಕನಕಗಳನ್ನು ಬೇಕಾದ ಹಾಗೆ ಕೊಡುತ್ತಿರುವನೆಂದೂ ಕೇಳಿ ಅವನಲ್ಲಿಗೆ ಹೋದರೆ, ಅದೃಷ್ಟಹೀನನಾದ ದ್ರೋಣನಿಗೆ ಅಲ್ಲಿಯೂ ಐಶ್ವರ್ಯ ಲಭಿಸಲಿಲ್ಲ; ದಿವ್ಯಾಸ್ತ್ರಗಳು ದೊರೆತುವು!

ಪರಶುರಾಮನ ಬಳಿ ನಿರಾಸೆಯಾದ ಮೇಲೆ ದ್ರೋಣನು "ತನ್ನೊಡನಾಡಿ ಕೆಳೆಯಂ ದ್ರುಪದ"ನಲ್ಲಿಗೆ ಹೋದನು. ಆದರೆ ದ್ರುಪದನು ದ್ರೋಣನು ನಿರೀಕ್ಷಿಸಿದಂತೆ ಹಳೆಯ ಗೆಳೆಯ ನಾಗಿರಲಿಲ್ಲ. ಅವನಿಗೆ ದ್ರೋಣನ ಸ್ನೇಹ ಬೇಕಾಗಿರಲಿಲ್ಲ. ಅಷ್ಟೇ ಅಲ್ಲ, ಅವನು ತನ್ನ ಸ್ನೇಹಿತ ನೆಂದು ಗುರುತಿಸುವುದಕ್ಕೂ ಅವನು ಇಷ್ಟಪಡಲಿಲ್ಲ. "ರಾಜ್ಯಮದಿರಾಮದೋನ್ಮತ್ತನೂ ಗರ್ವ ಗ್ರಹವ್ಯಗ್ರಚಿತ್ತನೂ" ಆಗಿದ್ದ ದ್ರುಪದನು "ದ್ರೋಣನೆಂಬ ಬ್ರಾಹ್ಮಣ ಯಾರೋ ನನಗೆ ತಿಳಿಯದು. ಅವನನ್ನು ಆಚೆ ನೂಕು" ಎಂದು ದ್ವಾರಪಾಲಕರಿಗೆ ಹೇಳಿಕಳಿಸಿಬಿಟ್ಟನು. ಆ ಆಳು ಗಳು ವಿಧಿಯಿಲ್ಲದೆ ದ್ರೋಣನಿಗೆ ತಮ್ಮ ರಾಜನ ಪ್ರತಿಕ್ರಿಯೆಯನ್ನು ಯಥಾರ್ಥವಾಗಿ ತಿಳಿಸಿ ಬಿಟ್ಟರು. ದ್ರೋಣನಿಗೆ ಇದು ಸಹಿಸಲಿಲ್ಲ. ವೇದಪಾರಗನಾದ ಬ್ರಾಹ್ಮಣನಾದರೂ ದ್ರೋಣ ಧನುರ್ಧರಾಗ್ರಣಿ! ಪರಶುರಾಮನಿಂದ ಪ್ರಸಾದಿತವಾದ ದಿವ್ಯಾಸ್ತ್ರಗಳನ್ನು ಬೇರೆ ಪಡೆದಿದ್ದ ಭಾಗ್ಯಶಾಲಿ! ಅವನಲ್ಲಿ ಕ್ಷಾತ್ರಕ್ಕೆ ಕಡಿಮೆಯಿರಲಿಲ್ಲ. ದ್ವಾರಪಾಲಕನ ಮಾತನ್ನು ಲಕ್ಷಿಸದೆ "ಒತ್ತಂಬದಿಂದೊಳಗಂಪೊಕ್ಕು ದ್ರುಪದನಂ ಕಂಡು" "ಅಱಿಯಿರೆ ನೀಮುಮಾಮುಮೊಡ ನೋದಿದೆವೆಂಬುದನ್ ಅಣ್ಣ?" ಎಂದು ಕೇಳಿದನಂತೆ. ಅದಕ್ಕೆ ದ್ರುಪದನ ಉತ್ತರ: "ನಿನ್ನನ್ ಆನ್ ಅಱಿಯೆನ್. ಆದೆಲ್ಲಿ ಕಂಡೆಯೊ? ಮಹೀಪತಿಗಂ ದ್ವಿಜವಂಶಜಂಗಂ ಎತಱ ಕೆಳೆ? ಇಂತು ಕಣೆಲಿಗರ್ ಅಪ್ಪರೆ ಮಾನಸರ್?"

ಈ ಮಾತುಗಳನ್ನು ಕೇಳಿ ದ್ರೋಣ ಬಹಳ ನೊಂದುಕೊಂಡನು. ಅವನಿಗೆ ಬಹಳ ಅಪಮಾನ ವಾಯಿತು. ಅಷ್ಟಕ್ಕೆ ನಿಲ್ಲದೆ ಅರಸನು 'ಈ ನಾಣಿಲಿ ಪಾರ್ವನನೆಡೆದು ಕಳೆಯಿಂ' ಎಂದನಂತೆ! ಆಗ ದ್ರೋಣನು ಉಗ್ರೋಗ್ರನಾಗಿ ಅರಸನನ್ನು ಕುರಿತು ಹೀಗೆ ಹೇಳಿದನಂತೆ:—

ನುಡಿ ತಡವಪ್ಪುದೊಂದು ಮೊಗದೊಳ್ ಮುಳಿಕಂ ದೊರೆಕೊಳ್ವುದೊಂದು ನಾ
ಣ್ಗೆಡೆಗುಡದಿರ್ಪುದೊಂದು ನುಡಿಗಳ್ ನೊಱೆಯೆಂ ಮಱೆಯಿಪ್ಪುದೊಂದು ಕ
ಳ್ಗುಡಿದವರಂದಮ್. ಇಂತು ಸಿರಿ ಸಾರ್ತರೆ ಸಾರ್ವುದು! ಅದರ್ಕೆ ಸಂದೆಯಂ
ಬಡದೆ ಜಲಕ್ಕನೀಗಳಱಿದೆಂ ಸಿರಿ ಕಳ್ಳೊಡವುಟ್ಟಿತೆಂಬುದಂ.

ಅಷ್ಟೇ ಅಲ್ಲದೆ ತನ್ನ ಸಹಾಧ್ಯಾಯಿಯೆಂಬ ಒಂದು ಮರುಕದಿಂದ ಆತನು ಅವನೊಡನೆ ಯುದ್ಧ ಮಾಡಬಯಸನೆಂದೂ ತನ್ನ ಶಿಷ್ಯರಿಂದ ಅವನನ್ನು ಸೆರೆಹಿಡಿಸದೆ ಇರಸೆಂದೂ ಪ್ರತಿಜ್ಞೆಮಾಡಿ ಹೊರಟುಬಂದನಂತೆ.

ವ್ಯಾಸಭಾರತದಲ್ಲಿ ದ್ರೋಣನು ದ್ರುಪದನನ್ನು ಹೀಗೆ ಹಂಗಿಸಿ ಹಿಯ್ಯಾಳಿಸಿದಂತೆ ಹೇಳಿಲ್ಲ. ದ್ರುಪದನು ಐಶ್ವರ್ಯಮದಸಂಪನ್ನನಾಗಿ ದ್ರೋಣನನ್ನು ತಿರಸ್ಕರಿಸಿದಾಗ ಆತನು

ಮುಹೂರ್ತಂ ಚಿಂತಯಿತ್ವಾತು ಮನ್ಯುನಾಭಿಪರಿಪ್ಲುತಃ
ಸ ವಿನಿಶ್ಚಿತ್ಯ ಮನಸಾ ಪಾಂಚಾಲಂ ಪ್ರತಿಬುದ್ಧಿಮಾನ್
ಜಗಾಮ ಕುರುಮುಖ್ಯಾನಾಂ ನಗರಂ ನಾಗಸಾಹ್ವಯಮ್

ಎಂದು ಹೇಳಿದೆ. ದ್ರೋಣ ಮುಹೂರ್ತಕಾಲ ಚಿಂತಿಸಿ ಏನೂ ಮಾತನಾಡದೆ ನಾಗಪುರಕ್ಕೆ ಹೋದನೆಂದು ವ್ಯಾಸರ ಹೇಳಿಕೆ. ಆದರೆ ಶಸ್ತ್ರಾಸ್ತ್ರಸಂಪನ್ನನಾದ ದ್ರೋಣನು ತನಗಾದ ಅಪಮಾನಕ್ಕೆ ಪ್ರತಿಭಟನೆಯನ್ನೇ ಮಾಡದೆ ಹೊರಟುಹೋದನೆಂದು ಸ್ವಯಂ ಕಲಿಯಾದ ಪಂಪನು ಒಪ್ಪಲಾರದೆ ಹೋದ. 'ಈ ಸಭಾವಳಯದೊಳ್ ಎನ್ನನ್ ಏಳಿಸಿದ ನಿನ್ನನ್ ಅನಾಕುಳಮ್ ಎನ್ನ ಚಟ್ಟರಿಂ ಕಟ್ಟಿಸದೆ ಮಾಣ್ದೊಡೆ ಕೆಮ್ಮನೆ ಮಿಾಸೆವೊತ್ತೆನೇ!' ಎಂದು ದ್ರೋಣರಿಂದ ಹೇಳಿಸಿ ಅವರ ಮಿಾಸೆಯ ಪ್ರಸ್ತಾಪ ಬೇರೆ ತಂದಿಟ್ಟಿದ್ದಾನೆ! ದ್ರೋಣರಿಗೂ ತಮ್ಮ ಮಿಾಸೆಯ ವಿಷಯ ದಲ್ಲಿ[1] ಹೆಮ್ಮೆಯಿತ್ತೇನೊ!

ದ್ರೋಣನು ದ್ರುಪದನನ್ನು ಹೀಗೆ ಮೂದಲಿಸಿದ ವಿಚಾರವು ವ್ಯಾಸಭಾರತದಲ್ಲಿಲ್ಲದಿರುವು ದರಿಂದ ಇದು ಪಂಪನ ಸ್ವಂತ ಕಲ್ಪನೆ. ಆದರೆ 'ಸಿರಿ ಕಳ್ಳೊಡವುಟ್ಟಿತು' ಎಂಬ ಈ ವಾಕ್ಯಕ್ಕೆ ಪಂಪನು ಬಾಣಭಟ್ಟನ ಕಾದಂಬರೀ ಕಾವ್ಯದ ಒಂದು ಪ್ರಸಂಗದಿಂದ ಸ್ಫೂರ್ತಿಪಡೆದಿದ್ದಾನೆ. ಯುವರಾಜ ಚಂದ್ರಾಪೀಡನಿಗೆ ಮಂತ್ರಿ ಶುಕನಾಸನು ಹಿತೋಪದೇಶಮಾಡುವಾಗ ಲಕ್ಷ್ಮೀ ವಿಡಂಬನೆಯನ್ನೇ ನಡೆಸಿದ್ದಾನೆ. "ಕ್ಷೀರಸಾಗರಾತ್ ಪಾರಿಜಾತಪಲ್ಲವೇಭ್ಯೋರಾಗಮಿಂದು ಶಕಲಾದೇಕಾಂತವಕ್ರತಾಮುಚ್ಚೈಃಶ್ರವಸಶ್ಚಂಚಲತಾಂ ಕಾಲಕೂಟಾನ್ಮೋಹನ ಶಕ್ತಿಂ ಮದಿರಾಯಾ ಮದಂ ಕೌಸ್ತುಭಮಣೇರತಿನೈಷ್ಠುರ್ಯಮಿತ್ಯೇತಾನಿ ಚಿಹ್ನಾನಿ ಗೃಹೀತ್ವೈವೋದ್ಗತಾ" ಎಂದು ಲಕ್ಷ್ಮಿಯ ಸಹಜಗಳನ್ನು ವರ್ಣಿಸಿದ್ದಾನೆ. "ಸುಭಟಖಡ್ಗಮಂಡಲೋತ್ಪಲವನವಿಭ್ರಮಭ್ರಮರೀ ಲಕ್ಷ್ಮೀಃ" ಎಂದು ಹೇಳಿ ರಾಜ್ಯಲಕ್ಷ್ಮಿಯ ನಿಮಿತ್ತದಿಂದ ಯುದ್ಧಕರ್ಮ ಅನಿವಾರ್ಯವೆಂದು ಸೂಚಿಸಿದ್ದಾನೆ. ಅಲ್ಲಿಗೆ ನಿಲ್ಲದೆ ಶುಕನಾಸನು ರಾಜ್ಯ ಲಕ್ಷ್ಮಿಯ ಕಟಾಕ್ಷವೀಕ್ಷಣಕ್ಕೆ ಪಾತ್ರರಾದ ರಾಜರ ಸ್ವಭಾವವನ್ನು ಹೀಗೆ ಬಣ್ಣಿಸಿದ್ದಾನೆ! "ಅಭಿಷೇಕಸಮಯ ಏವೈಷಾಂ ಮಂಗಲಕಲಶಜಲೈರಿವ ಪ್ರಕ್ಷಾಲ್ಯತೇ ದಾಕ್ಷಿಣ್ಯಂ। ಅಗ್ನಿಕಾರ್ಯಧೂಮೇನೇವ ಮಲಿನೀಭವತಿ ಹೃದಯಂ। ಪುರೋಹಿತಕುಶಾಗ್ರಸಸಮ್ಮಾರ್ಜನೀಭಿರಿವಾಪನೀಯತೇ ಕ್ಷಾಂತಿಃ। ಉಷ್ಣೀಷಪಟ್ಟಬಂಧೇನೇವಾಚ್ಛಾದ್ಯತೇ ಜರಾಗಮನಸ್ಮರ

1 ಅಥವಾ ಪಂಪನೇ ತನ್ನ ಮಿಾಸೆಯ ಅಭಿಮಾನವನ್ನು ದ್ರೋಣನಿಗೆ ಆರೋಪಿಸಿದನೊ!

ಣಮ್| ಆತಪತ್ರಮಂಡಲೇನೇವಾಪವಾರ್ಯತೇ ಪರಲೋಕದರ್ಶನಮ್| ಚಾಮರಪವ ನೈರಿವಾಪಾಹ್ರಿಯತೇ ಸತ್ಯವಾದಿತಾ| ವೇತ್ರದಂಡೈರಿವೋತ್ಸಾರ್ಯಂತೇ ಗುಣಾಃ| ಜಯ ಶಬ್ದಕಲಕಲೈರಿವ ತಿರಸ್ಕ್ರಿಯಂತೇ ಸಾಧುವಾದಾಃ"

ಈ ರಾಜವರ್ಣನೆಯನ್ನು ಓದಿ ಮೆಚ್ಚಿದ ಪಂಪನಿಗೆ ದ್ರುಪದನು ಇದಕ್ಕೆ ತಕ್ಕ ದೃಷ್ಟಾಂತ ವೆಂದು ತೋರಿರಬೇಕು! ಶ್ರುತಿಪಾರಗನಾದ ದ್ರೋಣನು ಬಂದು ತನ್ನ ಹಿಂದಿನ ಸ್ನೇಹವನ್ನು ನೆನಪು ಮಾಡಿಕೊಟ್ಟಾಗ ಅವನನ್ನು ಆದರಿಸದೆ, ಗೌರವಿಸದೆ, ತುಚ್ಛವಾಗಿ ಕಂಡ ಅವನ ನಡತೆ ಪಂಪನಿಗೆ ಬಹಳ ಹೀನಾಯವೆನಿಸಿದುದು ಏನೂ ಆಶ್ಚರ್ಯವಲ್ಲ. 'ಉದಾರಮಹೇಶ್ವರ'ನ ಸ್ನೇಹ ಪಾತ್ರನಾದ ಪಂಪನು ದ್ರುಪದನ ನಿರ್ದಾಕ್ಷಿಣ್ಯ ವರ್ತನೆಯನ್ನು ಖಂಡಿಸಲು ಬಾಣಭಟ್ಟನ ವರ್ಣನೆಯಿಂದ ಸ್ಫೂರ್ತಿಪಡೆದು 'ಸಿರಿಕಳ್ಳೊಡವುಟ್ಟಿತು' ಎಂದು ದ್ರೋಣನ ಬಾಯಿಂದ ಹೇಳಿಸಿದ್ದಾನೆ. 'ಹಿತಮಿತವಚನ'ನಾದುದರಿಂದ ಪಂಪನು ಅಷ್ಟಕ್ಕೇ ತೃಪ್ತನಾಗಿ ರಾಜ್ಯ ಲಕ್ಷ್ಮೀವಿಡಂಬನೆಯನ್ನು ಇಲ್ಲಿ ಹೆಚ್ಚಿಗೆ ಬೆಳಸಲಿಲ್ಲ. ಬೇರೊಂದು ಕಡೆ ಪಂಪನು "ಭಟಖಡ್ಗ ಮಂಡಲೋತ್ಪಲವನವಿಭ್ರಮ ಭ್ರಮರಿ"ಯೆಂಬ ಪದಪುಂಜವನ್ನು ಬಳಸಿಕೊಂಡಿದ್ದಾನೆ.

ಪಂಪನು ಈ ಕಲ್ಪನೆಯನ್ನು ಬಾಣನಿಂದ ಪಡೆದುಕೊಂಡಿದ್ದರೂ ಈ ಸನ್ನಿವೇಶದಲ್ಲಿ ಅದನ್ನು ಪ್ರಯೋಗಿಸಿರುವುದು ಅವನ ಉಚಿತಜ್ಞತೆಗೆ, ರಸಜ್ಞತೆಗೆ ಸಾಕ್ಷಿಯಾಗಿದೆ. ಅರಿ ಕೇಸರಿಯೊಡನೆ ಹೋಲಿಸಿದಾಗ ಪಂಪನಿಗೆ ದ್ರುಪದನ ವರ್ತನೆ ಬಹಳ ಅಯೋಗ್ಯವೆನಿಸಿದೆ. ಅಥವಾ ಪಂಪನ ಸಮಕಾಲೀನನಾದ ಯಾವನಾದರೂ ಅರಸನ ನಡತೆ ಈ ಸಮಯದಲ್ಲಿ ನೆನಪಿಗೆ ಬಂದಿತೊ! ಪಂಪನು ಅರಿಕೇಸರಿಯ ಆಸ್ಥಾನ ಸೇರುವ ಮುನ್ನ ಎಲ್ಲಿದ್ದನೆಂಬುದು ತಿಳಿಯದು. ಅವನ ಬಾಲ್ಯ ಯೌವನಗಳ ಕಥೆ ಗೊತ್ತಿಲ್ಲ. ಅವನ ವಿದ್ಯಾರ್ಜನೆಯೆಲ್ಲಿ ನಡೆಯಿ ತೆಂಬುದನ್ನಾಗಲಿ, ತನ್ನ ಗುರುಗಳ ಹೆಸರನ್ನಾಗಲಿ ಪಂಪನು ಭಾರತದಲ್ಲಿ ಎಲ್ಲಿಯೂ ಹೇಳಿ ಕೊಂಡಿಲ್ಲ. ತನ್ನ ಪೂರ್ವಿಕರು ಬಾಳಿದ ವೆಂಗಿಪಟುವನ್ನು ವರ್ಣಿಸಿದ್ದಾನೆ. ಅರಿಕೇಸರಿ ತನಗೆ ಅಗ್ರಹಾರವಾಗಿ ಕೊಟ್ಟ ಬಚ್ಚೆಸಾಸಿರದ ಧರ್ಮವುರವೆಂಬ ಗ್ರಾಮದ ಹೆಸರು ಹೇಳಿದ್ದಾನೆ. ಬನವಾಸಿಯನ್ನು ಬಹಳ ಮಮತೆಯಿಂದ ಹೊಗಳಿ ತನ್ನ ಮೆಚ್ಚಿಗೆಯನ್ನು ಬಗೆ ಬಗೆಯಾಗಿ ಬಣ್ಣಿಸಿ ದ್ದಾನೆ. 'ಪುಲಿಗೆಱೆಯ ತಿರುಳ ಕನ್ನಡ'ದಲ್ಲಿ ಕವಿತೆಯನ್ನು ರಚಿಸಿರುವುದಾಗಿ ಹೇಳಿ ಪಂಪನು ಪುಲಿಗೆಱೆಯವನಿರಬಹುದೆಂಬ ಊಹೆಗೆಡೆಮಾಡಿದ್ದಾನೆ. ಇವನು ವೆಂಗಿಪಟುವನ್ನು ಬಿಟ್ಟು ಪುಲಿಗೆಱೆಗೆ ಬರಲು ಕಾರಣವಾಗಲಿ, ಬನವಾಸಿ ಇವನ ಜನ್ಮ ಸ್ಥಳವೆ, ಅಥವಾ ವಾಸಸ್ಥಳವೆ, ಎಂಬ ಸಂಗತಿಯಾಗಲಿ ತಿಳಿಯದು. ಜೈನನಾದ ಪಂಪನಿಗೆ ವೈದಿಕಮತಾನುಯಾಯಿಗಳಾದ ವೆಂಗಿಯ ರಾಜರಲ್ಲಿ ಆಶ್ರಯ ದೊರೆಯದೆ ಚಾಳುಕ್ಯರಲ್ಲಿ ಆಶ್ರಯ ಪಡೆದಿರಬಹುದೆ? ಅರಿ ಕೇಸರಿಯೂ ಜೈನನಲ್ಲ. ಆದರೆ ಅವನು ಅನ್ಯಮತದ್ವೇಷವಿಲ್ಲದ "ಮನುಜಮಾಂಧಾತಂ . . . ಶರಣಾಗತ ಜಲನಿಧಿ, ವಿನಯಭೂಷಣಂ ಮನುವಿಧಾನನಸೂನದಾನಿ"! ಅಲ್ಲದೆ ಪಂಪನ ಪೂರ್ವಿಕರೆಲ್ಲ ವೆಂಗಿಯವರು. ವೆಂಗಿಯನ್ನು ಬಿಟ್ಟುಬಂದ ಪಂಪನಿಗೆ ಅಲ್ಲಿಯ ರಾಜರ ಮೇಲೆ ಅಪ್ರೀತಿಯಿದ್ದಿದ್ದರೂ ಇರಬಹುದು. ಅಂತು ಯಾವನೋ ರಾಜನ ಮೇಲಿನ ಅಸಮಾಧಾನ ವನ್ನು ಪಂಪನು ಈ ರೀತಿಯಲ್ಲಿ ಹೊರಗೆಡವಿದ್ದಾನೆಂದು ಊಹಿಸಬಹುದಾಗಿದೆ. ಏಕೆಂದರೆ ಸಮಸ್ತ ಭಾರತವನ್ನೂ 'ಕತೆಯ ಮೆಯ್ಗೆಡಲೀಯದೆ' ಹೇಳುವ ಭರದಲ್ಲಿ ಪಂಪನು ಮಹಾ ಭಾರತದ ಹಲವು ಪ್ರಸಂಗಗಳನ್ನು ಬಹಳ ಸಂಗ್ರಹವಾಗಿ ಹೇಳಿದ್ದಾನೆ. ಶಕುಂತ ಲೋಪಾಖ್ಯಾನವೇ ಮೊದಲಾದ ಕೆಲವು ಪ್ರಸಂಗಗಳನ್ನು ನೆಮ್ಮದಿಯಾಗಿ ಕೈಬಿಟ್ಟಿದ್ದಾನೆ! ಹೀಗಿರುವಾಗ ಈ ದ್ರುಪದ ದ್ರೋಣರ ವೈರದ ಬೆಳವಣಿಗೆಯ ಈ ಕಥೆಯನ್ನು ಇಷ್ಟು ದೀರ್ಘ ವಾಗಿ ಬೆಳಸಿ ಹೇಳುವ ಅಗತ್ಯವಿರಲಿಲ್ಲ. ಅಲ್ಲದೆ ದ್ರೋಣನು ದ್ರುಪದನ ಮೇಲೆ ಸೇಡು ತೀರಿಸಿ ಕೊಂಡ ಕಥೆಯನ್ನು ಪಂಪನು ಬಹಳ ಉತ್ಸಾಹದಿಂದ ಒಂದು ಹೊಸ ರೀತಿಯಲ್ಲಿ ಹೇಳಿದ್ದಾನೆ.

ಮೂಲ ಭಾರತದಲ್ಲಿಯೂ ದ್ರೋಣನು ದ್ರುಪದನನ್ನು ತನ್ನ ಶಿಷ್ಯನಾದ ಅರ್ಜುನನ

ಮೂಲಕ ಸೆರೆಹಿಡಿಸುತ್ತಾನೆ; ಆದರೆ ಅವನನ್ನು ಕ್ರೂರವಾಗಿ ಅಪಮಾನಕ್ಕೆ ಗುರಿಮಾಡುವುದಿಲ್ಲ. ದರ್ಪವನ್ನೆಲ್ಲ ಕಳೆದುಕೊಂಡು ತನ್ನ ವಶಕ್ಕೆ ಬಂದ ದ್ರುಪದನನ್ನು ಕಂಡು ದ್ರೋಣನು

ಮಾ ಭೈಃ ಪ್ರಾಣಭಯಾದ್ ವೀರ ಕ್ಷಮಿಣೋ ಬ್ರಾಹ್ಮಣಾ ವಯಮ್
ಆಶ್ರಮೇ ಕ್ರೀಡಿತಂ ಯತ್ ತು ತ್ವಯಾ ಬಾಲ್ಯೇ ಮಯಾ ಸಹ
ತೇನ ಸಂವರ್ಧಿತಸ್ನೇಹಃ ಪ್ರೀತಿಶ್ಚ ಕ್ಷತ್ರಿಯರ್ಷಭ
ಪ್ರಾರ್ಥಯೇಯಂ ತ್ವಯಾ ಸಖ್ಯಂ ಪುನರೇವ ಜನಾಧಿಪ
ವರಂ ದದಾಮಿ ತೇ ರಾಜನ್ ರಾಜ್ಯಸ್ಯಾರ್ಧಮವಾಪ್ನುಹಿ

ಎಂದು ಹೇಳಿ ದ್ರುಪದನ ರಾಜ್ಯದಲ್ಲಿ ಅರ್ಧವನ್ನು ಅವನಿಗೇ ಹಿಂದಕ್ಕೆ ಕೊಟ್ಟನಂತೆ. ಇನ್ನುಳಿದ ಅರ್ಧರಾಜ್ಯವನ್ನು ತನಗೇ ಉಳಿಸಿಕೊಳ್ಳಲು ಕಾರಣ ತಿಳಿಸುತ್ತ,

"ಅರಾಜಾ ಕಿಲ ನೋ ರಾಜ್ಞಃ ಸಖಾ ಭವಿತು ಮರ್ಹತಿ"

ಎಂದು ಹೇಳಿದ್ದಾನೆ. ಹಿಂದೆ ದ್ರುಪದನು ದ್ರೋಣನನ್ನು ತನ್ನ ಆಸ್ಥಾನದಲ್ಲಿ ಅವಮಾನಪಡಿಸುವಾಗ "ರಾಜನಲ್ಲದವನು ರಾಜನಿಗೆ ಸ್ನೇಹಿತನಲ್ಲ. ಶ್ರೋತ್ರಿಯನಲ್ಲದವನು ಶ್ರೋತ್ರಿಯನಿಗೆ ಗೆಳೆಯನಾಗುವುದು ಶಕ್ಯವಲ್ಲ" ಎಂದು ಮುಂತಾಗಿ ಹೇಳಿ ಬಡಬ್ರಾಹ್ಮಣನು ರಾಜನೊಬ್ಬನಿಗೆ ಸ್ನೇಹಿತನಾಗುವುದು ಅಸಾಧ್ಯವೆಂದು ನುಡಿದಿದ್ದನು. ಆ ಮಾತನ್ನು ಈಗ ದ್ರೋಣನು ಜ್ಞಾಪಿಸಿ ತಾನು ದ್ರುಪದರಾಜನ ಸ್ನೇಹಾಕಾಂಕ್ಷಿಯಾದುದರಿಂದ ತಾನೂ ರಾಜನಾಗಬೇಕಾಯಿತೆಂದು ಹೇಳಿ ಅದಕ್ಕಾಗಿ ದ್ರುಪದನ ರಾಜ್ಯದಲ್ಲಿ ಅರ್ಧವನ್ನು ತಾನೇ ಉಳಿಸಿಕೊಂಡನು. ಇಷ್ಟು ಹೊರತು ದ್ರೋಣ ದ್ರುಪದನಿಗೆ ಅವಮಾನವಾಗುವಂಥ ಯಾವ ಮಾತನ್ನೂ ಆಡುವುದಿಲ್ಲ.

ಪಂಪಭಾರತದ ದ್ರೋಣನ ಚರಿತ್ರೆಯೇ ಬೇರೆ. ಅರ್ಜುನನು ದೊರೆ ದ್ರುಪದನನ್ನು ಸೆರೆಹಿಡಿದು ತಂದಾಗ " ಪರಾಕ್ರಮಧವಳನ ಪರಾಕ್ರಮಕ್ಕೆ ಮೆಚ್ಚಿ ಕದಂಪಂ ಕರ್ಚಿ ದ್ರುಪದನಂ ತನ್ನ ಮಂಚದ ಕಾಲೊಳ್ ಕಟ್ಟವೇಟ್ಟು ತಲೆಯ ಮೇಲೆ ಕಾಲನವಷ್ಟಂಭದಿಂ ನೀಡಿ " ಹೀಗೆ ಹಂಗಿಸಿದನಂತೆ!

ಸಿರಿಮೆಯ್ಯೊಳಗಂದಱಿವಿರೆ
ನೆರವಿಯೊಳಾರಱಿವರೊರ್ವ ಕಂಡರನಱಿಯ
ಲ್ಕರಿದೆಮ್ಮಂ ಬಡಪಾರ್ವರ
ನರಸರೆ ನೀವಿಾಗಳಱಿವಿರಱಿಯಿರೊ ಪೇಟಿಂ

ಎಂದು 'ಸಾಯೆಸರಸಂ ನುಡಿದು' ಅಷ್ಟರಿಂದ ತೃಪ್ತಿಯಾಗದೆ 'ಮತ್ತಮಿಂತೆಂದಂ':

ಆದಿಕ್ಷತ್ರಿಯರೇ ನೀ
ಮಾದಿತ್ಯನನಿಳಿಪತೇಜರಿರ್ ಪಾರ್ಥನ ಕಾಲ್
ಮೋದೆ ನಡುತಲೆಯಲಿರ್ಪುದು
ಮಾದುದು ನಿಮಗೆಂದು ನುಡಿದು ಕಾಯ್ಪಿನೊಳೊದೆದಂ

ದ್ರುಪದನನ್ನು ದ್ರೋಣ "ಬದೆದಂ"! ದ್ರುಪದ ಮಾಡಿದ ಅಪರಾಧವೆಷ್ಟು? ಅದಕ್ಕೀ ಶಿಕ್ಷೆಯೆ? ಈ ಲೆಕ್ಕದಲ್ಲಿ ದುರ್ಯೋಧನನಿಗೆ ಭೀಮನಿಂದಾದ ಮಕುಟಭಂಗ ಯಾವ ದೊಡ್ಡ ಶಿಕ್ಷೆ? ಇಂಥ ಘೋರವಾದ ಅಪಮಾನವನ್ನು ಅನುಭವಿಸಿದ ದ್ರುಪದನು ದ್ರೋಣನನ್ನು ಕೊಲ್ಲ ಬಯಸಿದರೆ ಆಶ್ಚರ್ಯವೇನು? ಆದರೆ ಅವನಿಗೆ ದ್ರೋಣನನ್ನು ಕೊಲ್ಲುವ ಶಕ್ತಿಯಿರಲಿಲ್ಲ. ಅದು ಅವನಿಗೆ ಆಗತಾನೆ ಅನುಭವವೇದ್ಯವಾಗಿತ್ತು! ಆದ್ದರಿಂದ ಅವನು "ಪರಿಭವಾನಳನಳ ವಲ್ಲದಳುರೆ, ನಿನ್ನಂ ಕೊಲ್ವನ್ನನೊರ್ವ ಮಗನುಮಂ ವಿಕ್ರಮಾರ್ಜುನಂಗೆ ಪೆಂಡತಿಯಪ್ಪನ್ನಳೊರ್ವ

ಮಗಳುಮಂ ಪಡೆದಲ್ಲದಿರೆನೆಂದು ಮಹಾಪ್ರತಿಜ್ಞಾರೂಢನಾಗಿಪೋದನ್.'' ಪಂಪನು ದ್ರೋಣಾಚಾರ್ಯನ ಕ್ಷಾತ್ರವನ್ನು, ಪ್ರತಿಹಿಂಸಾಕಾಂಕ್ಷೆಯನ್ನು ಬಹಳ ಚೆನ್ನಾಗಿ ಚಿತ್ರಿಸಿದ್ದಾನೆ. ರಾಜನಾಗುವುದಕ್ಕಿಂತ ಮೊದಲು ದ್ರುಪದ ದ್ರೋಣನ ಸಹಾಧ್ಯಾಯಿ. ಆಗ ಅವರಿಬ್ಬರಿಗೂ ಸ್ನೇಹವಾಗಿತ್ತು. ಆದರೆ ರಾಜಪದವಿ ಬಂದಮೇಲೆ ದ್ರುಪದನಿಗೆ ಆ ಸ್ನೇಹ—ಸ್ನೇಹಿತ, ಬೇಕಾಗಲಿಲ್ಲ. ದ್ರೋಣ ಆ ಸ್ನೇಹವನ್ನು ಸ್ಮರಿಸಿಕೊಂಡು ಅವನಲ್ಲಿಗೆ ಹೋದ. ರಾಜಸ್ನೇಹ ಚಂಚಲವೆಂಬುದು ಆ ಬ್ರಾಹ್ಮಣನಿಗೆ ತಿಳಿದಿರಲಿಲ್ಲ. ಆದ್ದರಿಂದ ಘರ್ಷಣೆಯುಂಟಾಯಿತು. ಬೇರೆ ಕಡೆ ಆಶ್ರಯ ದೊರೆತ ಮೇಲೂ ದ್ರೋಣ ಈ ಅಪಮಾನವನ್ನು ಮರೆಯದೆ ಹಟ ಸಾಧಿಸಿಕೊಂಡ. ರಾಜಸ್ನೇಹ ರಾಜಧಿಕ್ಕಾರವಾಗಿ ಕಡೆಗೆ ದ್ವೇಷದಲ್ಲಿ ಪರ್ಯವಸಾನವಾಯಿತು !

ಈ ದ್ವೇಷವಿಕಾಸದ ಕಥೆಯನ್ನು ರಾಜಾಶ್ರಿತನಾದ ಕವಿ ಪಂಪನು ತನ್ನ ದೊರೆಯ ಸಂತೋಷಾರ್ಥವಾಗಿ ಬರೆದ ಕಾವ್ಯದಲ್ಲಿಯೇ ರಸರಸವಾಗಿ ವರ್ಣಿಸಿರುವುದು ಮುಖ್ಯವಾದ ಸಂಗತಿ. ಕ್ಷತ್ರಿಯರಾಜನೊಬ್ಬನಿಗೆ ಬ್ರಾಹ್ಮಣನೊಬ್ಬನಿಂದ ಆದ ಅಪಮಾನದ ಕಥೆ ಇದು. ಭಾರತದಲ್ಲಿಲ್ಲದ ವಿವರಗಳನ್ನು ಕಲ್ಪಿಸಿಕೊಂಡು ಕಥೆ ಕಟ್ಟಿ ಹೇಳಬೇಕಾದರೆ ಪಂಪನಿಗೆ ಇಲ್ಲಿ ಯಾವನೋ ಕ್ಷತ್ರಿಯರಾಜನ ಮೇಲೆ ಬಹಳ ಸಿಟ್ಟಿದ್ದಿರಬಹುದೇ ಎಂಬ ಸಂಶಯ ಬರುತ್ತದೆ. ಅದು ಹೇಗೇ ಇದ್ದರೂ ಪಂಪನು ರಾಜರ ಸ್ವಭಾವ ವೈಪರೀತ್ಯಗಳನ್ನು ಅರಿತವನು, ಅವುಗಳನ್ನು ಕಾವ್ಯದಲ್ಲಿ ನಿರೂಪಿಸಲು ಹಿಂತೆಗೆದವನಲ್ಲ ಎಂಬ ವಿಚಾರದಲ್ಲಿ ಭಿನ್ನಾಭಿಪ್ರಾಯಕ್ಕೆಡೆಯಿಲ್ಲ. ಅರಿಕೇಸರಿಯೊಡನಿದ್ದ ತನ್ನ ಸ್ನೇಹಾದರಗಳು ಅವನ ವಿಚಾರಸ್ವಾತಂತ್ರ್ಯಕ್ಕೆ ಅಡ್ಡಿಯಾಗಲಿಲ್ಲ.

**ಕೆ. ವೆಂಕಟರಾಮಪ್ಪ**

# ಕವಿಸಮಯ

ಕಾವ್ಯದ ಕಾರಣಸಾಮಗ್ರಿಯನ್ನು ಕುರಿತು ಹೇಳುವಲ್ಲಿ ನಮ್ಮ ಆಲಂಕಾರಿಕರು ಕವಿಗೆ ಮೊಟ್ಟಮೊದಲು ಪ್ರತಿಭಾಶಕ್ತಿಯೆ ಮೂಲಧನವೆಂದು ಒಪ್ಪಿಕೊಂಡರೂ, ಆ ಶಕ್ತಿ ಕ್ರಿಯಾಶೀಲವಾಗುವುದು ಲೋಕ, ಶಾಸ್ತ್ರ, ಕಾವ್ಯ—ಇವುಗಳ ವಿಶೇಷ ಪರಿಚಯದಿಂದಲೇ ಎನ್ನುವುದನ್ನು ಒತ್ತಿ ಹೇಳಿದ್ದಾರೆ.[1] 'ಲೋಕ' ಎಂದರೆ ಲೋಕದ ಸಮಸ್ತ ವ್ಯಾಪಾರಗಳ ಸೂಕ್ಷ್ಮನಿರೀಕ್ಷೆ. 'ಶಾಸ್ತ್ರ' ಎಂದರೆ ಛಂದಸ್ಸು ವ್ಯಾಕರಣ ಭಾಷಾಶಾಸ್ತ್ರ ಮೊದಲಾದವುಗಳಿಂದ ಹಿಡಿದು ವಿಜ್ಞಾನ ಹಾಗೂ ಕಲೆಗಳಿಗೆ ಸಂಬಂಧಿಸಿದ ಶಾಸ್ತ್ರಗಳ ಅವಲೋಕನ. 'ಕಾವ್ಯ' ಎಂದರೆ ಪೂರ್ವಕವಿಗಳಿಂದ ನಿರ್ಮಿತವಾದ ಕಾವ್ಯೇತಿಹಾಸಗಳ ಅಧ್ಯಯನ. ಕವಿ ಪ್ರತಿಭೆ ಈ ಸಂಸ್ಕಾರ ವಿಶೇಷದಿಂದ ಪುಷ್ಟವಾಗದಿದ್ದಲ್ಲಿ ಪುಟವೇರಲಾರದು. ಉತ್ತಮ ಕವಿಕೃತಿ ಈ ಅನುಭವಗಳ ಪರಿಪಾಕದಿಂದ ಮೂಡಿದ ಕಾರಣ ಅದು ಘನವಾಗುತ್ತದೆ, ಮಾನ್ಯವಾಗುತ್ತದೆ. ಈ ದೃಷ್ಟಿಯಿಂದ ಕಾವ್ಯಸಮಸ್ತವನ್ನೂ ಹಂತ ಹಂತವಾಗಿ ಪರಿಶೀಲಿಸಿದ ನಮ್ಮ ಆಲಂಕಾರಿಕರು ಕವಿಕೃತಿಯಲ್ಲಿ ಕಂಡುಬರುವ ವಿವಿಧ ಉಕ್ತಿ ವೈಚಿತ್ರ್ಯಗಳೆಲ್ಲವೂ, ಉಕ್ತಿ ವಿಧಾನಗಳೆಲ್ಲವೂ ಲೋಕಾನುಭವ, ಶಾಸ್ತ್ರಾಧಾರ, ಮತ್ತು ಕಾವ್ಯಾಧ್ಯಯನ—ಇವುಗಳ ಪರಿಣಾಮವಾಗಿರುವುದನ್ನು ಗಮನಿಸಿದರು. ಆದರೆ ಇವುಗಳಲ್ಲಿ ಕೆಲವು ಮಾತ್ರ ಲೋಕವೃತ್ತವನ್ನಾಗಲಿ, ಶಾಸ್ತ್ರವೃತ್ತವನ್ನಾಗಲಿ ಆಶ್ರಯಿಸದೆ ಕೇವಲ ಪ್ರತಿಭಾಬಲದಿಂದ ನಿರ್ಮಿತವಾದ ಅಭಿವ್ಯಕ್ತಿ ವಿಶೇಷಗಳಾಗಿ, ಕವಿಪರಂಪರಾಗತವಾಗಿ ಬಂದಿರುವುದನ್ನು ಕಂಡರು. ಚಕೋರ ಪಕ್ಷಿ ಬೆಳುದಿಂಗಳನ್ನು ಕುಡಿದು ಬದುಕುತ್ತದೆ. ಚಂದ್ರಕಾಂತಶಿಲೆ ಬೆಳುದಿಂಗಳಲ್ಲಿ ಕರಗುತ್ತದೆ. ಚಕ್ರವಾಕದಂಪತಿಗಳು ಕತ್ತಲಾದೊಡನೆಯೆ ವಿರಹವನ್ನನುಭವಿಸುತ್ತವೆ, ಕೀರ್ತಿ ಬೆಳ್ಳಗಿದೆ, ಅಪಕೀರ್ತಿ ಕಪ್ಪಗಿದೆ—ಇಂತಹ ಎಷ್ಟೋ ಕಾಲ್ಪನಿಕ ಸಂಗತಿಗಳು ಬಹು ಹಿಂದಿನಿಂದಲೂ ಕಾವ್ಯಗಳಲ್ಲಿ ಪರಂಪರಾಗತವಾಗಿ ಬಂದಿವೆ. ಶಿಷ್ಟರಾದ ಸಹೃದಯರೂ ಅವುಗಳನ್ನು ಸಂಭಾವಿಸಿಕೊಂಡು ಬಂದಿದ್ದಾರೆ. ಆದರೆ ಲೋಕದಲ್ಲಿ ಇಂಥ ಸಂಗತಿವಿಶೇಷಗಳನ್ನು ಯಾರೂ ಕಂಡದ್ದಿಲ್ಲ, ಅಥವಾ ಶಾಸ್ತ್ರಗಳಲ್ಲಿ ಇವುಗಳ ವಿಚಾರ ಕಂಡುಬರುವುದಿಲ್ಲ. ಇಂಥವುಗಳನ್ನು ಕೇವಲ ಹುಸಿ ಕಲ್ಪನೆಗಳೆಂದು ಪರಿಗಣಿಸಿ, ಲೋಕ ಮತ್ತು ಶಾಸ್ತ್ರದ ಆಧಾರವಿಲ್ಲವೆಂಬ ನೆಪದಿಂದ ಕಾವ್ಯವಲಯದಿಂದ ಬಹಿಷ್ಕರಿಸುವಂತಿಲ್ಲ. ಏಕೆಂದರೆ ಅವುಗಳಲ್ಲಿಯೂ ಏನೋ ಒಂದು ಆಹ್ಲಾದವಿಶೇಷ ಉಂಟು; ಅವುಗಳಿಗೂ ರಸಲೋಕದ ಪ್ರಜೆಗಳಾಗಿ ಇರುವ ಹಕ್ಕುಂಟು. ಹೀಗಾಗಿ ಅವುಗಳಿಗೆ 'ಕವಿಸಮಯ'ಗಳೆಂಬ ಪೌರಪ್ರಶಸ್ತಿಯನ್ನು ಆಲಂಕಾರಿಕರು ಕೊಡಬೇಕಾಯಿತು. ಇವುಗಳನ್ನು ಮೊಟ್ಟಮೊದಲು ವಿಂಗಡಿಸಿ ಅವುಗಳ ವಿಷಯವನ್ನು ಪ್ರಚುರಪಡಿಸಿದವನು ರಾಜಶೇಖರ. "ಕವಿಸಮಯದ ವಿಷಯದಲ್ಲಂತೂ ಅವನೇ ಪ್ರಥಮಾಚಾರ್ಯ . . . . ಇದರ ನಿರೂಪಣೆಗೆ ರಾಜಶೇಖರನು ತನ್ನ ಗ್ರಂಥದ ಮೂರು ಅಧ್ಯಾಯಗಳನ್ನು ವಿನಿಯೋಗಿಸಿ ಕೊನೆಯಲ್ಲಿ ಹೀಗೆ ಹೇಳುತ್ತಾನೆ: 'ಈ ಕವಿಸಮಯವು ಕಾವ್ಯದಲ್ಲಿ ಮಲಗಿದಂತೆ ಅಡಗಿತ್ತು; ಈಗ ಅದನ್ನು ನಾವು ಯಥಾಮತಿಯಾಗಿ ಉದ್ಬೋಧನಗೊಳಿಸಿದ್ದೇವೆ.'[2]. ಈ ಬಗ್ಗೆ ಆತನ ಸೂತ್ರ ಇದು:

---

[1] ಶಕ್ತಿರ್ನಿಪುಣತಾ ಲೋಕಶಾಸ್ತ್ರಕಾವ್ಯಾದ್ಯವೇಕ್ಷಣಾತ್
ಕಾವ್ಯಜ್ಞಶಿಕ್ಷಯಾಭ್ಯಾಸ ಇತಿ ಹೇತುಸ್ತದುದ್ಭವೇ.

ಮಮ್ಮಟ: 'ಕಾವ್ಯಪ್ರಕಾಶ,' ೧-೩

[2] ತೀ. ನಂ. ಶ್ರೀಕಂಠಯ್ಯ, ಭಾರತೀಯ ಕಾವ್ಯಮೀಮಾಂಸೆ, ಪು. ೩೪-೩೫.

"ಅಶಾಸ್ತ್ರೀಯಮಲೌಕಿಕಂ ಚ ಪರಂಪರಾಯಾತಂ ಯಮರ್ಥಮುಪನಿಬಧ್ನಂತಿ ಕವಯಃ ಸ ಕವಿಸಮಯಃ.. ಸ ಚ ತ್ರಿಧಾ; ಸ್ವರ್ಗ್ಯೋ ಭೌಮಃ ಪಾತಾಲೀಯಶ್ಚ" (ಕಾವ್ಯಮೀಮಾಂಸಾ, ಪುಟ 78)[3]. ಇದೇ ಸೂತ್ರವನ್ನೆ ಕಾವ್ಯಾವಲೋಕನದ ನಾಗವರ್ಮ ಬಹು ಸೊಗಸಾಗಿ ಕನ್ನಡಿಸಿದ್ದಾನೆ:

"ಆವುದಶೇಷಲೋಕವಿಷಯಸ್ಥಿತಿಯಲ್ತು, ಅಖಿಳಾಗಮಾರ್ಥಮುಂ
ಭಾವಿಪೊಡಲ್ತು, ಸತ್ಕವಿ ಪರಂಪರೆಯಿಂ ಪರಿಗೀತಮಾಗಿ ನಿ
ಷ್ಕೇವಳಮಾದ ರೂಢಿವಶದಿಂ ಸಲೆ ಸಲ್ವುದಿದಲ್ತೆ ಶಿಷ್ಟಸಂ
ಭಾವಿತಮಪ್ಪ ಕಾವ್ಯಸಮಯಂ ಭುವನತ್ರಯವಸ್ತುಗೋಚರಂ."

ಯಾವುದು ಸಂಪೂರ್ಣವಾಗಿ ಲೋಕವಿಷಯಸ್ಥಿತಿ ಅಲ್ಲವೋ, ಯಾವುದು ಶಾಸ್ತ್ರಗಳಲ್ಲಿಯೂ ಹೇಳಲ್ಪಟ್ಟಿಲ್ಲವೋ ಆದರೆ ಸತ್ಕವಿ ಪರಂಪರೆಯಿಂದ ಕಾವ್ಯಗಳಲ್ಲಿ ರೂಢಿವಶದಿಂದ ಬಂದಿದೆಯೋ, ಶಿಷ್ಟರಾದ ಸಹೃದಯರಿಂದ ಸಂಭಾವಿತವಾಗಿದೆಯೋ ಅದು ಕವಿಸಮಯ. ಅದರ ವಸ್ತು ಭುವನತ್ರಯಗೋಚರವಾದದ್ದು.[4]

೨

ಕವಿಸಮಯಗಳು ಕಾಲದಿಂದ ಕಾಲಕ್ಕೆ ಕವಿಗಳಿಂದ ಸೃಜಿಸಲ್ಪಟ್ಟು ಒಂದು ನಿರ್ದಿಷ್ಟವಾದ ಅರ್ಥಕೋಶವನ್ನು ಹೊತ್ತು ಪರಂಪರಾಗತವಾಗಿ ಬಂದ ಕಾರಣ ಎಲ್ಲ ಕಾಲದ ಕವಿಗಳೂ ತಮ್ಮ ತಮ್ಮ ಕಾವ್ಯಗಳಲ್ಲಿ ಅವುಗಳನ್ನು ಬಳಸುವುದು ಸಾಧ್ಯವಾಯಿತು. ಸತ್ಕವಿಗಳು ಅವುಗಳನ್ನು ಬಳಸುತ್ತಾ ಬಂದಿದ್ದಾರೆ. ಶಿಷ್ಟರಾದ ಸಹೃದಯರು ಒಪ್ಪಿಕೊಂಡು ಬಂದಿದ್ದಾರೆ. ಹೀಗಾಗಿ ಕವಿಸಂಪ್ರದಾಯದಲ್ಲಿ ತೇಲಿಬಂದ ಎಷ್ಟೋ ಪ್ರಕಾರಗಳಲ್ಲಿ ಕವಿಸಮಯವೂ ಒಂದು. ಕವಿಸಮಯವೆಂದರೆ ಕವಿಸಂಪ್ರದಾಯವೆಂದು ಅರ್ಥವಾಗುವ ಕಾರಣ, ಕವಿಸಮಯವೂ ಕವಿಸಂಪ್ರದಾಯವೂ ಒಂದೇ ಎಂದು ಭ್ರಮಿಸಲು ಅವಕಾಶವುಂಟು. ಆದರೆ ಕವಿಸಮಯ, ಕವಿಸಂಪ್ರದಾಯ ಇವೆರಡೂ ಸಮಾನಾರ್ಥಕ ಪದಗಳಲ್ಲ. 'ಕವಿಸಮಯ'—ಎನ್ನುವ ಮಾತಿಗೆ ನಮ್ಮ ಆಲಂಕಾರಿಕರ ಪ್ರಕಾರ ಒಂದು ನಿರ್ದಿಷ್ಟವಾದ ಅರ್ಥಪರಿವೇಷವುಂಟು ಎನ್ನುವುದನ್ನು ಮೊಟ್ಟಮೊದಲು ಸ್ಪಷ್ಟಪಡಿಸಿಕೊಳ್ಳಬೇಕು. ಕಾವ್ಯರಚನೆಯ ಕ್ರಮದಲ್ಲಿ ಒಂದು ನಿರ್ದಿಷ್ಟರೂಪವಾದ ಬರವಣಿಗೆಯ ಮಾದರಿ ಏಕಪ್ರಕಾರವಾಗಿ ಒಂದು ಕಾಲದ ಅಥವಾ ಹಲವು ಕಾಲದ ಕವಿಗಳಲ್ಲಿ ಕಂಡುಬಂದಾಗ ಅದೆಲ್ಲವನ್ನೂ ಸಮಗ್ರವಾಗಿ ಗಮನಿಸಿ ಸಂಪ್ರದಾಯವೆನ್ನುತ್ತೇವೆ. ಉದಾಹರಣೆಗೆ ಅಷ್ಟಾದಶವರ್ಣನೆಯು ಹಳೆಯ ಕಾವ್ಯಗಳಲ್ಲಿ ಏಕಪ್ರಕಾರವಾಗಿ ಕಂಡುಬರುವ ಕಾರಣ ಅದು ಸಂಪ್ರದಾಯದ ಬಹುಮುಖ್ಯವಾದ ಒಂದು ಪ್ರಕಾರ ಎಂದು ಪರಿಗಣಿಸುತ್ತೇವೆ. ಬರವಣಿಗೆಯ ಕ್ರಮದಲ್ಲಿ, ಅಲಂಕಾರಗಳ ವಿರಚನೆಯಲ್ಲಿ, ವಸ್ತುನಿರ್ವಹಣೆಯಲ್ಲಿ ಕಂಡುಬರುವಂಥ ಏಕತಾನತೆ ಇದರ ಮುಖ್ಯಲಕ್ಷಣ. 'ಮುಖಕಮಲ' 'ಪಾದಪದ್ಮ' ಎನ್ನುವಂಥ ಅಲಂಕಾರಗಳೂ, 'ವಸಂತ ವರ್ಣನೆ' 'ವನವಿಹಾರ ವರ್ಣನೆ'—ಎನ್ನುವಂಥ ಭಾಗಗಳೂ, ಕವಿ ಕಾವ್ಯದ ವಸ್ತು-ರೀತಿಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಗಳಾದರೂ, ಸಾವಿರಾರು ವರ್ಷಗಳ ಕಾಲ ಏಕಪ್ರಕಾರವಾಗಿ ಬಂದಿವೆ. ಇವುಗಳ ಜೊತೆಗೆ 'ಚಕೋರ' 'ಚಂದ್ರಕಾಂತ' 'ಚಕ್ರವಾಕ' ಇವುಗಳ ವಿಷಯವೂ ಈ ಪರಂಪರೆಯಲ್ಲಿ ಬಂದಿವೆ. ಆದರೆ, 'ಮುಖಕಮಲ' 'ಪಾದಪದ್ಮ' ಎನ್ನತಕ್ಕವು ಸಂಪ್ರದಾಯದ ಅಲಂಕಾರಗಳಾದರೆ, 'ಚಕೋರ' 'ಚಂದ್ರಕಾಂತ'ಗಳು ಅದೇ ಸಂಪ್ರದಾಯದ ಕವಿಸಮಯ

[3] ಕನ್ನಡ ಕೈಪಿಡಿ, ಸಂಪುಟ ೧, ಪು. 241.

[4] ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ (27-1-1942) ಯಲ್ಲಿ ಶ್ರೀ ಮುಳಿಯ ತಿಮ್ಮಪ್ಪಯ್ಯನವರು ಬರೆದಿರುವ "ಸಾಹಿತ್ಯದಲ್ಲಿ ಕವಿಸಮಯದ ಸ್ಥಾನ' ಎಂಬ ಲೇಖನವನ್ನು ಗಮನಿಸಬಹುದು. ಅದರಲ್ಲಿ ಅವರು ರಾಜಶೇಖರನು ಕೊಡುವ ಕವಿಸಮಯದ ಲಕ್ಷಣದಿಂದ ನಾಗವರ್ಮನು ಕೊಡುವ ಕವಿಸಮಯದ ಲಕ್ಷಣವು ಬೇರೆಯಾಗಿದೆ ಎಂದು ಅಭಿಪ್ರಾಯಪಡುತ್ತಾರೆ.

ಗಳು. ವಸಂತವರ್ಣನೆ ಕವಿಸಂಪ್ರದಾಯವಾದರೆ, ವಸಂತದಲ್ಲಿ ಮಾತ್ರ ಕೋಗಿಲೆ ಕೂಗುತ್ತದೆ ಎನ್ನುವ ಸಂಗತಿ ಕವಿಸಮಯವಾಗುತ್ತದೆ. ಯಾವ ಕಾಲದ ಕಾವ್ಯದಲ್ಲಿ ಬಳಸಲ್ಪಟ್ಟರೂ ಕವಿಸಮಯಗಳಿಗೆ ಪರಂಪರಾಗತವಾಗಿ ಬಂದ ಸಾಂಕೇತಿಕ ಅರ್ಥದ ಸೀಮಾವಲಯವುಂಟು. ಇಂಥ ಅರ್ಥಕೋಶವನ್ನು ಹೊತ್ತ ಕವಿಸಮಯಗಳು ಕವಿಪರಂಪರೆಯಲ್ಲಿ ತೇಲಿಬಂದಿವೆ. ಆದರೆ ಕವಿಸಂಪ್ರದಾಯದಲ್ಲಿ ಕವಿಸಮಯಗಳು ಅತ್ಯಲ್ಪಸಂಖ್ಯಾತವಾದ ಒಂದು ಪ್ರಕಾರ ಮಾತ್ರ. ಆದಕಾರಣ ಕವಿಸಂಪ್ರದಾಯವೆಲ್ಲವೂ ಕವಿಸಮಯವಲ್ಲ; ಹಾಗೆಯೆ ಕವಿಸಮಯವೆಂದರೆ ಕವಿಸಂಪ್ರದಾಯವಲ್ಲ.[೬]

೩

ಕಾವ್ಯಸಮಸ್ತವೂ ಒಂದಲ್ಲ ಒಂದು ಬಗೆಯ ಅಲಂಕಾರಗಳ ಪರಂಪರೆ ಎಂದು ಭಾವಿಸಿ ಪ್ರತಿಯೊಂದು ಉಕ್ತಿವೈಚಿತ್ರವನ್ನೂ ವಿಂಗಡಿಸಿ ಹೆಸರಿಸುತ್ತಾ ಹೊರಟ ಆಲಂಕಾರಿಕರ ದೃಷ್ಟಿಗೆ ಕವಿಸಮಯಗಳು ಒಂದು ರೀತಿಯ ವಿಚಿತ್ರ ಸೃಷ್ಟಿಯಾಗಿ ತೋರಿರಬೇಕು. ಏಕೆಂದರೆ ಕವಿಸಮಯಗಳು ಕವಿಕಲ್ಪನೆಯಿಂದ ಮೂಡಿದರೂ, ಅಲಂಕಾರಗಳ ನಿರ್ಮಾಣದಲ್ಲಿರುವಂಥ ಯಾವ ಸಾದೃಶ್ಯದ ಆಧಾರವೂ ಇವುಗಳಲ್ಲಿ ತೋರಲಿಲ್ಲ, ಅಥವಾ ಸ್ವಭಾವೋಕ್ತಿಗಳಂತೆ ಲೋಕವಿಷಯಗಳ ರಮ್ಯನಿರೂಪಣೆಯೂ ಇವುಗಳಲ್ಲ. ಇವುಗಳಿಗೆ ಅಲಂಕಾರಗಳಿಂದ ಭಿನ್ನವಾದ ಒಂದು ಅಸ್ತಿತ್ವವಿರುವುದು ಸ್ಪಷ್ಟವಾಗಿಯೆ ಇದೆ. ಅಲಂಕಾರಗಳ ನಿರ್ಮಾಣದಲ್ಲಿ ಕವಿಕಲ್ಪನೆಯ ಅಂಶ ಪ್ರಧಾನವಾಗಿದ್ದರೂ, ಅವು ಲೋಕದಲ್ಲಿ ಎಲ್ಲರಿಗೂ ಗೋಚರವಾದ ವಸ್ತುಗಳೆರಡರ ಸಾದೃಶ್ಯ ವೈದೃಶ್ಯಗಳ ಆಧಾರದಿಂದ ಮೂಡಿದವುಗಳು. 'ಮುಖಕಮಲ' ಎನ್ನುವ ಒಂದು ರೂಪಕ ನಿರ್ಮಾಣದಲ್ಲಿ ಕವಿಪ್ರತಿಭೆ ಮುಖಕ್ಕೂ ಕಮಲಕ್ಕೂ ಇರುವ ಸಾದೃಶ್ಯವೆರಡರ ಸ್ಮೃತಿಯನ್ನು ತಟಕ್ಕನೆ ಸಂಘಟಿಸುವುದರ ಮೂಲಕ ನೂತನತೆಯನ್ನು ತಂದಿದೆ. ಆದರೆ 'ಚಂದ್ರಕಾಂತ' ಎನ್ನುವ ಒಂದು ಕವಿಸಮಯದಲ್ಲಿ ಅಂಥ ಸೃಜನೆಗೆ ಯಾವ ಆಧಾರವಿದೆ? ಹಾಗೆಯೆ ಬೆಳುದಿಂಗಳನ್ನು ಕುಡಿದು ಬದುಕುವ ಚಕೋರ, ಮಳೆಗೆ ಕಾತರಿಸುವ ಚಾತಕ, ಕತ್ತಲಾದೊಡನೆಯೆ ಅಗಲಿ ಕಾತರಿಸುವ ಚಕ್ರವಾಕ ಇವುಗಳಿಗೆ ಯಾವ ಆಧಾರವಿದೆ? ಅವುಗಳು ಕವಿಯ ಭಾವಗೃಹೀತವಾದ, ಕಲ್ಪನಾನಿರ್ಮಿತವಾದ ಸಂಗತಿಗಳು ಮಾತ್ರ. ಶಿಲೆಯೊಂದು ಬೆಳುದಿಂಗಳಲ್ಲಿ ಕರಗುವುದೂ, ಹಕ್ಕಿಯೊಂದು ಬೆಳುದಿಂಗಳನ್ನು ಕುಡಿದು ಬದುಕುವುದೂ ಲೋಕವಿಷಯ ಸ್ಥಿತಿಯಲ್ಲದಿದ್ದರೂ ಎಂಥ ಸೊಗಸಾದ ಕಲ್ಪನೆಗಳು! ಎಂದೋ ಯಾವನೋ ಕವಿಯೊಬ್ಬ ಇಂಥ ಸುಂದರವಾದ ಸಂಗತಿಯನ್ನು ಕಲ್ಪಿಸಿದ. ಅದೂ ಪ್ರತಿಭೆಯ ಕೆಲಸವೇ. ಉದ್ದಕ್ಕೂ ಕವಿಗಳು ಅದನ್ನು ಲೋಕಾಧಾರದ ಸಂಗತಿಯನ್ನೆಂತೋ ಅಂತೆಯೆ ಒಪ್ಪಿಕೊಂಡು ತಮ್ಮ ಕಾವ್ಯಗಳಲ್ಲಿ ಬಳಸುತ್ತಾ ಬಂದಿದ್ದಾರೆ. ಈ ಕವಿಸಮಯಗಳು ಉದ್ದಕ್ಕೂ ಕಾವ್ಯಗಳಲ್ಲಿ ಕೆಲವೆಡೆ ಕೇವಲ ಸಂಗತಿಗಳಾಗಿ, ಕೆಲವೆಡೆ ಸಂಕೇತಗಳಾಗಿ, ಕೆಲವೆಡೆ ಅಲಂಕಾರ ನಿರ್ಮಾಣದ ಉಪಮಾನ ಸಾಮಗ್ರಿಯಾಗಿ, ಇನ್ನು ಕೆಲವೆಡೆ ಧ್ವನಿವ್ಯಂಜಕವಾದ ಪ್ರತಿಮೆಗಳಾಗಿ ಬಳಸಲ್ಪಟ್ಟಿವೆ.

---

[೬] ಕವಿಸಮಯವನ್ನು ಕುರಿತು 'ಕರ್ಣಾಟಕ ಕಾವ್ಯ ಕಲಾನಿಧಿ'ಯ ಶ್ರೀ ಎಂ. ಎ. ರಾಮಾನುಜ ಐಯ್ಯಂಗಾರ್ ಅವರು 1908 ರಲ್ಲಿ 'ಕವಿಸಮಯಂ' (ಪ್ರಥಮಭಾಗ)—ಎನ್ನುವ ಪುಸ್ತಕವನ್ನು ಬರೆದಿದ್ದಾರೆ. ಅವರು ಉದ್ದಕ್ಕೂ ಕವಿಸಮಯವನ್ನು ಕವಿಸಂಪ್ರದಾಯವೆನ್ನುವ ವಿಶಾಲಾರ್ಥದಲ್ಲಿಯೇ ಭಾವಿಸಿ ಕಾವ್ಯಕಲೆಯಲ್ಲಿ ಸೌಂದರ್ಯೋತ್ಪಾದಕವಾದ ನೈಪುಣ್ಯಸಮಸ್ತವನ್ನೂ ಅವರು ಕವಿಸಮಯವೆಂದೇ ಕರೆದಿದ್ದಾರೆ. ಅವು ''ಕವಿಪರಂಪರಾಪ್ರಾಪ್ತವಾಗಿ ಬಂದಿರುವುದರಿಂದ ಅವು 'ಕವಿಸಂಪ್ರದಾಯ ವೆಂದೂ ಕರೆಯಲ್ಪಡುವುವು'' ಎನ್ನುತ್ತಾರೆ. ಹೀಗೆ ಕವಿಸಮಯಗಳು, ಕವಿಪರಂಪರೆಯ ಒಂದು ಅಂಗ ಎನ್ನುವ ಬದಲು, ಕವಿಸಮಯಗಳನ್ನು ಕವಿಸಂಪ್ರದಾಯದೊಂದಿಗೆ ಸಮಾನಾರ್ಥಕವಾಗಿ ಭಾವಿಸಿದಾರೆ.

೪

ಲೋಕ, ಶಾಸ್ತ್ರ, ಕಾವ್ಯ ಈ ಮೂರೂ ಕವಿಪ್ರತಿಭೆಗೆ ಅಗತ್ಯವಾದ ಪರಿಕರಗಳೆಂದು ಒಪ್ಪಿಕೊಂಡ ಮೇಲೆ, ಲೋಕಕ್ಕಾಗಲಿ, ಶಾಸ್ತ್ರಕ್ಕಾಗಲಿ ಋಣಿಯಾಗದ ಕವಿಸಮಯಗಳು, ಮತ್ತೊಂದು ಪರಿಕರವಾದ ಕಾವ್ಯಕ್ಕೆ ಋಣಿಯಾಗಿವೆ ಎನ್ನುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಕವಿಗೆ ಲೋಕಶಾಸ್ತ್ರಗಳು ಹೇಗೆ ಆಧಾರವೊ ಹಾಗೆಯೇ ಪೂರ್ವಕವಿಗಳ ಕಲ್ಪನಾಸಾಮಗ್ರಿಯೂ ಆಧಾರವೆ. ಆದರೆ ಅವುಗಳನ್ನು ವಿನೂತನವನ್ನಾಗಿ ಬಳಸಿ ರಸಾನು ಭವಕಾರಿಯನ್ನಾಗಿ ಮಾಡಿದ ಕವಿಗಳೂ ವಿರಳವೆ. ಬಹುಮಟ್ಟಿಗೆ ಕವಿಸಮಯಗಳು ಕೇವಲ ಸಂಗತಿಗಳಾಗಿ ನಿರೂಪಿತವಾಗಿರುವುದು ಸಾಮಾನ್ಯವಾದ ವಿಷಯ. ಮಳೆಗಾಲದ ವರ್ಣನೆಗೆ ಕವಿ ತೊಡಗಿದನೆಂದರೆ ಅಲ್ಲಿ ಕಾತರಿಸುವ ಚಾತಕದ ವರ್ಣನೆ ಸಾಂಪ್ರದಾಯಿಕವಾಗಿ ಬರುತ್ತದೆ. ಮಿಕ್ಕ ಕಾಲದಲ್ಲಿ ಮೂಗುವಟ್ಟ ಕೋಗಿಲೆ ವಸಂತ ವರ್ಣನೆಯಲ್ಲಿ ಮಾತ್ರ ಕೂಗುತ್ತದೆ. ಹುಣ್ಣಿಮೆಯಿರುಳು ತೆರೆದರೆ ಅಲ್ಲಿ ಚಕೋರ ಚಂದ್ರಕಾಂತಗಳು ಹಾಜರು; ಹಾಗೆಯೆ ಇರುಳಾದೊಡನೆ ಚಕ್ರವಾಕಗಳಿಗೆ ವಿರಹ, ಉದಯದಂದು ಮಿಲನ ಅತ್ಯಂತ ಲೆಕ್ಕಾಚಾರ ವಾದ ರೀತಿಯಲ್ಲಿ ನಿರೂಪಿತವಾಗಿದೆ ಕವಿಕೃತಿಗಳಲ್ಲಿ. ಇಂಥ ಕಡೆಗಳಲ್ಲೆಲ್ಲಾ ಕವಿಸಮಯ ಗಳು ಕವಿಗಳ ಸಮಯಕ್ಕೆ ಒದಗಿದ ಸಾಮಗ್ರಿಗಳು. ಇನ್ನು ಇದಕ್ಕಿಂತ ಕೊಂಚ ಜೀವಂತ ವಾಗಿ, ಧ್ವನಿಪ್ರಚುರವಾಗಿ ಬಳಸಲ್ಪಟ್ಟಿರುವ ನಿದರ್ಶನಗಳೂ ಇಲ್ಲದಿಲ್ಲ. ಸತಿಪತಿಯರ ವಿರಹದ ಹಿನ್ನೆಲೆಯಲ್ಲಿ ಚಕ್ರವಾಕದ ವಿರಹವ್ಯಥೆ ಚಿತ್ರಿತವಾದರೆ, ಯಾವುದೋ ತಳಮಳದ ಸ್ಥಿತಿಯಲ್ಲಿ ತಪಿಸುವ ವ್ಯಕ್ತಿಯ ಮನಃಸ್ಥಿತಿಯ ಹಿನ್ನೆಲೆಯಲ್ಲಿ, ಅಥವಾ ಅನ್ಯೋಕ್ತಿ ಚಿತ್ರಣ ದಲ್ಲಿ ಚಾತಕದ ಕಾತರತೆ ಚಿತ್ರಿತವಾದರೆ, ಅಲ್ಲಿ ಅವುಗಳಿಗೂ ಅಲಂಕಾರತ್ವವೂ ಧ್ವನಿಪ್ರಚು ರತೆಯೂ ಒದಗಿ ಅವು ರಸವ್ಯಂಜಕವಾಗಬಲ್ಲವು. ಇಷ್ಟಲ್ಲದೆ ಅಲಂಕಾರಗಳ ನಿರ್ಮಾಣದಲ್ಲಿ ಕವಿಸಮಯಗಳು ಉಪಮಾನ ವಸ್ತುಗಳಾಗಿ ಪರಿಣಮಿಸಿರುವುದು ಗಮನಾರ್ಹವಾದ ಅಂಶ. 'ಚಕೋರದಂತೆ ಕಾತರಿಸಿ' 'ಕೋಕದಂತೆ ಕೊರಗಿ' 'ಚಾತಕದಂತೆ ಬಾಯ್ಬಿಟ್ಟು'—ಎನ್ನುವಂಥ ಉಪಮಾಲಂಕಾರದಿಂದ ಹಿಡಿದು 'ಚಕೋರವಿಲೋಲನೇತ್ರೆ' 'ಚಕ್ರಮಿಥುನಸ್ತನೆ' ಎನ್ನು ವಂಥ ರೂಪಕ ನಿರ್ಮಾಣಗಳ ತನಕ ಇವುಗಳನ್ನು ಗುರುತಿಸಬಹುದು. 'ಸರಸಿಜನೇತ್ರೆ' ಮತ್ತು 'ಚಕೋರ ವಿಲೋಲನೇತ್ರೆ' ಎನ್ನುವ ಈ ಎರಡು ರೂಪಕಗಳಲ್ಲಿ, ಒಂದು ಲೋಕವೃತ್ತಗಳೆರ ಡರ ಸಾದೃಶ್ಯಶ್ರೀಯಿಂದ ಸಿದ್ಧವಾದ ಅಲಂಕಾರ, ಮತ್ತೊಂದು ಕವಿಸಮಯ ಸಿದ್ಧವಾದ ಅಲಂಕಾರ. ಕವಿಸಮಯ ನಿರ್ಮಿತವಾದ ಅಲಂಕಾರಗಳಲ್ಲಿ ಉಪಮೇಯ ಈ ಲೋಕದ್ದು, ಉಪಮಾನ ಮಾತ್ರ ಕವಿಸಮಯದ್ದು ಅಥವಾ ಕವಿಕಲ್ಪನಾಸಿದ್ಧವಾದ ಪರಂಪರಾಗತವಾದ ಸಾಮಗ್ರಿಗಳದು. 'ಚಕೋರವಿಲೋಲನೇತ್ರೆ' ಎನ್ನುವ ಒಂದು ರೂಪಕದ ಭಾವಸಿದ್ಧಿಗೆ ಸಹೃದಯರ ಮನಸ್ಸು ಕಾವ್ಯಾಭ್ಯಾಸ ಸಿದ್ಧವಾದ ಚಕೋರದ ವಿಷಯಕವಾದ ಸಾಂಕೇತಿಕ ಅರ್ಥವನ್ನು ಸ್ಮರಿಸಿಕೊಳ್ಳಬೇಕಾಗುತ್ತದೆ.

ಧ್ವನಿ ಮತ್ತು ಆಧುನಿಕ ಪ್ರತಿಮಾತತ್ವದ ದೃಷ್ಟಿಯಿಂದ ನೋಡಿದರೆ ಕೆಲವು ಕವಿಸಮಯ ಗಳು ತತ್ವಗರ್ಭಿತವೂ ಧ್ವನಿಪೂರ್ಣವೂ ಆಗುತ್ತವೆ. ಚಕೋರ ಚಾತಕಗಳು ಈ ದೃಷ್ಟಿಯಿಂದ ಬೇರೊಂದು ಸತ್ಯಕ್ಕೆ ಒಡ್ಡಿದ ಪಕ್ಷಿಪ್ರತಿಮೆಗಳು. ಚಾತಕ ರಜಃಸ್ಪರ್ಶವಾಗದ ನಭದ ನೀರಿಗೆ ಕಾತರಿಸುವ ಪಕ್ಷಿವಿಶೇಷ. ಅದಕ್ಕೆ ಬೇಕಾದದ್ದು ನೆಲದ ಮಣ್ಣಿನ ಮೇಲೆ ಬಿದ್ದ ನೀರಲ್ಲ; ಅದಕ್ಕೆ ಬೇಕಾದದ್ದು ಶುದ್ಧವಾದ ಅಂಬರಲೋಕದ ನೀರು. ಕೆಳಗೆ ನದೀ ನದ ತಟಾಕಗಳು ತುಂಬಿದ್ದರೂ ಸಹ ಆ ನೀರಿನ ಕಡೆ ಕಣ್ಣೆತ್ತಿ ಕೂಡ ನೋಡುವುದಿಲ್ಲ. ಅಂಥ ಪಕ್ಷಿ ಅದು! ಚಕೋರ ಇನ್ನೂ ವಿಚಿತ್ರವಾದ ಪಕ್ಷಿ. ಅದು ನೀರನ್ನು ಕೂಡ ಅಲ್ಲ, ಕೇವಲ ಬೆಳಕನ್ನು, ಅದರಲ್ಲಿಯೂ ಬೆಳುದಿಂಗಳನ್ನು ಕುಡಿದು ಬದುಕತಕ್ಕದ್ದು. ಸಾಮಾನ್ಯವಾಗಿ ಹಕ್ಕಿಗಳೆಲ್ಲ ಕಾಳುತಿಂದು ನೀರುಕುಡಿದು ಬದುಕುತ್ತವೆ ಎನ್ನುವುದು ಲೋಕಪ್ರಸಿದ್ಧವಾದ ವಿಷಯ. ಆದರೆ

ಚಕೋರ ಬೆಳಕನ್ನೆ ಕುಡಿದು ಬದುಕುತ್ತದೆ. ಪರಿಭಾವಿಸಿದಷ್ಟೂ ರಮ್ಯವಾಗುವ ಈ ಕಲ್ಪನೆ ದಿವ್ಯಾಭೀಪ್ಸೆಯ ಸೊಗಸಾದ ಪ್ರತಿಮೆಯೂ ಆಗುತ್ತದೆ. ಯಾವ ಜೀವ ಕೇವಲ ಮರ್ತ್ಯವನ್ನೊಲ್ಲದೆ ಅಮರ್ತ್ಯದ ಬೆಳಕಿಗಾಗಿ ಕಾತರಿಸುವುದೋ ಅಂಥ ಚೇತನದ ಪ್ರತಿಮೆ ಈ ಚಾತಕ, ಚಕೋರಗಳು[6]. ವೈರಾಗ್ಯ, ಹಾಗೂ ದಿವ್ಯಾನ್ವೇಷಣೆಯ ಈ ಪಕ್ಷಿ ಪ್ರತಿಮೆಗಳನ್ನು ಶಕ್ತನಾದ ಕವಿ ತನ್ನ ಕಾವ್ಯದಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಬಳಸಿಕೊಳ್ಳಬಲ್ಲ.[7] ಚಕ್ರವಾಕಗಳ ವಿಷಯವೂ ಅಷ್ಟೆ; ಚಕ್ರವಾಕ ಅಗಲುವುದೂ ಕೂಡುವುದೂ ಪರಿಶುದ್ಧ ಪ್ರೇಮದಲ್ಲಿ ಒದಗುವ ವಿರಹ-ಮಿಲನಗಳ ಸಂಕೇತ. ಅವುಗಳ ನಡುವೆ ಬರುವ ಇರುಳ ಕತ್ತಲು, ಹಗಲ ಬೆಳಕು, ಲೋಕದ ಸುಖದುಃಖಗಳನ್ನೂ ನೋವು-ನಲವುಗಳನ್ನೂ ಧ್ವನಿಸುತ್ತದೆ.

೫

ಕಾವ್ಯಗಳನ್ನು ಪರಿಶೀಲಿಸಿ, ಅದರಲ್ಲಿ ಬರುವ ಕವಿಸಮಯಗಳನ್ನು ಕಲೆಹಾಕಿ ಅವುಗಳನ್ನು ಅಸದಾಖ್ಯಾತಿ, ಸದಕೀರ್ತನ, ನಿಯಮ, ಐಕ್ಯ ಎಂದು ಆಲಂಕಾರಿಕರು ವಿಭಾಗಿಸಿದ್ದಾರೆ.[8] ಇವುಗಳಲ್ಲಿ 'ಯಾವುದು ಲೋಕ ವಿಷಯಸ್ಥಿತಿ ಅಲ್ಲವೋ' ಅದು ಕವಿಸಮಯ ಎನ್ನುವ ಸೂತ್ರ ಅನ್ವಯಿಸುವುದು ಈ ನಾಲ್ಕರಲ್ಲಿ ಒಂದಾದ 'ಅಸದಖ್ಯಾತಿ' ಯನ್ನು ಕುರಿತು ಮಾತ್ರ. ಉಳಿದ ಮೂರು ವಿಭಾಗಗಳೂ ಲೋಕದಲ್ಲಿ ಇರುವುದನ್ನು ಇಲ್ಲವೆಂಬಂತೆ ಹೇಳಿದ ಅಥವಾ ಲೋಕವಿಷಯ ಸ್ಥಿತಿಗೆ ಸ್ಥಿತ್ಯಂತರವನ್ನು ತಂದ ಕವಿಕಲ್ಪನೆಯ ಪರಿಗಳು. ಹೀಗಾಗಿ ಇವುಗಳಲ್ಲಿ ಲೋಕವಿಷಯ ಸ್ಥಿತಿ ಅಲ್ಲದ್ದು ಹಾಗವಾದರೆ, ಲೋಕವಿಷಯ ಸ್ಥಿತಿಗೇ ಸ್ಥಿತ್ಯಂತರವನ್ನು ತಂದ ಬಗೆ ಮುಪ್ಪಾಗ. ಹೀಗೆ ಮಾರ್ಪಾಟು ಹೊಂದಿದ ಈ 'ಮುಪ್ಪಾಗ' ಕವಿಸಮಯಗಳು ಕವಿಯ ಕಾವ್ಯಗಳಲ್ಲಿ ಮಾತ್ರ ಕಂಡುಬರುತ್ತಿದೆಯೆ ಹೊರತು, ಈ ರೀತಿಯ ಬದಲಾವಣೆಗೆ ಲೋಕದ ಅಥವಾ ಶಾಸ್ತ್ರದ ಆಧಾರವಿಲ್ಲವೆನ್ನುವುದಷ್ಟೆ ಇದರಲ್ಲಿನ ಸ್ವಾರಸ್ಯ. ಹಾಗೆ ನೋಡಿದರೆ 'ನಿಯತಿಕೃತನಿಯಮರಹಿತಾಂ' ಎಂದು ಸ್ತುತ್ಯವಾದ ಪ್ರತಿಭಾಶಕ್ತಿ, ತನ್ನ ನಿರ್ಮಿತಿಗಳಲ್ಲಿ ಲೋಕಕ್ಕಾಗಲಿ ಶಾಸ್ತ್ರಕ್ಕಾಗಲಿ ಋಣಿಯಾಗಿಲ್ಲವಲ್ಲ ಎಂದು ಯಾರೂ ಆಕ್ಷೇಪಿಸಿಲ್ಲ; ಅದರ

---

6 ವೇದಾಂತ ಗ್ರಂಥಗಳಲ್ಲಿ, ಸಂತರ ಉಪದೇಶ ವಾಣಿಯಲ್ಲಿ, ಮತ್ತು ಸ್ತೋತ್ರಗಳಲ್ಲಿ ಚಾತಕ, ಚಕೋರಗಳನ್ನು ವಿಶೇಷವಾಗಿ ಸಾಧಕನ ಮನಃಸ್ಥಿತಿಯನ್ನು ನಿರೂಪಿಸಲು ದೃಷ್ಟಾಂತಗಳನ್ನಾಗಿ ಬಳಸಿರುವುದು ಕಂಡು ಬರುತ್ತದೆ. ಭಕ್ತಿಸಾಹಿತ್ಯದ ತುಂಬಾ ಈ ಕೆಲವು ಪಕ್ಷಿಪ್ರತಿಮೆಗಳನ್ನು ಕಾಣಬಹುದು. ಶ್ರೀ ರಾಮಕೃಷ್ಣರ ಉಪದೇಶ ಸಂವಾದಗಳನ್ನು ಒಳಗೊಳ್ಳುವ "ಶ್ರೀ ರಾಮಕೃಷ್ಣ ವಚನವೇದ" (ಪೂರ್ವಾರ್ಧ, ಪು. 23) ದಲ್ಲಿ ಒಂದು ಸ್ವಾರಸ್ಯವಾದ ಪಕ್ಷಿಯ ವಿಷಯ ಕಂಡುಬರುತ್ತದೆ. ಹೋಮಾಪಕ್ಷಿ ಎಂಬುದೊಂದು ಇದೆಯಂತೆ. ಇದರ ವಾಸ ಸದಾ ಅಂತರಿಕ್ಷದಲ್ಲಿ; ಅಲ್ಲೇ ಅದರ ಸಂಸಾರ. ಆ ಹಕ್ಕಿ ಮೊಟ್ಟೆಯಿಟ್ಟಾಗ ಆ ಮೊಟ್ಟೆ ನೆಲದ ಕಡೆ ಬೀಳುತ್ತಲೇ ಇರುವಾಗ ಮೊಟ್ಟೆ ಬಿರಿದು ಮರಿ ಹೊರಗೆ ಬರುವುದಂತೆ; ಆ ಮರಿ ನೆಲವನ್ನು ತಲುಪುವ ಮುನ್ನವೇ ಎಚ್ಚತ್ತು ತನ್ನ ತಾಯ್ಮನೆಯಾದ ನೀಲಾಕಾಶದ ಕಡೆಗೆ ಹಾರಿಹೋಗುವುದಂತೆ. ಈ ಕಥೆ ವೇದದಲ್ಲಿ ಬರುತ್ತದೆ ಎನ್ನುತ್ತಾರೆ ಪರಮಹಂಸರು. ಆದರೆ ವೇದದಲ್ಲಿ ಈ ಪಕ್ಷಿಯ ಹೆಸರೇ ಇಲ್ಲ. ಪರಮಹಂಸರ ಕಾಲಕ್ಕೆ ಈ ಪಕ್ಷಿಯ ಕಥೆ ಜನಮನದಲ್ಲಿ ಪ್ರಚಲಿತವಾಗಿದ್ದಿರಬೇಕು. ಏಕೋ ಏನೋ ಇದು 'ಕವಿಸಮಯ'ವಾಗಿ ಕಾವ್ಯಲೋಕವನ್ನು ಪ್ರವೇಶಿಸದೆ ಇರುವುದು ಸೋಜಿಗದ ಸಂಗತಿ.

7 ಶ್ರೀ ಕುವೆಂಪು ಅವರ 'ಚಂದ್ರಮಂಚಕೆ ಬಾ ಚಕೋರಿ' ಎನ್ನುವ ಕವನ ಸಂಗ್ರಹದಲ್ಲಿ 'ಚಂದ್ರಮಂಚಕೆ ಬಾ ಚಕೋರಿ' ಮತ್ತು 'ಚಕೋರಾಭೀಪ್ಸೆ'—ಎಂಬ ಕವಿತೆಗಳನ್ನು ನೋಡಿ. ಅಲ್ಲಿ ಚಕೋರ ಉದಾತ್ತಪ್ರೇಮದ ಸಂಕೇತವಾಗಿ ಚಿತ್ರಿಸಲ್ಪಟ್ಟಿದೆ.

8 ಅಸದಾಖ್ಯಾತಿ' ಎಂದರೆ ಇಲ್ಲದ ಇರುವುದನ್ನು ಇರುವಂತೆ ವರ್ಣಿಸುವುದು; 'ಸದಕೀರ್ತನ ಎಂದರೆ ಲೋಕದಲ್ಲಿ ಇದ್ದುದನ್ನು ಇಲ್ಲವೆಂಬಂತೆ ವರ್ಣಿಸುವುದು; ಅನೇಕ ಕಡೆಗಳಲ್ಲಿ ದೊರಕಬಹುದಾದ್ದನ್ನು ಒಂದೇ ಕಡೆ ದೊರೆಯುವುದೆಂಬಂತೆ ನಿಯಮನಗೊಳಿಸಿ ಹೇಳುವುದು ನಿಯಮ; ಲೋಕದಲ್ಲಿ ವಸ್ತುತಃ ಭೇದ ವಿರತಕ್ಕ ಕಡೆಗಳಲ್ಲಿಯೂ ಭೇದರಾಹಿತ್ಯವನ್ನು ಹೇಳುವುದು ಐಕ್ಯ.

—ಕನ್ನಡ ಕೈಪಿಡಿ, ಸಂಪುಟ ೧, ಕವಿಸಮಯಭಾಗ (X) ವನ್ನು ನೋಡಿ.

ಬದಲು, ಲೋಕಕ್ಕಾಗಲಿ, ಶಾಸ್ತ್ರಕ್ಕಾಗಲಿ ಋಣಿಯಾಗದ ಇಂಥ ಕೆಲವು ಅಂಶಗಳನ್ನು ಪ್ರತ್ಯೇಕವಾಗಿಯೆ ಪರಿಶೀಲಿಸಿದ್ದಾರೆ ಆಲಂಕಾರಿಕರು.

ಕವಿಸಮಯಗಳು ಲೋಕವಿಷಯ ಸ್ಥಿತಿ ಅಲ್ಲ ಎಂದರೆ ಅವುಗಳು ಕಾವ್ಯದಲ್ಲಿ ಕಂಡು ಬರುವ ರೂಪದಲ್ಲಿ ಲೋಕದಲ್ಲಿ ಇಲ್ಲ ಎಂದು ಅರ್ಥಮಾಡಬಹುದೇ ಹೊರತು, ಅಂಥ ಕಲ್ಪನೆಗೆ ಲೋಕದ ಆಧಾರವೇ ಇಲ್ಲವೆಂದು ಅರ್ಥವಾಗುವುದಿಲ್ಲ. ಚಕೋರ, ಚಾತಕಾದಿಗಳು, ಚಂದ್ರಕಾಂತಶಿಲೆಗಳು ಇವುಗಳ ಕಲ್ಪನೆಯನ್ನು, ಗಮನಿಸಿದರೆ ಲೋಕದ ಪಕ್ಷಿಗೆ, ಲೋಕದ ಕಲ್ಲಿಗೆ ಕವಿಕಲ್ಪನೆಯಿಂದ ಪ್ರಾಪ್ತವಾದ ಪದವಿಗಳಲ್ಲವೆ ಅವು ?[9] ಕವಿಕಲ್ಪನಾ ನಿರ್ಮಿತವಾದ

---

[9] ಕವಿಸಮಯಗಳಲ್ಲಿ ಕಂಡುಬರುವ ಚಕ್ರವಾಕ, ಚಾತಕ, ಚಕೋರ ಇವುಗಳು ಕೇವಲ ಕವಿಕಲ್ಪಿತವಾದ ಪಕ್ಷಿಗಳಲ್ಲ. ಲೋಕದಲ್ಲಿ ವಾಸ್ತವವಾಗಿ ಇರತಕ್ಕವು ಎನ್ನುವ ಸಂಗತಿ ಕುತೂಹಲಕಾರಕವಾಗಿದೆ: 'ಚಕ್ರವಾಕ' ಎನ್ನುವ ಹೆಸರಿನ ನಿಷ್ಪತ್ತಿ ಆ ಹಕ್ಕಿಗಳ ಕೊರಳದನಿಯಿಂದ ಬಂದದ್ದು. ಹಿಂದಿಯಲ್ಲಿ ಇದನ್ನು 'ಚಾಕ್ವಾ' ಎಂದು ಕರೆಯುತ್ತಾರೆ. ಇಂಗ್ಲಿಷ್‌ನಲ್ಲಿ ಇದಕ್ಕೆ Brahmany duck ಎಂದು ಹೆಸರು. ಋಗ್ವೇದದಲ್ಲಿ (ii-39,3) ಈ ಪಕ್ಷಿಯ ಹೆಸರಿದೆ. ಯಜುರ್ವೇದದಲ್ಲಿ (ಮೈತ್ರಾಯಣೀಸಂಹಿತಾ iii-14. 3. 13) ಅಶ್ವಮೇಧಯಾಗದಲ್ಲಿ ಬಲಿಕೊಡುತಿದ್ದ ಪಕ್ಷಿಗಳ ಪಟ್ಟಿಯಲ್ಲಿ ಚಕ್ರವಾಕದ ಹೆಸರು ಬರುತ್ತದೆ. ಚಕ್ರವಾಕ ಪಕ್ಷಿಗಳು ಶುದ್ಧ ದಾಂಪತ್ಯ ಪ್ರೇಮದ ಮಾದರಿ ಎಂಬಂತೆ ಸಂಸ್ಕೃತ ಸಾಹಿತ್ಯದಲ್ಲಿ ಪ್ರಚಲಿತವಾಗಿದೆಯಷ್ಟೆ ? ಈ ವಿಚಾರ ಮೊದಲು ದೊರೆಯತಕ್ಕದ್ದು ಅಥರ್ವವೇದದಲ್ಲಿ (xiv. 2-6).

'Vedic Index of names and subjects' By A. A. Macdonell and A. B. Keith, Vol I. p. 252, 253.

ಚಕೋರ ಚಾತಕಗಳ ವಿಚಾರವನ್ನು ಕುರಿತು ಬಿ. ಎಸ್. ಉಪಾಧ್ಯಾಯ ಅವರು 'India in Kalidasa ಎನ್ನುವ ಗ್ರಂಥದಲ್ಲಿ ಹೀಗೆ ಹೇಳುತ್ತಾರೆ: ''ಚಕೋರ: ಇದು Greek Partridge. ಇದರಲ್ಲಿ ಅನೇಕ ಬಗೆಗಳಿದ್ದುವು. ನೆಟ್ಟತಲೆಯ, ಅತ್ಯಂತ ಚಟುವಟಿಕೆಯುಳ್ಳ ಈ ಹಕ್ಕಿಯಲ್ಲಿ ಎದ್ದು ಕಾಣತಕ್ಕದ್ದು ಅದರ ಕೆಂಪುಕಣ್ಣು ಮತ್ತು ಕಾಲುಗಳು. ಉಷ್ಣವಲಯಗಳಲ್ಲಿ ಮಳೆಗಾಲದನಂತರ ಹೊಚ್ಚಹಸುರು ಹುಲ್ಲುಗಾವಲುಗಳಲ್ಲಿ ಸಾಮಾನ್ಯವಾಗಿ ಜೊತೆ ಜೊತೆಯಾಗಿ ಇವು ಕಂಡುಬರುತ್ತವೆ. ಚಾತಕ: ಇದು ಕೋಗಿಲೆಯ ಜಾತಿಗೆ ಸೇರಿದ ಹಕ್ಕಿ. ಇದು ಮಳೆಯ ನೀರನ್ನು ಮಾತ್ರವೆ ಕುಡಿಯುತ್ತದೆ ಎಂದು ಪ್ರತೀತಿ. ಶ್ರೀ ಎಸ್. ಪಿ. ಪಂಡಿತರು ಹೇಳುವಂತೆ (Vikramorvasi, 11 Notes) 'ಇದು ಕಾಲ್ಪನಿಕ ಪಕ್ಷಿಯಲ್ಲ. ಇದೊಂದು ಪುಟ್ಟ ಹಕ್ಕಿ, ಸಣ್ಣ ಪಾರಿವಾಳಕ್ಕಿಂತಲೂ ಸಣ್ಣಹಕ್ಕಿ. ಅದಕ್ಕೆ ಉದ್ದವಾದ ಪುಕ್ಕವಿದೆ. ಅದರ ಬಣ್ಣ ಕಪ್ಪು, ಹಳದಿ, ಬಿಳಿ ಇವುಗಳ ಮಿಶ್ರಣ. ಅದರ ತಲೆಯ ಮೇಲೆ ಹೆದೆಯೇರಿಸಿ ಬಿಲ್ಲಿನಾಕಾರದ ಉದ್ದವಾದ ಚೂಡವಿದೆ. ಯಾವಾಗ ಅದು ನೀರುಕುಡಿಯಲೆಂದು ನೆಲದ ಕಡೆ ಕೊಕ್ಕನ್ನು ಚಾಚಿದರೂ, ಮೇಲಿನ ಧನುರಾಕೃತಿಯ ಆ ಚೂಡ ಅಡ್ಡ ಬರುತ್ತದೆ. ಪೂರ್ವಜನ್ಮದಲ್ಲಿ ಕ್ಷುಲ್ಲಕ ಕಾರಣಕಾಗಿ ತನ್ನ ಸೊಸೆಗೆ ಕುಡಿಯಲು ನೀರುಕೊಡದೆ ಗೋಳುಹೊಯ್ದುಕೊಂಡ ತಪ್ಪಿಗೆ ಅತ್ತೆಯಾದವಳಿಗೆ ಒದಗಿದ ಶಿಕ್ಷೆಯ ರೂಪ ಈ ಹಕ್ಕಿ ಎನ್ನುವುದು ಹಳ್ಳಿಗಳಲ್ಲಿ ಪ್ರಚಲಿತವಾಗಿರುವ ದಂತಕಥೆ.' ಶ್ರೀ ಎಸ್. ಪಿ. ಪಂಡಿತರ ಈ ವರ್ಣನೆ ಸಮರ್ಪಕವಾಗಿದ್ದಲ್ಲಿ ಈ ಹಕ್ಕಿ ಉತ್ತರ ಪ್ರದೇಶದ ಪೂರ್ವಭಾಗಗಳಲ್ಲಿ ನೈನ್ ಎಂದು ಕರೆಯಿಸಿಕೊಳ್ಳುವ ಪಕ್ಷಿ ಅಲ್ಲದೆ ಬೇರೆ ಅಲ್ಲ.''

'India in Kalidasa.' B. S. Upadhyaya. pp. 47, 48.

ಈ ವಿವರಣೆಗಳನ್ನು ನೋಡಿದರೆ ಈ ಮೂರು ಹಕ್ಕಿಗಳೂ ಕಾಲ್ಪನಿಕವಲ್ಲ ಎನ್ನುವ ಸಂಗತಿ ತಿಳಿದು ಬರುತ್ತದೆ. ಚಕ್ರವಾಕದಂತೆ ಚಾತಕವೂ ವೇದದ ಕಾಲದಲ್ಲಿ ಇದ್ದ ಪಕ್ಷಿ. ವೇದದಲ್ಲಿ 'ಚಾತಕ' ಎನ್ನುವ ಹೆಸರು ಇಲ್ಲದಿದ್ದರೂ ಅದು ಸಾರ್ಗ ಎಂಬ ಹೆಸರಿನಿಂದ ನಿರ್ದೇಶಿತವಾಗುತಿದ್ದಂತೆ ತೋರುತ್ತದೆ. [''Sārga is the name of a bird in the list of victims at the Aśvamedha (horse sacrifice) in the Yajurveda Samhitās. Sāyaṇa on the Taittirīya Saṁhitā calls it the 'Wild Chātaka'— Vedic Index of names and Subject, A. A. Macdonell and A. B. Keith, Vol. I. p. 374.] ಚಕೋರದ ಹೆಸರು ವೇದದಲ್ಲಿ ಕಾಣಿಸದು. ಈ ಮೂರು ಹಕ್ಕಿಗಳಲ್ಲಿ ಚಕ್ರವಾಕಕ್ಕೆ ಉಳಿದೆರಡು ಹಕ್ಕಿಗಳ ವಿಷಯಕ್ಕೆ ಆರೋಪಿತವಾದಂಥ ಯಾವ 'ಅಲೋಕ ವಿಷಯಸ್ಥಿತಿ'ಯೂ ಇಲ್ಲ. ಸದಾ ಜೊತೆಜೊತೆಯಾಗಿರುವ ಚಕ್ರವಾಕಗಳು ಕವಿಗಳಲ್ಲಿ ಪರಿಶುದ್ಧ ದಾಂಪತ್ಯಪ್ರೇಮದ ಕಲ್ಪನೆಯನ್ನು ಮೂಡಿಸಿರಬಹುದು. ಚಕೋರ ಬೆಳುದಿಂಗಳನ್ನು, ಚಾತಕ ಕೇವಲ ಮಳೆ ಹನಿಗಳನ್ನು ಕುಡಿದು ಜೀವಿಸುತ್ತವೆ ಎನ್ನುವ ರಮ್ಯ ಕಲ್ಪನೆ ಪರಂಪರಾಗತವಾಗಿ ಬಂದಿದೆ.

ಎಷ್ಟೋ ಪಾತ್ರಗಳನ್ನೂ, ಅಘಟಿತ ಘಟನೆಗಳನ್ನೂ ನಾವು ಕಾವ್ಯಲೋಕದಲ್ಲಿ ಕಂಡರೂ ಅವುಗಳ ರಸೌಚಿತ್ಯವನ್ನು ಗಮನಿಸಿ ಮೆಚ್ಚುವಂತೆ ಕವಿಸಮಯಗಳನ್ನೂ ಶಿಷ್ಟರಾದ ಸಹೃದಯರು ಸಂಭಾವಿಸುತ್ತಾರೆ. ಆದುದರಿಂದ 'ಅವುದಶೇಷಲೋಕವಿಷಯಸ್ಥಿತಿಯಲ್ತು'—ಎನ್ನುವ ಮಾತಿಗೆ ಅಂಥ ವಸ್ತುಗಳು ಲೋಕದಲ್ಲಿ ಕಾಣುವುದಿಲ್ಲವೆಂದು ಅರ್ಥವೇ ಹೊರತು ಅಂಥವುಗಳ ಕಲ್ಪನೆಗೆ ಲೋಕದ ಯಾವ ಆಧಾರವೂ ಇಲ್ಲವೇ ಇಲ್ಲವೆಂದು ಅರ್ಥವಲ್ಲ. ಹಾಗೆ ನೋಡಿದರೆ ಕಾವ್ಯದಲ್ಲಿ ಚಿತ್ರಿತವಾದ ಘಟನೆಗಳೆಷ್ಟೋ, ತಾವೂ 'ಲೋಕವಿಷಯಸ್ಥಿತಿಯಲ್ತು' ಎನ್ನುವುದನ್ನೆ ಸಮರ್ಥಿಸುತ್ತವೆ. ಕಾವ್ಯದ ಘಟನೆಗಳೆಲ್ಲ ಬಹುಮಟ್ಟಿಗೆ 'ಲೋಕವಿಷಯಸ್ಥಿತಿಯಲ್ತು' ಎಂಬ ಮಾತಿನ ನೆಪದಲ್ಲಿ ಕಾವ್ಯಸಮಸ್ತವೂ ಕವಿಸಮಯವಲ್ಲದೆ ಬೇರೆ ಅಲ್ಲ ಎಂದು ಭ್ರಮಿಸುವ ಸಂಭವವಿದೆ. ಆದರೆ ಕವಿಸಮಯ ಕಾವ್ಯಸಂಪ್ರದಾಯದ ಒಂದು ಅಂಗ ಮಾತ್ರ ಎನ್ನುವುದನ್ನೂ, ಕವಿಸಮಯ ಅಂಥ ಒಂದು ಅಲ್ಪಸಂಖ್ಯಾತ ವರ್ಗದ ನಿರ್ದೇಶನಕ್ಕೆ ಬಳಸಿದ ಪಾರಿಭಾಷಿಕ ಪದ ಎನ್ನುವುದನ್ನೂ ಮರೆಯಬಾರದು.

೬

ಲೋಕವಿಷಯಸ್ಥಿತಿಯ ತೀವ್ರಾನುಭವವನ್ನೂ, ತಿಳಿವಳಿಕೆಯನ್ನೂ ಆಧಾರವನ್ನಾಗಿರಿಸಿಕೊಂಡು ಕವಿಪ್ರತಿಭೆ ಮೂಡಿಸಿದ ಕೆಲವು ಉಕ್ತಿವಿಶೇಷಗಳನ್ನೂ, ಸಂಕೇತಗಳನ್ನೂ ಆಲಂಕಾರಿಕರು ಕವಿಸಮಯಗಳೆಂದು ಗುರುತಿಸಿದ್ದಾರೆ. ವಾಸ್ತವವಾಗಿ ಇವುಗಳಲ್ಲೆಷ್ಟೊ ಕವಿಸಮಯವನ್ನು ಕುರಿತ ಸೂತ್ರದ ವ್ಯಾಪ್ತಿಗೆ ಹೊರಗಾಗಿವೆ. ಉದಾಹರಣೆಗೆ ತಿಮಿ ತಿಮಿಂಗಿಲಾದಿಗಳು ಕಡಲಲ್ಲಿ ಮಾತ್ರ ಇವೆ ಎಂದೂ, ಶ್ರೀಗಂಧದ ಮರ ಮಲಯಾಚಲದಲ್ಲಿ ಮಾತ್ರ ಬೆಳೆಯುವುದೆಂದೂ ಕೋಗಿಲೆ ವಸಂತದಲ್ಲಿ ಮಾತ್ರ ಕುಕಿಲುತ್ತದೆಂದೂ ನವಿಲು ವರ್ಷಾಕಾಲದಲ್ಲಿ ಮಾತ್ರ ನರ್ತಿಸುವುದೆಂದೂ ಕವಿಗಳು ಪರಂಪರಾಗತವಾಗಿ ವರ್ಣಿಸಿದ್ದಾರೆ. ಈ ಬಗೆಯ ನಿಯಮನದಲ್ಲಿ ಲೋಕವಿಷಯಸ್ಥಿತಿಯ ತಿಳಿವಳಿಕೆಯಿಲ್ಲದೆ ಇಲ್ಲ. ಯಾವ ವಸ್ತು ವಿಶೇಷಗಳು ಮತ್ತು ಘಟನಾ ವಿಶೇಷಗಳು ಯಾವ ಯಾವ ಸ್ಥಳಗಳಲ್ಲಿ ಹಾಗೂ ಕಾಲದಲ್ಲಿ ವಿಶೇಷವಾಗಿ ಉಂಟೋ, ವಿಶೇಷವಾಗಿ ಗಮನಕ್ಕೆ ಬರುತ್ತವೋ ಅವುಗಳನ್ನು ಕವಿಗಳು ಇಲ್ಲಿ ಹೇಳಿದ್ದಾರೆ. ತಿಮಿ ತಿಮಿಂಗಿಲಾದಿಗಳು ಬೇರೆ ಬೇರೆಯ ಕಡೆ ಇರಬಹುದೇನೋ ; ಆದರೆ ಕಡಲಿನಲ್ಲಿ ಮಾತ್ರ ವಿಶೇಷವಾಗಿವೆ. ಕೋಗಿಲೆ ಬೇರೆ ಬೇರೆಯ ಕಾಲದಲ್ಲಿಯೂ ಕೂಗಬಹುದು, ಕವಿಗಳ ಆಕ್ಷೇಪಣೆಯೇನಿಲ್ಲ, ಆದರೆ ವಸಂತದಲ್ಲಿ ಮಾತ್ರ, ಸಂಭ್ರಮಾನ್ವಿತವಾದ ಹಿನ್ನೆಲೆಯಲ್ಲಿ ಅದರ ಸ್ವರ ಎದ್ದು ಕೇಳುತ್ತದೆ. ನವಿಲುಗಳು ವರ್ಷಾಕಾಲದಲ್ಲಿ ವಿಶೇಷವಾಗಿ ಕೇಕೆ ಹಾಕುತ್ತವೆ ಎನ್ನುವುದು ತಿಳಿದ ಸಂಗತಿ. ಚಂದನ ಮಲಯ ಪರ್ವತದಲ್ಲಿಯೆ ವಿಶೇಷವಾಗಿದ್ದಿತೆನ್ನುವ ಖ್ಯಾತಿ ನಿರಾಧಾರವಾದುದೇನಲ್ಲ. ಇಲ್ಲೆಲ್ಲಾ ಕವಿಗಳು ಈ ಘಟನೆಗಳ, ಸಂಗತಿಗಳ ವಿಶೇಷಾಧಿಕ್ಯವನ್ನು ಕುರಿತು ವರ್ಣಿಸಿದ ಪರಿಯನ್ನು ಗುರುತಿಸಬಹುದೇ ಹೊರತು ಇವು 'ಅಶೇಷಲೋಕವಿಷಯಸ್ಥಿತಿಯಲ್ತು' ಎಂದು ತಳ್ಳಿಹಾಕಲು ಆಧಾರವಿಲ್ಲ. ಏಕೆಂದರೆ ಇವು ವಿಶೇಷಲೋಕವಿಷಯಸ್ಥಿತಿಯ ಚಿತ್ರವನ್ನು ಕೊಡುತ್ತವೆ. ಎಲ್ಲಿ, ಯಾವುದು, ಯಾವ ಕಾಲದಲ್ಲಿ ವಿಶೇಷವಾಗಿ ವಾಸ್ತವವಾಗಿ ಅನುಭವಕ್ಕೆ ಬರುವುವೋ ಅಂಥ ಲೋಕವೃತ್ತವನ್ನೇ ಕವಿಗಳು ಎತ್ತಿ ಹೇಳಿದ್ದಾರೆ. ಅಷ್ಟೇ ಅಲ್ಲದೆ ಕೋಗಿಲೆಯ ಕುಕಿಲು, ನವಿಲಿನ ಕೇಕೆ ಇವುಗಳು ಎರಡು ಪ್ರಮುಖವಾದ ಋತುಪರಿವರ್ತನೆಯನ್ನು ಸೂಚಿಸುವ ಸಂಕೇತಗಳೂ ಆಗಬಲ್ಲವು.

ಕವಿಸಮಯಗಳೆಂದು ಆಲಂಕಾರಿಕರು ಕೊಡುವ ಒಂದೆರಡು ನಿದರ್ಶನಗಳು ವಾಸ್ತವವಾಗಿ ಕವಿಯ ತೀವ್ರಾನುಭವದ ಅಭಿವ್ಯಕ್ತಿಗಳಾಗಿವೆ. ಬೆಳುದಿಂಗಳನ್ನು ಬೊಗಸೆಯಲ್ಲಿ ತುಂಬಿಕೊಳ್ಳಬಹುದು, ಕತ್ತಲೆ ಮುಷ್ಟಿಗ್ರಾಹ್ಯವಾಗಿದೆ, ಸೂಜಿಯನ್ನು ಚುಚ್ಚಲೂ ತೆರಪಿಲ್ಲದಂತೆ ನಿಬಿಡವಾಗಿದೆ ಎಂಬ ಉಕ್ತಿಗಳು ಕವಿಸಮಯಗಳೆನ್ನಿಸಿಕೊಂಡಿವೆ. ಆದರೆ ವಾಸ್ತವವಾಗಿ ಯಾವ ಕವಿಗೆ ಬೆಳುದಿಂಗಳನ್ನು ಕಂಡು ಅದನ್ನು ಬೊಗಸೆಯಲ್ಲಿ ತುಂಬಬಹುದು ಎನ್ನಿಸಿತೋ, ಅದು

ಆತನ ಪಾಲಿಗೆ ಒಂದು ರೋಮಾಂಚಕಾರಿಯಾದ ಅನುಭವವೇ. ಬೆಳುದಿಂಗಳನ್ನು ಕುರಿತ ಈ ಪದ್ಯವನ್ನು ನೋಡಿ :

"ಬೆಲಗಸೆದೀವಿಕೊಂಡು ಕುಡಿಯಲ್, ಮೊಗೆಯಲ್ ಕೊಡಗೊಂಡು, ತಿರ್ದಿ ಬ
ಚ್ಚಲಸಲೆದೋಂಟದೊಳ್ ಪರಿಯಿಸಲ್, ಪಱುಗೋಲ್ಗಳಸಿಕ್ಕಿ ಪಾಯಿಸಲ್,
ಸಲೆಯಿಸಿಸೆಂದು ನೋಡಲೊಳಪೊಕ್ಕು ದುಡುಮ್ಮಿಱಿದಾಡಲೀಸಲ್ ಅ
ಗ್ಗಲಿಸಿದಲಂಪಿಸಿಂ ಬಗೆದುದಂದು ಜನಂ ಘನಚಂದ್ರಿಕಾಂಬುವಂ."

(ರನ್ನ, ಅಜಿತನಾಥ ಪುರಾಣ, 6-45)

ಕವಿರನ್ನನ ಈ ಅಪೂರ್ವ ಪದ್ಯದಲ್ಲಿ ಬೆಳುದಿಂಗಳಿನ ರಸಾನುಭವವೆ ಹೆಪ್ಪುಗಟ್ಟಿದೆ. ಬೆಳುದಿಂಗಳನ್ನು ಕಂಡಾಗ ಕವಿಗೆ ವೈಯಕ್ತಿಕವಾಗಿ ಆದ ಉನ್ಮಾದದ ಹೊನಲು ಇದು. ಈ ಬೆಳುದಿಂಗಳು ಎಷ್ಟೊಂದು ಸಾಂದ್ರವಾಗಿದೆ! ಇದರಲ್ಲಿ ತಾನು ಹೇಗೆ ಒಂದಾಗುವುದು? ಈ ಸೊಗಸನ್ನು ಹೇಗೆ ಸವಿಯಲಿ ಎನ್ನುವ ಚಿತ್ತದ ಕಾತರತೆಯ ಪ್ರಯತ್ನದ ಒಂದೊಂದು ಹಾರೈಕೆಯೂ ಈ ಪದ್ಯದಲ್ಲಿ ಹಂತ ಹಂತವಾಗಿ ಮೂಡಿದೆ. ಇಲ್ಲಿರುವುದು ಬೆಳುದಿಂಗಳ ಸೊಗಸನ್ನು ತನ್ಮಯೀಭಾವದಲ್ಲಿ ಒದುಕುವ 'ಅಗ್ಗಲಿಸಿದಲಂಪು'. ಇದೊಂದು ತೀವ್ರಾನುಭೂತಿ. ಹಾಗೆಯೇ ಕಗ್ಗತ್ತಲನ್ನು ಕಂಡು ಅದರ ನಿಬಿಡತೆಯ ಅನುಭವವನ್ನು ಕವಿ ಕಗ್ಗತ್ತಲು ಮುಷ್ಟಿಗ್ರಾಹ್ಯವಾಗಿದೆ ಎಂದೂ, ಸೂಜಿಯಿಂದ ಭೇದಿಸಲೂ ಅಸಾಧ್ಯವಾಗಿದೆ ಎಂದೂ ಹೇಳಿದರೆ ಅದು ಕಗ್ಗತ್ತಲಿನ ಅತಿಶಯವನ್ನು ಕುರಿತ ಉಕ್ತಿಯೇ ಹೊರತು ಲೋಕವಿಷಯಸ್ಥಿತಿಯಲ್ಲದ ಸಂಗತಿಯೇನಲ್ಲ; ಅಥವಾ ಇಂಥ ತೀವ್ರಾನುಭವಕ್ಕೆ ಬೇರೆ ಯಾವ ಸಾಕ್ಷಿಯೂ ಬೇಕಾಗಿಲ್ಲ. ಇವು ಅನುಭವದೂರವಾದ, ಕೇವಲ ಕಲ್ಪನಾಸೃಷ್ಟವಾದ, ಪರಂಪರಾಗತವಾಗಿ ಬಂದದ್ದರಿಂದ ಒಪ್ಪಿಕೊಳ್ಳಬೇಕಾದ ಸಂಗತಿ ಅಲ್ಲ. ಜೊತೆಗೆ ಇನ್ನೂ ಒಂದು ವಿಷಯವನ್ನು ಗಮನಿಸಬೇಕು. ಬೆಳುದಿಂಗಳು ಬೊಗಸೆಯಲ್ಲಿ ತುಂಬುವಷ್ಟು ಸಾಂದ್ರವಾಗಿದೆ, ಸೂಜಿಯಿಂದ ಭೇದಿಸಲು ಅಸಾಧ್ಯವಾದಷ್ಟು ನಿಬಿಡವಾದ ಕತ್ತಲೆ ಕವಿದಿದೆ ಎನ್ನುವ ಉಕ್ತಿಗಳೂ, ಕವಿಸಮಯಗಳೆಂದು ಪ್ರಸಿದ್ಧವಾದ 'ಚಂದ್ರಕಾಂತ' 'ಚಕೋರ' ಇವುಗಳೂ ಒಂದೇ ಅಲ್ಲ. ಕಗ್ಗತ್ತಲನ್ನು ಬೆಳುದಿಂಗಳನ್ನು ಕುರಿತ ಈ ಅಭಿವ್ಯಕ್ತಿಗಳು ಕವಿ 'ಲೋಕವಿಷಯಸ್ಥಿತಿಯ' ತೀವ್ರಾನುಭವದಿಂದ ಜನ್ಯವಾದುವು. ಆದರೆ ಚಕೋರ ಬೆಳುದಿಂಗಳನ್ನು ಕುಡಿದು ಬದುಕುತ್ತದೆ, ಚಂದ್ರಕಾಂತಶಿಲೆ ಬೆಳುದಿಂಗಳಲ್ಲಿ ದ್ರವಿಸುತ್ತದೆ ಎನ್ನುವ ವಿಚಾರಗಳು ಅಂಥ ತೀವ್ರಾನುಭವದ ಅಭಿವ್ಯಕ್ತಿಗಳೇನು? ಅವು ಲೋಕಾಧಾರ ಮತ್ತು ಶಾಸ್ತ್ರಾಧಾರಗಳನ್ನು ಆಶ್ರಯಿಸದ ಕವಿಕಲ್ಪನಾ ಸಿದ್ಧವಾದ ಸಂಗತಿಗಳು. ಅಷ್ಟೇ ಅಲ್ಲ, ಸೂಚೀಭೇದ್ಯ ಅಂಧಕಾರ, ಬೊಗಸೆಯಲ್ಲಿ ತುಂಬುವ ಬೆಳುದಿಂಗಳು—ಈ ಅಭಿವ್ಯಕ್ತಿಗಳು ನಮ್ಮ ಆಲಂಕಾರಿಕರು ಗುರುತಿಸಿದ ಅತಿಶಯೋಕ್ತಿ ಎಂಬ ಅಲಂಕಾರದ ವರ್ಗಕ್ಕೆ ಸೇರುತ್ತವೆ. ಈ 'ಅಲಂಕಾರ' ಮೊದಲು ಅನುಭವಿಸಿದ ಕವಿಗೆ ವಾಸ್ತವವಾಗಿ ಸಹಜವಾದ ಅಲಂಕಾರವೆ, ಅಥವಾ ಸೌಂದರ್ಯಾನುಭವದ ಅನಿವಾರ್ಯವಾದ ಅಭಿವ್ಯಕ್ತಿಯೆ. ಆದರೆ ಎಲ್ಲ ಅಲಂಕಾರಗಳಂತೆ, ಇವುಗಳೂ ತಮಗೆ ಅನುಭವವಿರಲಿ, ಇಲ್ಲದಿರಲಿ ಬಳಸಿದ ಕವಿ ಪರಂಪರೆಯಿಂದ ಸವೆದ ಕಾರಣ ಅವೂ ಸಂಪ್ರದಾಯದಲ್ಲಿ ತೇಲಿಬಂದ ಉಕ್ತಿವೈಚಿತ್ರ್ಯಗಳಾಗಿ ನಿಂತಿವೆ. ಇವುಗಳನ್ನೂ ನಮ್ಮ ಆಲಂಕಾರಿಕರು ಕವಿಸಮಯಗಳ ಗುಂಪಿಗೆ ಸೇರಿಸಿಬಿಟ್ಟಿರುವುದು ತುಂಬ ಸೋಜಿಗದ ವಿಷಯವಾಗಿದೆ.

೭

"ಕೀರ್ತಿ ನಗು ಇವುಗಳಲ್ಲಿ ಬಿಳಿಯಬಣ್ಣವನ್ನೂ ಅಪಯಶಸ್ಸಿನಲ್ಲಿ ಕಪ್ಪುಬಣ್ಣವನ್ನೂ, ಕೋಪ ಅನುರಾಗ ಇವುಗಳಲ್ಲಿ ಕೆಂಪುಬಣ್ಣವನ್ನೂ ಆರೋಪಿಸುವುದು"[10]—ಕವಿಸಮಯಗಳಲ್ಲಿ

[10] ಕನ್ನಡ ಕೈಪಿಡಿ, ಸಂಪುಟ ೧, ಪು. 244.

ಒಂದು ಬಗೆ. ಆದರೆ ಇಲ್ಲಿನ ಬಣ್ಣ ವಾಸ್ತವವಾಗಿ ಜನಮನದಲ್ಲಿ ಪ್ರಚಲಿತವಾದ ಸಾಂಕೇತಿಕ ಅರ್ಥದ ಹಿನ್ನೆಲೆಯನ್ನು ಯಶಸ್ವಿಯಾಗಿ ಉಪಯೋಗಿಸಿಕೊಂಡು ಮೂಡಿದ್ದು. ಬೆಳಕು ಕತ್ತಲೆ, ಮತ್ತು ಇವೆರಡರ ನಡುವಣ ಮಬ್ಬು ನಮ್ಮ ಜನಮನದಲ್ಲಿ ಬಗೆ ಬಗೆಯಾದ ಕಲ್ಪನೆಗಳನ್ನೂ ಭಾವನೆಗಳನ್ನೂ ಮೂಡಿಸಿದೆ. ಬೆಳಕು-ಕತ್ತಲೆಯ ಭಾವವೇ ದೇವ, ಅಸುರ; ಅರಿವು, ಮರವು; ಪಾಪ, ಪುಣ್ಯ; ಬದುಕು, ಸಾವು ಇಂಥ ಚಿತ್ರಪರಂಪರೆಗೆ, ಭಾವನಾಪರಂಪರೆಗೆ ಪ್ರಚೋದನೆಯನ್ನು ನೀಡಿದೆ. ಮೇಲೆ ಹೇಳಿದ ಕೆಲವು ಕವಿಸಮಯಗಳು ಜನಮನದಲ್ಲಿ ಪರಂಪರಾಗತವಾಗಿ ಪ್ರಚಲಿತವಾದ ಇಂಥ ಭಾವಸಾಮಗ್ರಿಯಿಂದ ಮೂಡಿದವೆಂದು ಹೇಳಬಹುದು. ಯಶಸ್ಸು ಬೆಳ್ಳಗೆ, ಅಪಯಶಸ್ಸು ಕಪ್ಪಗೆ ಎನ್ನುವ ಕಲ್ಪನೆಯಲ್ಲೆ ಯಶಸ್ಸಿನಿಂದ ಒದಗುವ ಉಲ್ಲಾಸ, ಶ್ರೇಯಸ್ಸು ಇತ್ಯಾದಿಗಳೂ ಅಪಯಶಸ್ಸಿನಿಂದ ವ್ಯಕ್ತಿಗೆ ಒದಗುವ ಕಳಂಕ, ಅವಮಾನ, ದುಃಖ, ತಿರಸ್ಕಾರ ಇವುಗಳೂ ಧ್ವನಿತವಾಗುತ್ತವೆ. ಕೋಪವನ್ನು ಕಡುಗೆಂಪೆಂದು ಹೇಳುವಾಗ ಕೋಪಿಸಿಕೊಂಡವನ ಮನಃಸ್ಥಿತಿಯ ಉರುಬನ್ನು, ಕೋಪದ ಅನುಭಾವಗಳನ್ನು ಎಷ್ಟು ಸೊಗಸಾಗಿ ತಿಳಿಸಲು ಆ ವರ್ಣನೆ ಸಮರ್ಥವಾಗಿದೆ! ಹಾಗೆ ನೋಡಿದರೆ ಪ್ರತಿಯೊಂದು ವರ್ಣವೂ ಒಂದೊಂದು ಮನಃಸ್ಥಿತಿಗೆ ಸಂಕೇತ. ಸರಸ್ವತಿಯನ್ನು ಸರ್ವಶುಕ್ಲಾ ಎಂದು ವರ್ಣಿಸುವಲ್ಲಿ, ರಾಕ್ಷಸಪಾತ್ರಗಳನ್ನು ಕಪ್ಪು-ಕೆಂಪು ಬಣ್ಣಗಳಲ್ಲಿ ಚಿತ್ರಿಸುವಲ್ಲಿ, ಆಯಾಪಾತ್ರದ ಮನಃಸ್ಥಿತಿಯ ಅಭಿವ್ಯಕ್ತಿಗೆ ಇಂತಿಂಥ ವರ್ಣ ಸರಿಯಾದ ಸಂಕೇತ ಎಂಬುದು ಪರಂಪರಾಗತವಾಗಿ ಬಂದ ಭಾವನೆಯ ಫಲವಾಗಿದೆ. ಬಿಳಿಬಣ್ಣ ಸಾತ್ವಿಕಕ್ಕೆ, ಕಾವಿ ತ್ಯಾಗಕ್ಕೆ, ಹಳದಿ ಕರುಣೆಗೆ, ಕೆಂಪು ಅಪಾಯಕ್ಕೆ, ಇತ್ಯಾದಿ ಸಂಕೇತಗಳು ಸಾಮಾನ್ಯವಾಗಿ ದಿನಬಳಕೆಯ ಬದುಕಿನಲ್ಲಿ ರೂಢಿಯಾಗಿವೆ. ಈ ಎಲ್ಲ ಲೋಕಭಾವಸಾಮಗ್ರಿಯಿಂದ ಈ ಕೆಲವು ಕವಿಸಮಯಗಳು ಮೂಡಿವೆ. ಆದರೆ "ಯಶಸ್ಸು ಬೆಳ್ಳಗಿದೆ" ಎನ್ನುವ ಸೊಗಸಾದ ವರ್ಣಪ್ರತಿಮೆ ಯಾವ ಕವಿಯಲ್ಲಿ ಮೊದಲು ಅಪೂರ್ವವಾದ ಅರ್ಥದಲ್ಲಿ ಮೂಡಿತೋ, ಅದು "ನಿಷ್ಕೇವಳಮಾದ ರೂಢಿವಶ'ದಲ್ಲಿ ಸವೆದೂ ಸವೆದೂ ಸವಕಲು ನಾಣ್ಯವಾಗಿದೆ ಎನ್ನುವುದೂ ನಿಜ.

೮

ಕವಿಕಲ್ಪನೆಯಿಂದ ಸಿದ್ಧವಾದ ಸುಂದರವಾದ ಸಂಗತಿಗಳೂ ಆಗದೆ, ಯಾವುದೋ ಒಂದು ವಾಸ್ತವಾನುಭವಕ್ಕಾಗಲಿ, ಮನಃಸ್ಥಿತಿಗಾಗಲಿ ಸಂಕೇತಗಳೂ ಆಗದೆ, ಲೋಕಾನುಭವ ಸಾಲದೆಯೋ, ಅಥವಾ ಲೋಕ ವ್ಯಾಪಾರಗಳ ಕಡೆಗೆ ಕವಿ ತಾಳಿದ ಔದಾಸೀನ್ಯದಿಂದಲೋ, ಕವಿಪ್ರಮಾದ ಜನಿತವಾದ, ಆದರೆ ಪರಂಪರಾಗತವಾದ ಕೆಲವು 'ಜಾರಿಬಿದ್ದ ಪಟ್ಟು'ಗಳನ್ನೂ ಕವಿಸಮಯಗಳೆಂದು ಕರೆದಿರುವುದು ಬಹಳ **ತಮಾಷೆ**ಯಾಗಿ ತೋರುತ್ತದೆ. ಕವಿಸಮಯಗಳೆಂದು ಕೊಟ್ಟಿರುವ ಈ ಹಲವನ್ನು ಗಮನಿಸಿ: (1) ಶುಕ್ಲಪಕ್ಷದಲ್ಲಿ ಕತ್ತಲೆಯಿದ್ದರೂ, ಕೃಷ್ಣಪಕ್ಷದಲ್ಲಿ ಬೆಳುದಿಂಗಳಿದ್ದರೂ ಶುಕ್ಲಪಕ್ಷದಲ್ಲಿ ಬರಿಯ ಬೆಳುದಿಂಗಳನ್ನೂ, ಕೃಷ್ಣಪಕ್ಷದಲ್ಲಿ ಬರಿಯ ಕತ್ತಲೆಯನ್ನೂ ವರ್ಣಿಸುವುದು; (2) ಹಲ್ಲುಗಳು ಯಾವ ಬಣ್ಣಕ್ಕೇ ಇರಲಿ, ಅದನ್ನು ಹೇಳದೆ ಬಿಳುಪನ್ನು ಮಾತ್ರ ಹೇಳುವುದು; ಮೊಗ್ಗು ಹಳದಿಯಾಗಿದ್ದರೂ ಹಸುರಾಗಿದ್ದರೂ ಅದನ್ನು ಹೇಳದೆ ಬಿಳಿಯಬಣ್ಣವನ್ನು ಮಾತ್ರ ಹೇಳುವುದು; (3) ಇತರ ಬಣ್ಣಗಳಿದ್ದರೂ ಹೂವಿನಲ್ಲಿ ಯಾವಾಗಲೂ ಬಿಳಿಯಬಣ್ಣವನ್ನೂ, ರತ್ನಗಳಲ್ಲಿ ಕೆಂಪುಬಣ್ಣವನ್ನೂ ಮೇಘ ಸಾಮಾನ್ಯದಲ್ಲಿ ಕಪ್ಪುಬಣ್ಣವನ್ನೂ ಮಾತ್ರ ವರ್ಣಿಸುವುದು; (4) ಬಣ್ಣಗಳಲ್ಲಿರುವ ಪರಸ್ಪರ ವ್ಯತ್ಯಾಸವನ್ನು ಹೇಳದಿರುವುದು—ಹೂವರಳುವ ಕ್ರಿಯೆಯಲ್ಲಿ ವ್ಯತ್ಯಾಸವನ್ನು ಹೇಳದಿರುವುದು; (5) ಚಂದ್ರನಲ್ಲಿರುವ ಕಳಂಕವನ್ನು ಮೊಲವೆಂದೂ ಜಿಂಕೆಯೆಂದೂ ಮಾತ್ರ ವರ್ಣಿಸುವುದು, ಇತ್ಯಾದಿ. . .[11] ಈ ಒಂದೊಂದು ನಿದರ್ಶನಗಳೂ ಕವಿಗಳು ತಮಗೆ ಸರಿಯಾದ ಲೋಕವ್ಯಾಪಾರ ವಿವರ

11 ಕನ್ನಡ ಕೈಪಿಡಿ, ಸಂಪುಟ ೧, 'ಕವಿಸಮಯ' ವಿಭಾಗವನ್ನು ನೋಡಿ.

ಜ್ಞಾನವಿಲ್ಲದೆ, ಅಥವಾ ಪರಂಪರಾಗತವಾಗಿ ಬಂದ ವರ್ಣನಾವ್ಯಾಪಾರಗಳನ್ನು ಮುರಿದು ತಮ್ಮ ವಿನೂತನಾನುಭವವನ್ನಾಗಲಿ ಅಥವಾ ವಾಸ್ತವಾನುಭವವನ್ನಾಗಲಿ ಹೇಳುವ ಸತ್ವವಿಲ್ಲದೆ ಅಥವಾ ಮನಸ್ಸಿಲ್ಲದೆ ಎಸಗಿದ ಪ್ರಮಾದಗಳು ಮಾತ್ರ. ನಿಜವಾದ ಜೀವನಾನುಭವ ಹಾಗೂ ಪ್ರತಿಭೆ ಇರುವ ಕವಿಗಳಲ್ಲಿ ಇಂಥ ಪ್ರಮಾದಗಳು ಕಡಮೆ. ಹೂವರಳುವ ಕ್ರಿಯೆಯನ್ನು, ಹೂಗಳ ವರ್ಣವಿಲಾಸವನ್ನು, ವೈವಿಧ್ಯವನ್ನು, ಮೋಡಗಳ ವಿವಿಧ ವರ್ಣವೈಖರಿಗಳನ್ನು ಕಣ್ಣಾರೆ ಕಂಡು ವರ್ಣಿಸಿದ ಪಂಪನಂಥ ಸಹಜ ಕವಿಯಲ್ಲಿ ಮತ್ತು ಇತರ ಕೆಲವು ಕವಿಗಳ ವರ್ಣನೆಯಲ್ಲಿ, ಮೇಲೆ ನಿರೂಪಿಸಿದ ಪಟ್ಟಿಯಲ್ಲಿ ಕಂಡುಬರುವ ವಸ್ತುಗಳ ವರ್ಣನೆ ಎಷ್ಟೊಂದು ಲೋಕವಾಸ್ತವವಾಗಿದೆ, ಸಹಜವಾಗಿದೆ, ಸುಂದರವಾಗಿದೆ ಎನ್ನುವುದನ್ನು ಶಿಷ್ಟರಾದ ಸಹೃದಯರು ಗುರುತಿಸಬಹುದು. ಕವಿಗಳು ಬೇಕಾದರೆ 'ಲೋಕವಿಷಯಸ್ಥಿತಿ' ಅಲ್ಲದ್ದನ್ನು ಕಲ್ಪಿಸಿಕೊಂಡು ಹೇಳಲಿ, ಅದನ್ನು ಪರಿಗಣಿಸಬಹುದು; ಆದರೆ 'ಲೋಕವಿಷಯಸ್ಥಿತಿ'ಯ ಬಗೆಗೆ ತಮಗಿರುವ ಅಜ್ಞತೆಯನ್ನೋ, ಅವಜ್ಞತೆಯನ್ನೋ ಆಧಾರವಾಗಿರಿಸಿಕೊಂಡು ಹೊಸೆದ ಸಂಗತಿಗಳನ್ನೂ 'ಲೋಕವಿಷಯಸ್ಥಿತಿಯಲ್ಲುತ್ತ' ಎಂದು ಹೇಳುವ ಬದಲು 'ನಿಷ್ಕೇವಳಮಾದ ರೂಢಿವಶದಿಂ' ಬಂದವು ಎನ್ನಬಹುದು. ಇಂಥ ನವಕಲು ಸಾಮಗ್ರಿಯನ್ನು ಬಳಸಿಕೊಂಡ 'ಸತ್ಕವಿಪರಂಪರೆ'ಗೂ ಅವುಗಳನ್ನು ಸಂಭಾವಿಸಿದ 'ಶಿಷ್ಟ'ರಿಗೂ ಏನುಹೇಳಬೇಕೋ ತೋರದು.

೬

ಲೋಕದಲ್ಲಿ ಇರತಕ್ಕದ್ದನ್ನು ಕವಿಕಲ್ಪನೆ ಕೊಂಚಮಟ್ಟಿಗೆ ಸ್ಥಿತ್ಯಂತರಗೊಳಿಸವುದರ ಮೂಲಕವೋ, ವಿಪರ್ಯಾಸಗೊಳಿಸುವುದರ ಮೂಲಕವೋ ನಿರ್ಮಿತವಾದ 'ಕವಿಸಮಯ'ಗಳಿಗಿಂತ 'ಅಸದಾಖ್ಯಾತಿ' ಎನಿಸಿಕೊಳ್ಳುವ ಅಥವಾ ಲೋಕದಲ್ಲಿ ಇಲ್ಲದ್ದನ್ನು ಇರುವುದೆಂಬಂತೆ ಹೇಳಿದ್ದರ ವರ್ಗಕ್ಕೆ ಸೇರುವ ಕವಿಸಮಯಗಳು ಹೆಚ್ಚು ಕಾಲ್ಪನಿಕವೂ, ಸಾಂಕೇತಿಕವೂ ಆಗಿವೆ ಎಂಬುದು ಗಮನಿಸಬೇಕಾದ ಸಂಗತಿ. ಚಕೋರ, ಚಂದ್ರಕಾಂತ ಇತ್ಯಾದಿಗಳು ಮೊದಲಸಲ ಕಾವ್ಯದಲ್ಲಿ ಅವುಗಳನ್ನು ಸಂಧಿಸುವ ಓದುಗನಿಗೆ ಅಪರಿಚಿತವೂ, ಅರ್ಥವಿವರಣೆಯನ್ನು ನಿರೀಕ್ಷಿಸತಕ್ಕವೂ ಆಗುವಂತೆ, ವಸಂತದಲ್ಲೆ ಕೋಗಿಲೆ ಕೂಗುವುದೆಂಬ ಸಂಗತಿಯಾಗಲಿ, ಸಮುದ್ರದಲ್ಲಿಯೆ ತಿಮಿಂಗಿಲಗಳಿವೆ ಎನ್ನುವ ಸಂಗತಿಯಾಗಲಿ ಅಷ್ಟರಮಟ್ಟಿನ ವಿವರಣೆಯನ್ನು ನಿರೀಕ್ಷಿಸುವುದಿಲ್ಲ. ಆದಕಾರಣ ಕವಿಸಮಯಗಳಲ್ಲಿ 'ಅಸದಾಖ್ಯಾತಿ' ಎನ್ನಿಸಿಕೊಳ್ಳತಕ್ಕವೆ ಮೊದಲು ಒಂದುಸಲ ಅವುಗಳ ಪರಂಪರಾಗತವಾದ ಅರ್ಥಕೋಶದ ಪರಿಚಯವಾಗುವ ತನಕ ಓದುಗನಿಗೆ ಅಪರಿಚಿತವಾದಂತೆ ತೋರಬಹುದು. ಒಮ್ಮೆ ಅವು ಪರಿಚಿತವಾಗಿ ತಮ್ಮ ಇರವಿಕೆಯ ಅರ್ಥವನ್ನು ಸ್ಪಷ್ಟಪಡಿಸಿದ ಮೇಲೆ, ಪರಂಪರಾಗತವಾದ ಈ ಸಾಮಗ್ರಿಗಳನ್ನು ಕವಿಗಳು ಎಷ್ಟರಮಟ್ಟಿಗೆ ತಮ್ಮ ಕಾವ್ಯಗಳಲ್ಲಿ ಬಳಸಿಕೊಂಡಿದ್ದಾರೆ ಎನ್ನುವುದರ ಕಡೆಗೆ ಸೂಕ್ಷ್ಮಜ್ಞನಾದ ಓದುಗನ ಗಮನ ಹರಿಯುತ್ತದೆ.

"ಕವಿಸಮಯವು ತಿಳಿಯದಿದ್ದರೆ ಅದನ್ನು ಅನುಸರಿಸಿ ರಚಿತವಾದ ಕಾವ್ಯಗಳು ಮನಸ್ಸಿಗೆ ಹಿಡಿಯುವುದಿಲ್ಲ, ಅರ್ಥವೇ ಆಗುವುದಿಲ್ಲ.....ಅನೇಕ ಸಂದರ್ಭಗಳಲ್ಲಿ ರಸಚರ್ವಣಕ್ಕೆ ಕವಿಸಮಯ ಜ್ಞಾನವು ಪ್ರತಿಬಂಧಕವೇ ಆಗುತ್ತದೆ"[12]—ಎನ್ನುವ ಒಂದು ಆಕ್ಷೇಪಣೆಯುಂಟು. ಈ ಆಕ್ಷೇಪಣೆ ಸತ್ಯದೂರವಾದುದೇನೂ ಅಲ್ಲ. ಆದರೆ ಯಾವ ಸಹೃದಯನಲ್ಲಿ ವಿಶೇಷವಾದ ಕಾವ್ಯಸಂಸ್ಕಾರದಿಂದ ಕವಿಸಮಯದ ಸಾಮಗ್ರಿಗಳೂ, ಹೆಜ್ಜೆಹೆಜ್ಜೆಗೆ ಅರ್ಥವಿವರಣೆಯನ್ನು ನಿರೀಕ್ಷಿಸಿದಂತಹ ವಿಭಾಗಗಳೆ ಆಗಿ ಪರಿಣಮಿಸಿವೆಯೋ, ಅಂಥ ಸಹೃದಯನ ಪಾಲಿಗೆ ಇವುಗಳು ಅಡ್ಡಿಯಾಗುವುದಾದರೂ ಹೇಗೆ? ಸಂಸ್ಕೃತ ಕಾವ್ಯಗಳಿಂದ ಹಿಡಿದು ಸಮಸ್ತ ಭಾರತೀಯ ಭಾಷಾಸಾಹಿತ್ಯದಲ್ಲಿ ಕವಿಗಳು ಪರಂಪರಾಗತವಾಗಿ ಚಕೋರ, ಚಂದ್ರಕಾಂತ ಇತ್ಯಾದಿಗಳಿಗೆ

[12] ಕನ್ನಡ ಕೈಪಿಡಿ, ಸಂಪುಟ ೧, ಪು. 242

ಒಂದು ನಿರ್ದಿಷ್ಟವಾದ ಅರ್ಥವಲಯವನ್ನಾಗಲೇ ಕಲ್ಪಿಸಿಯೇ ಇರುವಾಗ ನುರಿತ ಸಹೃದಯನ ಪಾಲಿಗೆ ಕಾವ್ಯಾಸ್ವಾದನ ಸಮಯದಲ್ಲಿ ಇವು ಆತಂಕಕಾರಿಗಳಾಗಲಾರವು. ಹಾಗೆ ನೋಡಿದರೆ ಒಂದುಸಲ ಹೃದಯಸಂವಾದವನ್ನು ಪಡೆಯುವತನಕ ನಮ್ಮ ಕಾವ್ಯಗಳಲ್ಲಿ ಬರುವ ಪೌರಾಣಿಕ ಪ್ರತಿಮೆಗಳೂ, ಪ್ರಸಂಗಗಳೂ ಒಂದು ರೀತಿಯಲ್ಲಿ ಇಂತಹ ಸ್ಥಿತಿಗೆ ಪಕ್ಕಾಗಬೇಕಾಗುತ್ತದೆ. 'ಕೂರ್ಮನ ಬೆನ್ನು ಕುಸಿದುದು' 'ಪ್ರಳಯ ಘನಘಟೆ' 'ಅಷ್ಟದಿಗ್ಗಜ' 'ತಿಣುಕಿದನು ಫಣಿರಾಯ' ಇವುಗಳಿಗೂ 'ಚಕೋರ ಕಾತರಿಸಿತು' 'ಚಂದ್ರಕಾಂತ ಒಸರಿತು' 'ಚಾತಕ ಬಾಯಾರಿತು'—ಇವುಗಳಿಗೂ ಏನು ವ್ಯತ್ಯಾಸ? ಒಂದು ಪುರಾಣಪ್ರಪಂಚನಿಷ್ಠವಾದ ದೈತ್ಯಸೃಷ್ಟಿಗಳು, ಮತ್ತೊಂದು ಕೇವಲ ಕವಿಕಲ್ಪಿತವಾದ ರಮ್ಯಸಂಗತಿಗಳು. ಒಂದಕ್ಕೆ ಶಾಸ್ತ್ರ ಅಥವಾ ಪುರಾಣಗಳ ಆಧಾರವಿದೆ; ಮತ್ತೊಂದಕ್ಕೆ ಅದೂ ಇಲ್ಲ. ಆದರೆ 'ಕೂರ್ಮ' 'ದಿಗ್ಗಜ' 'ಪ್ರಳಯ ಘನಘಟೆ' ಎನ್ನುವಂಥ ಪುರಾಣನಿಷ್ಠ ಸಂಗತಿಗಳು ಜನಮನದಲ್ಲಿ ಯಾವ ಭಾವಕೋಶವನ್ನು ನಿರ್ಮಿಸಿವೆಯೋ ಅಂಥದನ್ನು 'ಚಕೋರ' 'ಚಾತಕಾ'ದಿಗಳು ನಿರ್ಮಿಸಿಲ್ಲದೆ ಇರಬಹುದು. 'ನಿರ್ಮಿಸಿಲ್ಲದೆ ಇರಬಹುದು' ಎನ್ನುವ ಮಾತೂ ಸಂಪೂರ್ಣ ಸತ್ಯವಲ್ಲ. ಚಾತಕ ಚಕೋರಗಳು ತಕ್ಕಮಟ್ಟಿಗೆ ಸಹೃದಯರ ಮನಸ್ಸಿನಲ್ಲಿ ಒಂದು ಬಗೆಯ ಅರ್ಥಕೋಶವನ್ನು ನಿರ್ಮಿಸಿಕೊಂಡು, ಮತ್ತು ದಿವ್ಯಾಭೀಪ್ಸೆಯ ಸಂಕೇತಗಳೂ ಆಗಿ ಪ್ರಚಲಿತವಾಗಿಲ್ಲದೆ ಇಲ್ಲ ಎಂದು ಧೈರ್ಯವಾಗಿ ಹೇಳಲಾಗುವುದಿಲ್ಲ. ಆದಕಾರಣ ರಸಾನುಭವಕ್ಕೆ ಇವು ಆತಂಕಕಾರಿ ಎನ್ನುವುದು ಸಂಪೂರ್ಣ ಸರಿಯಲ್ಲ. ಏಕೆಂದರೆ ಸಮರ್ಥನಾದ ಕವಿ ಕವಿಸಮಯದ ಸಾಮಗ್ರಿಯಿಂದಲೂ ರಸವ್ಯಂಜನೆ ಮಾಡಬಲ್ಲ. ಉತ್ತಮ ಕವಿಪ್ರತಿಭೆಗೆ ಯಾವುದುತಾನೆ ಅಸಾಧ್ಯ?

**ಜಿ. ಎಸ್. ಶಿವರುದ್ರಪ್ಪ.**

# ಸೌಂದರ್ಯಮೀಮಾಂಸೆ

ಯಾವ ವಿಷಯವನ್ನು ವಿಚಾರಿಸಲು ಎತ್ತಿಕೊಂಡರೂ ಅದು ವಿಚಾರವಮಾಡುತ್ತಿದ್ದ ಕಾಲಕ್ಕಿಂತ ಹಿಂದಿನ ಕಾಲಕ್ಕೆ ಸೇರಿದ್ದಾಗಿರುತ್ತದೆ. ಬಹಳ ಕಡಿಮೆ ಹಿಂದಿನದೆಂದರೆ ಒಂದು ಕ್ಷಣವಾದರೂ ಹಿಂದಿನದು. 'ಇದು ಸುಂದರ ಅಥವಾ ರಸವತ್' ಎಂಬ ತಿಳಿವಳಿಕೆಯು ಅಂಥ ಅನುಭವವಾದ ಉತ್ತರಕ್ಷಣದ್ದು. ಈಗ ತನಗಾದ ಅನುಭವ ಸುಂದರವಾದದ್ದು ಎಂದೆನಿಸುವುದು ಆಮೇಲೆ. ಅಂಥ ಅನುಭವಕ್ಕೆ ಪ್ರೇರಕವಾದ ವ್ಯಕ್ತಿ—ವಸ್ತು—ಕಲ್ಪನೆಯನ್ನು ಸುಂದರವೆಂದು ತಿಳಿಯಲಾಗುತ್ತದೆ.

ಲೌಕಿಕ ಲಾಭಾಲಾಭ, ಜಯಾಪಜಯ, ಸುಖದುಃಖಗಳ ಸ್ಪರ್ಶವಿಲ್ಲದ ಮತ್ತು ಸತ್ಯಾಸತ್ಯ, ಒಳಿತು ಕೆಡುಕು, ವ್ಯರ್ಥ-ಸಾರ್ಥಕ ಎಂಬೀ ಆಲೋಚನೆಗಳಿಗೆ ಸ್ಥಳಕೊಡದ, ಅದಕ್ಕದೇ ಪ್ರಯೋಜನವೆನಿಸುವ ವಿಶಿಷ್ಟಾನುಭವವನ್ನು ರಸಾಸ್ವಾದ ಎನ್ನಲಾಗುತ್ತದೆ. ರಸಿಕನಿಗೂ ರಸ್ಯಮಾನ ಪದಾರ್ಥಕ್ಕೂ ಇರುವ ಸಂಬಂಧವು ಪ್ರೇರಣಾಸ್ವರೂಪದ್ದು. ಈ ಪ್ರೇರಣೆಯನ್ನು ಭರತನು ನಿಷ್ಪತ್ತಿಯೆಂದರೆ ಇತರರು ಉತ್ಪತ್ತಿ, ಅನುಮಿತಿ, ಭೋಗ, ಅಭಿವ್ಯಕ್ತಿ ಎಂದು ಮುಂತಾಗಿ ವ್ಯಾಖ್ಯಾನಿಸಿದರು. ರಸಿಕನ ಮನಸ್ಸು ಪ್ರೇರ್ಯ, ರಸವು ಪ್ರೇರಿತ ಮನಃಸ್ಥಿತಿ, ರಸವಸ್ತುವು ಪ್ರೇರಕ.

ವಿಲಿಯಂ ಮೆಕ್‌ಡೂಗಲ್ಲನೆನ್ನುತ್ತಾನೆ: "ಸುಂದರವಾದ ಬಣ್ಣ, ಸ್ವರ ಅಥವಾ ರುಚಿ ಎಂಬ ಯಾವ ಒಂದೂ ಶುದ್ಧವೂ ಸರಳವೂ ಆದ ಸ್ವರೂಪದಲ್ಲಿ ದೊರಕಲಾರದು. ಅವ್ಯಗ್ರವೂ ಪರಿಪೂರ್ಣವೂ ಆದ Perceiving (ಪ್ರತ್ಯಕ್ಷಾನುಭವವು) ಯಾವಾಗಲೂ Pleasant (ಆಹ್ಲಾದಕರ); ಆದರೆ ಅಂಥ ಯಾವುದಾದರೊಂದು ಸರಳವಾದ ಅನಿಸುವಿಕೆ (Impression) ಅದರ Setting (ಪರಿಸರ), ಆವರಣ ಅಥವಾ ಸನ್ನಿವೇಶವನ್ನವಲಂಬಿಸಿಯೇ ಸುಂದರವಾಗಿ ತೋರುತ್ತದೆ: ಅದಕ್ಕೂ ಅದಕ್ಕೆ ಅರ್ಥ ಕೊಡುವ, ಪ್ರಾಮುಖ್ಯವೀಯುವ, ನಮ್ಮಲ್ಲಿ ಆಸಕ್ತಿಯನ್ನು ಹುಟ್ಟಿಸುವ ಶಕ್ತಿಯನ್ನು ಕೊಡುವ, ನಮ್ಮಲ್ಲಿ ಚಟುವಟಿಕೆಯನ್ನುಂಟುಮಾಡುವ ಮತ್ತು ಪೂರ್ಣಭಾವ ಗ್ರಹಣಕ್ಕಾಗಿ ಹೆಣಗುವಂತೆ ಮಾಡುವ ಬಲವನ್ನೀಯುವ ಇತರ ಪದಾರ್ಥಗಳಿಗೂ ನಡುವೆ ಇರುವ ಸಂಬಂಧಗಳೇ ಅಂಥ ಅನಿಸುವಿಕೆಯ ಸುಂದರತೆಗೆ ಆಧಾರ."

ಮೇಲಿನ ಮಾತು ಆವರಣದ ಉದ್ದೀಪನಕಾರ್ಯದ ಅನಿವಾರ್ಯತೆ ಸೌಂದರ್ಯಾನುಭೂತಿಯಲ್ಲಿ ಎಷ್ಟಿದೆ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಪ್ರೇರ್ಯ ಅಥವಾ ಪ್ರೇಕ್ಷಕನು ಯಾವುದಾದರೊಂದನ್ನು ರಸಪ್ರೇರಕವೆಂದು ಆಯ್ದುಕೊಳ್ಳಲು ಅಥವಾ ವರಣಮಾಡಲು ಆವರಣ (ಇಲ್ಲವೆ ಸಂಬಂಧವಿಶೇಷ) ಅಪರಿಹಾರ್ಯವೆಂದಾದ ಮೇಲೆ ಸುಂದರವೆಂಬ ಗುಣವು ಸ್ವತಂತ್ರವಾಗಿ ಪ್ರೇರಕ ಪದಾರ್ಥದಲ್ಲಿ ಇರುವಂಥದಲ್ಲ ಎಂದ ಹಾಗಾಯಿತು. ಇದು ನೀತ್ಯತೀತತೆಯಂತೆಯೇ (Amoralism) ಸುಂದರಾಸುಂದರ ಭಾವಗಳಿಗೆ ಪದಾರ್ಥವು ಮೂಲತಃ ಅತೀತ ಎಂಬುದಕ್ಕೆ ಎಡೆಕೊಡುತ್ತದೆ. ಮನಃಸ್ಥಿತಿಯ ಸ್ವರೂಪದಲ್ಲಿ ಸಹ ವಿಸಂಬದ್ಧವಾದಾಗ (ಅನಾವೃತವಾದಾಗ) ಸೌಂದರ್ಯಗುಣವು ಕಾಣಿಸದಿರಬಹುದು. ಸಂಬಂಧರಹಿತವಾದ ಪ್ರಜ್ಞಾವಸ್ಥೆಯು ಅಸಂಭವವೆಂಬಷ್ಟು ಅಪೂರ್ವವಾಗಿರುವುದರಿಂದ ಒಳಿತು-ಕೆಡಕುಗಳೆಂಬ ದ್ವಂದ್ವದಂತೆಯೇ ಸುಂದರ-ಅಸುಂದರ ಎಂಬ ದ್ವಂದ್ವವೂ ಸಾಮಾನ್ಯ ಮಾನವರ ಅನುಭವಕ್ಕೆ ಬಾರದೆ ಉಳಿಯುವುದಿಲ್ಲ.

ಯಾವುದಾದರೂ ಒಂದು ಒಬ್ಬನಿಗೆ ರಸವಸ್ತುವೆಂದು ತೋರಿದಾಗ ಅದು ಪ್ರೇಕ್ಷಕನಲ್ಲಿ Submission (ಪರವಶತೆ)ಯನ್ನೂ Wonder (ಅದ್ಭುತ)ವನ್ನೂ ಚೋದಿಸುತ್ತದೆ ಎಂದೂ ಮೆಕ್

ಡೂಗಲ್ ಹೇಳಿದ್ದಾನೆ. ರಸವಿವೇಚನೆಯಲ್ಲಿ '**ಮನೋಹರ**' ಮತ್ತು '**ಚಮತ್ಕಾರ**' ಎಂಬೆರಡು ಪದಗಳು ಬಳಕೆಗೆ ಬರಲು ಮೇಲಿನ ಮಾತು ಆಧಾರವಾಗಿದೆ. ಜೊತೆಗೆ, ಪದಾರ್ಥದ ಹೊಸತನವಳಿದು ಸುಪರಿಚಿತತೆ ಬೆಳೆದ ಹಾಗೆ ಅದರ ಮನೋಹಾರಿತ್ವವು ಕಡಿಮೆಯಾಗುತ್ತ ಹೋಗುತ್ತದೆ ಎಂದೂ ಮಾನಸಶಾಸ್ತ್ರವು ಹೇಳುತ್ತದೆ. ಅಂದರೆ ಪ್ರೇರ್ಯ ಪ್ರೇರಕಗಳ ಸಂಬಂಧವು ಬದಲಾದಂತೆ ಪ್ರೇರಕದ ಪ್ರೇರಣಾಶಕ್ತಿಯೂ ಬದಲಾಗುತ್ತ ಹೋಗುತ್ತದೆ. ಈ ಮಾತು ಸರಳ ಸುಂದರ ವಸ್ತುಗಳಿಗಷ್ಟೇ ಅನ್ವಯಿಸುತ್ತದೆ. ಆದರೆ ಒಂದು ಭೂಪ್ರದೇಶದ ಚೆಂದವು ಜಟಿಲವಾದದ್ದು, ಹೆಚ್ಚು ಭಾವನೋದ್ದೀಪಕವಾದದ್ದು. ಅದರಿಂದಾಗುವ ಸೌಂದರ್ಯ ಪ್ರತೀತಿಯು ಅದರ ಬಗ್ಗೆ ಪ್ರೇಕ್ಷಕನಿರುವ Sentiment (ಲೌಕಿಕ ರಸ) ಮತ್ತು Associations (ಅರ್ಥಸಂಬಂಧ) ಗಳನ್ನು ಹೆಚ್ಚಾಗಿ ಅವಲಂಬಿಸಿರುತ್ತದೆ. ಶೃಂಗಾರದಲ್ಲಿಯ ಸ್ತ್ರೀ ಪುರುಷ ಪಾತ್ರಗಳ ಪರಸ್ಪರ ಸೌಂದರ್ಯಾವಲೋಕನವು ಉಕ್ತ ಅವಲಂಬನಗಳ ಮಹತ್ವವನ್ನು ಚೆನ್ನಾಗಿ ನಿದರ್ಶಿಸುತ್ತದೆ.

ಸಂಸ್ಕಾರ, ವಾಸನೆ ಅಥವಾ ಸಹೃದಯತೆ ಎಂಬುದಕ್ಕೆ ಲೌಕಿಕರಸ ಮತ್ತು ಅರ್ಥಸಂಬಂಧಗಳೇ ಬಂಡವಾಳ; ಅವೇ ಅದಕ್ಕೆ ಸ್ವರೂಪಾಧಾಯಕ. ಸಂದರ್ಭಾನುಸಾರ ಲೋಕದಲ್ಲೂ ಸಾಹಿತ್ಯದಲ್ಲೂ ಗುಣವು ದೋಷವಾಗಿಯೂ ದೋಷವು ಗುಣವಾಗಿಯೂ ಸ್ಥಾನ ಪಡೆಯುವಂತೆ ಮನುಷ್ಯನು ರಸವಸ್ತುವಿಗೆ ಪ್ರೇರ್ಯನಾಗುವುದು ಕೂಡ ಒಮ್ಮೆ ಸಾಮರ್ಥ್ಯವೆನಿಸಿದರೆ ಇನ್ನೊಮ್ಮೆ ದೌರ್ಬಲ್ಯವೆನಿಸಬಹುದು. ಅದರಿಂದಲೇ ಏನೋ ಬಹುಶಃ 'ಕಾವ್ಯಾಲಾಪಾಂಶ್ಚ ವರ್ಜಯೇತ್' ಎಂಬ ಮಾತೊಮ್ಮೆ ಹೊರಟಿರಬಹುದು. ಎಲ್ಲ ಸಂದರ್ಭಗಳಲ್ಲೂ ಎಲ್ಲರಿಗೂ ಅನುಕೂಲ ಸಂವೇದನೆಯನ್ನುಂಟುಮಾಡುವ ಲೌಕಿಕ ಪದಾರ್ಥವು ಯಾವುದಿದೆ? ಈ ದೃಷ್ಟಿಯಿಂದಲೇ—

"ಶ್ವಾನಃ ಪುಚ್ಛಾಂಚಲಕುಟಿಲತಾಂ ಸೂಕರಾಃ ಕುಕ್ಷಿಪೋಷಂ
ಕೀಶಾ ದಂತಪ್ರಕಟನವಿಧಿಂ ಗರ್ದಭಾ ರೂಕ್ಷಘೋಷಂ |
ಮರ್ತ್ಯಾ ವಕ್ಷಃ ಶ್ವಯಥುಮಥ ಚ ಸ್ತ್ರೀಷು ದೃಷ್ಟ್ವಾ ರಮಂತೇ
ತತ್ಸೌಂದರ್ಯಂ ಕಿಮಿತಿ ಫಲಿತಂ ತತ್ತದಜ್ಞಾನತೋಽನ್ಯತ್ ||"

ಎಂಬ ಉದ್ಗಾರವು ಹೊರಟಿರಬಹುದಾಗಿದೆ. ಜೊತೆಗೆ, ರಸಾಸ್ವಾದಕ್ಕೆ ಅನಿವಾರ್ಯವಾದಷ್ಟೇ ಪರಿಸರಜ್ಞಾನದಿಂದ ರಸಗ್ರಹಣಕ್ಕೆ ಸಿದ್ಧವಾಗುವ ಮನಸ್ಸೂ ದುರ್ಲಭ, ಅತಿ ವಿರಳ. ಶ್ರೀ ವಿ. ಕೃ. ಗೋಕಾಕರೆಂದಿರುವಂತೆ ನಿಜ ಕಲೆಗಾರನಷ್ಟೇ ನಿಜ ರಸಿಕನೂ ವಿರಳ, ಅಪೂರ್ವ. ಇತರ ಸಂಬಂಧರಹಿತವಾದ ಶುದ್ಧ ರಸದೃಷ್ಟಿಯು ವಿರಳವೆಂಬುದಕ್ಕೆ ರಸಾಸ್ವಾದವು "ಬ್ರಹ್ಮಾಸ್ವಾದ ಸಹೋದರ" ಎಂದಿರುವುದೂ ಪ್ರಮಾಣ. ಜಗತ್ತಿನಲ್ಲಿ ಬಾಯಲ್ಲಿ ಯಾರು ಏನೇ ಹೇಳಲಿ— ವಾಸ್ತವಿಕವಾಗಿ ಬಹುಜನರಲ್ಲಿ ಪ್ರಧಾನವಾಗಿರುವುದು ರಸೇತರವಾದ ಪ್ರಯೋಜನ ದೃಷ್ಟಿಯೇ. 'ಪ್ರಯೋಜನಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ' ಎಂಬುದು ವಸ್ತುಸತ್ಯ. ಆಯಾ ವ್ಯಕ್ತಿಯು ಪ್ರಯೋಜನವೆಂದು ಗ್ರಹಿಸಿರುವ ಕಲ್ಪನೆ ಭಿನ್ನಭಿನ್ನ ಸಂದರ್ಭಗಳಲ್ಲಿ ಭಿನ್ನಭಿನ್ನವಾಗಿರಬಹುದು. ಅರವಿಂದಮತಾನುಸಾರ ರಸಾನುಭವವು ಕೇವಲ ಲೋಕೋತ್ತರವಲ್ಲ— ಲೋಕಾತೀತ ಎನ್ನಿಸಿರುವುದಾದರೂ ಲೋಕಪ್ರಜ್ಞೆಯ ಪ್ರಯೋಜನ ಪ್ರಾಧಾನ್ಯವನ್ನು ಬೊಟ್ಟು ಮಾಡಿ ತೋರಿಸುತ್ತದೆ. ಧರ್ಮಪ್ರಪಂಚದಲ್ಲಿ ತಿಳಿದೋ ತಿಳಿಯದೆಯೋ ಕಪಟಸಂನ್ಯಾಸಿಗಳು ಬಹುಸಂಖ್ಯರು ಉತ್ಪನ್ನವಾದಂತೆ ರಸಿಕಪ್ರಪಂಚದಲ್ಲೂ ಖೋಟಾನಾಣ್ಯಗಳು ಬೇಕಾದಷ್ಟಿವೆ. ರಸದೃಷ್ಟಿಯದು "ಈಕ್ಷಣಮಾತ್ರ ಜಗತ್"—ಅವಲೋಕನದಲ್ಲೇ ಪ್ರಯೋಜನದ ಅವಸಾನ, ಪೂರ್ಣತೆ. ಅದು ಲೋಕದ ಖರ್ಚಿಗೆ ಸಾಕಾಗುವುದಿಲ್ಲ. ಅದರಿಂದ ಬಲ್ಲವರು ಸಹ ಪಾಯಸ— ಕಜ್ಜಾಯಗಳನ್ನು ಹಬ್ಬ ಹುಣ್ಣಿವೆಗಳಿಗಷ್ಟೇ ಮೀಸಲಿಟ್ಟಂತೆ ರಸಪ್ರೇರ್ಯತೆಯನ್ನೂ ವಿಶಿಷ್ಟ, ವಿರಳ ಸಂದರ್ಭಗಳಿಗಷ್ಟೇ ಪರಿಮಿತಗೊಳಿಸಿಕೊಂಡಿರುತ್ತಾರೆ. ರಸಸಮಾಧಿಯಲ್ಲಿ ಮೈಮರೆತು ಅಲಸಿಗತನ ಹಿಡಿದರೆ ಲೋಕಯಾತ್ರೆ ನಡೆಯದು. ಆದುದರಿಂದಲೇ ಸೌಂದರ್ಯಕ್ಕೂ Luxury

(ಐಷಾರಾಮವಿಲಾಸ)ಕ್ಕೂ ಲೋಕದಲ್ಲಿ ಅತಿ ನಿಕಟಸಂಬಂಧವುಂಟಾದದ್ದು; Leisure and art (ವಿರಾಮಕ್ಕೂ ಕಲೆಗೂ) ಅನಿವಾರ್ಯ ಸಂಬಂಧವುಂಟಾದದ್ದು!

ಕಲೆಗಾಗಿ ಕಲೆ ಎಂಬ ಶುದ್ಧ ರಸದೃಷ್ಟಿಗೆ ಬರಬಹುದಾದ ಉಕ್ತ ಅಪವಾದವನ್ನು ತಪ್ಪಿಸ ಲೋಸುಗವೇ—

"ಧರ್ಮಾರ್ಥಕಾಮಮೋಕ್ಷಾಣಾಂ ವೈಚಕ್ಷಣ್ಯಂ ಕಲಾಸು ಚ |
ಕರೋತಿ ಕೀರ್ತಿಂ ಪ್ರೀತಿಂ ಚ ಸಾಧುಕಾವ್ಯನಿಷೇವಣಂ ||"

ಎಂದು ಭಾಮಹಾದಿಗಳು ಉದ್ಗರಿಸಿದ್ದು. ಅಥವಾ—

"ಕಾವ್ಯಂ ಯಶಸೇsರ್ಥಕೃತೇ ವ್ಯವಹಾರವಿದೇ ಶಿವೇತರಕ್ಷತಯೇ |
ಸದ್ಯಃಪರನಿರ್ವೃತಯೇ ಕಾಂತಾಸಂಮಿತತಯೋಪದೇಶಯುಜೇ" ||

ಎಂದು ಮುಮ್ಮಟನು ಸಾರಿದ್ದು.

ರಸವಸ್ತುವು ರಸಿಕನಲ್ಲಿ ಉಂಟುಮಾಡುವ ಮನಃಸ್ಥಿತಿಯನ್ನು The emotional quality seems to be, or to result from, a blending of wonder and the submissive emotion—ಅದ್ಭುತ ಅಥವಾ ಚಮತ್ಕಾರ ಮತ್ತು ರಸಿಕನ ಪರವಶತಾಭಾವನೆಗಳ ಸಂಮಿಶ್ರಣ ಎಂದು ಮೆಕ್‌ಡೂಗಲ್ಲನು ಹೇಳಿದ ಮಾತು "ರಸೇ ಸಾರಃ ಚಮತ್ಕಾರಃ" ಎಂಬು ದಕ್ಕೆ ಸಮರ್ಥನೆಯಾಗಿದೆ. ಚಮತ್ಕಾರವು ಕ್ಷಣಿಕ, ಚಂಚಲ, ಪ್ರಭಾತರಲವಾದ ಜ್ಯೋತಿ ಯಂಥದು. ಅದಕ್ಕೆ ಮಾರುವೋಗುವ ಮನವು ತಲ್ಲೀನ, ಅಸ್ವಾಧೀನ—ತಾತ್ಕಾಲಿಕವಾಗಿ ಪ್ರಭಾವ್ಯ. ಮನಸ್ಸಿನ ಪ್ರೇರ್ಯತೆ ಅಥವಾ ಪ್ರಭಾವ್ಯತೆಯು ಒಂದು ಬಗೆಯಿಂದ ದೌರ್ಬಲ್ಯ, ಅಜ್ಞಾನ ಎನ್ನಿಸೀತು. ಅನಿರೀಕ್ಷಿತತೆಯು ಆಶ್ಚರ್ಯಭಾವದ ಉದಯಕ್ಕೆ ಕಾರಣ; ಅನಿರೀಕ್ಷಿ ತತೆಗೆ ತಾತ್ಕಾಲಿಕ ಅಜ್ಞಾನವು ಆಧಾರ. ಆದುದರಿಂದ ಸೌಂದರ್ಯಭಾವ ಅಥವಾ ಗುಣವು ಚಂಚಲ, ವ್ಯಭಿಚಾರಿ. ವಿವಿಧ ರಸಪ್ರಜ್ಞೆಗದು ಬೀಜವಾದರೂ ಅದೇ ಒಂದು ಸ್ಥಾಯಿಭಾವವಲ್ಲ. ಸೌಂದರ್ಯ ಪ್ರೇರ್ಯತೆಯನ್ನು ಭಾವಿಕತೆ ಅಥವಾ ಮುಗ್ಧತೆ ಎನ್ನುವುದಾದರೂ ಉಕ್ತಕಾರಣ ದಿಂದಲೇ. ಸರ್ವಜ್ಞತೆ ಮನುಷ್ಯರಲ್ಲಿ ಇಲ್ಲದವರೆಗೆ ಒಂದಲ್ಲ ಒಂದು ಸನ್ನಿವೇಶದಲ್ಲಿ ಅವರ ಮನ ಮುಗ್ಧವಾಗುತ್ತದೆ. ರಸಿಕರು ಮುಗ್ಧರು (ಕೆಲವಿಷಯಗಳಲ್ಲಿ ಕೆಲಸಂದರ್ಭಗಳಲ್ಲಿ ಮೂಢರು) ಅಥವಾ ಸುಕುಮಾರಮತಿಗಳು, ಸುಲಭವಶ್ಯರು. ವಶ್ಯತೆಯ ಉಪಾಧಿಗಳು ಬೇರೆ ಬೇರೆ ವ್ಯಕ್ತಿ ಗಳಿಗೆ ಬೇರೆ ಬೇರಾಗಿರಬಹುದು. ವಿವಿಧ ವಸ್ತು-ವ್ಯಕ್ತಿ-ಕಲ್ಪನೆಗಳ ಅಂಗಸಂಯೋಗ ಔಚಿತ್ಯ ಅಥವಾ ಸಮನ್ವಿತತೆಯು ಸೌಂದರ್ಯಪ್ರತೀತಿಯನ್ನು ಉಂಟುಮಾಡುತ್ತದೆ. "Rasa is bodied forth when there is a harmonious co-ordination of all the parts, the subordination of the parts to the whole, of particular beauties and even of outstanding characterisation to the basic attitude of the artist" ಎಂದು ಶ್ರೀ ವಿ.ಕೃ.ಗೋಕಾಕರು ಹೇಳಿದ್ದು ಮೇಲಿನ ಅರ್ಥದ ರಸಕ್ಕೆ ಸಮರ್ಥನೆಯಾಗುತ್ತದೆ. ಕಣ್ಣಿನ ಅಥವಾ ಇಂದ್ರಿಯಗಳ ತುತ್ತಾಗುವ ಸೌಂದರ್ಯ ಇಂತಿದೆ ಎಂದುಕೊಳ್ಳಬಹುದು; ಇದಕ್ಕೆ ಬಾಲಿಕೆಯಾದ ಪಾರ್ವತಿ ಯನ್ನು ಕಾಳಿದಾಸನು ಕುಮಾರಸಂಭವದಲ್ಲಿ ವರ್ಣಿಸಿದ್ದನ್ನು ಉದಾಹರಣೆಯನ್ನಾಗಿ ತೆಗೆದು ಕೊಳ್ಳಬಹುದು. "The object is pleasing to us in so far as it presents a system of relations that evoke in us a smoothly flowing stream of perceptive activity adequate to the object" ಎಂಬ ಮೆಕ್‌ಡೂಗಲ್ಲನ ವಿವರಣೆ ಇದಕ್ಕೆ ಸಾಕು.

ಆದರೆ ಅಲೌಕಿಕ ಅಥವಾ ಲೋಕಸೀಮಾತಿವರ್ತಿ ಎನಿಸುವ Supra-rational Beauty (ವಿಚಾರಾತೀತವಾದ ಸೌಂದರ್ಯ) ಅಥವಾ ರಸ ಇದೆ ಎಂಬುದನ್ನು ಕೆಲವರು ಹೇಳುವುದನ್ನು ಆಗಲೇ ಉಲ್ಲೇಖಿಸಲಾಗಿದೆ. ಇದು ಅರ್ಥ-ಕಾಮಾಸಕ್ತಿರಹಿತವಾದ ಮನಸ್ಕತೆಗೆ ಗಮ್ಯವೆನ್ನ

ಬಹುದು. ಬ್ರಹ್ಮಾಸ್ವಾದ ಸಹೋದರತ್ವವನ್ನು ಇಂಥ ಸಾಕ್ಷಾತ್ಕಾರಕ್ಕಲ್ಲದೆ ಮಿಕ್ಕದ್ದಕ್ಕೆ ಹೇಳುವುದನುಚಿತ. ರಾಜನು ಋಷಿ ಎನ್ನಿಸಿಕೊಳ್ಳುವಂತೆ ಇಂಥ ಪ್ರೇರಕವಸ್ತುವಿನ ನಿರ್ಮಾತನು ಋಷಿಯೆನ್ನಿಸಿಕೊಂಡಾನು. ಈ ಅನುಭವವು ವಿಚಾರಾತೀತ, ಅವಿಶ್ಲೇಷಣೀಯ ಎನ್ನಿಸಿರುವುದ ರಿಂದ "ನೈಷಾ ತರ್ಕೇಣ ಮತಿರಾಪನೇಯಾ" ಎಂಬುದನ್ನಿಲ್ಲಿ ಅನ್ವಯಿಸಬೇಕಾಗುತ್ತದೆ.

"ಯದುಚ್ಯತೇ ಪಾರ್ವತಿ ಪಾಪವೃತ್ತಯೇ
ನ ರೂಪಮಿತ್ಯವ್ಯಭಿಚಾರಿ ತದ್ವಚಃ |
ತಥಾ ಹಿ ತೇ ಶೀಲಮುದಾರದರ್ಶನೇ
ತಪಸ್ವಿನಾಮಪ್ಯುಪದೇಶತಾಂ ಗತಂ ||"

ಎಂದು ಶಿವಧ್ಯಾನಪರಾಯಣೆಯಾದ ತಪಸ್ವಿನಿ ಪಾರ್ವತಿಯನ್ನು ಉಕ್ತಮಹಾಕಾವ್ಯದಲ್ಲಿ (V-36) ಕಾಳಿದಾಸ ಬಣ್ಣಿಸಿರುವುದು ಮೇಲೆ ಹೇಳಿದಂಥ "ರಸೋ ವೈ ಸಃ" ಎಂಬಂತಹ ಸಾಕ್ಷಾತ್ಕಾರಕ್ಕೆ ದಿಕ್ಸೂಚಿ ಎನ್ನಬಹುದು. ಮಾತಿನ ಧ್ವನಿಯುಳ್ಳ ಮೌನ ಅಥವಾ ಅತ್ಯಂತ ಸೂಚ್ಯಭಾಷಣ ಮಾತ್ರ ಅಂಥ ಚಿತ್ರವನ್ನು ಪಾತ್ರರ ಮನದಲ್ಲಿ ಮೂಡಿಸೀತು. ಈ ಕ್ಷೇತ್ರದಲ್ಲಿ Objective proof (ಪರತಃ ಪ್ರಾಮಾಣ್ಯ)ವಿಲ್ಲ. ಬಹುಶಃ ಶಾಂತರಸವು ನಾಟ್ಯದಲ್ಲಿಲ್ಲ ಎಂದು ಭರತ ಹೇಳಿದ್ದು ಇಂಥ "ಗುರೋಸ್ತು ಮೌನಂ ವ್ಯಾಖ್ಯಾನಂ" ಎಂಬ ಪರಿಸ್ಥಿತಿಯನ್ನು ಅನುಲಕ್ಷಿಸಿಯೇ ಇರಬಹುದು! ಅನಿರ್ವಚನೀಯವಾದ ಆ ಅನುಭವ ಅನಭಿನೇಯವಾಗಿರುವುದು ಸಹಜ! ಸಾಮಾನ್ಯ ಶೃಂಗಾರದ ರಸ್ಯಮಾನತೆಯು ಪಾತಾಳವಾದರೆ ಅದು ಆಕಾಶ! ಒಂದು ಕಲೆಯುಬುಡ, ಇನ್ನೊಂದು ತಲೆ!

ಶ್ರೀ ಅರವಿಂದರು ದಿವ್ಯಸೌಂದರ್ಯದ ವಿಷಯವನ್ನೆತ್ತಿ, ಅದು ಆನಂದ ತತ್ವದ Joy, Love, Beauty—ಸಂತೋಷ, ಪ್ರೇಮ, ಸೌಂದರ್ಯ (ರಸ) ಎಂಬ ಮೂರು ಅಂಗಗಳಲ್ಲಿ ಒಂದು ಎಂದಿದ್ದಾರೆ. ಅದೊಂದು ಅಖಂಡರಸವೆಂದೂ ಆ ಅನುಭವದಲ್ಲಿ self-regarding emotions (ಸ್ವಪ್ರಜ್ಞಾಬದ್ಧವಾದ ಭಾವನೆ)ಗಳಿಗಾಗಲಿ, ದುಃಖ-ಕೇಡುಗಳಿಗಾಗಲಿ ಎಡೆಯಿಲ್ಲ ವೆಂದೂ ಅವರು ಉಲ್ಲೇಖಿಸಿದ್ದಾರೆ. ಒಳಿತು-ಕೇಡು, ಸುಂದರ-ಅಸುಂದರ ಮುಂತಾದ ಇಂದ್ರಿ ಯೋತ್ತೇಜಕ ಅಂಶಗಳೊಂದೂ ಅದರಲ್ಲಿಲ್ಲ; ಅಂಥ ದಿವ್ಯರಸಾನುಭೂತಿಯು ಬ್ರಹ್ಮಾಸ್ವಾದಕ್ಕೆ ಕಿಂಚಿದೂನ. ಅದು ಸತ್‌ಹಾಗೂ ಸುಂದರಗಳ ಅಭೇದ ರೂಪ; ಅದೊಂದು ಜೀವನದ ಮೂಲ ಭೂತ ಸತ್ಯ. ಶಂಕರಾಚಾರ್ಯರು ಸ್ತುತಿಸಿದ ತ್ರಿಪುರಸುಂದರಿ ಮತ್ತು ಪಂಡಿತರಾಜ ಜಗನ್ನಾಥ ಬಣ್ಣಿಸಿದ ಗಂಗೆ ಆ ಬಗೆಯ ಅನುಭವಗಳ ಮಾದರಿಗಳೆನ್ನಬಹುದು. ಶ್ರೀ ಕುವೆಂಪುಗಳ ಮಾತಿ ನಲ್ಲದು "ಸಕಲಾರಾಧನ ಸಾಧನ ಬೋಧನದನುಭವ ರಸ!"

ಪಾಶ್ಚಾತ್ಯ ರಸವಿವೇಚನೆಯ ಇತಿಹಾಸವನ್ನು ಬರೆದ ಬೊಸಾಂಕೆಯು ಪುಸ್ತಕದ ಕೊನೆಯಲ್ಲಿ Content and expression (ಭಾವ ಮತ್ತು ಆವಿರ್‌ಭಾವ)ಗಳ ಅಥವಾ ಆ ಎರಡರ ಸ್ವರೂಪಗಳ ಮತ್ತು ಅದರ ರಸ್ಯಮಾನತೆಯ ನಡುವೆ ಇರುವ Psychic connection (ಮಾನಸಿಕ ಸಂಬಂಧವು) ಯಾವ ಬಗೆಯದು? ಎಂಬ ಪ್ರಶ್ನೆಯನ್ನು ಇಟ್ಟಿದ್ದಾನೆ; ಸುಖ ದುಃಖಗಳ ಸಂವೇದನೆಯ ಸಾಮಾನ್ಯ ಸಿದ್ಧಾಂತಕ್ಕೂ ಸೌಂದರ್ಯದ ಮತ್ತು ಕುರೂಪದ ರಸಾತ್ಮಕ ಸಿದ್ಧಾಂತಕ್ಕೂ ಸಂಬಂಧವೇನು? ಎಂದು ಕೇಳಿದ್ದಾನೆ. ಇದಕ್ಕೆ ಉತ್ತರವಾಗಿ, Aesthetic (ರಸಪ್ರಜ್ಞೆ) ಎಂದರೆ ಸೌಂದರ್ಯದ ಮೆಚ್ಚುಗೆಯಲ್ಲಿ ಕಂಡುಬರುವ ಭಾವನಾಂಶ (Feeling) ಮತ್ತು ಭಾವನೆ (Emotion); ನಮ್ಮನ್ನು ಉಳಿದ ಚಟುವಟಿಕೆಗಳತ್ತ ಉನ್ಮುಖ ಗೊಳಿಸದೆ, ರಸವಸ್ತುವಿನ Delighted contemplation (ಸಂತುಷ್ಟ ದರ್ಶನ ಅಥವಾ ಸಮಾಧಿ ಪ್ರಣಿಧಾನ)ದತ್ತ ಉದ್ಬೋಧಿಸುವ ವಸ್ತುಗುಣವೇ ರಸ, ಸೌಂದರ್ಯ ಎಂಬ ಮೆಕ್ ಡೂಗಲ್ಲನ ಮಾತನ್ನು ಉದ್ಧರಿಸಬಹುದು. ಈ ಮಾತು ಲೋಕವೃತ್ತ ಚಿತ್ರದ ಮಾನಸಿಕ

ಪ್ರತಿಮೆಗಳ ಸಮಂಜಸ ಸಂಯೋಗವೇ ಸುಂದರಗುಣವೆಂದೂ ಅದು ರಸಿಕರಲ್ಲಿ ಮೆಚ್ಚಿಗೆಯ ಮೂಲಕವಾಗಿ ಭಾವಸೋದ್ಬೋಧ ಮಾಡಬಲ್ಲುದೆಂದೂ ಪ್ರತಿಪಾದಿಸಬಲ್ಲದು. ರಸವಸ್ತುವು ಉದ್ಬೋಧಿಸುವ ಮೆಚ್ಚಿಗೆಯೆಂದರೆ ಕುತೂಹಲ ಮತ್ತು ಪರವಶತೆಗಳ ಏಕಕಾಲಿಕ ವ್ಯಾಪಾರ. ಪದ—ಅರ್ಥಗಳ ಶರೀರ—ಆತ್ಮಗಳ, ಆವೃತ—ಆವರಣಗಳ ಸಂಬಂಧದ ತಿಳಿವಳಿಕೆಗೆ ಹೇಗೆ ನಿಯಾಮಕ ಉಪಾಧಿಗಳಿವೆಯೋ (Conditions) ಹಾಗೆ ಪ್ರೇರ್ಯ—ಪ್ರೇರಕ ಪದಾರ್ಥಗಳ ಸಂಬಂಧವೂ ವಿವಿಧ ನಿಯಾಮಕಗಳಿಂದ ಪರಿಚ್ಛಿನ್ನ. ನರಗಳು ಮಿದುಳಿಗೆ ಮುಟ್ಟಿಸುವ ಚೋದನೆ (Impulse) ಯಾವ ಸ್ವರೂಪದ್ದೆಂಬುದು ಹೇಗೆ ಅಜ್ಞಾತವಾಗಿದೆಯೋ ಹಾಗೇ ಮನೋವಶೀಕರಣದ ವ್ಯಾಪಾರದ ಸ್ವರೂಪವೂ ಅವಿವೃತವಾಗಿದೆ. ಆದರೆ ಆ ವ್ಯಾಪಾರ ಮಾತ್ರ ಅನುಭವ ಸಿದ್ಧ. ಅದೇ ಮೇರೆಗೆ ಪದಾರ್ಥಗಳೆರಡರ ಪ್ರೇರ್ಯ—ಪ್ರೇರಕ ಸಂಬಂಧದ ಸ್ವರೂಪವೂ ಅವಿದಿತ—ಆದರೆ ಪರಿಣಾಮತಃ ಅನುಭವಸಿದ್ಧ.

ಸ್ಥಾಯಿಗಳ ಪ್ರೇರಣೆಗೆ ಸುಂದರಗುಣವು ನಿಮಿತ್ತಕಾರಣ. ಅದರ ನೈಮಿತ್ತಿಕ ವ್ಯಾಪಾರದ ಸ್ವರೂಪವು ಜ್ಞಾತೃ--ಜ್ಞೇಯಗಳ ನಡುವಿನ ಜ್ಞಾನವ್ಯಾಪಾರದಷ್ಟೇ ಅಸ್ಪಷ್ಟ. ಮಿದುಳಿನಲ್ಲಿಯ ಭಾವನಾಪೀಠಕ್ಕೂ ಇಂದ್ರಿಯ ಪ್ರದೇಶಗಳಿಗೂ ನಡುವಿನ ಸಂಪರ್ಕ ಪ್ರದೇಶದ ಕಾರ್ಯ ವೈಲಕ್ಷಣ್ಯ ಸುಪ್ರಸಿದ್ಧ. ಆದರೆ ನಮಗೊಮ್ಮೆ ಆದುದು ಇಂಥ ಭಾವನೆ ಎಂಬ ಅರಿವಂತೂ ನಮಗೆ ಸ್ಪಷ್ಟವಾಗಿ ಗೊತ್ತಾಗುವುದು ಅನುಭವಸಿದ್ಧ. ಹಾಗೇ ರಸಪ್ರತೀತಿಯ ವಿಲಕ್ಷಣತೆ ಇದೆಯಲ್ಲದೆ ಅದಕ್ಕೂ ಹೆಚ್ಚು ವಿಲಕ್ಷಣವಾಗಿಲ್ಲ.

ಜಗತ್ತಿನಲ್ಲಿ ಏಳು ಅದ್ಭುತ ವಸ್ತುಗಳಿರುವುದು ಅಷ್ಟು ಅದ್ಭುತವಲ್ಲ. ಮಾನವನ ಮಿದುಳಿನ ರಚನೆ ಹಾಗೂ ಕಾರ್ಯಶಕ್ತಿಗಳು ನಿಜವಾಗಿ ಎಲ್ಲಕ್ಕಿಂತಲೂ ಅದ್ಭುತವಾದುದು. ಮಿದುಳಿನ ಶಸ್ತ್ರೀಯ ವಿಶ್ಲೇಷಣೆ—ಸಂಶೋಧನೆಗಳು ಎಷ್ಟು ಮುಂದುವರಿದರೂ ಅಲ್ಲಿ ಅಜ್ಞೇಯಾಂಶವೂ ಉಳಿದೇ ತೀರುತ್ತದೆ. ಏಕೆಂದರೆ ಸ್ಥೂಲಸಾಧನಗಳ ಶಕ್ತಿಯು ಪರಿಮಿತ. ಮನಸ್ಸಿನ ಸೂಕ್ಷ್ಮಕಾರ್ಯ ಜಾಲವನ್ನು ಸೂಕ್ಷ್ಮಜ್ಞ ಮನಸ್ಸೊಂದೇ ತಿಳಿಯಬಲ್ಲುದು. ಅದರಿಂದಲೇ ಅತೀಂದ್ರಿಯ ಪ್ರತಿಭೆಯ ಕಾರ್ಯವೆಂದೂ ಇಂದ್ರಿಯಗ್ರಾಹ್ಯವಾಗದೆ ಉಳಿದಿದೆ. ಕೊನೆಗೂ ಬುದ್ಧನು ಉದ್ಗರಿಸಿದಂತೆ—ಕಾಲಿಗೆ ಚುಚ್ಚಿದ ಮುಳ್ಳನ್ನು ಕಿತ್ತೆಗೆಯುವಷ್ಟೇ ಮಾನವನಿಗಧಿಕಾರವಲ್ಲದೆ, ಆ ಮುಳ್ಳಿನ ಇತಿಹಾಸವನ್ನು ಶೋಧಿಸುವುದರಲ್ಲಿ ಕಾಲಕಳೆವ ಅಪ್ರಯೋಜಕತೆಗೆ ಎಂದಾದರೂ ಜಯ ಲಭಿಸೀತೆ? ರಸಾನುಭೂತಿಯ ಬೌದ್ಧಿಕಶೋಧ ಬಹಳ ಮುಂಬರಿದಂತೆ ಬುದ್ಧೋಕ್ತಿಯ ಸಮಾಧಾನವಷ್ಟರಿಂದಲೇ ಮನುಷ್ಯ ತೃಪ್ತನಾಗಬೇಕಾದೀತು ಎನಿಸುತ್ತದೆ. ರಸಪ್ರಜ್ಞೆಯ ಉತ್ತರೋತ್ತರ ಪ್ರಸ್ತರಗಳತ್ತ ಏರಿ ಅನುಭವಬಲದಿಂದ ಜೀವನವನ್ನು ಉದಾತ್ತೀಕರಿಸಿಕೊಳ್ಳುತ್ತ ಹೋಗುವ ಪ್ರಯತ್ನವೊಂದೇ ಬಹುಶಃ ಮಾನವನ ಕರ್ಮಾಧಿಕಾರಕ್ಕೆ ಒಳಗು!

ಬಿ. ಎಚ್. ಶ್ರೀಧರ

# ತಿರುಮಳಿಶೈಪ್ಪಿರಾನ್ ಮತ್ತು ಅವರ ಪ್ರಬನ್ಧಗಳು

**ಪ್ರಮಾಣಂ ಚ ಪ್ರಮೇಯಂ ಚ ಪ್ರಮಾತಾರಶ್ಚ ಸಾತ್ವಿಕಾಃ |**
**ಜಯನ್ತು ಕ್ಷಪಿತಾರಿಷ್ಟಂ ಸಹ ಸರ್ವತ್ರ ಸರ್ವದಾ ||**

**—ಶ್ರುತಪ್ರಕಾಶಿಕಾಚಾರ್ಯರು.**

ವಿಶ್ವಸಾಹಿತ್ಯದಲ್ಲಿ ತಮಿಳುನಾಡಿನ ಹರಿದಾಸ ಶಿರೋಮಣಿಗಳಾದ ಆಳ್ವಾರುಗಳು ಹಾಡಿರುವ **"ನಾಲಾಯಿರ ದಿವ್ಯಪ್ರಬಂಧಂ"** ಎಂಬ ಶ್ರೀ ಸೂಕ್ತಿಗಳಿಗೆ (ಸಿರಿನುಡಿಗಳಿಗೆ) ಒಂದು ವಿಲಕ್ಷಣ ಸ್ಥಾನವಿದೆ. ಆಳ್ವಾರ್ ಎಂದರೆ ಭಗವದ್ಭಕ್ತಿಯಲ್ಲಿ ಮುಳುಗಿದವರು ಎಂದು ಅರ್ಥ. ಸರ್ವೇಶ್ವರನೂ ಶ್ರಿಯಃಪತಿಯೂ ಸಕಲ ಜಗತ್ಕಾರಣನೂ ಸೌಂದರ್ಯ ಕಾರುಣ್ಯಾಮಾಧುರ್ಯಗಾಂಭೀರ್ಯಾದಿ ಕಲ್ಯಾಣಗುಣಗಣನಿಧಿಯೂ ಮೋಕ್ಷಪ್ರದನೂ ಆದ ಶ್ರೀಮನ್ನಾರಾಯಣನ ನಿರ್ಹೇತುಕ ಕೃಪೆಯಿಂದ ಜ್ಞಾನ ಭಕ್ತಿ ವೈರಾಗ್ಯಗಳನ್ನು ಪಡೆದು ಅವನ ಗುಣಾನುಭವವನ್ನುಮಾಡುತ್ತಾ ತಮ್ಮ ಬಾಳನ್ನು ಅವನ ಸೇವೆಯಲ್ಲಿ ಕಳೆದು ಮುಕ್ತಿಯನ್ನು ಪಡೆದ **"ಪ್ರಪನ್ನ ಜನ ಕೂಟಸ್ಥ"**ರಾದ ಈ ಮಹಾತ್ಮರು ಭಕ್ತಿಯ ಗಂಗೆಯನ್ನು ಜನತೆಯ ಹೃದಯದ ಬಳಿಗೆ ತಮ್ಮ ಸುಂದರವಾದ ದೇಶಭಾಷಾಗೀತೆಗಳ ಮೂಲಕ ತಂದರು. "ಯೋಗಿನಸ್ಸರ್ವಯೋನಿಷು" ಎಂಬ ಪ್ರಮಾಣದಂತೆ ಇವರಲ್ಲಿ ನಾನಾ ಜಾತಿಗಳಲ್ಲಿ ಹುಟ್ಟಿದವರು ಸೇರಿದ್ದಾರೆ. ಇವರ ಕಾಲ—ಸಂಪ್ರದಾಯ ಹೇಳುವಂತೆ—ದ್ವಾಪರಯುಗದ ಕೊನೆ ಮತ್ತು ಕಲಿಯುಗದ ಆದಿ. ಇಂದಿನ ಪಂಡಿತರ ಮತದಂತೆ, ಇವರು ಕ್ರಿ. ಶ. ಐದನೆಯ ಶತಕದಿಂದ ಎಂಟನೆಯ ಶತಮಾನದವರೆಗೆ ಇದ್ದರೆಂದು ತಿಳಿದುಬರುತ್ತದೆ. ಭಾಸ-ಕಾಳಿದಾಸಾದಿ ಕವಿಗಳ, ವ್ಯಾಸ-ವಾಲ್ಮೀಕಿ-ಪರಾಶರಾದಿ ಋಷಿಗಳ, ಯಾಸ್ಕ-ಪಾಣಿನಿ-ಪತಂಜಲ್ಯಾದಿ ನಿರುಕ್ತ ವ್ಯಾಕರಣ ವಿದ್ವಾಂಸರ ಕಾಲಗಳಂತೆ, ಇವರ ಕಾಲ ಇದೇ ಎಂದು ಆಧುನಿಕ ವಿಮರ್ಶಕರಿಗೆ ನಿಷ್ಕೃಷ್ಟವಾಗಿ ಹೇಳಲು ಆಗಿಲ್ಲ. ಅಂತೂ ಇವರೆಲ್ಲರೂ ಶ್ರೀಮನ್ನಾಥಮುನಿ (ಕ್ರಿ. ಶ. 825-918) ಗಳೆಂಬ ಆಚಾರ್ಯರಿಗಿಂತ ಹಿಂದಿನವರು ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ. "ಉಪದೇಶರತ್ನಮಾಲೈ" ಎಂಬ ಗುರುಪರಂಪರಾಸಾರ-ಸಂಗ್ರಹ ರೂಪವಾದ ಪ್ರಬಂಧದಲ್ಲಿ ಶ್ರೀಮದ್ವರವರ ಮುನಿಗಳು ತಿಳಿಸಿರುವಂತೆ ಇವರ ಅವತಾರ ಕ್ರಮ ಹೀಗಿದೆ.—ಪೊಯ್ಹೈಯಾಳ್ವಾರ್, ಪೂದತ್ತಾಳ್ವಾರ್, ಪೇಯಾಳ್ವಾರ್, ತಿರುಮಳಿಶೈಯಾಳ್ವಾರ್, ನಮ್ಮಾಳ್ವಾರ್ (ಶಠಾರಿಮುನಿ), ಕುಲಶೇಖರಾಳ್ವಾರ್, ಭಟ್ಟನಾಥನ್ (ಪೆರಿಯಾಳ್ವಾರ್), ತೊಂಡರಡಿಪ್ಪೊಡಿಯಾಳ್ವಾರ್, ತಿರುಪ್ಪಾಣಾಳ್ವಾರ್, ತಿರುಮಂಗೈಯಾಳ್ವಾರ್. ಈ ಹತ್ತು ಜನರಲ್ಲದೆ ಪೆರಿಯಾಳ್ವಾರ್ ಅವರ ಸಾಕುಮಗಳಾದ ಆಂಡಾಳ್ (ಶ್ರೀ ಗೋದಾದೇವಿ) ಮತ್ತು ನಮ್ಮಾಳ್ವಾರ್‌ರನ್ನು ಆಶ್ರಯಿಸಿ ಉಜ್ಜೀವಿಸಿದ ಮಧುರಕವಿಯಾಳ್ವಾರ್ ಎಂಬವರನ್ನೂ ಸೇರಿಸಿ ಹನ್ನೆರಡು ಜನ ಆಳ್ವಾರ್‌ಗಳು (ಭಕ್ತರು) ಎಂದು ಕರೆಯುವುದುಂಟು. ಈ ಹನ್ನೆರಡು ಜನರು ಹಾಡಿರುವ ಇಪ್ಪತ್ತನಾಲ್ಕು ಪ್ರಬಂಧಗಳಲ್ಲಿ ಅಡಕವಾಗಿರುವ ತಮಿಳು ಪದ್ಯ (ಪಾಶುರ, ಗಾಥಾ) ಗಳ ಸಂಖ್ಯೆ ಸರಿಯಾಗಿ ನಾಲ್ಕು ಸಾವಿರ ಆಗುತ್ತದೆ. ಆದುದರಿಂದ ಈ ದಿವ್ಯ ಸೂಕ್ತಿಗಳಿಗೆ **"ನಾಲಾಯಿರ ದಿವ್ಯಪ್ರಬಂಧಂ"** ಎಂದು ಹೆಸರಾಯಿತು.

"ಪ್ರೇಮಾರ್ದ್ರವಿಹ್ವಲಗಿರಃ ಪುರುಷಾಃ ಪುರಾಣಾಃ ತ್ವಾಂ ತುಷ್ಟುವುಃ ಮಧುರಿಪೋ ಮಧುರೈರ್ವಚೋಭಿಃ" ಎಂದು ಕೂರತ್ತಾಳ್ವಾರ್ ಶ್ರೀ ವೈಕುಂಠಸ್ತವದಲ್ಲಿ ಸಂಸ್ಕೃತದಲ್ಲ ಇತಿಹಾಸ ಪುರಾಣಗಳನ್ನು ರಚಿಸಿದ ವಾಲ್ಮೀಕಿ ವ್ಯಾಸ ಪರಾಶರಾದಿ ಮುನಿಗಳನ್ನೂ ಸಂಸ್ಕೃತ

ವೇದದಲ್ಲಿಯೂ ಇತಿಹಾಸ ಪುರಾಣಾಗಮಗಳಲ್ಲಿಯೂ ಋಷಿಗಳು ಸಾಕ್ಷಾತ್ಕರಿಸಿ ಹಾಡಿರುವ ಗ್ರಂಥಗಳ ಸಾರತಮವಾದ ಅಂಶಗಳನ್ನು ಸಂಗ್ರಹಿಸಿ ಸಂಸ್ಕೃತವನ್ನರಿಯದ ಸ್ತ್ರೀ ಶೂದ್ರರೂ ಮಕ್ಕಳೂ ಕಲಿಯುವಂತೆ ಅವುಗಳನ್ನು ತಮ್ಮ ತಾಯ್‌ನುಡಿಯಲ್ಲಿ ಅಂದವಾದ ಶೈಲಿಯಲ್ಲಿ ಸುಲಲಿತವಾದ ಪದಗಳಿಂದ ತಿಳಿಸಿರುವ ಈ ಆಳ್ವಾರುಗಳನ್ನೂ (ದ್ರಾವಿಡ ಬ್ರಹ್ಮದರ್ಶಿಗಳನ್ನೂ) ಸೂಚಿಸಿದಾರೆ. ಈ ದಿವ್ಯ ಪ್ರಬಂಧಗಳಲ್ಲಿ **ಶರಣಾಗತಿ** (ಪ್ರಪತ್ತಿ, ನ್ಯಾಸ) ಎಂಬ ವೇದ ಪ್ರತಿಪಾದ್ಯವಾದ ಉಪಾಯವೇ ನಿರ್ದುಷ್ಟವೂ ಸಿರಪಾಯವೂ ಸರ್ವಾಧಿಕಾರವೂ ಸರ್ವಾಭೀಷ್ಟದವೂ ಸ್ವರೂಪಾನುರೂಪವೂ ಆಚಾರ್ಯರುಚಿಪರಿಗೃಹೀತವಾದುದೂ ಎಂದು ಆಳ್ವಾರುಗಳು ತೋರಿಸಿದಾರೆ. ಕರ್ಮ ಜ್ಞಾನ ಭಕ್ತಿಗಳು ತ್ರೈವರ್ಣಿಕರಿಗೆ—ಅವರಲ್ಲಿಯೂ ವೇದವನ್ನು ಕಲಿಯಬಲ್ಲವರಿಗೆ—ಮಾತ್ರ ಎಂದು ಶಾಸ್ತ್ರಗಳು ತಿಳಿಸುತ್ತವೆ. ವೇದವನ್ನು ಕಲಿಯಲು ಅವಕಾಶವಿಲ್ಲದ ಸ್ತ್ರೀ ಶೂದ್ರಾದಿಗಳಿಗೂ ಅವರಂತೆ ಮತ್ತೆಲ್ಲರಿಗೂ ಕೂಡ **ಶರಣಾಗತಿ** ಉಚಿತವಾದ ಉಪಾದೇಯವೆಂದು "ಗೀತಾಶಾಸ್ತ್ರ"ದಲ್ಲಿ ಹೇಳಿದೆ. ಅದರಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿದುದನ್ನೇ ಅವನ ಹೃದಯವನ್ನರಿತ, ಸಾಧು ಶಿಖಾಮಣಿಗಳಾದ ಆಳ್ವಾರುಗಳು ಈ ಪ್ರಬಂಧಗಳಲ್ಲಿ ಅನುಷ್ಠಾನ ಮಾಡಿರುವುದು ವ್ಯಕ್ತವಾಗಿದೆ. ಸಕಲರ ಹಿತವನ್ನೂ ಸಾಧಿಸುವ ಭಗವಂತನೇ ಅಭಿನವ ದಶಾವತಾರವನ್ನು ಮಾಡಿದನು; ಅವರೇ ಆಳ್ವಾರುಗಳು ಎಂದು ಶ್ರೀ **ವೇದಾಂತದೇಶಿಕರು** "ರಹಸ್ಯತ್ರಯಸಾರ"ದಲ್ಲಿ ತಿಳಿಸಿದಾರೆ. ಆದರೆ ಸರ್ವತಂತ್ರ ಸ್ವತಂತ್ರನೂ ನಿರಂಕುಶೇಶ್ವರನೂ ಆದ ಭಗವಂತನು ಸ್ವೇಚ್ಛೆಯಿಂದ ಕೆಲವರನ್ನು ಕಟಾಕ್ಷಿಸಿದನು. ಆ ವಿಶೇಷ ಕಟಾಕ್ಷದ ಫಲವಾಗಿ ಸಂಸಾರದಲ್ಲಿ ಮಗ್ನರಾಗಿದ್ದ ಕೆಲವು ಜೀವಿಗಳ ಅಜ್ಞಾನವಳಿಯಿತು, ಭಕ್ತಿ ಬೆಳೆಯಿತು. ಇವರೇ ಆಳ್ವಾರುಗಳು ಎಂದು **ನಂಬಿಳ್ಳೈ** ಎಂಬ ಆಚಾರ್ಯರ ಮತ. ಇದು ಆಳ್ವಾರುಗಳಲ್ಲಿ ಶ್ರೇಷ್ಠರಾದ ನಮ್ಮಾಳ್ವಾರರ ಶ್ರೀ ಸೂಕ್ತಿಗಳಿಂದ ಪುಷ್ಟವಾಗಿದೆ. ಆಳ್ವಾರುಗಳಿಗೆ ಶ್ರೀಮನ್ನಾರಾಯಣನ ಸಾಕ್ಷಾತ್ಕಾರದ ಆಸೆ ಬಲಿತು ಪರಮಭಕ್ತಿಯಾಗಿ ಪರಿಣಮಿಸಿದಾಗ ಅವರಿಗೆ ಮುಕ್ತಿ ಬಂತು; ನಿತ್ಯಕೈಂಕರ್ಯ ಸಿದ್ಧಿಸಿತು.

ಪೆರಿಯಾಳ್ವಾರ್ ಹಾಡಿರುವಂತೆ "ಎದೆಯ ಗುಡಿಯನ್ನು ಅಣಿಮಾಡಿ ಅದರಲ್ಲಿ ಮಾಧವನೆನ್ನುವ ದೈವವನ್ನಿರಿಸಿ ಪ್ರೇಮ (ಭಕ್ತಿ) ಎಂಬ ಹೂವನ್ನಿಡಬಲ್ಲವರಿಗೆ" ಯಮಬಾಧೆ ಇಲ್ಲ. ಜನರ ಮನದ ಮಲವನ್ನು ಕಳೆದು ಅವರ ಹೃದಯ ಸಂಸ್ಕಾರವನ್ನು ಮಾಡಿ "ಎಂದೂ ಬಾಡದ ಹೂಗಳಿಂದ" ಆತ್ಮಕುಸುಮಗಳನ್ನು ನಾರಾಯಣನ ಬಾಡದ ಮಲರಡಿಗಳ ಕೆಳಗೆ ಇಡಲು ಸಂಕಲ್ಪಿಸಿದ ಈ ಪ್ರಪನ್ನ ಕುಲಶಿರೋಮಣಿಗಳಾದ ಆಳ್ವಾರುಗಳು ತಮ್ಮ ಪ್ರಬಂಧಗಳ ಮೂಲಕ ದೇವರಲ್ಲಿ ಆಸೆಯನ್ನುಂಟುಮಾಡಿ, ದೇವರ ಮಂಗಲಾಶಾಸನಕ್ಕೆ ಅರ್ಹರಾಗುವಂತೆ, ನಾಡಿನ ಹಲವರನ್ನು ತಿದ್ದಿ ಭಗವಂತನಿಗೆ ಹಿರಿಯ ಕೈಂಕರ್ಯವನ್ನು ಸಲ್ಲಿಸಿ ಕೃತಾರ್ಥರಾದರು. ಅವರ ಈ ದಿವ್ಯ ಪ್ರಬಂಧಗಳು ಸಂಸಾರತಾಪಾರ್ತರಿಗೆ ಸಂಜೀವನ, ಶೃಂಗಾರದ ಅಂತಃಪುರ, ಶಾಂತಿರಸದ ನೆಲೆವೀಡು, ಸಂಹಿತೆಗಳಲ್ಲಿ ಸಾರ್ವಭೌಮಿ, ತಮಿಳು ಕಾವ್ಯಾಲಂಕಾರ ಶಾಸ್ತ್ರಗಳಿಗೆ ಲಕ್ಷ್ಯವೇದದ ಸಾರ, ಮಂದಮತಿಗಳ ಮನದ ಇರುಳನ್ನು ಕಳೆಯುವ ದೀಪ, ಭಕ್ತರ ಕಲ್ಪವೃಕ್ಷ, ಆರ್ತರ ಕಾಮಧೇನು, ಜ್ಞಾನಿಗಳ ನಿಧಿ, ಪ್ರಸನ್ನರಿಗೆ ಜೀವನೌಷಧ, ಈ ಆಳ್ವಾರುಗಳ ಮತ್ತು ಅವರ ಸಿರಿನುಡಿಗಳನ್ನು ಕುರಿತು ವಿಶೇಷವಾಗಿ ಅರಿಯಬಯಸುವವರು ಈ ಪುಸ್ತಕಗಳನ್ನು[1] ನೋಡಬಹುದು. ಆಳ್ವಾರುಗಳಲ್ಲಿ ನಾಲ್ಕನೆಯವರಿಂದ **ಭಕ್ತಿಸಾರರೆಂಬ** ಮಹಾಯೋಗಿಗಳು ಮದರಾಸಿಗೆ ಸಮೀಪದಲ್ಲಿರುವ ಮಹಿಸಾರಕ್ಷೇತ್ರದಲ್ಲಿ ದ್ವಾಪರಯುಗದ ಕೊನೆಯ ವರ್ಷದಲ್ಲಿ ಕ್ರಿ. ಪೂ. ೪೨೦೨ ರಲ್ಲಿ ಸಿದ್ಧಾರ್ಥಿ ವರ್ಷದಲ್ಲಿ ಮಕರಮಾಸದ

---

[1] ಶ್ರೀಶಾನುದಾಸ ಗ್ರಂಥಮಾಲಾ ಪ್ರಕಟನೆಗಳು—

ತಿರುಪ್ಪಾವೈ (ಪುಟಗಳು : ೫—೭) ತಿದ್ದಿದ ಎರಡನೆಯ ಮುದ್ರಣ, ೧೯೫೦

ನಿತ್ಯಾನುಸನ್ಧಾನಂ (ಪುಟಗಳು : ೧—೭) ೧೯೫೦, ೧೯೫೭.

ಇಪ್ಪತ್ತೆಂಟನೇ ದಿನ ಕೃಷ್ಣಪಕ್ಷದ ಪ್ರಥಮ ತಿಥಿ, ಭಾನುವಾರ, ಇವು ಸೇರಿದ ಮಖಾನಕ್ಷತ್ರದ ದಿನ ಅವತರಿಸಿದರೆಂದು ಸಂಪ್ರದಾಯ ಗ್ರಂಥಗಳಿಂದ ತಿಳಿದುಬರುತ್ತದೆ. ಈ ಕ್ಷೇತ್ರದಲ್ಲಿ ಹಿಂದೆ ವಿದೇಹರಾಜ ಜನಕನು ತಪಸ್ಸುಮಾಡಿದ್ದನೆಂದು ಪುರಾಣಗಳಲ್ಲಿ ಹೇಳಿದೆ. ಈ ಕ್ಷೇತ್ರವನ್ನು ಮತ್ತು ಉಳಿದ ಭೂಭಾಗವನ್ನು ವಿಶ್ವಕರ್ಮನು ಅವುಗಳ ಯಶಸ್ಸಿನ ಅಳತೆಗೋಲಿನಿಂದ ಅಳೆದಾಗ ಈ ಕ್ಷೇತ್ರದ ಮಹಿಮೆಯೇ ಮಿಕ್ಕ ಭಾಗಕ್ಕಿಂತ ಮಿಗಿಲಾಯಿತಂತೆ! ಆದ್ದರಿಂದ ಇದಕ್ಕೆ **ಮಹಿಷಾರಕ್ಷೇತ್ರ**ವೆಂದು ಹೆಸರು ಬಂತು. ಈ ಪದದ ತಮಿಳು ರೂಪವೇ ಮಳಿಶೈ. ಚಂದನದ ತೋಪುಗಳಿಂದಲೂ ನೀರ್‌ನೆಲಗಳಿಂದಲೂ ಕಂಗೊಳಿಸುವ, ಕರಿಯ ಅಗರು ಮತ್ತು ಕೌಂಗುಮರಗಳ ಕಂಪನ್ನು ಬೀರುವ, ಸಿರಿಯು ತನ್ನ ಇನಿಯನೊಡನೆ ನೆಲಸಿರುವ, ಈ ಅಂದವಾದ ಬೀಡಿನಲ್ಲಿ ಧಾರಿಣಿಯು ಅಳಲು ತೀರುವಂತೆ ಭಾರ್ಗವ ಋಷಿಯ ಪುತ್ರರಾಗಿ ಭಗವಂತನ ಸುದರ್ಶನವೆಂಬ ಚಕ್ರದ ಅಂಶದಿಂದ ಕನಕಾಂಗಿ ಎಂಬ ಅಪ್ಸರೆಯಲ್ಲಿ ಈ ಪರಮ ಭಾಗವತರು ಜನಿಸಿದರು. ಇವರ ಭಕ್ತಿ ಸರ್ವಜನ ಸಂಮೋಹಕವಾಗಿದ್ದುದರಿಂದ ಇವರಿಗೆ **ಭಕ್ತಿಸಾರ**ರೆಂಬ ಹೆಸರು ಬಂತು. ಯಾವ ರಾಜ್ಯದ ಅರಸರೂ ಆಗಿರದಿದ್ದರೂ ಇವರು ಯಾವ ಸಾರ್ವಭೌಮನಿಗಿಂತಲೂ ಕಡಮೆಯಲ್ಲವೆಂದು ಇವರ ಚರಿತದಿಂದ ವ್ಯಕ್ತವಾಗುತ್ತದೆ. ಇವರ ನಿಶಿತವಾದ ಮತ್ತು ಶುದ್ಧವಾದ ಬುದ್ಧಿ ಚಕ್ರದಂತೆ ತೀಕ್ಷ್ಣವಾಗಿದ್ದಿತು; ಜನರ ಅಜ್ಞಾನಾಂಧಕಾರವನ್ನು ಕಳೆಯಬಲ್ಲುದಾಗಿತ್ತು. ಆದ್ದರಿಂದ ಪರತತ್ವನಿರ್ಣಯ ಮಾಡಿದ ನಮ್ಮಾಳ್ವಾರರಂತೆ, ಪೆರಿಯಾಳ್ವಾರರ ಹಾಗೆ, ಶ್ರೀ ಭಾಷ್ಯಕಾರರಂತೆ ಇವರಿಗೂ ಪರಮ ವೈದಿಕಸಿದ್ಧಾನ್ತವಾದ ರಾಮಾನುಜದರ್ಶನದಲ್ಲಿ ಈ ಮಹಾಯೋಗಿಗಳಿಗೆ '**ತಿರುಮಳಿಶೈಪ್ಪಿರಾನ್**' ("ತಿರುಮಳಿಶೆಯ ಹಿರಿಯ ಅರಸ) ಎಂಬ ಹೆಸರು ಬಳಕೆಗೆ ಬಂತು. ತಿರುಕ್ಕುಡಂದೈಯಲ್ಲಿ ಪವಡಿಸಿರುವ ಶಾರ್ಙ್ಗಪಾಣಿಯು ಒಂದುಸಲ ಈ ಮಹಾನುಭಾವರ ಶೇಷಪ್ರಸಾದವನ್ನು ಆದರದಿಂದ ಆರೋಗಣೆ ಮಾಡಿದನಂತೆ! ಆದಕಾರಣ ಆ ಭಗವಂತನನ್ನು 'ಆರಾವಮುದಾಳ್ವಾರ್' ಎಂದೂ ಈ ಭಕ್ತರನ್ನು 'ತಿರುಮಳಿಶೈಪ್ಪಿರಾನ್' ಎಂದೂ ಶ್ರೀ ವೈಷ್ಣವರು ಕರೆಯುತ್ತಾರೆ. ಹೀಗೆ ಈ ಹರಿದಾಸರ ಕೀರ್ತಿ ಜಗದ್ವಿಶ್ರಾಂತವಾದುದು ಎಂದು ತಿಳಿದುಬರುತ್ತದೆ.

ಪಿಂಡಾಕೃತಿಯಾಗಿ ತಾಯಿಯ ಗರ್ಭದಿಂದ ಹೊರಬಿದ್ದ ಶಿಶುವಿಗೆ ಅವಯವಗಳೊಂದೂ ಇರಲಿಲ್ಲ. ಆದುದರಿಂದ ಹೆತ್ತವಳಿಗೆ ಬೇಸರವಾಯಿತೇನೋ! ಆಕೆ ಆ ಪಿಂಡವನ್ನು ಒಂದು ಪೊದರಿನಲ್ಲಿ ಬಿಟ್ಟು—ವಿಶ್ವಾಮಿತ್ರನನ್ನಗಲಿದ ಮೇನಕೆಯಂತೆ—ಭಾರ್ಗವಮುನಿಯನ್ನು ತೊರೆದು ಹೊರಟುಹೋದಳು.

ಇತ್ತ ಕೊಂಚಕಾಲ ಕಳೆದಮೇಲೆ ಆ ಕ್ಷೇತ್ರದಲ್ಲಿ ನೆಲಸಿರುವ ದಿವ್ಯ ದಂಪತಿಗಳ ಅನುಗ್ರಹ ದಿಂದ ಸರ್ವಾಂಗ ಸುಂದರವಾದ ಮಗು ಆ ಪಿಂಡದಿಂದ ಉತ್ಪನ್ನವಾಗಿ ಅಳತೊಡಗಿತು. ಆಗ ಅಲ್ಲಿರುವ ಜಗನ್ನಾಥನೇ ಆ ಪೊದರಿನ ಬಳಿಗೆ ಬಂದು ತನ್ನ ಸೌಂದರ್ಯ ನಿಧಿಯಾದ ರೂಪವನ್ನು ತೋರಿಸಿ, ತನ್ನ ಕರುಣಾ ರಸಾದ್ರ್ರ ನಯನಗಳಿಂದ ಆ ಶಿಶುವನ್ನು ನೋಡಿ, ಆಶೀರ್ವದಿಸಿದನು. ಜಾಯಮಾನ ಕಾಲಕಟಾಕ್ಷದ ಪರಿಣಾಮವಾಗಿ ಆ ಶಿಶು "ಪ್ರಪನ್ನಕುಲ"ದ ಬೆಳಕಾಗಿ ಬೆಳೆಯಿತು! ಭಗವಂತನ ದಿವ್ಯಮಂಗಳ ವಿಗ್ರಹದ ಸೌಂದರ್ಯಾಮೃತ ಪಾನಮಾಡಿದ ಆ ಮಗು ಏಳುವರ್ಷ ತುಂಬುವವರೆಗೆ ಮತ್ತಾವ ಆಹಾರವನ್ನೂ ಬಯಸದೆ ಬೆಳೆಯಿತಂತೆ!

ಒಂದುದಿನ ಕಾಡಿನಲ್ಲಿ ಬೆತ್ತವನ್ನು ಹುಡುಕುತ್ತಾ ಸಂಚರಿಸುತ್ತಿದ್ದ ಸಿರಿಯಾಳನೆಂಬ ಮೇದರ ವನು ಈ ಮಗುವಿನ ರೋದನವನ್ನು ಕೇಳಿ ಅದನ್ನು ಪತ್ತೆಮಾಡಿ ಹರ್ಷಿತನಾಗಿ ತನ್ನ ಕೈಗಳಲ್ಲಿ ಎತ್ತಿಕೊಂಡು ಬಂದು ಮಕ್ಕಳಿಲ್ಲದ ತನ್ನ ಮಡದಿಯ ಮಡಿಲಲ್ಲಿಟ್ಟನು. ಹೀಗೆ, ದೇವಕೀನಂದನ ನಾಗಿ ಅವತರಿಸಿದ ಶ್ರೀಕೃಷ್ಣನು ಆ ರಾತ್ರಿಯಲ್ಲೇ ಯಶೋದಾನಂದವರ್ಧನನಾಗಿ ಬೆಳೆದಂತೆ ಋಷಿಕುಲದಲ್ಲಿ ಅವತರಿಸಿದ ಈ ಭಕ್ತರು ನಾಲ್ಕು ವರ್ಗಗಳಿಗೂ ಸೇರದ ಮೇದರ ಕುಲದಲ್ಲಿ

ಬೆಳೆದರು; ಮುಂದೆ ಪೇಯಾಳ್ವಾರ್ರ ಶಿಷ್ಯರಾಗಿ ಜ್ಞಾನಿಗಳಲ್ಲಿ ಅಗ್ರೇಸರರಾದರು. ಬಳಿಕ ಎಂದೂ ಇವರು ದೇವರನ್ನು ಮರೆಯಲಿಲ್ಲ ಎಂಬುದು ಇವರ **"ತಿರುಚ್ಚಂದವಿರುತ್ತಂ"** ಎಂಬ ಪ್ರಬಂಧದ ಎರಡು ಪದ್ಯಗಳಲ್ಲಿ ವ್ಯಕ್ತವಾಗಿದೆ—

"ಕುಲಗಳಾದ ಈರೆರಡರಲ್ಲಿ ಒಂದರಲ್ಲೂ ಹುಟ್ಟಿಲ್ಲ, ನಾಲಗೆಯಿಂದ ಸತ್ಕ್ರಿಯ ಹಾದಿಯನ್ನು ತೋರಿಸುವ ನಲ್‌ಕಲೆಗಳನ್ನು ಕಲಿಯಲಿಲ್ಲ, ಪಂಚೇಂದ್ರಿಯಗಳನ್ನು ಗೆದ್ದಿಲ್ಲ, ವಿಷಯಾಸಕ್ತಿ ಅಳಿದಿಲ್ಲ. ಪುನೀತನೇ! ನಿನ್ನ ಹೊಳೆವ ಪಾದವನ್ನುಳಿದೆನಗೆ ಬೇರೆ ಆಸರೆಯಿಲ್ಲ, ನನ್ನೊಡೆಯಾ!"—(೯೦.)

"ನನ್ನ ತಂದೆ **"ಊರಹಂ"**[2]ದಲ್ಲಿ ನಿಂತದ್ದು, "ಪಾಂಡಹ"[3]ದಲ್ಲಿ ಕುಳಿತದ್ದು **ವೆಂಕಾದ**[4] ಹಾಸಿಗೆಯಲ್ಲಿ ಕೆಡೆದದ್ದು ಮಲಗಿದುದೂ ಅಂದು ನಾನಿಲ್ಲದ ಹಿಂದೆಲ್ಲಾ! ಅಂದು ನಾನು ಹುಟ್ಟಿರಲಿಲ್ಲ; ಹುಟ್ಟಿದ ಮೇಲೆ [ಅವನನ್ನು] ಮರೆತಿಲ್ಲ. [ಈಗ ಅವನು] ನಿಲ್ಲುವುದೂ ಕೂರುವುದೂ ಮಲಗುವುದೂ ನನ್ನ ಮನದೊಳಗೇ!"—(೬೪)

ಎಂಬ ತೈತ್ತಿರೀಯೋಪನಿಷತ್ತಿನ ತಾತ್ಪರ್ಯವೇ ಮೇಲಿನ ಪದ್ಯದಲ್ಲಡೆ.

ಬ್ರಹ್ಮಜ್ಞಾನವುಳ್ಳವನೇ "ಸತ್"ಪಡೆದವನು–ಇರುವವನು, ಅದಿಲ್ಲದವನು "ಅಸತ್"—ಎಂದರೆ ಬ್ರಹ್ಮಜ್ಞಾನದಿಂದಲೇ ಆತ್ಮಸದ್ಭಾವ, ಬ್ರಹ್ಮಜ್ಞಾನವಿಲ್ಲದಿರುವುದೇ ಆತ್ಮನಾಶವೆಂದು ವ್ಯಕ್ತವಾಗುತ್ತದೆ.

"ಅಹಂ ವೋ ಬಾಂಧವೋ ಜಾತಃ" ಎಂದು ನುಡಿದ ಶ್ರೀಕೃಷ್ಣನಂತೆ ಈ ಆಳ್ವಾರರೂ ತಾವು ಬೆಳೆದ ಮೇದರ ಕುಲವನ್ನೇ ತಮ್ಮ ಕುಲವೆಂದೆಣಿಸಿ ಹಾಗೆ ಹೇಳಿರುವುದರಿಂದ ಜನ್ಮವಿತ್ತ ತಂದೆಯಂತೆ ಪೋಷಿಸಿದವನೂ ತಂದೆ" ಎಂಬ ಶಾಸ್ತ್ರಾರ್ಥ ಪ್ರಕಟವಾಗಿದೆ. ತಂದೆ ಒಡಲನ್ನಿತ್ತರೆ ಆಚಾರ್ಯರು ಜ್ಞಾನೋಪದೇಶದಿಂದ ಪುನರ್ಜನ್ಮ ಬರದಂತಹ ಮತ್ತೊಂದು ಶ್ರೇಷ್ಠಜನ್ಮವನ್ನು ಕೊಡುವರೆಂದೂ ಆದ್ದರಿಂದ ಅವರಲ್ಲಿ ಸದಾ ಕೃತಜ್ಞತೆ ಇರಬೇಕೆಂದೂ ತಿಳಿಯಬೇಕು.

ಈ ಋಷಿಕುಮಾರರು ಸದಾ ಭಗವದನುಭವಪರರಾಗಿ—ಬೇರೆ ಯಾವ ಆಹಾರವನ್ನೂ ಆ ಮೇದರವನ ಮನೆಯಲ್ಲಿ ಸೇವಿಸದೆ ಇದ್ದರೂ ಭಗವದ್ಗುಣಾನುಭಾವದಿಂದ ಸರ್ವಾಂಗ ಸುಂದರವಾದ, ಉಜ್ವಲವಾದ ಕಾಂತಿಯುಳ್ಳ ದೇಹದಿಂದ ಬೆಳಗುತ್ತಿದ್ದರು. ಈ ಆಶ್ಚರ್ಯವನ್ನರಿತು ಚಕಿತನಾದ ಆ ಊರಿನ ಮುದುಕನೊಬ್ಬನು ತನ್ನ ಪತ್ನಿಯೊಡನೆ ಕೊಂಚ ದಿನಗಳವರೆಗೆ ಉಷಃಕಾಲದಲ್ಲಿ ಆಳ್ವಾರ್ರ ಬಳಿ ಬಂದು ನೊರೆಹಾಲನ್ನು ಸಮರ್ಪಿಸುತ್ತಿದ್ದನು. ಅವನ ಭಕ್ತಿಗೆ ಮೆಚ್ಚಿ ಆ ಹಾಲನ್ನು ಆಳ್ವಾರರು ಸ್ವೀಕರಿಸುತ್ತಿದ್ದರು. ಆಮೇಲೆ ಒಂದುದಿನ ಅವರ ಮನೋಗತವನ್ನರಿತು ತಾವು ಕುಡಿದ ಮೇಲೆ ಪ್ರಸಾದವಾಗಿ ಉಳಿದ ಹಾಲನ್ನವರಿಗಿತ್ತು "ಇದನ್ನು ನೀವು ಕುಡಿಯಿರಿ; ನಿಮಗೆ ಸತ್ಪುತ್ರಲಾಭವಾಗುವುದು" ಎಂದರು. ಈ ಕರ್ಣಾಮೃತವಾದ ಮಾತಿನಿಂದ ಅವರಿಗೆ ಪರಮಾನಂದವಾಯಿತು. ಅದರಂತೆ ಒಂದು ವರ್ಷದೊಳಗೆ ಆ ದಂಪತಿಗಳಿಗೆ **ಕಣಿಕಣ್ಣನ್** ಎಂಬ ವಿದುರನಂತಹ ಮಹಾಮತಿಯೂ ಭಕ್ತನೂ ಆದ ಮಗನು ಹುಟ್ಟಿದನು. ಅವನು ಆಳ್ವಾರ್ರ ಕಟಾಕ್ಷಕ್ಕೆ ಪಾತ್ರನಾಗಿ ಮುಕುಂದಪಾದ ಭಜನೆಯಲ್ಲಿ ಆಸಕ್ತನಾದನು.

ಎಂಟನೇ ವರ್ಷದಲ್ಲಿ ಭಾರ್ಗವಮುನಿ-ಪುತ್ರರಿಗೆ ತೀರ್ಥಯಾತ್ರೆಯಲ್ಲಿ ಆಸಕ್ತಿಯುಂಟಾಯಿತು; ಯೋಗಾಭ್ಯಾಸಮಾಡುವ ಬಯಕೆ ಮೂಡಿತು. **"ಕಾರಣಂ ತು ಧ್ಯೇಯಃ"** ಎಂಬ ತತ್ತ್ವವನ್ನು ನಿಶ್ಚಯಿಸಲು ಅವರು ಜೈನಬೌದ್ಧಾದಿ ವೇದಬಾಹ್ಯಮತಗಳನ್ನೂ ಸಾಂಖ್ಯ, ನ್ಯಾಯ,

---

[2], [3], [4]—ಇವು ಕಾಂಚೀಪುರದಲ್ಲಿರುವ ೧೧೮ ದಿವ್ಯದೇಶಗಳಲ್ಲಿ ಪ್ರಸಿದ್ಧವಾದ ಮೂರು ಸ್ಥಳಗಳು.

" ಅಸನ್ನೇವ ಸಭವತೀ
ಅಸತ್ ಬ್ರಹ್ಮೇತಿ ಚೇತ್ |
ಅಸ್ತಿಬ್ರಹ್ಮೇತಿಚೇತ್‌ವೇದ
ಸನ್ತಮೇನಂತತೋವಿದುಂತಿ" ||

ಮೊದಲಾದ ವೈದಿಕದರ್ಶನಗಳನ್ನೂ ಅಭ್ಯಾಸಮಾಡಿ, ಅವುಗಳಲ್ಲಿ ತೃಪ್ತಿಹೊಂದದೆ ಶೈವಮತವನ್ನವಲಂಬಿಸಿ '**ಶಿವವಾಕ್ಯ**'ರೆಂಬ ಹೆಸರಿನಿಂದ ಶಿವನ ಮಹಿಮೆಯನ್ನು ವರ್ಣಿಸುವ ಅನೇಕ ತಮಿಳು ಕೃತಿಗಳನ್ನು ರಚಿಸಿ, ಶಿವನೇ ಪರದೈವವೆಂದು ನಂಬಿ, ಶಿವಭಕ್ತರಲ್ಲಿ ಅಗ್ರೇಸರರೆಂದು ಹೆಸರು ಗಳಿಸಿದರು. ಈ ಕಾಲದಲ್ಲಿ ಮದರಾಸಿನ ಮೈಲಾಪುರದಲ್ಲಿ ಹುಟ್ಟಿದ ಪೇಯಾಳ್ವಾರರೆಂಬ "ಇಂಪಾದ ತಮಿಳು ಕವಿತೆಗಳನ್ನು ಹಾಡುವ ಪರಮ ಕವಿ"ಗಳೊಬ್ಬರ ಕಟಾಕ್ಷಕ್ಕೆ ಪಾತ್ರರಾಗಿ, ಅವರಿಂದ ವೈಷ್ಣವದೀಕ್ಷೆಯನ್ನು ಹೊಂದಿ, ವಿಷ್ಣುಭಕ್ತ ಶಿರೋಮಣಿಗಳಾಗಿ **ನಾರಾಯಣನೇ ಪರತತ್ವ**ವೆಂದು ಆಳ್ವಾರ್ರ ಉಪದೇಶದಿಂದಲೂ ತಮ್ಮ ಯೋಗ ಮಹಿಮೆ ಭಗವದನುಭವಗಳಿಂದಲೂ ನಿಷ್ಕರ್ಷಿಸಿದರು. ಬಳಿಕ ಇತರ ಮತಗಳ ದೋಷವನ್ನು ತೋರಿಸಿ ತಮ್ಮ ಸಿದ್ಧಾನ್ತವನ್ನು ಸ್ಥಾಪಿಸುವ ಕೆಲಸದಲ್ಲಿ ಇವರು ಕೊಂಚ ಕಾಲ ಮಗ್ನರಾದರು. ಆ ದೆಶೆಯಲ್ಲಿದ್ದಾಗಲೇ ಇವರಿಗೆ ಭಗವಂತನ ಸಾಕ್ಷಾತ್ಕಾರವಾಯಿತು. ಅದರಿಂದ ಸ್ಫೂರ್ತಿ ಹೊಂದಿ "**ತಿರುಚ್ಚಂದ ವಿರುತ್ತಂ**" ಮತ್ತು "**ನಾನ್ಮುಹನ್ ತಿರುವಂದಾದಿ**" ಎಂಬ ಎರಡು ದ್ರಾವಿಡ ದಿವ್ಯ ಪ್ರಬಂಧಗಳನ್ನು ರಚಿಸಿದರು. ಮೊದಲನೆಯದರಲ್ಲಿ ನಾನಾ ಛಂದಸ್ಸುಗಳಲ್ಲಿ ಹಾಡಿರುವ ನೂರ ಇಪ್ಪತ್ತು ಪಾಶುರಗಳಿವೆ; ಎರಡನೆಯದರಲ್ಲಿ ತೊಂಬತ್ತಾರು (ವೆಣ್ಬಾ ವೃತ್ತದಲ್ಲಿ ರಚಿತವಾದ) ಸಣ್ಣ ಪದ್ಯಗಳಿವೆ. ಈ ಪ್ರಬಂಧಗಳಲ್ಲಿ ಕಂಡುಬರುವ ಶಬ್ದ ಸೌಂದರ್ಯ ಅರ್ಥಗಾಂಭೀರ್ಯ, ಛಂದಸ್ಸಿನ ಕುಣಿತ ಅದ್ಭುತವಾದವು. ಈ ಆಳ್ವಾರರು ತಿರುವಲ್ಲಿಕ್ಕೇಣಿಯಲ್ಲಿ ಗಜೇಂದ್ರ ಸರಸ್ತೀರದಲ್ಲಿ ಒಂದು ಸಲ ತಮ್ಮ ಚಿಂದಿ ಬಟ್ಟೆಯನ್ನು ಹೊಲಿಯುತ್ತ ಕುಳಿತ್ತಿದ್ದರಂತೆ. ಆಗ ನಂದಿಯ ಮೇಲೇರಿ ಆಕಾಶ ಮಾರ್ಗದಲ್ಲಿ ಪಾರ್ವತೀಪರಮೇಶ್ವರರು ಹೋಗುತಿದ್ದರಂತೆ. ಆ ದೇವತಾ ದಂಪತಿಗಳ ನೆಳಲು ತಮ್ಮ ಮೇಲೆ ಬೀಳದಂತೆ ಆಳ್ವಾರ್ರು ಸರಿದುದನ್ನು ಪಾರ್ವತಿ ನೋಡಿ ತನ್ನ ಇನಿಯನನ್ನು ಕುರಿತು ಇಂತೆಂದಳಂತೆ—"ಇವರಾರೋ? ವಿಚಾರಿಸಿ ಹೋಗುವಾ." ಆಗ ಶಿವಪಾರ್ವತಿಯರಿಗೆ ನಡೆದ ಸಂಭಾಷಣೆಯನ್ನು ಕೆಳಗೆ ಕೊಟ್ಟಿದೆ.

ಶಿವ—"ಇವರು ಮಹಾನುಭಾವರು, ನಮ್ಮನ್ನು ಗಮನಿಸುವುದಿಲ್ಲ."

ಪಾರ್ವತಿ—"ಹೇಗಾದರೂ ಸರಿ; ಇವರನ್ನು ಕಂಡು ಹೋಗಬೇಕು."

ಬಳಿಕ ಇಬ್ಬರೂ ಆಳ್ವಾರ್ರ ಬಳಿ ಸಂದು ನಿಂತರೂ ಆಳ್ವಾರರು ಅವರನ್ನು ವಿಚಾರಿಸಲೇ ಇಲ್ಲ, ತಮ್ಮ ಕಾರ್ಯದಲ್ಲಿ ನಿರತರಾಗಿದ್ದರು. ಆಗ ಇಬ್ಬರೂ ಅವರನ್ನಿಂತು ಪ್ರಶ್ನಿಸಿದರು—"ನಾವು ಬಂದಿದ್ದರೂ ನೀವು ನಮ್ಮನ್ನು ಲಕ್ಷ್ಯಮಾಡದೆ ಉದಾಸಿನರಾಗಿರಬಹುದೇ?"

ಆಗ ಅವರನ್ನು "ನಿಮ್ಮಿಂದ ನನಗಾವ ಪ್ರಯೋಜನವುಂಟು?" ಎಂದು ಆಳ್ವಾರ್ ಕೇಳಿದರು.

ಆಗ ಶಿವನಿಗೂ ಆಳ್ವಾರಿಗೂ ಹೀಗೆ ಮಾತುಕತೆ ನಡೆಯಿತು.

ಶಿವ—"ನಿಮಗೆ ನಾನೊಂದು ವರವನ್ನೀಯಲು ಬಂದಿರುವೆನು."

ಆಳ್ವಾರ್—"ನನಗೆ ಒಂದೂ ಬೇಡ."

ಶಿವ—"ನಾನು ಬಂದುದು ವ್ಯರ್ಥವಾಗದೆ ಇರುವಂತೆ ನಿಮಗೆ ಬೇಕಾದ ವರವನ್ನು ಕೇಳಿ."

ಆಳ್ವಾರ್—(ಹುಸಿನಗುತ್ತಾ) "ಮೋಕ್ಷವನ್ನು ಕೊಡಬಲ್ಲೆಯಾದರೆ, ಕೊಡು"

ಶಿವ—"ಅದು ನನ್ನಿಂದ ಸಾಧ್ಯವಿಲ್ಲ, ಶ್ರೀಮನ್ನಾರಾಯಣನಿಂದಲೇ ಸಾಧ್ಯ"

ಆಳ್ವಾರ್—"ಹಾಗಾದರೆ, ಇಂದು ಸಾಯುವವರನ್ನು ನಾಳೆ ಸಾಯುವಂತೆ ಮಾಡಬಲ್ಲೆಯಾ?"

ಶಿವ—"ಅದು ಕರ್ಮವನ್ನನುಸರಿಸಿದೆಯಲ್ಲವೇ?"

ಆಳ್ವಾರ್—"ಹಾಗಾದಲ್ಲಿ, ಈ ಸೂಜಿಯ ಹಿಂದೆ ದಾರ ಹೋಗುವಂತೆ ವರವ ನೀಡಯ್ಯ!"

11976



ಈ ಅಪಹಾಸ್ಯದ ಮಾತಿನಿಂದ ಕುಪಿತನಾಗಿ ಶಿವನು ತನ್ನ ಹಣೆಗಣ್ಣನ್ನು ತೆರೆದನು. ಆಗ ಅದರಿಂದ ಪ್ರಳಯಾಗ್ನಿಯಂತೆ ಜ್ವಲಿಸುವ ಉರಿ ಏಳುವುದನ್ನು ಕಂಡು ಆಳ್ವಾರರು ತಮ್ಮ ಬಲಗಾಲಿನ ಹೆಬ್ಬೆಟ್ಟಿನಲ್ಲಿದ್ದ ಒಂದು ಕಣ್ಣನ್ನು ತೆರೆದರು. ಅದರಿಂದ ಪ್ರಳಯಕಾಲದ ಅಗ್ನಿಗಿಂತಲೂ ಮಿಗಿಲಾಗಿ ಉರಿಯುವ ತೇಜೋರಾಶಿ ಹೊರಟುಬಿಟ್ಟಿತು; ಅದರ ಮುಂದೆ ನೊಸಲ್ಗಣ್ಣಿನ ಉರಿ ಸೂರ್ಯನ ಎದುರು ಮಿಂಚುಹುಳುವಿನಂತಾಯಿತು! ಆಗ ಬೇರೆ ಗತಿಯಿಲ್ಲದೆ ಶಂಭು ಶ್ರೀಮನ್ನಾರಾಯಣನಿಗೆ ಮೊರೆಯಿಟ್ಟನು. ಎಲ್ಲಾ ಋಷಿಗಳೂ ದೇವತೆಗಳೂ ಶ್ರೀ ವೈಕುಂಠನಾಥನನ್ನು ನುತಿಸಿದರು. ಆಗ ಪ್ರಳಯಾಗ್ನಿಯನ್ನಾರಿಸಬಲ್ಲ ಪುಷ್ಕಲಾವರ್ತಕವೆಂಬ ಮೇಘರಾಶಿ ಭಗವಂತನ ಅಪ್ಪಣೆಯಂತೆ ಆಕಾಶದಲ್ಲಿ ಎಲ್ಲೆಲ್ಲೂ ಹರಡಿ ಮಿಂಚಿ, ಮೊಳಗಿ, ಎಲ್ಲರ ತಾಪವೂ ಆರುವಂತೆ ಹಿರಿಯ ಮಳೆಯನ್ನು ಸುರಿಸಿತು. ಮಳೆಗಾಲದಲ್ಲಿ ಎಡೆಬಿಡದೆ ತಮ್ಮ ಮೇಲೆ ಬೀಳುವ ಮಳೆಯ ಧಾರೆಗೆ ಯಾವ ರೀತಿಯಲ್ಲಿ ಗಿರಿಗಳು ಕರಗದೆ ನಿಶ್ಚಲವಾಗಿರುವುವೋ ಹಾಗೆ—ಅಧೋಕ್ಷಜನಲ್ಲಿ ಪ್ರಪತ್ತಿ ಮಾಡಿದ ಯೋಗಿಗಳಿರುವಂತೆ—ಆಳ್ವಾರರು ನಿಶ್ಚಲರಾಗಿ ಭಗವದನುಭವಸ್ಥೈರ್ಯಯುತ್ರಾ ಅವಿಕೃತರಾಗಿದ್ದರು. ಇದನ್ನು ಕಂಡು ವಿಸ್ಮಯಗೊಂಡು ಶಿವನು ಆಳ್ವಾರರಿಗೆ ನಮಿಸಿ "**ಭಕ್ತಿಸಾರ**"ರೆಂದು ಹೆಸರಿಟ್ಟು ಅವರ ವೈಭವಕ್ಕೆ ತಲೆದೂಗಿ ಅವರನ್ನು ಕೊಂಡಾಡುತ್ತಾ ತನ್ನ ದಾರಿಯನ್ನು ಹಿಡಿದನು.

ಆಗ ಮೃಡನು ಪಾರ್ವತಿಗೆ ಹೀಗೆ ಹೇಳಿದನು. "ಅಂಬರೀಷನಿಂದ ದುರ್ವಾಸಮುನಿಗೆ ಅಪಮಾನವಾದಂತೆ ನಮಗೂ ಇವರಿಂದ ಮಾನ ಹೋಯಿತು. ಆದುದರಿಂದ ಭಾಗವತರನ್ನು ಗೆಲ್ಲಲಾಗದು."

ಇದನ್ನು ತಿರುಮಲಾರ್ಯರು "**ಚಿಕ್ಕದೇವರಾಯ ವಂಶಾವಳಿ**"ಯಲ್ಲಿ ಹೀಗೆ ವರ್ಣಿಸಿದಾರೆ—

"ಸೂಜಿಯಂ ಬಟಿವಿಡಿದು ದಾರಂ ಬರ್ಪಂತೆ ಕರುಣಿಪುದೆಂದು ವರವಂ ಬೇಡಿ ಮೃಡನಂ ವಿಡಂಬಿಸಿ ಕಡೆಗಣಿಸಿದ ವೈರಾಗ್ಯಸಾರಂ ಪೆತ್ತ ಭಕ್ತಿಸಾರನುಂ"

ಈ ಭಕ್ತಿಸಾರರು ಅಲ್ಲಿಯೇ ಯೋಗಾಭ್ಯಾಸಮಾಡುತ್ತಿದ್ದ ಕಾಲದಲ್ಲಿ ಮತ್ತೊಂದು ದಿನ ಆಕಸ್ಮಿಕವಾಗಿ ಅಲ್ಲಿಗೆ **ಶುಕ್ತಿಹಾರ**ನೆಂಬ ಖೇಚರನು ಹುಲಿಯಮೇಲೆ ಆಕಾಶದಲ್ಲಿ ಹೋಗುತ್ತಿರುವಾಗ ಆಳ್ವಾರರು ಕುಳಿತಿದ್ದ ಜಾಗದ ಬಳಿ ಬಂದಾಗ ಆ ಹುಲಿ ಮುಂದೆ ಹೋಗಲಾರದೆ—ಆ ಮಹಾತ್ಮರ ಯೋಗ ಮಹಿಮೆಯಿಂದ—ಹಿಮ್ಮೆಟ್ಟಿ ನಿಲ್ಲಲು ಅದನ್ನು ಕಂಡು ಆತನು ಇದೇನೆಂದು ಸುತ್ತಲೂ ನೋಡಿದನು; ಕೆಳಗೆ ಮೌನದಿಂದ ಯೋಗಾರೂಢರಾಗಿದ್ದ ಈ ಭಕ್ತರನ್ನು ಕಂಡು ಚಕಿತನಾದನು; ಒಡನೇ ಆಕಾಶದಿಂದ ಕೆಳಗಿಳಿದು ಬಂದು ಆಳ್ವಾರರ ಬಳಿಸಾರಿ ಹೀಗೆ ಬಿನ್ನವಿಸಿದನು: "ಭಾರ್ಗವ ಮುನೀಂದ್ರರೇ! ಈ ಚಿಂದಿಬಟ್ಟೆಯನ್ನು ಒಗೆದು ನಾನು ತಂದಿರುವ ಈ ದಿವ್ಯಕವಚವನ್ನು ಧರಿಸಿರಿ" ಎಂದು ಅದನ್ನು ಕೊಟ್ಟನು. ಸರ್ವಸಂಗ ವಿರಕ್ತರಾದ ಆ ಮಹಾನುಭಾವರು ಅದನ್ನು ಬೇಡವೆಂದು ನಿರಾಕರಿಸಿ ತಮ್ಮ ಸಂಕಲ್ಪದಿಂದ ನಿರ್ಮಿತವಾದ ಒಂದು ಉಜ್ವಲವಾದ ಕವಚವನ್ನವನಿಗೆ ತೋರಿಸಿದರು. ಆಗ ಆತನು ಲಜ್ಜಿತನಾಗಿ ತನ್ನ ಕೊರಳಿನ ಹಾರವನ್ನವರಿಗೆ ಅಕ್ಷಮಾಲೆಯಾಗಿ ಬಳಸುವಂತೆ ಕೊಡಲುಜ್ಜುಗಿಸಿದನು. ಅದನ್ನು ಗಮನಿಸಿ ಆಳ್ವಾರರು ತಮ್ಮ ಕಂಠದಲ್ಲಿ ಬೆಳಗುತ್ತಿದ್ದ ತುಲಸೀ ಪದ್ಮಾಕ್ಷಮಣಿಮಾಲೆಯನ್ನು ಅವನಿಗೆ ತೋರಿಸಿ "ಇದನ್ನು ನೋಡಯ್ಯಾ" ಎಂದರು. ಅದು ನವರತ್ನಮಾಲೆಯಾಗಿ ಕಂಗೊಳಿಸಲು, ಆತನು ಇವರು ಪರಿಪೂರ್ಣರಾದ ಮಹಾನುಭಾವರೆಂದರಿತು ಅವರ ಪ್ರಭಾವವನ್ನು ಕೊಂಡಾಡಿ ತನ್ನ ದಾರಿಯನ್ನು ಹಿಡಿದನು.

ಮತ್ತೊಂದು ಸಲ ಆ ಸ್ಥಳದಲ್ಲಿದ್ದಾಗಲೇ **ಕೊಂಕಣಸಿದ್ಧ**ನೆಂಬ ರಸವಾದಿಯೊಬ್ಬನು ಆಳ್ವಾರರ ಬಳಿಗೆ ಬಂದು ಒಂದು ರಸಗುಳಿಕೆಯನ್ನು ನೀಡಿದನು. ಅದನ್ನವರು ನಿರಾಕರಿಸಿ ತಮ್ಮ ದಿವ್ಯಮಂಗಳ ವಿಗ್ರಹದ ಮೇಲೆ ಕುಳಿತಿದ್ದ ಧೂಳಿನಿಂದ ಒಂದು ಗುಳಿಗೆಯನ್ನುಮಾಡಿ ಇದರ

ಶಕ್ತಿ ನಿನ್ನ "ರಸಗುಳಿಕೆಗಿಂತ ಮಿಗಿಲಾದುದು" ಎಂದು ನುಡಿದು ಅವನ ಕೈಗಿತ್ತರು. ಪರೀಕ್ಷಿಸಿ ನೋಡಿ ಅದನ್ನು ಸಮರ್ಥಿಸಿದ ಆ ರಸವಾದಿ ಅವರ ಮಾತಿಗೆ ಸಮ್ಮತಿಯಿತ್ತು ಅವರನ್ನು ನಮಿಸಿ ತಾನು ಧನ್ಯನಾದೆನೆಂದು ಅರಿತು ತೆರಳಿದನು.

ಬಳಿಕ ಭಕ್ತಿಸಾರರು ಒಂದು ಗವಿಯಲ್ಲಿ ಕುಳಿತು ಏಕಾಂತವಾಗಿ ಭಗವದನುಭವ ಮಾಡುತ್ತಿದ್ದಾಗ ಅಲ್ಲಿಗೆ ಆಕಸ್ಮಿಕವಾಗಿ ಬಂದ ಮೊದಲಾಳ್ವಾರುಗಳು ಮೂವರನ್ನೂ ಸತ್ಕರಿಸಿ ಅವರ ಸಂಸರ್ಗದಿಂದ ಸಂತುಷ್ಟರಾಗಿ ಆನಂದಬಾಷ್ಪಗಳನ್ನು ಸುರಿಸುತ್ತ ಪುಳಕೀಕೃತಗಾತ್ರರಾಗಿ ಅವರೊಡನೆ ಭಗವದ್ಗುಣಾನುಭವವನ್ನು ಮಾಡುತ್ತಿದ್ದರು. ಕೊಂಚಕಾಲ ಕಳೆದಮೇಲೆ ನಾಲ್ವರೂ ಪೇಯಾಳ್ವಾರರ ಜನ್ಮಸ್ಥಲಕ್ಕೆ ಹೋಗಿ ಅಲ್ಲಿ ಸ್ವಲ್ಪಕಾಲ ನೆಲಸಿದ್ದರು. ಇದಾದನಂತರ ಮೊದಲಾಳ್ವಾರುಗಳು 'ಓಡಿ ತಿರಿಯುವ ಯೋಗಿಗಳು' ಎಂಬ ತಮ್ಮ ಹೆಸರಿಗೆ ಅನುಗುಣವಾಗಿ ಭಕ್ತಿಸಾರರನ್ನು ಬೀಳ್ಕೊಟ್ಟು ತಮ್ಮ ಸಂಚಾರವನ್ನು ಆರಂಭಿಸಿದರು.

ಆಮೇಲೆ ತಾವು ಹುಟ್ಟಿದ ತಿರುಮಳಿಶೈಗೆ ಬಂದು ಭಕ್ತಿಸಾರಮುನಿಗಳು ಅಲ್ಲಿ ಕೆಲವು ದಿನಗಳವರೆಗೆ ಇದ್ದರು. ಆ ಕಾಲದಲ್ಲಿ ತಿರುಪತಿಯ ಶ್ರೀನಿವಾಸನು ಕನಸಿನಲ್ಲಿ ಬಂದು ಆಳ್ವಾರರಿಗೆ ಆ ಊರಿನಲ್ಲಿ ತಿಲಕವನ್ನು ಧರಿಸಲು ಆಳ್ವಾರರಿಗೆ ಬೇಕಾಗಿದ್ದ ಬಿಳಿಯಮಣ್ಣು ಸಿಕ್ಕುವ ಜಾಗವನ್ನು ತೋರಿಸಿಕೊಟ್ಟನು. ಮಹೀಸಾರ ಕ್ಷೇತ್ರದಿಂದ ಆಳ್ವಾರರು ಪ್ರಸಿದ್ಧವಾದ ಕಾಂಚೀನಗರಕ್ಕೆ ಹೋಗಿ ಅಲ್ಲಿ ಪೊಯ್‌ಹೈಯಾಳ್ವಾರ್ ಅವತರಿಸಿದ ಸರೋವರವಿರುವ "ತಿರುವೆಃಕಾ" (ಯಥೋಕ್ತಕಾರಿ, "ಶೊನ್ನವಣ್ಣಂಶೆಯ್ದ ಪೆರುಮಾಳ್", ಹೇಳಿದಂತೆ ಮಾಡಿದ ದೇವನು ಎಂದು ಈ ಕ್ಷೇತ್ರಕ್ಕೆ ಮುಂದೆ ವರ್ಣಿಸಿರುವ ಐತಿಹ್ಯದಿಂದ ಹೆಸರು ಬಂತು) ಎಂಬ ದಿವ್ಯದೇಶದಲ್ಲಿ ಪವಡಿಸಿರುವ ಭಗವಂತನನ್ನು ಸಂದರ್ಶಿಸಿ ಬಹುಕಾಲ ಅಲ್ಲಿರುವ ಕೊಳದ ಕರೆಯಲ್ಲಿ ಯೋಗಾಭ್ಯಾಸಮಾಡುತ್ತಾ ಇದ್ದರು. ಈ ಕಾಲದಲ್ಲಿ ಕಣಿಕಣ್ಣನ್ ಬಂದು ಇವರ ಸಿರಿಯಡಿಗಳನ್ನು ಆಶ್ರಯಿಸಿದನು. ಆ ಜಾಗದಲ್ಲಿ ಆಳ್ವಾರರ ಆಶ್ರಮದಲ್ಲಿ ದಿನವೂ ಕಸವನ್ನು ಗುಡಿಸಿ ನೆಲವನ್ನು ಸಾರಿಸಿ ರಂಗವಲ್ಲಿಯಿಂದ ಅಲಂಕರಿಸುತ್ತಿದ್ದ ಮುದುಕಿಯೊಬ್ಬಳಿಗೆ ಆಳ್ವಾರರ ಅನುಗ್ರಹದಿಂದ ಹೊಸ ಯೌವನ ಬಂತು; ಅವಳನ್ನು ಆ ದೇಶದ ದೊರೆ ಪಲ್ಲವರಾಯನು ಕಂಡು ಮೋಹಿಸಿ ವರಿಸಿದನು. ಇಬ್ಬರೂ ಸುಖವಾಗಿ ಕೊಂಚಕಾಲ ಕಳೆದರು. ರಾಜನಿಗೆ ಯೌವನ ಹೋಗಿ ಮುಪ್ಪು ಬರುವ ಸೂಚನೆ ಬಂದರೂ ರಾಣಿ ಎಂದಿನಂತೆ ನವಯೌವನದಿಂದ ಕಂಗೊಳಿಸುತಿದ್ದುದನ್ನು ಗಮನಿಸಿದ ರಾಜನು ಪತ್ನಿಯನ್ನು ಹೀಗೆ ಕೇಳಿದನು: "ನಿತ್ಯವಾಗಿರುವ ಯೌವನ ನಿನಗೆಂತು ಬಂದಿತು?" "ಆಳ್ವಾರ್ರ ಕಟಾಕ್ಷದಿಂದ ನನಗೆ ಇದು ಲಭಿಸಿತು, ತಾವೂ ಅರಮನೆಗೆ ದಿನೂ ಉಪಾದಾನಕ್ಕೆ ಬರುವ ಕಣಿಕಣ್ಣನ್ ಎಂಬ ಭಾಗವತರ ಮೂಲಕ ಅವರ ಗುರುಗಳಾದ ಭಕ್ತಿಸಾರರನ್ನು ಆಶ್ರಯಿಸಿದರೆ ಇಂತಹ ಯೌವನ ಪ್ರಾಪ್ತಿಯಾಗುವುದು" ಎಂದು ಆಕೆ ರಾಜನಿಗೆ ಒದಲಿತ್ತಳು. ಒಡನೇ ಆ ಪಲ್ಲವರಾಯನು ಕಣಿಕಣ್ಣರನ್ನು ಕರೆಯಿಸಿ "ನಿಮ್ಮ ಗುರುಗಳನ್ನಿಲ್ಲಿಗೆ ಕರೆದುಕೊಂಡು ಬನ್ನಿರಿ; ನಾವು ಅವರ ಸೇವೆಮಾಡಬೇಕು" ಎಂದು ಆಣತಿಯಿತ್ತನು. "ನಮ್ಮ ಗುರುಗಳು ಯಾರ ಮನೆಗೂ ಬರುವುದಿಲ್ಲ" ಎಂದು ಬದಲಿತ್ತಾಗ ರಾಜನು "ನೀನಾದರೂ ನನ್ನ ಮೇಲೆ ಕಾವ್ಯವನ್ನು ರಚಿಸು" ಎಂದು ಕಣಿಕಣ್ಣರನ್ನು ಬಲಾತ್ಕರಿಸಿದನು. "ಶ್ರೀವೈಕುಂಠದಲ್ಲಿ ನೆಲಸಿರುವ ಶ್ರಿಯಃಪತಿಯ ಚೆಲುವಾದ ಪಾದವನ್ನು ಹಾಡಲು ನಾಲಗೆ ಇದೆ. ಆದ್ದರಿಂದ ನಾನು ಮನುಷ್ಯರನ್ನು ಹಾಡೆನು" ಎಂಬ ನನ್ನ ಗುರುಗಳ ಉಪದೇಶವನ್ನು ಮೀರಿ ನಾನು ನಿನ್ನನ್ನು ಹಾಡಲಾರೆನೆಂದು ಕಣಿಕಣ್ಣರು ಬದಲಿತ್ತಾಗ, "ಹಾಗಾದರೆ ನೀನು ನನ್ನ ನಾಡಿನಲ್ಲಿರಬೇಡ" ಎಂದು ಆ ದೊರೆ ಬೆಸಸಿದನು. ಕೂಡಲೇ "ಹಾಗೇ ಆಗಲಿ" ಎಂದು ಆ ಭಾಗವತರು ಅರಮನೆಯಿಂದ ತನ್ನ ಗುರುಗಳ ಬಳಿಗೆ ಬಂದು ಅವರಿಗೆ ಅರಮನೆಯಲ್ಲಿ ನಡೆದ ವೃತ್ತಾಂತವನ್ನು ತಿಳಿಸಿದರು. ಆಗ ಭಕ್ತವತ್ಸಲರಾದ ಆಳ್ವಾರರು ಇಂತೆಂದರು; "ನೀನಿಲ್ಲಿಂದ ಹೊರಟರೆ ನಾನಿಲ್ಲಿರುವೆನೋ? ನಾವು ಹೊರಟರೆ ನಮ್ಮ

ದೇವರು ತಾನೇ ಇಲ್ಲಿ ಮಲಗಿರುವರೋ ? ಅವರು ಹೊರಟರೆ ಬ್ರಹ್ಮಾದಿ ದೇವತೆಗಳಿಲ್ಲಿ ನೆಲಸು ವರೋ ?" ಆಮೇಲೆ ವೇಃಕಾದಲ್ಲಿ ಯೋಗನಿದ್ರೆಯಲ್ಲಿ ಪವಡಿಸಿರುವ ದೇವರ ಬಳಿ ಸಾರಿ ಆಳ್ವಾರರು ಇಂತೆಂದರು: "ಸುಂದರವಾದ ಕಾಂಚೀಪುರದಲ್ಲಿ ಪವಡಿಸಿರುವ ಮಣಿವಣ್ಣಾ! ಕಣಿಕಣ್ಣನು ಹೋಗುತ್ತಾನೆ; ನೀನಿಲ್ಲಿ ಮಲಗಬೇಡ. ನಿನ್ನಲ್ಲಿ ವಿಶ್ವಾಸವುಳ್ಳ, ಒಳ್ಳೆಯ ತಮಿಳಿ ನಲ್ಲಿ ಕವಿತೆಗಳನ್ನು ಹಾಡಬಲ್ಲ, ಕವಿಯಾದ ನಾನೂ ಹೋಗುತ್ತೇನೆ. ನೀನು ನಿನ್ನ ಸಹಸ್ರ ಫಣಾಮಣಿಮಂಡಿತವಾದ ನಾಗಶಯ್ಯೆಯನ್ನು ಸುತ್ತಿಕೊಳ್ಳಯ್ಯಾ!" ಇದನ್ನು ಕೇಳಿ ಆ ನಾಗಶಾಯಿ ಅವರು ಹೇಳಿದಂತೆ ಮಾಡಿ ತಾನು ಭಕ್ತಪರಾಧೀನನೆಂದು ವ್ಯಕ್ತಪಡಿಸಿದನು! ಆಗ ಕಾಂಚೀನಗರದ ಇತರ ಮಂದಿರಗಳಲ್ಲಿದ್ದ ಭಗವನ್ಮೂರ್ತಿಗಳೂ ಅವರನ್ನು ಹಿಂಬಾಲಿಸಿದರು. ರಾಮವಿರಹದಲ್ಲಿ ಕಳೆಗುಂದಿದ ಅಯೋಧ್ಯೆಯಂತೆ, ದೇವರಿಲ್ಲದ ಗುಡಿಯಂತೆ, ಹಾಳುಬಿದ್ದಂಗಡಿ ಯಂತೆ, ನಗರವೆಲ್ಲಾ ಕತ್ತಲಿನಿಂದ ಆವೃತವಾಗಿ ತೋರಿತು. ರಾಜನಿಗೂ ಮಂತ್ರಿಗಳಿಗೂ ಚಿಂತಾಸಂತತಿಯಿಂದ ವ್ಯಾಕುಲತೆ ಉಂಟಾಯಿತು. ಅವರು ಬಹಳವಾಗಿ ಮನನೊಂದು ಆಳ್ವಾ ರರೂ ಭಗವಂತನೂ ಸಪರಿವಾರರಾಗಿ ತಂಗಿದ್ದ **ಓರಿರುಕ್ಕೈ** ಎಂಬ ಗ್ರಾಮದ ಬಳಿಗೆ ಬಂದು ಕಣಿಕಣ್ಣರ ಪಾದಗಳಿಗೆ ನಮಿಸಿ ತಪ್ಪುಕಾಣಿಕೆಯಿತ್ತು "ನಮ್ಮಿಂದ ಅಪಚಾರವಾಯಿತು; ದಯೆಗೈದು ನಗರಕ್ಕೆ ಹಿಂತಿರುಗಿ ಅನುಗ್ರಹಿಸಬೇಕು" ಎಂದು ಮೊರೆಯಿಟ್ಟರು. ಆಗ ಕಣಿಕಣ್ಣರು ಊರಿಗೆ ಹಿಂತಿರುಗುವಂತೆ ಆಳ್ವಾರರಲ್ಲಿ ಬೇಡಿಕೊಂಡರು. ಆಗ ಶಿಷ್ಯಪ್ರಿಯರಾದ ಭಕ್ತಿಸಾರರು ಶಿಷ್ಯನಿಗಾಗಿ ಹಿಂತಿರುಗುವುದೇ ಸರಿ ಎಂದು ಸಂಕಲ್ಪಿಸಿ ಆಶ್ರಿತಪರತಂತ್ರನಾದ, ತಾವು ಹಿಂದೆ ಹೇಳಿದಂತೆ ಮಾಡಿದ ಭಗವಂತನನ್ನು ಕುರಿತು ಮತ್ತೆ ಹೀಗೆ ಬೇಡಿಕೊಂಡರು; "ಎಲ್ಲರೂ ಬಯಸುವಂತೆ ಚೆಲುವಾಗಿ ಇರುವ ಕಾಂಚೀಪುರದ ಮಣಿವಣ್ಣಾ! ನೀನು ಹಿಂದಿ ನಂತೆ ಅಲ್ಲೇ ಮಲಗಿಕೊಳ್ಳಬೇಕು. ಕಣಿಕಣ್ಣನು ಹೋಗುವುದನ್ನು ನಿಲ್ಲಿಸಿದನು; ಅಂದವಾಗಿ ತಮಿಳಿನಲ್ಲಿ ಹಾಡುವ ಕವಿಯಾದ ನಾನೂ ಹೋಗುವುದನ್ನು ತೊರೆದೆನು. ನೀನೂ ನಿನ್ನ ಚೆಲು ವಾದ ನಾಗಶಯನವನ್ನು ಹಾಸಿಕೊಳ್ಳಯ್ಯಾ!" ಈ ಮಾತಿನಂತೆ ಆ ಭಗವಂತನು "ಹಾಗೇ ಆಗಲಿ!" ಎಂದು ಆಳ್ವಾರರು ಹೇಳಿದಂತೆಯೇ ಮಾಡಿ, ಅದು ಎಲ್ಲಾ ಕಾಲಕ್ಕೂ ಎಲ್ಲರಿಗೂ ಗೋಚರವಾಗುವಂತೆ, ಎಡಗೈ ಕೆಳಗಿರುವಂತೆ ಪವಡಿಸಿದನು! ಭಗವಂತನು **ಅನನ್ಯಾಧೀನ** ನೆಂದು "ಪತಿಂ ವಿಶ್ವಸ್ಯ," "ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ" "ದೈವತಾನಾಂ ಪರಮಂ ಚ ದೈವತಂ," ಇತ್ಯಾದಿ ಶ್ರುತಿಗಳು ಘೋಷಿಸುತ್ತವೆ! ಆದರೆ ಭಗವಂತನಿಗೆ ಈ ಮೇಲ್ಮೆಗಿಂತ ತಾನು ಆಶ್ರಿತವತ್ಸಲ(ಭಕ್ತಪರಾಧೀನ)ನಾಗಿರುವುದೇ ಅಪೇಕ್ಷೆ ಎಂದು ಇತಿಹಾಸ ಪುರಾಣಗಳಲ್ಲಿ ಕೇಳಿಬರುವುದನ್ನು ಆಳ್ವಾರರು ಕಣ್ಣಾರ ಕಂಡು ಅನುಭವಿಸಿದರು. ಇದು ಅವರ ವಿಶೇಷ ಮಹಿಮೆ! ಹೀಗೆ ಆದರದಿಂದ ವೇಃಕಾವಿನಲ್ಲಿ ತನ್ನ ಹಾಸಿಗೆಯನ್ನು ಬಿಚ್ಚಿ ಮಲಗಿದ ಭಗವಂತನ ಸೌಲಭ್ಯವನ್ನು ನೆನೆದು "ತಿರುಚ್ಚಂದವಿರುತ್ತಂ" ಎಂಬ ಪ್ರಬಂಧದಲ್ಲಿ ಆಳ್ವಾರರು ಹೀಗೆ ಹಾಡಿದ್ದಾರೆ. "ಯೋಗನೀತಿಯನ್ನು ಅನುಸರಿಸುವವರ ಚಿಂತೆಯಲ್ಲಿ (ಮನದಲ್ಲಿ) ಸ್ಥಿರವಾಗಿ ನೆಲಸಿದ್ದು ಅವರ ದುಷ್ಕರ್ಮಗಳನ್ನು ತೀರಿಸುವ ದೇವದೇವನೇ, ಬೆಟ್ಟಗಳಂತೆ ಎತ್ತರ ವಾಗಿರುವ ಮಾಡಗಳಿಂದ ತುಂಬಿರುವ "**ಊರಹ**"[3]ದಲ್ಲಿ ನಿಂತೂ "**ಪಾಡಹ**"[4] ದಲ್ಲಿ ಕುಳಿತೂ "**ವೇಃಕಾ**[5]**ವಿ**"ನಲ್ಲಿ ಹಾಸಿಗೆಯ ಮೇಲೆ ಪವಡಿಸಿದುದೂ ಎಂತಹ ನೀರ್ಮೆ (ಸೌಲಭ್ಯ).

---

[3] ಊರಹಂ ಉಲಹಮಳನ್ದಾರ್ (ತ್ರಿವಿಕ್ರಮರ್ ಸನ್ನಿಧಿ ೬೩-೬೪ ಒಂದು)

[4] ಪಾಡಹಂ "ಪಾಂಡವದೂತ" ನ ಸನ್ನಿಧಿ (೧೮ ದಿವ್ಯದೇಶಗಳಲ್ಲಿ ಒಂದು)

[5] "ನೇಃಕಾ" ಯಥೋಕ್ತಕಾರಿ ಸನ್ನಿಧಿ; ಇಲ್ಲೇ ಯಾದವಪ್ರಕಾಶರ ಬಳಿ ಶ್ರೀ ರಾಮಾನುಜರು ವ್ಯಾಸಂಗ ಮಾಡುತ್ತಿದ್ದರೆಂದು "ಶ್ರೀ ರಾಮಾನುಜ ಚಂಪೂ' ತಿಳಿಸುತ್ತದೆ.

'ತಿರುವೇಕಾ'ದಲ್ಲಿ ಇಂದಿಗೂ ಪ್ರತಿವರ್ಷವೂ ಆ ಆಳ್ವಾರರ ತಿರುನಕ್ಷತ್ರೋತ್ಸವದ ದಿನದಲ್ಲಿ **"ಓರಿರುಕ್ಕೈ"** (ಓರಿಕೆ ಎಂದು ಈಗ ಹೇಳುತ್ತಾರೆ) ಉತ್ಸವ ಜರುಗುತ್ತದೆ. ತಿರುಮಳಿಶೈಯಲ್ಲಿ ಹತ್ತು ದಿನಗಳೂ ಉತ್ಸವ ಸಂಭ್ರಮವಾಗಿ ನಡೆಯುತ್ತದೆ. ಮಕರಮಾಸದಲ್ಲಿ ಮಖಾನಕ್ಷತ್ರದ ದಿನ ಆಳ್ವಾರರ ಉತ್ಸವ ವಿಗ್ರಹವನ್ನು ಆಳ್ವಾರರು ಸಿರಿಯಾಳನಿಗೆ ಸಿಕ್ಕಿದ ಪೊದೆಯಿದ್ದ ತಾಣದಲ್ಲಿ ರಚಿಸಿರುವ ಮಂಟಪಕ್ಕೆ ಬಿಜಮಾಡಿಸಿಕೊಂಡು ಬರುವರು. ಆಳ್ವಾರರಿಗೆ ಅಭಿಷೇಕ, ಅಲಂಕಾರ, ಪೂಜೆ, ನಿವೇದನ ಆದಮೇಲೆ "ತಿರುಚ್ಚಂದವಿರುತ್ತಂ" ಪ್ರಬಂಧವನ್ನು ಅನುಸಂಧಾನ ಮಾಡುವರು. ಸಂಜೆ ಬಹಳ ವೈಭವದಿಂದ ಹಿಂದೆ ವೇದಗೋಷ್ಠಿಯೂ ಮುಂದೆ 'ನಾನ್ಮುಹನ್‌ತಿರುವಂದಾದಿ' ಗೋಷ್ಠಿಯೂ ಸಂಸ್ಕೃತ ದ್ರಾವಿಡ ಭಾಷೆಗಳಲ್ಲಿ ದೇವರ ಕೀರ್ತನೆಗಳನ್ನು ಹೇಳುತ್ತಿದ್ದರೆ, ಆಳ್ವಾರರ ಮುಂದೆ ಸಂಗೀತಗಾರರೂ ರಸಿಕರೂ ನೆರೆದಿರುವರು. ಬಾಣ ಬಿರುಸುಗಳೊಡನೆ ಆಳ್ವಾರರನ್ನು ಊರಿಗೆ ಬಿಜಮಾಡಿಸಿಕೊಂಡು ಬರುವರು. ವೈರಮುಡಿ ಉತ್ಸವದ ದಿನ ರಾತ್ರಿ ಚೆಲುವರಾಯನ ಮುಂದೆ ಮೇಲುಕೋಟೆಯಲ್ಲಿ ಈ ತಿರುವಂದಾದಿಯನ್ನು ಅಧ್ಯಾಪಕರು ಹಾಡುತ್ತಾರೆ. ಊರನ್ನೂ ನಾಡನ್ನೂ ಲೋಕವನ್ನೂ ತಮ್ಮಂತೆ ಮಾಡುವ ಘನೋದ್ದೇಶದಿಂದ ಅವತರಿಸಿದ ಇಂತಹ ಮಹಾನುಭಾವರ ಜನ್ಮೋತ್ಸವವನ್ನು ಆಚರಿಸುವ ಶ್ರೀವೈಷ್ಣವ ಸಂಪ್ರದಾಯ ಎಲ್ಲರಿಗೂ ಮೇಲ್‌ಪಂಕ್ತಿಯಾಗಿದೆ. "ಪ್ರತ್ಯಕ್ಷೇ ಗುರುವಃ ಸ್ತುತ್ಯಾಃ," "ಯಥಾ ದೇವೇ ತಥಾ ಗುರೌ" ಎಂಬ ಪ್ರಮಾಣಗಳನ್ನನುಸರಿಸಿ ದೇವರಂತೆ ಅವನ ಭಕ್ತರನ್ನು, ಆಚಾರ್ಯರನ್ನು, ಅತಿಥಿಗಳನ್ನು ಪೂಜಿಸಬೇಕೆಂಬ ಹಿರಿಯ ತತ್ವ ಇದರಲ್ಲಡಗಿದೆ. ಕೃತಜ್ಞತೆಯ ಕರ್ತವ್ಯ ನಿರ್ವಾಹದೊಡನೆ ಭಕ್ತರ ಕೃತಿಗಳ ಸಂರಕ್ಷಣೆ ಈ ಉತ್ಸವದಿಂದ ಸಿದ್ಧಿಸುತ್ತದೆ. 'ಲೋಕಾನುಗ್ರಹವಾಗಲಿ!' ಎಂದು ಭಗವಂತನೂ ಆಳ್ವಾರುಗಳೂ ಆಚಾರ್ಯರುಗಳೂ ಅರ್ಚಾರೂಪವನ್ನು ತಾಳಿ ನಮ್ಮ ಪೂಜೆಯನ್ನು ಸ್ವೀಕರಿಸಿ ನಮ್ಮನ್ನು ಸಂರಕ್ಷಿಸುತ್ತಿರುವರು ಎಂಬ ರಾಮಾನುಜದರ್ಶನದ ಮನೋಹರವಾದ ಸಂದೇಶವನ್ನು ಈ ಉತ್ಸವಗಳು ಸಾರುತ್ತಿವೆ!

'ಯಥೋಕ್ತಕಾರಿ' ಸನ್ನಿಧಿಯಲ್ಲಿ ಕೊಂಚಕಾಲವಿದ್ದು ಅಲ್ಲಿಂದ ಭಕ್ತಿಸಾರಮುನಿಗಳು ಕಾವೇರೀ ತೀರದಲ್ಲಿರುವ **ತಿರುಕ್ಕುಡಂದೈ** (ಕುಂಭಕೋಣಂ) ಎಂಬ ದಿವ್ಯದೇಶಕ್ಕೆ ಹೋಗಿ ಅಲ್ಲಿ ಬಿಜಮಾಡಿಸಿರುವ **ಕೋಮಳವಲ್ಲಿಕೆ** ಎಂಬ ಹೆಸರಿನ ಶ್ರೀದೇವಿಯನ್ನು ವರಿಸಲು ತೇರಿನಲ್ಲಿ ಪರಮಪದದಿಂದ ಬಂದ ಎಷ್ಟು ಅನುಭವಿಸಿದರೂ ತೃಪ್ತಿಯಾಗದಂತಹ ಚೆಲುವಿನ ಗಣಿಯಾದ, ಆದುದರಿಂದ "ಆರಾವಮುದೇ!" ಎಂದು ನಮ್ಮಾಳ್ವಾರರು ಬಾಯಾರ ವರ್ಣಿಸಿ ನುತಿಸಿ ಶರಣಾಗತಿ ಮಾಡಿರುವ, ಶಾರ್ಙ್ಗಪಾಣಿ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ, ಭಗವಂತನನ್ನು ಸಂದರ್ಶಿಸಲು ಹೊರಟರು. ದಾರಿಯಲ್ಲಿ "ಪೆರುಂಪುಲಿಯೂರ್" ಎಂಬ ಹಳ್ಳಿಯಲ್ಲಿ ಒಂದು ದಿಣ್ಣೆಯಮೇಲೆ ಕುಳಿತುಕೊಂಡು ಇವರು ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದರು. ಅದನ್ನು ನೋಡಿ ಸಮೀಪದಲ್ಲಿ ವೇದಾಧ್ಯಯನ ಮಾಡುತ್ತಿದ್ದ ಕೆಲವರು ಇವರು ಅವರ್ಣೀಯರೆಂದು ನೆನೆದು ವೇದಪಾರಾಯಣವನ್ನು ನಿಲ್ಲಿಸಿದರು. ಆಮೇಲೆ ಮತ್ತೆ ಅವರಿಗೆ ವೇದವನ್ನು ಹೇಳತೊಡಗಿದಾಗ ಹಿಂದೆ ಎಲ್ಲಿ ನಿಲ್ಲಿಸಿದ್ದೆವೆಂಬುದರ ನೆನಪೇ ಬರಲಿಲ್ಲ. ಇದನ್ನು ಆಳ್ವಾರರು ಗಮನಿಸಿ ತಾವು ಮೇದರ ಮನೆಯಲ್ಲಿ ಬೆಳೆದುದರಿಂದ ವೇದವನ್ನು ಹೇಳಬಾರದೆಂದು ಕರಿಯ ಬತ್ತವನ್ನು ತಮ್ಮ ಉಗುರಿನಿಂದ ಸೀಳಿ (ಸನ್ನೆಯನ್ನುಮಾಡಿ) ಆ ವಾಕ್ಯದ ಅರ್ಥವನ್ನು ಸೂಚಿಸಿದರು. ಇದನ್ನು ನೋಡಿ "ಕೃಷ್ಣಾನಾಂ ವ್ರೀಹೀಣಾಂ ನಖನಿರ್ಭಿನ್ನಂ" ಎಂಬ ಶ್ರುತಿವಾಕ್ಯ ಆ ದ್ವಿಜರ ಸ್ಫೂರ್ತಿಗೆ ಬಂತು. ಇದರಿಂದ ಮಹಾತ್ಮರಲ್ಲಿ ಅಪಚಾರವೆಸಗಬಾರದೆಂದು ತಿಳಿದು ಬರುವುದಲ್ಲದೆ ನಿಜವಾದ ಭಕ್ತರು ವರ್ಣಾಶ್ರಮಧರ್ಮವನ್ನು ಮೀರುವುದಿಲ್ಲವೆಂದು ವ್ಯಕ್ತವಾಗುತ್ತದೆ. "ನ ಚಲತಿ ನಿಜವರ್ಣಧರ್ಮತೋ ಯಃ ತಮವೈಹಿ ವಿಷ್ಣುಭಕ್ತಂ" ಎಂಬುದೇ ಇದಕ್ಕೆ ಆಧಾರ. ಭಗವದ್‌ಭಕ್ತರು ಯಾವ ವರ್ಣಕ್ಕೆ ಸೇರಿದ್ದರೂ ಅವರು ಎಲ್ಲರಿಗೂ ಪೂಜ್ಯರೆಂಬ ಮಹಾತತ್ವವನ್ನು ಭಗವಂತನೇ ಉಪದೇಶಿಸಿರುವನೆಂದು ತೊಂಡರಡಿಪ್ಪೊಡಿಯಾಳ್ವಾರರು

" ತಿರುಮೂಲೈ " (೪೨ ನೇ ಪದ್ಯ) ಯಲ್ಲಿ ಹಾಡಿದ್ದಾರೆ. ಈ ಸಾರಾರ್ಥವನ್ನರಿತು ಆ ವೈದಿಕರು ಆಳ್ವಾರರಿಗೆ ಸಾಷ್ಟಾಂಗ ಪ್ರಣಾಮಗೈದು ಅವರನ್ನು ಅನುವರ್ತಿಸಿ ಕೃತಾರ್ಥರಾದರು. ಮತ್ತು ಆ ಊರಿನಲ್ಲಿರುವ ದೇವಾಲಯದ ಅರ್ಚಾಮೂರ್ತಿ ಆಳ್ವಾರರಿಗೆ ಅಭಿಮುಖವಾಗಿರುತ್ತಿದ್ದ ಅದ್ಭುತವನ್ನು ಅರ್ಚಕರು ಗಮನಿಸಿ ಕೆಲವರಿಗೆ ತೋರಿಸಿದರು. ಅವರೆಲ್ಲರೂ ಅಲ್ಲಿ ಯಾಗಮಾಡುತ್ತಿದ್ದ " ಪೆರುಂಪುಲಿಯೂರಡಿಗಳ್ " ಎಂಬ ಭಕ್ತರ ಯಾಗಶಾಲೆಗೆ ಹೋಗಿ ಈ ಅಚ್ಚರಿಯನ್ನು ತಿಳಿಸಿದರು. ಕೂಡಲೇ ಆ ದೀಕ್ಷಿತರು " ಕಂಡೆವು ! ಕಂಡೆವು ! ಕಣ್ಣಿಗೆ ಪ್ರಿಯವಾದುದನ್ನು ಕಂಡೆವು ! " ಎಂದು ಹಾಡಿರುವ ನಮ್ಮಾಳ್ವಾರರಂತೆ ಇಂತಹ ಮಹಾನುಭಾವರ ದರ್ಶನವೇ ಕಂಗಳನ್ನು ಪಡೆದುದಕ್ಕೆ ಫಲವೆಂದು ನಿಶ್ಚಯಿಸಿ, ಸಂಭ್ರಮದಿಂದ ಆಳ್ವಾರರ ಬಳಿಸಾರಿ ನಮಿಸಿ ಅವರನ್ನು ತಮ್ಮ ಯಾಗಶಾಲೆಗೆ ಕರೆದುಕೊಂಡು ಬಂದು ಅಗ್ರಪೂಜೆಯನ್ನು ಅವರಿಗೆ ಸಲ್ಲಿಸಿದರು. ಅದನ್ನು ಕಂಡು ಅಧ್ವರ್ಯ ಮೊದಲಾದ ಕರ್ಮಠರು—ಧರ್ಮನಂದನನ ರಾಜಸೂಯಯಾಗದಲ್ಲಿ ಕೃಷ್ಣನಿಗೆ ಮಾಡಿದ ಅಗ್ರಪೂಜೆಯನ್ನು ವಿರೋಧಿಸಿ ಕೃಷ್ಣನನ್ನು ಹಳಿದ ಶಿಶುಪಾಲನಂತೆ—" ಇವರನ್ನು ಕರೆದುಕೊಂಡು ಬಂದು ಯಾಗವೆಲ್ಲಾ ಹಾಳಾಗಿಹೋಯಿತು " ಎಂದು ಮೊದಲಾಗಿ ಆಳ್ವಾರರನ್ನು ನಿಂದಿಸಿದರು. ಇದರಿಂದ ವ್ಯಾಕುಲಾಂತಃಕರಣರಾದ ಆ ದೀಕ್ಷಿತರು " ಇವರು ಬಾಯಿಗೆ ಬಂದಂತೆ ನುಡಿಯುವುದನ್ನು ನಾನು ಕೇಳಲಾರೆನು " ಎನ್ನುತ್ತಾ ಆಳ್ವಾರರ ಕಡೆ ನೋಡಿದರು. " ಇನ್ನು ನಮ್ಮ ನಿಜರೂಪವನ್ನು ಪ್ರಕಟಿಸದೆ ಇರಬಾರದು " ಎಂದು ನಿಶ್ಚಯಿಸಿ ಆಳ್ವಾರರು ಅಷ್ಟಾಂಗಯೋಗಸಿದ್ಧರಾದ ಮಹಾತ್ಮರ ಹೃದಯಕಮಲದಲ್ಲಿ ಸಕಲ ಪರಿವಾರದೊಡನೆ ನೆಲಸಿರುವ ಸರ್ವಾಂತರ್ಯಾಮಿಯಾದ ಭಗವಂತನನ್ನಿಂತು ನುತಿಸಿದರು :— " ಚಕ್ರಪಾಣೀ ! ಈ ಕರ್ಮಠರ ಬಾಯಡಗುವಂತೆ ನೀನು ನನ್ನ ಹೃದಯದಲ್ಲಿರುವಂತೆಯೇ ಇವರಿಗೆ ನಿನ್ನ ಸಂದರ್ಶನವನ್ನಿತ್ತು ಅನುಗ್ರಹಿಸಲಾರೆಯಾ ? " ಆಗ ಪೆರಿಯಾಳ್ವಾರ್ ಹಾಡಿರುವಂತೆ " ನಾಗಶಯನ, ಕ್ಷೀರಸಾಗರ, ಅರವಿಂದನಿವಾಸಿನೀ ಸಹಿತನಾಗಿ ಹಲವಾರು ಬೆಳ್ದೆರೆಗಳು ಬಂದು ಪಾದಕ್ಕೆ ಶೈತ್ಯೋಪಚಾರಮಾಡುವಂತೆ ಹಾಲ್ಗಡಲಲ್ಲಿ ಪವಡಿಸಿರುವಂತೆ " ಪೀತಾಂಬರವನ್ನುಟ್ಟ ಪರಮಗುರುವಾದ, ವೇದವೇದ್ಯನಾದ ಜಗದ್ರಕ್ಷದೀಕ್ಷಿತನಾದ ಪುರುಷೋತ್ತಮನು ಆಳ್ವಾರರ ಹೃದಯಕಮಲದಲ್ಲಿ ನೆಲಸಿರುವ ಪರಿಯನ್ನು ಅಲ್ಲಿದ್ದವರೆಲ್ಲರೂ ಕಣ್ಣಾರೆ ಕಾಣುವಂತೆ ಪ್ರಕಟಿಸಿದನು. ಹಿಂದೆ ಅರ್ಜುನನ ನೆಪದಿಂದ ಭಾರತ ಸಮರದಲ್ಲಿ ಹೋರಾಡಲು ನೆರೆದಿದ್ದ ವೀರರಿಗೂ ಆ ಯುದ್ಧವನ್ನು ನೋಡಲು ಬಂದಿದ್ದ ದೇವತೆಗಳಿಗೂ ವಿಶ್ವರೂಪವನ್ನು ಪ್ರಕಟಿಸಿದಂತೆ ಈ ಕಲಿಯುಗದಲ್ಲಿಯೂ " ಜಂಗಮಶ್ರೀವಿಮಾನಾನಿ ಹೃದಯಾನಿ ಮನೀಷಿಣಾಂ " (ಜ್ಞಾನಿಗಳ, ಭಕ್ತರ, ಹೃದಯಗಳು ಭಗವಂತನ ಚರ-ಮಂದಿರಗಳು) ಎಂಬ ಹಿರಿಯ ಸತ್ಯವನ್ನು ಈ ಭಕ್ತಿಸಾರ ಮುನಿಗಳ ನೆಪದಿಂದ ನಾಡಿಗೆ ತಿಳಿಸಿ ಭಗವಂತನು ಅನುಗ್ರಹಿಸಿದನು. ಆಗ ಅಲ್ಲಿ ನೆರೆದಿದ್ದವರೆಲ್ಲರೂ ಆಳ್ವಾರರಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿ, ಅವರನ್ನು ಬ್ರಹ್ಮರಥದಲ್ಲಿ ಕುಳ್ಳಿರಿಸಿ, ಊರಸುತ್ತ ಮೆರೆವಣಿಗೆಯಲ್ಲಿ ತಂದು ಗೌರವಿಸಿ, ಅವರ ಕ್ಷಮೆಯನ್ನು ಬೇಡಿಕೊಂಡರು. ಮತ್ತು ಅವರಲ್ಲಿ ಹಲವರು ಆಳ್ವಾರರ ಪಾದವನ್ನು ಆಶ್ರಯಿಸಿ ಅವರಿಂದ ಜ್ಞಾನೋಪದೇಶವನ್ನು ಪಡೆದು ಧನ್ಯರಾದರು.

ಬಳಿಕ ಅಲ್ಲಿಂದ ಆಳ್ವಾರರು ಬೇಗ ' ಕುಡಂದೈ ' ಕ್ಷೇತ್ರವನ್ನು ಸೇರಿ ಅಲ್ಲಿ ಹಾವಿನ ಮೇಲೆ ಪವಡಿಸಿರುವ ಭಗವಂತನ ಚೆಲುವನ್ನು ಕಂಡು ಹೃಷ್ಟರಾಗಿ ಅವನಿಗೆ ಮಂಗಲಾಶಾಸನಮಾಡಿ, ಭಗವಂತನ ವಿಶೇಷ ಕಟಾಕ್ಷಕ್ಕೆ ಪಾತ್ರರಾಗಿ, ಅಲ್ಲಿಯೇ ಬಹಳಕಾಲ ನೆಲಸಿ ಭಗವದನುಭವವನ್ನು ಮಾಡುತ್ತಿದ್ದರು. ಅವರ ಭಗವದನುಭವ ಪರೀವಾಹವೇ ಅವರ " ತಿರುಚ್ಚಂದವಿರುತ್ತಂ " ಮತ್ತು " ನಾನ್ಮುಹನ್ ತಿರುವಂದಾದಿ " ಎಂಬ ಎರಡು ದಿವ್ಯಪ್ರಬಂಧಗಳು. ಇವುಗಳಲ್ಲಿ ಮೊದಲನೆಯದರಲ್ಲಿ ವಿವಿಧ ಛಂದಸ್ಸುಗಳಲ್ಲಿ ಭಗವಂತನ ಹಿರಿಮೆ-ಗುಣ-ಸ್ವರೂಪ ಮೊದಲಾದುವನ್ನು ತಿಳಿಯಾದ ಮಾತಿನಲ್ಲಿ ಕಿವಿಗೆ ಇಂಪಾಗಿರುವ ಶೈಲಿಯಲ್ಲಿ ತಿಳಿಸುವ ನೂರ ಇಪ್ಪತ್ತು

ಪಾಶುರ (ಪದ್ಯ) ಗಳಿವೆ; ಎರಡನೆಯದರಲ್ಲಿ ಸರಳವಾದ ವೆಣ್ಬಾಛಂದಸ್ಸಿನಲ್ಲಿ ರಚಿತವಾದ ತೊಂಬತ್ತಾರು ಪುಟ್ಟ ಪದ್ಯಗಳಿವೆ. ಇವೆರಡೂ ಅವುಗಳನ್ನು ಹಾಡುವವರ ಮತ್ತು ಕೇಳುವವರ ನಾಲಗೆಗೂ ಕಿವಿಗೂ ಹೃನ್ಮನಗಳಿಗೂ ರಸದ ಊಟೆಯಂತಿವೆ; ಅನರ್ಘ್ಯವಾದ ಕಂಠಭೂಷಣವಾಗಿ, ವೈಕುಂಠಪ್ರಿಯರಿಗೆ ಬಾಳದೀವಿಗೆಯಾಗಿ, ಕಂಗೊಳಿಸುತ್ತಿವೆ.

ಇವರು ತಿರುಕ್ಕುಡಂದೈಯಲ್ಲಿ ಪವಡಿಸಿರುವ ಪರಮಾತ್ಮನನ್ನು ಕುರಿತು ಹೀಗೆ ಹಾಡಿದಾರೆ :—

"ನಡೆದ ಕಾಲ್ಗಳ್ ನೊಂದವೋ? ನಡುಗೆ ಭೂಮಿ, ಹಂದಿಯಾಗಿ ಎತ್ತಿದೊಡಲು ಅಲುಗದೋ? ತಡೆವ ಹಿರಿಯ ಗಿರಿಯ ಬನವ ಹಾಯ್ದು ಬರುವ ಕಾಲುವೆಗಳುಳ್ಳ ಹರಹಿನ ಕಾವೇರಿಯ ಕರೆಯ ಕುಡಂದೈಯೊಳ್ ಕೆಡೆದ ಪರಿಯನೆದ್ದು ಕುಳಿತುಪೇಳು, ಬಾಳು! ಕೇಶವಾ!"—(ತಿರುಚ್ಚಂದವಿರುತ್ತಂ—೬೧) ಆಳ್ವಾರರ ಈ ಮಾತುಗಳನ್ನು ಕೇಳಿ ಶಾರ್ಙ್ಗಪಾಣಿಯು ಅರ್ಚಾವತಾರ ಸಮಾಧಿಯ ಮರ್ಯಾದೆಯನ್ನೂ ಅತಿಕ್ರಮಿಸಿ ಅವರು ಬೇಡಿದಂತೆ ತನ್ನ ನಾಗಶಯನದಿಂದ ಎದ್ದು ಕುಳಿತುಕೊಳ್ಳತೊಡಗಿದನಂತೆ! ಅದರಿಂದ ಆಳ್ವಾರರು ಭಗವಂತನಿಗೆ ಮತ್ತಷ್ಟು ಆಯಾಸವಾದೀತು ಎಂದು ಅತಿಶಂಕಿಸಿ "ನಿನ್ನ ಸೊಬಗು ಅಳಿಯದೇ ಇರಲಿ!" ಎಂದು ಅವನಿಗೆ ಮಂಗಲಾಶಾಸನ ಮಾಡಿದರು. 'ಹಾಗೇ ಆಗಲಿ'! ಎಂದು 'ಆ ಕಾಲದ ಚೆಲುವನ್ನು ಎಲ್ಲರೂ ನೋಡಲಿ' ಎಂದು ಭಗವಂತನು ಕುಂಭಕೋಣದಲ್ಲಿ ಪವಡಿಸಿದಾನೆ. ಆದುದರಿಂದ ಈ ಮೂರ್ತಿಯನ್ನು "ಉತ್ಥಾನಶಾಯಿ" ಎಂದು ವರ್ಣಿಸುತ್ತಾರೆ. ಇದೇ ರೀತಿಯಲ್ಲಿ ಮದರಾಸಿನಲ್ಲಿ ಶ್ರೀ ಪಾರ್ಥಸಾರಥಿ ಕೈರವಿಣೀತೀರದಲ್ಲಿ ಮಂದಿರದ "ಮನ್ನಾಥ" (ರಂಗನಾಥ)ನನ್ನು ಆಳ್ವಾರರು (ತಿರುವಂದಾದಿ—೩೫) ಹೀಗೆ ವರ್ಣಿಸಿದಾರೆ :—"ಪಾದದಿಂದ ಲೋಕವನ್ನಳೆದ ಬಳಲಿಕೆಯೇನೋ? ಸುಮ್ಮನೆ (ಅಲ್ಲಾಡದೆ), ಮಾತಾಡದೆ, ಮಲಗಿರುವನಲ್ಲಾ! ನೀಳ್ದೆರೆಗಳು ಬಂದು ಅಪ್ಪಳಿಸುವ ಹಿರಿಯಮಯಿಲೆ ಮಾವಲ್ಲಿಕ್ಕೇಣಿಯವನು, ಐದುತಲೆಯ ಮತ್ತು ಬಾಯಿನ ನಾಗದ ಮೇಲೆ ಮಲಗಿರುವವನು." ತೀರ್ಥಯಾತ್ರೆಯಲ್ಲಿ ಈ ಆಳ್ವಾರರಿಗೆ ಮೊದಲಿಂದಲೂ ಬಹಳ ಆಸಕ್ತಿ ಎಂದು ಮೇಲೆ ಹೇಳಿದೆ. ಇವರು ನಮ್ಮ ಕರ್ಣಾಟಕ ದೇಶಕ್ಕೂ ದಯಮಾಡಿಸಿ ದಕ್ಷಿಣ ದಿಗ್ದೇವಿಗೆ ತಿಲಕದಂತೆ ಕಂಗೊಳಿಸುವ, "ಕರ್ಣಾಟಕದ ಕರ್ಣಾಲಂಕಾರ"ವೆಂದೂ "ಸಂಯಮಿಸಾರ್ವಭೌಮ ವಿಜಯಸ್ಥಾನ"ವೆಂದೂ ವೇದಾನ್ತ ದೇಶಿಕರು ವರ್ಣಿಸಿರುವ, ದಕ್ಷಿಣ ಬದರಿಕಾಶ್ರಮ, ನಾರಾಯಣಾದ್ರಿ, ವೇದಾದ್ರಿ, ಯಾದವಾದ್ರಿ, ಯತಿಶೈಲ, ಇಂದಿರಾಕ್ಷೇತ್ರವೆಂದು ಪುರಾಣಗಳಲ್ಲಿ ವರ್ಣಿತವಾಗಿರುವ ಶ್ರೀ ದತ್ತಾತ್ರೇಯ, ಶ್ರೀರಾಮಚಂದ್ರ, ಶಾಂಡಿಲ್ಯ, ಪರಾಶರ, ಮೈತ್ರೇಯ, ವ್ಯಾಸ, ನಾರದಾದಿ ಮಹಾಪುರುಷರ ಮತ್ತು ಭಗವದ್ರಾಮಾನುಜಾಚಾರ್ಯರ ಪಾದರೇಣುಗಳಿಂದ ಪವಿತ್ರವಾಗಿರುವ "ತಿರುನಾರಾಯಣಪುರಂ" ಎಂದು ತಮಿಳುನಾಡಿನವರು ಆದರಿಸುವ, ಮೇಲುಕೋಟೆಗೂ ಭೇಟಿಯಿತ್ತು, ಅದರ ಉತ್ತರದಲ್ಲಿರುವ ವೈಕುಂಠಗಂಗಾ (ತೊಟ್ಟಿಲ್‌ಮಡು) ಎಂಬ ತೊರೆಯ ಬಳಿ ಬಹುಕಾಲ ನಾರಾಯಣನ ಪದವನ್ನು ಧ್ಯಾನಿಸುತ್ತಾ ಮುಕ್ತಿಯನ್ನು ಪಡೆದರೆಂದು ಶ್ರೀ ಯಾದವಗಿರಿ ಮಾಹಾತ್ಮ್ಯದ ಈ ಶ್ಲೋಕದಿಂದ ತಿಳಿದು ಬರುತ್ತದೆ :—

ಭಕ್ತಿಸಾರೋ ಮಹಾಯೋಗೀ ಮತ್‌ಪದೈಕಸ್ತುತಿವ್ರತಃ |
ತತ್ರತ್ಯೋ ಮತ್‌ಪದಂ ಧ್ಯಾಯನ್ ಚಿರಂ ವೈಕುಂಠಮಾಪ ಸಃ ||

ಈ ಮಹಾತ್ಮರನ್ನು ಕುರಿತ ಈ ತನಿ ಪದ್ಯಗಳು ಸಂಗ್ರಹವಾಗಿ ಇವರ ವೈಭವವನ್ನು ತಿಳಿಸುತ್ತವೆ :

ಶಕ್ತಿಪಂಚಮಯವಿಗ್ರಹಾತ್ಮನೇ
ಶುಕ್ತಿಹಾರಜಿತಚಿತ್ತಹಾರಿಣೇ |
ಮುಕ್ತಿದಾಯಕಮುರಾರಿಪಾದಯೋಃ
ಭಕ್ತಿಸಾರಮುನಯೇ ನಮೋನಮಃ || ೧ ||

ಮಖಾಯಾಂ ಮಕರೇಜಾತಂ ಚಕ್ರಾಂಶಂ ಭುರ್ಗವೋದ್ಭವಂ |
ಮಹೀಸಾರಪುರಾಧೀಶಂ ಭಕ್ತಿಸಾರಮಹಂ ಭಜೇ || ೨ ||

ಹೀಗೆ ಅನ್ನಾಹಾರಗಳಿಲ್ಲದೆ ಕೇವಲ ಕ್ಷೀರಪಾನ ಮಾಡುತ್ತಾ ಪರಮಪದದ ದಿವ್ಯಸೂರಿಗಳಂತೆ ಬೆಳಗುತ್ತಿದ್ದ ಪಂಚಶಕ್ತಿಮಯವಾದ ದೇಹದೊಡನೆ ಈ ಭಾಗವತೋತ್ತಮರು ಭಗವದನುಭವಪರಾಯಣರಾಗಿ ಬಹುಕಾಲ (ನಾಲ್ಕುಸಾವಿರದ ಏಳುನೂರು ವರ್ಷಗಳೆಂದು ಸಂಪ್ರದಾಯ ತಿಳಿಸುತ್ತದೆ) ಈ ಲೋಕದಲ್ಲಿ ನೆಲಸಿ ತಮ್ಮ ಎರಡು ದಿವ್ಯ ಪ್ರಬಂಧಗಳಿಂದ ತತ್ವ-ಹಿತ ಪುರುಷಾರ್ಥಗಳ ನಿಜವಾದ ಸ್ವರೂಪವನ್ನು ಪ್ರಕಟಿಸಿ ನಾಡಿಗೆ ಪರಮೋಪಕಾರ ಮಾಡಿ ಚಿರಸ್ಮರಣೀಯರಾಗಿರುವರು. ತಪಸ್ವಿ ಕುಲತಿಲಕರೂ ತತ್ವದರ್ಶಿ ಜ್ಞಾನಿಗಳೂ ಭಕ್ತಿಸಾರರೂ ಆದ ಈ ಮಹಾತ್ಮರ ಜೀವನವು ಸರ್ವಧರ್ಮ ಸಮನ್ವಯಾಚಾರ್ಯರಾದ ಶ್ರೀ ರಾಮಕೃಷ್ಣ ಪರಮಹಂಸರ ನೆನಪನ್ನು ತರುತ್ತದೆ. ಶ್ರೀ ರಾಮಕೃಷ್ಣರು ಆಧುನಿಕ ಕಾಲದಲ್ಲಿ ನಾನಾ ದರ್ಶನಗಳನ್ನು ಅನುಷ್ಠಾನಮಾಡಿ ಎಲ್ಲಾ ಮತಗಳ ಸಾರವೂ ಒಂದೇ ಎಂದು ತಿಳಿದುಕೊಂಡು ಲೋಕದ ಜನರಿಗೆ ತಮ್ಮ ಅಂದವಾದ ವಚನಗಳಿಂದ ಉತ್ತಮ ಜೀವನಕ್ಕೆ ಹಾದಿಯನ್ನು ತೋರಿಸಿದಂತೆ ಕಲಿಯುಗದ ಆದಿಯಲ್ಲಿ ಭಕ್ತಿಸಾರ ಮುನಿಗಳು ಪ್ರಾಚೀನ ಕಾಲದ ನಾನಾ ದರ್ಶನಗಳನ್ನು ಅಭ್ಯಾಸಮಾಡಿ, ವಿಮರ್ಶಿಸಿ, ವೇದೋಕ್ತ ಭಕ್ತಿಮಾರ್ಗವೇ ಸತ್ಯವೆಂದು ಮನಗಂಡು ಅದನ್ನು ತಮ್ಮ ಪ್ರಬಂಧಗಳ ಮೂಲಕ ಸಾರಿದರು. ಈ ಪ್ರಬಂಧಗಳ ಸಾರಾಂಶದೊಡನೆ ಈ ಲೇಖನವನ್ನು ಮುಗಿಸಬಹುದು :—

(೧) "ನಿಜವನ್ನು ಹೇಳಬೇಕಾದಲ್ಲಿ ಹೇಳುವೆನು, ಕೇಳಿರಿ :—ಹೂದೇವಿ (ಶ್ರೀ) ಮತ್ತು ನೆಲದೇವಿ (ಭೂ)ದೇವಿಯರು ; ಮತ್ತು ಹೂವಿನಲ್ಲಿ ವಾಸಿಸುವ ನಾಲ್ಮೊಗನು ಮಗನು ; ಅವನ ಮಗನು ಅರ್ಧನಾರೀಶ್ವರನಾದ ವೃಷಭವಾಹನನು. ವೇದಶಾಸ್ತ್ರವು ಹೇಳುವುದು ಸತ್ಯವಲ್ಲದೆ ಮತ್ತೊಂದು ಸತ್ಯವಲ್ಲ"—ತಿರುಚ್ಚಂದವಿರುತ್ತಂ, ೭೨.

(೨) "ನಾಲ್ಮೊಗನನ್ನು ನಾರಾಯಣನು ಪಡೆದನು. ನಾಲ್ಮೊಗನೂ (ಸಂಸಾರ ಪ್ರವರ್ತಕರಲ್ಲಿ) ಪ್ರಮುಖನಾಗಿ ಶಂಕರನನ್ನು ಪಡೆದನು (ಸಂಸಾರ ನಿವರ್ತಕರಲ್ಲ) ಪ್ರಮುಖನಾಗಿ ಅಂತ್ಯಾದಿ ರೂಪದ ಪ್ರಬಂಧ ಆಳವಾದ ಪುರುಳನ್ನು (ಸಾರಾರ್ಥವನ್ನು) ತಿಳಿಯಪಡಿಸಿರುವೆನು ; ಚೆಲ್ಲದೆ ಇದನ್ನು ನೀವು ಆರೈದುಕೊಳ್ಳಿರಿ. ಆರೈದಲ್ಲಿ ದೇವನೊಬ್ಬನೇ ಎನ್ನುವರು ; ಅವನ ಹಿರಿಮೆಯನ್ನಾರೂ ಅರಿಯರು. ಆರಯ್ಯುವ ಪುರುಳ ಕೊನೆಯೂ ಇಷ್ಟೇಯೇ !—ಯಾವ ತಪವಗೈದರೂ ಫಲ ಸಿಕ್ಕುವುದು ಚಕ್ರಿಯ ಬಳಿಯೇ !—ನಾನ್ಮುಹನ್ ತಿರುವಂದಾದಿ (೧,೨).

(೩) ಅಂದಾದಿಯ ಏಳನೆಯ ಪದ್ಯ ನಾರಾಯಣ ಶಬ್ದಾರ್ಥವನ್ನು ಹೀಗೆ ವಿವರಿಸುತ್ತದೆ— "ಇಂದಾಗಲಿ ನಾಳೆಯೇ ಆಗಲಿ, ಇನ್ನು ಕೊಂಚ ನಿಂತಾಗಲಿ, ನಿನ್ನ ದಯೆ ನನ್ನ ಮೇಲೆ ಚೆನ್ನಾಗಿದೆ. ನಾನು ನಿನ್ನನ್ನು ಳಿದಿಲ್ಲ ಕಂಡ್ಯಾ, ನಾರಾಯಣಾ ! ನೀನು ನನ್ನನ್ನು ಳಿದಿಲ್ಲ !"

(೪) ತ್ರಿಮೂರ್ತಿಗಳ ಸ್ಥಾನವನ್ನು ಒಂಬತ್ತನೇ ಪದ್ಯ ಇಂತು ವರ್ಣಿಸುತ್ತದೆ— [ತ್ರಿವಿಕ್ರಮಾವತಾರ ಕಾಲದಲ್ಲಿ] ಲೋಕವನ್ನಳೆದವನ ಚೆಲುವಾದ ಪಾದವನ್ನು ವಿನಯದಿಂದ ನಾಲ್ಮೊಗ (ಬ್ರಹ್ಮ)ನು ತನ್ನ ಕಮಂಡಲದ ನೀರನ್ನು ಹುಯ್ದು ವೇದಮಂತ್ರಗಳಿಂದ ನುತಿಸಿ, ನೀಲಕಂಠನ ತಲೆಯ ಮೇಲೆ (ಭಗವಂತನ ಶ್ರೀಪಾದತೀರ್ಥ ಬೀಳುವಂತೆ) ತೊಳೆದನು !

(೫) ನಾರಾಯಣನಿಂದಲೇ ದೇಹದಂಡನೆಗೈಯದೆ (ಅನಾಯಾಸವಾಗಿ) ಮುಕ್ತಿ ಎಂದು ೧೩ನೇ ಪದ್ಯ ತಿಳಿಸುತ್ತದೆ.

"ಮುಕ್ತಿ ಪಡೆಯುವ ಸರಿಯಾದ ದಾರಿಯನ್ನರಿಯದೆ ಬರಿದೇ ಮೈಯನ್ನು ಬಳಲಿಸಿ ಎಲುಬಿನ ಗೂಡಾಗಿ ಮಾಡಿಕೊಂಡು ತಿರಿಯುವವರೇ ಮೋಕ್ಷವನ್ನು ಕೊಡುವ ತತ್ವವೂ ವೇದದ ಮೊದಲ ಪುರುಳು, ಬಾನವರ ನಲ್ ಪುರುಳು, **ನಾರಾಯಣನು**.

(೬) ಭಗವದ್ಭಕ್ತರಿಗಿಂತ ಭಾಗವತರಭಕ್ತರು ಹಿರಿಯರು ಎಂದು ಪದ್ಯ ತಿಳಿಸುತ್ತದೆ.

'ಹಗೆಯಾದ ದಾನವ (ಹಿರಣ್ಯ)ನ ಎದೆಯನ್ನು ಕೂರುಗುರಿನಿಂದ ಎರಡು ಸೀಳಾಗಿ ಬಗೆದ ಬಲಶಾಲಿ ಸಿಂಹ (ನೃಸಿಂಹಮೂರ್ತಿ)ವನ್ನು ಉಳಿದ ದೇವತೆಗಳಿಗಿಂತ ವಿಲಕ್ಷಣನೆಂದು ಭಜಿಸುವವರನ್ನು ಗೆಲ್ಲುವುದೈ ಅವರನ್ನು ಆಶ್ರಯಿಸಿ ನಿರ್ಭರರಾಗಿರುವವರ ತಪಸ್ಸು!''

ನಾನ್ಮುಹನ್‌ತಿರುವಂದಾದಿಯ ಸಾರಾರ್ಥವಿದು—"ಜೀವಿಗಳ ಹೃದಯದ ಹೊಲದಲ್ಲಿ ನೀಲಮೇಘಶ್ಯಾಮನಿಂದ ಭಗವಂತನು ಭಕ್ತಿಯ ಬೀಜವನ್ನು ಬಿತ್ತುವನು, ಇದರ ಫಲವಾಗಿ ಬರುವ ಮುಕ್ತಿಸಾಮ್ರಾಜ್ಯವೂ, ಕೈಂಕರ್ಯವೂ ಅವನ ಸಲವಿಗಾಗಿಯೇ! ಎಂಬ ಉದಾತ್ತ ಭಾವ (ಪರಾರ್ಥಸೇವೆ) ೨೩ ನೇ ಪದ್ಯದಲ್ಲಿ ಪ್ರಕಟವಾಗಿದೆ.

"ಗರ್ಭವಾಸ ಜನ್ಮಗಳ ಮಾಯದ ಕತೆಗೆ ಕೊನೆಯಿಲ್ಲ; ಬಾನವರ ದೇವತೆಯನ್ನು ಭಜಿಸದ ತಿಳಿಗೇಡಿಗಳೇ, ಹಿಂದೆ ನಾಲ್ಮೊಗನು ಹರನಿಗಿತ್ತ ಶಾಪವನ್ನು ನಾರಾಯಣನು ಕಳೆದನು. ಅವನ ಹಿರಿಯ ಗುಣಗಳನ್ನು ನೆನೆಯದೆ ಇರುವುದೇ ಮೃತ್ಯುವಿನ ಪುರುಳು." ಮೈಮನಗಳ ನೋವು ಬರದಂತೆ ಕಾಯುವ ಶ್ರೀ ವೆಂಕಟೇಶನಲ್ಲಿ ಭಕ್ತಿಸಾರರಿಗೆ ಬಹಳ ಆದರ. ಅಂದಾದಿಯಲ್ಲಿ ಹತ್ತು ಪದ್ಯಗಳು (೩೯-೪೮) ಒಟ್ಟಿಗೇ ತಿರುಪತಿ ಬೆಟ್ಟಕ್ಕೆ ಮೀಸಲಾಗಿವೆ. ಇವುಗಳ ಸಾರಾಂಶವನ್ನು ಕೆಳಗೆ ಕೊಟ್ಟಿದೆ:—

"ತಿರುವೇಂಗಡದವನನ್ನು ಕಾಣಬಯಸಿ ಅವನನ್ನು ನಾನು ಕೂಗುತ್ತಿರುವೆನು. ಅವನೊಡನೆ ಕೂಡಲು ತಿರುಕೂಡಲ್ ನಕ್ಷೆ[6]ಯನ್ನು ಎಳೆಯುತ್ತಿರುವೆನು. ಮಳೆಗಾಲದಲ್ಲಿ ಹಿರಿಯ ಝರಿಗಳು ಮಣಿಗಳನ್ನು ತಳ್ಳಿಕೊಂಡುಬರಲು, ಆನೆ ನಡುಗುವುದು! ಹಾವು ಒಂದುಕಡೆ ಹೋಗಿ ಅಡಗಿಕೊಳ್ಳುವುದು! ಭಾದ್ರಪದ ಮಾಸದ ಶ್ರವಣದ ನಲ್‌ದಿನದಲ್ಲಿ ಅವತರಿಸಿದ ವೇಂಕಟೇಶಾ! ನನ್ನ ಹೃದಯದಲ್ಲಿ ಪ್ರವೇಶಿಸಿರುವವನೇ ನಿನ್ನ ಜನ್ಮೋತ್ಸವದಲ್ಲಿ ಹಿರಿಯ ಘೋಷದೊಡನೆ ಕಲ್ಲುಗಳನ್ನೂ ಮುತ್ತುಗಳನ್ನೂ ನಿರ್ಝರಗಳು ಸುರಿಸುತ್ತಾ ನಿನಗೆ ಅರ್ಘ್ಯವನ್ನು ಅರ್ಪಿಸುತ್ತಿರುವುವು! ಆಗ ತಿರುವೇಂಗಡಕ್ಕೆ ಬಂದು ನಿನ್ನನ್ನು ಕಾಣಲು ಕರಗುತ್ತಿರುವೆನಯ್ಯಾ! ಶ್ರೀನಿವಾಸಾ! ಉಳಿದ ಬೆಟ್ಟಗಳಂತೆ ಇದೂ ಒಂದು ಬೆಟ್ಟವೆಂದು ನಾನು **ವೇಂಕಟಗಿರಿ**ಯನ್ನು ಹಾಡಿದೆನು; ನನಗೆ ಮುಕ್ತಿ ಸಿಕ್ಕಿತು: ಶ್ರೀಲೋಲನ ಕಾಲ್‌ಬಲೆಯಲ್ಲಿ ಈಗ ನಾನು ಸಿಕ್ಕಿಬಿಟ್ಟಿರುವೆನು! ಬಲು ಎತ್ತರವಾದ ವೇಂಗಡವನ್ನು ಸಾರಿ ನಿಂತು ಬಾಗಿರಿ (ನಮಿಸಿರಿ). ಅದು ಸ್ವಭಾವತಃ ಪಾಪಗಳನ್ನು ನಾಶಮಾಡುವುದು! ಅಲ್ಲಿ ಸದಾ ಪರಿಮಳದಿಂದ ಕೂಡಿದ ಕಮಲದಲ್ಲಿರುವ ನಾಲ್ಮೊಗನೂ ಮುಕ್ಕಣ್ಣನೂ [ಭಗವಂತನ ಪಾದಕ್ಕೆ] ಕಮಲವಿಟ್ಟು ನುತಿಸುವರು. ಮುಗಿಲು ಬಂದು ಮುಟ್ಟುವ ಶಿಖರದ ವೇಂಕಟಗಿರಿಯ ಒಡೆಯನಿಗೆ ಸಂಜೆಹೊತ್ತಿನಲ್ಲಿ ಕಾಪಿಡಲು[7] ಚಂದ್ರಶೇಖ

[6]ಇದರ ವಿವರವನ್ನರಿಯಲು ಶ್ರೀಶಾನುದಾಸ ಗ್ರಂಥ ಮಾಲಾ ಪ್ರಕಟನೆ 'ನಾಯಕೀ ಗೀತೆ'ಯ ೩೬ ನೇ ಪುಟವನ್ನು ನೋಡಿ.

[7] ಇಂದಿಗೂ ಮೇಲುಕೋಟೆಯ ಶ್ರೀ ನಾರಾಯಣಸ್ವಾಮಿ ಸನ್ನಿಧಿಯ ಮುಂದೆ ಪ್ರತಿದಿನವೂ ಸಂಜೆಹೊತ್ತು "ತಿರುವಂದಿಕ್ಕಾಪು" ಎಂಬ ಸಂಧ್ಯಾ ಕಾಲದ ದೀಪಾರಾಧನೆ ಜರುಗುವುದು! ಈ ಕಾಲದಲ್ಲಿ ದೀವಟಿಗೆಯನ್ನು ಕೈಯಲ್ಲಿ ಹಿಡಿದುಕೊಂಡು ನಮಿಸುವರು. ಆದ್ದರಿಂದ ಇದಕ್ಕೆ "ದೀವಟಿಗೆ ಸಲಾಂ" ಎಂದು ಟೀಪೂ ಸುಲ್ತಾನರ ಕಾಲದಲ್ಲಿ ಹೆಸರು ಬಂದಿತು!

"ಯಮನೂ [ನನ್ನ ಬಳಿ] ಬಾರನು; ಕ್ರೂರಪಾಪಗಳೂ ಸೇರವು; ಕೆಟ್ಟ ಮಾತುಗಳೂ ಸೇರದ ಪರಿಯನ್ನರಿತೆನು ನಾನು: ಯಮುನಾ ನದಿಯ ಹೊಳೆಯ ಕರೆಯಲ್ಲಿ ಮಲಗಿರುವ ಕಣ್ಣನ, ಕಡಲಲ್ಲಿ ಮಲಗುವ ಮಾಯಿಯ ಮಾತು ನನ್ನ ಮನದೊಳಗಿದೆ!"

ಅನ್ದಾದಿ, ೫೦ ನೇ ಪದ್ಯ.

"ಅಪ್ಪನಾಗಿ, ಅಮ್ಮನಾಗಿ, ಆಳುವ ನಮ್ಮೊಡೆಯನೂ ಆಗಿ, ಪರಿಪರಿಯ ಹಲವು ಹುಟ್ಟನ್ನು ಕಳೆದು ನಮ್ಮ ಸೇವೆಯನ್ನು ಕೊಳ್ಳಲು ಮುಕ್ತ (ಶುದ್ಧ)ನಾದ ಮುಕುಂದನು ನಮ್ಮೊಳಗೆ ನೆಲಸಿದಾನೆ. ಯಾವುದರಿಂದ ಎಡರ ಕಡಲಲ್ಲಿ ಕೆಡೆದಿರುವೆ, ಬಡಮನವೇ?"

ತಿರುಚ್ಚಂದವಿರುತ್ತಂ, ೫೧೧.

ರನೂ ಪದ್ಮಸಂಭವನೂ ಕೂಡೆ ಮೊದಲಾದ ಮಂಗಳದ್ರವ್ಯಗಳನ್ನು ಶೇಖರಿಸಿಕೊಂಡು ಬಂದು ಸೇರುವರು. ಎಲ್ಲರೂ ಶ್ರೀಲೋಲನ ಪುಂಡರೀಕ ಪಾದವನ್ನು ಒಲಿದು ಮಲರಿಟ್ಟು ನಮಿಸಿ ನುತಿಸಿ ಸದ್ಗತಿಪಡೆಯುವಂತೆ ಎತ್ತರವಾಗಿ ಬೆಳೆದು ನಿಂತವ (ತ್ರಿವಿಕ್ರಮ)ನು ನೆಲಸಿರುವ ತಣ್ಣೀರಿನ ತೊರೆಗಳಿರುವ ವೇಂಗಡವೇ ಬಾನವರಿಗೂ ಮಾನವರಿಗೂ ನಿಧಿ! "ಬಾನಿನಲ್ಲಿ ಬೆಳಗುವ ಚಂದ್ರನನ್ನು ದೇವನಿಗೆ ಮಣಿದೀಪವಾಗಿಡುವೆನು!" ಎಂದು ಯಾವಾಗಲೂ ಮೇಲಕ್ಕೆ ಕೈಯೆತ್ತಿ ಚಾಚುವ ಆನೆಯನ್ನು ಎಲ್ಲ ಕಡೆಯೂ ಬೇಡರು ಸುತ್ತುವರು; ಆಗ ಕ್ರೂರವರು ಬಿಲ್ಲೆತ್ತಿ ಆನೆಯ ಮೇಲೆ ಬಾಣವನ್ನು ಬಿಡುವರು. (ತಿರ್ಯಗ್ಜಂತುಗಳೂ ಈ ಗಿರಿಯಲ್ಲಿ ದೇವರ ಸೇವೆಮಾಡಬಯ ಸುವುವು; ಅವು ದಿವ್ಯಸೂರಿಗಳಂತೆ ಶ್ಲಾಘ್ಯವೆಂದು ಇದರಿಂದ ಧ್ವನಿತವಾಗುತ್ತದೆ). ಇಂತಹ ವೇಂಕಟಗಿರಿಯನ್ನು ಬಲವಂದು ಬರುವುದೇ ನಲ್ಮೆ! ನಲ್ಮಣಿವಣ್ಣನ ಊರು ಯಾಳಿಯೂ ಸಿಂಗವೂ ಹೊನ್‌ಮಣಿ ಮುತ್ತುಗಳೂ ಹೂಮರವೂ ಹಲವು ಮಣಿಗಳೊಡನೆ ನೀರೋಡುವ ತೊರೆಗಳೂ ಕಾಡೂ ವಾನರಗಳೂ ಬೇಡರೂ ಇರುವ ವೇಂಗಡವೇ. ದಿಟವಾಗಿಯೂ ಅದು ಬಾನವರಿಗೆ ವಂದ್ಯವಾದುದು. ನಮ್ಮ ಆದಿವ್ಯಾಧಿಗಳನ್ನು ತೀರಿಸುವ ವೇಂಗಡವೇ ದಾನವರು ಬೀಳುವಂತೆ ಚಕ್ರಾಯುಧವ ತೊಟ್ಟು ಬಾನವರನ್ನು ಕಾಯುವವನ ಮಲೆ!"

ಭಗವದ್ಗೀತೆಯ ಸಾರ ಅದರಲ್ಲಿ ಬರುವ "**ಚರಮಶ್ಲೋಕ**"ವೆಂದು ಪರಮ ವೈದಿಕರ ಮತ. ಅದನ್ನು ಕುರಿತು ಆಳ್ವಾರರು ಹೀಗೆ ಹಾಡಿದಾರೆ:

ಅಂದಾದಿಯ ಐವತ್ತೊಂದನೇ ಪದ್ಯದಲ್ಲಿ "ನನ್ನ ಮತಿಗೆ ಬಾನ್‌ಲೋಕವೂ ಬೆಲೆಯಾಗ ಬಲ್ಲುದೋ?" ಎಂದು ಕೇಳಿದಾರೆ. ಇದು ಆತ್ಮ ಪ್ರಶಂಸೆಯೆಂದು ಮೇಲ್‌ನೋಟಕ್ಕೆ ತೋರಿ ಬಂದರೂ ತತ್ತ್ವಾರ್ಥವೆನ್ನುವುದರಲ್ಲಿ ಸಂಶಯವಿಲ್ಲ. ಭಗವಂತನ ನಿರ್ಹೇತುಕ ಕಟಾಕ್ಷಕ್ಕೆ ಪಾತ್ರರಾದ ಈ ಭಕ್ತಿಸಾರರು ಭಗವಂತನಿಗೆ ಆತ್ಮಸಮಾನರು, ಪ್ರಾಣಸಮಾನರು, ಜ್ಞಾನಿಗಳಲ್ಲಿ ಅಗ್ರೇಸರು; ಆದುದರಿಂದ ಅವನಿಗೂ ಮಾನ್ಯರು ಎಂದು ಭಗವಂತನ ಸಿರಿನುಡಿಗಳಿಂದಲೇ ವ್ಯಕ್ತವಾಗುತ್ತದೆ. ಪರಾವರತತ್ತ್ವ ವಿವೇಕವನ್ನು ಮಾಡಲು ನಿಶಿತವಾದ ಜ್ಞಾನ, ಪರಿಶುದ್ಧಹೃದಯ, ಅವ್ಯಾಜ ಭಗವತ್‌ಪ್ರೇಮ, ವೈರಾಗ್ಯಗಳು ಅತ್ಯಗತ್ಯ. ಪರಾಶರಮುನಿಗಳಂತೆ ನಮ್ಮಾಳ್ವಾರರಂತೆ ಶ್ರೀ ವಿಷ್ಣುಚಿತ್ತರಂತೆ ಶ್ರೀಭಾಷ್ಯಕಾರರಂತೆ ಈ ಭಾರ್ಗವಮುನಿಗಳೂ ತಮ್ಮ ಪ್ರಬಂಧಗಳಲ್ಲಿ ಪರತತ್ತ್ವ ನಿರ್ಣಯವನ್ನು ಮಾಡಿ ಮುಮುಕ್ಷುಗಳಿಗೆ ಆಚಾರ್ಯರಾಗಿದಾರೆ. ಆದುದರಿಂದಲೇ ಶ್ರೀಮದ್ವರವರಮುನಿಗಳು ಇವರನ್ನು "ಉಪದೇಶರತ್ನಮಾಲೈ"ಯಲ್ಲಿ "ತುಯ್ಯಮದಿಪೆತ್ತಮಳಿಶೈಪ್ಪಿರಾನ್", ಪರಿಶುದ್ಧವಾದ ಬುದ್ಧಿಯನ್ನು ಪಡೆದ ಮಳಿಶಿಯ ಹಿರಿಯನೆಂದು ಕೊಂಡಾಡಿದಾರೆ. ತಿರುವರಂಗತ್ತಮುದನಾರ್ ಎಂಬ ಆಚಾರ್ಯರೂ ರಾಮಾನುಜ ನೂತ್ತಂದಾದಿಯಲ್ಲಿ "ಜಗದಲ್ಲಿ ಎಲ್ಲೆಲ್ಲೂ ಹರಡಿರುವ ಕೀರ್ತಿಯನ್ನುಳ್ಳ ಮಳಿಶೆಯ ಒಡೆಯನ ಪಾದಕಮಲಗಳನ್ನು ಹೃದಯದಲ್ಲಿಟ್ಟು" ರಾಮಾನುಜರು ಭಜಿಸುತ್ತಿದ್ದಾರೆಂದು ಹಾಡಿದಾರೆ. ಶ್ರೀರಾಮನೇ ಪರದೈವವೆಂದು ಅನ್ದಾದಿಯ ೫೩ ನೇ ಪದ್ಯ ಸಾರುತ್ತದೆ:—"ಕಲಿಯದವರ (ಅಜ್ಞರ—ರಾಮನಾಮವನ್ನು ಕಲಿಯದವರು ಕಲಿತವರಲ್ಲ ಎಂದು ನಮ್ಮಾಳ್ವಾರ್ ಮತ!) ಲಂಕೆಯನ್ನು ಸಂಪೂರ್ಣವಾಗಿ ಅಳಿಸಿದ ಕಾಕುತ್ಸ್ಥನಲ್ಲದೆ ನನಗೆ ಮತ್ತೊಂದು ದೈವವಿಲ್ಲ. ದುರ್ದೇವತೆಗಳನ್ನು, ನಿಜವಾಗಿಯೂ ದೇವರಲ್ಲದವರನ್ನು, "ಸಿರಿ"ಯಿಲ್ಲದ ದೇವರನ್ನು ದೇವತೆಯೆಂದು ತಿಳಿಯಬೇಡಿರಿ. ಮಧುಸೂದನನೇ ಶರಣವೆಂದು ವರಿಸಿದವರಿಗೆ ಮನಃಕ್ಲೇಶವಿಲ್ಲ; ನಮ್ಮ ಏಳು ಜನ್ಮಗಳನ್ನು ಕಳೆಯುವ ನೊಲ್ಲು (ಸಿರಿನಾಮ)ಗಳನ್ನುಳ್ಳ ಆದಿದೇವನಾದ ನಾರಾಯಣನನ್ನು ನುತಿಸುವುದೇ ನಲ್ಮೆ, ಚದುರು. ಪುಂಡರೀಕಾಕ್ಷನ ನಾಮ ಕಿವಿಗೆ ಇಂಪಾದುದು, ಈ ಭೂಮಿಗೂ ಅದೇ ಆಧಾರ. ಕವಿತೆಗೆ ಪೂರ್ಣವಾದ ವಸ್ತುವನ್ನು ನಾನು ಪಡೆದೆನು. ನೋಡಿದರೆ ಇದೇ ವೇದದ ಪುರುಳೂ ಆಗಿದೆ! ಆದಿದೇವನ ಹೆಸರನ್ನು ಭಜನೆಮಾಡುವುದೇ ನನಗೆ ಕೆಲಸ! ಅದಕ್ಕೇ ನನಗೆ ಎಲ್ಲಾ ಹೊತ್ತೂ ಸಾಕಾಗುವುದು! ಕಡುಗೋಪದ ಬಲ್ಲಾಳ, ವಾನರರ ಅರಸು, ವಾಲಿಯ

ಮದವನ್ನಳಿಸಿದ ಬಿಲ್ಲಾಳ ನನ್ನ ಮನದಲ್ಲಿದ್ದಾನೆ. ನಾನು ಗರ್ಭದಲ್ಲಿದ್ದ ದಿನದಿಂದ ಇದುವರೆಗೆ ಯಾವಾಗಲೂ ಸರ್ವೇಶ್ವರನನ್ನು ಮರೆತಿಲ್ಲ; ಅವನಿಗೆ ಸದಾ ಆಳಾಗಿ ಅವನನ್ನು ಮನದಲ್ಲಿರಿಸಿರುವೆನು. ನನಗೆ ಬೇರೆ ರಕ್ಷೆಯಿಲ್ಲ, ಕೃಷ್ಣನೇ ಗತಿ ಎಂದಿರುವೆನು. ನಾನು ಭಗವಂತನಿಗೆ ಆಳಾಗಿ ಸಂಸಾರದ ಎಡರನ್ನು ನೀಗಿ ಅಮರರಿಗೂ ಅರಿದಾದ ಫಲವನ್ನು ಪಡೆದೆನು :

"ಈಗರಿತೆನ್ನೈ ಈಶ್ವರನಿಗೂ ನಾಲ್ಮೊಗನಿಗೂ ದೈವವನ್ನು: ಈಗರಿತೆನ್ನೈ, ನನ್ನೊಡೆಯಾ! ನಿನ್ನನ್ನು—ಈಗರಿತೆನ್ನೈ; ಕಾರಣ ನೀನು, ಕಲಿತದ್ದು ನೀನು, ಕಲಿಯಬೇಕಾದುದೂ ನೀನು, ನಲ್‌ಗೆಲಸದ (ಚೇತನರು ಉಜ್ಜೀವಿಸಲಿ ಎಂದು ಜಗತ್ತನ್ನು ಸೃಜಿಸಿದ) ನಾರಾಯಣನು ನೀನು" [ಇದೇ ನಾಲ್ಕನೆಯ ಸಿರಿಯಂದಾದಿಯ ಸಾರಾರ್ಥ].

ಸೀತೆಯು ಕೊಂಡಾಡಿರುವ "ಅನನ್ಯದೇವತ್ವ" ಮಧುಸೂದನ ಪ್ರಪನ್ನರಿಗೆ ಬಾಳದೀವಿಗೆ. ಇದನ್ನು ಅನ್ದಾದಿಯ ೬೮ ನೇ ಪದ್ಯ ಹೀಗೆ ಸಾರುತ್ತದೆ—

"ಮರೆಯಬೇಡಿ, ಕಂಡಿರಾ! ಸಿರಿಯಡಿ(ಸ್ವಾಮಿ)ಯ ನಾಮವನ್ನು ಮರೆತರೂ (ಬಾಧಕವಿಲ್ಲ!) ಪರರನ್ನು ಭಜಿಸದ ಮನುಷ್ಯರನ್ನು ಕಂಡರೆ, ಅವರನ್ನು ನಮಿಸಿರಿ, "ಸಾಧು"ಗಳಂತೆ ಅವರ ಬಳಿ ಹೋಗಿರಿ" ಎಂದನು ಯಮನು ತನ್ನ ದೂತರನ್ನು ಕೂಗಿ,—ಅವರ ಕಿವಿಯಲ್ಲಿ | ಆಳ್ವಾರರ ಭಾಗವತಾಭಿಮಾನ ಅಂದಾದಿಯ ೮೯,೯೦ ನೇ ಪದ್ಯಗಳಲ್ಲಿ ಪ್ರಕಟವಾಗಿದೆ—

"ವ್ಯರ್ಥವಾಗದ ಒಂದನ್ನರಿತೆ ನಾನು! ಹಾಲ್ಗಡಲವ (ಕ್ಷೀರಸಾಗರದಲ್ಲಿ ನೆಲೆಸಿರುವ)ವನ ಪಾದವನ್ನು ಎಡೆಬಿಡದೆ ನೆನೆದು ಸದಾ ಭಜಿಸುವವರನ್ನು ಕಂಡು ಆಶ್ರಯಿಸಿ ಬಾಳುವವರು ತಮ್ಮ ಪಾಪಗಳನ್ನು ಕಳೆದುಕೊಂಡು ಪರಮಪದದ ಬಾಗಿಲನ್ನು ತೆರೆದುಕೊಂಡು ಹೋಗಿ ಅಲ್ಲಿ ಬಹಳ ವೈಭವದಿಂದ (ನಿತ್ಯಸೂರಿಗಳಿಂದ ಸಮ್ಮಾನಿತರಾಗಿ) ಇರುವರು. ಪರಮಪದದಲ್ಲಿ ವೈಭವದಿಂದ ಕೈಂಕರ್ಯ ಮಾಡಬಯಸುವವರು ಶ್ರೀ ವೇಂಕಟೇಶನಿಗೆ ಹಲವಾರು ಮಲರುಗಳನ್ನಿಟ್ಟು ಭಜಿಸಿದವರು; ಅವರಿಗಿಂತ ಮೇಲಾಗಿ ಬಾಳುವವರು ಯಾರೆಂದರೆ ಶ್ರೀನಿವಾಸನ ಭಕ್ತರಲ್ಲಿ ಪ್ರೀತಿಯುಳ್ಳವರಾಗಿ ಅವರಿಗೆ ಅಡಿಯಾಳಾಗಿರುವವರು."

**"ತಿರುಚ್ಚಂದವಿರುತ್ತಂ"** ಒಂದು ಅಪೂರ್ವಕೃತಿ. ಇದರಲ್ಲಿ ಆಳ್ವಾರರು ಹಾಡಿರುವ ವಸ್ತುಗಳಿವು; ಪೃಥಿವ್ಯಾದಿಪಂಚಭೂತಗಳಿಗೂ ಭಗವಂತನು ಅನ್ತರ್ಯಾಮಿಯಾಗಿ ನೆಲಸಿರುವನು; ಕರ್ಮಯೋಗಾದಿ ಸಾಧನಗಳಿಂದ ಅವನನ್ನು ಪೂಜಿಸಿ ಎಲ್ಲರೂ ತಮಗೆ ಬೇಕಾದ ಫಲಗಳನ್ನು ಪಡೆಯಬಹುದು; ಇಂತಹವನು ತಾನಾಗಿಯೇ ಬಂದು ಆಳ್ವಾರರ ಹೃದಯದಲ್ಲಿ ನೆಲಸಿದನು. ಜ್ಞಾನಾಧಿಕರಾದ ರುದ್ರಾದಿಗಳಿಗೂ ಅರಿಯಲಾಗದಂತಹ ಮಹಿಮೆಯುಳ್ಳ, ಸರ್ವಶಬ್ದ ಪ್ರತಿಪಾದ್ಯನಾದ ನಾರಾಯಣನೇ ಸರ್ವರಿಗೂ ಆಶ್ರಯಣೀಯನಾದವನು. ಅವನ ಅವತಾರ ರಹಸ್ಯಜ್ಞಾನವೂ ಅವನ ಕೃಪೆಯಿಂದಲೇ ಲಭಿಸೀತು! ಆಶ್ರಿತರಿಗಾಗಿ ಅವನು ಅರ್ಚಾವತಾರವನ್ನು ತಾಳಿ, ಅವರು ಒಲಿದ ರೂಪನಾಮಗಳನ್ನು ಹೊಂದಿ ಅವರಿಗೆ ವಿಧೇಯನಾಗಿದ್ದು ಅವರಿಗೆ ಅನುಕೂಲವಾದಾಗ ಪೂಜೆಯನ್ನು ಸ್ವೀಕರಿಸಿ ಅವರನ್ನು ಸಂರಕ್ಷಿಸುವನು; ಅವನ ಸೌಲಭ್ಯ ಅಪರಿಚ್ಛೇದ್ಯವಾದುದು; ಸಹಜಶತ್ರುಗಳಾದ ಅನಂತ—ಗರುಡರಿಬ್ಬರೂ ಏಕಕಂಠರಾಗಿ ದೇವನ ಸೇವೆಗೈಯುವರು! ಇದು ಆಶ್ಚರ್ಯವಲ್ಲವೋ! ಭಗವಂತನ ಅತಿಮಾನುಷಲೀಲೆಗಳನ್ನಾರು ಅರಿಯಬಲ್ಲರು? ಭಗವಂತನು ನಮ್ಮಲ್ಲಿ ಅನುಗ್ರಹಿಸಲು ಹೇತುಗಳಿವು—ಅವನು ಗುಣಪೂರ್ಣ; ಭಕ್ತಸುಲಭ; ಅವನಿಗೂ ಚೇತನರಿಗೂ ಇರುವುದು ಎಂದೂ ಯಾರಿಂದಲೂ ಬಿಡಿಸಲಾಗದಂತಹ ಸಂಬಂಧ. ರಾಮನ ಸೌಶೀಲ್ಯ, ಕೃಷ್ಣನ ಸೌಲಭ್ಯ ವಾಚಾಮಗೋಚರವಾದುದು! ರುದ್ರನ ಮಹಾಪಾತಕವನ್ನು ನೀಗಿ ಬ್ರಹ್ಮನಿಗೆ ವೇದಗಳನ್ನು ತಂದುಕೊಟ್ಟು ತ್ರಿವಿಕ್ರಮನಾಗಿ ಬೆಳೆದು ಬಲಿಯ ಔದಾರ್ಯಕ್ಕೆ ಮೆಚ್ಚಿ ಎಲ್ಲರ ತಲೆಯಮೇಲೂ ತನ್ನ ಚೆಲುವಾದ ಪಾದವನ್ನಿಟ್ಟು "ಸರ್ವಂ ವಿಷ್ಣುಮಯಂ ಜಗತ್" ಎಂದು ಎಲ್ಲರೂ ಕೊಂಡಾಡುವಂತೆ ಋಗ್ವೇದದ ಸೂಕ್ತಿ ಸುಳ್ಳಾಗದಂತೆ ಮಾಡಿದ ಜಗತ್ಕಾರಣವಸ್ತುವೂ ಸರ್ವಶೇಷಿಯೂ

ಆದ ಭಗವಂತನ ಸ್ವರೂಪ ಸ್ವಭಾವಗಳಲ್ಲಿ ಜನರು ಮಗ್ನರಾಗಿರದೇ ಇರಲು ಅವರ ದುರ್ವಾಸನೆಯೇ ಕಾರಣವೆಂದರಿತು ಜನರು ಭಗವದ್ವಿಮುಖರಾಗಿ ಅನರ್ಥಪಡುವುದನ್ನು ಕಂಡು ಸಹಿಸಲಾರದೆ ನಿರ್ದೋಷಿ ಪ್ರಮಾಣಗಳಿಂದಲೂ ಶ್ರುತ್ಯನುಸಾರಿಯಾದ ನ್ಯಾಯಗಳಿಂದಲೂ ಇತರ ಮತಗಳನ್ನು ಖಂಡಿಸಿ ಭಗವಂತನೇ ಸರ್ವೋತ್ತಮನೆಂದು ಆಳ್ವಾರರು ಉಪದೇಶಿಸಿದರೂ ಜನತೆಗೆ ಇದರಲ್ಲಿ ಅಭಿರುಚಿ ಬೆಳೆಯಲಿಲ್ಲ. ಆಗ ಆಳ್ವಾರರು ನಾನು ಇವರಂತಿರದೆ ಜಗತ್ಕಾರಣಭೂತನಾದ ಪರಮಪದನಿಲಯನೇ ಸರ್ವೇಶ್ವರನೆಂದೂ ಅವನೇ ಪ್ರಾಪ್ಯವೂ ಪ್ರಾಪಕವೂ ಎಂದು ಅವನ ಅನುಗ್ರಹದಿಂದಲೇ ಅರಿತೆನೆಂದು ಸಂತೋಷಿಸಿ, ದೇವರನ್ನು ಕುರಿತು "ನಿನ್ನನ್ನು ಪಡೆಯುವ ದಾರಿಯನ್ನು ತೋರಿಸು" ಎಂದು ಪ್ರಾರ್ಥಿಸಿ ಅವನಲ್ಲಿ ಶರಣಾಗತಿ ಮಾಡಿದ ಬಳಿಕ, ಶ್ರೀರಂಗ, ಕುಂಭಕೋಣ, ತಿರುಕ್ಕುರುಂಗುಡಿ ಮೊದಲಾದ ದಿವ್ಯದೇಶಗಳಲ್ಲಿ ಭಗವಂತನು ಭಕ್ತಾನುಗ್ರಹಾರ್ಥವಾಗಿ ನೆಲಸಿರುವ ಪರಿಯನ್ನೂ ಅವನ ಗುಣವಿಶೇಷಗಳನ್ನೂ ಅನುಭವಿಸಿ ಹಾಡಿದ್ದಾರೆ. ಈ ಪ್ರಬಂಧದ ಉತ್ತರಾರ್ಧದಲ್ಲಿ "ಶಾಶ್ವತವಾದ ಪುರುಷಾರ್ಥವನ್ನು ಬಯಸುವವರೇ, ನೀವು ಶ್ರೀಮನ್ನಾರಾಯಣನನ್ನು ಆಶ್ರಯಿಸಿ ಉಜ್ಜೀವಿಸಿರಿ, ದೇವತಾಂತರ ಸಮಾಶ್ರಯಣದಿಂದ ಅನರ್ಥವೇ ಫಲಿಸುವುದು; ಇದಕ್ಕೆ ರುದ್ರನನ್ನು ಆಶ್ರಯಿಸಿದ ಬಾಣಾಸುರನೇ ಸಾಕ್ಷಿ!" ಎಂದು ಸೋದಾಹರಣ ಪೂರ್ವಕ ಉಪದೇಶಿಸುತ್ತಾರೆ. "ಕರ್ಮಯೋಗಾದಿ ಸಾಧನಗಳು ದುಷ್ಕರ; ನಿರಿಲೋಲನಿಗೆ ತಲೆಬಾಗಿದರೆ ಸಾಕು, ಅವನ ಕೃಪೆ ದೊರಕುವುದು; ಅವನ ಅನುಗ್ರಹದಿಂದಲೇ ಮೋಕ್ಷ ಲಭಿಸುವುದು" ಎಂದು ಮತ್ತೆ ಉಪದೇಶಿಸುತ್ತಾರೆ. ಆದರೂ ಜನರು ತಿದ್ದಿಕೊಳ್ಳಲಿಲ್ಲ. ಇದಕ್ಕಾಗಿಯೂ ಮತ್ತು ತಮಗೆ ಪರಮಭಕ್ತಿ ಇನ್ನೂ ಉಂಟಾಗಲಿಲ್ಲವೆಂದೂ ಆಳ್ವಾರರು ನೊಂದು "ನನ್ನ ವಿಷಯದಲ್ಲಿ ನನ್ನೊಡೆಯನು ಏನೆಂದು ಸಂಕಲ್ಪಿಸಿರುವನೋ?" ಎಂದು ಅತಿ ಶಂಕಿಸಿ, ಅವನ ನಿರಿಯಡಿಗಳಲ್ಲಿ ಉಂಟಾಗಿರುವ ರುಚಿಯಳಿಯದೆ ಇರಲಿ ಎಂದೂ ಇತರ ವಿಷಯಗಳಲ್ಲಿ ಆಸಕ್ತಿ ಬರದೆ ಇರಲಿ ಎಂದೂ ಪ್ರಾರ್ಥಿಸಿ ತಮಗೆ ಅವನನ್ನುಳಿದು ಬೇರೆ ಗತಿಯಿಲ್ಲ, ಸಾಧನವಿಲ್ಲ (ಅನನ್ಯಗತಿತ್ವ, ಆಕಿಂಚನ್ಯ) ಎಂದು ಬಿನ್ನವಿಸುತ್ತಾರೆ. ಹೀಗೆ ಆಕಿಂಚನ್ಯವೇ ಅಧಿಕಾರ ಪ್ರಪತ್ತಿ ಅಧಿಕಾರಿ ವಿಶೇಷಣ, ಭಗವತ್‌ಕೃಪೆಯೇ ನಿರಪೇಕ್ಷವಾದ ಉಪಾಯವೆಂದು ನಂಬಿ ಭಗವಂತನನ್ನು ಆಶ್ರಯಿಸಿದಾಗ ಆಳ್ವಾರರಿಗೆ ಭಗವಂತನ ಸಾಕ್ಷಾತ್ಕಾರವಾಯಿತು. ಆಗ ಅವರು "ನನಗೀ ಅಲಭ್ಯ ಲಾಭ ಸಿಕ್ಕಿತಲ್ಲಾ!" ಎಂದು ಶ್ರೀರಂಗಶಾಯಿಯನ್ನು ಕುರಿತು "ತಾವು ತಮ್ಮ ರೂಪಸೌಂದರ್ಯವನ್ನೂ ಶೀಲವನ್ನೂ ತೋರಿಸಿ ಮಾಡಿದ ಕೃಪೆಯ ಫಲವಲ್ಲವೋ ಇದು!" ಎಂದು ಭಗವಂತನ ಉಪಕಾರವನ್ನು ಸ್ಮರಿಸಿ ಪ್ರಬಂಧ ಪರಿಸಮಾಪ್ತಿಯನ್ನು ಮಾಡುತ್ತಾರೆ. "ಪರಮವೈದಿಕದರ್ಶನ"ವೆಂದು ಪ್ರಸಿದ್ಧವಾದ ರಾಮಾನುಜ ದರ್ಶನದ ಹಲವಾರು ಅಂಶಗಳು ಆಳ್ವಾರರುಗಳ ನಿರಿನುಡಿಗಳಲ್ಲಿ ಬಲು ಸೊಗಸಾಗಿ ಪ್ರಕಟವಾಗಿವೆ. ಇವುಗಳ ಸಹಾಯದಿಂದ ಶ್ರೀ ಭಾಷ್ಯಕಾರರು ಬ್ರಹ್ಮಸೂತ್ರಗಳ ಅರ್ಥವನ್ನು ನಿಷ್ಕರ್ಷಿಸುತ್ತಿದ್ದರಂತೆ.[8] ಕಡಲಿನಲ್ಲಿ ತೆರೆಗಳು ಎದ್ದು ಕೊಂಚ ಕಾಲ ದಡದವರೆಗೆ ಬಂದು ಮತ್ತೆ ಹಿಂತಿರುಗಿ ಅಡಗುವಂತೆ, ಚರಾಚರ ವಸ್ತುಗಳೂ ಭಗವಂತನ ಸಂಕಲ್ಪದಿಂದಲೇ ಜನಿಸಿ ಭೂಮಿಯಲ್ಲಿ ಕೊಂಚ ಕಾಲವಿದ್ದು ಮತ್ತೆ ಮಾರ್ಪಾಟುಹೊಂದಿ ಅವನಲ್ಲಿಯೇ ಅಡಗಿಹೋಗುತ್ತವೆ! (ತಿರುಚ್ಚಂದವಿರುತ್ತಂ, ೧೦).

ಯುಗದ ಮೊದಲಲ್ಲಿ ಲೋಕವನ್ನು ನೀನು ಪಡೆದು (ಪ್ರಳಯಕಾಲದಲ್ಲಿ) ನಿನ್ನೊಳಗೆ ಅಡಗಿಸಿ ಇಟ್ಟುಕೊಳ್ಳುವೆ, ಮತ್ತೆ ಈ ಜಗತ್ತಿನಲ್ಲೇ ಹುಟ್ಟುವೆಯಲ್ಲಾ! ಆದರೆ ನಿನಗೆ ಒಂದು ಜಾಗ ಮೀಸಲು ಎಂಬುದಿಲ್ಲ! ಲೋಕವು ನಿನ್ನೊಡನೆ ಸದಾ ಕೂಡಿಯೇ ಇದ್ದರೂ ನೀನು ಅದರಿಂದ ಬೇರೆಯಾಗಿ ನಿಂತಿರುವೆ! ಆದುದರಿಂದ ಜಗತ್ತಿಗೂ ನಿನಗೂ ಇರುವ ಸಂಬಧವನ್ನು ಯಾರು ಸರಿಯಾಗಿ ನೆನೆಯಬಲ್ಲರು? (೧೨)

[8] 'ಆಚಾರ್ಯ ಹೃದಯ' ವೆಂಬ ರಹಸ್ಯಗ್ರಂಥಕಾರರ ಅಭಿಪ್ರಾಯವಿದು.

ಮೂರು ತತ್ವಗಳೂ ಬೇರೆ, ಚಿದಚಿತ್ತುಗಳು ಭಗವಂತನಿಗೆ ಅಧೀನವಾಗಿರುವುವು ಎಂಬ ಅಂಶವೂ ಭಗವಂತನು ತನ್ನಿಂದ ಸೃಷ್ಟವಾದ ಜಗತ್ತಿನಲ್ಲೇ ಅಲ್ಲಿರುವವರ ಉಜ್ಜೀವನಕ್ಕಾಗಿ ಹುಟ್ಟುವನು ಎಂಬ ಅವತಾರ ರಹಸ್ಯವೂ ಭಗವಂತನು ಅಂಶಿ, ಚರಾಚರ ವಸ್ತುಗಳು ಅಂಶಗಳು ಎಂಬುದೂ ಈ ಎರಡು ಪದ್ಯಗಳಿಂದ ವ್ಯಕ್ತವಾಗುತ್ತದೆ.

"ಅನಂತನ ಮೇಲೆ ಪವಡಿಸಿರುವ ನನ್ನ ಪುಣ್ಯ (ಭಾಗ್ಯ)ವೇ ! ಹೊಸ ತುಲಸೀಮಾಲೆಯಿಂದ ಬೆಳಗುವ ಸುಂದರನೇ, ಪರಮಪಾವನ ಮೂರ್ತೀ ! ನೀನು ಭೂಲೋಕದಲ್ಲಿರುವೆಯೋ ? ದೇವಲೋಕದಲ್ಲಿರುವೆಯೋ ? ಆಶ್ರಿತ ಸಜಾತೀಯನಾಗಿ ಮನುಷ್ಯಲೋಕದಲ್ಲಿಯೇ ನಿಂತರೂ ನಿನ್ನ ನಿಜಸ್ವರೂಪವನ್ನಾರೂ ಅರಿಯದಂತೆ ಇರುವೆಯಲ್ಲಾ ; ನಿನ್ನ ಮಾಯೆ ಎಂಥದು ? ನೀನು ನಿನ್ನ ಭಕ್ತರ ಕಣ್ಣಿಗೆ ಗೋಚರನಾಗಿರುವೆಯಲ್ಲವೇ ? ನಿನ್ನನ್ನು ದೂರಸ್ಥನೆಂದು ಎಂತು ಬಣ್ಣಿಸಬಹುದು ? (೪೫)

ನಾಲ್ಕು ಯುಗಗಳಲ್ಲಿಯೂ ದೇವನು ಹಾಲಿನಂತೆ, ಚೆಂಬೊನ್ನಿನಂತೆ, ಪಾಚಿಯಂತೆ, ನೀಲದ ಹೂವಿನಂತೆ ಬಣ್ಣವನ್ನು (ಕ್ರಮವಾಗಿ) ಹೊಂದಿರುವನು ! ಆಶ್ರಿತರ ರುಚಿಗೆ ಅನುಗುಣವಾಗಿ ತನ್ನ ರೂಪ ವರ್ಣ ನಾಮಗಳನ್ನು ಹೊಂದುವ ಹಿರಿಯನ ಸೌಲಭ್ಯವೆಂಬ ಸ್ವಭಾವವನ್ನು ಜನರು ಮರೆತಿರುವರು. ಇದು ಅವರ ಸ್ವಭಾವ ! (೪೪)

"(ತಿರುಪತಿ) ಬೆಟ್ಟದಲ್ಲಿ ನಿಂತು, ಬಾನಿನಲ್ಲಿ (ಪರಮಪದದಲ್ಲಿ) ಕುಳಿತು, ವಿಶಾಲವಾದ ಕಡಲಿನಲ್ಲಿ (ಕ್ಷೀರಸಾಗರದಲ್ಲಿ) ಮಲಗಿ, ಭೂಮಿಯಲ್ಲಿ ಬಂದು ನೆಲಸಿ, ಪ್ರಳಯಕಾಲದಲ್ಲಿ ಅದನ್ನು ಉಪಸಂಹರಿಸಿ, ಹಿರಣ್ಯಾಕ್ಷನ ಬಾಧೆಯಿಂದ ಭೂಮಿಯನ್ನು ಹಂದಿಯಾಗಿ ಎತ್ತಿ (ಉದ್ಧರಿಸಿ)ದವನೇ, ಯುಗಾದಿಯಲ್ಲಿ ಜೀವಿಗಳನ್ನು ಸೃಜಿಸಿ ಅವರಿಗೆ ವಾಸಿಸಲು ಭೂಮಿ, ಇಷ್ಟಾರ್ಥ ಸಿದ್ಧಿಗಾಗಿ ಪೂಜಿಸಲು ದೇವತೆಗಳೂ ಮೊದಲಾದವರನ್ನೂ ಸೃಷ್ಟಿಸಿ ಕರುಣಿಸಿದ ಆದಿದೇವನಲ್ಲವೋ ನೀನು ? (೪೮)

ಶ್ರೀರಂಗದಲ್ಲಿ ಪವಡಿಸಿರುವ ದೇವನೇ ಕೃಷ್ಣನಾಗಿ ಅವತರಿಸಿದಾಗ ಗೂನಿಯ ಗೂನನ್ನು ಕಳೆದನು ; ಶರಗಳನ್ನು ತೊರೆದು ಲಂಕೆಯ ರಾಜನ ಹತ್ತು ತಲೆಗಳನ್ನೂ ಕತ್ತರಿಸಿ ಉದುರಿಸಿದ ಚೆಲುವನು ನೆಲಸಿರುವ ಅಂದವಾದ ಜಾಗವೇ ನಾಲ್ಮೊಗದ ಅಜನು ಆಶ್ರಯಿಸಿದ ಅರಮನೆ ! (ದೇವಾಲಯ), ಶ್ರೀರಂಗ. ಅಲ್ಲಿ ತ್ರಿದಂಡಿಗಳೂ ಏಕದಂಡಿಗಳೂ ಅನನ್ಯಶರಣರಾದ ಭಕ್ತರೂ ಬಾಳುವರು (೫೧-೫೨)

"ಕಾಣಲು ಇತರ ದೇವತೆಗಳ ರೂಪವೇ ಚೆನ್ನಾಗಿಲ್ಲ, ಅವರ ಕೀರ್ತಿಯೂ ಕಿವಿಗೆ ಇಂಪಾಗಿಲ್ಲ ; ಆಶ್ರಯಿಸಿದರೂ ಬೇಡಿದ ವರವನ್ನು ತರುವ ಬಲ ಅವರಿಗಿಲ್ಲ ; ಅವರನ್ನು ಶರಣು ಎಂದು ಭಜಿಸುತ್ತಿರುವ ತಿಳಿಗೇಡಿಗಳೇ, ಜಗದ ಆದಿಯಾದ ನಮ್ಮೊಡೆಯನ ಬಳಿ ಬೇಡಿ ನಿಮ್ಮ ಜನ್ಮವೆಂಬ ಜಾಲವನ್ನು ನೀವು ಹರಿದುಕೊಳ್ಳಬಾರದೆ ? (೬೯)

ಉಪಾಯವೆಂದೂ ಉಪೇಯವೆಂದೂ ಅರಿತು ವಾಮನನ ಪಾದಗಳಿಗೆ ನಮಿಸಿದರೆ, ಶ್ರೇಷ್ಠವಾದ ಜ್ಞಾನದೊಡನೆ ಸಂಪತ್ತೂ ಬೆಳೆದು ಬರುವುದು ! ತಿಳಿಯಾದ ಅಲೆಗಳು ಚಲಿಸುವ ಕಡಲಿನಲ್ಲಿ ಮಲಗಿರುವ ದೇವನನ್ನು ನುತಿಸಿದರೆ ದುಷ್ಕರ್ಮಗಳು ವಾಸನೆಯೊಡನೆ ಹಾರಿಹೋಗುವುವು ! ಇದು ಅವನ ಸ್ವಭಾವ ! (೭೪)

"ವೆಂಕಟೇಶನ ಪಾದವನ್ನೇ ದಿನವೂ ಭಜಿಸಿ ಉಜ್ಜೀವಿಸಿರಿ !" ಎಂದು (೮೧ ನೇ ಪದ್ಯದಲ್ಲಿ) ಉಪದೇಶಿಸಿರುವ ಈ ಭಕ್ತರು (೮೩ ನೇ ಪದ್ಯದಲ್ಲಿ) ಭಕ್ತಿ ಎಂಬ ಪಾಶದಿಂದ ಮನವನ್ನು ಕಟ್ಟಿದರೆ ಮಾತ್ರ ತುಲಸೀಮಾಲಾಧರನ ಪಾದಭಕ್ತಿ ಆನಂದರೂಪವಾಗುವುದು !" ಎಂದು ಹಾಡಿದಾರೆ. "ನಿನ್ನನ್ನು ಆಶ್ರಯಿಸುವ ಉಜ್ಜೀವಿಸುವ ಉಪಾಯವೊಂದನ್ನು ನೀನೇ ನನಗೆ ಕರುಣಿಸಬೇಕು ! ದುರ್ಲಭವಾದ ನಿನ್ನ ಪಾದಭಕ್ತಿ ಎಂಬ ಭಾಜನವನ್ನು ಇತರರಿಗೆ ದುರ್ಲಭ

ನಾದ ಮಾಯನೇ! ನನಗೆ ಕರುಣಿಸಬೇಕು" ಎಂಬುದಾಗಿ ದೇವರಲ್ಲಿ ಇವರು ಪದೇ ಪದೇ ಮೊರೆಯಿಡುತ್ತಾರೆ.

"ನಾನು ನಿನ್ನನ್ನು ಮರೆಯದಂತೆ ನೀನೇ ಸಂಕಲ್ಪಿಸಬೇಕು' ಎಂದು ಬೇಡುವ ಈ ಪದ್ಯ (೧೦೧) ಬಲು ಚೆನ್ನಾಗಿದೆ.

"ಬೇಡಿ ಒರೆವುದೊಂದು ಉಂಟು : ಬಾಳು ನೀನು ಕಡಲವಣ್ಣದೊಡೆಯ! ವರವ ತರುವ ಬಯಕೆ ಉಂಟೆ ನಿನಗೆ? ಆದೊಡೆ, ಎತ್ತೆತ್ತಲೂ ಅಲೆಯುವ ಮನವು ನಿನ್ನಲ್ಲಿ ನೆಲೆನಿಂತು ನಿನ್ನ ಪಾದಪಂಕಜವನ್ನು ನಿರಂತರ ನೆನೆಯುವಂತೆ ನೀನು ನೆನೆಯಬೇಕು!" ಈ ಎರಡು ಪದ್ಯಗಳೂ ದೇವರಲ್ಲಿ ಅಪರಾಧಕ್ಷಾಮಣ ಮಾಡುವಾಗ ಹೇಳಲು ತಕ್ಕವು!

"ಬೈದು ನಿನ್ನನ್ನು ಬಲ್ಲಂತೆ ಹಳಿದವರಿಗೂ ಎಣೆಯಿಲ್ಲದ ಯುದ್ಧದಲ್ಲಿ ಹೋರಾಡಿ ನಿನ್ನ ಕೋಪಾಗ್ನಿಯಲ್ಲಿ ಬೆಂದವರಿಗೂ ನಿನ್ನ ಬಳಿಸಾರಿ ನಿನ್ನನ್ನು ಹೊಂದಲಾಗುವುದೆನ್ನುವರು! ಆದುದರಿಂದ ನಮ್ಮ ಮಾಯ! ನಾಯಿ ನಾನು, ಗೈದ ಕುತ್ತವ (ತಪ್ಪನ್ನು) ಸತ್ತ (ಗುಣ) ವಾಗಿಯೇ ಕೊಳ್ಳೊ, ಭೂಮಿನಾಥನೇ!"—೧೧೧

"ಪರಿಶುದ್ಧನಾಗಿಯೂ ಅಲ್ಲದೆಯೂ ನಿನ್ನನ್ನು, ತುಲಸೀ ಮುಡಿಯುವನೇ, ನಾನು ಭಜಿಸಿ ನಮಿಸುವುದನ್ನೆಲ್ಲಾ, ನೀನೂ ನಿನ್ನ ಮನದಟ್ಟು ದಯೆಗೈದು ಕ್ಷಮಿಸಬೇಕಯ್ಯಾ! ಕಡಲನೀರ ಹಾಸಿಗೆಯಲ್ಲಿ ಸುಲಗುವಂತೆ ಭಕ್ತರ ಹೃದಯದಲ್ಲಿಯೂ ನೆಲೆಸುವ ಕಡಲ್ವಣ್ಣನೇ! ೧೧೦"

ಈ ಪ್ರಬಂಧದ ಕೊನೆಯ ಎರಡು ಪದ್ಯಗಳ ಭಾವಾನುವಾದದೊಡನೆ ಈ ಲೇಖನಕ್ಕೆ ಮಂಗಳ ಹಾಡಬಹುದು!

ಹೊನ್ನಿ (ಕಾವೇರೀನದಿ) ಬಳಸಿರುವ ಶ್ರೀರಂಗದಲ್ಲಿ ನೆಲಸಿರುವ ಪೂವೈವಣ್ಣ! ಮಾಯ! ಕೇಳು : ನನ್ನುಸಿರೆನ್ನುವ ಬಲವಾದ ಪಾಪರಾಶಿಯಲ್ಲಿ (ನಿನ್ನೊಲವೆಂಬ) ತಳಿರು ಎದ್ದು, ನಿನ್ನ ಪಾದವೆಂಬ ನಲ್ಸೊಡರ ಚೆಲುವಾದ ಮಲರಲ್ಲಿ ಅಗಲದಂತೆ ಬಂದುಸೇರಿ ಎಲ್ಲೂ ಬಾಡದಂತೆ ನಿಂತಿತ್ತೈ! ಎಡೆಬಿಡದ ಹಲವು ಜನ್ಮಗಳಿಂದ ನನ್ನನ್ನು ಬಿಡಿಸಿ, ಇಂದು ಬಂದು ಬಾಳಿಸುವ ಮೇಘವರ್ಣನು ತಬ್ಬಿಕೊಂಡು, ತನ್ನೊಡಲಾದ ನನ್ನೊಳಗೇ ತನ್ನ ನಿತ್ಯವಾದ ಜ್ಯೋತಿಯನ್ನು ಸೇರಿಸಿಬಿಟ್ಟನು! ಆದುದರಿಂದ ನನ್ನ ಉಸಿರು (ಆತ್ಮವೂ) ಕಟ್ಟುಗಳನ್ನೆಲ್ಲಾ ಹರಿದು ಅಳಿಯದ ಸುಖದ ಬೀಡನ್ನು (ಮುಕ್ತಿಯನ್ನು) ಪಡೆಯಿತ್ತೈ!

ಅ. ನ. ಶ್ರೀನಿವಾಸೈಯಂಗಾರ್

# ಸೈನಿಕರು ಹಾಡಿದ ಶಾಂತಿಗೀತೆ

## ೧

ಒಂದು ದೇಶದಲ್ಲಿ ಚರ್ಮದ ಬಣ್ಣ ಹಳದಿಯದಿರಬಹುದು. ಮತ್ತೊಂದರಲ್ಲಿ ಅದು ಹೊಳೆವ ಬಿಳುಪಾಗಿರಬಹುದು. ಇನ್ನೊಂದರಲ್ಲಿ ಅದು ಕಪ್ಪೊ ಎಣ್ಣೆಗೆಂಪೊ ಆಗಿರಬಹುದು. ಆದರೆ ಆ ಎಲ್ಲ ಚರ್ಮಗಳ ಒಳಗೆ ನಾಡಿನಾಡಿಗಳಲ್ಲಿ ಹರಿವ ರಕ್ತ ಮಾತ್ರ ಒಂದೇ.

ಅವನನ್ನು ಚೈನಾದವನೆನ್ನಬಹುದು. ಇವನನ್ನು ಇಂಗ್ಲೆಂಡಿನವನೆನ್ನಬಹುದು. ಮಗುದೊಬ್ಬನನ್ನು ನೀಗ್ರೋ ಎಂದೋ, ಭಾರತೀಯ ಎಂದೋ ಗುರುತಿಗಾಗಿ ಕರೆಯಬಹುದು. ಇವರೆಲ್ಲರಲ್ಲೂ ಇರುವುದು ಒಂದೇ—ಮಾನವೀಯತೆ. ಎಲ್ಲರಿಗೂ ಸಮಾನವಾದುದು ಮಾನವಧರ್ಮ.

ದುಃಖವಾದಾಗ ಇವನೂ ಅಳುತ್ತಾನೆ. ಎರಡು ಹನಿ ಹೆಚ್ಚಾಗಬಹುದು. ಅಥವಾ ಎರಡು ಹನಿ ಕಡಿಮೆಯಾಗಬಹುದು. ಸಂತೋಷ ಬಂದಾಗ ಅವನೂ ಹಿಗ್ಗುತ್ತಾನೆ; ಹಿಗ್ಗನ್ನು ಪ್ರಕಟಿಸುವಾಗ ಒಂದಿನಿತು ಪ್ರಮಾಣ ವ್ಯತ್ಯಾಸವಾಗಬಹುದು; ಅಷ್ಟೆ.

ಇಂಥ ಒಂದು ಸಮಾನ ಮಾನವಧರ್ಮ ನಮ್ಮೆಲ್ಲರಿಗೂ ಇರುವುದರಿಂದಲೇ ಇಷ್ಟೆಲ್ಲ ಚರ್ಮ, ವರ್ಣ, ಕುಲ ಇವುಗಳ ಭಿನ್ನತೆಯಿದ್ದರೂ ವಿಶ್ವಮಾನವತಾದೃಷ್ಟಿ ಮೂಡುತ್ತಾ ಬರುತ್ತಿರುವುದು. ಒಂದು ದೇಶದ ಸಂಸ್ಕೃತಿಯನ್ನು ಮತ್ತೊಂದು ದೇಶ, ಒಂದು ದೇಶದ ಕಲೆಯನ್ನು ಮಗುದೊಂದು ನಾಡು ಕೊಳುಕೊಡೆ ಮಾಡಿಕೊಳ್ಳುತ್ತಿರುವುದು. ಇಂಗ್ಲೆಂಡಿನ ಕವನಗಳನ್ನು ಕನ್ನಡಿಗರು ಓದುವುದು; ಚೀನದ ಕಾವ್ಯವನ್ನು ಇಂಗ್ಲೀಷರು ಅಭ್ಯಾಸಿಸುವುದು.

ಮಾನವ ಇತಿಹಾಸ ಆರಂಭವಾದ ದಿನದಿಂದ ಮಾನವ ಒಂದು ಕರಾಳ ಸಮಸ್ಯೆಯನ್ನು ಎದುರಿಸುತ್ತಾ ಬಂದಿದ್ದಾನೆ. ಇಷ್ಟೆಲ್ಲ ನಾಗರಿಕತೆ ಮತ್ತು ಸಂಸ್ಕೃತಿಗಳ ವಿಕಾಸವಾಗುತ್ತಾ ನಡೆದಿದ್ದರೂ ಆಸುರೀವೃತ್ತಿಯ ಯುದ್ಧವನ್ನು ಕಂಡು ನಾಚಿಕೊಳ್ಳುತ್ತಾ ಬಂದಿದ್ದಾನೆ. ಆ ಪಶುಪ್ರವೃತ್ತಿಯ ಯುದ್ಧ ಅನೇಕ ನಾಗರಿಕತೆಗಳನ್ನು, ಯುಗಯುಗಗಳ ಜನರು ತಪಸ್ಸುಮಾಡಿ ಸಾಧಿಸಿದ್ದನ್ನು ಕ್ಷಣಮಾತ್ರದಲ್ಲಿ ಭಸ್ಮಾಸುರನಂತೆ ಸುಟ್ಟಿದೆ. ಅದು ತನ್ನ ಹಸ್ತವನ್ನು ಚಾಚಿದಾಗಲೆಲ್ಲಾ ರಕ್ತವೇ; ಕಮಟುವಾಸನೆಯ ಕುರುಕ್ಷೇತ್ರಗಳೇ, ಕೊಲೆ ರಕ್ತದ ಕೆಸರೇ! ಇವೆಲ್ಲಕ್ಕೆ ಹೆಚ್ಚಾಗಿ ತುಂಬಿ ಅರಳಿದ ಸಂಸ್ಕೃತಿಯ ಗೋರಿ!

ಇಂಥ ಯುದ್ಧ ಕೆಲವು ಬಾರಿ "ರಾಕ್ಷಸ"ರಿಂದ ರಕ್ಷಣೆ ಪಡೆಯುವುದಕ್ಕಾಗಿ ನಡೆದಿದೆ. ಹಲವು ಬಾರಿ "ರಾಕ್ಷಸ"ನೊಬ್ಬನ ಆಜ್ಞೆಗಾಗಿ, ಅವನೊಬ್ಬನ ಕೀಳುತೃಪ್ತಿಗಾಗಿ ಲಕ್ಷಾಂತರ ಜೀವಿಗಳ ಕೊಲೆಯಲ್ಲಿ ಪರ್ಯವಸಾನವಾಗಿದೆ. ಎರಡರ ಕಾರಣವೂ ಒಂದೇ. ರಾಕ್ಷಸನಿಗಾಗಿ, ಇಲ್ಲ, ರಾಕ್ಷಸನನ್ನು ಸೀಳಲಿಕ್ಕಾಗಿ. ಈ ಕಠೋರ ಸತ್ಯವನ್ನು ಮಾನವ ಇತಿಹಾಸ ನಮ್ಮ ಕಣ್ಣೆದುರು ಇಡುತ್ತಲೇ ಬಂದಿದೆ.

ಅದು ಮೇಳನಾಯಕರ ಮಾತಾಗಿ ಅಶ್ವತ್ಥಾಮನ್ ನಾಟಕ[1]ದಲ್ಲಿ "ಓ ಪೊಲ್ಲ ಯುದ್ಧಮೇ, ಎಂದು ನಿಲ್ವಯ್! ಓ ತಾಯೆ ಶಾಂತಿಯೇ ಎಂದು ಗೆಲ್ವಯ್!" ಎಂದು ಮೊಳಗಿದೆ. Rudyard Kipling ಕವಿಯ ಕವನವೊಂದರಲ್ಲಿ ಕರುಳನ್ನು ಕಿವುಚುವಂತೆ ಹೊಮ್ಮಿದೆ.

---

[1] ಸೊಫೊಕ್ಲಿಸ್ ಮಹಾಕವಿಯ ಎಜಾಕ್ಸ್ (Ajax) ರುದ್ರನಾಟಕವು ಶ್ರೀಯವರ ಕಯ್ಯಲ್ಲಿ ಅಶ್ವತ್ಥಾಮನ್ ನಾಟಕವಾಗಿ ಹೊಸ ಜನ್ಮತಾಳಿದೆ.

ಹಾಳುಬಿದ್ದ ವಿಶ್ವದ ಕೋಟ್ಯಂತರ "ಹಂಪೆ"ಗಳ ಮುರುಕು ಗೋಡೆಗಳ ಸಿಟ್ಟುಸಿರಾಗಿ ಸುಳಿದಿದೆ. ಇಲ್ಲವೇ ಚೀನದ ಜನತೆಯ, ಅದರಲ್ಲೂ ಯೋಧರ, ನೋವು ಸರಳಿಕೆಯ ಕಂಬನಿಯಾಗಿ ತುಳುಕಿದೆ.

೨

ಚೀನದ ಈ ಶಾಂತಿ ಕಹಳೆ, ಈ ಶ್ವೇತಗೀತೆಯೆಲ್ಲ ಶ್ರೀ Rewy Alley ಅವರು ಆಂಗ್ಲಕ್ಕೆ ತಂದಿರುವ "Peace through the ages" ಹಾಗೂ "The People Speak Out" ಗ್ರಂಥಗಳಲ್ಲಿ ಗುಣುಗುಣಿಸುತ್ತಾ ಗುಂಜಾರವಗೆಯ್ಯುತ್ತಲೇ ಇದೆ. ಅದರಲ್ಲೂ Peace through the ages ಗ್ರಂಥವು ಅಂಥ ಶಾಂತಿಯ ಶ್ವೇತ ವೈಜಯಂತಿಯಾಗಿ ನಭಶ್ಚುಂಬಿಯಾಗಿ ಹಾರಾಡುತ್ತಿದೆ. ಆ ಚೈನಾಭಾಷೆಯ ಗ್ರಂಥವನ್ನು ಆಂಗ್ಲಕ್ಕೆ ತಂದ ಶ್ರೀ Rewy Alley ಅವರ ಮುನ್ನುಡಿಯ ಈ ಮಾತು ಅದನ್ನು ಸಾರಿ ಹೇಳುತ್ತಲಿದೆ:—"Really, almost all the Poetry of China, which has come down to us through the ages is *Peace poetry*" (Preface, p. iii.)

ಈ Peace through the ages ಗ್ರಂಥದ ಎಲ್ಲ ಮುಖಗಳನ್ನೂ ಚಿತ್ರಿಸುವುದು ಈ ಮಿತಪರಿಧಿಯೊಳಗೆ ಅಸಾಧ್ಯವಾದ್ದರಿಂದ ಒಂದು ಮುಖವನ್ನಷ್ಟೇ ಇಲ್ಲಿ ಚಿತ್ರಿಸಲು ಯತ್ನಿಸಿದೆ.

ನಾಗರಿಕರು, ಮಡದಿ, ಮಕ್ಕಳು, ತಾಯಂದಿರು ಶಾಂತಿಯ ಹಾರೈಕೆಯನ್ನು ಒಂದು ರೀತಿಯಲ್ಲಿ ಮಾಡಿದರೆ, ನೇರಯುದ್ಧವನ್ನೇ ಮಾಡುವ ಯೋಧಗಣ ಈ ಶಾಂತಿಯನ್ನು ಹೇಗೆ ಬಯಸುತ್ತದೆ, ಏಕೆ ಬಯಸುತ್ತದೆ ಎಂಬುದನ್ನಷ್ಟೆ ಇಲ್ಲಿ ಸಂಗ್ರಹವಾಗಿ ಚಿತ್ರಿಸಲು ಯತ್ನಿಸಿದೆ. ಏಕೆಂದರೆ ಆ ಯೋಧ ಮಗನಾಗಿ ತಂದೆತಾಯಿಗಳನ್ನು ಬಿಟ್ಟುಬರುತ್ತಾನೆ. ನಲ್ಲನಾಗಿ ಜೇನಿನಿಯಳನ್ನು ಬಿಡಲಾರದೆ ಬಿಟ್ಟುಬರುತ್ತಾನೆ. ತನ್ನ ಪಯಣವನ್ನು ತಡೆದು ನಿಲ್ಲಿಸಿದ ಕರುಳ ಕುಡಿಗಳ ಕಣ್ತಪ್ಪಿಸಿ ಬರುತ್ತಾನೆ. ಅವನ ಒಂದು ಜೀವದ ನೋವು ನರಳಿಕೆಗಳಲ್ಲಿ ಈ ಎಲ್ಲ ಜೀವ—ಜೀವನಗಳೂ ಹಾಸುಹೊಕ್ಕಾಗಿವೆ.

ಈ ದೃಷ್ಟಿಯಿಂದ ಯೋಧನು ಏನನ್ನು ಬಯಸುತ್ತಾನೆ ಎಂಬುದನ್ನು ನೋಡೋಣ. ಅವನ "ಹುಲಿಯ ಹೆಂಗರುಳನ್ನು" ಗುರುತಿಸೋಣ. ಗುಂಡು ಹೊತ್ತ ಗುಂಡಿಗೆಯ ಒಳಗಿರುವ ಅಪಾರ ಪ್ರೇಮ ವಾತ್ಸಲ್ಯಗಳನ್ನು ಕಂಡು ಅಭಿಮಾನಗೊಳ್ಳೋಣ. ಅವನ ಬಾಯಿಂದಲೇ ಬರುವ ಶಾಂತಿಯ ಹಾರೈಕೆಯನ್ನು ಆಲಿಸಿ ಇನ್ನಾದರೂ ಎಚ್ಚರಗೊಳ್ಳೋಣ.

೩

ದೇಶದ ಮೇಲೆ ಧಾಳಿ ನಡೆದಿದೆ. ಸೈನಿಕರನ್ನು ಸೇರಿಸಿಕೊಳ್ಳತೊಡಗಿದ್ದಾರೆ. ಊರಲ್ಲಿ ಬಡತನದಿಂದ ತಿನ್ನಲಿಕ್ಕಿಲ್ಲದೆ ಸಾಯಬೇಕಾಗಿದ್ದ ದರಿದ್ರಜನ, ಶತ್ರುಪೀಡೆಯಿಂದ ನರಳಬೇಕಾಗಿದ್ದ ಜನ ದೇಶಪ್ರೇಮದಿಂದ ಸೈನ್ಯಕ್ಕೆ ಸೇರಿಕೊಂಡಿದೆ. ಊರಿಗೆ ಬಂದು ಮಗ ಪಿತೃಗಳಿಗೆ, ನಲ್ಲ ನಲ್ಲೆಗೆ, ತಂದೆ ಮಕ್ಕಳಿಗೆ ಆ ಕಠೋರವಾರ್ತೆಯನ್ನು ತಿಳಿಸಿದ್ದಾಗಿದೆ. ಮನೆಯವರೆಲ್ಲ ಕಣ್ಣೀರಿನಲ್ಲಿ ಕೈ ತೊಳೆದಿದ್ದಾರೆ. ಸಂತೈಸುವ ಕೆಲಸವೂ ಆಗಿದೆ. ಆದರೆ ಎಷ್ಟು ದಿನ ಸಂತೈಸುವಿಕೆ? ಕೊನೆಗೆ ಒಂದು ದಿನ ಯಮನ ಕರೆಯಂತೆ ಸೈನ್ಯಾಧಿಕಾರಿಯಿಂದ ಆಜ್ಞೆ ಬಂದಿದೆ. ನಾಳೆ ತಾನಿನ್ನು ನಸುಕಿನಲ್ಲೆ ಹೊರಡಬೇಕು.

ತುಂಬು ಯೌವನದ ದಂಪತಿಗಳವರು. ಒಟ್ಟೊಟ್ಟಿಗೆ ಜೀವನವನ್ನು ಸುಖವಾಗಿ ಬಾಳಿದವರು. ಈಗ ಬರಿಯ ನೋವಷ್ಟೇ ಅವರ ಪಾಲಿಗೆ! ಸಂಜೆಯೂ ರಾತ್ರಿಯೂ ಊಟವಿಲ್ಲದೆ ಕಳೆಯುತ್ತವೆ. ನಲ್ಲ ಇರುಳೆಲ್ಲ ನಲ್ಲೆಯ ಕೈ ಹಿಡಿದೇ ಕೂರುತ್ತಾನೆ. ಸುರಿಯುವ ಕಣ್ಣೀರನ್ನು ಒರಸದೆಯೇ, ಬಿಟ್ಟ ಕಣ್ಣುಗಳಿಂದ ನಲ್ಲೆ ಒಂದೇ ಸಮನೆ ಗಂಡನನ್ನು ನೋಡುತ್ತಲೇ ಕೂರುತ್ತಾಳೆ. ಒಮ್ಮೊಮ್ಮೆ ತೊಡೆಯ ಮೇಲೆ ಮಲಗಿರುವ ಮಕ್ಕಳ ನೆನಪು. ರಾತ್ರಿಯೆಲ್ಲ ಹೀಗೆಯೇ! ಈ ರಾತ್ರಿ ಇಂತೆಯೇ ದೀರ್ಘವಾಗಲಿ, ಬೆಳಗಾಗದಿರಲಿ; ಗಂಡ ಹೋಗದಿರಲಿ

ಎನ್ನುತ್ತಾಳೆ. ಆದರೆ ಕೋಳಿ ಕೂಗುತ್ತದೆ. ಬೆಳ್ಳಿಚುಕ್ಕಿ ಕರಗುತ್ತದೆ. ಅಗಲಿಕೆಯ ಗಳಿಗೆ ಬರುತ್ತದೆ. ಗಂಡನು ಹೆಂಡತಿಯ ಕೈಯನ್ನು ಹಿಡಿದುಕೊಂಡು ಮಾತಾಡಲು ಹೋಗುತ್ತಾನೆ. ಮಾತು ಬರದು. ಆವಳಿಗೂ ದುಃಖ ತಡೆಯಲಾರದಷ್ಟು. ಮಾತಾಡಲು ಹೋಗುತ್ತಾಳೆ. ಮಾತು ಸೋತುಬಿಡುತ್ತವೆ. ಗಂಡ ಹೆಂಡತಿಯ ಕೈಯನ್ನು, ಹೆಂಡತಿ ಗಂಡನ ಕೈಯನ್ನು ಭದ್ರವಾಗಿ ಹಿಡಿದುಕೊಳ್ಳುತ್ತಾರೆ. ದುಃಖವೇ ದುಃಖ. "We clasp hands together, and oh! that last long sigh, that last farewell, our faces wet with tears" (p. 15.)

ಕಣ್ಣೀರು, ನಿಟ್ಟುಸಿರುಗಳದೇ ಆಗ ಮಾತು. ಏನೇನೊ ಅವು ಹೇಳುತ್ತವೆ. ಏನೇನೋ ಕೇಳುತ್ತವೆ. ಗಂಡನಂತೂ ಭಾರವಾದ ಹೃದಯವನ್ನು ಹೊತ್ತು ಬಿಡಲಾರದೆ ಮಡದಿಯನ್ನು ಬಿಟ್ಟು ಕೋವಿಯನ್ನು ಹೆಗಲಿಗೇರಿಸುತ್ತಾನೆ. 'ನಲ್ಲೆ, ನಾವೊಟ್ಟಿಗೆ ಕಳೆದ ದಿವ್ಯ ಘಳಿಗೆಗಳನ್ನು ಮರೆಯ ಬೇಡ. ನಾನು ಬದುಕಿ ಉಳಿದರೆ ಇದೋ ನಿನ್ನಲ್ಲಿಗೆ ಹಾರಿಬರುವೆ. . . . ಇಲ್ಲವೋ . . .' ಮಾತು ಅರ್ಧವಾಗಿ ಕಣ್ಣು ಹನಿದು ಮುಂದಕ್ಕೆ ಹೆಜ್ಜೆಯಿಡುತ್ತಾನೆ. ಇನ್ನೇನು ಹೊಸಿತಿಲನ್ನು ದಾಟಬೇಕು. ಅವನದೇ ಕರುಳಿನ ಚೂರು, ಪಕ್ಕದಲ್ಲಿ "Then as he gets his weapon to go his children pull at his clothes to make him stay" (p. 32.) ಅಂದು ತಪೋವನ ವನ್ನು ಬಿಟ್ಟುಹೊರಟ ಶಕುಂತಲೆಯನ್ನು ಜಿಂಕೆಯೊಂದು ಬಟ್ಟೆಹಿಡಿದು ನಿಲ್ಲಿಸಿತು. ಇಲ್ಲಿ ಕರುಳ ಕುಡಿಯೇ ಹಿಡಿದು ನಿಲ್ಲಿಸಿದೆ. ನಿಲ್ಲಬೇಕು. ಆದರೆ ಈಗವನು ತಂದೆಯಲ್ಲ; ತನ್ನ ಪತ್ನಿಯ ನಲ್ಲನೂ ಅಲ್ಲ. ಸೈನಿಕ. ಎಲ್ಲ ಒಲವುಗಳನ್ನೂ ಕಳಚಿ ಎಸೆದ ಸೈನಿಕ. ಹೊರಡುತ್ತಾನೆ. ಜೊತೆಗೆ ಮತ್ತೊಬ್ಬ ಸೈನಿಕ ದಾರಿ ನಡೆಯುವಾಗ ಪಕ್ಕದ ಮನೆಯಲ್ಲೂ ಅಂಥದೇ ಚಿತ್ರ! ಅದೇ ಅಂತ್ಯ!

ಇದರ ಚಿಂತೆಯಲ್ಲಿ ಅವನು ಕೂರುವಂತಿಲ್ಲ. ಸುಮ್ಮನೆ ಮುಂದೆ ಕುರಿಯಂತೆ ನಡೆಯ ಬೇಕು. ಕುರುಬ ನಿಂತಲ್ಲಿ ಬೀಡು. ಕುರುಬ ಹೊರಟಲ್ಲಿ ಮೇವು. ಅಷ್ಟೆ. ಕುರಿಗಳಂತೆ ನಡೆದರು.

ಒಂದುತಿಂಗಳು—ಎರಡುತಿಂಗಳು . . . . ಮೂರುತಿಂಗಳು—ತಾಯ್ನಾಡನ್ನು ಬಿಟ್ಟು ಹೊರಹೊರಟರು.

ಊರಿನಿಂದ ನೂರಾರು ಮೈಲಿದೂರ ಹೊರಟರು. ತನ್ನ ಕಾರ್ಯಕ್ರಮದಲ್ಲಿ ಮನೆಯನ್ನು ಮರೆತೆನೇನೋ ಎನ್ನಿಸುವುದು. ರುಂಡಮಾಲೆಗಳಂತೆ ಮೈತುಂಬ ಗುಂಡುಗಳ ಮಾಲೆ. ಕೈಯಲ್ಲಿ ಗುಂಡುತುಂಬಿದ ಕೋವಿ. ಅದರ ತುದಿಗೆ ಸಿಕ್ಕಿದ್ದೆಲ್ಲವನ್ನೂ ಚೂರುಚೂರಾಗಿ ಹರಿಯುವ ವಿಷದ ಕೂರೀಟಿ! ಮಾನವ ವ್ಯಾಪಾರವನ್ನು ಮರಸುವಂತಿರುವ ಉಡುಪು. ಅವನೀಗ ಶತ್ರುಶಿಬಿರಗಳ ಬಳಿ ಪ್ರಾಣರಕ್ಷಣೆಗೆ ಎಚ್ಚತ್ತು ಓಡಾಡಬೇಕು. ಇರುಳೆಲ್ಲ ತಾನೇ ಕೊರೆದ ಹಳ್ಳಗಳಲ್ಲಿ ಕುಳಿತು ತಾಯ್ನಾಡಿನ ಹಾಡು ಹಾಡಬೇಕು. ನಲ್ಲೆ ಮಕ್ಕಳ ಕನವರಿಕೆ. ಇವಷ್ಟೇ ಅವನಿಗೆ ಹುರುಪೀಯ ಬೇಕು.

ಮತ್ತೆ ಚಲಸೆ. ಕೊನೆಗೊಮ್ಮೆಗೆ ಊರೊಂದರ ಸಣ್ಣ ಕಾಳೆಗದ ಜಯ. ಅಲ್ಲಿ ಶಿಬಿರ. ರಾತ್ರಿಯಲ್ಲವನಿಗೆ ವಿರಾಮ. ಒಂದು ನಾಲ್ಕೈದು ದಿನಗಳ ವಿರಾಮ. ವಿರಾಮ ಅವನಿಗೆ ನಾಗರಿಕನ ಹಕ್ಕನ್ನು ತಾತ್ಕಾಲಿಕವಾಗಿ ತಂದುಕೊಡುತ್ತದೆ. ನಲ್ಲೆ ಮಕ್ಕಳನ್ನು ಕುರಿತು ಯೋಚಿಸಲು ಹೆಚ್ಚು ಅನುವು ದೊರೆಯುತ್ತದೆ. ಅವಳೇನು ಮಾಡುತ್ತಿರಬಹುದು? ನೂರಾರು ಮೈಲುಗಳ ದೂರ ಹಕ್ಕಿಯಂತೆ ಹಾರಿ ದಾಟುವುದಾಗಿದ್ದರೆ? ಅದಾಗದ ಮಾತು. ನಲ್ಲೆಗಾದರೂ ಗರಿ ಮೂಡಿ ಬಂದಿದ್ದರೆ? ಅವನ ಹಾರೈಕೆ ಕೈಗೂಡಿದಂತೆ ಬೆಳಗ್ಗೆ ಕಾಗದವೂ ಬರುತ್ತದೆ. ಅಕ್ಷರಗಳನ್ನು ಮತ್ತೆ ಮತ್ತೆ ನೋಡುತ್ತಾನೆ. ತನ್ನವಳ ಅಕ್ಕರೆಯ ಅಕ್ಕರಗಳು ಅವು. ಅವನ್ನೇ ಚುಂಬಿಸುತ್ತಾನೆ. ಆ ಕಾಗದವನ್ನು ಭದ್ರವಾಗಿ ಹಿಡಿಯಲ್ಲಿ ಹಿಡಿದು ಎದೆಗವಚಿಕೊಳ್ಳುತ್ತಾನೆ. ತನ್ನ ಇನಿಯಳನ್ನೆ ಆಲಿಂಗಿಸಿದಂತೆ ಆನಂದಗೊಳ್ಳುತ್ತಾನೆ. ಎದೆಗವುಚಿಕೊಂಡಿದ್ದ ಕಾಗದ ವನ್ನೀಗ ತೆರೆಯುತ್ತಾನೆ. ನಲ್ಲೆಯ ಹೃದಯವನ್ನೆ ಅದ ತೆರೆಯುತ್ತದೆ. ಓದತೊಡಗುತ್ತಾನೆ— 'ನಲ್ಲ ನೀನಿಲ್ಲದ ನಾನು ಹೇಗೋ ಇದ್ದೇನೆ. ನೀನು ಹೊರಟೆ, ಹೊರಟೇ ಹೊರಟೆ. ನನ್ನ

ಬಾಳ ವಸಂತವೆಲ್ಲ ನಿನ್ನನ್ನು ಹಿಂಬಾಲಿಸಿ ಬಂದಿದೆ. ಈಗ ನನಗೂ ನಿನಗೂ ಮಧ್ಯೆ ಸಾವಿರ ಮೈಲಿಗಳು ನಿಂತಿವೆ. ನಾನು ದಕ್ಷಿಣ ಧ್ರುವದಲ್ಲಿ—ನೀನು ಉತ್ತರ ಧ್ರುವದಲ್ಲಿ. ಈ ಪತ್ರವೊಂದೆ ನಮ್ಮಿಬ್ಬರಿಗಿರುವ ಗೆಳೆಯ. ನನ್ನ ಎದೆಯನ್ನು ನಿನಗೆ ನಿನ್ನ ಎದೆಯನ್ನು ನನಗೆ ತರುವ ಆತ್ಮೀಯ. ನಿನ್ನನ್ನು ಮತ್ತೆಂದು ಕಾಣುವೆನೊ ? ಒಂಟಿ ಹಕ್ಕಿಯಂತೆ ನಿನ್ನನ್ನೆ ಕಾಯುತ್ತಿರುವೆ. ನೀನೆ ನಟ್ಟ ಬಳ್ಳಿಯಿಂದ ಅರಳಿದ ಹೂಗಳು ಈಗಲೂ ಮನೆ ಮುಂದೆ ಸುರಿಯುತ್ತವೆ. ಆದರೆ ಅವನ್ನು ಮುಡಿಸುವ ನೀನಲ್ಲದೆ ಅವೆಲ್ಲ ನಿನಗಾಗಿ ಇದ್ದಲ್ಲೆ ಉರುಳಿ ಬಾಡಿ ಕೊಳೆಯುತ್ತಿವೆ. ಇಷ್ಟಕ್ಕೆ ಮುಗಿಯುವುದಿಲ್ಲ ಅವಳ ಪತ್ರ. ಎಲ್ಲಕ್ಕಿಂತ ಹೆಚ್ಚಿಗೆ, ಗಂಡ ಜೊತೆಗಿದ್ದಂದು ಮುದ್ದು ಮಾಡಿ ಹೊಲಿಸಿದ ರವಿಕೆಗಳತ್ತ ಅವಳು ಗಮನ ಹರಿಸುತ್ತಾಳೆ. ಅವು ಇಂದು ಅವಳಿಗೆ ಸಡಿಲ ವಾಗಿವೆಯಂತೆ. "You have been gone so long and I have become so thin. My clothes are loose" (P. 18.) ಮತ್ತೊಮ್ಮೆ ಪತ್ರ ಬರೆಯುವಾಗ ಒಂದು ಪಾರ್ಸಲ್ ಕಳುಹಿಸುವಳಂತೆ.

"I shall put a mirror in a box . . . and send it to him ; seeing his own grey hairs he will know how late it is and return to me." (p. 30.) ಈ ಯುದ್ಧ ಎಷ್ಟೊಂದು ಯೌವನಗಳನ್ನು ಹಾಳುಮಾಡುತ್ತಲಿದೆ ಎಂಬುದನ್ನು ತಿಳಿಸುವಳಂತೆ.

ಇದನ್ನ ಓದಿದ ಗಂಡ, ಕೋವಿ ಹಿಡಿದ ಧೀರ, ಓಡಿಹೋಗಿ ಅಧಿಕಾರಿಯನ್ನು ಪ್ರಾರ್ಥಿಸುವನು. ಆ ಪ್ರಾರ್ಥನೆ ತಿರಸ್ಕೃತವಾಗುವುದೇನೂ ತಡವಲ್ಲ. ಆಗ ಭಾರವಾದ ನಿಟ್ಟುಸಿರನ್ನು ಉರುಳಿಸಬೇಕು. ಕಂಬನಿ ಕರೆಯಬೇಕು. ಯುದ್ಧವನ್ನು ಶಪಿಸಬೇಕು. ಇದರಿಂದ ನಲ್ಲೆಯನ್ನೂ ಮಕ್ಕಳನ್ನೂ ಕಂಡಂತಾದೀತೆ? ತನ್ನ ಮನಸ್ಸನ್ನು ಗಟ್ಟಿಮಾಡಿಕೊಂಡು ಈ ಎರಡು ಸಾಲನ್ನು ಮಾತ್ರ ಬರೆಯುತ್ತಾನೆ. "You must take care of yourself and forget me." ಆಗಲೂ ಅವಳ ಸುಖ ; ಅವಳ ಜೀವನ, ಅವನ ಆಲೋಚನೆ.

ಸೈನಿಕ ಶಿಬಿರದಲ್ಲಿ ತನ್ನೊಬ್ಬನದೆ ಅಲ್ಲ ಈ ಬಾಳು. ತನ್ನಂಥವರೇ ಇನ್ನೂ ಹತ್ತಾರು ಜನರಿದ್ದಾರೆ. ಒಬ್ಬರೊಬ್ಬರ ದುಃಖವನ್ನು ತೋಡಿಕೊಳ್ಳುತ್ತಾರೆ. ಅವರೆಲ್ಲರ ಬಾಳೂ ಹೀಗೆ. ಅವರೆಲ್ಲ ಕುಳಿತು ಯೋಚಿಸುತ್ತಾರೆ. ಸೈನಿಕ ಎಂಥ ಕ್ಷುದ್ರಜೀವಿ ಎನ್ನಿಸುತ್ತದೆ. ತಮ್ಮ ನಾಯಕರು ತಮ್ಮ ಜೊತೆಗಿಲ್ಲ. ಅವರವರ ಕೇಂದ್ರ ಶಿಬಿರಗಳಲ್ಲೆ ಅವರು ಇದ್ದಾರೆ. ". . . In the tents of headquarters lovely ladies comfort the generals with dance and song." (p. 37). ಆದರೆ ಈ ಸೈನಿಕರು ? ಅವರೇ ಅಂದುಕೊಳ್ಳುವಂತೆ ". . . Weep . . . tears fall." ಇದಕ್ಕಿಂತ ಕಠೋರವಾದುದು ಮತ್ತೊಂದಿದೆ. ತನ್ನ ಅರಸೊತ್ತಿಗೆಗಾಗಿಯೊ ಸುಖಕ್ಕಾಗಿಯೊ ಯುದ್ಧಮಾಡಿಸುವ ಆ ಭೂಪ ಮಡದಿಯೊಡನಿದ್ದಾನೆ, ಮನೆಯಲ್ಲಿ ! ". . . our chief stays safely at home but sends us to guard of Fu, home-sick am I, when shall I return ?"

ಅವನೊಬ್ಬನು ಕುಳಿತು ಆಜ್ಞೆ ಕಳುಹಿಸುವನು. ಸಾಯುವವರು ಯಾರು ? ನರಳುವವರು ಯಾರು ? ಯಾರಿಗಾಗಿ ಇಷ್ಟೆಲ್ಲ ಜನಕೋಟಿಯ ನರಳಿಕೆ ? ಆ ಒಬ್ಬನಿಗಾಗೇನು ? ಅವನಾದರೂ ಎಂಥವನು ? ತಾನು ಮಾತ್ರ ಮಡದಿಯೊಡನೆ ಚಕ್ಕಂದವಾಡುತ್ತ ಅಮಲೇರಿ ಉರುಳಾಡುವನು. ಯೋಧ ಇಲ್ಲಿ ಗುಂಡಿಗೆದೆಕೊಟ್ಟು ಉರುಳುವನು. ನಾಯಕನು ಮಾತ್ರ ಯುದ್ಧಕ್ಕೆ ಮೊದಲು ತಂಪಿನ ಶಿಬಿರದಲ್ಲೆ. ಯುದ್ಧವಾಗುವಾಗಲೂ ತಂಪಿನ ಸೊಗಸಿನ ಶಿಬಿರದಲ್ಲೆ. ಯುದ್ಧ ಮುಗಿದರೂ ಅಲ್ಲೆ. ಆದರೆ ಸೈನಿಕ ? ಅದನ್ನೆಲ್ಲ ನೆನೆಯುತ್ತ ತನ್ನ ದಾರುಣವೂ ಅಸಹನೀಯವೂ ಆದ ವಾಸ್ತವ ಸ್ಥಿತಿ ಕಣ್ಣೆದಿರಾಗುತ್ತದೆ. ಆ ನಾಯಕರು ಯುದ್ಧಕ್ಕಾದರೂ ಕೊನೆತರುವರೇನು ? ಇಲ್ಲ. ಶವಗಳನ್ನು ಮೇಜು ಮಾಡಿಕೊಂಡೇ ಆಜ್ಞೆಗಳನ್ನು ಹೊರಡಿಸುವರು. ಸೈನಿಕನ ಜೀವನವೆಂದರೆ ನೊಳ್ಳೆಗೂ ನೊಣಕ್ಕೂ ಕೀಳೇನೊ ಎನ್ನುವಂತಾಗುವುದು. ಇಲ್ಲಿ ಮಾನವೀಯ ಭಾವಕ್ಕೇ

ಬೆಲೆಯಿಲ್ಲ. ಏಕೆಂದರೆ ನಾಯಕ ಸೈನ್ಯದ ಚಲನೆಗಾಗಿ ಹೊಸ ಹೊಸ ನಕ್ಷೆಗಳನ್ನೇ ರೂಪಿಸುತ್ತಾನೆ.

ಮತ್ತೆ ಆಜ್ಞೆ, ಮತ್ತೆ ಚಲನೆ. ಎಲ್ಲಾದರೊಮ್ಮೆ ಇದ್ದಕ್ಕಿದ್ದಂತೆ ಶತ್ರು ಧಾಳಿ. ಧಾಳಿ ಯೆಂದರೆ ಮರುಭೂಮಿಯ ಬಿರುಗಾಳಿ. ಅವನೆಂದರೆ ಸಾಕ್ಷಾತ್ ಯಮನೇ. ಅವನು ತರುವುದು ಗುಂಡಲ್ಲ; ಸಾವಿನ ಬೀಜ. ನಾವು ಉಳುವಷ್ಟು ಸುಲಭವಾಗಿ ಅವನು ಕೊಲ್ಲುತ್ತಾನೆ. ಬದುಕಿ ಉಳಿದರೆ ಸತ್ತ ಗೆಳೆಯರ ಹೆಣಗಳ ಮೇಲೆಯೇ ನಡೆಯಬೇಕು.

ಉರುಳಿದ ಶವಗಳನ್ನು ಆಗಸವನ್ನಲೆಯುವ ಹದ್ದುಗಳಿಗೆ ನಾಯಿ ನರಿಗಳಿಗೆ ಬಿಟ್ಟು ಹೊರಡಬೇಕು. ನಿನ್ನೆಯ ಜೀವ ಇಂದು ಹೆಣ. ಅವುಗಳು ಕೊಳೆತು ನಾರುವಲ್ಲೆ ಹೆಜ್ಜೆ. ಅದನ್ನು ತುಳಿದೇ ಮುಂದೆ ಚಲನೆ. ಹೆಣಗಳನ್ನು ಹೂಳಲಿಲ್ಲ. ಇದಕ್ಕಾಗಿ ಯಾವ "ಅಂತಿಗೊನೆ[2]"ನೆಯು ದುರಂತವೂ ಆಗಲಿಲ್ಲ. ಅಂತ್ಯಸಂಸ್ಕಾರ ಮಾಡದಿದ್ದುದು ಯಾವ ದುರಂತ ನಾಟಕದ ವಸ್ತುವೂ ಆಗಲಿಲ್ಲ. ಹಾಗೆ ಮಾಡಿದರೆ ಎಷ್ಟೊಂದು ದುರಂತ ನಾಟಕಗಳು? ಒಬ್ಬೊಬ್ಬ ಸೈನಿಕನೂ ಒಂದೊಂದು ದುರಂತ ನಾಟಕದ ಮಹಾ ನಾಯಕನಾದಾನು! ಆದರೆ ನೋಡುವ ಕಣ್ಣೆಲ್ಲಿ? ಕೇಳುವ ಕಿವಿಯೆಲ್ಲಿ?

ಬದುಕಿ ಬಹುದೂರ ನಡೆದು ಕೊನೆಗೆ ಊರೊಂದಕ್ಕೆ ಬರುತ್ತಾನೆ. ಊರಿನೊಳಗೆ ನಡೆಯುತ್ತಲಿದ್ದಂತೆ ಜೊತೆ ಜೊತೆಯಾಗಿ ಬೀದಿಯಲ್ಲಿ ಕೆಲೆದಾಡುವ ನಲ್ಲನಲ್ಲೆಯರನ್ನು ಕಾಣುತ್ತಾನೆ. ಚೆಲ್ಲಾಟವಾಡುವ ಮಕ್ಕಳನ್ನೂ ಕಾಣುತ್ತಾನೆ. ಆ ಎರಡೂ ಇದ್ದೂ ಅವುಗಳನ್ನು ಅನುಭವಿಸುವ ಭಾಗ್ಯ ಅವನಿಗಿಲ್ಲ. ಯುದ್ಧ ಅವನಿಂದ ಅದನ್ನು ಕಿತ್ತುಕೊಂಡಿದೆ. ಅಂದಿನ ವಿರಾಮ ಕಳೆಯುವುದೂ ಕಷ್ಟವಾಗಿ ಮನೆಯ ಗರ ಹಿಡಿಯುತ್ತದೆ. ತಿಂಡಿಯನ್ನು ಕೈಯಲ್ಲಿ ಹಿಡಿದು, ಮನೆ ನೆನಪಾಗಿ, ಬೀದಿಯೆಲ್ಲ ಓಡಾಡುತ್ತಾನೆ. ಸಿಕ್ಕಿದ ಮಕ್ಕಳಿಗೇ ತಿಂಡಿ ಹಂಚಿ ಅವು ನಲಿವುದನ್ನೇ ಕಂಡು ಅವೇ ತನ್ನ ಮಕ್ಕಳೆಂದು ಭಾವಿಸಿ ಹರ್ಷಿಸುತ್ತಾನೆ. ವಾಸ್ತವತೆ ಅವನನ್ನು ಅಣಕಿಸುತ್ತದೆ. ರಾತ್ರಿಯೂ ನಿದ್ದೆಯಿಲ್ಲ. ನಿದ್ದೆಯೆಂದರೆ ಕನವರಿಕೆ. ಊರು—ನಲ್ಲೆ—ತಾನು—ಮಕ್ಕಳು—ನಲಿದಾಟ. ಎಚ್ಚರವಾದರೆ ಎಲ್ಲವೂ ಶೂನ್ಯ. ಅವನಿಗೀಗ ನೆನಪೇ ಬುತ್ತಿ. ಅದೊಂದೇ ಅವನು ಸವಿದು ಸಂತೋಷಪಡಲಿರುವ ದಾರಿ. ಮಾನವೀಯತೆಯನ್ನು ಕಳೆದುಕೊಂಡ ಸೈನಿಕ ಜೀವನಕ್ಕೆ ಮಾನವತೆಯನ್ನು ತುಂಬುವ ಮಹಾನ್ ಶಕ್ತಿ. ಕನಸೇ ಅವನ ಸ್ವರ್ಗ. ಅದರಲ್ಲೆ ಅವನು ನಲಿಯಬೇಕು. ಅದೂ ಇಲ್ಲದಿದ್ದರೆ? ಮತ್ತೆಲ್ಲಿ? ಕಾಡುಗಳ ಸಂಚಾರದಲ್ಲೆ?

ಅದೇನು ದಾರಿಯೇ? ಊರೇ? ಹೊತ್ತು ಹೊತ್ತಿಗೆ ಊಟವೇ? ನಿದ್ದೆಯೆ? ಒಂದಿನಿತು ವಿಶ್ರಾಂತಿಯೇ? ಶತ್ರು ಯಾವಾಗ ಬರುವನೊ? ಬಾಂಬಾಗಿ ಆಕಾಶದಿಂದಲೇ ಉರುಳಬಹುದು. ಎದುರಿಂದ ಸಿಡಿಯಬಹುದು, ಗುಂಡಾಗಿ. ಪ್ರತಿನಿಮಿಷವೂ ಜೀವ ಅಂಗೈಯಲ್ಲೆ!

ಜೀವಕ್ಕಿಲ್ಲಿ ಮಾನವಿಲ್ಲ. ಧರ್ಮವಿಲ್ಲ. ಮರ್ಯಾದೆಯೂ ಇಲ್ಲ. ಇಲ್ಲಿರುವುದು ಒಂದೇ ಧರ್ಮ. ಗುಂಡು; ಕೊಲೆ; ರಕ್ತ; ಸಾವು! ಬೆಳಸಿದ ಎಲ್ಲ ಮಾನವೀಯ ಸಂಸ್ಕೃತಿಯನ್ನು ಗುಂಡಿಗಾಹುತಿ ಕೊಟ್ಟ ಪಶು ಜೀವನ. ಇದು ಪಶು ಜೀವನವೇ? ಅದೂ ಅಲ್ಲ. ಅದಕ್ಕೂ ಕೀಳು. ಕಾಡುಮೇಡುಗಳಲ್ಲಿ ಕಾಡುಪ್ರಾಣಿಗಳಿಗೂ ಕೀಳಾಗಿ ಅಲೆದಾಡುತ್ತಾನೆ. ಅಲ್ಲೂ ಅವನಿಗೆ ಭೀತಿಯೇ. ಶತ್ರುವಲ್ಲದಿದ್ದರೂ ಹುಲಿ ತಿಂದೀತು. ಕರಡಿ ಕೊರಗಿಸಿ ಕೊರಗಿಸಿ ಕೊಂದೀತು. ಚಿರತೆ ಪರಚೀತು.

ಕಯ್ಯೊಳಗಿರುವ ಕೋವಿ ಶತ್ರುವನ್ನು ಕೊಂದೀತು. ಪಶುಪ್ರಾಣಿಗಳನ್ನು ಕೊಲೆಗೈದೀತು. ಆದರೆ, ಸುತ್ತ ಇರುವ ಬಿಸಿಲನ್ನು? ಮಳೆಯನ್ನು? ಕೊರೆಯುವ ಛಳಿಯನ್ನು?

ಗುಡ್ಡದ ಕಾಡುಗಳಲ್ಲಿ ನಡೆಯುತ್ತ ಕಾಲಿನ ಬೂಟುಗಳು ಹರಿದು ಮುಳ್ಳಂಟಿ ನೆತ್ತರನ್ನೆ

---

[2] ಇದು ಗ್ರೀಕ್ ಮಹಾಕವಿ ಸೊಫೊಕ್ಲೀಸನ ರುದ್ರನಾಟಕಗಳಲ್ಲಿ ಒಂದು. ಸ್ವದೇಶದ ಶತ್ರುವಾಗಿ ಸತ್ತ ಅಂತಿಗೊನೆ—ಸೋದರನಿಗೆ ಶವಸಂಸ್ಕಾರ ಮಾಡಬೇಕೇ ಬೇಡವೇ ಎಂಬುದು ಇಲ್ಲಿಯ ಸ್ಥೂಲ ವಿಷಯ.

ನೆಕ್ಕುವುವು. ನುಗ್ಗಿ ಚಲಿಸುವಾಗ ಮರಗಿಡಗಳ ಮುಳ್ಳು ರೆಂಬೆಗಳು ಮೈಮುಖಗಳನ್ನು ಪರಚುವುವು. ಮುಖವೆಲ್ಲ ಗೀರಿಹೋಗುವುದು. ಅಳುವಂತಿಲ್ಲ. ನಿಲುವಂತೆಯೂ ಇಲ್ಲ. ನಡೆಯಬೇಕು, ಮುನ್ನಡೆಯಬೇಕು. ಎಷ್ಟೋ ದೂರದವರೆಗೆ ಬರಿಯ ಮಳೆಯ ಹನಿ. ಮಿಂದು ಮಿಂದು ಮೂಗು ತಲೆಮಿದುಳೆಲ್ಲ ನೆನೆದು ನೆಗಡಿ ನೀರಾಗುವಷ್ಟು ಮಳೆ. ಇದರ ಜೊತೆಗೆ ಪುಂಜಿಸ ಕೊರೆತದ ಗಾಳಿ ಉರುಳುತ್ತದೆ. ಮೈಯನ್ನು ಕೊರೆದು ಕೊರೆದು ಹರಿದು ತಿನ್ನತೊಡಗುತ್ತದೆ. ಕಾಡುಗಳ ಮಧ್ಯೆ ಸಿಕ್ಕ ಗವಿಗಳಲ್ಲಿ ಕಸಕಡ್ಡಿಗಳನ್ನು ಒಟ್ಟಿ ಉರಿಹಾಕಿ ಮೈಕಾಯಿಸಬೇಕು. ಮಲೆ ನೆತ್ತಿಗಳಲ್ಲಿ ಮಲಗಬೇಕು. ಹುಲ್ಲು ತರಗುಟ್ಟುವಂತೆ ತರಗುಟ್ಟಬೇಕು.

ಹುಲ್ಲು ಕೂಡ ಹಸುರಾಗಿ ಋತು ಋತುಗೂ ಹೊಸಯಿಸುತ್ತಿರುತ್ತದೆ. ಆದರೆ ತಾನು? "In spring grass grows green again while we, *grass widowers*, made into soldiers, are seen as less than men." (p. 11). ಕಾಡಿನಲ್ಲಿರುವ ಹುಲಿ ಚಿರತೆಗಳೂ ಒಟ್ಟೊಟ್ಟಿಗೆ ಓಡಾಡುತ್ತವೆ. ದಂಪತಿಗಳು ಒಂದನ್ನೊಂದು ಜೊತೆಗೂಡೇ ಚಲಿಸುತ್ತವೆ. ಆದರೆ ನತದೃಷ್ಟ ಸೈನಿಕರು ಪ್ರಾಣಿಗಳಿಗೂ ಕೀಳು. ಹೆಂಡಿರಿದ್ದೂ ವಿಧುರರು. ಅವರ ಬಟ್ಟೆಗಳೋ ಹಸುರಿಗೂ ಹಸುರುಗಟ್ಟಿವೆ. ಆ ಯೋಧರುಡುಗೆಯೊಳಗಿರುವುದು ಹಸುರುಗಟ್ಟಿದ ವಿಧುರ ಮನಸ್ಸೇ. ಯೋಧ ಹೃದಯವಲ್ಲ.

ಇನ್ನು ಅವರಿರುವ ಜಾಗವೂ ಅಷ್ಟೇ ಜುಗುಪ್ಸಾವಹ. ಹಗಲಿರುಳೆನ್ನದೆ ಕಾಡುಪ್ರಾಣಿಗಳಂತೆ ಅಲ್ಲಿ ಇಲ್ಲಿ ಬೆಟ್ಟಗುಡ್ಡಗಳಲ್ಲಿ ಸುತ್ತಾಡಬೇಕು. ಏಕೆ ಎಂದರೆ? ಉತ್ತರಕೊಡುವವರು ಯಾರು? ನಾಗರಿಕತೆ ಉತ್ತರಿಸಬೇಕು. ಯುದ್ಧಮಾಡಿಸುವ ಕಟುಕ ಹೃದಯ ಹೇಳಬೇಕು. ಇನ್ನೂ ಹೆಚ್ಚಿನ ವ್ಯಥೆಯ ಕಥೆ ಇಲ್ಲಿದೆ. ಅದು ದಾಸ್ಯ. ತಾನೀಗ ನೊಗಕ್ಕೆ ಬಿಗಿದ ಎತ್ತು. ಗಾಡಿಗೆ ಕಟ್ಟಿದ ಕುದುರೆ. ಮೇಲೆ ಸವಾರನಂತೆ ಕೋವಿ ಹಿಡಿದು ಆಜ್ಞೆಕೊಡುವವನಿದ್ದಾನೆ. "ಮಾರ್ಚ್" ಎಂದರೆ ಮುಗಿಯಿತು. ಬೆಂಕಿಯಿರಲಿ; ಕಡಲಿರಲಿ; ಮುನ್ನುಗ್ಗಬೇಕು.

ನಿಲ್ಲೆಂದರೆ ನಿಲ್ಲಬೇಕು. ಎದುರಿನಲ್ಲೆ ನರಿಗಳಂಥ ಪ್ರಾಣಿಗಳು ಕೂಡ ಸ್ವಾತಂತ್ರ್ಯದಿಂದ ತಮ್ಮ ಬಾಲಗಳನ್ನಲ್ಲಾಡಿಸುತ್ತ ಕುಣಿದಾಡುತ್ತವೆ. ಆದರೆ ಆ ಕಾಡುಪ್ರಾಣಿಯ ಮುಂದೆ ನಾಡಿನ ಸೈನಿಕ ಮುನ್ನಡೆಯುವ ರಥಗಳ ಜೊತೆಗೆ ಹೆದ್ದಾರಿಗಳಲ್ಲಿ ಆಜ್ಞಾಧಾರಕನಾಗಿ ಮುನ್ನಡೆಯಬೇಕು. ಪ್ರಾಣಿಗಳಿಗಾದರೂ ಸ್ವಾತಂತ್ರ್ಯವಿದೆ. ಯೋಧನಾಗಿ ಆ ಆಜನ್ಮಸಿದ್ಧಹಕ್ಕು ಸ್ವಾತಂತ್ರ್ಯಕ್ಕೂ ಧಕ್ಕೆ. ನರಿಗಳಂತೂ ಬಾಲವನ್ನಲ್ಲಾಡಿಸಿ ಅಮೀಬದಿಂದ ವಿಕಾಸವಾದವನು ಮಾನವ ಎಂಬುದನ್ನು ಅಣಕಿಸುವಂತೆಯೇ ಸುಳಿದಾಡುತ್ತವೆ.

ಸೈನಿಕನಾಗಿ ತಾನು ಏನೇನನ್ನು ಕಳೆದುಕೊಂಡ! ಮನದನ್ನೆ, ಮಕ್ಕಳು, ವ್ಯಕ್ತಿತ್ವ, ಸ್ವಾತಂತ್ರ್ಯ ಕೊನೆಗೆ ಮಾನವತೆ, ಎಲ್ಲವನ್ನೂ ಕಳೆದುಕೊಂಡು ಅವನ ಬಾಳು ನೋವಿನ ನರಕವಾಗುತ್ತದೆ. ಆಗವನಿಗೆ ತನ್ನನ್ನು ಟೀಕಿಸುವ ಸಮಾಜ ಕಣ್ಣಿದಿರಾಗುತ್ತದೆ. ಅದರ ಕಟುಕನೀತಿ ಅವನಲ್ಲಿ ಕಂಬನಿಯನ್ನಲ್ಲ ರಕ್ತವನ್ನು ಮಿಡಿಸುತ್ತದೆ. ಅವನನ್ನುತ್ತಾನೆ "ನಾನು ಈ ನೋವುಗಳನ್ನೆಲ್ಲ ಮರೆಯಬೇಕು. ನನ್ನ ಹೃದಯದ ದುಃಖ ಜ್ವಾಲಾಮುಖಿಯನ್ನು ನಂದಿಸಿಕೊಳ್ಳಬೇಕು. ನಿನಗಾಗಿ ಪತ್ನೀಪುತ್ರರನ್ನು ಕಳೆದುಕೊಂಡು ಮರುಭೂಮಿಯಾದ ಹೃದಯವನ್ನು ಸಂತೈಸಿಕೊಳ್ಳಬೇಕು. ಎದುರಾಗುವ ಫಿರಂಗಿಗೆ ಎದೆಕೊಡಬೇಕು. ತಿಳಿದೂ ತಿಳಿದೂ ಮೃತ್ಯುವನ್ನು ತಿವಿದೆಬ್ಬಿಸಬೇಕು. 'ಓ ನಾಗರಿಕ, ನಾನು ಕುಡಿಯುತ್ತೇನೆ. ಆದರೆ ನಗಬೇಡ. ನಕ್ಕು ಎದೆಗಾಯವನ್ನು ಮತ್ತಷ್ಟು ಪರಚಬೇಡ.'"

ಅವನನ್ನು ಕೇಳುವವರು ಯಾರಿದ್ದಾರೆ? ಸಮಾಜದ ವಿಷಚಕ್ರದ ಕೆಳಗೆ ಸಿಕ್ಕ ಕೀಟ ಅವನು. ಅಳುವ ಕೀಟದ ಯಾತನಾಮಯ ರೋದನವನ್ನು ಕೇಳುವಷ್ಟಾದರೂ ಸೂಕ್ಷ್ಮ ಸಂವೇದನೆ ಯಾರಿಗಿದೆ? ಅವನು ಸತ್ತರೂ ಸತ್ತ. ಹೂಳುವವರಿಲ್ಲ. ಹೇಗೋ ಬದುಕಿ ಉಳಿದರೆ ಯುದ್ಧಕ್ಕೆ ನಿಲುಗಡೆ ಬಂದರೆ?

ಜೀವನವೆಲ್ಲ ಯುದ್ಧಮಾಡಿದ ಯೋಧ ಊರಿಗೆ ಬರುತ್ತಾನೆ. ನಾಲ್ಕಾರು ಬಿರುದು ಬಾವಲಿಗಳೇ ಭುಜದಲ್ಲರಳಿವೆ. ಮನೆಗೆ ಬಂದರೆ ಮಾತ್ರ ಅದೊಂದು ಮಸಣ. ಇದ್ದ ಮುದಿತಾಯಿ ಸತ್ತಿದ್ದಾಳೆ. ಮನೆ ಪಾಳುಬಿದ್ದಿದೆ. ಒಳಗೆ ಬಾವಲಿ ಹಲ್ಲಿ ಲೊಚಗುಟ್ಟುತ್ತವೆ. ಜೇಡ ಬಲೆ ಹೆಣೆದು ರಾಜ್ಯವಾಳುತ್ತಿದೆ. ಉರುಳುವ ಕಂಬನಿಗಳನ್ನು ಒರೆಸಿಕೊಂಡು ಮಣ್ಣನ್ನು ಅಪ್ಪಿಕೊಳ್ಳಬೇಕು. ಈಗ ಹಿಂತಿರುಗಿದ ಈ ಬಾಳು ಯೌವನವೂ ಸೋರಿ, ತಾಯನ್ನು ಕಳೆದುಕೊಂಡು ರಸಹೋದ ಸಿಪ್ಪೆ; ಸಿಪ್ಪೆ, ಬರಿಯ ತೊಗಟೆ!

ಅಥವಾ ಮದುವೆಯಾಗಿದ್ದು ಹೆಂಡಿರೂ ಮಕ್ಕಳೂ ಉಳಿದಿದ್ದರೆ ಆಗೊಂದೇ ಸೊಗಸುಂಟು. ಅವನು ಸೈನಿಕನಾಗಿದ್ದಾಗ ಬಯಸಿದ್ದು ಬಂಗಾರವಲ್ಲ; ಊಟವಲ್ಲ; ಕೊಲೆಯಲ್ಲ; ತನ್ನ ತಾಯಿ; ತನ್ನ ನಲ್ಲೆ; ತನ್ನ ಮಕ್ಕಳು ಇವರೊಡನಿರುವ ಸೌಭಾಗ್ಯ—ಸುಖ—ಸ್ವರ್ಗ ". . . The sweet days of peace."

ಅವನು ಬಂದಂದು ಊರಲ್ಲಿ ವಿಜಯ ಯಾತ್ರೆ. ಅವನ ಕಣ್ಣು ಉತ್ಸವದಲ್ಲಿಲ್ಲ. ಕಾಯು ತ್ತಿರುವ ನಲ್ಲೆಯನ್ನೂ ಮಕ್ಕಳನ್ನೂ ಮಾತೆಯನ್ನೂ ಕಣ್ಣುಗಳು ಹುಡುಕುತ್ತವೆ. ಯುದ್ಧ ಭೂಮಿ ಯಿಂದಲೇ ಹುಡುಕತೊಡಗಿರುತ್ತವೆ. ಅಂದು ಹೊಸ ಹೊಸ ಮದುವೆಗಳಾಗುತ್ತವೆ. ಹುಡುಗಿಯರು ನಲಿಯುತ್ತಾರೆ. ಪುನರಾಗಮಿಸಿದ ಸೈನಿಕನೂ ನಲಿಯುತ್ತಾನೆ. ಆ ರೀತಿಯೇ ಬೇರೆ. ಆ ಆನಂದವೇ ಬೇರೆ.

ಅವನ ಗಾಯದ ಕಲೆಗಳಿರುವ ಮೈತುಂಬ ಮಾತೆಯ ಗಾಂಧಾರೀ ಪ್ರೀತಿಕಲ್ಪ ಸ್ಪರ್ಶವಾಗುತ್ತದೆ. ನಲ್ಲೆ ಆಲಿಂಗಿಸಿ ಅವನ ಒಂದೊಂದು ಗಾಯಕ್ಕೂ ಮುತ್ತಿಟ್ಟು ಮಾಯಿಸು ತ್ತಾಳೆ. ಮಗ ಬೆಳೆದಿದ್ದರೂ ಓಡಿಬಂದು ಈ ಜೀವದೆದೆಯನ್ನು ತುಂಬಿಕೊಳ್ಳುತ್ತಾನೆ. ಈ ದಿನವೂ ಅದೇ ರೀತಿ. ಅವನ ಬಾಯಲ್ಲೂ ಮಾತಿಲ್ಲ. ಇವಳ ಬಾಯಲ್ಲೂ ಮಾತಿಲ್ಲ. ಅಂದು ದುಃಖ ಕಣ್ಣೀರಾಗಿತ್ತು. ಇಂದು ಸಂತೋಷ ಕಣ್ಣೀರಾಗಿದೆ. ಅಂದು ದುಃಖ ನಿಟ್ಟುಸಿರಾಗಿತ್ತು. ಇಂದು ಸಮಾಧಾನ ತೃಪ್ತಿ ನಿಡಿದಾದ ಉಸಿರಾಗಿದೆ.

ಅವನಿಗನ್ನಿಸುತ್ತದೆ ". . . Marriages were good, yet not giving so deep a joy as did the reunions of couples separated for so long—. . ." ಆ ಮಾತು ನಿಜ. ಯೋಧನು ಅಂತಃಕರಣ ತುಂಬಿ ತುಂಬಿ ಸಂಸ್ಕೃತಿಯಾಗಿದ್ದಾನೆ. ಅವನ ಮನಸ್ಸಿನ ಸಾತ್ವಿಕ ಭಾವಗಳು ಇಂದು ಕೆನೆಗಟ್ಟಿವೆ. ವನವಾಸಾನಂತರ ಲಕ್ಷ್ಮಣ ಊರ್ಮಿಳೆಯರಲ್ಲಾದ ಆ ಪ್ರಶಾಂತ ನೀರವ ಸಮಾಗಮ, ಹಾಗೆಯೇ ಮಾರೀಚಾಶ್ರಮದಲ್ಲಿ ಶಕುಂತಲಾ ದುಷ್ಯಂತರಲ್ಲಾದ ಶಾಂತ ಸಮಾಗಮ. ಎಲ್ಲ ಇಂಥವೇ. ಯೋಧನ ಈ ಜೀವನಘಟ್ಟದಲ್ಲೂ ರಾಮಾಯಣಗಳು ಶಾಕುಂತಲಗಳು ಅಡಗಿ ಕುಳಿತಿವೆ—ಕಾಣುವ ಕಣ್ಣುಗಳಿಗೆ. ಬಹು ಕಾಲದ ವಿರಹದ ಅಗ್ನಿ ಯಲ್ಲಿ ಬೆಂದು ಪರಿಪಾಕಗೊಂಡ ಎದೆಗಳ ಪುನಸ್ಸಮಾಗಮದಷ್ಟು—ಆಳವಾದ ಹಿಗ್ಗು ಹೊಸ ದಂಪತಿಗಳಿಗೆಲ್ಲಿ? ದಿಟವೆ, ಇದೊಂದು ಅಮೃತಘಳಿಗೆ ಚಿರಸ್ಮರಣೀಯವೆ! ಆದರೆ, ಇದೊಂದಕ್ಕಾಗಿ ಎಷ್ಟು ಬೆಲೆ? ಎಷ್ಟು ಕೊಲೆ? ಒಬ್ಬ ಹುಚ್ಚನ ಸ್ವಾರ್ಥಕ್ಕಾಗಿ ಇಲ್ಲವೆ ಒಬ್ಬ ಹುಚ್ಚನ ಸ್ವಾರ್ಥವನ್ನು ವಿರೋಧಿಸುವುದಕ್ಕಾಗಿ ಈ ಯುದ್ಧ. ಅಷ್ಟಕ್ಕಾಗಿ ಇಷ್ಟೊಂದು ಕೊಲೆಯೆ? ರಕ್ತವೇ? ಪಶುವೃತ್ತಿಯೆ? ಸಂಸ್ಕೃತಿ ನಾಶವೆ? ಸೈನಿಕ ಅದಕ್ಕಾಗಿಯೇ ಬಹು ದೃಢವಾಗಿ ಹೇಳುತ್ತಾನೆ: "Sure, we want peace . . ." (p. 48). ಯೋಧನಂತೂ ನಾಗರಿಕನನ್ನು, ಕಲಾವಿದರನ್ನು, ರಾಜಕಾರಣಿಗಳನ್ನು ಎಚ್ಚರಿಸುತ್ತಾನೆ: "War is a terrible thing. Only in sheer self-defence would our wise men of old ever resort to it." (p. 43). ಯೋಧನ ಪ್ರಜ್ಞೆ ಎಂಥ ಉನ್ನತ ಪ್ರಜ್ಞೆ! ಎಂಥ ಮಾನವೀಯತೆಯನ್ನು ಮಿಡಿಯುವ ಹೃದಯ! ಕೋವಿಯ ಹಿನ್ನೆಲೆಗಿರುವ ಆ ಹೃದಯವೆಲ್ಲ ಪ್ರೇಮದ ಬೃಂದಾವನ! ಅಲ್ಲಿರುವುವೆಲ್ಲ ನಲುಮೆಯ ಚಿಲುಮೆಗಳು. ನಾಡನ್ನು ನಗಿಸುವ ನಲಿವಿನ ಒರತೆಗಳು. ಯುದ್ಧ

ತೀರ ಅನಿವಾರ್ಯ ಆತ್ಮರಕ್ಷಣೆಗೆ ಮಾತ್ರವಿರಲಿ. ಮಾನವತೆಯನ್ನು ರಕ್ಷಿಸಲು ಮಾತ್ರ; ನಾಶಕ್ಕಾಗಿಯಲ್ಲ.

ತುಂಬಿದಸುಭವಿಯಾದ ಸೈನಿಕ ಮುಂದೆ ಸೈನಿಕರಾಗಲಿರುವ ಮಕ್ಕಳು ಮರಿಗಳಿಗೆ ಕಿವಿಮಾತೊಂದನ್ನು ಹೇಳುತ್ತಾನೆ. "...to be a soldier is of all things most bother... (p 25). ಊರಿನಲ್ಲಿ ಯೋಧನಾದ ಗಂಡನ ಬರವಿಗಾಗಿ ಕಾದುಕುಳಿತು ಇರುಳೆಲ್ಲ ಒಂಟಿದಿಂಬನ್ನು ಕಣ್ಣೀರಿನಿಂದ ನೆನಸಿದ ನಲ್ಲೆ ಕೇಳುತ್ತಾಳೆ: ".... Now, at war, what hope is there .. ? ...." (p. 76). ಗರ್ಭದಲ್ಲಿರುವ ಇನ್ನೂ ಹುಟ್ಟದ ಮಕ್ಕಳನ್ನು ತಾಯಂದಿರು ಹೀಗೆ ಬೇಡಿಕೊಳ್ಳುತ್ತಾರೆ. 'ಮಕ್ಕಳೇ ನೀವು ಹುಟ್ಟಬೇಡಿ. ಹುಟ್ಟಿ ಯೋಧರಾಗಬೇಡಿ. ಯುದ್ಧ ಮುಗಿದಮೇಲೆ ಉದಿಸಿ. ಜಪಿಸಿ, ಗರ್ಭದಲ್ಲೇ ಕುಳಿತು ಪ್ರಾರ್ಥಿಸಿ:" "when oh when will these wars cease ?" (p. 34). ಹೌದು ಗಂಡ ಹೆಂಡಿರು ಒಟ್ಟಿಗೆ ಬಾಳುವುದೆಂದು ? ತಂದೆ ಮಕ್ಕಳು ಒಟ್ಟಿಗೆ ನಲಿಯುವುದೆಂದು ? ನಮ್ಮ ಸಂಸ್ಕೃತಿ ಅರಳುವುದು ಎಂದು ? ಶಾಂತಿ ತನ್ನ ಶ್ವೇತ ಹಸ್ತದಿಂದ ಯುದ್ಧವನ್ನು ತಡೆಗಟ್ಟಿದಂದು ಮಾತ್ರ.

ಅಂಥದೊಂದು ದಿವ್ಯ ಮಾನವೀಯತೆಯನ್ನು ಕಂಡ ಚೀನದ ಜನತೆಯ ಅಂತಃಕರಣ ತುಳುಕುವ ಈ ಗೀತೆಗಳನ್ನು ಶ್ರೀ Rewy Alley ಅವರು ಆಂಗ್ಲಕ್ಕೆ ತಂದು ನಮಗೆಲ್ಲ ಪರಿಚಯ ಮಾಡಿಕೊಟ್ಟಿದ್ದಾರೆ. ಅದನ್ನು ಓದಿ ಭಾರತೀಯರಾದ ನಾವು ಚೀಣದ ಜನತೆಯೊಂದಿಗೆ ಗಾಂಧೀ ನಾಡಿನ ಜನತೆಯಾಗಿ ಕೊರಳು ಕೂಡಿಸೋಣ:

**" ನಮಗೆ ಬೇಕಾಗಿರುವುದು ಸವಿಯ ಶಾಂತಿಯ ದಿನಗಳು "**

**"....Sweet days of Peace." ***

**ಜಿ. ಎಸ್. ಸಿದ್ಧಲಿಂಗಯ್ಯ.**

* ಈ ಲೇಖನಕ್ಕಾಗಿ ಆಗಲೇ ಉಕ್ತವಾಗಿರುವಂತೆ Peace through the ages ಗ್ರಂಥಕ್ಕೆ ಲೇಖಕ ಋಣಿ.

# ‘ಧಿಕ್ ಪ್ರಹಸನಮ್’

‘ಏಕೋ ರಸಃ ಕರುಣ ಏವ’ ಎಂದು ತನ್ನ ನೂತನ ವಿಲಕ್ಷಣ ರಸಸಿದ್ಧಾಂತವನ್ನು ಸಾರಿ ಅದಕ್ಕೆ ನಿದರ್ಶನವೆಂಬಂತೆ ‘ಉತ್ತರರಾಮಚರಿತೆ’ಯಂತಹ ಉತ್ಕೃಷ್ಟ ಕೃತಿಯನ್ನು ಸೃಷ್ಟಿಸಿದ ಭವಭೂತಿ, ಅದೇ ನಾಟಕದಲ್ಲಿ ಮುಂದೆ ನಾಲ್ಕನೆಯ ಅಂಕದ ಮೊದಲಿಗೆ ಒಬ್ಬ ವಟುವಿನ ಮುಖದಲ್ಲಿ ‘ಧಿಕ್ ಪ್ರಹಸನಮ್’ ಎಂಬ ಮಾತನ್ನು ಆಡಿಸಿದ್ದಾನೆ. ಮಾತು ಸಂಭಾಷಣೆಯ ಮಧ್ಯೆ ಸಂದರ್ಭವಶದಿಂದ ಬಂದದ್ದು, ಸಹಜವಾದದ್ದು; ಅಲ್ಲಿನ ಅದರ ಅರ್ಥ ಕೂಡ, ಹಿನ್ನೆಲೆಯನ್ನು ಮರಸಿ ನೋಡಿದರೆ, ಸಾಮಾನ್ಯವಾದದ್ದು. ಆದರೆ, ‘ಏಕೋ ರಸಃ ಕರುಣ ಏವ . . . .’ ಎಂಬ ತಮಸೆಯ ಸಂದರ್ಭೋಚಿತ ವಾಕ್ಯ ಹೇಗೆ ಭವಭೂತಿಯ ನೂತನ ರಸಸಿದ್ಧಾಂತಕ್ಕೆ ಒಂದು ವಿಪುಲಾರ್ಥದ ಕಾರಿಕೆ ಅಥವಾ ಸೂತ್ರವೆಂಬಂತೆ ಮಿಂಚು ತ್ತದೆಯೋ ಅದೇ ರೀತಿ ಈ ‘ಧಿಕ್ ಪ್ರಹಸನಮ್’ ಎಂಬ ಮಾತು ಕೂಡ ಇದ್ದಕ್ಕಿದ್ದಂತೆ ಸಂದರ್ಭವನ್ನು ಮೀರಿ ಪಳಚ್ಚನೆ ಮಿಂಚುತ್ತದೆ, ಭವಭೂತಿಯ ಒಂದು ಘೋಷವಾಕ್ಯ ವೆಂಬಂತೆ ಝೇಂಗುಡುತ್ತದೆ.

ನಾವು ಊಹಿಸುವಂತೆ ಭವಭೂತಿಯೇ ರಂಗಪಕ್ಷದಲ್ಲಿ ನಿಂತು ಪಾತ್ರಗಳಿಗೆ ಸೂಚನೆ ಕೊಟ್ಟು ತನ್ನ ಈ ಮಾತುಗಳನ್ನು ಆಡಿಸಿರಬಹುದು ಅಥವಾ ಇಲ್ಲದಿರಬಹುದು. ಆದರೆ ಇಷ್ಟು ಸತ್ಯ: ರಸಿಕರಲ್ಲಿ ಎಂದಿನಿಂದಲೂ ಕರುಣರಸಪಕ್ಷಪಾತ ಬೆಳೆದು ಬಂದಿದೆ; ಹಾಗೆಯೇ ಸ್ವಲ್ಪ ಮಟ್ಟಿಗೆ ಹಾಸ್ಯರಸಧಿಕ್ಕೃತಿಯೂ ಬೆಳೆದು ಬಂದಂತೆ ತೋರುತ್ತದೆ. ಭಾರತೀಯ ಕಾವ್ಯಪ್ರಕಾರ ಗಳಲ್ಲಿ, ಮಾತ್ರವಲ್ಲ ಇತರ ಕಲಾಪ್ರಕಾರಗಳಲ್ಲಿ ಕೂಡ ಹಾಸ್ಯರಸಪ್ರಧಾನವಾದ ಕೃತಿಗಳು ಅತ್ಯಂತ ವಿರಳ. ಇದಕ್ಕೆ ಭಾರತೀಯ ಜನಮನೋಧರ್ಮವೇ ಕಾರಣವೆಂಬ ಬಹುಪ್ರಚಲಿತ ವಾದವೊಂದಿದೆ. ಅದರಲ್ಲೂ ತಥ್ಯಾಂಶ ಇದ್ದೀತು. ಆದರೆ, ಭಾರತೀಯರು ಕಂಡುಕೊಂಡ ಕಲಾತತ್ತ್ವದಲ್ಲಿ ಹಾಸ್ಯ ರಸಕ್ಕಿರುವ ಸ್ಥಾನ ಉಳಿದವುಗಳಿಗಿಂತ ತುಸು ಕೆಳಗಿನದು ಎಂದು ಈ ಲೇಖನ ಸಂಶಯಿಸುತ್ತದೆ. ಅಂತೆಯೇ, ನಮ್ಮಲ್ಲಿ ಹಾಸ್ಯರಸಪ್ರಧಾನವಾದ ಕೃತಿಗಳು ವಿರಲವಾಗಿರುವುದಕ್ಕೆ ಈಯೊಂದು ಅಂಶವೂ ಕಾರಣವಾಗಿರಲು ಸಾಕು. ಭಾರತೀಯ ಕೃತಿಗಳ ವಿಷಯವಿರಲಿ, ವಿಶ್ವಕೃತಿಗಳೆಂದು ಪ್ರಮುಖವಾದವುಗಳಲ್ಲಿ ಕೂಡ ಹಾಸ್ಯರಸಪ್ರಧಾನವಾದವು ತೀರ ಕಡಿಮೆಯಲ್ಲವೆ? ಹೀಗೆ ಪರಿಶೀಲಿಸುವಾಗ ಇನ್ನೂ ಒಂದು ಅಂಶ ನಮ್ಮ ಗಮನ ಸೆಳೆಯುತ್ತದೆ. ವಿಶ್ವಕೃತಿಗಳನ್ನು ಎದುರಿ ಗಿಟ್ಟುಕೊಂಡು ನೋಡಿದಾಗಲೂ ಅವುಗಳಲ್ಲಿ ಕರುಣ ಶೃಂಗಾರ ವೀರಗಳಿಗೇ ಪ್ರಾಚುರ್ಯ. ಇದರಿಂದ ರಸಗಳಲ್ಲಿ[1] ತರತಮಭಾವವೂ ಇರಬಹುದೆಂಬ ಸಂಶಯ ನಮಗೆ ಉಂಟಾಗುತ್ತದೆ.

ಹಾಸ್ಯವೊಂದನ್ನು ಪ್ರಸ್ತುತ ಇಟ್ಟುಕೊಳ್ಳೋಣ.

ಇಲ್ಲಿ ಮೊದಲಿಗೆ ನಾವು ರಸಸ್ವರೂಪವನ್ನು ಗುರುತಿಸಿಕೊಳ್ಳಬೇಕು. ಪ್ರಾಚೀನ ಭಾರತೀಯ ಸಿದ್ಧಾಂತವನ್ನು ಅವಲಂಬಿಸಿ ಹೇಳುವುದಾದರೆ ರಸದ ತತ್ತ್ವ ಹೀಗಿದೆ.

ಮನುಷ್ಯ ವ್ಯವಹಾರವೆಲ್ಲಕ್ಕೂ ಭಾವವೇ ಆದಿ ಹಾಗೂ ಅಂತ್ಯ. ಮನುಷ್ಯಜೀವನ ಮೂಲತಃ ಒಂದು ಭಾವಪ್ರವಾಹ. ಬುದ್ಧಿ ಮುಂತಾದವು ಕೂಡ ಯಾವೊಂದು ಭಾವದ ಪರಿಣಾಮವಾಗಿ ಅಥವಾ ಯಾವೊಂದು ಭಾವದ ಉದ್ಬೋಧಕ್ಕೆ ಕಾರಣವಾಗಿ ಮಾತ್ರ ಪ್ರಕಟ

---

[1] ರಸ ಎಂಬುದು ಒಂದೇ. ಶೃಂಗಾರಾದಿ ಎಂಟು ಅಥವಾ ಒಂಬತ್ತು ರಸಗಳೆಂದು ನಾವು ಹೇಳುತ್ತೇವಷ್ಟೆ. ಸೌಲಭ್ಯಕ್ಕಾಗಿ ಹಾಗೆ ಹೇಳಬಹುದಾದರೂ ನಿಷ್ಕೃಷ್ಟವಾಗಿ ಹೇಳಬೇಕಾದರೆ ಅವುಗಳನ್ನು ‘ರಸಮಾರ್ಗ’ಗಳೆಂದು ಹೇಳಬೇಕು. ಇಲ್ಲಿ ಮಾತ್ರ ರೂಢಿಯಂತೆ ‘ರಸಮಾರ್ಗ’ಗಳನ್ನೂ ‘ರಸ’ವೆಂದೇ ಹೆಸರಿಸಿದೆ.

ವಾಗುತ್ತವೆ. ಭಾವಗಳಲ್ಲಿ ರತಿ, ಉತ್ಸಾಹ, ಜುಗುಪ್ಸೆ, ಕ್ರೋಧ, ಹಾಸ, ವಿಸ್ಮಯ, ಭಯ, ಶೋಕ—ಈ ಎಂಟು ಸ್ಥಾಯಿಭಾವಗಳೆಂದು ನಮ್ಮ ಪ್ರಾಚೀನ ಶಾಸ್ತ್ರಜ್ಞರ ಮತ. (ಒಂಬತ್ತು ಎಂಬ ವಾದವೂ ಇದೆ, ಇರಲಿ.) ಎಂದರೆ, ಈ ಎಂಟು ಮೂಲಭಾವಗಳು. ಪ್ರಾಣಿವರ್ಗದ ಮೂಲವಾಸನೆಗಳೇ ಈ ಮೂಲಭಾವಗಳಾಗಿ ಮನುಷ್ಯನಲ್ಲಿ ಪ್ರಕಟವಾಗುತ್ತವೆ ಎನ್ನಬಹುದು.[3] ಇನ್ನುಳಿದ ಇತರ ಅನೇಕ ಭಾವಗಳು ಈ ಸ್ಥಾಯಿಭಾವಗಳ ಸಂಚಾರದಲ್ಲಿ ಭಾಸವಾಗುವ ಅವಸ್ಥಾಂತರಗಳು. ಈ ಭಾವಗಳೆಲ್ಲ ಜೀವನದಲ್ಲಿ ಪ್ರಕಟವಾಗುವಾಗ ನಮ್ಮ 'ಅಹಂಕಾರ' ದೊಡನೆ ಸಿಲುಕಿಕೊಂಡು ಹೊರದೋರುತ್ತವೆ. ನಮ್ಮ 'ಅಹಂಕಾರ'ಜಗತ್ತಿನೊಡನೆ 'ಇದು ನನ್ನದು, ಇದು ನನ್ನದಲ್ಲ' ಮುಂತಾಗಿ ಅನಿವಾರ್ಯವಾದ ನಿಶ್ಚಿತ ಸಂಬಂಧವನ್ನು ಇಟ್ಟು ಕೊಂಡಿರುತ್ತದೆ. ಅಂತೆಯೇ 'ಅಹಂಕಾರ'ಕ್ಕೆ ಈ ಜಗತ್ತಿನಲ್ಲಿ ಕೆಲವು ಪ್ರಿಯ ಕೆಲವು ಅಪ್ರಿಯ ಮುಂತಾಗಿ ತೋರುತ್ತದೆ. ಈ 'ಅಹಂಕಾರ' ಭಾವಗಳನ್ನು ತನ್ನಲ್ಲಿ ಸಿಲುಕಿಸಿ ಕೊಂಡು ಅವುಗಳ ಬಳಕೆಯಿಂದ ತನ್ನ ಲೋಕವ್ಯಾಪಾರವನ್ನು ನಡೆಸಿಕೊಳ್ಳುತ್ತ ಹೋಗು ತ್ತದೆ. ಜಗತ್ತಿನಲ್ಲಿ ಇಷ್ಟಾನಿಷ್ಟಗಳನ್ನು ಕಲ್ಪಿಸಿಕೊಂಡ 'ಅಹಂಕಾರಕ್ಕೆ' ಅದರ ಎಲ್ಲ ವ್ಯಾಪಾರ ಗಳಲ್ಲೂ—ಅದರ ಕಲ್ಪನೆಗೆ ತಕ್ಕುದಾದ—ಸುಖದುಃಖಗಳ ಫಲ ಸಹಜ ದೊರೆಯುತ್ತದೆ. ಎಂದರೆ, ಅಹಂಕೃತಿಯ ಬಳಕೆಯಾಗಿ ಲೋಕಜೀವನದಲ್ಲಿ ಪ್ರಕಟವಾಗುವ ಎಲ್ಲ ಭಾವಗಳಿಗೆ ಸಿಗುವ ಫಲವೂ ಅದೇ: ಸುಖದುಃಖಾತ್ಮಕವಾದದ್ದು. ಸುಖದುಃಖಗಳು ಪುನಃ ಇಷ್ಟಾನಿಷ್ಟ ಕಲ್ಪನೆ ಯನ್ನೆ ಮುಂದುವರಿಸಿಕೊಂಡು ಹೋಗುತ್ತವೆ.

ಭಾವ ಹುಟ್ಟುವುದು ಅಹಂಕಾರದಲ್ಲೆ, ನಿಜ. ಆದರೆ ಭಾವದ ಉದ್ಬೋಧವಾದೊಡನೆಯೇ ಅಹಂಕಾರ ತುಸು ಹಿಂದೆ ಸರಿದು ನಿಲ್ಲುವುದಾದರೆ, ನಮ್ಮೊಳಗಿರುವ ಅಹಂಕಾರದೂರವಾದ ತಟಸ್ಥ 'ಸಾಕ್ಷಿ' ತಾನೇತಾನಾಗಿ ಈ ಭಾಗವನ್ನು ಕಾಣುವುದಾದರೆ, ಆಗ ಭಾವಕ್ಕೆ ಇಷ್ಟಾ ನಿಷ್ಟದ ಬಣ್ಣ ತಾಕುವುದಿಲ್ಲ. ಆಗ ಸುಖದುಃಖಗಳು ಭಾವಕ್ಕೆ ಫಲವಾಗಿ ಒದಗುವುದಿಲ್ಲ. 'ಸಾಕ್ಷಿಯ' ಪೂರ್ಣ ಶುದ್ಧದೃಷ್ಟಿಗೆ ಭಾವ 'ಲೀಲೆ'ಯಾಗಿ ತೋರುತ್ತದೆ. ಫಲ—ಸುಖ ದುಃಖಗಳನ್ನು ಮೀರಿದ ಆನಂದದ ರುಚಿ ಸಾಕ್ಷ್ಯಹಂಕಾರಗಳಿಂದ ಸಮೇತವಾದ ಜೀವಕ್ಕೆ ದೊರೆಯುತ್ತದೆ.

ಕಲೆ ಈ ಬಗೆಯಲ್ಲಿ ಭಾವಗಳನ್ನು ಅಹಂಕಾರದೂರವಾಗಿಸಿ ಜೀವಕ್ಕೆ ಆನಂದದ ರುಚಿ ತೋರಿಸುತ್ತದೆ; ಜೀವಕ್ಕೆ ಲೋಕಯಾತ್ರೆಯಲ್ಲಿ ಸಾಮಾನ್ಯವಾಗಿ ದೊರೆಯದ ವಿಶ್ರಾಂತಿ ಯನ್ನು ಈಷತ್ ದೊರಕಿಸಿಕೊಡುತ್ತದೆ: ಸೀತೆಯ ದುರವಸ್ಥೆ ನಮ್ಮಲ್ಲಿ ಶೋಕಭಾವವನ್ನು ಉದ್ಬೋಧಗೊಳಿಸುತ್ತದೆ; ಆದರೆ ನಮಗೂ ಕಲೆಯಲ್ಲಿ ಪ್ರಕಟಳಾದ ಸೀತೆಗೂ ನಿಶ್ಚಿತಲೌಕಿಕ ಸಂಬಂಧ ಇಲ್ಲವಾಗಿ ಆ ಭಾವ ನಮ್ಮ ಅಹಂಕಾರದೊಡನೆ ತೊಡರಿಕೊಳ್ಳುವುದಿಲ್ಲ; ಅಹಂಕಾರದ ಇಷ್ಟಾನಿಷ್ಟಗಳನ್ನು ಬಡಿದೆಬ್ಬಿಸುವುದಿಲ್ಲ. ಕಲೆಯಲ್ಲಿನ ಕೌಶಲ ನಮ್ಮಲ್ಲಿ ಭಾವವನ್ನು ಉದ್ಬೋಧ ಗೊಳಿಸಿಯೂ, ಆ ಭಾವ ಅಹಂಕಾರದ ಬಳಕೆಗೆ ದೊರೆಯದಂತೆ ಮಾಡುತ್ತದೆ. ಅಲ್ಲಿ ಅಹಂಕಾರಕ್ಕೆ ವಿರಾಮ ದೊರೆಯುವ ಕಾರಣ ನಮ್ಮ 'ಸಾಕ್ಷಿ' ಆ ಭಾವವನ್ನು ಶುದ್ಧ ಕಾಣುವುದು ಸಾಧ್ಯವಾಗುತ್ತದೆ. ನಮ್ಮ ಚೇತನ ಕೇವಲ ಭಾವಲೀಲೆಯನ್ನು ಕಾಣುತ್ತದೆ, ಭಾವಾರಾಮ ವಾಗುತ್ತದೆ. ಕಾವ್ಯಾದಿ ಕಲೆಗಳಲ್ಲಿ ದೊರೆಯುವ ಈ ಆನಂದವನ್ನೆ ನಾವು 'ರಸ' ಎಂದು ಹೆಸರಿಸುವುದು.

ತಾತ್ಪರ್ಯ: ವಾಸನಾಮೂಲವಾದ ಸ್ಥಾಯಿಭಾವಗಳನ್ನು ಮನುಷ್ಯ ತಟಸ್ಥ ಸಾಕ್ಷಿ ಯಾಗಿ—ತತ್ಕಾರಣ, ಅಲೌಕಿಕ ಅವಸ್ಥೆಯಲ್ಲಿ—ಅನುಭಾವಿಸುವಂತಹ ಅಥವಾ ಸವಿಯುವಂತಹ

---

[3] ಗಮನಿಸಿ: ಆಹಾರ ನಿದ್ರೆ ಭಯ ಮೈಥುನ—ಈ ತಿರ್ಯಕ್ ಚತುಷ್ಟಯಗಳೇ ಸ್ಥಾಯಿಭಾವಗಳ ಮೂಲ ಎಂದು ಶ್ರೀ ದ. ರಾ. ಬೇಂದ್ರೆಯವರು ಸಾಧಿಸುತ್ತಾರೆ.

ಸ್ಥಿತಿಯೇ ರಸಾನುಭವಸ್ಥಿತಿ. ಹೀಗೆ ಸವಿಯಲೊದಗುವ ರತ್ಯಾದಿ ಸ್ಥಾಯಿಗಳೇ ಶೃಂಗಾರಾದಿ ರಸಗಳೆನ್ನಿಸಿಕೊಳ್ಳುತ್ತವೆ.

ಪುನಃ ಹಾಸ್ಯಕ್ಕೆ ಬಂದು ಆ ರಸದ ವೈಲಕ್ಷಣ್ಯವನ್ನು ಗುರುತಿಸಬೇಕಾದರೆ, ಅದಕ್ಕೆ ಮೂಲವಾದ 'ಹಾಸ' ಸ್ಥಾಯಿಭಾವವನ್ನು ಆ ಭಾವದ ವೈಲಕ್ಷಣ್ಯವನ್ನು—ಕಂಡುಕೊಳ್ಳ ಬೇಕು.

ಪ್ರಾಣಿಪ್ರಾಣಿಗಳಲ್ಲಿ, ಪ್ರಾಣಿಗಳಿಂದ ಮುಂದೆ ಮನುಷ್ಯರಲ್ಲಿ ಭಾವಗಳು ಅರಳುತ್ತ ಬಂದಿವೆಯಷ್ಟೆ. ಅವುಗಳಲ್ಲೆಲ್ಲ ಮುಖ್ಯವಾಗಿ ಮನುಷ್ಯನಿಗೆ ದೊರೆತಿರುವ ಹೊಚ್ಚ ಹೊಸ ಹೂವು 'ಹಾಸ.'

ಅನೌಚಿತ್ಯವೇ 'ಹಾಸ'ಕ್ಕೆ ಕಾರಣ ಎಂಬ ಮಾತಿದೆ. ಬಹುಮಟ್ಟಿಗೆ ಅದೇ ಸರಿಯಾದದ್ದು. ಆದರೆ ಜೀವನದಲ್ಲಿ ಸಾಮಾನ್ಯವಾಗಿ ಅನೌಚಿತ್ಯವೆಲ್ಲ 'ಹಾಸ'ಕ್ಕೆ ಕಾರಣವಾಗುವುದಿಲ್ಲ. ಜೀವನ ದಲ್ಲಿ ಯಾವುದೊಂದು ಅನೌಚಿತ್ಯವನ್ನು ಕಂಡಾಗ ಸಾಮಾನ್ಯವಾಗಿ ನನ್ನಲ್ಲಿ ಕೋಪ ಉಂಟಾಗು ತ್ತದೆ, ಇಲ್ಲವೆ ಶೋಕ ಉಂಟಾಗುತ್ತದೆ, ಇಲ್ಲವೆ ಆಶ್ಚರ್ಯ ಉಂಟಾಗುತ್ತದೆ ಅಥವಾ ಭಯಾದಿಗಳು ಕೂಡ ಉಂಟಾಗಬಹುದು. ಒಂದೊಂದು ವೇಳೆ ಮಾತ್ರ ಅನೌಚಿತ್ಯವನ್ನು ಕಂಡೂ ನನಗೆ ಅನ್ಯ ಭಾವಗಳುಂಟಾಗದೆ ಹಾಸ ಉಂಟಾಗುತ್ತದೆ. ಎಂದರೆ—ಹಾಸವನ್ನುಂಟುಮಾಡುವ ಅನೌಚಿತ್ಯ ಸಹಜವಾಗಿ ನಿಶ್ಚಿತವಾಗಿ ಅನೌಚಿತ್ಯವೆಂದು ತೋರುವುದೇ ಇಲ್ಲ. ಚಕ್ಕೆಂದು ಮಿಂಚುವ ಅನೌಚಿತ್ಯ ಹಾಸಕ್ಕ ಕಾರಣವಾಗುತ್ತದೆ. ಪರಿಭಾವಿಸಿ ಹೇಳುವುದಾದರೆ—ನಾನು ಸಂದರ್ಭವಶ ನಾಗಿದ್ದಾಗ ಯಾವ ಅನೌಚಿತ್ಯ ಉಚಿತವಾಗಿಯೇ ತೋರುತ್ತದೆಯೋ ಮತ್ತು ನಾನು ಸಂದರ್ಭ ದೂರನಾಗಿ—ಎಂದರೆ ಅಹಂಕಾರದೂರನಾಗಿ—ನೋಡುವಾಗ ಅನೌಚಿತ್ಯವೆಂದು ಥಕ್ಕನೆ ಮಿಂಚುತ್ತದೆಯೋ ಅಂಥ ಅನೌಚಿತ್ಯ ಹಾಸಕ್ಕೆ ಕಾರಣವಾಗುತ್ತದೆ. ಸ್ಥೂಲವಾಗಿ ಒಂದು ಮಾತಿನಲ್ಲಿ ಹೇಳುವುದಾದರೆ—ಆಯಾ ಸಂದರ್ಭದಲ್ಲಿ ಉಚಿತವೆಂಬಂತೆಯೇ ಒದಗುವಂತಹ ವಿಷಯವೊಂದರ ಅನೌಚಿತ್ಯ ಸಂದರ್ಭದೂರವಾಗಿ ನೋಡಿದಾಗ ಥಕ್ಕನೆ ಸ್ಫೋಟಗೊಳ್ಳುವುದು ಹಾಸಕ್ಕೆ ಕಾರಣವಾಗುತ್ತದೆ.

ಭಾವಾಂತರಗಳ ಅನುಭವದಲ್ಲಿ ಈಷತ್ಕಾಲ ಅರ್ಧ ಅಂಗುಲ ಮೇಲೆ ನಿಂತು, ಆ ಅನುಭವಗಳಲ್ಲಿನ ಅನೌಚಿತ್ಯ ಸ್ಫೋಟಗೊಳ್ಳುವುದನ್ನು ನೋಡುವುದೇ ಹಾಸಕ್ಕೆ ಕಾರಣ ಎಂದಂತಾಯಿತು. ಆ ಕಾರಣ, ಹಾಸಭಾವದಲ್ಲಿ ಉಳಿದೆಲ್ಲ ಭಾವಗಳ ಅನುಭವದಲ್ಲಿಗಿಂತ ಹೆಚ್ಚಿನ ಅವಕಾಶ 'ಸಾಕ್ಷಿ'ಗೆ ದೊರೆಯುತ್ತದೆ ಮತ್ತು ಕಡಿಮೆ ಅವಕಾಶ 'ಅಹಂಕಾರ'ಕ್ಕೆ ದೊರೆಯುತ್ತದೆ. ವಿಶಿಷ್ಟಸಂದರ್ಭಗಳಲ್ಲಾದರೂ ಸ್ವಲ್ಪಮಟ್ಟಿಗೆ ಅಹಂಕಾರದೂರವಾಗಿ ಭಾವವನ್ನು 'ಕಾಣುವ' ಸ್ಥಿತಿ ಹಾಸದಲ್ಲಿ ಇದ್ದಿರುತ್ತದೆ. ಮತ್ತೆ ತಿರುಗಿಸಿ ಹೇಳುವುದಾದರೆ—ಲೋಕಯಾತ್ರೆಯಲ್ಲಿದ್ದೂ ಲೋಕಲೀಲೆಯನ್ನು ಈಷತ್ ಕಾಣಬಲ್ಲ ಒಂದು ವಿಶಿಷ್ಟ ದೃಷ್ಟಿಯೇ ಹಾಸಕ್ಕೆ ಮೂಲ.

ಭಾವವನ್ನು ಅಹಂಕಾರದೂರವಾಗಿ ಅನುಭವಿಸುವ ಸ್ಥಿತಿಯೇ ರಸಸ್ಥಿತಿ ಎಂಬುದನ್ನು ಈಗ ಇಲ್ಲಿ ನಾವು ನೆನಪುಮಾಡಿಕೊಳ್ಳಬಹುದು, ಆ ಕಾರಣದಿಂದ, ಹಾಸ ಸಾಮಾನ್ಯ ಜೀವನದಲ್ಲೆ ಕಿಂಚಿತ್ ರಸಾವಸ್ಥೆಯನ್ನು ಒದಗಿಸಬಲ್ಲುದೆಂಬುದು ಸಿದ್ಧವಾದಂತಾಗುತ್ತದೆ. ಕಾವ್ಯಾದಿಗಳ ನೆರವಿನಿಂದ ಅಹಂಕಾರದೂರವಾಗಿ ಯಾವೊಂದು ಭಾವವನ್ನು ಅನುಭವಿಸು ವುದು ಅಥವಾ ಸವಿಯುವುದು 'ರಸ'. ಜೀವನದಲ್ಲಿ ಅಹಂಕಾರದೂರವಾಗಿ ಯಾವೊಂದು ಭಾವ ವನ್ನು— ಅದರ ವಿಶಿಷ್ಟ ಸ್ಥಿತಿಯಲ್ಲಿ—ಅನುಭವಿಸುವುದು 'ಹಾಸ'. ಎಂದರೆ, ಹಾಸಕ್ಕೆ ಜೀವನ ದಲ್ಲೆ ರಸದ ರೂಪ ಉಂಟು.

ಶೋಕವೋ ರತಿಯೋ ಜೀವನದಲ್ಲಿ ಶೋಕಭಾವವಾಗಿ ರತಿಭಾವವಾಗಿ ಉಳಿಯುತ್ತ ದಲ್ಲದೆ ಕರುಣರಸವಾಗುವುದಿಲ್ಲ, ಶೃಂಗಾರರಸವಾಗುವುದಿಲ್ಲ. ಈ ಕಾರಣದಿಂದ ಕರುಣಾದಿಗಳ

ಸವಿಗಾಗಿ ಅವು ದೊರಕುವ ಮುಖ್ಯಮಾರ್ಗವೊಂದಾದ ಕಲೆಗೆ ನಾವು ಯಾತ್ರೆ ಹೋಗುತ್ತೇವೆ. ಆದರೆ ಹಾಸಭಾವ ಜೀವನದಲ್ಲೆ ಹಾಸ್ಯರಸವಾಗಿ ಅನುಭವವಾಗುತ್ತದೆಯೆಂದಮೇಲೆ ಆ ರಸಕ್ಕಾಗಿ ಕಲೆಯನ್ನೆ ಶರಣು ಹೋಗಬೇಕೆಂಬ ಅಗತ್ಯವಿಲ್ಲವಷ್ಟೆ? ಈ ವ್ಯಾಖ್ಯಾನಸಮೇತ ಪರಿಶೀಲಿಸಿದಾಗ 'ಧಿಕ್ ಪ್ರಹಸನಮ್' ಎಂಬ ಘೋಷವಾಕ್ಯಕ್ಕೆ ಸೂತ್ರವಾಕ್ಯದ ಗುರುತ್ವ ಒದಗುವುದಿಲ್ಲವೆ?

ಹಾಸ ಜೀವನದಲ್ಲೆ ರಸಾವಸ್ಥೆಗೆ ಏರಬಲ್ಲದು ಎಂದು ಹೇಳಿಯಾಯಿತಾದರೂ ಈ ಮಾತಿನ ಮಿತಿ ಅರಿತುಕೊಳ್ಳುವುದಗತ್ಯ. ಹಾಸ ಜೀವನದಲ್ಲಿ ಸಂಪೂರ್ಣ ರಸವಾಗಿಯೇ ಇರುತ್ತಿದ್ದರೆ ಅದು ಭಾವವರ್ಗದಲ್ಲಿ ಸೇರಬೇಕಾದದ್ದಿರಲಿಲ್ಲ. ಮತ್ತು ಹಾಸದಿಂದ ಜೀವನದಲ್ಲೆ ರಸ ಪೂರ್ಣಸ್ವರೂಪದಲ್ಲಿ ಸಿಗುವಂತಿದ್ದರೆ ರಸಿಕರು ಕಲೆಯನ್ನೆ ಆಶ್ರಯಿಸಿ ಶೃಂಗಾರಾದಿ ಅನ್ಯರಸಮಾರ್ಗಗಳ ಮೂಲಕ ರಸಾನುಭವ ಪಡೆಯಬೇಕಾದ ಅಗತ್ಯ ಈಗಿನಷ್ಟಿರುತ್ತಿರಲಿಲ್ಲ. ಎಂದರೆ, ಈಗ ಕಲೆ ಮಾಡುವ ಕೆಲಸದಲ್ಲಿ ಹೆಚ್ಚಿನ ಒಂದು ಪಾಲನ್ನು ಆಗ ಜೀವನದಲ್ಲಿಯೇ ಹಾಸ ಮಾಡಿಬಿಡಬಹುದಿತ್ತು. ಮತ್ತು—ಹಾಸ ಹಾಗೆ ಜೀವನದಲ್ಲೆ ಪೂರ್ಣ ರಸವಾಗಬಲ್ಲದಾಗಿದ್ದರೆ ಕಾವ್ಯಾದಿಗಳಲ್ಲಿ ಹಾಸ್ಯರಸಕ್ಕೆ ಸ್ಥಾನವೇ ಇರುತ್ತಿರಲಿಲ್ಲ. ಈಗ ನಾವು ಕಾಣುವಂತೆ ಕಲೆಯಲ್ಲಿ ಹಾಸ್ಯಕ್ಕೆ ಸಿಶ್ಚಿತವಾಗಿಯೂ ಸ್ಥಾನವಿದೆ. ಅರ್ಥ: ಕಲೆಯಲ್ಲಿನ ಹಾಸ್ಯರಸ ಜೀವನದಲ್ಲಿನ ಹಾಸಭಾವಕ್ಕಿಂತ ಹೆಚ್ಚು ರಸತ್ವ ಹೊಂದಿರಬಲ್ಲುದು.

ಎಲ್ಲ ಕಾರಣಗಳಿಂದ 'ಹಾಸ'ವೆಂಬುದು ಭಾವವರ್ಗದಿಂದ ಹೊರಗೆ ನಿಲ್ಲಲಾರದೆಂಬುದು ಸಿದ್ಧ. ಉಳಿದ ಭಾವಗಳೊಡನೆ ಹುಟ್ಟಿ ಬೆರೆತು ಸಂಕರಗೊಂಡು ಜೀವನದಲ್ಲೆ ಹಬ್ಬಿ ಲೌಕಿಕಕ್ರಿಯೆ ಪ್ರತಿಕ್ರಿಯೆಗಳಿಗೆ ಕೂಡ ಕಾರಣವಾಗಬಲ್ಲಂಥ ಹಾಸ, ರಸದ ಅಂಚಂಚಿನಲ್ಲೆ—ಒಮ್ಮೊಮ್ಮೆ ರಸತಾಗುತ್ತ ಕೂಡ—ಹಸರಿಸುವುದಾದರೂ ಅದು ಭಾವವೇ.

ಹೇಳಬೇಕಾದದ್ದು ಇಷ್ಟು: ಹಾಸ ಲೌಕಿಕ ಭಾವವರ್ಗದಲ್ಲಿಯೇ ಒಂದು. ಆದರೂ, ಅದು ಜೀವನದಲ್ಲೆ ಈಷತ್ ರಸದ ರುಚಿ ತೋರಿಸಬಲ್ಲುದಾಗಿ ಉಳಿದ ಭಾವಗಳಿಗಿಂತ ವಿಲಕ್ಷಣವಾಗಿದೆ. ಯಾವುದು ಜೀವನದಲ್ಲೂ ಸ್ವಲ್ಪ ರಸ ಕೊಡಬಲ್ಲುದೊ ಅಂಥ ಹಾಸಕ್ಕಿಂತ, ಯಾವುದು ಜೀವನದಲ್ಲಿ ತೀರ ರಸದೂರವಾಗಿದ್ದು ಕಲೆಯಲ್ಲಿ ಮಾತ್ರ ಪೂರ್ಣ ರಸತ್ವಕ್ಕೇರುವುದೊ ಅಂಥ ಕರುಣಾದಿಗಳತ್ತ ರಸಿಕರು ಹೆಚ್ಚು ಒಲವುತೋರುವುದು ಸ್ವಾಭಾವಿಕವಾಗಿದೆ. ಮತ್ತು—ಒಬ್ಬ ಕಲಾವಿದ, ಶೋಕಾದಿಗಳನ್ನು ರಸೋಜ್ಜ್ವಲವಾಗಿಸಿ ರಸಿಕರ ಗಮನ ಸೆಳೆದುಕೊಳ್ಳುವಷ್ಟು ಸುಲಭವಾಗಿ ಹಾಸದತ್ತ ರಸಿಕರ ಗಮನ ಸೆಳೆಯಲಾರ, ಹಾಸ ಜೀವನದಲ್ಲೆ ರಸೌಜ್ಜ್ವಲ್ಯದ ಛಾಯೆ ಪಡೆಯಬಲ್ಲುದಾಗಿರುತ್ತದೆಯಾದ ಕಾರಣ.

ಸಾಮಾಜಿಕರಲ್ಲಿ ರಸಿಕರ ಪ್ರವೃತ್ತಿಯನ್ನು ಗಮನದಲ್ಲಿಟ್ಟುಕೊಂಡು ಹೇಳಿದ ಮಾತಿನ ಒರೆಯನ್ನು ಅರಸಿಕರ ಪ್ರವೃತ್ತಿಯಲ್ಲಿ ತೇದು ಪರೀಕ್ಷಿಸುವುದೂ ಯೋಗ್ಯವೇ. ಅರಸಿಕರೆಂದರೆ ಇಲ್ಲಿ ಭಾವಾನುಭವಿಗಳು; ಕಲೆಯಲ್ಲಿಯೂ ಜೀವನವನ್ನೆ—ಹಸಿ ಭಾವಗಳನ್ನೆ—ಅನುಭವಿಸುವವರು. ಅಂಥವರಿಗೆ ಜೀವನದಲ್ಲಿ ಹೇಗೋ ಹಾಗೆ ಕಲೆಯಲ್ಲೂ ರತ್ಯಾದಿ ಅನುಕೂಲ ಭಾವಗಳು ಪ್ರಿಯ, ಶೋಕಾದಿ ಪ್ರತಿಕೂಲ ಭಾವಗಳು ಅಪ್ರಿಯ, ಶೃಂಗಾರಾದಿರಸಗಳು ಅವರ ಪಾಲಿಗೆ ಇಲ್ಲವೇ ಇಲ್ಲ. ಕಲೆಯಿಂದಲೂ ಸುಖದುಃಖ ಫಲ ಪಡೆಯುವ ಅಂಥ ಅರಸಿಕ ಸಾಮಾಜಿಕರು ಪ್ರಹಸನವನ್ನು ಪುರಸ್ಕರಿಸುತ್ತಾರೆ, ಆವಿದ್ಧಗಳನ್ನು ತಿರಸ್ಕರಿಸುತ್ತಾರೆ. ಪ್ರಹಸನ ಪುರಸ್ಕರ್ತರಾಗಿ ಅವರು ಬಯಸುವ ಹಾಸ ('ಹಾಸ್ಯ' ಹೇಗೂ ಬೇಡವಷ್ಟೆ) ಭಾವಲೀಲೆಯನ್ನು ಪ್ರತ್ಯಕ್ಷಗೊಳಿಸುವ ಹಾಸವಲ್ಲ, ಅಹಂಕಾರ ಅರಳಿಸಿ ಸುಖಕೊಡುವ ಹಾಸ. ಎಂದರೆ—ಯಾವ ಹಾಸ ಅನೌಚಿತ್ಯವನ್ನು ಸ್ಫೋಟಗೊಳಿಸಿ ಅನಂತರ ಅಂಥ ಅನೌಚಿತ್ಯವನ್ನು ಅನ್ಯರಲ್ಲಿ ಆರೋಪಿಸಿ ತನ್ಮೂಲಕ ತನ್ನ ಅಹಂಕಾರಕ್ಕೆ ಸುಖ ಕೊಡಿಸುತ್ತದೆಯೋ ಅಂಥ ಹಾಸ.

‘ ಧಿಕ್ ಪ್ರಹಸನಮ್ ’ ಎಂಬ ಘೋಷಣೆಯನ್ನು ನೆವವಾಗಿಸಿಕೊಂಡು ಈ ಚಿಕ್ಕ ಬರಹದಲ್ಲಿ ಹಾಸಭಾವದ ಹಾಗೂ ಹಾಸ್ಯರಸದ ಒಂದು ವೈಲಕ್ಷಣ್ಯವನ್ನು ಸ್ಥೂಲವಾಗಿ ಸೂಚಿಸಲಾಯಿತಷ್ಟೆ. ಸರಲತರ್ಕದಿಂದ ಇಲ್ಲಿ ಸೂಚಿತವಾದ ವಿಷಯ ಸಮರ್ಥಿತವಾಗುವುದಕ್ಕೆ ಬೇರೆ ಅವಕಾಶವೇ ಬೇಕು. ಲೋಕಭಾವಗಳನ್ನು ಬೇರೆಬೇರೆಯಾಗಿ, ಅವುಗಳ ವೈವಿಧ್ಯವೈಶಾಲ್ಯಗಳನ್ನು ಗಮನಿಸಿ, ಅಧ್ಯಯನಮಾಡಲು ಮತ್ತು ರಸಮಾರ್ಗಗಳಾಗಿ ಅವು ಪ್ರಕಟಿಸುವ ವೈಲಕ್ಷಣ್ಯವನ್ನು ಸ್ಪಷ್ಟ ಗುರುತಿಸಲು ನಡೆಯಬೇಕಾದ ಪ್ರಯತ್ನಕ್ಕೆ ಈ ಬರಹ ಒಂದು ಎತ್ತುವೀಳ್ಯವೆಂದು ಭಾವಿಸಬಹುದು.

ಕೆ. ವಿ. ಸುಬ್ಬಣ್ಣ.

# ಹಿಂದೂಸ್ಥಾನಿ ಸಂಗೀತದ ರೂಪರೇಖೆಗಳು

**" ಗೀತ ವಾದಿತ್ರ ನೃತ್ಯಾನಾಂ ತ್ರಯಂ ಸಂಗೀತಮುಚ್ಯತೇ "**

**—ಸಂಗೀತ ಮಕರಂದ**

ಪ್ರಾಚೀನ ಮಾನವನು ತನ್ನ ಸಂತೋಷವನ್ನೂ ದುಃಖವನ್ನೂ ವಿವಿಧಭಾವಗಳನ್ನೂ ಪ್ರಕಟಿಸಲು ಹಲವು ರೀತಿಯ ಧ್ವನಿಗಳನ್ನು ಅಭಿವ್ಯಕ್ತಗೊಳಿಸಿರಬಹುದು. ಕ್ರಮೇಣ ಈ ಧ್ವನಿಗಳಲ್ಲಿ ಯಾವುದೊ ಮಾಧುರ್ಯವನ್ನು ಕಂಡು ಅವುಗಳನ್ನು ಅನುಕರಣ ಮಾಡಿರಬಹುದು. ಪ್ರಕೃತಿಯಲ್ಲಿ ರಾರಾಜಿಸುವ ಕಲಕಲ ನಿನಾದಗಳೂ ಮಾನವನಿಗೆ ಅತಿಶಯವಾದ ಸ್ಫೂರ್ತಿಯನ್ನು ನೀಡಿರಬೇಕು. ವಿಶ್ವದ ಗ್ರಹ ತಾರೆಗಳ ಚಲನೆಯಲ್ಲಿಯೂ ಅವ್ಯಕ್ತ ಮಧುರ ಗಾನವಿದೆಯೆಂದು ಕವಿಗಳು ಹಾಡಿದ್ದಾರೆ.

ವೇದ ಮಂತ್ರಗಳನ್ನು ಉದಾತ್ತ ಅನುದಾತ್ತ ಸ್ವರಿತ ಸ್ವರಗಳೊಡನೆ ಉಚ್ಚರಿಸುವುದು ಪದ್ಧತಿಯಾಗಿದೆ. ಸಾಮವೇದ ಮಂತ್ರಗಳನ್ನು ರಾಗವಾಗಿಯೆ ಹಾಡುತ್ತಾರೆ. ಶಿವನು ನಟರಾಜನೂ ಆಗಿದ್ದಾನೆ. ವೇದಗಳ ಕಾಲದಲ್ಲಿ ಸಪ್ತಸ್ವರಗಳಿದ್ದುವು. ಈ ಸಪ್ತಸ್ವರಗಳು ನಿಸರ್ಗದ ಮೃಗ ಪಕ್ಷಿಗಳ ಧ್ವನಿಗಳಲ್ಲಿ ಕಾಣುತ್ತದೆ ಎಂದು ಸಂಗೀತಶಾಸ್ತ್ರ ಹೇಳುತ್ತದೆ.

**ಮಯೂರಃ ಷಡ್ಜಮಾಖ್ಯಾತಿ ಋಷಭಂ ವಕ್ತಿ ಚಾತಕಃ |**
**ಛಾಗೋ ಗಾಂಧಾರಮಾಚಷ್ಟೇ ಕ್ರೌಂಚೋ ವದತಿ ಮಧ್ಯಮಮ್ ||೬೩||**

**ಕೋಕಿಲಃ ಪಂಚಮಂ ಬ್ರೂತೇ ಭೇಕೋ ವದತಿ ಧೈವತಮ್ |**
**ನಿಷಾದಂ ಭಾಷತೇ ಹಸ್ತೀತ್ಯೇತದ್ ಬ್ರಹ್ಮಾದಿ ಸಮ್ಮತಮ್[1] ||೬೪||**

" ಮಯೂರವು ಷಡ್ಜವನ್ನು ಹೇಳುತ್ತದೆ. ಚಾತಕವು ಋಷಭವನ್ನು ಹೇಳುತ್ತದೆ. ಆಡು ಗಾಂಧಾರವನ್ನು ಹೇಳುತ್ತದೆ. ಕ್ರೌಂಚಪಕ್ಷಿ ಮಧ್ಯಮವನ್ನು ಹೇಳುತ್ತದೆ. ಕೋಗಿಲೆಯು ಪಂಚಮವನ್ನು ಕೂಗುತ್ತದೆ. ಕಪ್ಪೆಯು ಧೈವತವನ್ನು ಹೇಳುತ್ತದೆ. ಆನೆಯು ನಿಷಾದವನ್ನು ಹೇಳುತ್ತದೆ. ಹೀಗೆಂಬುದು ಬ್ರಹ್ಮಾದಿಗಳಿಗೆ ಸಮ್ಮತ."

**ಸಪ್ತಸ್ವರಗಳು**

| ಹೆಸರು | ಸ್ವರಗಳು | ಹೋಲಿಕೆ |
|---|---|---|
| ಷಡ್ಜ | ಸ | ಮಯೂರದ ನಾದ |
| ಋಷಭ | ರಿ | ಚಾತಕದ ನಾದ |
| ಗಾಂಧಾರ | ಗ | ಆಡಿನ ನಾದ |
| ಮಧ್ಯಮ | ಮ | ಕ್ರೌಂಚಪಕ್ಷಿಯ ನಾದ |
| ಪಂಚಮ | ಪ | ಕೋಗಿಲೆಯ ನಾದ |
| ಧೈವತ | ಧ | ಕಪ್ಪೆಯ ನಾದ |
| ನಿಷಾದ | ನಿ | ಆನೆಯ ನಾದ |

[1] ಶ್ರೀ ಸಂಗೀತಸಾರ ಸಂಗ್ರಹ—ಸಂ : ಸ್ವಾಮಿ ಪ್ರಜ್ಞಾನಂದ ಪು. ೮

ಭಾರತೀಯ ಸಂಗೀತ ಶಾಸ್ತ್ರಜ್ಞರು, "ಶ್ರವಣಾತ್ ಶ್ರುತಿಃ" ಎಂದು ಕಿವಿಗೆ ಕೇಳುವ ಧ್ವನಿಯನ್ನು ಗಮನಿಸಿ ಇಪ್ಪತ್ತೆರಡು ಶ್ರುತಿಗಳಿವೆ ಎಂದು ಸಾರಿದ್ದಾರೆ. ಈ ಶ್ರುತಿಗಳು ಮೂಡುವ ಸ್ಥಾನಗಳು ಹೃದಯ, ಕಂಠ ಹಾಗೂ ಶಿರಸ್ಸು ಎಂದು ತಿಳಿದಿದ್ದಾರೆ. ಈ ಸಪ್ತಸ್ವರಗಳು ಬೇರೆ ಬೇರೆ ಶ್ರುತಿಗಳಲ್ಲಿವೆ ಎಂಬುದನ್ನು ಶಾಸ್ತ್ರಜ್ಞರು ಹೇಳಿದ್ದಾರೆ.

**ಶ್ರುತಿಗಳು**

| | ಶ್ರುತಿ | ಶುದ್ಧಸ್ವರ | ವಿಕೃತಸ್ವರ |
|---|---|---|---|
| ೧ | ತೀವ್ರಾ | ಷಡ್ಜ (ಸ) | |
| ೨ | ಕುಮುದ್ವತೀ | | |
| ೩ | ಮಂದಾ | | ಕೋಮಲ ಋಷಭ (ರಿ) |
| ೪ | ಛಂದೋವತೀ | | |
| ೫ | ದಯಾವತೀ | ಶುದ್ಧ ಋಷಭ (ರಿ) | |
| ೬ | ರಂಜನೀ | | |
| ೭ | ರತಿಕಾ | | ಕೋಮಲ ಗಾಂಧಾರ (ಗ) |
| ೮ | ರೌದ್ರೀ | ಶುದ್ಧ ಗಾಂಧಾರ (ಗ) | |
| ೯ | ಕ್ರೋಧಾ | | |
| ೧೦ | ವಜ್ರಿಕಾ | ಶುದ್ಧ ಮಧ್ಯಮ [1](ಮ) | |
| ೧೧ | ಪ್ರಸಾರಿಣೀ | | |
| ೧೨ | ಪ್ರೀತಿಃ | | ತೀವ್ರ ಮಧ್ಯಮ (ಮ) |
| ೧೩ | ಮಾರ್ಜನೀ | | |
| ೧೪ | ಕ್ಷಿತಿಃ | ಪಂಚಮ (ಪ) | |
| ೧೫ | ರಕ್ತಾ | | |
| ೧೬ | ಸಂದೀಪಿನೀ | | ಕೋಮಲಧೈವತ (ಧ) |
| ೧೭ | ಆಲಾಪಿನೀ | | |
| ೧೮ | ಮದಂತೀ | ಶುದ್ಧ ಧೈವತ (ಧ) | |
| ೧೯ | ರೋಹಿಣೀ | | |
| ೨೦ | ರಮ್ಯಾ | | ಕೋಮಲ ನಿಷಾದ (ನಿ) |
| ೨೧ | ಉಗ್ರಾ | ಶುದ್ಧ ನಿಷಾದ (ನಿ) | |
| ೨೨ | ಕ್ಷೋಭಿಣೀ | | |

ಹಿಂದೂಸ್ಥಾನಿ ಸಂಗೀತದಲ್ಲಿ ಸ್ವರಗಳನ್ನು ಶುದ್ಧಸ್ವರ ವಿಕೃತ ಅಥವಾ ಕೋಮಲಸ್ವರಗಳೆಂದು ವಿಂಗಡಿಸಿದ್ದಾರೆ. ಷಡ್ಜ (ಸ) ಮತ್ತು ಪಂಚಮ (ಪ) ಇವೆರಡೂ ವಿಕೃತವಲ್ಲದ ಶುದ್ಧ ಸ್ವರಗಳು. ಉಳಿದ ಋಷಭ (ರಿ), ಗಾಂಧಾರ (ಗ) ಮಧ್ಯಮ (ಮ) ಧೈವತ (ಧ) ನಿಷಾದ (ನಿ) ಸ್ವರಗಳಲ್ಲಿ ಶುದ್ಧ ಹಾಗೂ ವಿಕೃತವೆಂಬ ಭೇದಗಳಿವೆ. ಮಧ್ಯಮ (ಮ) ಸ್ವರದಲ್ಲಿ ಶುದ್ಧ ಹಾಗೂ ತೀವ್ರ ವೆಂಬ ಭೇದವೆಂದು ವಿಭಜಿಸಿದ್ದಾರೆ.

ಸ ರಿ ಗ ಮ ಪ ಧ ನಿ




ಶುದ್ಧ ಹಾಗೂ ವಿಕೃತ ಸ್ವರಗಳನ್ನು ಸೇರಿಸಿದರೆ ಹನ್ನೆರಡು ಸ್ವರಗಳಾಗುತ್ತವೆ. ಈ ಸ್ವರಗಳ ಪರಿಪರಿಯ ಮೇಳಗಳಿಂದ ಪರಿಪರಿಯ ರಾಗಗಳಾಗುತ್ತವೆ. ಶುದ್ಧ ಸ್ವರಗಳನ್ನೂ ವಿಕೃತ ಸ್ವರ

ಗಳನ್ನೂ ಗಣಿತ ರೀತಿಯಲ್ಲಿ ಕ್ರಮ ವ್ಯತ್ಯಾಸಮಾಡಿ ಕೂಡಿಸುವುದರಿಂದ ಎಪ್ಪತ್ತೆರಡು ವಿಧಗಳಾಗುತ್ತವೆ. ಇವುಗಳಿಗೆ ಥಾಟ ಎಂಬ ಹೆಸರಿದೆ. ಈ ಎಪ್ಪತ್ತೆರಡು ಥಾಟಗಳಲ್ಲಿ ಹತ್ತನ್ನು ಮಾತ್ರ ಆರಿಸಿಕೊಂಡು ಹಿಂದೂಸ್ಥಾನಿ ಸಂಗೀತಕ್ಕೆ ಆ ಹತ್ತು ಥಾಟಗಳು ಸಾಕಾಗುತ್ತವೆ ಎಂದು ಅಭಿಪ್ರಾಯಪಟ್ಟಿದ್ದಾರೆ ಉದ್ದಾಮ ಸಂಗೀತಜ್ಞರಾದ ದಿವಂಗತ ಪಂಡಿತ ವಿ. ಎನ್. ಭಾತ್‌ಖಂಡೆ.

**ಹತ್ತು ಥಾಟಗಳು**

೧. ಕಲ್ಯಾಣ್ ಥಾಟ
೨. ಬಿಲಾವಲ್ ಥಾಟ
೩. ಖಮಾಚ್ ಥಾಟ
೪. ಭೈರವ್ ಥಾಟ
೫. ಪೂರ್ವೀ ಥಾಟ
೬. ಮಾರವಾ ಥಾಟ
೭. ಕಾಫೀ ಥಾಟ
೮. ಅಸಾವರೀ ಥಾಟ
೯. ಭೈರವೀ ಥಾಟ
೧೦. ತೋಡಿ ಥಾಟ

ಭಾರತೀಯರು ನಾದವನ್ನು ಬ್ರಹ್ಮವೆಂದು ಕರೆದಿದ್ದಾರೆ. ನಾದರೂಪವಾದ ಧ್ವನಿಯಿಂದ ರಾಗದ ಉದಯವನ್ನು ಹೀಗೆ ಸಾಂಕೇತಿಕವಾಗಿ ವಿವರಿಸಬಹುದು :




ರಾಗಗಳನ್ನು ಸಂಪೂರ್ಣ, ಷಾಡವ, ಓಡವ ಎಂದು ಮೂರು ಜಾತಿಗಳಾಗಿ ವಿಭಜಿಸಿದ್ದಾರೆ. ಸಂಪೂರ್ಣ ರಾಗದಲ್ಲಿ ಸಪ್ತ ಸ್ವರಗಳೂ ಇರುತ್ತವೆ. ಷಾಡವದಲ್ಲಿ ಆರು ಸ್ವರಗಳೂ ಓಡವದಲ್ಲಿ ಐದು ಸ್ವರಗಳೂ ಇರುತ್ತವೆ. ಈ ಸಂಪೂರ್ಣ, ಷಾಡವ, ಓಡವ ಜಾತಿಗಳನ್ನು ಬೇರೆ ಬೇರೆ ರೀತಿಯಲ್ಲಿ ಸೇರಿಸಬಹುದು.



11976



ಗಣಿತರೀತಿಯಲ್ಲಿ ಲೆಕ್ಕಮಾಡಿದರೆ ೩೪,೮೪೮ ರಾಗಗಳಾಗುತ್ತವೆ. ಇಂದು ಹಿಂದೂಸ್ಥಾನಿ ಸಂಗೀತದಲ್ಲಿ ಪ್ರಚಾರದಲ್ಲಿರುವ ರಾಗಗಳ ಸಂಖ್ಯೆ ಸುಮಾರು ಇನ್ನೂರ ಇಪ್ಪತ್ತೈದು. ಕರ್ಣಾಟಕ ಸಂಗೀತದಲ್ಲಿ ಸುಮಾರು ಮುನ್ನೂರು ರಾಗಗಳು ಪ್ರಚಾರದಲ್ಲಿವೆ. ಪಂಡಿತ ವಿ. ಎನ್. ಭಾತ್‌ಖಂಡೆಯವರು ಹತ್ತು ಥಾಟಗಳಿಗೆ ಸೇರಿದ ಮುಖ್ಯ ಜನ್ಯ ರಾಗಗಳನ್ನು ಹೀಗೆ ನಿರೂಪಿಸಿದ್ದಾರೆ.

## ಥಾಟ ಮತ್ತು ಜನ್ಯ ರಾಗಗಳು

| ಥಾಟ | ಜನ್ಯರಾಗಗಳು |
|---|---|
| ೧. ಕಲ್ಯಾಣಿ | (೧) ಯಮನ್ (೨) ಭೂಪಾಲಿ (೩) ಶುದ್ಧ ಕಲ್ಯಾಣ್ (೪) ಚಂದ್ರಕಾಂತ್ (೫) ಜಯಂತ್ ಕಲ್ಯಾಣ್ (೬) ಮಾಲಶ್ರೀ (೭) ಹಿಂದೋಲ್ (೮) ಹಮ್ಮೀರ್ (೯) ಕೇದಾರ್ (೧೦) ಕಾಮೋದ್ (೧೧) ಶ್ಯಾಮ್ (೧೨) ಛಾಯಾನಟ್ (೧೩) ಗೌಡ ಸಾರಂಗ್ |
| ೨. ಬಿಲಾವಲ್ | (೧) ಶುದ್ಧ ಬಿಲಾವಲ್ (೨) ಅಲ್ಹೈಯಾ ಬಿಲಾವಲ್ (೩) ಶುಕ್ಲ ಬಿಲಾವಲ್ (೪) ದೇವಗಿರಿ (೫) ಕಕುಭಾ (೬) ನಟ ಬಿಲಾವಲ್ (೭) ಲಚ್ಛಾಶಖಾ (೮) ಸರ್ಪರ್ದಾ (೯) ಬೆಹಾಗ್ (೧೦) ಪಹಾಡಿ (೧೧) ಮದರಂಗ (೧೨) ದುರ್ಗಾ (೧೩)ದೇಶ್‌ಕಾರ್ (೧೪) ಹೇಮಕಲ್ಯಾಣಿ (೧೫) ನಟಮಾಂಡ್ (೧೬)ಮಲುಹಾ (೧೭) ಶಂಕರ (೧೮) ಗುಣಕಲೀ |
| ೩. ಖಮಾಚ್ | (೧) ಝಿಂಝೋಟಿ (೨) ಖಮಾಚ್ (೩) ದುರ್ಗಾ (೪) ತಿಲಂಗ್ (೫) ರಾಗೇಶ್ವರಿ (೬) ಖಂಬಾವತಿ (೭) ಗಾರಾ (೮) ಸೋರಟೀ (೯) ದೇಶ್ (೧೦) ಜಯ ಜಯವಂತಿ (೧೧) ತಿಲಕ್ ಕಾಮೋದ್ |
| ೪. ಭೈರವ್ | (೧) ಭೈರವ್ (೨) ಶಿವಭೈರವ್ (೩) ಆನಂದಭೈರವ್ (೪) ಅಹಿರಭೈರವ್ (೫) ಬಂಗಾಳ ಭೈರವ್ (೬) ಸೌರಾಷ್ಟ್ರ (೭) ಪ್ರಭಾತ (೮) ರಾಮಕ್ರೀ (ರಾಮಕಲಿ) (೯) ಗುಣಕ್ರೀ (೧೦) ಕಳಿಂಗ (೧೧) ಜೋಗಿಯಾ (೧೨) ವಿಭಾಸ (೧೩) ಮೇಘ ರಂಜನೀ (೧೪) ಗೌರೀ (೧೫) ಪಂಚಮ |
| ೫. ಪೂರ್ವೀ | (೧) ಪೂರ್ವೀ (೨) ಪೂರಿಯಾ ಧನಶ್ರೀ (೩) ಜೇತಾಶ್ರೀ (೪) ರೇವಾ (೫) ಶ್ರೀರಾಗ (೬) ಗೌರೀ (೭) ಮಾಲವೀ (೮) ತ್ರಿವೇಣೀ (೯) ಟಂಕೀ (೧೦) ವಸಂತ್ (೧೧) ದೀಪಕ್ (೧೨) ಪರಜ್. |
| ೬. ಮಾರವಾ | (೧) ಮಾರವಾ (೨) ಪೂರಿಯಾ (೩) ಜೈತ್ರ (೪) ಮಾಲೀಗೌರಾ (೫) ಸಾಜ್‌ಗಿರಿ (೬) ವರಾಟಿ (೭) ಲಲಿತಾ (೮) ಸೋಹಸೀ (೯) ಪಂಚಮ್ (೧೦) ವಿಭಾಸ್ (೧೧) ಭಟ್ಟಿಯಾರ್ (೧೨) ಭಂಖಾರಾ. |
| ೭. ಕಾಫೀ | (೧) ಕಾಫೀ (೨) ಸೈಂಧವೀ (೩) ಧನಾಶ್ರೀ (೪) ಭೀಮ್ ಪಲಾಸೀ (೫) ಧಾನೀ (೬) ಪಟಮಂಜರಿ (೭) ಪ್ರದೀಪಕೀ (೮) ಹಂಸ ಕಂಕಣೀ (೯) ಪೀಲೂ (೧೦) ವಾಗೀಶ್ವರೀ (ಬಾಗೇಶ್ವರಿ) (೧೧) ಸಹಾನಾ (೧೨) ಸುಹಾ (೧೩) ಸುಘ್ರಾಯಿ (೧೪) ನಾಯಕೀ (೧೫) ಕಾನಡಾ (೧೬) ಕೌಶಿಕ್ (೧೭) ಬಹಾರ್ (೧೮) ವೃಂದಾವನೀ ಸಾರಂಗ್ (೧೯) ಮಧ್ಯಮ ಸಾರಂಗ್ (೨೦) ಸಾಮಂತ ಸಾರಂಗ್ (೨೧) ಮಿಯಾಸಾರಂಗ್ (೨೨) ಬಡಹಂಸ ಸಾರಂಗ್ (೨೩) ಶುದ್ಧ ಸಾರಂಗ್ (೨೪) ಮೇಘಮಲ್ಲಾರ್ (೨೫) ಮಿಯಾಮಲ್ಲಾರ್ (೨೬) ಸೂರ್ ಮಲ್ಲಾರ್ (೨೭) ಗೌಡಮಲ್ಲಾರ್ (೨೮) ರಾಮದಾಸಿ ಮಲ್ಲಾರ್ (೨೯) ಶುದ್ಧಮಲ್ಲಾರ್. |

೮. ಅಸಾವರೀ — (೧) ಅಸಾವರೀ (೨) ಜೌನ್‌ಪುರೀ (೩) ದೇವಗಾಂಧಾರ್ (೪) ಸಿಂಧು ಭೈರವಿ (೫) ದೇಸಿ (೬) ಖಟರಾಗ (೭) ಕೌಶಿಕೀ ಕಾನಡಾ (೮) ದರ್‌ಬಾರೀ ಕಾನಡಾ (೯) ಅಡಾಣಾ (೧೦) ಝೀಲೋಫ್.

೯. ಭೈರವೀ — (೧) ಭೈರವೀ (೨) ಮಾಲ್‌ಕೌಂಸ್ (೩) ಬಿಲಾಸ್ ಖಾನಿ ತೋಡಿ.

೧೦. ತೋಡಿ — (೧) ತೋಡಿ (೨) ಗುರ್ಜರೀ ತೋಡಿ (೩) ಮುಲ್ತಾನಿ.

ಈ ರಾಗಗಳಲ್ಲಿ ಜನರಿಗೆ ಅತ್ಯಂತ ಪ್ರಿಯವಾದ ರಾಗಗಳು ಸುಮಾರು ನಲವತ್ತು. ಈ ರಾಗಗಳೆ ಹೆಚ್ಚಾಗಿ ಪ್ರಚಾರದಲ್ಲಿರುವುವು. ಯಮನ್, ಭೂಪಾಲೀ, ಹಮ್ಮಿರ್, ಕೇದಾರ್, ಛಾಯಾನಟ್, ಹಿಂದೋಳ, ಶಂಕರ, ಬಿಹಾಗ್, ಗೌಡಸಾರಂಗ್, ಖಮಾಚ್, ದೇಶ್, ಝಿಂಝೋಟಿ, ಪಹಾಡಿ, ಜಯ್‌ಜಯ್‌ವಂತಿ, ಗಾರಾ, ಭೈರವ್, ಕಳಿಂಗ್, ಜೋಗಿಯಾ ಪೂರ್ವೀ, ಗೌರೀ, ಪೂರಿಯಾಧನಶ್ರೀ, ಸೋಹನಿ, ಬಸಂತ್, (ವಸಂತ್), ಲಲಿತ್, ಕಾಫೀ, ಬಾಗೇಶ್ವರೀ, ಭೀಮ್‌ಪಲಾಸೀ, ವೃಂದಾವನೀ ಸಾರಂಗ್, ಪೀಲೂ, ಬಹಾರ್, ಅಡಾಣ, ಜೌನ್‌ಪುರಿ, ದರ್ಬಾರೀ ಕಾನಡಾ, ಭೈರವೀ, ಮಾಲ್‌ಕೌಂಸ್, ತೋಡಿ, ಮುಲ್ತಾನಿ, ಬಿಲಾವಲ್, ಶುದ್ಧಸಾರಂಗ್, ಭೈರವೀ—ಇವೇ ಆ ನಲವತ್ತು ರಾಗಗಳು.

ಒಂದು ರಾಗದಲ್ಲಿರುವ ಜೀವಸ್ವರವನ್ನು 'ವಾದಿ' ಎಂದೂ ಅದಕ್ಕೆ ಸಹಯೋಗಿಯಾದ ಸ್ವರವನ್ನು 'ಸಂವಾದಿ' ಎಂದೂ ಅದನ್ನು ಅನುಸರಿಸುವ ಸ್ವರವನ್ನು 'ಅನುವಾದಿ' ಎಂದೂ ಕರೆಯುತ್ತಾರೆ. ಒಂದು ರಾಗದ ಸಾಮರಸ್ಯವನ್ನು ಕೆಡಿಸುವ ಸ್ವರಕ್ಕೆ 'ವಿವಾದಿ' ಎಂದು ಹೆಸರು. 'ವಿವಾದಿ' ಸ್ವರವು ರಾಗಕ್ಕೆ ಶತ್ರುವಿದ್ದಂತೆ.

ಪ್ರಾಚೀನ ಕಾಲದಲ್ಲಿ ಆರು ಋತುಗಳಲ್ಲಿ ಹಾಡಬಹುದಾದ ಆರು ರಾಗಗಳು ಮಾತ್ರ ಪ್ರಚಾರದಲ್ಲಿದ್ದಂತೆ ಕಾಣುತ್ತದೆ. ವಸಂತ ಋತುವಿನಲ್ಲಿ ಉಲ್ಲಾಸದಾಯಕವಾದ 'ವಸಂತ' ರಾಗವನ್ನೂ ಗುಡುಗಿನ ಆರ್ಭಟ ಅನುರಣಿತವಾಗುವ ಮಳೆಯ ಮುನ್ಸೂಚನೆ ಕಾಣುವ ಗ್ರೀಷ್ಮ ಋತುವಿನಲ್ಲಿ 'ಭೈರವ' ರಾಗವನ್ನೂ ಮೇಘಾಚ್ಛಾದಿತವಾಗಿ ಮಳೆ ಸುರಿಯುವ ವರ್ಷ ಋತುವಿನಲ್ಲಿ 'ಮೇಘ' ರಾಗವನ್ನೂ ಮೇಘಗಳು ಚದುರಿ ಆಕಾಶದಲ್ಲಿ ಬಿಳಿ ಮೋಡಗಳು ತೇಲುವ ಶರದೃತುವಿನಲ್ಲಿ 'ಪಂಚಮ' ರಾಗವನ್ನೂ ಚಳಿಯಿಂದ ಕೂಡಿದ ಹೇಮಂತ ಋತುವಿನಲ್ಲಿ 'ನಟನಾರಾಯಣ' ರಾಗವನ್ನೂ ಸಮೃದ್ಧವಾದ ಬೆಳೆಗಳನ್ನು ಕೊಯ್ದು ಕಣಜದಲ್ಲಿ ಕೂಡಿಡುವ ಸಂಪತ್ತಿನಿಂದ ಕೂಡಿದ ಶಿಶಿರ ಋತುವಿನಲ್ಲಿ 'ಶ್ರೀ' ರಾಗವನ್ನೂ ಹಾಡುವ ಸಂಪ್ರದಾಯ ಅರ್ಥಪೂರ್ಣವಾಗಿದೆ. ಕಾಲದ ಚಕ್ರವನ್ನು ಪ್ರತಿಬಿಂಬಿಸುವ ಈ ರಾಗಗಳು ಅವ್ಯಕ್ತ ಅನಿರ್ವಚನೀಯ ಭಾವಗಳನ್ನು ಹೊಮ್ಮಿಸುತ್ತವೆ.

ಬೇರೆ ಬೇರೆ ಋತುಗಳಲ್ಲಿ ಮಾತ್ರವಲ್ಲದೆ ದಿನದ ಬೇರೆ ಬೇರೆ ಕಾಲಗಳಲ್ಲಿ ಹಾಡಬಹುದಾದ ರಾಗಗಳನ್ನೂ ಶಾಸ್ತ್ರಜ್ಞರು ವಿಭಜಿಸಿದ್ದಾರೆ. ಹಗಲು ಹಾಡುವ ರಾಗಗಳನ್ನು 'ದಿನಗೇಯ'ವೆಂದೂ ರಾತ್ರಿ ಹಾಡುವ ರಾಗಗಳನ್ನು 'ರಾತ್ರಿಗೇಯ'ವೆಂದೂ ಪ್ರಾತಃ ಸಂಧ್ಯೆ ಮತ್ತು ಸಾಯಂ ಸಂಧ್ಯೆಗಳಲ್ಲಿ ಹಾಡುವ ರಾಗಗಳನ್ನು 'ಸಂಧಿ ಪ್ರಕಾಶ ರಾಗ'ಗಳೆಂದೂ ವಿಭಜಿಸಿದ್ದಾರೆ. ಹೀಗೆ ವಿಭಜಿಸುವಾಗ ಕೆಲವು ನಿಯಮಗಳನ್ನು ಅನುಸರಿಸಿದ್ದಾರೆ ಶಾಸ್ತ್ರಜ್ಞರು.

## ಕಾಲ ಮತ್ತು ರಾಗ

| ಕಾಲ | ನಿಯಮ | ಹಾಡಬಹುದಾದ ಕೆಲವು ರಾಗಗಳು |
|---|---|---|
| ಪ್ರಾತಃಕಾಲ<br>೪—೭ | ಪ್ರಯೋಗ—<br>ಕೋಮಲ ಋಷಭ<br>ಕೋಮಲ ಧೈವತ | ಭೈರವ<br>ಜೋಗಿಯ<br>ಪೂರ್ವೀ<br>ಗೌರೀ |
| ಬೆಳಗ್ಗೆ<br>೭—೧೦ | ತೀವ್ರ ಋಷಭ<br>ತೀವ್ರ ಗಾಂಧಾರ<br>ತೀವ್ರ ಧೈವತ | ಹಿಂದೋಳ |
| ಬೆಳಗ್ಗೆ<br>೧೦—೧೨ | ಕೋಮಲ ಗಾಂಧಾರ<br>ಕೋಮಲ ನಿಷಾದ | ಅಸಾವರೀ<br>ಜೌನ್ ಪುರಿ<br>ಭೈರವೀ<br>ತೋಡಿ |
| ಮಧ್ಯಾಹ್ನ<br>೧—೪ | ಕೋಮಲ ಗಾಂಧಾರ<br>ಕೋಮಲ ನಿಷಾದ | ಭೀಮ್ ಪಲಾಸಿ<br>ವೃಂದಾವನಿ ಸಾರಂಗ್<br>ಪೀಲೂ<br>ಮುಲ್ತಾನಿ |
| ಸಂಜೆ<br>೪—೭ | ಕೋಮಲ ಋಷಭ<br>ಕೋಮಲ ಧೈವತ | ಪೂರಿಯಾ ಧನಶ್ರೀ<br>ಪೂರ್ವೀ<br>ಗೌರೀ |
| ರಾತ್ರಿ<br>೭—೧೦ | ತೀವ್ರ ಋಷಭ<br>ತೀವ್ರ ಗಾಂಧಾರ<br>ತೀವ್ರ ಧೈವತ | ಯಮನ್<br>ಕೇದಾರ್<br>ಭೂಪಾಲಿ<br>ಛಾಯಾನಟ್ |
| ರಾತ್ರಿ<br>೧೦—೧೨ | ಪ್ರಯೋಗ—<br>ಕೋಮಲ ಗಾಂಧಾರ<br>ಕೋಮಲ ನಿಷಾದ | ದೇಶ್<br>ಜಯ್ ಜಯ್‌ವಂತಿ<br>ಬಿಹಾಗ್<br>ಶಂಕರ |
| ರಾತ್ರಿ<br>೧—೪ | ಕೋಮಲ ಗಾಂಧಾರ<br>ಕೋಮಲ ನಿಷಾದ | ಅಡಾಣ<br>ಮಾಲ್‌ಕೌಂಸ್<br>ಲಲಿತ್<br>ಸೋಹನಿ |

ಈಗ ಹಿಂದೂಸ್ಥಾನಿ ಸಂಗೀತದಲ್ಲಿ ಗಾಯಕರಾಗಲಿ ವಾದ್ಯಕಾರರಾಗಲಿ ಈ ನಿಯಮಗಳನ್ನು ಸಂಪೂರ್ಣವಾಗಿ ಅನುಸರಿಸುವಂತೆ ಕಾಣುವುದಿಲ್ಲ. ಶಾಸ್ತ್ರ ನಿಯಮದಂತೆ ಹಾಡಿದಾಗ

ದೇಹ ಮನಸ್ಸುಗಳ ಮೇಲೆ ಆಗುವ ನಿಯಮವನ್ನು ಗಾಯಕನು ಇಚ್ಛೆ ಬಂದ ರಾಗಗಳನ್ನು ಯಾವ ಕಾಲದಲ್ಲಿಯಾದರೂ ಹಾಡಿದಾಗ ದೇಹ ಮನಸ್ಸುಗಳ ಮೇಲೆ ಆಗುವ ಪರಿಣಾಮ ಗಳನ್ನೂ ಕುರಿತು ಹೆಚ್ಚಿನ ಸಂಶೋಧನೆ ಆಗಬೇಕಾಗಿದೆ.

ಹಿಂದೂಸ್ಥಾನಿ ಸಂಗೀತದಲ್ಲಿ ವಿಶಿಷ್ಟ ಪದ್ಧತಿಗಳಿವೆ. ಮುಖ್ಯವಾಗಿ ದ್ರುಪದ್, ಹೋರಿ ಅಥವಾ ದಮಾರ್, ಖಯಾಲ್, ಟುಮ್ರಿ, ದಾದ್ರ, ಟಪ್ಪ, ತರಾನಾ, ತಿರ್‌ವತ್, ರಾಗಮಾಲಾ ಇವು ಪ್ರಚಾರದಲ್ಲಿವೆ. ಭಾರತದ ಅತಿ ಪ್ರಾಚೀನವಾದ ಸಂಗೀತ ರೂಪಗಳು ದ್ರುಪದ್ ಗಾಯನ ಪದ್ಧತಿಯಲ್ಲಿ ಉಳಿದುಬಂದಿದೆ ಎಂದು ತಿಳಿದಿದ್ದಾರೆ. ಈ ಗಾಯನ ಪದ್ಧತಿಯನ್ನು ರಕ್ಷಿಸಿ ಬೆಳೆಸಿದ ಖ್ಯಾತಿ ಸ್ವಾಮಿ ಹರಿದಾಸ್ ಮತ್ತು ತಾನ್‌ಸೇನ್ ಅವರದು. ಈ ಗಾಯನದಲ್ಲಿ ಅಸ್ತಾಯಿ, ಅಂತರ, ಸಂಚಾರಿ, ಆಭೋಗ್ ಎಂಬ ನಾಲ್ಕು ಭಾಗಗಳಿದ್ದುವು. ಸಾಹಿತ್ಯಕ್ಕೆ ಈ ಗಾಯನದಲ್ಲಿ ಹೆಚ್ಚಿನ ಪ್ರಾಶಸ್ತ್ಯವಿತ್ತು. ಈಚೆಗೆ ಸಾಹಿತ್ಯ ಭಾಗ ಚಿಕ್ಕದಾಗಿ ಅಸ್ತಾಯಿ ಮತ್ತು ಸಂಚಾರಿ ಎಂಬ ಎರಡು ಭಾಗಗಳು ಮಾತ್ರ ಉಳಿಯುವಂತಾಗಿದೆ, ಈಗ ದ್ರುಪದ್ ಗಾಯನ ಪದ್ಧತಿ ಯಲ್ಲಿ ಗೌಡೀವಾಣಿ, ಖಂದರ್‌ವಾಣಿ, ನೌಹರ್‌ವಾಣಿ, ಡಾಗುರ್‌ವಾಣಿ ಎಂಬ ನಾಲ್ಕು ಜಾತಿ ಗಳಿವೆ. ತಾನ್‌ಸೇನರು ಇಸ್ಲಾಂ ಮತಕ್ಕೆ ಸೇರುವ ಮೊದಲು ಗೌಡ ಬ್ರಾಹ್ಮಣರಾದುದರಿಂದ ತಾವು ಹಾಡುತ್ತಿದ್ದ ಸಂಪ್ರದಾಯಕ್ಕೆ 'ಗೌಡೀವಾಣಿ' ಎಂದು ಕರೆದರು. ಈ ಸಂಪ್ರದಾಯದ ದ್ರುಪದ್ ಗಾಯನದಲ್ಲಿ ಗಾಂಭೀರ್ಯವಿದೆ; ಪ್ರಧಾನವಾಗಿ ಶಾಂತರಸಕ್ಕೆ ಪ್ರೇರಕವೆಂಬ ಭಾವನೆ ಇದೆ. ರಾಜಪುಟಾಣದ ಖಂದರ್ ಎಂಬ ಪ್ರದೇಶದಲ್ಲಿದ್ದ ನೌಬತ್‌ಖಾನ್ 'ಖಂದರ್ ವಾಣಿ' ಸಂಪ್ರದಾಯವನ್ನು ಬೆಳೆಸಿದರು. ಈ ಸಂಪ್ರದಾಯದಲ್ಲಿ ರಭಸವಿದೆ, ವೇಗವಿದೆ. ಆದ್ದ ರಿಂದ ವೀರರಸಕ್ಕೆ ಪ್ರೇರಕವಾದುದು. ದೆಹಲಿಯ ಬಳಿ ಇರುವ ನೌಹರ್ ಪ್ರದೇಶದ ಶ್ರೀಚಂದ್ ಅವರು ಸರಳ ಸೌಂದರ್ಯದಿಂದ ಕೂಡಿದ 'ನೌಹರ್‌ವಾಣಿ' ಸಂಪ್ರದಾಯವನ್ನು ಬೆಳೆಸಿದರು. ರಾಜಪುಟಾಣದ ಡಾಗುರ್ ಪ್ರದೇಶದಿಂದ ಬಂದ ಬ್ರಿಜಚಂದ್ ಅವರು ತುಂಬು ಧ್ವನಿಯ ಗಾಂಭೀರ್ಯವುಳ್ಳ 'ಡಾಗುರ್‌ವಾಣಿ' ಸಂಪ್ರದಾಯವನ್ನು ಬೆಳೆಸಿದರು. ಖ್ಯಾತ ಗಾಯಕ ರಾಗಿದ್ದ ತಾನ್‌ಸೇನರ ಪ್ರಭಾವದಿಂದ ಅಕ್ಬರನ ಆಸ್ಥಾನದಲ್ಲಿ ದ್ರುಪದ್‌ಗಾಯನವು ಅತ್ಯಂತ ಪ್ರಿಯವಾಗಿತ್ತು.

ಶ್ರೀಕೃಷ್ಣನ ಲೀಲೆಗಳನ್ನು ಕುರಿತು ಹೋಳಿ ಹಬ್ಬದಲ್ಲಿ ಹಾಡುವ ಗೀತೆಗಳು 'ಹೋರಿ ಅಥವಾ 'ದಮಾರ್' ಎಂಬ ಹೆಸರಿನಿಂದ ಪ್ರಿಯವಾದುವು. ಈ ಪದ್ಧತಿಯ ಗಾಯನ ಮೊದಲು ಬೃಂದಾವನಮಥುರೆಗಳಲ್ಲಿ ಪ್ರಾರಂಭವಾಗಿ ಇತರ ಕಡೆಗಳಲ್ಲಿ ಪ್ರಸಾರವಾಯಿತು. ಈ ಗೀತೆಗಳನ್ನು ಸಾಮಾನ್ಯವಾಗಿ ದಮಾರ್ ತಾಳದಲ್ಲಿ ಹಾಡುವುದರಿಂದ ದಮಾರ್ ಎಂಬ ಹೆಸರೂಬಂದಿತು.

ಗಾಯಕನ ಮನೋಧರ್ಮದಂತೆ ಭಾವಪೂರ್ಣವಾಗಿ ಹಾಡಿ ಗಾಯಕನ ವೈಶಿಷ್ಟ್ಯ ವನ್ನು ತೋರುವ ಗಾಯನ ಪದ್ಧತಿ 'ಖಯಾಲ್.' ಗಾಯಕನು ಭಾವತೀವ್ರತೆಯನ್ನು ಪ್ರಕಟಿ ಸುತ್ತ ಬಂದುದರಿಂದ ಖಯಾಲ್ ಪದ್ಧತಿ ಜನಪ್ರಿಯವಾಯಿತು. ಈಗ ಹಿಂದೂಸ್ಥಾನಿ ಗಾಯಕ ರಲ್ಲಿ ಖಯಾಲ್ ಹಾಡುವುದೇ ಹೆಚ್ಚು. ಇದು ಶುದ್ಧ ಶಾಸ್ತ್ರೀಯ ಸಂಗೀತ ಸಂಪ್ರದಾಯಕ್ಕೆ ಸೇರಿದರೂ ಗಾಯಕನಿಗೆ ತನ್ನ ವೈಶಿಷ್ಟ್ಯವನ್ನು ತೋರುವ ಅವಕಾಶ ಹಾಗೂ ಸ್ವಾತಂತ್ರ್ಯ ಹೆಚ್ಚಾಗಿದೆ. ಖಯಾಲ್ ಪದ್ಧತಿಯಲ್ಲಿ ಸಾಹಿತ್ಯಾಂಶ ಬಹು ಕಡಿಮೆ. ಕೇವಲ ನಾದಕ್ಕೆ, ರಾಗ ವಿಸ್ತಾರದ ಮಾಧುರ್ಯಕ್ಕೆ, ಹೆಚ್ಚು ಪ್ರಾಮುಖ್ಯತೆ ಬಂದಿದೆ. 'ಖಯಾಲ್' ಜನಪ್ರಿಯವಾದರೂ 'ದ್ರುಪದ್' ಪದ್ಧತಿಯಲ್ಲಿ ಕಾಣುವ ಗಾಂಭೀರ್ಯವನ್ನು ಕಾಣುವುದು ಅಪೂರ್ವ. ದ್ರುಪದ್ ಪದ್ಧತಿ ಸಂಪ್ರದಾಯ ಶರಣರಾದ ಮುತ್ತೈದೆಯರಿಗೆ ಹೋಲಿಸಿದರೆ 'ಖಯಾಲ್' ಪದ್ಧತಿಯನ್ನು ಬೆಡಗು ಬಿನ್ನಾಣಗಳಿಂದ ಕೂಡಿದ ಆಧುನಿಕ ತರುಣಿಯರಿಗೆ ಹೋಲಿಸಿದರೆ ಅಸತ್ಯವಾಗಲಾರದು!

'ಟುಮ್ರಿ' ಪದ್ಧತಿ ನೃತ್ಯ ಸಂಗೀತದಿಂದ ಮೂಡಿದುದು. 'ಖಯಾಲ್' ಗಾಯನವು ಬೇರೆ ಬೇರೆ ರಸಗಳಿಗೆ ಪ್ರೇರಕವಾಗಬಹುದು. ಆದರೆ ಟುಮ್ರಿಯಲ್ಲಿ ಶೃಂಗಾರವೇ ಪ್ರಧಾನ.

ಇಲ್ಲಿ ಸಂಚಾರಿ ಭಾವಗಳೇ ಹೆಚ್ಚು. 'ಖಯಾಲ್' ಗಾಯನವನ್ನು ಅಜಂತದ ವರ್ಣ ಚಿತ್ರಗಳಿಗೂ 'ಟುಮ್ರಿ' ಗಾಯನವನ್ನು ಮೊಗಲ್ ವಾಸ್ತುಶಿಲ್ಪದಲ್ಲಿ ಬಳಸುವ ಸೂಕ್ಷ್ಮ ಕೆತ್ತನೆಯ ಕೆಲಸಗಳಿಗೂ ಹೋಲಿಸಬಹುದು.

'ದಾದ್ರ' ಪದ್ಧತಿ 'ಟುಮ್ರಿ'ಯಂತೆಯೆ ಇರುತ್ತದೆ. ದಾದ್ರ ತಾಳದಲ್ಲಿಯೇ ಈ ಗೀತ ಗಳನ್ನು ಹಾಡುವುದರಿಂದ ದಾದ್ರ ಎಂಬ ಹೆಸರು ಬಂದಿದೆ.

'ಟಪ್ಪ' ಪದ್ಧತಿ ಪಂಜಾಬಿನ ಒಂಟೆ ನಡೆಸುವವರ ಹಾಡುಗಳಿಂದ ಮೂಡಿತು. ಸಾಮಾನ್ಯವಾಗಿ ಈ ಗೀತಗಳು ಪಂಜಾಬಿನ ಪುರಾಣಕತೆಯಲ್ಲಿ ಬರುವ ಹೀರ್ ಮತ್ತು ರಂಜ ಎಂಬ ಪ್ರಿಯ ಪ್ರೇಯಸಿಯರನ್ನು ಸ್ಮರಿಸುತ್ತದೆ. ಪಂಜಾಬಿ ಭಾಷೆಯಲ್ಲಿರುವ ಈ ಗೀತಗಳನ್ನು ಷೋರಿಮಿಯಾನ್ ಅವರು ಕ್ರಿ. ಶ. ೧೮೧೦ ರಲ್ಲಿ ಪ್ರಕಟಿಸಿದರು. ಬಂಗಾಳದಲ್ಲಿ ಕೆಲವು ಕಾಲ ಈ ಪದ್ಧತಿ ಪ್ರಿಯವಾಗಿತ್ತು. ಈಚೆಗೆ ಈ 'ಟಪ್ಪ' ಪದ್ಧತಿಯ ಗೀತಗಳನ್ನು ಹಾಡುವವರು ಕಡಿಮೆಯಾಗಿದ್ದಾರೆ.

'ತರಾನಾ' ಪದ್ಧತಿಯಲ್ಲಿ ಸಾಹಿತ್ಯವಿಲ್ಲ. 'ನೋಮ್ ನೋಮ್' ಮೊದಲಾದ ಧ್ವನಿಗಳಿಂದ ತಾಳಬದ್ಧವಾಗಿ ರಾಗಾಲಾಪನೆ ಮಾಡುವ ವಿಧಾನವಿದು. ತಾನಗತಿಗಳನ್ನು ತಿಳಿಯಲು ವಿದ್ಯಾರ್ಥಿ ಗಳಿಗೆ ಉಪಯುಕ್ತವಾದ ಸಾಧನವಿದು. 'ತಿರ್‌ವತ್' ಪದ್ಧತಿಯೂ ಕೂಡ ನಿರ್ಗೀತಸಂಗೀತ.

'ರಾಗಮಾಲಿಕೆ'ಯ ಪದ್ಧತಿಯಲ್ಲಿ ಒಂದು ಗೀತೆಯನ್ನು ಬೇರೆ ಬೇರೆ ರಾಗಗಳಲ್ಲಿ ಹಾಡುತ್ತಾರೆ. ರಾಗಮಾಲಿಕೆಯನ್ನು ಒಂದೇ ತಾಳದಲ್ಲಿ ಹಾಡಬಹುದು ಅಥವಾ ರಾಗ ವ್ಯತ್ಯಾಸ ಮಾಡಿಕೊಂಡಂತೆ ತಾಳವನ್ನೂ ವ್ಯತ್ಯಾಸ ಮಾಡಿಕೊಂಡು ಹಾಡಬಹುದು.

ಹಿಂದೂಸ್ಥಾನಿ ಸಂಗೀತಗಾರರು ಸಾಧಾರಣವಾಗಿ ಬಳಸುವ ತಾಳಗಳೆಂದರೆ ದಾದ್‌ರಾ, ತೀವ್ರಾ, ರೂಪಕ್, ಕಹ್‌ರವಾ, ಝುಪ್‌ತಾಲ್, ಸೂಲ್‌ತಾಲ್, ಚೌತಾಲ್, ಏಕ್‌ತಾಲ್. ಅಡಾಚೌತಾಲ್, ಝೂಪ್‌ರಾ, ಧಮಾರ್, ದೀಪ್‌ಚಂದೀ, ಚಾಂಚರ್, ತಿಲ್‌ವಾಡಾ, ಮತ್ತು ತ್ರಿತಾಲ್. ರಾಗಜ್ಞಾನವಿರುವಂತೆ ಸಂಗೀತಜ್ಞರಿಗೆ ತಾಳಜ್ಞಾನವೂ ಅತ್ಯಂತ ಆವಶ್ಯಕ. ಇಲ್ಲಿ ತಾಳಗಳ ಸ್ವರೂಪಗಳನ್ನು ತಿಳಿಸುವುದು ಸಾಧ್ಯವಿಲ್ಲ. ಅವುಗಳ ಪಟ್ಟಿಯನ್ನು ಮಾತ್ರ ಕೊಟ್ಟಿದೆ.

**ತಾಳಗಳು—ಮಾತ್ರೆಗಳು**

| | ತಾಳಗಳು | ಮಾತ್ರೆಗಳು |
|---|---|---|
| ೧ | ತಾಲ್ ದಾದ್‌ರಾ | ೬ |
| ೨ | ತಾಲ್ ತೀವ್ರಾ | ೭ |
| ೩ | ತಾಲ್ ರೂಪಕ್ | ೭ |
| ೪ | ತಾಲ್ ಕಹ್‌ರವಾ | ೮ |
| ೫ | ಝುಪ್ ತಾಲ್ | ೧೦ |
| ೬ | ಸೂಲ್ ತಾಲ್ | ೧೦ |
| ೭ | ಚೌ ತಾಲ್ | ೧೨ |
| ೮ | ಏಕ್ ತಾಲ್ | ೧೨ |
| ೯ | ಅಡಾ ಚೌ ತಾಲ್ | ೧೪ |
| ೧೦ | ತಾಲ್ ಝೂಪ್‌ರಾ | ೧೪ |
| ೧೧ | ತಾಲ್ ಧಮಾರ್ | ೧೪ |
| ೧೨ | ತಾಲ್ ದೀಪ್‌ಚಂದೀ | ೧೪ |
| ೧೩ | ತಾಲ್ ಚಾಂಚರ್ | ೧೪ |
| ೧೪ | ತಾಲ್ ತಿಲ್‌ವಾಡಾ | ೧೬ |
| ೧೫ | ತ್ರಿತಾಲ್ | ೧೬ |

ಭಾರತದಲ್ಲಿ ಗಾನಕಲೆ ಬೆಳೆದಂತೆ ವಾದ್ಯಗಳೂ ಬೆಳೆದುವು. ಪ್ರಾಚೀನ ಭಾರತೀಯ ಸಂಗೀತ ಶಾಸ್ತ್ರಜ್ಞರು ವಾದ್ಯಗಳನ್ನು ತತ, ಬಿತತ, ಸುಷಿರ, ಆನದ್ಧ ಮತ್ತು ಘನ ಎಂದು ಐದು ರೀತಿಯಾಗಿ ವಿಂಗಡಿಸಿದ್ದಾರೆ. ಬೆರಳಿನ ಉಗುರುಗಳಿಂದಲೂ ಮಿಸ್ರಾಬ್ ಮೊದಲಾದುವುಗಳಿಂದಲೂ ತಂತಿಯನ್ನು ಮಿಡಿದು ಬಾರಿಸುವ ವಾದ್ಯಗಳಿಗೆ 'ತತ'ವೆಂದೂ ತಂತಿಯಮೇಲೆ ಕಮಾನನ್ನು ಎಳೆದು ಬಾರಿಸುವ ವಾದ್ಯಗಳಿಗೆ 'ಬಿತತ'ವೆಂದೂ ಉಸಿರಿನಿಂದ ಊದಿ ಬಾರಿಸುವ ವಾದ್ಯಗಳಿಗೆ 'ಸುಷಿರ'ವೆಂದೂ ಚರ್ಮವಾದ್ಯಗಳಿಗೆ ಆನದ್ಧವೆಂದೂ ಲೋಹವಾದ್ಯಗಳಿಗೆ ಘನವೆಂದೂ ಹೆಸರು.




ವೇದಗಳ ಕಾಲದಿಂದಲೂ ವೀಣೆ ಭರತಖಂಡದಲ್ಲಿ ಪ್ರಚಾರದಲ್ಲಿದೆ. ರಾಮಾಯಣದಲ್ಲಿ ವೀಣಾ, ವಿಪಂಚಿ, ವಲ್ಲಕೀ ಎಂಬ ವೀಣೆಗಳ ಉಲ್ಲೇಖವಿದೆ. 'ಮಹತಿ ವೀಣೆ' ಎರಡು ಸೋರೆಬುರುಡೆಗಳ ಆಶ್ರಯ ಪಡೆದಿರುತ್ತದೆ. ಬಾರಿಸಲು ನಾಲ್ಕು ತಂತಿಗಳಿರುತ್ತವೆ. ಮನೆಗಳು ಇಪ್ಪತ್ತೆರಡು ಅಥವಾ ಇಪ್ಪತ್ತನಾಲ್ಕು. ಈ ವಾದ್ಯವನ್ನು ಹಿಂದೂಸ್ಥಾನಿ ಸಂಗೀತಜ್ಞರು 'ಬೀನ್' ಎಂದು ಕರೆಯುತ್ತಾರೆ. ಈ ವೀಣೆಯ ರೂಪಾಂತರವೇ ದಕ್ಷಿಣ ಭಾರತದಲ್ಲಿರುವ 'ಸರಸ್ವತೀ ವೀಣೆ.' ರುದ್ರವೀಣೆ, ಮಹತಿ ವೀಣೆಯಂತೆಯೆ ಇರುತ್ತದೆ, ಆದರೆ ಮನೆಗಳು ಹದಿನಾರು. ವೀಣೆಯ ಮತ್ತೊಂದು ರೂಪಾಂತರ ರಬಬ್. ಇದರ ತಂತಿಗಳು ಉಕ್ಕಿನವಲ್ಲ, ಬೆಕ್ಕಿನ ನರಗಳದ್ದು. ಸರೋಡ್ ವಾದ್ಯದಲ್ಲಿ ತಂತಿಗಳ ಕೆಳಗಡೆ ಲೋಹದ ಕವಚವಿರುವುದರಿಂದ ಬಾರಿಸಿದ ಲೋಹದ ಗಂಭೀರ ನಾದ ಬರುತ್ತದೆ. ಈ ವಾದ್ಯದಿಂದ ಹೊಮ್ಮುವುದು ಗಂಡುಧ್ವನಿ. 'ಸಿತಾರ್' ವೀಣೆಯ ರೂಪಾಂತರ. ವೇಗಕ್ಕೂ ನಾದ ಸೌಂದರ್ಯಕ್ಕೂ ಈ ವಾದ್ಯದಲ್ಲಿ ಹೆಚ್ಚಿನ ಅನುಕೂಲವಿದೆ. ಸಿತಾರಿನ ಮೇಲೆ ಏಳು ತಂತಿಗಳೂ ಕೆಳಗಡೆ ನಾದತರಂಗ ಅನುರಣಿತವಾಗಲು ಹನ್ನೊಂದು ಅಥವಾ ಹನ್ನೆರಡು ತಂತಿಗಳಿರುತ್ತವೆ. 'ಸುರ್‌ಬೀನ್' ಗೋಟುವಾದ್ಯದಂತೆ ಮನೆಗಳಿಲ್ಲದ ವಾದ್ಯ. 'ರಬಬ್'ನ ರೂಪಾಂತರವೆ 'ಸುರಸಿಂಗಾರ್.' ಈ ವಾದ್ಯದಲ್ಲಿ ಲೋಹದ ತಂತಿಗಳನ್ನು ಬಳಸುವುದರಿಂದ ತುಂಬುಧ್ವನಿ ಬರುತ್ತದೆ. 'ತಂಬೂರಿ' ಕೇವಲ ಶ್ರುತಿಗಾಗಿ ಉಪಯೋಗಿಸುವ ವಾದ್ಯ.

'ಸಾರಂಗಿ' ವಾದ್ಯವು ಹಿಂದುಸ್ಥಾನಿ ಗಾಯಕರಿಗೆ ಉತ್ತಮ ಪಕ್ಕವಾದ್ಯವಾಗಿದೆ. ಸಾರಂಗಿಯ ಮೇಲೆ ಮೂರು ಬೆಕ್ಕಿನ ನರಗಳ ತಂತಿಗಳೂ ಒಂದು ಹಿತ್ತಾಳೆಯ ತಂತಿಯೂ ಕೆಳಗಡೆ ನಾದತರಂಗಗಳನ್ನು ಅನುರಣನ ಮಾಡಲು ಹದಿನೆಂಟರವರೆಗೆ ತಂತಿಗಳು ಇರುತ್ತವೆ.

ಮನೆಗಳಿಲ್ಲದ ಈ ವಾದ್ಯವನ್ನು ಕಮಾನಿನಿಂದ ಬಾರಿಸುತ್ತಾರೆ. 'ಎಸ್‌ರಾಜ್' ಮತ್ತು 'ದಿಲ್‌ರುಬಾ' ಸಾರಂಗಿ ವಾದ್ಯದ ರೂಪಾಂತರಗಳು. ಈ ವಾದ್ಯಗಳಲ್ಲಿ ಮನೆಗಳಿರುತ್ತವೆ. ವಾದ್ಯಗಳನ್ನು ಕಮಾನಿನಿಂದಲೆ ಬಾರಿಸಬೇಕು.

'ನಾದಸ್ವರ,' 'ಷೆಹನಾಯ್' ಎರಡೂ ಒಂದೇ ಜಾತಿಗೆ ಸೇರಿದುವು. ನಾದಸ್ವರಕ್ಕಿಂತ ಷೆಹನಾಯ್ ಆಕಾರದಲ್ಲಿ ಚಿಕ್ಕದು. ನಾದಸ್ವರದಲ್ಲಿ ಬಾರಿಸಲು ಹನ್ನೆರಡು ರಂಧ್ರಗಳೂ ಷೆಹನಾಯ್ ವಾದ್ಯದಲ್ಲಿ ಏಳು ರಂದ್ರಗಳೂ ಇರುತ್ತವೆ. ನಾದಸ್ವರದ ನಾದವನ್ನು ಬಹುದೂರದ ವರೆಗೆ ಕೇಳಬಹುದು. ಷೆಹನಾಯ್ ವಾದ್ಯ ಚಿಕ್ಕದಾದುದರಿಂದ ಅದರ ಧ್ವನಿಯನ್ನು ಮಿತವಲಯ ದಲ್ಲಿ ಕೇಳಬಹುದು. ಬನ್ಸಾರಿ ಅಥವಾ ಕೊಳಲು ಭಾರತದ ಬಹು ಪ್ರಾಚೀನವಾದ ವಾದ್ಯ. ಇದು ಶ್ರೀ ಕೃಷ್ಣನಿಗೆ ಪ್ರಿಯವಾದ್ಯವಾಗಿತ್ತೆಂಬ ಭಾವನೆ ಭಾರತೀಯರಲ್ಲಿ ನೆಲಸಿದೆ.

'ಪಕಾವಾಜ್' ಅಥವಾ 'ಮೃದಂಗ' ಭಾರತದಲ್ಲಿ ಬಹು ಹಿಂದಿನ ಕಾಲದಿಂದಲೂ ಪ್ರಯೋಗದಲ್ಲಿರುವ ವಾದ್ಯ. ಅಮಿರ್ ಖುಸ್ರು ಎಂಬ ಸಂಗೀತಜ್ಞನು 'ಪಕಾವಾಜ್' ಚರ್ಮವಾದ್ಯವನ್ನು ರೂಪಾಂತರಗೊಳಿಸಿ ತಬಲವನ್ನು ರೂಢಿಗೆ ತಂದನು. ಈಗ ಹಿಂದೂಸ್ಥಾನಿ ಸಂಗೀತಕ್ಕೆ ಪಕ್ಕವಾದ್ಯವಾಗಿ ತಬಲವನ್ನೆ ಬಳಸುವುದು ಹೆಚ್ಚು. ತಬಲ ಬಾರಿಸುವುದರಲ್ಲಿ ಲಕ್ನೋ ಶಾಖೆ, ಬನಾರಸ್ ಶಾಖೆ, ಪಂಜಾಬಿ ಶಾಖೆ ಎಂದು ಬೇರೆ ಬೇರೆ ಶಾಖೆಗಳಾಗಿವೆ.

ಹಿಂದೂಸ್ಥಾನಿ ಸಂಗೀತದಲ್ಲಿ ಭಾರತದ ಶುದ್ಧ ಸಂಗೀತ ಪದ್ಧತಿಯೊಡನೆ ಮುಸ್ಲಿಂ ಮತ್ತು ಪರ್ಷಿಯನ್ ಸಂಗೀತದ ಉತ್ತಮಾಂಶಗಳು ಸೇರಿಹೋಗಿವೆ. ಈಚೆಗೆ ಸ್ವಾತಂತ್ರ್ಯವು ಸ್ವಚ್ಛಂದ ವಾಗದಂತೆ ನೋಡಿಕೊಳ್ಳುವ ಎಚ್ಚರಿಕೆ ಹಿಂದೂಸ್ಥಾನಿ ಸಂಗೀತಜ್ಞರಲ್ಲಿ ಮೂಡಿದೆ. ಭಾರತದಲ್ಲಿ ಹಿಂದೂಸ್ಥಾನಿ ಸಂಗೀತ ಮತ್ತು ಕರ್ಣಾಟಕ ಸಂಗೀತ ಎಂಬ ಎರಡು ಶಾಖೆಗಳಿದ್ದರೂ ಇವೆರಡಕ್ಕೂ ಮೂಲಸ್ರೋತ ಒಂದೇ. ಇಂದು ಹಿಂದೂಸ್ಥಾನಿ ಸಂಗೀತದಲ್ಲಿ ಶ್ರುತಿ ಹಾಗೂ ಮಾಧುರ್ಯಕ್ಕೆ ಹೆಚ್ಚಿನ ಪ್ರಾಧಾನ್ಯತೆ. ಕರ್ಣಾಟಕ ಸಂಗೀತದಲ್ಲಿ ತಾಳಲಯ ಹಾಗೂ ಬುದ್ಧಿಯ ವಿಲಾಸಕ್ಕೆ ಹೆಚ್ಚಿನ ಪ್ರಾಮುಖ್ಯತೆ. ಸಹೃದಯರು ಈ ಎರಡು ರೀತಿಯ ಸಂಗೀತ ಪ್ರಕಾರಗಳಿಂದ ಅನುಪಮವಾದ ಆನಂದವನ್ನು ಪಡೆಯಬಹುದು. ನಾದೋಪಾಸನೆಯಿಂದ ಆತ್ಮಸಾಕ್ಷಾತ್ಕಾರವನ್ನು ಪಡೆಯಬಹುದೆಂಬ ಭಾರತೀಯರ ಭಾವನೆ ಸಂಗೀತ ಪ್ರಿಯರಿಗೆ ಸತ್ಯ ವಾಗಿ ಕಾಣುತ್ತದೆ.

**ಉ. ಕಾ. ಸುಬ್ಬರಾಯಾಚಾರ್**

## ಸಹಾಯಕ ಗ್ರಂಥಗಳು


1. **ಗಾನಕಲೆ**–ರಾ. ಅನಂತಕೃಷ್ಣಶರ್ಮ
2. *Sangīta Sārasangraha*—Ed. Swami Prajnanada
3. *The History of Indian Music*—O. Gosvami
4. *The Music of India*—Shripada Bandyopadhyaya
5. *Ragas and Raginis*—O. C. Gangoly
6. *Sangīta Makaranda*—Ed. Mangesh Ramakrishna Telang

# ೧೯ನೆಯ ಶತಕದಲ್ಲಿ ಕನ್ನಡ ಸಾಹಿತ್ಯಕ್ಕಾಗಿ ಕ್ರೈಸ್ತರ ಕಾರ್ಯ

"ಹಿಂದೂಸ್ಥಾನದಲ್ಲಿ ಬ್ರಿಟಿಷರ ಆಡಳಿತೆಯ ಪ್ರಭಾವದಿಂದ, ಯುರೋಪ ನಾಗರಿಕತೆಯನ್ನು ತಿಳಿದುಕೊಂಡದ್ದರಿಂದ, ಸಂಶೋಧನೆಯ ಪಾಶ್ಚಿಮಾತ್ಯ ರೀತಿಗಳು ಮತ್ತೂ ಪಾಂಡಿತ್ಯದ ಆದರ್ಶಗಳು ಇಲ್ಲಿ ಆರಂಭವಾದುದರಿಂದ ೧೯ ನೇ ಶತಮಾನದ ಆದಿಯಲ್ಲಿ ಕನ್ನಡ ಸಾಹಿತ್ಯದಲ್ಲಿ ಹೊಸ ಯುಗವೇ ಆರಂಭವಾಗಿದೆ"[1]ಯೆಂದು ರೆವೆರೆಂಡ್ ಇ. ಪಿ. ರಾಯಿಸ್ ಅವರು ತಮ್ಮ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹೇಳಿದ್ದಾರೆ. ಈ ಹೊಸ ಯುಗದಲ್ಲಿ ಬೆಳಕು ಕಂಡವರು ಮತ್ತು ಬೆಳಕು ತೋರಿಸಿದವರು ಕ್ರಿಶ್ಚನ್ ಮಿಶನರಿಗಳೇ ಎಂದು ಧಾರಾಳವಾಗಿ ಹೇಳಬಹುದು. ೨೦ ನೇ ಶತಮಾನದ ಹೊಸಗನ್ನಡ ಸಾಹಿತ್ಯ ನಿರ್ಮಾಣಕ್ಕೆ ಅಡಿಗಲ್ಲನ್ನು ಇಟ್ಟವರು ಮಿಶನರಿಗಳೇ. ಕರ್ನಾಟಕದಲ್ಲಿ ಅಂಧಕಾರವಿರುವಾಗ, ಕನ್ನಡಿಗರ ಭಾಷಾಭಿಮಾನ ಕುಗ್ಗುತ್ತಿರುವಾಗ ಕನ್ನಡ ಜನತೆಯಲ್ಲಿ ಭಾಷೆಯ ಹಿಗ್ಗಿನ ಸೆಲೆಯನ್ನು ಹರಿಯಿಸಲು ಮಿಶನರಿಗಳು ಪ್ರಯತ್ನಿಸಿದ್ದಾರೆ. "ಕನ್ನಡವೆಂದರೆ ಕೈಬಿಡುವದೇ ಸಿದ್ಧವಾಗಿದ್ದ ಆಗಲಾದರೂ ಇವರ ಭರವಸೆ, ಸಾಹಸ, ಸಾಧನೆಗಳು ಎಷ್ಟು?" ಎಂದು ಮಿಶನರಿಗಳ ಕಾರ್ಯವನ್ನು ಕುರಿತು ಶ್ರೀ ಎಮ್. ಎನ್. ಕಾಮತ್ ಅವರು "ಪಂಚಕಜ್ಜಾಯ" ಪತ್ರಿಕೆಯ ತಮ್ಮ ಲೇಖನದಲ್ಲಿ ಉದ್ಗಾರ ತೆಗೆದಿದ್ದಾರೆ.[2]

ಮಿಶನರಿಗಳು ಹಿಂದುಸ್ಥಾನಕ್ಕೆ ಬಂದದ್ದು ಕ್ರಿಶ್ಚನ್ ಧರ್ಮದ ಪ್ರಸಾರಕ್ಕಾಗಿಯೇ ೧೬ ನೇ ಶತಮಾನದಿಂದಲೇ ರೋಮನ್ ಕ್ಯಾಥೊಲಿಕ್ ಮಿಶನರಿಗಳು ತಮ್ಮ ಧರ್ಮದ ಪ್ರಚಾರ ಕಾರ್ಯವನ್ನು ಹಿಂದುಸ್ಥಾನದಲ್ಲಿ ಆರಂಭಿಸಿರುವರು. ಪ್ರೆಸ್‌ಬಿಟೇರಿಯನ್, ವೆಸ್ಲಿಯನ್, ಮೆಥಾಡಿಸ್ಟ, ಬಾಪ್ಟಿಸ್ಟ, ಬಾಸೆಲ್, ಮುಂತಾದ ಅನೇಕ ಮಿಶನರಿ ಸಂಸ್ಥೆಗಳು ಹಿಂದುಸ್ಥಾನದಲ್ಲಿ ನೆಲೆಯೂರಿ, ಕ್ರೈಸ್ತ ಧರ್ಮದ ಪ್ರಚಾರಕಾರ್ಯವನ್ನು ಕೈಕೊಂಡಿವೆ. ಈ ಮಿಶನರಿಗಳು ಧರ್ಮಾಸಕ್ತರಾದರೂ, ನಮ್ಮ ಜನಜೀವನದಲ್ಲಿ ಒಂದಾಗಿ, ನಮ್ಮ ಭಾಷೆ, ಮತ್ತೂ ಸಂಸ್ಕೃತಿಗಳನ್ನು ಆಳವಾಗಿ ಅಭ್ಯಾಸ ಮಾಡಿರುವರು.

೧೯ ನೇ ಶತಮಾನದ ಆದಿಭಾಗದಲ್ಲಿ ಕನ್ನಡದಲ್ಲಿ ಮೊದಲಿಗೆ ಕೆಲಸಮಾಡಿದವರು ವಿಲಿಯಮ್ ಕೇರಿಯವರು ; ವಿಲಿಯಮ್ ಕೇರಿಯವರು, ಇಂಗ್ಲಂಡದಿಂದ ೧೧ ನೇ ನವಂಬರ ೧೭೯೩ ರಲ್ಲಿ ಹಿಂದುಸ್ಥಾನಕ್ಕೆ ಬಂದು ಕಲಕತ್ತೆಯಲ್ಲಿ ನೆಲೆಸಿದರು. ಇವರು ಕೆಲವು ವರುಷಗಳಲ್ಲಿಯೇ ಸಂಸ್ಕೃತ, ಬಂಗಾಲಿ, ಮರಾಠಿ, ಭಾಷೆಗಳಲ್ಲಿ ಅಪಾರ ಪಾಂಡಿತ್ಯ ಪಡೆದರು. ಬಾಯಿಬಲ್‌ದ "ನ್ಯೂ ಟೆಸ್ಟಾಮೆಂಟ"ನ್ನು ಇವರು ಮಾರ್ಶಮನ್ ಮತ್ತೂ ವಾರ್ಡ್ ಇವರನ್ನು ಕೂಡಿಕೊಂಡು ಮೊದಲಸಲ ಕನ್ನಡದಲ್ಲಿ ೧೮೦೯ ರಲ್ಲಿ ಭಾಷಾಂತರಿಸಿದರು. ೧೮೧೨ ರಲ್ಲಿ ಇದು ಅಚ್ಚಾಗುವದಿತ್ತು. ಆದರೆ ಛಾಪಖಾನೆಯಲ್ಲಿ ಒಮ್ಮೆಲೇ ಬೆಂಕಿ ಎದ್ದು ಈ ಕನ್ನಡ ಬಾಯಿಬಲ್‌ದ ಕೈಬರಹ ಪತ್ರಿಕೆ ದುರ್ದೈವದಿಂದ ಸುಟ್ಟುಹೋಯಿತೆಂದು[3] ಚನ್ನಪ್ಪ ಉತ್ತಂಗಿಯವರು ಬರೆಯುತ್ತಾರೆ. ಇಲ್ಲವಾದರ ಕನ್ನಡದಲ್ಲಿ ಅಚ್ಚಾಗಿ ದೊರೆಯುವ ಮೊದಲನೇ ಗ್ರಂಥ ಇದೇ

---

[1] Kanarese Literature by E. P. Rice, Page 99.

[2] ಪಂಚಕಜ್ಜಾಯ (೧೩ ನೇ ಕನ್ನಡ ಸಾಹಿತ್ಯ ಸಮ್ಮೇಲನ ಸಂಚಿಕೆ, ಮಂಗಳೂರು), ಪುಟ ೧೬೭.

[3] Karnatak Darshan, page 379.

ಆಗುತ್ತಿದ್ದಿತೋ ಏನೋ ? ವಿಲಿಯಮ್ ಕೇರಿಯವರು ಕನ್ನಡ ವ್ಯಾಕರಣವನ್ನು ಬರೆದಿರುವದಾಗಿ ಕವಿಚರಿತೆಕಾರರು ತಿಳಿಸುತ್ತಾರೆ.[4]

೧೯ ನೇ ಶತಮಾನದ ಆರಂಭಕಾಲಕ್ಕೆ ಬಳ್ಳಾರಿ, ಮತ್ತೂ ಮದ್ರಾಸ ಪಟ್ಟಣಗಳು ಮಿಶನರಿಗಳ ಸಾಹಿತ್ಯಕ್ಷೇತ್ರಕ್ಕೆ ಕೇಂದ್ರಸ್ಥಾನಗಳಾಗಿದ್ದವು. ಜಾನ್ ಮ್ಯಾಕರಲ್, ರೆ. ಡಬ್ಲ್ಯು. ರೀವ್, ರೆ. ಜಾನ್‌ಹಾಂಡ್ಸ್ ಮುಂತಾದವರು ಈ ಕಾಲದಲ್ಲಿ ಅತ್ಯಂತ ಮಹತ್ವದ ಕೆಲಸ ಮಾಡಿದ್ದಾರೆ.

ಸಧ್ಯ ನೋಡಲು ಅಚ್ಚಾದ ಮೊದಲನೇ ಗ್ರಂಥವೆಂದರೆ ಜಾನ್ ಮ್ಯಾಕರಲ್ ಅವರು ಬರೆದ ಕನ್ನಡ ಭಾಷೆಯ ವ್ಯಾಕರಣವು (A Grammar of the Carnataca Language). ಇದು ೨೧೧ ಪುಟಗಳ ಗ್ರಂಥವಿದ್ದು, ೧೬ ನೇ ನವ್ಹಂಬರ ೧೮೨೦ ರಲ್ಲಿ ಪ್ರಕಟವಾಗಿದೆ. ಕರ್ನಾಟಕದ ಗ್ರಂಥಾಲಯಗಳಲ್ಲಿ ಈ ಪುಸ್ತಕವು ನೋಡಲು ಸಿಗದಿದ್ದರೂ, ನ್ಯೂಯಾರ್ಕ ಪಬ್ಲಿಕ್ ಲೈಬ್ರರಿಯಲ್ಲಿ ಈ ಗ್ರಂಥದ ೨ ಪ್ರತಿಗಳಿವೆ. ಕರ್ನಾಟಕ ವಿಶ್ವವಿದ್ಯಾಲಯದ ಭಾಂಡಾರಿಗರಾದ ಶ್ರೀ ದೇಶಪಾಂಡೆಯವರು ತಮ್ಮ ಅಮೇರಿಕೆಯ ಪ್ರವಾಸದಲ್ಲಿ ಈ ಪುಸ್ತಕವನ್ನು ಕಂಡು ಹಿಡಿದು ಅದರ ಮುನ್ನುಡಿಯನ್ನು ಪ್ರಿಂಟಮಾಡಿಸಿ ತರಿಸಿದ್ದಾರೆ. ಈ ಪುಸ್ತಕವು ಇಂಗ್ಲೀಷಿನಲ್ಲಿದ್ದು ನಡುನಡುವೆ ಅವತರಣಿಕೆಗಳನ್ನು ಕನ್ನಡದಲ್ಲಿ ಅಚ್ಚುಮಾಡಲಾಗಿದೆ. ಈ ಗ್ರಂಥದ ಮುನ್ನುಡಿಯಲ್ಲಿ ಕರ್ನಾಟಕದ ಮೇರೆಯನ್ನು ಬಹುಸುಂದರವಾಗಿ ಕೊಡಲಾಗಿದೆ. ಆಗ ಕರ್ನಾಟಕಕ್ಕೆ ಬ್ರಿಟಿಷರು ಕ್ಯಾನರಾ ಎಂದು ಕರೆಯುತ್ತಿದ್ದರು. ಕನ್ನಡ ಭಾಷೆಗೆ ಕರ್ನಾಟಕ ಎಂದೇ ಕರೆಯುವುದು ರೂಢಿ ಇತ್ತು. ಕರ್ನಾಟಕ ಭಾಷೆಯು ವಿಶ್ವಭಾಷೆ ಇದೆ ಎಂದೂ ಅದು ಉತ್ತಮ ಮಾಧ್ಯಮವಾಗಿದೆ ಎಂದೂ ಮ್ಯಾಕರಲ್ ಅವರು ಸಾರ್ವಭೌಮರಿಗೆ ಈ ಗ್ರಂಥವನ್ನು ಅರ್ಪಿಸುವಾಗ ಹೇಳುವ ಮಾತು ಅತ್ಯಂತ ಗಮನಿಸುವಂತಿದೆ.[5] ಶಂಭುಪತಿ ಮೀನಾಕ್ಷಯ್ಯಾ, ಶೇಡಂಬಿ ರಂಗಾಚಾರ್ಯರಿ, ಮಾಡಂಬಿ ಶ್ರೀನಿವಾಸಾಚಾರ್ಯರಿ ಇವರು ಮ್ಯಾಕರಲ್‌ರವರಿಗೆ ಕನ್ನಡ ವ್ಯಾಕರಣ ಬರೆಯಲು ಸಹಾಯಕರಾದರಂತೆ. ಇವರೆಲ್ಲ ಫೋರ್ಟ್‌ಸೇಂಟ್ ಜಾರ್ಜ ಕಾಲೇಜದಲ್ಲಿ ಕೆಲಸ ಮಾಡಿದವರು. ಮ್ಯಾಕರಲ್ ಅವರು ತಮ್ಮ ಮುನ್ನುಡಿಯಲ್ಲಿ ಫ್ರಾನ್ಸಿಸ್ ವಾಯಿಟ್ ಇಲೀಸ್, ವಿಲಿಯಮ್--ಓಲೀವ್ಹರ್, ಇವರ ಹೆಸರುಗಳನ್ನು ಸಹಾಯಕರಲ್ಲಿ ಕಾಣಿಸಿದ್ದಾರೆ. ಅಂದರೆ ಈ ಜನರಿಗೂ ಕನ್ನಡದಲ್ಲಿ ಆಸ್ಥೆ ಇತ್ತೆಂದು ತೋರುತ್ತದೆ.

ಬಳ್ಳಾರಿಯ ರೆವೆರೆಂಡ್ ವಿಲಿಯಮ್ ರೀವ್ ಅವರು ಇಂಗ್ಲೀಷ ಮತ್ತು ಕರ್ನಾಟಕ ಶಬ್ದಕೋಶವನ್ನು ಸಿದ್ಧಪಡಿಸಿ ೧೮೨೪ ರಲ್ಲಿ ಅಚ್ಚು ಹಾಕಿಸಿದ್ದಾರೆ. ಇದರಿಂದ ವಿದೇಶೀಯರಿಗೆ, ಕನ್ನಡದ ಅಭ್ಯಾಸಕ್ಕೆ ತುಂಬಾ ನೆರವು ದೊರೆಯಿತು. ಈ ಗ್ರಂಥದ ಮೊದಲು ಮಾತಿನಲ್ಲಿ ರೆವೆರೆಂಡ್ ರೀವ್ ಅವರು ಬರೆದ ವಿಚಾರಗಳು ಕರ್ನಾಟಕ ಅಭಿಮಾನದಿಂದ ತುಂಬಿಕೊಂಡಿವೆ.

"ಕರ್ನಾಟಕವನ್ನು (ಕನ್ನಡಭಾಷೆ) ಬಹಳ ದಿನಗಳಿಂದ ಅಯೋಗ್ಯವಾದ ಉದಾಸೀನತೆಯಿಂದ ಜನತೆ ನೋಡುತ್ತಿದೆ; ಇಂಗ್ಲಂಡ, ಆಯರ್ಲಂಡ, ಸ್ಕಾಟಲಂಡ ಈ ಮೂರು ದೇಶಗಳನ್ನು ಕೂಡಿಸಿದರೂ ದೊಡ್ಡದಾಗಿರುವ ವಿಶಾಲವಾದ ಪ್ರದೇಶದಲ್ಲಿ ಈ ಭಾಷೆಯು ಮಾತನಾಡಲ್ಪಡುತ್ತದೆ. ಅಂಥದಕ್ಕ ನಿಜವಾಗಿಯೂ ಕೊಡಬೇಕಾದಷ್ಟು ಲಕ್ಷ್ಯವನ್ನು ಜನತೆ ಇನ್ನೂ ಕೊಟ್ಟಿಲ್ಲ."[6]

೧೮೩೨ ರಲ್ಲಿ ರೆವ್ಹರೆಂಡ್ ವಿಲಿಯಮ್ ರೀವರವರು ಕರ್ನಾಟಕ ಇಂಗ್ಲೀಷ ಶಬ್ದಕೋಶವನ್ನು ಪ್ರಕಟಿಸಿರುವರು. ೧೮೧೭ ರಿಂದಲೇ ಅವರು ಈ ಕೆಲಸವನ್ನು ಆರಂಭಿಸಿದ್ದರು.

---

[4] ಕರ್ಣಾಟಕ ಕವಿಚರಿತೆ, Vol. iii, ಪುಟ ೨೪೦.

[5] A Grammar of the Carnataca Language, by Mekerrel, Dedication to the King.

[6] ವಿಲಿಯಮ್ ರೀವ್ ಅವರ ಇಂಗ್ಲೀಷ್—ಕರ್ನಾಟಕ ಶಬ್ದಕೋಶದ ಮುನ್ನುಡಿ.

ಹಳೆಯ ತಾಡವಾಲಿಯ ಗ್ರಂಥಗಳು ಸಿಗದಿರುವದು, ಪ್ರತಿಮಾಡುವವರು, ದೋಷಯುಕ್ತ ಪ್ರತಿಮಾಡಿರುವರು, ಭಾಷಾಶಾಸ್ತ್ರದ ಸರಿಯಾದ ಜ್ಞಾನವಿದ್ದವರು ನ್ಯಾಯನಿರ್ಣಯ ವೇತ್ತ್ರರು, ಸಾಹಿತ್ಯ ಸಂಶೋಧನೆಯಲ್ಲಿ ಆಸ್ಥೆ ಇದ್ದವರು ಇಂಥ ಯೋಗ್ಯ ಕನ್ನಡಿಗರು ಅಲಭ್ಯ ವಾಗಿರುವದು ಇವೆಲ್ಲವುಗಳು ಶಬ್ದಕೋಶವನ್ನು ಸಿದ್ಧಪಡಿಸುವಾಗ ಬಹಳ ಅಡಚಣೆಗಳನ್ನು ಒಡ್ಡಿದವೆಂದು[7] ರೆವರೆಂಡ್ ರೀವ್ ಅವರು ಹೇಳಿದ್ದಾರೆ. ರೀವ್ ಅವರಿಗೆ, ಕರ್ನಾಟಕದಲ್ಲಿ ಕನ್ನಡದ ಅಭ್ಯಾಸದ ಸಲುವಾಗಿ ಸಹಾಯಮಾಡುವ ಯೋಗ್ಯಪಂಡಿತರೇ ಸಿಗಲಿಲ್ಲವಂತೆ. ಫೋರ್ಟ್ ಸೇಂಟಜಾರ್ಜ್ ಕಾಲೇಜದಲ್ಲಿಯ ಕಾಯ್ದೆಯ ಅಭ್ಯಾಸಮಾಡುವ ವಿದ್ಯಾರ್ಥಿ ಕೃಷ್ಣಮಾಚಾರಿ ಇವರಿಗೆ ಕನ್ನಡದ ಪಾಂಡಿತ್ಯ ಬಹು ಚನ್ನಾಗಿತ್ತೆಂದೂ, ಅವರೇ ತಮ್ಮ ಶಬ್ದಕೋಶ ಕಾರ್ಯಕ್ಕೆ ನೆರವಾದರೆಂದೂ ರೀವ್ ಅವರು ಹೇಳಿದ್ದಾರೆ. ಈ ಕೃಷ್ಣಮಾಚಾರಿ ಮುಂದೆ ಒಂದು ಕನ್ನಡ ವ್ಯಾಕರಣವನ್ನು ಬರೆದು ಪ್ರಕಟಿಸಿದ್ದಾರೆ (೧೮೩೮) ಬಳ್ಳಾರಿ ಮತ್ತು ಬೆಂಗಳೂರುಗಳು ಮಿಲಿಟರಿ ಸ್ಥಾನಗಳಿರುವದರಿಂದ ಅಲ್ಲಿಯ ಕನ್ನಡ ಅಚ್ಚಗನ್ನಡವಿಲ್ಲೆಂದೂ ಹರಪನಹಳ್ಳಿ, ಸಗ್ಗೇರಿ ಗಳಲ್ಲಿ ಅಚ್ಚಗನ್ನಡ ಕಂಡುಬರುವದಾಗಿಯೂ ರೆ. ರೀವ್ ಅವರು ಅಭಿಪ್ರಾಯ ಪಟ್ಟಿದ್ದಾರೆ.

ಲಂಡನ್ ಮಿಶನರಿ ಸೊಸಾಯಿಟಿಯ ರೆ. **ಜಾನ್ ಹಾಂಡ್ಸ್** ಎಂಬವರು ೧೮೦೯ ರಲ್ಲಿ ಬಳ್ಳಾರಿಗೆ ಬಂದು ಒಂದು ವರುಷದಲ್ಲಿಯೇ ಕನ್ನಡ ಕಲಿತು ಕನ್ನಡ ವ್ಯಾಕರಣವನ್ನು ಬರೆದರು; ಸೇಂಟ ಲ್ಯೂಕ್‌ಸ್ ಗಾಸ್ಪೆಲನ್ನು ೧೮೨೮ ರಲ್ಲಿ ಕನ್ನಡದಲ್ಲಿ ಭಾಷಾಂತರಿಸಿದರು[8].

ಜಾನ್‌ವಾಕರು ಇದೇ ಕಾಲದಲ್ಲಿ ವಿಶೇಷ ಕೆಲಸಮಾಡಿದರೆಂದು ಕೃಷ್ಣಮಾಚಾರಿಯವರ ಹೊಸಗನ್ನಡ ವ್ಯಾಕರಣದಿಂದ ಕಂಡುಬರುತ್ತದೆ. "ಮಹಾರಾಜ **ಶ್ರೀ ಜಾನ್ ವಾಕರು** ದೊರೆಯವರು ಸಂಸ್ಕೃತ, ಕರ್ನಾಟಕ, ದ್ರಾವಿಡ, ಹಿಂದುಸ್ಥಾನಿ, ಈ ಮೊದಲಾದ ದೇಶ ಭಾಷೆ ಗಳಲ್ಲೆಲ್ಲ ಅತಿ ಶ್ರಮಪಟ್ಟಿರುವರಾಗಿಯೂ ಪರೋಪಕಾರಾರ್ಥವಾಗಿ ಈ ಭಾಷೆಗಳಲ್ಲಿ ಸ್ವದೇಹ ಆಯಾಸದಿಂದಲೂ ಅರ್ಥವ್ಯಯದಿಂದಲೂ ಅನೇಕ ಉಪಯುಕ್ತ ಗ್ರಂಥಗಳನ್ನು ಮಾಡಿಯೂ ಮಾಡಿಸಿಯೂ, ಮತ್ತೂ ಈ ಭಾಷೆಗಳಲ್ಲಿ ಉಪಯುಕ್ತವಾದ ಗ್ರಂಥಗಳನ್ನು ಹುಡುಕುವವ ರಾಗಿಯೂ, ಇರುವದರಿಂದ . . ."[9] ಮುಂತಾದ ಹೊಗಳಿಕೆಯ ಮಾತುಗಳನ್ನು ಕೃಷ್ಣಮಾಚಾರಿ ಜಾನ್‌ವಾಕರ ಬಗ್ಗೆ, ಬರೆದಿರುವರು.

೧೯ ನೆಯ ಶತಮಾನದ ಪೂರ್ವಾರ್ಧದಲ್ಲಿ ಮದ್ರಾಸದ ಫೋರ್ಟಸೇಂಟ ಜಾರ್ಜಕಾಲೇಜ ಕನ್ನಡ ಪಾಂಡಿತ್ಯ ಪ್ರಸಾರಕ್ಕೆ ಕೇಂದ್ರವಾಗಿತ್ತೆಂದು ಮೇಲಿನ ವಿವರಣೆಯಿಂದ ಕಂಡುಬರುತ್ತದೆ. ಅದರಂತೆ ಬಳ್ಳಾರಿಯಲ್ಲಿಯೂ ಚಟ್ಟುವಟ್ಟಿಕೆ ಸಾಗಿವೆ. ಮಿಶನರಿಗಳು ಒಂದು 'ಕಲ್ಲು ಛಾಪಿ'ಯನ್ನು ಬಳ್ಳಾರಿಯಲ್ಲಿ ಸ್ಥಾಪಿಸಿ. '**ಕನ್ನಡ ಸಮಾಚಾರ**' ಎಂಬ ಪತ್ರಿಕೆ ಪ್ರಸಿದ್ಧಿಸುತ್ತಿದ್ದರು. ಈ ಕಾಲ ದಲ್ಲಿಯ ಮ್ಯಾಕರಲ್‌ರ ವ್ಯಾಕರಣ, ರೀವ ಅವರ ಶಬ್ದಕೋಶ, ಹೊಸಗನ್ನಡ ಬೆಳವಣಿಗೆಗೆ ಅಡಿಗ ಲ್ಲಾಗಿ ಮಾರ್ಗದರ್ಶಕಗಳಾಗಿವೆ.

೧೮೩೪ ರಿಂದ ಮಂಗಳೂರಲ್ಲಿ ಬಾಸೆಲ್ ಮಿಶನ್ನುಗಳ ಕಾರ್ಯ ಆರಂಭವಾಗಿದೆ. ರೆವ್ಹ ರೆಂಡ್, ಎಫ್. ಕಿಟ್ಟೆಲ್, ರೆವ್ಹರೆಂಡ್, ಎಫ್. ಝೀಗ್ಲರ್, ರೆ. ಹರ್ಮನ್, ಮೋಗ್ಲಿಂಗ್, ರೆ. ದೀಗಲ್, ರೆ. ವರ್ಥ್, ರೆ. ಜೆಚರ್ ಮೊದಲಾದ ಮಹನೀಯರು ಕನ್ನಡದಲ್ಲಿ ಅದ್ಭುತವಾದ ಕಾರ್ಯವನ್ನು ಸಾಧಿಸಿದ್ದಾರೆ, ಇವರು ಮಂಗಳೂರಲ್ಲಿ ತಮ್ಮ ಕೇಂದ್ರವನ್ನು ಮಾಡಿಕೊಂಡರೂ ಉತ್ತರ ಕರ್ನಾಟಕದ, ಧಾರವಾಡ, ಹುಬ್ಬಳ್ಳಿ, ಗದಗ ಮುಂತಾದ ಸ್ಥಳಗಳಿಗೆ ಹೋಗಿ ತಮ್ಮ ಧರ್ಮ ಪ್ರಚಾರದ ಜೊತೆಗೆ ಕನ್ನಡದ ಜಾಗೃತಿಯನ್ನು ಮಾಡಿರುವರು. ಇವರಿಂದಲೇ ಉತ್ತರ ಕರ್ನಾಟಕ

---

[7] ವಿಲಿಯಮ್ ರೀವ್ ಅವರ ಕರ್ನಾಟಕ—ಇಂಗ್ಲೀಷ್ ಶಬ್ದಕೋಶದ ಮುನ್ನುಡಿ.

[8] Karnatak Darshan ದಲ್ಲಿ ಚನ್ನಪ್ಪ ಉತ್ತಂಗಿಯವರ ಲೇಖನ, ಪುಟ 379.

[9] ಹೊಸಗನ್ನಡ ವ್ಯಾಕರಣ, ಕೃಷ್ಣಮಾಚಾರ್ಯ, ಮುನ್ನುಡಿ, ಪುಟ vii

ದಲ್ಲಿ ಭಾಷಾಭಿಮಾನವು ಸಾವಧಾನವಾಗಿ ಬೆಳೆಯುತ್ತ ಹೋಯಿತು. ೧೮೩೪ ರಿಂದ ೧೯ ನೇ ಶತಮಾನದ ಕೊನೆಯವರೆಗೂ ಈ ಮಿಶನರಿಗಳು ವಿವಿಧ ರೀತಿಯಿಂದ, ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ದುಡಿದಿದ್ದಾರೆ.

ಈ ಸಂದರ್ಭದಲ್ಲಿ ಕನ್ನಡ ಛಾಪೆಯ ವಿಕಾಸದ ಬಗ್ಗೆ ಕೆಲವು ಮಾತು ಹೇಳುವದು ಅತ್ಯವಶ್ಯವಿದೆ. ೨೦ ನೇ ಶತಮಾನದ ಹೊಸಗನ್ನಡ ಸಾಹಿತ್ಯವು ತೀವ್ರಗತಿಯಿಂದ ಪ್ರಗತಿ ಹೊಂದಲು ಉತ್ತಮ ಅಚ್ಚುಖಾನೆಗಳೇ ಕಾರಣವೆಂಬುದನ್ನು ನಾವು ಮರೆಯಕೂಡದು. "ಛಾಪಿಸುವ ಈ ಉದಾತ್ತವಾದ ಕಲೆಯು ಭಾಷಣದ ತೀವ್ರಸ್ವರೂಪವೆನ್ನಬೇಕು" ಎಂದು ಕಾರ್ಲ್ಯನಲ್ಲೆ ಹೇಳಿದ್ದಾನೆ. ಸಾಹಿತ್ಯಕ್ಕೂ ಈ ಛಾಪಖಾನೆಗಳಿಗೂ ನಿಕಟಸಂಬಂಧವಿದೆ. ಬಳ್ಳಾರಿಯಲ್ಲಿ ಈ ಮೊದಲೇ ಒಂದು ಕಲ್ಲುಛಾಪೆ ಇದ್ದಿತು. ಮದ್ರಾಸದಲ್ಲಿಯೂ ಇದ್ದಿತು. ಮಂಗಳೂರಿನಲ್ಲಿಯೂ ಇಂಥದೊಂದು ಕಲ್ಲುಛಾಪೆ ಬಾಸೆಲ್ ಮಿಶನ್‌ದವರಿಂದ ಆರಂಭಿಸಲ್ಪಟ್ಟಿತು. ಮೊದಲು ಎಲ್ಲ ಕನ್ನಡ ಗ್ರಂಥಗಳೂ ಕಲ್ಲುಛಾಪೆಯಲ್ಲಿಯೇ ಅಚ್ಚಾಗುತ್ತಿದ್ದವು. ಜಿ. ಪ್ಲೆಬ್‌ಸ್ತ್ ಎಂಬ ಜರ್ಮನ್ ಮಿಶನರಿ ಮಂಗಳೂರಲ್ಲಿ ೧೮೫೨ ರಲ್ಲ ಪ್ರಥಮತಃ ಕನ್ನಡ ಅಕ್ಷರಗಳ ಮೊಳೆಗಳನ್ನು ಮಾಡಲು ಪ್ರಾರಂಭಿಸಿದರು. ೧೮೫೩ ರಲ್ಲಿ ಛಾಪಖಾನೆಯ ಮುದ್ರಾಯಂತ್ರ ಆರಂಭವಾಯಿತೆಂದು[10] ದಾಮೋದರ ಬಾಳಿಗಾ ಅವರು ಹೇಳಿದ್ದಾರೆ. "ಪ್ರಾಯಶಃ ಎಲ್ಲ ದೇಶಭಾಷೆಗಳಲ್ಲಿ ಮುದ್ರಣವು ಏರ್ಪಡುವ ಒತ್ತಾಸೆಯನ್ನು ಮಾಡಿಕೊಟ್ಟವರು ಕ್ರೈಸ್ತ ಮತ ಪ್ರಚಾರಕ್ಕಾಗಿ ಬಂದ ಮತಪ್ರವರ್ತಕರೇ ಎನ್ನಬೇಕು"[11] ಎಂದೂ ಶ್ರೀ ಬಾಳಿಗಾ ಅವರು ನುಡಿದಿದ್ದಾರೆ. ಮಿಷನರಿಗಳು ಮುದ್ರಣಯಂತ್ರವನ್ನು ಆರಂಭಿಸಿ ಮುದ್ರಣದ ಅನುಕೂಲತೆ ಮಾಡಿಕೊಟ್ಟದ್ದರಿಂದ ಅಲಭ್ಯವಿರುವ ಅಮೂಲ್ಯ ಹಳಗನ್ನಡ ಗ್ರಂಥಗಳು ಬೆಳಕಿಗೆ ಬಂದಿವೆ. ಕನ್ನಡ ಛಾಪೆಯ ವಿಕಾಸದ ಹಿನ್ನೆಲೆಯಲ್ಲಿ ನಾವು ೧೯ ನೇ ಶತಮಾನದ ಸಾಹಿತ್ಯವನ್ನು ಅಭ್ಯಸಿಸುವದು ವಿಹಿತವಿದೆ.

ಆಗಿನ ಕಾಲದಲ್ಲಿ ಈಸ್ಟ ಇಂಡಿಯಾ ಕಂಪನಿಯವರಿಗೆ ಮತ್ತೂ ಹಿಂದುಸ್ಥಾನಕ್ಕೆ ಬಂದ ವಿದೇಶೀಯರಿಗೆ ಭಾಷೆ ತಿಳಿದುಕೊಳ್ಳಲು ದೇಶಭಾಷೆಗಳ ವ್ಯಾಕರಣ ಮತ್ತೂ ಶಬ್ದಕೋಶ ಅತ್ಯವಶ್ಯವಾಗಿ ಬೇಕಾಗುತ್ತಿದ್ದವು. ಆದ್ದರಿಂದ ಈಸ್ಟ ಇಂಡಿಯಾ ಕಂಪನಿಯವರು ಮಿಶನರಿಗಳಿಗೆ ಯೋಗ್ಯ ಧನಸಹಾಯವನ್ನು ಕೊಟ್ಟು ಇಂಥ ಗ್ರಂಥಗಳನ್ನು ಅಚ್ಚು ಹಾಕಿಸುತ್ತಿದ್ದರು. ಹೀಗಾಗಿ ೧೯ ನೇ ಶತಮಾನದಲ್ಲಿ ವಿದೇಶೀಯರು ಬರೆದ ಅನೇಕ ಕನ್ನಡ ವ್ಯಾಕರಣಗಳನ್ನು ಮತ್ತೂ ಶಬ್ದಕೋಶಗಳನ್ನು ನಾವು ನೋಡುತ್ತೇವೆ. ಇಲ್ಲಿ ಅಂಥ ಗ್ರಂಥಗಳ ಹೆಸರುಗಳನ್ನು ಸ್ಮರಿಸಬಹುದು.

ರೆ. ಎಫ್. ಕಿಟೆಲ್‌ರ ಕನ್ನಡ–ಇಂಗ್ಲೀಷ್ ಶಬ್ದಕೋಶ (೧೮೯೪), ರೆ. ಎಫ್. ಝೀಗ್ಲರ್ (ರೆ. ಎಮ್. ವಾಲ್ಛ ಮತ್ತೂ ಕ್ರಿಸ್ತಾನುಜ ವತ್ಸರಿಂದ ಕೂಡಿಕೊಂಡು) ಅವರ ಇಂಗ್ಲಿಷ್ ಕನ್ನಡ ಶಬ್ದಕೋಶ (೧೮೭೬) ಮತ್ತು ಕನ್ನಡ—ಇಂಗ್ಲಿಷ್ ಶಾಲಾ ನಿಘಂಟು. ಜೆ. ಗ್ಯಾರೆಟ್ ರವರ ಇಂಗ್ಲೀಷ್—ಕನ್ನಡ ಶಬ್ದಕೋಶ (೧೮೬೮ ಕ್ಕಿಂತ ಮೊದಲು ಅಚ್ಚಾದದ್ದು), ಜೆ. ಚರ್ ರವರ ಶಾಲಾ ನಿಘಂಟು ಇವೆಲ್ಲವು ಆ ಕಾಲದಲ್ಲಿ ಪ್ರಚುರವಾಗಿದ್ದ ಶಬ್ದಕೋಶಗಳು. ರೆ. ಎಫ್. ಝೀಗ್ಲರ್, ರೆ ಎಫ್. ಕಿಟೆಲ್ ಅವರ ಶಬ್ದಕೋಶಗಳು ಅತ್ಯಂತ ಮಹತ್ವದ್ದಾಗಿವೆ. ರೆ. ಎಫ್. ಕಿಟೆಲ್‌ರ ಶಬ್ದಕೋಶ ಒಂದು ಕೃತಿರತ್ನವಾಗಿದೆ. ಕನ್ನಡಸಾಹಿತ್ಯದಲ್ಲಿಯೇ ಅದು ಒಂದು ದೀಪಸ್ತಂಭ; ಅಂಥ ಉತ್ತಮ ಕೃತಿಯನ್ನು ಪ್ರಕಟಿಸುವದು ಮಾತೃಭಾಷೆ ಇದ್ದ ಕನ್ನಡಿಗರಿಗೇ ಇನ್ನೂ ಶಕ್ಯವಾಗಿಲ್ಲ. "ಶಬ್ದಾರ್ಥ ಶಾಸ್ತ್ರವನ್ನು ಆಳವಾಗಿ ವ್ಯಾಸಂಗ ಮಾಡಿದ ಕಿಟೆಲ್ ರವರ ೨೨ ವರುಷಗಳ ಅವಿಶ್ರಾಂತ ಪರಿಶ್ರಮದ ಪ್ರತಿಫಲವಾಗಿ ಹುಟ್ಟಿದ ಈ ನಿಘಂಟಿ

---

[10] ತೆಂಕನಾಡು—ಮಂಗಳೂರಲ್ಲಿಯ ೩೧ ನೇ ಸಾಹಿತ್ಯ ಸಮ್ಮೇಲನದ ಪ್ರಕಟನೆ ಪುಟ, ೧೦೧.

[11] ತೆಂಕನಾಡು—ಮಂಗಳೂರಲ್ಲಿಯ ೩೧ ನೇ ಸಾಹಿತ್ಯ ಸಮ್ಮೇಲನದ ಪ್ರಕಟನೆ ಪುಟ, ೨೧೦.

ನಷ್ಟು ಯೋಗ್ಯವಾದ ನಿಘಂಟು ಕನ್ನಡದಲ್ಲಿ ಬೇರೆಯೇ ಇಲ್ಲ. ಕನ್ನಡದ ಸಾಹಿತ್ಯದ ಏಳಿಗೆಗೆ ತಮ್ಮ ತನು, ಮನ, ಧನವನ್ನು ಅರ್ಪಿಸಿದ ಕಿಟೆಲ್ ರವರಿಗೆ ನಾವೆಲ್ಲರೂ ಚಿರಋಣಿಗಳಾಗಿರ ಬೇಕಾಗಿದೆ"[12] ಎಂದು ಹೇಳಿದ, ಎಸ್. ಕಾಮತ ಅವರ ಅಭಿಪ್ರಾಯಕ್ಕೆ ನಾವು ಧ್ವನಿ ಕೂಡಿಸಲೇಬೇಕು.

ರೆ. ಎಫ್. ಝೀಗ್ಲರ್, ಅವರ ಕನ್ನಡ ಭಾಷೆಯ ವ್ಯಾಕರಣ (೧೮೭೨ ರಲ್ಲಿ ೨ ನೇ ಆವೃತ್ತಿ), ರೆ. ಥಾಮಸ್ ಹಾಡ್‌ಸನ್, ಅವರ ಕನ್ನಡ ವ್ಯಾಕರಣ (೧೮೭೪ ರಲ್ಲಿ ೨ ನೇ ಆವೃತ್ತಿ), ಮೇಬನ್ ಅವರ ವ್ಯಾಕರಣ ಬೋಧಿನಿ, ಕ್ಯಾಂಬೆಲ್ ಅವರ ವ್ಯಾಕರಣಸಾರ ಈ ಹೆಸರು ಗಳನ್ನು ನಾವು ವ್ಯಾಕರಣ ಗ್ರಂಥಗಳಲ್ಲಿ ನೆನೆಸಬಹುದು. ಇವು ಇಂಗ್ಲೀಷಿನಲ್ಲಿದ್ದರೂ, ಉದಾಹರಣೆಗಳನ್ನು ಕನ್ನಡದಲ್ಲಿ ಅಚ್ಚು ಹಾಕಲಾಗಿದೆ. ಇದರಲ್ಲಿ ಅನೇಕರು ಕೇಶಿರಾಜ, ನಾಗವರ್ಮ, ಭಟ್ಟಾಕಲಂಕ, ಇವರ ಪಾಂಡಿತ್ಯಕ್ಕೆ ತಮ್ಮ ಕೃತಜ್ಞತೆಯನ್ನು ಸೂಚಿಸಿದ್ದಾರೆ. ವಿದೇಶೀಯರು ಈ ವ್ಯಾಕರಣಗಳನ್ನು ಬರೆಯುವಾಗ, ಪಾಶ್ಚಿಮಾತ್ಯ ಪದ್ಧತಿಯನ್ನು ಅನುಕರಿಸಿ, ಬರೆದದ್ದರಿಂದ ಒಂದು ವಿಶಿಷ್ಟವಾದ ಹೊಸರೀತಿಯು ಈ ಗ್ರಂಥಗಳಲ್ಲಿ ಕಂಡುಬರುತ್ತದೆ. ಅಲ್ಲದೇ ಕನ್ನಡವನ್ನು ವಿವಿಧ ಭಾಷೆಗಳ ಕೂಡ ಅಭ್ಯಾಸಮಾಡುವ ಒಂದು ಪದ್ಧತಿಯನ್ನು ವಿದೇಶೀಯರು ಹಾಕಿಕೊಟ್ಟರು ; ಕಾಲ್ಡೆಲ್ ಅವರ ಗ್ರಂಥವೇ ಇದಕ್ಕೆ ಸಾಕ್ಷಿಯಾಗಿದೆ.

ಹಳಗನ್ನಡ ಗ್ರಂಥಗಳನ್ನು ಸಂಪಾದಿಸಿ ಅವುಗಳನ್ನು ಪ್ರಕಟಿಸುವ ಮಹಾಕಾರ್ಯವನ್ನು ಮಿಶನರಿಗಳು ಮಾಡಿದರು. ಹಳೆಯ ಗ್ರಂಥಗಳೆಲ್ಲಾ ತಾಳೆಯೆಲೆಯ ಕಟ್ಟುಗಳಾಗಿದ್ದು, ಅವುಗಳಲ್ಲಿ ಎಷ್ಟೋ ಗೆದ್ದಲುಗಳ ಪಾಲಾಗಿದ್ದವು. ಮಿಷನರಿಗಳಿಗೆ ಹಿಡಿದ ಹುಚ್ಚು ಅವರನ್ನು ಈ ಮಾತೃಕೆ ಗಳನ್ನೆಲ್ಲಾ ಒಟ್ಟುಗೂಡಿಸುವಂತೆ ಪ್ರೇರೇಪಿಸಿತು. ಮಂಗಳೂರಿನ ಬಾಸೆಲ್ ಮಿಶನ್ ಪ್ರೆಸ್ಸಿನಲ್ಲಿ ಕನ್ನಡ ಗ್ರಂಥಗಳು ಪ್ರಕಾಶಕ್ಕೆ ಬಂದವು.

ರೆ. ಮೋಗ್ಲಿಂಗ್, ರೆ. ವೀಗಲ್, ರೆ. ಕಿಟ್ಟಲ್ ಇವರು ಈ ದಿಶೆಯಲ್ಲಿ ಅಮೋಘವಾದ ಸೇವೆಯನ್ನು ಕನ್ನಡಕ್ಕೆ ಸಲ್ಲಿಸಿದ್ದಾರೆ. ಮೊದಲು ಗ್ರಂಥಗಳನ್ನು ಕಲ್ಲುಛಾಪೆಯಲ್ಲಿ ಅಚ್ಚು ಹಾಕಿಸುತ್ತಿದ್ದರು. ಮಿಶನರಿಗಳು ಕುಶಾಗ್ರ ಬುದ್ಧಿಯಿಂದ, ತಾಳೆಯೆಲೆಯ ಗ್ರಂಥಗಳನ್ನು ಸಂಪಾದಿಸಿ ಓದುತ್ತಿದ್ದರು. ತರುವಾಯ ಉತ್ತಮ ಹಸ್ತಾಕ್ಷರದ ಬರಹಗಾರರಿಂದ ನಯವಾದ ಶಿಲೆಯಮೇಲೆ ತಿರುವುಮುರುವಾಗಿ ಬರೆಯಿಸಿ ೨೦೦-೩೦೦ ಪ್ರತಿಗಳನ್ನು ಎತ್ತುತ್ತಿದ್ದರು. ಕನ್ನಡ ಅಕ್ಷರಗಳ ಮೊಳೆಗಳು ಬರುವವರೆಗೂ ಅವರು ಹೀಗೆಯೇ ಮಾಡಿದರು. ಹೀಗೆ ಜೈಮಿನಿಭಾರತ ೧೮೪೮ ರಲ್ಲಿ ಮುದ್ರಿತವಾಗಿದೆ; ಬಸವಪುರಾಣ ೧೮೫೦ ರಲ್ಲಿ ಅಚ್ಚಾಗಿದೆ; ೧೮೫೧ ರಲ್ಲಿ ಚನ್ನಬಸವಪುರಾಣ, ದಶಪರ್ವಭಾರತ ಅಚ್ಚಾಗಿವೆ. ೧೮೭೨ ರಲ್ಲಿ ರೆ. ಕಿಟ್ಟಲ್ ಅವರು ಶಬ್ದಮಣಿ ದರ್ಪಣದ ಮಾತೃಕೆಗಳನ್ನೆಲ್ಲ ಒಟ್ಟುಗೂಡಿಸಿ ಅದನ್ನು ಚೆನ್ನಾಗಿ ಪರಿಷ್ಕರಿಸಿ ಪ್ರಸಿದ್ಧಿಸಿದರು. ನಾಗವರ್ಮನ ಛಂದೋಂಬುಧಿಯನ್ನು ರೆ. ಕಿಟ್ಟೆಲ್ ಅವರು ಇದೇ ಸಮಯದಲ್ಲಿ ಪ್ರಕಟಿಸಿದರು.

ಇದಲ್ಲದೆ ಕನ್ನಡ ಸಾಹಿತ್ಯದ ಪರಿಚಯವು ವಿದೇಶೀಯರಿಗೆ ಆಗಬೇಕೆಂದು ಮಿಶನರಿಗಳು ಆಶೆಪಟ್ಟರು. ರೆ. ವರ್ಥರವರು ೧೮೭೫ ರಲ್ಲಿ ಚೆನ್ನಬಸವಪುರಾಣದ ಇಂಗ್ಲೀಷ ಭಾಷಾಂತರವನ್ನು ಮಾಡಿದ್ದು ಅದು ರಾಯಲ್ ಏಶಿಯಾಟಿಕ್ ಸೊಸಾಯಿಟಿಯ ಪತ್ರಿಕೆಯಲ್ಲಿ ಅಚ್ಚಾಗಿದೆ.[13] ೧೮೭೫ ರಲ್ಲಿ ರೆ. ಕಿಟ್ಟಲ್ ಅವರು, ನಾಗವರ್ಮನ "ಛಂದೋಂಬುಧಿ" ಯನ್ನು ಸಂಪಾದಿಸಿ ದಾಗ ಕನ್ನಡ ಸಾಹಿತ್ಯ ಚರಿತ್ರೆಯ ಮುಖ್ಯಾಂಶವನ್ನು ಕೊಟ್ಟಿರುವರು. ರೆ. ಕಿಟ್ಟೆಲ್‌ರವರ ಈ ಸಾಹಿತ್ಯ ಚರಿತ್ರೆ ಪಾಂಡಿತ್ಯ ಪೂರ್ಣವಾಗಿದ್ದು ತದನಂತರ ಬರುವ ಸಾಹಿತ್ಯ ಚರಿತ್ರೆಗಾರರಿಗೆ ಅತ್ಯಂತ ಉಪಯುಕ್ತವಾಗಿದೆ.

ರೆ. ಕಿಟ್ಟೆಲ್, ರೆ. ಝೀಗ್ಲರ್, ರೆ. ವರ್ಥ್, ಮೊದಲಾದವರು ಉತ್ತರ ಕರ್ನಾಟಕದ

---

[12] ಕನ್ನಡದ ಸೇವೆಯನ್ನು ಗೈದ ಪರಕೀಯರು, ಎಸ್, ಕಾಮತ, ಯುಗಪುರುಷ, Vol. IX, No. 1.

[13] ರಾಯಲ್ ಏಶಿಯಾಟಿಕ್ ಸೊಸಾಯಿಟಿಯ ಮುಂಬೈಶಾಖೆಯ ಪತ್ರಿಕೆ, ಪುಟ ೯೮-೨೨೧.

ಧಾರವಾಡದಲ್ಲಿಯೂ ಇದ್ದರು. ಧಾರವಾಡವು ವಿದ್ಯಾಕೇಂದ್ರವಾಗುವಂತೆ ಇವರು ಪ್ರಯತ್ನಿಸಿರುವರು. ಪ್ರಭಾವಿಶಾಲಿಯಾದ ಡಬ್ಲ್ಯು. ಎ. ರಸೆಲ್ ಅವರ ಅಭಿಮಾನದಿಂದ ಉತ್ತರದಲ್ಲಿಯೂ ಕನ್ನಡ ಸಾಹಿತ್ಯ ಬೆಳೆಯುವಂತಾಯಿತು.

ಸುಮಾರು ೧೯ ನೆಯ ಶತಕದ ಮಧ್ಯಭಾಗದಿಂದ ಮೈಸೂರು ಸಾಹಿತ್ಯ ಚಟುವಟಿಕೆಗಳ ಕೇಂದ್ರವಾಗಿದೆ. ಇಲ್ಲಿ ಕ್ರಿಶ್ಚನ್ ಮಹನೀಯರು ಅಪೂರ್ವವಾದ ಕೆಲಸವನ್ನು ಮಾಡಿರುವರು. ಬಿ. ಲೂಯಿ ರೈಸ್ ಅವರು ಮೈಸೂರ್ ಗ್ಯಾಝೆಟಿಯರ್ ಸಂಪಾದಿಸಿರುವರು. ಅದು ಮೈಸೂರು ಸರಕಾರದ ಕೆಲಸವಾಗಿದ್ದರೂ ಅದನ್ನು ಉತ್ತಮವಾಗಿ ಸಂಪಾದಿಸಿದ ಶ್ರೇಯಸ್ಸು ಬಿ. ಲೂಯಿ ರೈಸ್ ಅವರಿಗೆ ಇದೆ. ಮೈಸೂರ ಮತ್ತು ಕೊಡಗು ದೇಶಗಳಲ್ಲಿಯ ಶಿಲಾಲಿಪಿಗಳನ್ನು ಮುದ್ರಿಸಿ ಪುಸ್ತಕಗಳ ರೂಪದಲ್ಲಿ ಕೊಡುವ ಗುರುತರವಾದ ಕಾರ್ಯವನ್ನು ಬಿ. ಲೂಯಿ ರೈಸ್ ಅವರು ಮಾಡಿದ್ದಾರೆ. ಕರ್ನಾಟಕದಲ್ಲಿ ಪ್ರಾಚ್ಯವಸ್ತು ಸಂಶೋಧನೆಯ ಕಾರ್ಯ ಕೈಕೊಂಡು ಅದನ್ನು ...ಯಶಸ್ವಿಯಾಗಿ ನಿರ್ವಹಿಸಿದವರು ಬಿ. ಲೂಯಿ ರೈಸ್ ರವರೆಂದೇ ಹೇಳಬೇಕು, ಇವರ ಈ ಕಾರ್ಯದಿಂದ ಶಿಲಾಲಿಪಿಯಲ್ಲಿರುವ ಪೂರ್ವಕಾಲದ ಅಪೂರ್ವ ಕಾವ್ಯ ಬೆಳಕಿಗೆ ಬಂದವು.

ಬಿ. ಲೂಯಿ ರೈಸ್ ಅವರು ಕೆಲವು ಹಳಗನ್ನಡ ಗ್ರಂಥಗಳನ್ನು ಸಂಪಾದಿಸಿರುವರು. ೧೮೮೪ ರಲ್ಲಿ ನಾಗವರ್ಮನ 'ಕರ್ನಾಟಕ ಭಾಷಾ ಭೂಷಣ'ವನ್ನೂ ೧೮೯೦ ರಲ್ಲಿ ಭಟ್ಟಾಕಲಂಕನ 'ಕರ್ನಾಟಕ ಶಬ್ದಾನುಶಾಸನ' ವನ್ನೂ ೧೮೯೮ ರಲ್ಲಿ 'ಪಂಪಭಾರತ'ವನ್ನೂ ಇವರು ಸಂಪಾದಿಸಿ ಪ್ರಕಟಿಸಿರುವರು. ಭಟ್ಟಾಕಲಂಕನ ಕರ್ನಾಟಕ ಶಬ್ದಾನುಶಾಸನದ ಮುನ್ನುಡಿಯಲ್ಲಿ ಕನ್ನಡ ಸಾಹಿತ್ಯದ ಬಗ್ಗೆ ಉತ್ತಮವಾದ ವಿವರಗಳನ್ನು ಕೊಟ್ಟಿದ್ದಾರೆ. ಮೈಸೂರ್ ಗ್ಯಾಝೇಟಿಯರದ ಒಂದನೆಯ ಸಂಪುಟದಲ್ಲಿಯೂ ಕನ್ನಡಸಾಹಿತ್ಯದ ಬಗ್ಗೆ ಶ್ರೇಷ್ಠವಾದ ಲೇಖನವಿದೆ.

೧೮೬೮ ರಲ್ಲಿ ಮೈಸೂರಲ್ಲಿ ಜೆ. ಗ್ಯಾರೆಟ್ ಎಂಬುವರು ಶಬ್ದಮಣಿದರ್ಪಣವನ್ನು ಸಂಪಾದಿಸಿ ಅಚ್ಚು ಹಾಕಿಸಿದ್ದಾರೆ. ಜೆ. ಗ್ಯಾರೆಟ್ ಅವರು ತಮ್ಮ ಪುಸ್ತಕದ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ. "ಕನ್ನಡ ಪಂಡಿತರು ಶಬ್ದಮಣಿದರ್ಪಣದಂತಹ ಕೃತಿಯನ್ನು ಅತ್ಯಂತ ಹೊಗಳುತ್ತಿದ್ದರೂ, ಅದು ಈ ವರೆಗೂ ಅಚ್ಚಾಗದೇ ಇರುವದು ಬಹಳ ಸೋಜಿಗದ ಸಂಗತಿಯಾಗಿದೆ. ಅಮೂಲ್ಯವಾದ ಗ್ರಂಥಗಳನ್ನು ಜನತೆಗೆ ಒದಗಿಸಿ ಕೊಡುವದಕ್ಕೆ ಸರ್ವಸಾಮಾನ್ಯವಾಗಿ ಒಪ್ಪಿಗೆ ಇಲ್ಲದಿರುವದೇ ಇದಕ್ಕೆ ಕಾರಣ. ತಾಳೆಯೆಲೆಯ ಗ್ರಂಥಗಳನ್ನು ಕೂಡಿಸಿಟ್ಟು ವೈಯಕ್ತಿಕ-ವಾಗಿಯೇ ಅಭ್ಯಾಸ ಮಾಡುತ್ತಾರೆ."[14] ಜೆ. ಗ್ಯಾರೆಟ್ ಅವರು ಬರೆದ ಈ ಮಾತುಗಳು ಆಗಿನ ಕಾಲದ ಪರಿಸ್ಥಿತಿಯನ್ನು ಪ್ರತಿಬಿಂಬಿಸುತ್ತವೆ; ಇದಲ್ಲದೆ ೧೮೬೮ ರಲ್ಲಿ 'ಶಬ್ದಮಣಿ ದರ್ಪಣ; ಮೊದಲು ಸಲ ಅಚ್ಚಾದಂತೆ ತೋರುತ್ತದೆ.

೧೯ ನೇ ಶತಮಾನದ ಆದಿಯಲ್ಲಿ ಬಳ್ಳಾರಿ ಮತ್ತೂ ಮದ್ರಾಸ್, ಮಧ್ಯದಲ್ಲಿ ಮಂಗಳೂರು ಧಾರವಾಡ, ಕೊನೆಯ ಭಾಗದಲ್ಲಿ ಮೈಸೂರು ಹೀಗೆ ಇವು ಕನ್ನಡ ಸಾಹಿತ್ಯ ಚಟುವಟಿಕೆಯ ಕೇಂದ್ರಗಳಾದವೆಂದು ನಾವು ಹೇಳಬಹುದು. ವಿದೇಶದಿಂದ ಬಂದ ಮಿಶನರಿಗಳಿಗೆ ಪ್ರಗತಿಯ ಕೆಲವು ವಿಚಾರಗಳೂ ಇದ್ದವು. ಅವು ಸಹ ಕನ್ನಡಸಾಹಿತ್ಯದಲ್ಲಿ ಬರುವಂತೆ ಅವರು ಹಂಬಲಿಸಿದ್ದಾರೆ.

ಕೇವಲ ಪ್ರೌಢ ಗ್ರಂಥಗಳನ್ನು ಪ್ರಕಟಗೊಳಿಸುವದರಿಂದ ಜನಸಾಮಾನ್ಯರನ್ನು ಮುಟ್ಟಲು ಸಾಧ್ಯವಿಲ್ಲ. ಆದ್ದರಿಂದ ಜಾನಪದ ಸಾಹಿತ್ಯವನ್ನು ಪ್ರಕಾಶಕ್ಕೆ ತರಬೇಕೆಂದು ಮಿಶನರಿಗಳು ಹವಣಿಸಿದರು. ಈ ಉದ್ದೇಶದಿಂದ "ಕನ್ನಡ ಗಾದೆಗಳು" ಎಂಬ ೩೫೦೦ ಕ್ಕೂ ಮಿಕ್ಕಿರುವ ನಾಣ್ಣುಡಿಗಳನ್ನು ಸಂಗ್ರಹಿಸಿ ಶಿಲಾಯಂತ್ರದಲ್ಲಿ ಛಾಪಿಸಿದರು. ಹಾಡುಗಬ್ಬಗಳಾದ ದಾಸರ ಪದಗಳನ್ನು ಪ್ರಥಮತಃ ಮುದ್ರಿಸಿ ಪ್ರಚಾರಮಾಡಿದವರು ಮಿಶನರಿಗಳೇ. ಕನಕದಾಸರ

---

[14] ಶಬ್ದಮಣಿದರ್ಪಣ—ಸಂಪಾದಿತ ಜೆ. ಗ್ಯಾರೆಟ್ ಇವರ ಅಡ್ವರಟಾಯಿಜಮೆಂಟದಲ್ಲಿ.

"ಹರಿಭಕ್ತಿಸಾರ"ವನ್ನು ಯಕ್ಷಗಾನವಾದ "ರಾವಣದಿಗ್ವಿಜಯ"ವನ್ನು ಜನಸಾಮಾನ್ಯರು ಓದಬೇಕೆಂದು ಮಿಶನರಿಗಳು ಮುದ್ರಿಸಿ ಪ್ರಸಿದ್ಧಿಸಿದ್ದಾರೆ.

ಸಣ್ಣ ಕಥೆಗಳು ಜನಸಾಮಾನ್ಯಕ್ಕೆ ರುಚಿಸುವಂತೆ ೧೯ ನೇ ಶತಮಾನದಲ್ಲಿಯೇ ಮಿಶನರಿಗಳು ಪ್ರಯತ್ನಿಸಿದ್ದಾರೆ. "ಈಸೋಪನ ನೀತಿಯ ಕಥೆಗಳು" ೧೮೬೯ ರಲ್ಲಿ ೪ ನೇ ಆವೃತ್ತಿಯನ್ನು ಕಂಡಿದೆ. ಪ್ರತಿಯೊಂದು ಕಥೆಯ ಕೊನೆಗೆ ತಾತ್ಪರ್ಯವನ್ನು ಕೆಲವು ವಾಕ್ಯಗಳಲ್ಲಿ ಹೇಳಿದೆ. ೧೮೬೮ಕ್ಕಿಂತ ಮೊದಲೇ ಜಿ. ಗ್ಯಾರ್‌ಟ್ ಅವರು ಪಂಚತಂತ್ರದ ಕಥೆಗಳನ್ನು ಕನ್ನಡಿಸಿ ಪ್ರಕಟಿಸಿದ್ದಾರೆ. ೧೮೪೪ ರಲ್ಲಿ "ನೀತಿ ಪಾಠಗಳು" ಇದನ್ನು ಪ್ರಸಿದ್ಧಿಸಿರುವರು. ಇವೆಲ್ಲವು ೨೦ ನೇ ಶತಮಾನದ ಸಣ್ಣ ಕಥೆಗಳ ಬೆಳವಣಿಗೆಗೆ ಕಾರಣವಾಗಿವೆ; ಅಲ್ಲದೇ ಹೊಸಗನ್ನಡ ಗದ್ಯದ ಶೈಲಿಗೂ ಸಹಾಯಕವಾಗಿವೆ.

ಧರ್ಮಪ್ರಚಾರದ ದೃಷ್ಟಿಯಿಂದ ಕನ್ನಡದ ಗದ್ಯ ನಿರ್ಮಾಣದಲ್ಲಿ ವಿದೇಶಿ ಮತಪ್ರಚಾರಕರು ಕೈಯಿಕ್ಕಿದರಾದರೂ, ಕನ್ನಡದ ಹೊಸ ಸಾಹಿತ್ಯಕ್ಕೆ ಅದರಿಂದ ತುಂಬಾ ನೆರವು ಸಿಕ್ಕಿದೆ. ೧೮೨೨ರ ಸುಮಾರಿಗೆ "ಬಾಯಿಬಲ್" ಗ್ರಂಥವು ಸಂಪೂರ್ಣವಾಗಿ ಕನ್ನಡಿಸಲ್ಪಟ್ಟಿತು. 'ಅಪೊಸ್ತಲರ ಕೃತ್ಯಗಳು' ೧೯ ನೇ ಶತಮಾನದ ಮಧ್ಯದಲ್ಲಿ ಪ್ರಕಟವಾಯಿತು. ಸುಮಾರು ೧೮೪೭ ರಲ್ಲಿ ಜಾನ್ ಬನಿಯನ್‌ನ "ಪಿಲಿಗ್ರಿಮ್ಸ್ ಪ್ರೊಗ್ರೆಸ್" ಎಂಬ ಇಂಗ್ಲೀಷ ಭಾಷೆಯ ಶ್ರೇಷ್ಠ ಕೃತಿಯು ಮೊದಲಸಲ ಕನ್ನಡದಲ್ಲಿ ಭಾಷಾಂತರವಾಗಿ ಪ್ರಸಿದ್ಧಿಸಲ್ಪಟ್ಟಿತು. ಕನ್ನಡದಲ್ಲಿ ಇದಕ್ಕೆ "ಯಾತ್ರಿಕನ ಸಂಚಾರ" ಎಂಬ ಹೆಸರನ್ನು ಕೊಡಲಾಗಿದೆ. ಈ ಗ್ರಂಥದಲ್ಲಿ ಶುದ್ಧ ಸಾಹಿತ್ಯ ದೃಷ್ಟಿಯಿದೆ. "ಯಾತ್ರಿಕನ ಸಂಚಾರ ಎಂಬ ಹೆಸರಿನಿಂದ ಕನ್ನಡ ಗದ್ಯರೂಪಕ್ಕಿಳಿದ ಈ ಕೃತಿಗೆ ಹೊಸಗನ್ನಡ ಗದ್ಯಸಾಹಿತ್ಯದಲ್ಲಿ ಅದೊಂದು ವಿಶಿಷ್ಟ ಸ್ಥಾನವಿದೆ"[15] ಎಂದು ಬಿ. ಶಂಕರಭಟ್ಟ, ಬಿ. ಎಮ್. ಶರ್ಮಾ, ಅವರ ಅಭಿಪ್ರಾಯವಿದೆ. ಇವೆಲ್ಲ ಕಾರಣಗಳಿಂದ ಹೊಸಗನ್ನಡದ ಗದ್ಯಯುಗವು ಪ್ರಾರಂಭಿಸಿದ ನಿಜವಾದ ಕಾಲ ೧೯ ನೇ ಶತಮಾನವೆಂದರೂ ತಪ್ಪಾಗದು ಎಂದು ಅವರು ನುಡಿದಿದ್ದಾರೆ.

ಹೊಸಗನ್ನಡ ಭಾವಗೀತೆಗಳಿಗೆ ೧೯ ನೇ ಶತಮಾನದಲ್ಲಿಯೇ ಮಿಶನರಿಗಳು ಪುಟ ಕೊಟ್ಟರೆಂದು ಒಂದು ರೀತಿಯಿಂದ ಹೇಳಬಹುದು. ೧೯ ನೇ ಶತಮಾನದ ಮಧ್ಯದಲ್ಲಿ ಧರ್ಮಕ್ಕೆ ಸಂಬಂಧಿಸಿದ "ಗೀತ ಪುಸ್ತಕಗಳು" ಎಂಬ ಕೃತಿ ಪ್ರಕಟವಾಗಿದೆ. ಈ ಗೀತಗಳು ಇಂಗ್ಲಿಷ್ ಜರ್ಮನ್ ಭಾಷೆಗಳಲ್ಲಿ ಮೊದಲೇ ರಚಿತವಾಗಿದ್ದವು. ಆ ಭಾಷೆಗಳಲ್ಲಿಯ ಛಂದಸ್ಸಿನಂತೆಯೇ ಕನ್ನಡದಲ್ಲಿ ಭಾಷಾಂತರಿಸಿದರು. ಇಂಗ್ಲೀಷ ಜರ್ಮನ್ ಭಾಷೆಗಳಲ್ಲಿಯ ಛಂದಸ್ಸೇ ಕನ್ನಡದಲ್ಲಿಯೂ ಬರುವಂತೆ ಮಾಡಿದರು. ಕನ್ನಡದಲ್ಲಿ ಅಂತ್ಯಪ್ರಾಸ ಮಾತ್ರ ವರ್ತಿಸುವದು. ಮಾದರಿಗಾಗಿ ಒಂದು ಉದಾಹರಣೆ—ನಾವು ನಿರೀಕ್ಷಿಸಬಹುದು.

೧

ಇಲ್ಲಿ ನಮ್ಮ ಸುಖ ಕಷ್ಟ
ಇಲ್ಲಿ ನಮ್ಮ ಲಾಭ ನಷ್ಟ
ನಮ್ಮ ಕ್ಷೇಮ ತಾಪವು
ನಮ್ಮ ನೀತಿ ಪಾಪವು

೨

ಅಲ್ಲಿ ಪೀಡೆ, ಸಾವು, ಶಾಪ,
ಅಂಧಕಾರ ಸೂರ್ಯ ತಾಪ
ಚಿಂತೆ ದುಃಖ ಕಾಣವು
ಅಲ್ಲಿ ಸೌಖ್ಯ ತಾಣವು

[15] "ನಮ್ಮ ಸಾಹಿತ್ಯ"—ಬಿ. ಶಂಕರಭಟ್ಟ ಮತ್ತು ಬಿ. ಎಂ. ಶರ್ಮ, ಪುಟ 19.

ಆಧುನಿಕ ಭಾವಗೀತೆಗೂ ಇದಕ್ಕೂ ಏನು ಹೆಚ್ಚು ಕಡಿಮೆ? ಭಾವಗೀತೆಯ ಹೊಸ ಛಂದಸ್ಸು ಉಳಿದ ಲಕ್ಷಣಗಳು ಎಲ್ಲಾ ಇಲ್ಲಿ ಇವೆ. ವಿದೇಶದ ಗಾಯನದ ಪದ್ಧತಿಯಂತೆ ಇವು ಹಾಡಲೂ ಬರುತ್ತವೆ.

ಈ ಸಂದರ್ಭದಲ್ಲಿ ರೆವೆರೆಂಡ ಜಿ. ವರ್ಥ್ ಅವರು ಸಂಪಾದಿಸಿದ ಕನ್ನಡ ಕಾವ್ಯ ಸಂಗ್ರಹವನ್ನು ನಾವು ನೆನೆಸಬಹುದು. ೧೮೬೮ ರಲ್ಲಿ ಈ ಸಂಗ್ರಹವು ಪ್ರಕಟವಾಗಿದೆ. ಎಷ್ಟೋ ವರುಷಗಳ ವರೆಗೆ ಈ ಪುಸ್ತಕವು ಪಠ್ಯಪುಸ್ತಕವಾಗಿತ್ತು. ಈಗಲೂ ಧಾರವಾಡದಲ್ಲಿ ಸರಕಾರ ದವರು ನಡಸುವ ವಿಶೇಷ ಪರೀಕ್ಷೆಗೆ ಈ ಕಾವ್ಯಸಂಗ್ರಹವು ಪಠ್ಯಪುಸ್ತಕವಾಗಿದ್ದು ಆ ಪರೀಕ್ಷೆಯಲ್ಲಿ ತೇರ್ಗಡೆಹೊಂದಿದ ಮೊದಲಿಗರಿಗೆ "ವರ್ಥ್‌ಪ್ರಾಯಿಜ್" ಕೊಡುವರು. ಈ ಕಾವ್ಯಸಂಗ್ರಹದಲ್ಲಿ ಜೈನ, ವೀರಶೈವ, ಬ್ರಾಹ್ಮಣ ಸಾಹಿತ್ಯ ಕೃತಿಗಳಿಂದ ಉತ್ತಮ ಕೃತಿಗಳನ್ನು ಆರಿಸಿ ಕೊಟ್ಟಿರುವರಲ್ಲದೆ ಕ್ರೈಸ್ತಧರ್ಮದವರ ಒಂದು ಕಾವ್ಯ ವಿಭಾಗವನ್ನು ಈ ಸಂಗ್ರಹದಲ್ಲಿ ಮಾಡಿರುವರು. ಈ ವಿಚಾರದ ಬಗ್ಗೆ ರೆ. ಜಿ. ವರ್ಥ್ ಅವರ ಅಭಿಪ್ರಾಯ ಹೀಗೆ ಇದೆ—

"ಕರ್ನಾಟಕ ದೇಶದಲ್ಲಿಯ ಕ್ರೈಸ್ತರು ಉಪಯೋಗಿಸುವ ಕೆಲವು ದೇವತಾ ಸ್ತೋತ್ರಗಳನ್ನು ಈ ಸಂಗ್ರಹದಲ್ಲಿ ಹಾಕದಿದ್ದರೆ ಈ ಕಾವ್ಯಸಂಗ್ರಹವು ಪರಿಪೂರ್ಣವಾಗುವದಿಲ್ಲವೆಂದು ತೋರುತ್ತದೆ. ಕನ್ನಡದಲ್ಲಿ ಇದು ಹೊಸರೀತಿಯ ಕಾವ್ಯ ಈ ದೇವತಾ ಸ್ತೋತ್ರಗಳು ಇಂಗ್ಲಿಷ್, ಜರ್ಮನ್ ಮುಂತಾದ ಭಾಷೆಗಳಲ್ಲಿಯ ಛಂದಸ್ಸಿನಂತೆಯೇ ಇವೆ; ಆದ್ದರಿಂದ ಕನ್ನಡ ಪಂಡಿತರಿಗೆ ಕನ್ನಡ ಭಾಷೆ ಹೇಗೆ ವಿಶಾಲವಾಗಿ ಬೆಳೆಯಬಲ್ಲುದೆಂಬುದನ್ನು ನೋಡುವ ಕುತೂಹಲವನ್ನು ನಿಜವಾಗಿಯೂ ಕೆರಳಿಸುವಂತಿವೆ."[16] ರೆ. ಜಿ. ವರ್ಥ್ ಅವರ ಈ ಅಭಿಪ್ರಾಯವನ್ನು ಸಂಪೂರ್ಣ ಮಾನ್ಯಮಾಡದಿದ್ದರೂ ಹೊಸ ರೀತಿಯ ಕಾವ್ಯದ ಆರಂಭ ಇಲ್ಲಿ ಆಗಿದೆ ಎಂಬುದನ್ನು ನಾವು ಒಪ್ಪುವಂತಿದೆ.

ವರ್ತಮಾನಪತ್ರ, ಪಠ್ಯಪುಸ್ತಕ, ಶಾಸ್ತ್ರೀಯ ಪುಸ್ತಕ, ಲಿಪಿ ಸುಧಾರಣೆ ಮುಂತಾದ ಇವು ನೇರವಾಗಿ ಸಾಹಿತ್ಯವಾಗದಿದ್ದರೂ ಸಾಹಿತ್ಯವಿಷಯಕ್ಕೆ ಹಿನ್ನೆಲೆಯಾಗಿ ಸಂಬಂಧ ಪಟ್ಟುದಾಗಿದೆ. ೧೯ ನೇ ಶತಮಾನದಲ್ಲಿ ಇವುಗಳ ಬೆಳವಣಿಗೆ ಚನ್ನಾಗಿ ತಿಳಿದುಕೊಳ್ಳದಿದ್ದರೆ ಕನ್ನಡ ಸಾಹಿತ್ಯದ ನೆಲೆ ಬೆಲೆ ಇವುಗಳನ್ನು ಸರಿಯಾಗಿ ಅರಿತುಕೊಳ್ಳುವದು ಅಸಾಧ್ಯವಾಗುತ್ತದೆ.

ಕನ್ನಡದಲ್ಲಿ ಪತ್ರಿಕಾವ್ಯವಸಾಯಕ್ಕೆ ವಿದೇಶಿ ಮತ ಪ್ರಚಾರಕರೇ ಅಸ್ತಿವಾರ ಹಾಕಿದ್ದಾರೆ. ಕನ್ನಡ ಸಮಾಚಾರ, ಮಂಗಳೂರ ಸಮಾಚಾರ, ಸಭಾಪತ್ರ, ಸತ್ಯದೀಪಿಕೆ, ಸುಬುದ್ಧಿ ಪ್ರಕಾಶ ಮುಂತಾದ ಪತ್ರಿಕೆಗಳೂ ೧೯ ನೇ ಶತಮಾನದಲ್ಲಿ ಬೇರೆ ಬೇರೆ ಊರುಗಳಲ್ಲಿ ಪ್ರಕಟ ವಾಗಿವೆ. ತುಳುಭಾಷೆಗೆ ಕನ್ನಡಲಿಪಿಯನ್ನು ಮಿಶನರಿಗಳು ಉಪಯೋಗಿಸಿದ್ದಾರೆ. ನೀಲಗಿರಿಯ ಬಡಗರೂ ಕೂಡ ತಮ್ಮ ಮೂಲಭಾಷೆಯಾದ ಕನ್ನಡವನ್ನು ಮರೆಯದಂತೆ ಬಡಗ ಭಾಷೆಯ ಪುಸ್ತಕಗಳನ್ನು ಕನ್ನಡಲಿಪಿಯಲ್ಲಿ ಮುದ್ರಿಸಿ ಕೊಟ್ಟಿದ್ದಾರೆ. ೧೯೩೬ ರಲ್ಲಿ ಬಿ. ಎಮ್. ಶ್ರೀಕಂಠಯ್ಯನವರು ತಮ್ಮ "ಕನ್ನಡ ಬಾವುಟ"ವನ್ನು ಛಾಪಿಸಿದ ನಮೂನೆಯನ್ನು ಮಿಗಿಲಿಸುವ ರೀತಿಯಲ್ಲಿ ೧೮೫೭ ರಷ್ಟು ಹಿಂದೆಯೇ "ರಾಜೇಂದರನಾಮೆ" ಎಂಬ ದೊಡ್ಡ ಗ್ರಂಥವನ್ನು ಮಿಶನರಿಗಳು ಕನ್ನಡದಲ್ಲಿ ಮುದ್ರಿಸಿದ್ದಾರೆ. ಕನ್ನಡ ಭಾಷೆಯ ಪುನರುಜ್ಜೀವನ ಹಾಗೂ ಶಿಕ್ಷಣದ ಬೆಳವಣಿಗೆಯ ಭದ್ರವಾದ ಅಡಿಗಲ್ಲನ್ನು ಡಬ್ಲ್ಯು. ಎ. ರಸೆಲ್ ಅವರು ಕರ್ನಾಟಕದ ಉತ್ತರ ಭಾಗದಲ್ಲಿ ಇಟ್ಟಿದ್ದಾರೆ. ಅನೇಕ ಪಠ್ಯಪುಸ್ತಕಗಳನ್ನು ಶಾಸ್ತ್ರೀಯ ಗ್ರಂಥಗಳನ್ನು ಮಿಶನರಿಗಳು ಪ್ರಕಟಿಸಿದ್ದಾರೆ. ಹೀಗೆ ಕನ್ನಡಕ್ಕಾಗಿ ವಿವಿಧವಾಗಿ ಕ್ರೈಸ್ತ ಜನರು ೧೯ ನೇ ಶತಮಾನದಲ್ಲಿ ಪರಿಶ್ರಮಪಟ್ಟಿದ್ದಾರೆ. ಇವರ ಪರಿಶ್ರಮದಿಂದಲೇ ಕನ್ನಡ ಸಾಹಿತ್ಯಕ್ಕೆ ಹೊಸ ಬೆಳಕುಬಂದಿದೆ.

ಮಿಶನರಿಗಳು ತಮ್ಮ ಕ್ರೈಸ್ತಧರ್ಮದ ಪ್ರಸಾರಕ್ಕಾಗಿ ಹೀಗೆ ಕನ್ನಡದ ಸೇವೆಮಾಡಿದ

[16] Canarese Poetical Anthology, by Rev. G. Warth, Preface, Page, (9).

ರೆಂದೂ ಕ್ರೈಸ್ತಮತದ ಅಧಿಕಾರಿಗಳು ತಮ್ಮ ಸರಕಾರದ ಅನುಕೂಲತೆಗಾಗಿ ಹೀಗೆ ಕನ್ನಡದ ಕೆಲಸಮಾಡಿದರೆಂದೂ, ಇಲ್ಲವಾದರೆ ಅವರಲ್ಲಿ ಏನೂ ತಪ್ಪಿಲ್ಲವೆಂದೂ, ಅವರನ್ನು ಟೀಕೆಮಾಡುವದುಂಟು. ಆದರೆ ಕರ್ನಾಟಕದ ಯಾವ ಉಚ್ಚ ಅಧಿಕಾರಿಗಳಲ್ಲಿ ರಸೆಲ್, ರೈಸ್, ಮುಂತಾದವರಿಗೆ ಇರುವ ಸಾಹಿತ್ಯ ಸಂಸ್ಕೃತಿಗಳ ದೃಷ್ಟಿ ಇದೆ? ಕಿಟ್ಟೆಲ್, ವರ್ಥ್, ವೀಗಲ್, ಝೀಗ್ಲರ್, ಅವರಿಗೆ ಇದ್ದಂಥ ಆಳವಾದ ಅಭ್ಯಾಸದ ದೃಷ್ಟಿ ಯಾವ ನಮ್ಮ ಮತಪ್ರಚಾರಕರಲ್ಲಿ ಇದೆ? ನಾವೇ ಮಾಡುವ ಕಾರ್ಯವನ್ನು ವಿದೇಶೀಯರು ನಮಗಾಗಿ ಮಾಡಿಕೊಟ್ಟಿದ್ದಾರೆ! ೧೯ ನೇ ಶತಕದಲ್ಲಿ ವಿದೇಶೀಯರು ಬರೆದಿಟ್ಟ ಕೃತಿಗಳೇ ನಮಗೆ ಇಂದೂ ಆಳವಾದ ಅಭ್ಯಾಸಕ್ಕೆ ಆಧಾರ ಗ್ರಂಥಗಳಾಗಿವೆ. ಅಂಥ ಕೃತಿಗಳಿಗಾಗಿ ವಿದೇಶೀಯರಿಗೆ ನಮ್ಮ ಕೃತಜ್ಞತೆಯನ್ನು ನಾವು ಸಲ್ಲಿಸಲೇ ಬೇಕು. ಹೀಗಿದ್ದರೂ ಕವಿಚರಿತೆಕಾರರು ೧೯ನೇ ಶತಮಾನದ ಸಾಹಿತ್ಯ ಚರಿತೆಯಲ್ಲಿ ವಿದೇಶೀಯರ ಕೃತಿಗಳ ಬಗ್ಗೆ ವಿಶೇಷ ಬರೆಯದೇ ಇದ್ದುದು ಅಚ್ಚರಿಯ ವಿಷಯವಾಗಿದೆ!

"ಕನ್ನಡವು ಮಿಶನರಿಗಳಿಗೆ ಕೃತಜ್ಞವಾಗಿದೆ ಎಂದು ಹೇಳುವದು ಯೋಗ್ಯವಾಗಿದೆ"[17] ಎಂದು ಇ. ಪಿ. ರೈಸ್ ಅವರು ತಮ್ಮ "ಕನ್ನಡ ಸಾಹಿತ್ಯ ಚರಿತೆ"ಯಲ್ಲಿ ಹೇಳಿದ್ದಾರೆ. ಇದಕ್ಕಾಗಿ ಇ. ಪಿ. ರೈಸ್ ಅವರು ಕೊಟ್ಟ ಕಾರಣಗಳೂ ಚೆನ್ನಾಗಿವೆ. ಕನ್ನಡ ಭಾಷೆಗೆ ಎಂಥ ಸಂಬಂಧವಿಲ್ಲದ ವಿದೇಶೀಯರು ಅದ್ಭುತ ಕೆಲಸವನ್ನು ಕನ್ನಡದಲ್ಲಿ ಮಾಡಿದ್ದಾರೆ. ಅಂತೆಯೇ "ಕಿಟ್ಟೆಲ್, ಹೊಬರ್, ಮೋೞಂಗ್ಲಿಂಗ, ಫ್ಲೀಬ್ಸ್ಟ್, ಮೊದಲಾದ ರೇವರೆಂಡ್, ಮಿಶನರಿಗಳು ಅನ್ಯದೇಶೀಯ ಬಾಸೆಲ್ ಮಿಶನ್ ಕೂಟದವರಾದರೂ ಅವರ ನೆನಪು ದಕ್ಷಿಣ ಕನ್ನಡಕ್ಕೆ ರತ್ನಾಕರಸಿದ್ಧರೇ ಮೊದಲಾದ ಮಹಾಕವಿಗಳ ಸ್ಮರಣೆಗಿಂತ ಸಾಹಿತ್ಯಸೇವಾದೃಷ್ಟಿಯಲ್ಲಿ ಕಡಿಮೆಯಾಗಿಲ್ಲ"[18] ಎಂದು ಎಮ್. ಎನ್. ಕಾಮತ್ ಅವರು ಹೇಳಿದ್ದಾರೆ.

**ಹುಯಿಲಗೋಳ ವರದರಾಜ**

## ಈ ಲೇಖನಕ್ಕೆ ಸಹಾಯಕ ಗ್ರಂಥಗಳು ಮತ್ತು ಲೇಖನಗಳು :—


(೧) *Karnataka Darshana—volume presented to Sri R. R. Diwakar.*

ಇದರಲ್ಲಿ Rev. C. D. Uttangi ಅವರು ಬರೆದ Contribution of Christian Missionaries for the development of Karnatak ಎಂಬ ಲೇಖನ

(೨) **ಪಂಚಕಜ್ಜಾಯ**—೧೩ ನೆಯ ಕರ್ನಾಟಕ ಸಾಹಿತ್ಯ ಸಮ್ಮೇಲನ, ಮಂಗಳೂರ ಪತ್ರಿಕೆ

(೩) **ತೆಂಕನಾಡು**—೩೧ ನೆಯ ಕನ್ನಡಸಾಹಿತ್ಯ ಸಮ್ಮೇಲನ, ಕಾಸರಗೋಡ ಪತ್ರಿಕೆ

(೪) **ಯುಗಪುರುಷ**—ಸಂಪುಟ ೯, ಸಂಚಿಕೆ ೧+೨, ಇದರಲ್ಲಿ ಎಸ್. ಕಾಮತ ಅವರು ಬರೆದ "ಕನ್ನಡದ ಸೇವೆಯನ್ನು ಗೈದ ಪರಕೀಯರು" ಎಂಬ ಲೇಖನ

(೫) **ನಮ್ಮ ಸಾಹಿತ್ಯ**—ಬಿ. ಶಂಕರಭಟ್ಟ ಮತ್ತು ಬಿ. ಎಮ್. ಶರ್ಮಾ

(೬) *Kanarese Literature*—E. P. Rice

(೭) **ಕವಿಚರಿತೆ**—Vol III, ಆರ್. ನರಸಿಂಹಾಚಾರ್ಯ

(೮) **೧೯ ನೇ ಶತಕದಲ್ಲಿ ಕನ್ನಡದ ಬೆಳವಣಿಗೆ**—ಎಸ್. ಪಿ. ಪಾಟೀಲ, ಕರ್ಮವೀರ, ೨೨-೪-೧೯೫೭

(೯) **ಹೊಸಗನ್ನಡ ನುಡಿಗನ್ನಡಿ**—ಕೃಷ್ಣಮಾಚಾರಿ (೧೮೮೨)

(೧೦) *A Grammar of the Carnataca Language*—John Mekerrell, 1820. ಕರ್ನಾಟಕ ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿದ್ದ ಇದರ Preface

(೧೧) **ಶಬ್ದಮಣಿ ದರ್ಪಣ**—edited by J. Garrett

(೧೨) ವಿಲಿಯಂ ರೀವ್ ಅವರ ಶಬ್ದಕೋಶಗಳು


---

[17] Kanarese Literature, by E. P. Rice, page 101.

[18] ಪಂಚಕಜ್ಜಾಯ, ಪುಟ, ೧೬೭.

(೧೩) ಕಿಟ್ಟೆಲ್ ಅವರ ಶಬ್ದಕೋಶ

(೧೪) ಝೀಗ್ಲರ ಅವರ ಶಬ್ದಕೋಶ

(೧೫) ಇಸೋಫನ ನೀತಿಯ ಕಥೆಗಳು

(೧೬) ಕನ್ನಡ ಗಾದೆಗಳು

(೧೭) *Canarese Poetical Anthology* by Rev. G. Warth.

(೧೮) ಪಂಚಕಜ್ಜಾಯ, ಪುಟ. ೧೬೭

# ಸಂಗೀತದಲ್ಲಿ ಧ್ವನಿಯ ಆಲೋಕ

ಧ್ವನಿ ಎಂದರೆ ಶಬ್ದ ಎಂಬುದು ಎಲ್ಲರೂ ತಿಳಿದ ಅರ್ಥ. ಆದರೆ ಸಂಗೀತ ಸಾಹಿತ್ಯ ಕಲೆಗಳಲ್ಲಿ ಧ್ವನಿ ಎಂಬ ಪದಕ್ಕೆ ವಿಶೇಷಾರ್ಥವಿದೆ. ರಣನಾನುರಣನವಾದ ಶಬ್ದವೇ ಧ್ವನಿ ಎಂದು ಧ್ವನಿಗೆ ವಿಶೇಷ ಲಕ್ಷಣವನ್ನು ಹೇಳುವುದುಂಟು. ಮೊದಲು ಕೇಳಿದ ಧ್ವನಿ ಪ್ರತಿಧ್ವನಿಸಿದಾಗ ಅಂಥ ಪ್ರತಿಧ್ವನಿ (echo) ಯೇ ಧ್ವನಿ ಎಂದು ಕೆಲವರು ತಿಳಿದುಕೊಂಡಿರುವುದುಂಟು. ಕಲೆಯ ಧ್ವನಿ ಇಂಥ ಪ್ರತಿಧ್ವನಿಯಲ್ಲ. ಏಕೆಂದರೆ ಲೋಕದ ಶಬ್ದಗಳು ಕೆಲವು ಸಂದರ್ಭಗಳಲ್ಲಿ ಮರುಧ್ವನಿಯನ್ನು ಹುಟ್ಟಿಸುತ್ತವೆ. ಇವು ಕೇವಲ ಭೌತಿಕವಾದ ಅನುಕರಣ ಶಬ್ದಗಳು. ಕಲೆಯ ಧ್ವನಿ ಈ ಬಗೆಯ ಅನುಕರಣ ಧ್ವನಿಯಲ್ಲ. ಸ್ವಾವಲಂಬನ ಅನುರಣನ ಧ್ವನಿ; ತಾನೇ ಸೃಷ್ಟಿಸಿದ ನಾದ ತನುವಿನಲ್ಲಿ, ನಾದ ವಿಗ್ರಹದಲ್ಲ ತಾನೇ ಅನುಪ್ರವೇಶಮಾಡಿ ತನ್ನ ಅಂತರಂಗಭಾವವನ್ನು ಆ ವಿಗ್ರಹದಲ್ಲಿ ರಣನಾನುರಣಿಸುವುದೇ ಕಲೆಯ ಧ್ವನಿ[1]. ಅದು ಕಲೆಗಾರನ ಪ್ರತಿಭೆಯಿಂದ ಸೃಷ್ಟಿಯಾದ ಧ್ವನಿ. ಬಾಹ್ಯಾರ್ಥದಿಂದ ನಿವೃತ್ತಿಯಾಗಿ ಧ್ಯಾನಾರೂಢವಾದ ಹೃದಯದ ಅಂತರಾಳದಿಂದ (ಆಕಾಶದಿಂದ) ಹೊರಹೊಮ್ಮಿದ ಶಬ್ದ. ಆದ್ದರಿಂದ ಈ ಶಬ್ದವು ಬಾಹ್ಯಾರ್ಥಸಾಧನವಾದ, ಲೋಕವ್ಯವಹಾರ ಯೋಗ್ಯವಾದ ಶಬ್ದವಲ್ಲ. ನಮ್ಮ ಪ್ರಾಣದಲ್ಲಿ ಅನಾದಿಯಾಗಿ ಲೀನವಾದ, ಲೌಕಿಕ ಜೀವನದಲ್ಲಿ ನಮಗೆ ಅರಿವಾಗದ ಭಾವಗಳನ್ನು ಹೊರಹೊಮ್ಮಿಸಿ, ಲೌಕಿಕ ವಸ್ತುಗಳು ನಮಗೆ ಪ್ರತ್ಯಕ್ಷವಾಗಿ ಕಾಣುವಂತೆ ನಮ್ಮ ಒಳಭಾವಗಳನ್ನು ನಮಗೆ ಸಾಕ್ಷಾತ್ಕಾರಮಾಡಿ ಕೊಡುವ, ನಮ್ಮ ಚಿತ್ತಭಿತ್ತಿಯ ಮೇಲೆ ಆಟವಾಡಿದಂತೆ ನರ್ತಿಸಿದಂತೆ ತೋರಿಸುವ ಭಾವ ಸಾಧನ.[2] ನಮ್ಮ ಒಳಪ್ರಯತ್ನದಿಂದ ಸೃಷ್ಟಿಯಾಗಿ, ನಮ್ಮ ಅರಿವಿನ ಅರ್ಥವಾಗಿ, ನಮ್ಮಿಂದ ಅವಲೋಕಿತವಾಗಿ, ನಮ್ಮಲ್ಲಿ ಆನಂದವನ್ನು ಮೂಡಿಸಿ ಪುನಃ ನಮ್ಮಲ್ಲೇ ಅಡಗಿಕೊಳ್ಳುವ ಇದನ್ನು ಸ್ವಾಭಿಧಾನ, ಸ್ವಾಭಿನಯ, ಸ್ವಯಂವೇದ್ಯ, ಸ್ವಸಂವೇದ್ಯ ಎಂದು ಪಾರಿಭಾಷಿಕವಾಗಿ ಪರಿಪರಿಯಾಗಿ ವರ್ಣಿಸುವುದುಂಟು.[3]

ಈ ಅಲೌಕಿಕವಾದ ಅಂದರೆ ಲೋಕರೂಢವಲ್ಲದ ಶಬ್ದಾರ್ಥವಾದ ಧ್ವನಿಯನ್ನು ಕಾವ್ಯಕ್ಕೆ ಅನ್ವಿತವಾದಂತೆ ಹಿಂದಿನ ಕಾಲದಿಂದ ಅವಿಚ್ಛಿನ್ನವಾದ ಸಂಪ್ರದಾಯ ಪರಂಪರೆಯ ಮೂಲಕ ವಿದ್ವಾಂಸರು ಪ್ರತಿಪಾದಿಸಿರುತ್ತಾರೆ ಎಂದು ಆನಂದವರ್ಧನನು ಧ್ವನ್ಯಾಲೋಕದ ಮೊದಲನೆಯ ಕಾರಿಕೆಯಲ್ಲಿ ತಿಳಿಸಿರುತ್ತಾನೆ.[4] ಧ್ವನಿಯ ಮುಖ್ಯ ಲಕ್ಷಣಗಳು ಇವು: ೧. ಧ್ವನ್ಯರ್ಥ ವಾಚ್ಯಾರ್ಥಕ್ಕಿಂತ ಬೇರೆಯಾದದ್ದು; ವಾಚ್ಯಾರ್ಥಕ್ಕೆ ವಿಮುಖವಾದದ್ದು.[5] ಲೌಕಿಕವಾದ ಭಾವ

---

[1] ನಾದತನುಂ, ನಾದವಿಗ್ರಹಂ, ತತ್ಸೃಷ್ಟ್ವಾ ತದೇವಾನುಪ್ರವಿಶತ್ ಇತಿ ಶ್ರುತೇಃ. ಆತ್ಮಾ ಮಹಾಭೂತಾನಿ ಸೃಷ್ಟ್ವಾ ತಾನ್ಯನುಪ್ರವಿಶ್ಯ ತದಭಿಮಾನತ್ವೇನ ವಿರಾಡಿತ್ಯುಚ್ಯತೇ. ಸಂಗೀತರತ್ನಾಕರ, ಅಡ್ಯಾರ್ ಲೈಬ್ರೆರಿ, ಮದ್ರಾಸ್, ೧೯೪೩, ಪುಟ ೨೮.

[2] ಅಯಂ ಶಬ್ದಜ್ಞೈರ್ಭಾವಸಾಧನಃ. ಮತಂಗ, ಬೃಹದ್ದೇಶೀ, ತಿರುವೇಂದ್ರಂ ಸಂಸ್ಕೃತಮಾಲಾ, ತಿರುವೇಂದ್ರಂ, ೧೯೨೮, ಪುಟ ೪.

[3] ಸ್ವಸಂವೇದ್ಯೇ ಪರಮೇ ಶ್ರುತಿಧಾಮ್ನಿ ಸಮವಧಾನಂ ಜಪವದ್ಧಿಯಮಾನಂ 'ವಿಶಿಷ್ಟಾದೃಷ್ಟಾಯ ಪ್ರಯೋಕ್ತುರ್ಭವತಿ ಇತಿ ದರ್ಶಿತಮ್. ಹೀಗೆ ವಿಶಾಖಿಲಾಚಾರ್ಯರು ಸಂಗೀತ ಶಬ್ದವನ್ನು ನಿರೂಪಿಸಿರುತ್ತಾರೆ. ಭಟ್ಟತೋತನು ಇದನ್ನು "ಸ್ವರಃ ಸ್ವಸಂವೇದ್ಯಾ' ಎಂದು ಸಂಗ್ರಹವಾಗಿ ಅನುವಾದಮಾಡಿರುತ್ತಾನೆ. ಈ ವಾಕ್ಯಗಳನ್ನು ಅಭಿನವಗುಪ್ತನು ಅಭಿನವಭಾರತಿಯಲ್ಲಿ ತನ್ನ ಮತವನ್ನು ಸ್ಥಾಪಿಸಲು ಆಧಾರಗಳಾಗಿ ಸ್ಮರಿಸಿರುತ್ತಾನೆ. ನಾಟ್ಯಶಾಸ್ತ್ರ, ನಾಲ್ಕನೆಯ ಸಂಪುಟ, ಗಾಯಕವಾಡ್‌ಮಾಲೆ, ಬರೋಡ, ೧೯೬೪, ಪುಟ ೧೭.

[4] ಧ್ವನಿರಿತಿ ಬುಧೈರ್ಯಸ್ಸಮಾಮ್ನಾತಪೂರ್ವಃ.

[5] ವಾಚ್ಯಾರ್ಥವಿಮುಖಾತ್ಮನಾಮ್. ಧ್ವನ್ಯಾಲೋಕ, ಕಾರಿಕೆ, ೧೨.

ವನ್ನು ರಸಮಯವಾಗಿ ಅಭಿವ್ಯಕ್ತವಾದಂತೆ ತೋರಿಸುವಂಥಾದ್ದು. ಇದು ಶಾಸ್ತ್ರಾರ್ಥವನ್ನು ತೋರಿಸುವ ತರ್ಕಬುದ್ಧಿಯಿಂದ ತಿಳಿಯಲಾಗದ್ದು; ಕೇವಲ ನಿಘಂಟು ಮತ್ತು ವ್ಯಾಕರಣ ನಿಯಮಗಳ ಮಾತ್ರದಿಂದಲೇ ಇದು ತಿಳಿಯಲಾಗದ್ದು;[6] ಭಾವಪ್ರಕಾಶನ ಪ್ರತಿಭೆಯಿಂದ ಮಾತ್ರ ತಿಳಿಯಬೇಕಾದದ್ದು.[7] ಈ ಲಕ್ಷಣಗಳನ್ನು ಬಹುಶಃ ಎಲ್ಲರೂ ಒಪ್ಪುತ್ತಾರೆ. ಕೆಲವರು ಇವುಗಳಿಗಿಂತ ಹೆಚ್ಚು ಅಂಶಗಳನ್ನು ಗಮನಿಸಿ, ಆ ಸೂಕ್ಷ್ಮಾಂಶಗಳ ಆಧಾರದ ಮೇಲೆ ಭಿನ್ನಮತಗಳನ್ನು ಏರ್ಪಡಿಸಿಕೊಂಡಿರುತ್ತಾರೆ. ಈ ಸೂಕ್ಷ್ಮ ಭೇದಗಳೂ ಅವುಗಳ ಮೇಲೆ ಹುಟ್ಟಿದ ಮತಭೇದಗಳೂ ಪ್ರಸ್ತುತವಲ್ಲ.

ಈ ಧ್ವನಿವಿವೇಕ ಕೇವಲ ಕಾವ್ಯಮೀಮಾಂಸೆಗೆ ಮಾತ್ರ ವಿಶಿಷ್ಟವಾದದ್ದು ಎಂಬ ಭಾವನೆ ಈಗಿನ ಭಾರತೀಯರಲ್ಲಿ ತುಂಬ ವ್ಯಾಪಕವಾಗಿದೆ. ಸಕಲ ಕಲೆಗಳಲ್ಲೂ ಧ್ವನಿಯೇ ಮುಖ್ಯವಾದ ಅರ್ಥವೆಂಬ ಭಾವನೆ ಇರುವುದಿಲ್ಲ. ನಾನು ಸಂಗೀತದಲ್ಲಿನ ಧ್ವನಿವಿವೇಕವನ್ನು ಪ್ರಸ್ತಾಪಿಸಿದಾಗ ನನ್ನ ಅರಿವುಮರುಳಿರಬೇಕೆಂದು ಆಶ್ಚರ್ಯಪಟ್ಟವರೂ ಉಂಟು. ಇತರ ಕಲೆಗಳ ಮೀಮಾಂಸಕರೂ ಈ ಅರ್ಥವನ್ನು ವಿವೇಚಿಸಿರಬಹುದೆಂಬ ಸೂಚನೆ ಕೂಡ ಇವರಿಗೆ ಅಸಂಭಾವ್ಯ. ಒಂದು ಪಕ್ಷ ಇತರ ಕಲೆಗಳ ಮೀಮಾಂಸಕರು ಇದನ್ನು ವಿವೇಚಿಸಬೇಕಾದರೆ ಅವರಿಗೆ ಕಾವ್ಯಮೀಮಾಂಸಕರ ನಿರ್ದೇಶನವಿಲ್ಲದೆ ಅದು ಹೇಗೆ ಸಾಧ್ಯವೆಂಬ ಅಭಿಮಾನ ತಾನೇ ತಾನಾಗಿದೆ. ಅಂತೂ ಸಂಗೀತದಲ್ಲಿ ಧ್ವನಿವಿವೇಕವನ್ನು ಕುರಿತು ಸಂಶಯವಾದ (Scepticism) ಪ್ರಸ್ತುತ ಸ್ಥಿತಿಯಲ್ಲಿ ಪ್ರಬಲವಾಗಿದೆ. ಇಂದಿನ ಸಂಗೀತ ವಿದ್ವಾಂಸರೂ ಕೂಡ ಸಾಮಾನ್ಯವಾಗಿ ಸಂಶಯವಾದಿಗಳೇ. "ಇದೇನಿದ್ದರೂ ಕಾವ್ಯಮೀಮಾಂಸಕರ ಅವಾಂತರಾರ್ಥ. ಈ ಅವಾಂತರವನ್ನು ಸಂಗೀತದೊಳಕ್ಕೆ ತರಬೇಡಿ" ಎಂದು ಹೇಳಿದ ಸಂಗೀತಗಾರರೂ ಇರುತ್ತಾರೆ.

ಈ ವಿಧವಾದ ಸಂಶಯವಾದ ತುಂಬ ಹಿಂದಿನ ಅಂದರೆ ಕ್ರಿ.ಶ. ಎಂಟರಿಂದ ಹದಿಮೂರನೆಯ ಶತಮಾನದವರಾದ ನಮ್ಮ ಪೂರ್ವವಂಶೀಯರಲ್ಲಿ ಇರಲಿಲ್ಲ. ಕಾವ್ಯವೇದಿಗಳಿಗೂ ಸಂಗೀತ ನಾಟ್ಯನೃತ್ತವೇದಿಗಳಿಗೂ ಈಗಿನ ಕಾಲದಲ್ಲಿರುವಂತೆ ಅಗಾಧವಾದ ಅಂತರವಿರಲಿಲ್ಲ. ಆಗಿನ ಸಾಹಿತ್ಯ ಮೀಮಾಂಸಕರು ಇತರ ಕಲೆಗಾರರನ್ನೂ ಕಲಾವೇದಿಗಳನ್ನೂ ಈಗಿನವರಂತೆ ಅಸಂಸ್ಕೃತರೆಂದು ಭಾವಿಸಿರಲಿಲ್ಲ. ಹಾಗೆ ಭಾವಿಸಲು ಇತರ ಕಲಾವೇದಿಗಳೂ ಅವಕಾಶಕೊಡುತ್ತಿರಲಿಲ್ಲ. ಇವರೆಲ್ಲರೂ ಸರಿಸಮಾನವಾದ ವಿದ್ವತ್ತನ್ನು ಪಡೆದು, ಒಂದೇ ವೇದಿಕೆಯ ಮೇಲೆ ಸೇರಿ ವಿಚಾರ ವಿನಿಮಯಮಾಡುತ್ತಿದ್ದರು. ಸಾಹಿತ್ಯಮೀಮಾಂಸೆಯನ್ನು ಕುರಿತು ಎಷ್ಟು ಪ್ರೌಢಗ್ರಂಥಗಳು ಹುಟ್ಟಿದ್ದುವೋ ನೃತ್ಯ, ನೃತ್ತ, ಗೀತ, ಶಿಲ್ಪ, ಚಿತ್ರ ಮುಂತಾದ ಕಲೆಗಳ ತತ್ತ್ವವನ್ನು ಕುರಿತು ಅಷ್ಟೇ ಪ್ರೌಢವಾದ ಗ್ರಂಥಗಳು ಹುಟ್ಟಿದ್ದುವು. ದತ್ತಿಲ, ಕೋಹಲ, ಕಾಶ್ಯಪ, ಯಾಷ್ಟಿಕ, ಮತಂಗ, ನಾರದ, ಶಾರ್ಙ್ಗದೇವ, ಸೋಮೇಶ್ವರ, ಕಲ್ಲಿನಾಥಾದಿಗಳ ಸಂಗೀತ ಶಾಸ್ತ್ರ ವಿವೇಚನೆ ಭಾಮಹ, ದಂಡಿ, ವಾಮನ, ಉದ್ಭಟ, ಆನಂದವರ್ಧನ, ಅಭಿನವಗುಪ್ತಾದಿ ಕಾವ್ಯಮೀಮಾಂಸಕರ ವಿವೇಚನೆಗೆ ಸರಿತೂಗುವಂಥಾದ್ದು.

ಒಂದು ಕಲೆಯ ವಿಚಾರದಲ್ಲಿ ಒಂದು ಪ್ರಸ್ಥಾನ—ಅಲಂಕಾರ ಪ್ರಸ್ಥಾನವೋ ಗುಣ ಪ್ರಸ್ಥಾನವೋ, ಧ್ವನಿಪ್ರಸ್ಥಾನವೋ—ಉದಯಿಸಿದಾಗ ಅದೇ ಸರಿಸುಮಾರಿನಲ್ಲಿ ಇತರ ಕಲೆಗಳ ವಿಚಾರದಲ್ಲೂ ಅದೇ ಭಾವನೆಗಳು ಉದಯಿಸಿದ್ದನ್ನು ಆಯಾ ಕಾಲದ ಆಯಾ ಕಲೆಯ ಗ್ರಂಥಗಳನ್ನು ಪರಾಮರ್ಶಿಸಿದಾಗ ಸ್ಪಷ್ಟವಾಗುತ್ತದೆ. ವಿವಿಧ ಕಲೆಗಳನ್ನು ತುಲನಾತ್ಮಕ ದೃಷ್ಟಿ (Comparative standpoint)ಯಿಂದ ವೀಕ್ಷಿಸಿ ಎಲ್ಲ ಕಲೆಗಳ ಮೂಲಭೂತ ತತ್ತ್ವವನ್ನು ನಿರೂಪಿಸುವ ಕಲೆಯ ಮೀಮಾಂಸೆ ನಮ್ಮಲ್ಲಿ ಇನ್ನೂ ತುಂಬ ಶೈಶವಾವಸ್ಥೆಯಲ್ಲಿದೆ. ಭಾರತೀಯ ಕಲಾಮೀಮಾಂಸೆಯನ್ನು ಸ್ಥಾಪಿಸಲು ಅನುಕೂಲವಾದ ಆಧಾರ ಸಾಮಗ್ರಿ ನಮ್ಮಲ್ಲಿ ಹೇರಳ

6 ಶಬ್ದಾರ್ಥಶಾಸನಜ್ಞಾನಮಾತ್ರೇಣೈವ ನ ವೇದ್ಯತೇ. ಧ್ವನ್ಯಾಲೋಕ, ಕಾರಿಕೆ ೭.

7 ಆಲೋಕಸಾಮಾನ್ಯಮಭಿವ್ಯನಕ್ತಿ ಪರಿಸ್ಫುರಂತಂ ಪ್ರತಿಭಾವಿಶೇಷಮ್. ಧ್ವನ್ಯಾಲೋಕ, ಕಾರಿಕೆ ೬.

11976



ವಾಗಿದೆ. ವಿಷ್ಣುಧರ್ಮೋತ್ತರ ಮುಂತಾದ ಪುರಾಣಗಳ ಕಲೆಯ ಭಾಗದಲ್ಲಿ ಕಲೆಗಳ ಪರಸ್ಪರ ಸಂಬಂಧ ಮತ್ತು ಆಲಂಬನದ ವಿವೇಚನೆ ಇದೆ. ಕಲೆಯ ಮೀಮಾಂಸೆಯಲ್ಲಿ ಒಂದು ಮುಖ್ಯವಾದ ಧ್ವನಿತತ್ತ್ವ ಕಾವ್ಯಮೀಮಾಂಸೆಯಲ್ಲಿರುವಂತೆ ಸಂಗೀತಮೀಮಾಂಸೆಯಲ್ಲೂ ಯಾವ ಬಗೆಯಾಗಿ, ಯಾವ ಸಂಗೀತ ಗ್ರಂಥಗಳಲ್ಲಿ ಹುಟ್ಟಿ ಬೆಳೆಯಿತೆಂಬುದನ್ನು ಸಂಗ್ರಹವಾಗಿ ತಿಳಿಸುವುದು ಈ ಸಂಶೋಧನ ಲೇಖನದ ಉದ್ದೇಶ.

೧

ನನಗೆ ಭಾರತೀಯರ ಧ್ವನಿವಿವೇಚನೆ ಮೊದಲು ಪರಿಚಯವಾದದ್ದು ಕಾವ್ಯಮೀಮಾಂಸಾ ಗ್ರಂಥವಾದ ಧ್ವನ್ಯಾಲೋಕದ ಮೂಲಕ. ಈ ಗ್ರಂಥದಲ್ಲಿ ನನಗೆ ಆಸಕ್ತಿ ಹುಟ್ಟಲು ಕಾರಣ ತತ್ಸದೃಶವಾದ ಪಾಶ್ಚಾತ್ಯರ ಕಾವ್ಯಾರ್ಥವಿವೇಚನೆ. ಐ. ಎ. ರಿಚರ್ಡ್ಸ್ ಅವರು ಈ ಕಾವ್ಯವಿಶೇಷದ ಪ್ರಸಿದ್ಧ ಪ್ರತಿಪಾದಕರು. ಇವರು ಕಾವ್ಯದಲ್ಲೇ ಅಲ್ಲದೆ ಸಂಗೀತ ಮುಂತಾದ ಇತರ ಕಲೆಗಳಲ್ಲೂ ಅದೇ ಬಗೆಯ ಅರ್ಥ ಕಾಣುತ್ತದೆ ಎಂಬುದನ್ನು ಪ್ರಾಸಂಗಿಕವಾಗಿ 'ಮೀನಿಂಗ್ ಆಫ್ ಮೀನಿಂಗ್' ಮತ್ತು 'ಪ್ರಿನ್ಸಿಪಲ್ಸ್ ಆಫ್ ಲಿಟರರಿ ಕ್ರಿಟಿಸಿಸಂ' ಎಂಬ ತಮ್ಮ ಗ್ರಂಥಗಳಲ್ಲಿ ಸೂಚಿಸಿರುತ್ತಾರೆ. ಮಿಕ್ಕೆಲ್ಲ ಕಲೆಗಳಿಗಿಂತಲೂ ಸಂಗೀತದಲ್ಲಿ ಆ ಅರ್ಥವಿಶೇಷವು ಸ್ಪಷ್ಟವಾಗಿ ಕಾಣುತ್ತದೆಯೆಂದೂ, ಸಂಗೀತದಲ್ಲಿ ಅದು ಏರಿರುವ ಮಟ್ಟವನ್ನು ಸಮೀಪಿಸಲು ಇತರ ಕಲೆಗಳು ತಪಿಸುತ್ತವೆ ಎಂದು ಮೊಟ್ಟಮೊದಲಿಗೆ ಘೋಷಿಸಿದವನು ಆರ್ಥರ್ ಷೋಪೆನ್‌ಹಾರ್. ಇವನ ಸೂಚನೆಯನ್ನು ಅರ್ನೆಸ್ಟ್ ಕ್ಯಾಸೀರರ್, ಎ. ಎನ್. ವೈಟೆಡ್ ಮುಂತಾದವರು ಬೆಳೆಸಿದರು. ಇವರಿಬ್ಬರ ಶಿಷ್ಯೆಯಾದ ಎಸ್. ಕೆ. ಲ್ಯಾಂಗರ್ ಎಂಬ ಅಮೆರಿಕದ ಹೆಸರುವಾಸಿಯಾದ ಕಲೆಯ ಮೀಮಾಂಸಕಳು ಸಂಗೀತದ ಅರ್ಥವಿಶೇಷವನ್ನು ಎಲ್ಲ ಕಲೆಗಳಿಗೂ ತಳಹದಿಯಾದ ಅರ್ಥತತ್ತ್ವವನ್ನು ತೆರೆದು ತೋರಿಸಲು ಬೀಗದಕೈಯಾಗಿ ಉಪಯೋಗಿಸಿಕೊಂಡಿರುತ್ತಾಳೆ.[8]

ಈಕೆಯ ಮತ್ತು ಇದೇ ವಿಧವಾದ ನಿಲುವನ್ನು ತಳೆದಿರುವ ಇನ್ನೂ ಅನೇಕ ಗ್ರಂಥಗಳಿಂದ ಪ್ರಚೋದಿತನಾಗಿ, ನಮ್ಮಲ್ಲೂ ಇಂಥ ನಿಲುವಿನ ಸೂಚನೆಗಳಿವೆಯೇ ಎಂಬುದನ್ನು ಪರಿಶೀಲಿಸುವ ಇಚ್ಛೆಯುಂಟಾಯಿತು. ಧ್ವನ್ಯಾಲೋಕವನ್ನು ಕಣ್ಣಿಟ್ಟು ನೋಡಿದಾಗ ಆನಂದವರ್ಧನನೇ ಧ್ವನಿಯನ್ನು ವಿಶಾಲವಾದ ನಿಟ್ಟಿನಲ್ಲಿ ಅವಲೋಕಿಸಿದುದಾಗಿ ಕಂಡುಬಂದಿತು. ಮೊದಲನೆಯ ಉದ್ಯೋತದ ಏಳನೆಯ ಕಾರಿಕೆಯಲ್ಲಿ ಶಬ್ದಾರ್ಥಶಾಸನಜ್ಞಾನ ಮಾತ್ರದಿಂದಲೇ ಕಾವ್ಯದ ಧ್ವನಿವಿಶೇಷ ಗೋಚರವಾಗುವುದಿಲ್ಲ ಎಂದು ಹೇಳಿದೆ. ಇದನ್ನು ವೃತ್ತಿಯಲ್ಲಿ ಮತ್ತಷ್ಟು ಸ್ಪಷ್ಟಗೊಳಿಸುವುದಕ್ಕಾಗಿ ಅವನು ಸಂಗೀತಾರ್ಥದ ಕಡೆಗೆ ನಮ್ಮ ಗಮನವನ್ನು ಸೆಳೆಯುತ್ತಾನೆ. ಸ್ವರ, ಶ್ರುತಿ ಮುಂತಾದ ಸಂಗೀತಶಾಸ್ತ್ರದ ಪ್ರಕ್ರಿಯೆಗಳನ್ನು ಮಾತ್ರ ಓದಿಕೊಂಡವರಿಗೆ ಹಾಡುಗಳ ವ್ಯಂಗ್ಯಾಂಶವು ತಿಳಿಯದೇ ಹೋಗುವಂತೆ ಕಾವ್ಯದಲ್ಲಾದರೂ ಪ್ರತೀಯಮಾನಾಂಶವು ವಿಶಿಷ್ಟವಾದ ರಸಿಕತೆಯಿಲ್ಲದೆ ತಿಳಿಯಲಾರದು ಎಂದು ಹೇಳುತ್ತಾನೆ.[9] ಇದರಿಂದ ಮೂರು ವಿಷಯಗಳು ಸ್ಪಷ್ಟಪಡುತ್ತವೆ. ಸಂಗೀತದಲ್ಲೂ ವ್ಯಂಗ್ಯಾರ್ಥವಿದೆ ಎಂಬುದು ಒಂದು. ರಸದ ಇಂಗಿತವಿದ್ದರೆ ಮಾತ್ರ ಆ ಅರ್ಥ ಗೋಚರವಾಗುತ್ತದೆ ಎಂಬುದು ಎರಡನೆಯದು. ಈ ಕಾವ್ಯಾರ್ಥವಿಶೇಷವನ್ನು ಸ್ಪಷ್ಟಪಡಿಸಲು ಸಂಗೀತದ ಉಪಮಾನವನ್ನು ಕೊಟ್ಟಿರುವುದರಿಂದ ಆಗ್ಗೆ ಆಗಲೇ

---

[8] We have here a principle of analysis that may be applied within each separate gender in explaining its peculiar choice and use of material ; a criterion of what is or is not relevant in any realm, a direct exhibition of the unity of arts . . . I believe the analysis of musical significance is capable of furnishing a valid theory of significance for the whole Parnassus. *Feeling and Form*, Routledge and Kegan Paul, London, 2nd impression, (1954), p 24.

[9] ಧ್ವನ್ಯಾಲೋಕದ ಏಳನೆಯ ಕಾರಿಕೆಯ ಮೇಲಿನ ವೃತ್ತಿಭಾಗವನ್ನು ನೋಡಿ. ಕೆ. ಕೃಷ್ಣಮೂರ್ತಿ, ಧ್ವನ್ಯಾಲೋಕ ಮತ್ತು ಲೋಚನಸಾರ, ಶಾರದಾ ಮಂದಿರ, ಮೈಸೂರು, (೧೯೬೧) ಪುಟ, ೨೧.

ಸಂಗೀತದ ವ್ಯಂಗ್ಯಾರ್ಥದ ಅರಿವು ಸಾಮಾನ್ಯವಾಗಿರಬೇಕು ಎಂಬದು ಮೂರನೆಯದು. ಹೆಚ್ಚು ಬಳಕೆಯಲ್ಲಿರುವುದಕ್ಕೆ ಹೋಲಿಸಿ ಹೆಚ್ಚು ಬಳಕೆಯಲ್ಲಿಲ್ಲದ್ದನ್ನು ವಿಶದಪಡಿಸುವುದೇ ಅಲ್ಲವೆ ಉಪಮಾರೀತಿ? ಮೂರನೆಯ ಉದ್ಯೋತದಲ್ಲಿ ಧ್ವನಿತತ್ತ್ವದ ಮೇಲೆ ಪ್ರತಿಪಕ್ಷದ ಧಾಳಿ ಅತ್ಯುಗ್ರವಾದ ಸಂದರ್ಭದಲ್ಲಿ ಆನಂದವರ್ಧನನು ವಾಚಕತ್ವವಿರುವ ಪದದ ಸುಳಿವೇ ಇಲ್ಲದ ರಾಗಾಲಾಪನೆಯಲ್ಲಿ ಕಾಣುವ ಅರ್ಥಾಂತರಬೋಧಬಾಹುಳ್ಯದ ಕಡೆಗೆ ಪ್ರತಿಪಕ್ಷದವರ ಗಮನವನ್ನು ಸೆಳೆದು ಅವರ ವಾದವನ್ನು ಹತಗೊಳಿಸಲು ಸಂಗೀತದ ವ್ಯಂಗ್ಯಾರ್ಥ ತತ್ತ್ವವನ್ನು ಬ್ರಹ್ಮಾಸ್ತ್ರವಾಗಿ ಉಪಯೋಗಿಸಿರುತ್ತಾನೆ[10]. ಅಲ್ಲಿ ಅವನು ಹೇಳಿರುವುದನ್ನು ಹೀಗೆ ಸಂಗ್ರಹಿಸಬಹುದು: ರಾಗಾಲಾಪನೆಯಲ್ಲಿ ಪದಗಳ ಪ್ರಯೋಗವೇ ಇಲ್ಲ. ಅಲ್ಲಿ ಇರುವುದೆಲ್ಲ ಕೇವಲ ನಾದಮಾತ್ರವೇ. ಅದರಿಂದ ಹೊರಡುವ ರಸಾದಿವ್ಯಂಗ್ಯವೇ ಅದರ ಜೀವಾಳ. ಇಲ್ಲಿ ವಾಚಕ ಮತ್ತು ಲಕ್ಷಣಗಳ ಪ್ರಸಕ್ತಿಯೇ ಇಲ್ಲ.

ಇಷ್ಟಕ್ಕೇ ನಿಲ್ಲದೆ ಆನಂದವರ್ಧನನು ನಾದರೂಪ ಕೂಡ ಅಲ್ಲದ ಕೇವಲ ಕಟಾಕ್ಷವೀಕ್ಷಣ ಮುಂತಾದ ಅಭಿನಯಾದಿಗಳೂ ವ್ಯಂಗ್ಯಾರ್ಥಗಳೆಂಬುದನ್ನು ಸೂಚಿಸಿ, ಕಾವ್ಯಾರ್ಥದ ವ್ಯಂಗ್ಯಸ್ವರೂಪವನ್ನು ಸಮರ್ಥಿಸುತ್ತಾನೆ. ಹೀಗೆ ಧ್ವನಿಕ್ಷೇತ್ರ ಇತರ ಕಲೆಗಳನ್ನೂ ಒಳಗೊಳ್ಳುವಷ್ಟು ವಿಶಾಲವೆಂಬುದು ಸ್ಪಷ್ಟವಾಗುತ್ತದೆ. ಆನಂದವರ್ಧನನಿಗಿಂತ ಒಂದು ಹೆಜ್ಜೆ ಮುಂದಿಟ್ಟರೆ, ಶಿಲ್ಪ, ಚಿತ್ರ ಮತ್ತು ವಾಸ್ತುಶಿಲ್ಪಗಳಸಂಕೇತಗಳೂ ವ್ಯಂಜಕಗಳೇ ಎಂಬ ತತ್ತ್ವವನ್ನು ಎಟಕಿಸಿಕೊಳ್ಳಬಹುದು. ಈ ದೃಷ್ಟಿಯಿಂದಲೇ ಚಿತ್ರಮೀಮಾಂಸಕರು ಭಾವಚಿತ್ರವೆಂಬ ಚಿತ್ರಭೇದವನ್ನು ಕಲ್ಪಿಸಿ, ಅಂಥ ಚಿತ್ರದ ಭಾವ ಪ್ರಕಾಶನವನ್ನು ಮುತ್ತಿನಲ್ಲಿ ಓಡಾಡುವ ಬೆಳಕಿಗೆ ಹೋಲಿಸಿರುತ್ತಾರೆ.[11] ಇದನ್ನೇ ತರಂಗಾಯಮಾನರೂಪವೆಂದು ಕರೆಯುವುದುಂಟು. ವಾಸ್ತುಶಿಲ್ಪದಲ್ಲೂ ಕೂಡ ಉದ್ದೀಪನ ರೂಪವೇ ನಿಜವಾದ ಶಿಲ್ಪರೂಪ. ಈ ರೂಪದ ಸಾಕ್ಷಾತ್ಕಾರವೇ ಎಲ್ಲ ಕಲೆಗಳ ಮುದ್ರೆ (Presentational symbol) ಯ ಜೀವಾಳ. ಈ ಧ್ವನಿರೂಪವನ್ನೇ ಸಂಗೀತಗಾರರು, ಚಿತ್ರಕಾರರು ಶಿಲ್ಪಿಗಳು, ಕವಿಗಳು, "ರೂಪಂ", "ಯದ್ ರೂಪಂ" ಎಂದು ಬಾರಿಬಾರಿಗೆ ಉಚ್ಚರಿಸುತ್ತಾರೆ.[12] ಈ ರೂಪ ಅಪ್ಪಟವಾಗಿ ಇರುವುದು ರಾಗಾಲಾಪನೆಯಲ್ಲಿ. ವಾಚ್ಯವಾಚಕ ವೃತ್ತಿಗಳನ್ನು ಶೂನ್ಯಗೊಳಿಸುವುದರ ಮೂಲಕ ಈ ರೂಪ ಅವಗಮಿಸುತ್ತದೆ ಎಂಬ ಉದ್ಭಟೋಕ್ತಿ ಉಳಿದೆಲ್ಲ ಕಲೆಗಳಿಗಿಂತಲೂ ಸಂಗೀತಕ್ಕೆ ಅಕ್ಷರಶಃ ಒಪ್ಪುತ್ತದೆ.[13] ಉಳಿದೆಲ್ಲ ಕಲೆಗಳಲ್ಲಿ ಲೌಕಿಕಮಾಧ್ಯಮಗಳು ಭಾವರೂಪ ಸಾಧನೆಗೆ ತಡೆಗಳಾಗಿ ಪರಿಣಮಿಸುವ ಸಂಭವ ಹೆಚ್ಚು. ಸಾಹಿತ್ಯದಲ್ಲಿ ದಿನಬಳಕೆಯ ಭಾಷೆ ಮಾಧ್ಯಮವಾಗಿರುವುದು ಒಂದುತಡೆ; ಚಿತ್ರದಲ್ಲಿ, ಮನುಷ್ಯ, ಪ್ರಾಣಿ, ಪಕ್ಷಿ, ವೃಕ್ಷಲತೆಗಳು, ಮೋಡಗಳು ಮುಂತಾದ ಬಾಹ್ಯಪ್ರಪಂಚದ ಆಕಾರಗಳು ಪ್ರತಿಭಾ ರೂಪದ ಉದ್ದೀಪನಕ್ಕೆ ತಡೆಗಳಾಗುತ್ತವೆ. ಹಾಗೆಯೇ ನಾಟ್ಯ ಮತ್ತು ನೃತ್ಯಗಳಲ್ಲಿ ಅಡ್ಡವಾಸನೆಗಳಿಗೆ

---

10 ಅದೇ ಗ್ರಂಥದ ೧೯೦, ೧೯೫, ೧೯೯ ನೇ ಪುಟಗಳನ್ನು ನೋಡಿ. ಅಭಿನವಗುಪ್ತನೂ ಕೂಡ ಆನಂದವರ್ಧನನ ಅಭಿಪ್ರಾಯವನ್ನು ಮತ್ತಷ್ಟು ವಿಶದವಾಗಿ ಸಮರ್ಥಿಸಿರುತ್ತಾನೆ. "ಶ್ರೋತ್ರ ಮಾತ್ರ ವೇದ್ಯವಾದ ಅಂಶ ಕೂಡ ರಸಪುಷ್ಟಿಗೆ ಪ್ರಯೋಜಕವೆಂಬುದನ್ನು ಪದರೂಪವಲ್ಲದ ಸಂಗೀತಧ್ವನಿಯಲ್ಲಿ ನೋಡಬಹುದು. ತಬಲದ ತಾಳಕ್ಕೆ ಕೊಡುವ ನಾದ, ಅಥವಾ ಬಾಯಿಮುಚ್ಚಿ ಮೂಗಿನಿಂದಲೇ ಉಚ್ಚರಿಸುವ ಹಾಡುಗಳನ್ನು ಇಲ್ಲಿ ಉದಾಹರಿಸಬಹುದು." ಅದೇ ಗ್ರಂಥ, ಪುಟ, ೧೨೭.

11 ಮುಕ್ತಾಫಲೇಷು ಛಾಯಾಯಾಸ್ತರಲತ್ವಮಿವಾಂತರಾ | ಪ್ರತಿಭಾತಿ ಯದಂಗೇಷು ಲಾವಣ್ಯಂ ತದಿಹೋಚ್ಯತೇ || ಶ್ರೀರೂಪಗೋಸ್ವಾಮಿ, ಉಜ್ವಲನೀಲಮಣಿ, ಉದ್ದೀಪನ ಪ್ರಕರಣಂ. ಶ್ಲೋಕ, ೨೬. Haridas-Mitra, *Contribution to a Bibliography of Indian Art and Aesthetics*, Viswa Bharati. Santiniketan (1951), p. 50.

12 ಅಂಗಾನ್ಯಭೂಷಿತಾನ್ಯೇವ ಕೇನಚಿದ್ ಭೂಷಣಾದಿನಾ | ಯೇನ ತತ್‌ಭೂಷಿತವದ್‌ಭಾತಿ ತತ್ ರೂಪಮಿತಿ ಕಥ್ಯತೇ. ರೂಪಗೋಸ್ವಾಮಿ, ಉಜ್ವಲನೀಲಮಣಿ, ಉದ್ದೀಪನ ಪ್ರಕರಣಂ, ಶ್ಲೋಕ ೩೩.

13 ವಾಚ್ಯವಾಚಕವೃತ್ತಿಭ್ಯಾಂ ಶೂನ್ಯೇನಾವಗಮಾತ್ಮನಾ. ಕಾವ್ಯಾಲಂಕಾರಸಂಗ್ರಹದಲ್ಲಿ ಪರ್ಯಾಯೋಕ್ತದ ಲಕ್ಷಣವನ್ನು ಕುರಿತು ಹೇಳಿದ ಉದ್ಭಟನ ಉಕ್ತಿ.

ಕಾರಣವಾದ ಸ್ತ್ರೀಪುಂರೂಪಗಳೇ ಒಂದು ತಡೆ. ವಾಸ್ತುಶಿಲ್ಪ ವಾಸಕ್ಕಾಗಿ ಬಳಸುವ ಲೋಕೋಪಯೋಗಿ ವಸ್ತುವಾಗಿರುವುದೇ ಅದರ ಉದ್ದೀಪನ ರೂಪ ನಸ್ತ್ರ ಮುಂದೆ ಜಿಡಿಯಾಗಿ ನಿಲ್ಲಲು ಒಂದು ತಡೆಯಾಗುತ್ತದೆ. ಆದ್ದರಿಂದ ಆಧುನಿಕ ಚಿತ್ರಕಾರರು, ಕವಿಗಳು, ಶಿಲ್ಪಿಗಳು ತಮ್ಮ ಕಲೆಯ ಮುದ್ರೆ ಹೊರ ಪ್ರಪಂಚದ ವಸ್ತುವಿಗೆ ಸಾಮ್ಯ ತೋರದಂತೆ, ವಾಚಕತ್ವವನ್ನು ಶೂನ್ಯಗೊಳಿಸುವಂತೆ, ಆ ಮುದ್ರೆಗಳನ್ನು ವಿಲಕ್ಷಣವಾಗಿ ರೂಪಿಸುತ್ತಿದ್ದಾರೆ. ಇವರ ಮಾರ್ಗವನ್ನು ಸಂನ್ಯಾಸಿಗಳು ಅವಲಂಬಿಸುವ ನಿವೃತ್ತಿ ಮಾರ್ಗಕ್ಕೆ ಹೋಲಿಸಬಹುದು.

ಆನಂದವರ್ಧನನ ಧ್ವನ್ಯಾಲೋಕದಲ್ಲಿ ಸಂಗೀತದಲ್ಲಿ ಧ್ವನಿವಿಚಾರ ಕೇವಲ ಪ್ರಾಸಂಗಿಕವಾಗಿ ಬರುತ್ತದೆಯಾದರೂ ಅವನ ಕಾಲಕ್ಕಾಗಲೇ ಧ್ವನಿವಿಚಾರ ಸಂಗೀತ ಕ್ಷೇತ್ರದಲ್ಲಿ ಪ್ರಚಾರದಲ್ಲಿದ್ದಿರಬೇಕೆಂಬುದು ಸ್ಪಷ್ಟ. ಆದರೆ ಆನಂದವರ್ಧನನು ಯಾವ ಸಂಗೀತಮೀಮಾಂಸಕನು ಧ್ವನಿಯನ್ನು ಪ್ರತಿಪಾದಿಸಿದನೆಂದು ತಿಳಿಸಿಲ್ಲ. ಯಾವ ಸಂಗೀತ ಗ್ರಂಥದಲ್ಲಿ ಈ ತತ್ತ್ವ ತಲೆ ಹಾಕಿತು, ಅದಕ್ಕಿಂತ ಮುಖ್ಯವಾಗಿ ಆ ತತ್ತ್ವ ಸಂಗೀತದಲ್ಲಿ ಹೇಗೆ ರೂಪುಗೊಂಡಿದೆ, ಅದರ ವಿವರಗಳೇನು ಎಂಬ ಸಮಸ್ಯೆ ಭಾರತೀಯ ಸಂಗೀತ ಮೀಮಾಂಸೆಯ ಒಂದು ಮುಖ್ಯ ಸಮಸ್ಯೆ. ನನಗೆ ತಿಳಿದ ಮಟ್ಟಿಗೆ ಇದನ್ನು ಆಧುನಿಕ ಸಂಗೀತ ಮೀಮಾಂಸಕರು ಯಾರೂ–ಪ್ರಸಿದ್ಧರಾದ ಒ. ಸಿ. ಗಂಗೋಲಿಯವರು ಕೂಡ–ಲಕ್ಷಿಸಿರುವುದಿಲ್ಲ. ಈ ತತ್ತ್ವವನ್ನು ವಿವೇಚಿಸುವ ಗ್ರಂಥಗಳು ಅವರ ಮುಂದೆ ಇದ್ದರೂ ಕೂಡ ಅದರ ಕಡೆಗೆ ಅವರ ಗಮನ ಹರಿಯದಿರುವುದು ಒಂದು ಸೋಜಿಗ.

## ೨

ನಮಗೆ ಈಗ ತಿಳಿದಿರುವ ಮಟ್ಟಿಗೆ ಸಂಗೀತದಲ್ಲಿ ಮೊಟ್ಟಮೊದಲಿಗೆ ಧ್ವನಿ ತತ್ತ್ವ ವಿವೇಚನೆ ನಡೆದಿರುವುದು ಮತಂಗ ಮುನಿಯ ಬೃಹದ್ದೇಶೀಯದಲ್ಲಿ.[14] ಭರತನ ನಾಟ್ಯಶಾಸ್ತ್ರದಲ್ಲಿ ಧ್ವನಿತತ್ತ್ವದ

---

[14] ಮತಂಗನ ಕಾಲ ನಿರ್ಣಯ ತುಂಬ ತೊಡಕಿನ ವಿಷಯ. ಮತಂಗಮುನಿ ರಾಮಾಯಣ, ಮಹಾಭಾರತಗಳಲ್ಲಿ ಪೌರಾಣಿಕ ವ್ಯಕ್ತಿಯಾಗಿ ಗೋಚರಿಸುತ್ತಾನೆ. ಅವನು ಗಂಧರ್ವವಿದ್ಯೆಯಲ್ಲಿ ಪ್ರವೀಣ. ಕಾಳಿದಾಸನೂ ಈ ಮುನಿ ರಘುವಂಶದ ರಾಜರಿಗಿಂತ ಪ್ರಾಚೀನನೆನ್ನುತ್ತಾನೆ. ಬೃಹದ್ದೇಶೀಯದ ಕರ್ತೃ ಇವನೇ ಎಂದು ಹೇಳಿದರೆ ಅವನ ಕಾಲ ಕನಿಷ್ಠ ಪಕ್ಷ ಕ್ರಿ.ಶ. ಮೂರನೆಯ ಶತಮಾನವಾದರೂ ಆಗಬೇಕು. ಆದರೆ ಇದರ ತತ್ತ್ವ ವಿವೇಚನೆಯನ್ನು ಲಕ್ಷಿಸಿದರೆ, ಬೃಹದ್ದೇಶೀಕಾರ ಆಭಾಸವಾದವನ್ನು ಮಂಡಿಸಿದ ಭರ್ತೃಹರಿಗಿಂತ ಮತ್ತು ಮಾಂಡೂಕ್ಯ ಕಾರಿಕೆಯನ್ನು ರಚಿಸಿ ವಿವರ್ತವಾದವನ್ನು ಮಂಡಿಸಿದ ಗೌಡಪಾದನಿಗಿಂತ ಹಿಂದಿನವನಲ್ಲವೆಂದು ಹೇಳಬೇಕಾಗುತ್ತದೆ. ಮತಂಗನು ಭರ್ತೃಹರಿಯಂತೆ ಶಬ್ದಬ್ರಹ್ಮವಾದಿ. ಅವನಂತೆಯೇ ಅವನು ಪರಿಣಾಮವಾದಕ್ಕೆ ವಿರೋಧವಲ್ಲದ ವಿವರ್ತವನ್ನು ಒಪ್ಪಿ, ಭರ್ತೃಹರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ ಮಾಯಾರೂಪವಾದ, ಮಿಥ್ಯಾರೂಪವಾದ ವಿವರ್ತವಾದವನ್ನು ಖಂಡಿಸಿರುತ್ತಾನೆ. ಆದ್ದರಿಂದ ಇವನು ಶಂಕರಾಚಾರ್ಯರಿಗಿಂತ ಈಚಿನವನೆಂದು ಖಂಡಿತವಾಗಿ ಹೇಳಲಾಗದಿದ್ದರೂ ಗೌಡಪಾದನಿಗಿಂತ ಈಚಿನವನೆಂಬುದು ಸ್ಪಷ್ಟ. ಗೌಡಪಾದ ಮತ್ತು ಭರ್ತೃಹರಿ ಬಹುಶಃ ಸಮಕಾಲೀನರು. ಅವರ ಕಾಲ ಕ್ರಿ.ಶ. ೬ನೆಯ ಶತಮಾನ. ಆದ್ದರಿಂದ ಬೃಹದ್ದೇಶೀ ಆರನೆಯ ಶತಮಾನಕ್ಕಿಂತ ಹಿಂದಿನದಲ್ಲ. ಕಾಶ್ಮೀರ ಶೈವರು ಕೆಲವರು ಭರ್ತೃಹರಿ ಕೇವಲ ಆಭಾಸವಾದಿಯೆಂದೂ, ಇನ್ನು ಕೆಲವರು ಅವನು ಶಂಕರಾಚಾರ್ಯರಂತೆ ವಿವರ್ತವಾದಿಯೆಂದೂ ಹೇಳುತ್ತಾರೆ. ಧ್ವನಿ ಪಕ್ಷವನ್ನು ಒಪ್ಪಿರುವ ಕಾಶ್ಮೀರ ಶೈವರು ಅಪ್ಪಟ ಆಭಾಸವಾದಿಗಳು. ಅವರು ಶಂಕರಾಚಾರ್ಯರ ವಿವರ್ತವಾದವನ್ನೂ ಬಿಟ್ಟು ಪರಿಣಾಮವಾದವನ್ನೂ ಬಿಟ್ಟು, ಸಂದಿಗ್ಧಕ್ಕೆ ಅವಕಾಶಕೊಡುವ ಭರ್ತೃಹರಿಯ ಪರಿಣಾಮ-ವಿವರ್ತ-ಆಭಾಸವಾದವನ್ನೂ ಬಿಟ್ಟು ಆಭಾಸವಾದವನ್ನೇ ಖಚಿತವಾಗಿ ಒಪ್ಪಿರುತ್ತಾರೆ. ಮತಂಗನ ನಿಲುವು ಸಂದಿಗ್ಧವಾದ ಪರಿಣಾಮ-ವಿವರ್ತ-ಅವಭಾಸವಾದ. ಆದ್ದರಿಂದ ಅವನಕಾಲ ಸುಮಾರು ೯ನೆಯ ಶತಮಾನಕ್ಕಿಂತ, ಆನಂದವರ್ಧನನಿಗಿಂತ ಹಿಂದಿನದೂ ಕ್ರಿ.ಶ. ಆರನೆಯ ಶತಮಾನಕ್ಕಿಂತ ಮುಂದಿನದೂ ಎಂದು ಹೇಳಬಹುದು. ''ರುದ್ರಟೇನ ಕೃತಾ ಮಧ್ಯಮಸ್ಯೇತಿ ನ ದೋಷಃ ಇತಿ ಮತಂಗೋಕ್ತಂ'' ಎಂಬ ಕಲ್ಲಿನಾಥನ ವಾಕ್ಯದ ಆಧಾರದ ಮೇಲೆ, ಈ ರುದ್ರಟನು ಕಾವ್ಯಾಲಂಕಾರಿಕನಾದ (ಕ್ರಿ.ಶ. ೮೫೦) ರುದ್ರಟನೆಂದು ಭಾವಿಸಿ ಮತಂಗನು ಕ್ರಿ.ಶ. ೮೫೦ಕ್ಕಿಂತ ಈಚಿನವನೆಂದು ಶ್ರೀ ವಿ. ರಾಘವನ್ ಅವರು ವಾದಿಸಿರುತ್ತಾರೆ. ಈ ರುದ್ರಟನು ಸಂಗೀತಶಾಸ್ತ್ರದ ದೊಡ್ಡ ವಿದ್ವಾಂಸನೆಂದಾಗಲಿ ಅವನು ಸಂಗೀತ ಶಾಸ್ತ್ರದಲ್ಲಿ ಮಹತ್ತರವಾದ ಮಾರ್ಪಾಡನ್ನು ಮಾಡಿದನೆಂದಾಗಲಿ ರುಜುವಾತಾಗಿದ್ದರೆ ಆ ವಾದಕ್ಕೆ ಬಲವಿರುತ್ತಿತ್ತು. ಈ ರುದ್ರಟನು ಆಲಂಕಾರಿಕನಲ್ಲ, ಬಹುಶಃ ಕ್ರಿ.ಶ. ಏಳನೆಯ ಶತಮಾನದ ಕುಡಿಮಿಯಾಮಲೈ ಶಾಸನದಲ್ಲಿ

ಹೆಸರಿಲ್ಲದಿದ್ದರೂ ಅದರ ನಿರೂಪಣೆಗೆ ಆಧಾರವಾದ ಬೀಜ ರೂಪವಾದ ಭಾವನೆಗಳು ಅದರಲ್ಲಿ ಅಡಗಿವೆ. ಭಾವಾಧ್ಯಾಯದ ಆರಂಭ ವಾಕ್ಯಗಳ ಮೇಲೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ಕಾವ್ಯಾರ್ಥವೆಂದರೆ ಭರತನ ಇಂಗಿತ ವಾಚ್ಯಾರ್ಥವಲ್ಲ, ರಸಾದಿಗಳನ್ನು ಧ್ವನಿಸುವ ಅರ್ಥವೆಂದೂ, ಅದನ್ನು ಧ್ವನ್ಯಾಲೋಕದಲ್ಲಿ ಆನಂದವರ್ಧನನೂ, ಲೋಚನದಲ್ಲಿ ತಾನೂ ವಿಸ್ತರಿಸಿದುದಾಗಿಯೂ ಅಭಿನವಗುಪ್ತನೂ ಹೇಳಿರುತ್ತಾನೆ.[15]

ನಾಟ್ಯದ ಸಾರ ರಸವೆಂದಂತೆ ಸಂಗೀತದ ಸಾರವೂ ರಸವೆಂಬುದನ್ನು ಭರತನು ಇಪ್ಪತ್ತೆಂಟು ಮತ್ತು ಇಪ್ಪತ್ತೊಂಭತ್ತನೆಯ ಅಧ್ಯಾಯಗಳಲ್ಲಿ ಸ್ಪಷ್ಟಪಡಿಸಿರುತ್ತಾನೆ. ಯಾವ ಕಾರಣದಿಂದ, ಹೇಗೆ ರಾಗವು ರಸವನ್ನು ಸ್ರವಿಸುತ್ತದೆ ಎಂಬ ಪ್ರಶ್ನೆಯನ್ನು ಕೂಡ ಅವನು ಅಲ್ಲಿ ಎತ್ತಿರುತ್ತಾನೆ. ಯಾವುದರಿಂದ ರಾಗ ಏರ್ಪಡುತ್ತದೆ, ಯಾವುದರ ಪ್ರಭಾವದಿಂದ ಅದು ಬೆಳೆಯುತ್ತದೆ? ಸ್ವರ ಜಾತಿ ಯಾವುದರಲ್ಲಿ ಸಮಾಶ್ರಯವಾಗಿ ಯಾವುದರ ಪ್ರಾಬಲ್ಯದಿಂದ ಪ್ರಯೋಕ್ತೃಗಳು ಗಾನ

ಉಕ್ತವಾಗಿರುವ ರುದ್ರಾಚಾರ್ಯನಿರಬಹುದೆಂದೂ ಈ ರುದ್ರಾಚಾರ್ಯನು ಮಧ್ಯಮವನ್ನು ತನ್ನದೇ ಆದ ವಿಶಿಷ್ಟರೀತಿಯಲ್ಲಿ ರಚಿಸಿರುತ್ತಾನಾದ್ದರಿಂದ ಮತಂಗನು ಕ್ರಿ.ಶ. ಏಳನೆಯ ಶತಮಾನದ ಸುಮಾರಿನಲ್ಲಿದ್ದಿರಬಹುದೆಂದು ರಾಮಕೃಷ್ಣ ಕವಿಯವರ ವಾದ. ಇದು ರಾಘವನ್ ಅವರ ವಾದಕ್ಕಿಂತ ಸಂಭಾವ್ಯ. ಆದರೆ ರುದ್ರಟನು ರಚಿಸಿದ ಮಧ್ಯಮ ದೋಷರಹಿತವಾದದ್ದು ಎಂಬ ಉಕ್ತಿ ಬೃಹದ್ದೇಶೀಯದ ನಾಲ್ಕು ಅಧ್ಯಾಯಗಳಲ್ಲಿಲ್ಲ. ಅದು ಇದ್ದಿದ್ದರೆ ಸ್ವರಾಧ್ಯಾಯ ಮತ್ತು ಪ್ರಬಂಧಾಧ್ಯಾಯಗಳ ಮಧ್ಯೆ ಇರಬೇಕು. ಇವುಗಳಲ್ಲೆಲ್ಲೂ ರುದ್ರಟನ ಹೆಸರೇ ಇಲ್ಲ. ಆದ್ದರಿಂದ ಕಲ್ಲಿನಾಥನು ರುದ್ರಟನ ಮಧ್ಯಮದ ರಚನೆ ಮತಂಗನ ದೃಷ್ಟಿಯಿಂದ ದೂಷ್ಯವಲ್ಲವೆಂದು ಅನುವಾದ ಮಾಡಿರಬಹುದೆಂದು ತೋರುತ್ತದೆ. ಕುಡಿಮಿಯಾಮಲೈ ಶಾಸನದಲ್ಲಿ ಉಕ್ತವಾದ ರಾಗರಚನೆ ಮತಂಗನದಕ್ಕಿಂತ ಈಚಿನದೆಂದೂ, ಮತಂಗನ ರಚನೆಯು ಮಾರ್ಪಾಡೆಂದೂ ಸಂಗೀತ ಪರಿಭಾಷೆಯನ್ನು ಚೆನ್ನಾಗಿ ಅರಿತ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಮತಂಗನು ಹೆಸರಿಸಿರುವ ರಾಗಗಳು ತುಂಬ ಹಿಂದಿನವೆಂದೂ, ಅವನು ಭೈರವಿ, ಶ್ರೀರಾಗ ಮುಂತಾದ ರಾಗಗಳನ್ನು ಹೆಸರಿಸದಿರುವುದರಿಂದ ಮತಂಗನು ನಾರದಶಿಕ್ಷಾ, ಸಂಗೀತಮಕರಂದ ಇವುಗಳಿಗಿಂತ ಹಿಂದಿನವನೆಂದು ಹೇಳುತ್ತಾರೆ. ಕಾಲನಿರ್ಣಯದ ದೃಷ್ಟಿಯಿಂದ ಇನ್ನೊಂದು ಸ್ವಾರಸ್ಯವಿಷಯವಿದೆ. ವಿಷ್ಣುಧರ್ಮೋತ್ತರ ಪುರಾಣದ ಸಂಗೀತ ಭಾಗದಲ್ಲಿ ಮತಂಗನನ್ನು ಸ್ಮರಿಸಿದೆ. ಆದ್ದರಿಂದ ಮತಂಗನ ಕಾಲ ವಿಷ್ಣುಧರ್ಮೋತ್ತರಕ್ಕಿಂತ ಹಿಂದಿನದೆಂದು ಹೇಳಬಹುದು. ಇದರ ಕಾಲ ಕ್ರಿ. ಶ. ಆರನೆಯ ಶತಮಾನವೆಂದು ಪಿ. ವಿ. ಕಾಣೆ ಅವರು ಹೇಳುತ್ತಾರೆ. ತೀ. ನಂ. ಶ್ರೀಕಂಠಯ್ಯನವರು ಇದು ಅಷ್ಟು ಪ್ರಾಚೀನವಲ್ಲವೆಂಬುದಕ್ಕೆ ಎರಡು ಕಾರಣಗಳನ್ನು ಕೊಡುತ್ತಾರೆ. ಇಲ್ಲಿ ಅಲಂಕಾರಗಳ ಸ್ವಲ್ಪ ಭಾಗವನ್ನು ಕೊಟ್ಟಿದೆ ಎಂದು ಹೇಳುತ್ತಾನಾದ್ದರಿಂದ ಭಟ್ಟಿಗಿಂತ ಹಿಂದಿನವನಲ್ಲದಿರಬಹುದು ಎಂಬುದು ಒಂದು ಕಾರಣ. ಇದು ಅಷ್ಟು ಪ್ರಬಲಕಾರಣವಲ್ಲ. ಒಂದು ಪಕ್ಷ ವಿಷ್ಣುಧರ್ಮೋತ್ತರಕಾರ ಹೆಚ್ಚಿನ ಅಲಂಕಾರಗಳನ್ನು ತಿಳಿದಿದ್ದರೂ ಭಟ್ಟಿ ಹೇಳಿರುವ ಇಲ ಅಲಂಕಾರಗಳನ್ನು ತಿಳಿದಿದ್ದನೆಂದು ಹೇಳಲು ಅವಕಾಶವಿಲ್ಲ. ಒಂದು ಪಕ್ಷ ಭಟ್ಟಿಯಷ್ಟೇ ಅಲಂಕಾರಗಳನ್ನು ತಿಳಿದಿದ್ದರೂ ಅವನು ಭಟ್ಟಿಗಿಂತ ಈಚಿನವನೆಂದು ವಾದಿಸುವುದಕ್ಕಾಗುವುದಿಲ್ಲ. ವಿಷ್ಣುಧರ್ಮೋತ್ತರದಲ್ಲಿ ಶಾಂತರಸ ಉಕ್ತವಾಗಿರುವುದರಿಂದ, ಇದು ಶಾಂತರಸ ಪ್ರತಿಷ್ಠಿತವಾದ ಬಳಿಕವೇ ಈ ಗ್ರಂಥಭಾಗದ ರಚನೆಯಾಗಿರಬೇಕೆಂಬುದು ಇನ್ನೊಂದು ಕಾರಣ. ಈ ರಸ ಪ್ರತಿಷ್ಠಾಪನೆಯಾದ ಹೊರತು ವಿಷ್ಣುಧರ್ಮೋತ್ತರದಲ್ಲಿ ಬರಕೂಡದೆಂಬ ನಿಲುವನ್ನು ಸಮರ್ಥಿಸುವುದಕ್ಕಾಗುವುದಿಲ್ಲ. ಇಂದಿಗಾದರೂ ಅದು ಪ್ರತಿಷ್ಠಿತವಾಯಿತೆಂದು ಹೇಳಲಾಗುವುದಿಲ್ಲ. ಅದರ ವಿಚಾರವಾಗಿ ಹಿಂದಿನಿಂದ ಇಂದಿನವರೆಗೂ ಭಿನ್ನಪಕ್ಷಗಳು ಇದ್ದೇ ಇವೆ. ನಾಟ್ಯಶಾಸ್ತ್ರದಲ್ಲಿ ಶಾಂತರಸವನ್ನು ಹೇಳಿರುವ ಭಾಗ ಪ್ರಕ್ಷಿಪ್ತವಾದುದೆಂದು ಸ್ಥಿರಪಟ್ಟರೂ ಅದು ಶಾಂತರಸ ಸ್ಥಿರಪಟ್ಟ ಮೇಲೆ ಪ್ರಕ್ಷಿಪ್ತವಾಯಿತು ಎಂದು ವಾದಿಸುವುದಕ್ಕಾಗುತ್ತದೆಯೆ? ಕ್ರಿ. ಶ. ೫ ನೇ ಶತಮಾನದ ಅನುಯೋಗದ್ವಾರಸುತ್ತದಲ್ಲಿ ಶಾಂತರಸ ಲಕ್ಷಣ ಲಕ್ಷಿತವಾಗಿ ಉಕ್ತವಾಗಿದೆಯೆಂದು ಅವರೇ ಒಪ್ಪಿರುತ್ತಾರೆ. ಆ ಕಾಲಕ್ಕಾಗಲೇ ಅದು ಪ್ರಕ್ಷಿಪ್ತವಾಗಿರಬಹುದಲ್ಲವೆ? ವಿಷ್ಣುಧರ್ಮೋತ್ತರ ಪೌರಾಣಿಕ ಗ್ರಂಥವಾದ್ದರಿಂದ ಶಾಂತರಸ ಕಾವ್ಯದಲ್ಲಿ ಪ್ರತಿಷ್ಠಿತವಾಗದಿದ್ದರೂ ಅದು ಶಾಂತವನ್ನು ಸ್ಮರಿಸಿರುವುದೇನೂ ಆಶ್ಚರ್ಯವಲ್ಲ. ಅಂತೂ ಅದು ಮತಂಗನಿಗಿಂತ ಈಚಿನದೆಂದು ಹೇಳಬಹುದು; ಬಹುಶಃ ಕ್ರಿ. ಶ. ೭ ನೆಯ ಶತಮಾನಕ್ಕಿಂತ ಹಿಂದಿನದಾಗಿರಲಾರದು. ಅಂತೂ ಕಾಲ ನಿರ್ಣಯದ ಪ್ರಶ್ನೆ ತುಂಬ ಜಟಿಲವಾದ ಪ್ರಶ್ನೆ. ಮತಂಗನು ಬಹುಶಃ ೭ ನೆಯ ಶತಮಾನಕ್ಕಿಂತ ಈಚಿನವನೂ ಒಂಭತ್ತನೆಯ // ಶತಮಾನಕ್ಕಿಂತ ಹಿಂದಿನವನೂ ಇರಬಹುದೆಂದು ಸ್ಥೂಲವಾಗಿ ಹೇಳಬಹುದು.

15 ನ ತ್ವರ್ಥಶಬ್ದೋಭಿಧೇಯವಾಚೀ. ಸ್ವಶಬ್ದಾನಾಭಿಧೇಯತ್ವಂ ಹಿ ರಸಾನಾಂ ಧ್ವನಿಕಾರಣಾದಿಭಿರ್ದರ್ಶಿತಮ್. ತಚ್ಚ ಮದೀಯಾದೇವ ತದ್ವಿವರಣಾತ್ಸಹೃದಯಾಲೋಕಲೋಚನಾದವಧಾರಣೀಯಮಿಹತು ಯಥಾವಸರಂ ವಕ್ಷ್ಯತ ಏವ, ನಾಟ್ಯಶಾಸ್ತ್ರ ಬರೋಡ ಲೈಬ್ರೆರಿ, ೧ನೇ ಸಂಪುಟ, (1956) ಪುಟ, ೩೪೨.

ದಲ್ಲಿ ರಸವನ್ನು ಅಭಿವ್ಯಕ್ತಗೊಳಿಸುತ್ತಾರೆ?[16] ಎಂದು ಪ್ರಶ್ನೆ ಹಾಕಿಕೊಂಡು ರಾಗಕ್ಕೆ ರಸ ಸ್ರವಿಸುವ ಬಲ ಕೊಡುವುದು ಸ್ವರಾಂಶಗಳೆಂದು ಉತ್ತರ ಹೇಳುತ್ತಾನೆ. ಭರತನು ಎಂಟೇ ರಸಗಳನ್ನು ಹೇಳಿರುತ್ತಾನಾದ್ದರಿಂದ ಆ ಎಂಟು ರಸಗಳಲ್ಲಿ ಒಂದೊಂದಕ್ಕೂ ಕಾರಣವಾದ ಸ್ವರಾಂಶ ಯಾವುದು ಎಂಬುದನ್ನು ವಿವರಿಸಿರುತ್ತಾನೆ. ಮಪಗಳ ಅಂಶಗಳು ಶೃಂಗಾರ ಹಾಸ್ಯಗಳಿಗೂ, ಸರಿಗಳ ಅಂಶಗಳು ವೀರರೌದ್ರಾದ್ಭುತಗಳಿಗೂ, ಗನಿಗಳ ಅಂಶಗಳು ಕರುಣಕ್ಕೂ, ಧದ ಅಂಶವು ಬೀಭತ್ಸ ಮತ್ತು ಭಯಾನಕಗಳಿಗೂ ಕಾರಣವೆಂದು ಹೇಳಿರುತ್ತಾನೆ. ಶಾಂತರಸವನ್ನು ಅವನು ತಿಳಿಸಿಲ್ಲವಾದ್ದರಿಂದ ಅದಕ್ಕೆ ಕಾರಣವಾದ ಅಂಶವನ್ನು ಅವನು ಹೇಳಿಲ್ಲ. ಸಂಗೀತದಲ್ಲಿ ಶಾಂತ ರಸವನ್ನು ಲಕ್ಷಿಸಿದವರಲ್ಲಿ ಬಹುಶಃ ಮತಂಗನೇ ಮೊದಲನೆಯವನಿರಬಹುದು. ಜೊಟ್ಟರಾಗದಲ್ಲಿ ಶಾಂತರಸವೇ ಅಧಿಕವೆಂದೂ ಅದಕ್ಕೆ ಪಂಚಮಾಂಶ ಕಾರಣವೆಂದೂ ಅವನು ಹೇಳಿರುತ್ತಾನೆ.[17]

ರಾಗಕ್ಕೆ ಪ್ರಾಣಭೂತವಾದ ರಸಕ್ಕೆ ತ್ರಾಣಕೊಡುವುವು ಅಂಶಗಳೆಂಬ ಭರತನ ಉಕ್ತಿಯನ್ನು ಲಕ್ಷಿಸಿದ ಮತಂಗನು ಭರತನಿಗಿಂತ ಒಂದು ಹೆಜ್ಜೆ ಮುಂದೆ ಹೋದನು. ರಸಕ್ಕೆ ಬಲ ಕೊಡುವ ತತ್ತ್ವದ ವ್ಯವಸ್ಥೆ ಹೇಗೆ, ಅದಕ್ಕೆ ಏನು ಹೆಸರು ಕೊಡಬೇಕು ಎಂಬುದು ಭರತನಿಗೆ ಹೊಳೆದಿರಲಿಲ್ಲ. ಭರತನು ಹೇಳಿದ ಅಂಶಗಳನ್ನು ವ್ಯವಸ್ಥೆಗೊಳಿಸಿ ಅದಕ್ಕೆ ಧ್ವನಿಯೆಂಬ ಹೆಸರನ್ನು ಕೊಟ್ಟದ್ದಲ್ಲದೆ ರಾಗಲಕ್ಷಣದಲ್ಲಿ ಅದಕ್ಕೆ ಮೊಟ್ಟಮೊದಲಿಗೆ ಒಂದು ಪ್ರತ್ಯೇಕಸ್ಥಾನವನ್ನು ಕಲ್ಪಿಸಿದವನು ಮತಂಗ.

೩

ಭರತನು ನಾಟ್ಯಶಾಸ್ತ್ರದಲ್ಲಿ ಅನುಸರಿಸಿರುವ ಪ್ರಶ್ನೋತ್ತರ ಪೌರಾಣಿಕ ರೀತಿಯನ್ನೇ ಮತಂಗನು ಬೃಹದ್ದೇಶೀಯದಲ್ಲಿ ಅನುಸರಿಸಿರುತ್ತಾನೆ. ನಾರದನು ಪ್ರಶ್ನೆ ಕೇಳುತ್ತಾನೆ, ಮತಂಗನು ಉತ್ತರ ಹೇಳುತ್ತಾನೆ. ಬೃಹದ್ದೇಶೀಯದಲ್ಲಿ ನಾರದನು ಮೊಟ್ಟಮೊದಲಿಗೆ ಕೇಳುವ ಪ್ರಶ್ನೆ ಧ್ವನಿಗೆ ಸಂಬಂಧಿಸಿದ್ದು.[18] ಆನಂದವರ್ಧನನು ತನ್ನ ವೃತ್ತಿಭಾಗದಲ್ಲಿ ಧ್ವನಿವಿವೇಕಕ್ಕೆ ಶಬ್ದಬ್ರಹ್ಮವಾದ ಆಶ್ರಯವೆಂದು ಮಾತ್ರ ಹೇಳಿರುತ್ತಾನೆ.[19] ಆ ವಾದದ ಯಾವ ವಿವರವನ್ನೂ ಕೊಟ್ಟಿಲ್ಲ. ಕಾರಿಕಾಭಾಗದಲ್ಲೂ ಅದರ ಸುಳಿವಿಲ್ಲ. ಮತಂಗನಾದರೋ ತನ್ನ ವಿವರಣೆಯನ್ನು ನಾದಬ್ರಹ್ಮದಿಂದಲೇ ಪ್ರಾರಂಭಿಸಿರುತ್ತಾನೆ. ನಾದಬ್ರಹ್ಮಸ್ವರೂಪವನ್ನು ಮೊದಲ ಮೂರು ಪುಟಗಳಲ್ಲಿ ಸಂಗ್ರಹಿಸಿರುತ್ತಾನೆ.[20] ಭರ್ತೃಹರಿಯು ನಾದಬ್ರಹ್ಮವಾದನನ್ನು ಎಲ್ಲ ವಾಙ್ಮಯಕ್ಕೂ ಅನ್ವಯಿಸಿರುತ್ತಾನೆ, ಕಾವ್ಯ, ಸಂಗೀತ, ನೃತ್ಯಗಳಿಗೆ ಅನ್ವಯಿಸಿರುವುದಿಲ್ಲ. ಎಲ್ಲ ಕಲೆಗಳಿಗೂ

---

16 ಯಸ್ಮಿನ್ ಭವತಿ ರಾಗಸ್ಯ ಯಸ್ಮಾಚ್ಚೈವ ಪ್ರವರ್ತತೇ, ನಾ. ಶಾ. xxviii. ೬೮. ಯೋ ಯದಾ ಬಲವಾನ್ ಯಸ್ಮಿನ್ ಸ್ವರೋ ಜಾತಿಸಮಾಶ್ರಯಾತ್ | ತತ್ಪ್ರವೃತ್ತಂ ರಸೇ ಕಾರ್ಯಂ ಗಾನಂ ಗೇಯೋ ಪ್ರಯೋಕ್ತೃಭಿಃ || ನಾ. ಶಾ. xxxix, ೯.

17 ಉತ್ಸವೇ ಚಾಸ್ಯವಿನಿಯೋಗಃ, ಶಾಂತಾಧಿಕೋರಸಃ. ಬೃಹದ್ದೇಶೀ, ಸೇತುಲಕ್ಷ್ಮೀ ಪ್ರಸಾದ ಮಾಲಾ, ತಿರುವೇಂದ್ರಂ (೧೯೨೮) ಪುಟ ೯೬.

18 ಧ್ವನೇಸ್ತು ದೇಶೀತ್ವಂ ಕಥಂ ಜಾತಂ ಮಹಾ ಮುನೇ ! ಅಮೂರ್ತತ್ವಾಚ್ಚ ತೇಷಾಂ ಹಿ ಇತಿ ಮೇ ವಕ್ತುಮರ್ಹಸಿ. ಪುಟ ೧.

19 ಪರಿನಿಶ್ಚಿತನಿರಪಭ್ರಂಶಶಬ್ದಬ್ರಹ್ಮಣಾಂ ವಿಪಶ್ಚಿತಾಂ ಮತಮಾಶ್ರಿತ್ಯೈವ ಪ್ರವೃತ್ತೋಯಂ ಧ್ವನಿವ್ಯವಹಾರ ಇತಿ ತೈಃ ಸಹ ಕಿಂವಿರೋಧಾವಿರೋಧೌ ಚಿಂತ್ಯೇತೇ. ಧ್ವನ್ಯಾಲೋಕ, ಪುಟ ೧೯೯. ಪ್ರಥಮೇ ಹಿ ವಿದ್ವಾಂಸೋ ವೈಯಾಕರಣಾಃ, ಅದೇ ಪುಟ ೪೭.

20 ಧ್ವನಿಸ್ತು ದ್ವಿವಿಧಃ ಪ್ರೋಕ್ತೋ ವ್ಯಕ್ತಾವ್ಯಕ್ತ ವಿಭಾಗತಃ| ವರ್ಣೋಪಲಂಭನಾದ್ ವ್ಯಕ್ತೋ ದೇಶೀಮುಖಮುಪಾಗತಃ. ಬೃಹದ್ದೇಶೀ. ಶ್ಲೋಕ ೧೨. ನ ನಾದೇನ ವಿನಾ ಗೀತಂ ನ ನಾದೇನ ವಿನಾ ಸ್ವರಾಃ ||೧೬|| ನ ನಾದೇನ ವಿನಾ ನೃತ್ತಂ ತಸ್ಮಾನ್ನಾದಾತ್ಮಕಂ ಜಗತ್ | ನಾದರೂಪಃ ಸ್ಮೃತೋ ಬ್ರಹ್ಮಾ ನಾದರೂಪೋ ಜನಾರ್ದನಃ | ನಾದರೂಪಾ ಪರಾಶಕ್ತಿರ್ನಾದರೂಪೋ ಮಹೇಶ್ವರಃ | ಯದುಕ್ತಂ ಬ್ರಹ್ಮಣಃ ಸ್ಥಾನಂ ಬ್ರಹ್ಮಗ್ರಂಥಿಶ್ಚ ಯಃ ಸ್ಮೃತಃ ||೧೮|| ತನ್ಮಧ್ಯೇ ಸಂಸ್ಥಿತಃ ಪ್ರಾಣಃ ಪ್ರಾಣಾದ್ ವಹ್ನಿ ಸಮುದ್ಗಮಃ | ವಹ್ನಿ ಮಾರುತಸಂಯೋಗಾನ್ನಾದಃ ಸಮುಪಜಾಯತೇ ||೧೯|| ನಾದಾದುತ್ಪದ್ಯತೇ ಬಿಂದುರ್ನಾದಾತ್ ಸರ್ವಂ ಚ ವಾಙ್ಮಯಮ್, ಪುಟ ೩.

ಅಳವಡಿಸಿಕೊಳ್ಳಬಹುದಾದ ಸಾಮಾನ್ಯ ತತ್ತ್ವ ಅದರಲ್ಲಿದೆ. ಇಂದು ಪಾಶ್ಚಾತ್ಯರಲ್ಲಿ ಹುಟ್ಟಿರುವ ಸಂಜ್ಞಾತತ್ತ್ವ (Philosophy of Symbolism) ಕೂಡ ಅದರ ಕುಕ್ಷಿಯಲ್ಲಿ ಅಡಗಿದೆ. ಸಮಸ್ತ ಸಂಜ್ಞೆಗಳೂ ಮೂಲಭೂತವಾದ ಪ್ರತಿಭಾಶಕ್ತಿಯು ಉದ್ಧಮಗಳು. ಆ ಮೂಲಾಶ್ರಯವಾದ ಪ್ರತಿಭಾತತ್ತ್ವವನ್ನು ಕಾವ್ಯಕ್ಕಾಗಲಿ, ಸಂಗೀತಕ್ಕಾಗಲಿ, ಆ ಕಲೆಗಳ ವ್ಯಾಪಾರವನ್ನು ಚೆನ್ನಾಗಿ ತಿಳಿದವರು ಹೊಂದಿಸಿಕೊಳ್ಳಬಹುದು. ಕಲೆಗಳ ಪರಿಶ್ರಮವಿಲ್ಲದವರಿಗೆ ಅದರ ಉಪಯೋಗ ಕಡಿಮೆ. ಆ ಪರಿಶ್ರಮವಿದ್ದವರಿಗೆ ತೀ. ನಂ. ಶ್ರೀಕಂಠಯ್ಯನವರು ಹೇಳಿರುವಂತೆ ಭರ್ತೃಹರಿಯ ತತ್ತ್ವ ಒಂದು ಅಕ್ಷಯಪಾತ್ರೆ. ಆನಂದವರ್ಧನನಿಗೂ ಅಭಿನವಗುಪ್ತನಿಗೂ ಸ್ವತಂತ್ರವಾದ ಅನುವ್ಯವಸಾಯ ಯೋಗ್ಯತೆ ಇದ್ದದ್ದರಿಂದಲೇ ಆ ಅಕ್ಷಯಪಾತ್ರೆಯ ಮರ್ಮವನ್ನು ಗ್ರಹಿಸಿ ಅದನ್ನು ಊರ್ಜಿತಗೊಳಿಸಿಕೊಂಡರು. ಹಾಗೆಯೇ ಮತಂಗನೂ ಗೀತವೇದಿಯಾಗಿದ್ದುದರಿಂದಲೇ ಅದನ್ನು ಸಂಗೀತದಲ್ಲಿ ವ್ಯಾಪಕತತ್ತ್ವವಾಗಿ ಬೃಹದ್ದೇಶಿಯಲ್ಲಿ ಬಳಸಿಕೊಳ್ಳಲು ಸಾಧ್ಯವಾದದ್ದು. ಧ್ವನಿಗೆ ಅಗತ್ಯವಾದ ಶ್ರುತಿ, ಸ್ವರ, ಮೂರ್ಛನ, ತಾನ, ಅಲಂಕಾರ, ಅಂಶಗಳು, ನ್ಯಾಸಗಳು, ಗ್ರಾಮಗಳು, ಜಾತಿಗಳು ಮುಂತಾದ ಸರ್ವಸಂಪತ್ತೂ ಭರತನ ನಾಟ್ಯಶಾಸ್ತ್ರದಲ್ಲೂ, ಕಶ್ಯಪ, ಕೋಹಲ, ದತ್ತಿಲರ ಉಕ್ತಿಗಳಲ್ಲೂ ಅಡಗಿತ್ತು. ಅದನ್ನು ಸಂಯೋಗಗೊಳಿಸುವ ತತ್ತ್ವಕ್ಕಾಗಿ ಆ ಸಂಪತ್ತು ಕಾಯುತ್ತಿತ್ತು. ಆ ಸಂಪತ್ತನ್ನು ಸಂಯೋಜನಗೊಳಿಸುವ ಅವಭಾಸತತ್ತ್ವ, ಅಭಿವ್ಯಕ್ತಿತತ್ತ್ವ ಮತಂಗನಿಗೆ ಭರ್ತೃಹರಿಯಲ್ಲಿ ಲಭಿಸಿತು. ಆ ತತ್ತ್ವವನ್ನು ಉಪಯೋಗಿಸಿಕೊಂಡು ಸಂಗೀತದ ಎಲ್ಲ ಅಂಗಗಳನ್ನೂ ಅವನು ಸಂಯೋಗಗೊಳಿಸಿದನು.

ಧ್ವನಿವಿವೇಕವು ಮತಂಗನಲ್ಲಿ ಕೇವಲ ಪ್ರಾಸಂಗಿಕವಲ್ಲ, ಸರ್ವವ್ಯಾಪಕ. ಸಂಗೀತದ ಮಾಧ್ಯಮವಾದ ಶಾರೀರದಿಂದ ಹಿಡಿದು ರಸರಂಜಕತ್ವದವರೆಗೆ ಎಲ್ಲಕ್ಕೂ ವಿಶೇಷಾರ್ಥ ಕೊಡುವ ದೃಷ್ಟಿ ಧ್ವನಿದೃಷ್ಟಿ. ಈ ವಿಶಾಲ ದೃಷ್ಟಿಯಿಂದ ಮತಂಗನು ಸಂಗೀತದ ಎಲ್ಲ ಅಂಗಗಳನ್ನೂ ಅವಸ್ಥೆಗಳನ್ನೂ ಪರಾಮರ್ಶಿಸಿ ಧ್ವನಿದೇಶೀ ಎಂಬ ಹೊಸ ಲಕ್ಷಣವನ್ನು ನಿರ್ಧರಿಸಿರುತ್ತಾನೆ. ಅವುಗಳನ್ನೆಲ್ಲ ಒಳಗೊಂಡು ಏಕಘನವಾದ ರಾಗದ ಲಕ್ಷಣವನ್ನು ಮೊದಲಿಗೆ ಬೃಹದ್ದೇಶಿಯಲ್ಲಿ ಸ್ಥಾಪಿಸಿರುತ್ತಾನೆ. ಬೃಹದ್ದೇಶೀ ಅನ್ವರ್ಥನಾಮ; ಅದು ಬೃಹತ್ತಾದ ಧ್ವನಿಯನ್ನು ಉಪದೇಶಿಸುವ ಗ್ರಂಥ. ಮತಂಗನ ಅನಂತರ ಬಂದ ಪ್ರಖ್ಯಾತರಾದ ಶಾರ್ಙ್ಗದೇವ ಮುಂತಾದ ಧ್ವನಿವೇದಿಗಳು, ಹೆಜ್ಜೆ ಹೆಜ್ಜೆಗೂ ಅದನ್ನು ಸ್ಮರಿಸಿ ಅದರ ತತ್ತ್ವವನ್ನೂ ವಿಸ್ತರಿಸಿದರು. ಮತಂಗಾದಿ ರಹಸ್ಯವೇದಿ[21] ಎಂದು ಹೇಳಿಕೊಳ್ಳುವ ಕಲ್ಲಿನಾಥನು ಅದನ್ನು ಮತ್ತಷ್ಟು ಹಿಗ್ಗಿಸಿದನು. ಸಂಗೀತದ ಎಲ್ಲ ಭಾಗಗಳೂ ಅವಸ್ಥೆಗಳೂ ಧ್ವನಿಯಾಗಿ ಹೇಗೆ ಅಭಿವ್ಯಕ್ತಗೊಳ್ಳುತ್ತವೆ ಎಂಬುದನ್ನು ವಿವರವಾಗಿ ಪರಿಶೀಲಿಸೋಣ.

೪

(ಅ) ಸಂಗೀತದ ಮಾಧ್ಯಮ ಶಾರೀರ. ಚಿತ್ರ, ಶಿಲ್ಪ ಮುಂತಾದ ಇತರ ಕಲೆಗಳ ಮಾಧ್ಯಮ ಬಾಹ್ಯಪ್ರಪಂಚಕ್ಕೆ ಹೆಚ್ಚು ಸಮೀಪವಾದದ್ದು. ಅದು ಪಡೆದ ಆಕೃತಿಗಳೂ ಬಾಹ್ಯ ಪ್ರಪಂಚದ ವಸ್ತುಗಳ ಪ್ರತಿನಿಧಿಗಳಾಗಿ (representations) ತೋರುವ ಸಂಭವವೇ ಹೆಚ್ಚು. ಸಂಗೀತದ ಮಾಧ್ಯಮವಾದರೋ ನಮ್ಮೊಳಗಿನಿಂದಲೇ ಹುಟ್ಟಿಬಂದದ್ದು. ಅದರ ರೂಪಕ್ಕೆ ಹೊರಪ್ರಪಂಚದ ರೂಪಸಾದೃಶ್ಯವಿಲ್ಲ. ಸಂಗೀತದ ಕಾರ್ಯ ಸ್ವಕಾರ್ಯ.[22] ರಾಗಾಭಿವ್ಯಕ್ತಿ ಶಕ್ತಿಯುಳ್ಳದ್ದೇ

---

[21] ಮತಂಗಾದಿರಹಸ್ಯವೇದೀ. ಸಂಗೀತ ರತ್ನಾಕರ ಅಡ್ಯಾರ್, ೨ ನೆಯ ಸಂಪುಟ (೧೯೫೯), ಪುಟ ೧೧೫. ಈ ಧ್ವನಿತತ್ತ್ವದ ಮೂಲಕ ಸರ್ವರಾಗಗಳ ಏಕರೂಪತೆ ನಿಶ್ಚಿತವಾಗುತ್ತದೆ. (ಸರ್ವರಾಗೇಷ್ವೇಕರೂಪತಾ) ಹೀಗೆ ಹೇಳಿದ ಆಂಜನೇಯನು ಮತಂಗನ ಅನುಯಾಯಿ.

[22] ಪುರುಷಪ್ರಯತ್ನಪ್ರೇರಿತೋರ್ಧ್ವಂ ನಾಭೇರೂರ್ಧ್ವಾಕಾರದೇಶಮಾಕ್ರಾಮದ್ ಧೂಮವತ್ ಸೋಪಾನಪದ ಕ್ರಮೇಣ ಪವನೇಚ್ಛಯಾ ಆಹಾಹರೋಹನ್ನತರ್ಭೂತಪೂರಣ ಪ್ರತಿ ನಿಪಾರ್ಯಾಸಾಧ್ಯತಯಾಶ್ರುತ್ಯಾದಿಭೇದ ಭಿನ್ನಃ ಪ್ರತಿಭಾಸ ಇತಿ ಮಾಮಕೀಯಂ ಮತಮ್. ಬೃಹದ್ದೇಶೀ, ಪುಟ ೪. ಶ್ರವಣಾನನಂತರಮ್ ಮನನೇ ಕೃತೇ ಮಾನಸ ಪ್ರತ್ಯಕ್ಷತ್ವಮ್. ಸ್ವಯಂ ರಂಜತೇ ಸ್ವೇನೈವ ಪ್ರಕಾಶತೇ, ಸಂ. ರತ್ನಾ I. ಪುಟ ೪. ಧ್ವನೇರ್ಯ

ಶಾರೀರ. ಶಕ್ತಿ ಎಂದರೆ ರಾಗಾಭಿವ್ಯಕ್ತಿ ಬೀಜರೂಪ. ಆ ಶಕ್ತಿ ಇಲ್ಲದೆ ರಾಗವು ಹುಟ್ಟುವುದೇ ಇಲ್ಲ; ಹುಟ್ಟಿದರೂ ಅದು ಹಾಸ್ಯಾಸ್ಪದವಾಗುತ್ತದೆ. ಶಾರೀರ ಶ್ರುತಿಬದ್ಧವಾದದ್ದು. ನಮ್ಮ ಬೆನ್ನುಮೂಳೆಯಲ್ಲಡಗಿರುವ ಕೆಳಗಿನ ಆಧಾರಚಕ್ರದಿಂದ ಸ್ವಾಧಿಷ್ಠಾನ ಮಣಿಪೂರಕಗಳ ಮೂಲಕ ಹೃದಯಪಂಕಜದ ಅನಾಹತಕ್ಕೆ ಹಬ್ಬಿ ಕಂಠದಲ್ಲಿರುವ ಭಾರತೀಸ್ಥಾನಕ್ಕೆ ಏರಿ, ಹುಬ್ಬುಗಳ ನಡುವೆ ಇರುವ ತ್ರಿದಲಚಲಚಕ್ರದಿಂದ ಗೃಹೀತವಾಗಿ, ಮನಶ್ಚಕ್ರ, ಸಹಸ್ರದಲ ಚಕ್ರವಾದ ಸುಷುಮ್ನದ ಚಿಚ್ಛಕ್ತಿಯಿಂದ ಅವಲೋಕಿತವಾದ ನಾದತನುವೇ ಶಾರೀರ. ಶಾರೀರ ಪ್ರತಿಭಾಶಕ್ತಿಯಿಂದ ಪಳಗಿದ್ದು.

(ಆ) ಗಾಯಕ ಶ್ರೋತೃಗಳಿಂದ ಗ್ರಾಹ್ಯವಾದ ಶ್ರುತಿಯು ಭೌತರೂಪವಲ್ಲ. ಚೈತನ್ಯದಿಂದ ಗ್ರಾಹ್ಯವಾದ ಧ್ವನಿ ಶ್ರುತಿ. ಅದು ಒಂದೇ ಆದರೂ ಸ್ವರಸ್ವರಾಂತರ ವಿಭಾಗದೃಷ್ಟಿಯಿಂದ ಎರಡಾಗಿ ಕಲ್ಪಿತವಾಗುತ್ತದೆ. ನಿಯತವಾದ ಶ್ರುತಿಸ್ಥಾನಗಳಿಂದ ನುಡಿದುವೇ ಸಪ್ತ ಗೀತಿಗಳು; ಅಂತಃಶ್ರುತಿಯಿಂದ ವಿವರ್ತವಾದುವು ಅಂತಃಶ್ರುತಿಗಳು. ಇವುಗಳಿಂದ ಸ್ವರ್ಯವಾದುವೇ ಗ್ರಾಮಾದಿ ವಿಭಾಗಗಳು.[23] ಶ್ರುತಿ ಪಕ್ಷಗಳು ಮೂರು. ಅವು ಇಪ್ಪತ್ತೆರಡೆಂಬುದು ಒಂದು ಪಕ್ಷ; ಅರುವತ್ತಾರೆಂಬುದು ಎರಡನೆಯ ಪಕ್ಷ; ಅನಂತವೆಂಬುದು ಮೂರನೆಯ ಪಕ್ಷ. ಮತಂಗನು ತತ್ತ್ವ ಮತ್ತು ಪ್ರಯೋಗಗಳೆರಡಕ್ಕೂ ಸಮಂಜಸವಾಗಿ ಅವು ಇಪ್ಪತ್ತೆರಡೆಂದೂ, ಅವು ರಸಾಭಿವ್ಯಕ್ತಿ ಹೇತುಗಳೆಂದೂ ವ್ಯವಸ್ಥೆಗೊಳಿಸಿದನು. ಅವನ ಅನಂತರ ಬಂದವರೆಲ್ಲರೂ, ಇಂದಿನವರೂ ಕೂಡ, ಅವನ ಸಿದ್ಧಾಂತವನ್ನು ಅನುಸರಿಸಿಕೊಂಡು ಬಂದಿದ್ದಾರೆ. ಶಾರ್ಙ್ಗದೇವನೂ ಕಲ್ಲಿನಾಥನೂ ದ್ವಾವಿಂಶತಿ ಪಕ್ಷವನ್ನೇ ಸಮರ್ಥಿಸಿರುತ್ತಾರೆ.[24]

(ಇ) ಶ್ರುತಿಬದ್ಧವಾದ ವ್ಯಂಜಕಗಳೇ ಸ್ವರಗಳು. 'ಸರಿಗಾದಿ'ಗಳೇ ಸ್ವರಗಳಲ್ಲ. ಅವು ಕಚಟಪಗಳಂತೆ ಕೇವಲ ಅಕ್ಷರಗಳು, ಸ್ವರ ಸಂಕೇತಗಳು. ಷಡ್ಜ, ಮಧ್ಯಮ ಇತ್ಯಾದಿಗಳು ಅನ್ವರ್ಥನಾಮಗಳೆಂದು ಮತಂಗನು ಸ್ಪಷ್ಟಪಡಿಸಿರುತ್ತಾನೆ. ಉಳಿದ ಆರು ಸ್ವರಗಳ ಜನಕನಾದ್ದರಿಂದ ಷಡ್ಜ. ಶೀಘ್ರವಾಗಿ ಹೃದಯವನ್ನು ಮುಟ್ಟುತ್ತಾದ್ದರಿಂದ ಋಷಭ; ಗಾನಾತ್ಮಕವಾದದ್ದು ಗಾಂಧಾರ; ಸ್ವರಗಳಲ್ಲಿ ಮಧ್ಯಸ್ಥಾನವನ್ನು ಪಡೆದಿರುವುದು ಮಧ್ಯಮ; ಸ್ವರಾಂತರ ವಿಸ್ತಾರಕ್ಕೆ ಕಾರಣವಾಗಿ ಎಣಿಕೆಯಲ್ಲಿ ಐದನೆಯಾದದ್ದು ಪಂಚಮ; ಧೀರವಾದದ್ದು ಧೈವತ; ಷಟ್‌ಸ್ಥಾನಗಳಲ್ಲಿ ಧೃತವಾದದ್ದು ಧೈವತ; ಸ್ವರಗಳೆಲ್ಲವೂ ಯಾವುದರ ಮೂಲಕ ಪರ್ಯವಸಾನ ಪಡೆಯುತ್ತವೆಯೋ ಅದು ನಿಷಾದ.[25] ಷಡ್ಜಾದಿ ಸಪ್ತ ಸ್ವರಗಳು ಶ್ರುತಿಗಳಿಂದ ವ್ಯಂಜಿಸುತ್ತವೆ.

(ಈ) ಈ 'ಸರಿಗಾದಿ' ಅಕ್ಷರಗಳಿಗೆ ವ್ಯಂಜನತ್ವ ಹೇಗೆ ಎಂದು ಕೇಳಬಹುದು.[26] ಮತಂಗನ ಉತ್ತರ ಇದು: (೧) ರಾಗಜನಕ ಧ್ವನಿಯಾದ್ದರಿಂದ ಅದು ಸ್ವರ. ಈ ತನ್ನ ಅಭಿಪ್ರಾಯಕ್ಕೆ ಬೆಂಬಲವಾಗಿ ಕೋಹಲನ ಉಕ್ತಿಯನ್ನು ಸ್ಮರಿಸಿದ್ದಾನೆ. ಧ್ವನಿರಕ್ತಿಯನ್ನೇ ಸ್ವರವೆಂದು ಕರೆಯು

---

ದ್ರಾಗಾಭಿವ್ಯಕ್ತಿಶಕ್ತತ್ವಂ ತಚ್ಛಾರೀರ ಮಿತಿ . . . ಶಕ್ತಿರ್ನಾಮಾತ್ರ ರಾಗಾಭಿವ್ಯಕ್ತಿಬೀಜರೂಪಃ . . ಯಾಂ ವಿನಾ ರಾಗ ಏವ ನ ಪ್ರಸರೇತ್; ಪ್ರಸೃತಂ ವಾ ಹಸನೀಯಂ ಭವೇತ್ ಸಂ. ರತ್ನಾ. ಪುಟ ೧೬೭.

[23] ಶ್ರವಣೇಂದ್ರಿಯ ಗ್ರಾಹ್ಯತ್ವಾದ್ ಧ್ವನಿರೇವ ಶ್ರುತಿರ್ಭವೇತ್ . . . ನಿಯತಶ್ರುತಿಸಂಸ್ಥಾನಾದ್ ಗೀಯಂತೇ ಸಪ್ತಗೀತಿಷು| ತಸ್ಮಾದ್ ಸ್ವರಗತಾಜ್ಞೇಯಾ ಶ್ರುತಯಃ ಶ್ರುತಿವೇದಿಭಿಃ|| ಅಂಶಃ ಶ್ರುತಿವಿವರ್ತಿನ್ಯೋಽಹ್ಯಂತಶ್ರುತಯೋ ಮತಾಃ| ಏತಾಸಾಮಪಿ ಚೈಸ್ವರ್ಯಂ ಕ್ರಿಯಾಗ್ರಾಮ ವಿಭಾಗತಃ|| ಬೃಹದ್ದೇಶೀ, ಪುಟ ೪.

[24] ಬೃಹದ್ದೇಶೀ, ಪುಟಗಳು ೬–೭. ಅತ ಏವ ಮತಂಗಾದಿ ದರ್ಶಿತೇಷು ನವಸ್ತು ಪಕ್ಷೇಷು ದ್ವಾವಿಂಶತಿ ಶ್ರುತಿಪಕ್ಷಮೇವ ರಣನಾನುರಣನಾತ್ಮನಾ ಸಾಕ್ಷಾದನುಭೂಯಮಾನ ಶ್ರುತಿಸ್ವರಭೇದಾನಪಹ್ನವೇನಾವೃತ್ಯಾ . . . ವಿದಧಾತಿ, ಸಂ. ರತ್ನಾ, ಪುಟ ೭೩.

[25] ಬೃಹದ್ದೇಶೀ, ಪುಟಗಳು ೧೭–೧೮. ನಿಷಾದಂತಿ ಸ್ವರಾಃ ಸರ್ವೇ ನಿಷಾದಸ್ತೇನ ಕಥ್ಯತೇ| ಸಂಗೀತ ರತ್ನಾಕರ, (ಅಡ್ಯಾರ್) ಪುಟಗಳು ೪೯–೫೧.

[26] ನನು ಷಡ್ಜಾದೀನಾಂ ಕಥಂ ಸ್ವರತ್ವಂ ವ್ಯಂಜನತ್ವಾತ್. ಬೃಹದ್ದೇಶೀ, ಪುಟ ೧೨.

ವುದು. (೨) ಶ್ರುತ್ಯಂತ ಭಾವಿಗಳಾದುದರಿಂದ ಅವು ವ್ಯಂಜನತ್ವ ಪಡೆದಿವೆ. (೩) ಪರಸ್ಪರ ಸ್ನೇಹದಿಂದ ಹಿತಕರವಾಗಿ ಸೇರಿಕೊಳ್ಳುವುದರಿಂದ ಅವಕ್ಕೆ ವ್ಯಂಜನತ್ವವಿದೆ. (೪) ಸಕ್ರಮವಾಗಿ ವಿಸ್ತಾರ ಹೊಂದುವ ರೂಪಗಳಾದ್ದರಿಂದಲೂ ವ್ಯಂಜನತ್ವ. (೫) ಸಹಕಾರಿಗಳನ್ನು ಅಪೇಕ್ಷಿಸದೆ ಸ್ವತಃ ಶ್ರೋತೃಚಿತ್ತವನ್ನು ರಂಜಿಸುವುದರಿಂದ ವ್ಯಂಜನತ್ವ.[27]

(೬) ಶ್ರುತಿ ಸ್ವರಗಳ ಸಂಬಂಧವು ತಾದಾತ್ಮ್ಯ ಸಂಬಂಧ, ವ್ಯಂಜಕ ವ್ಯಂಗ್ಯ ಸಂಬಂಧ, ಪರಿಣಾಮ ವಿವರ್ತ ಸಂಬಂಧ, ಅಭಿವ್ಯಕ್ತಿ ಸಂಬಂಧವೆಂದು ಮತಂಗನ ಹಿಂದೆ ಯಾರೂ ಹೇಳಿರಲಿಲ್ಲ. ಈ ವಿಚಾರದಲ್ಲಿ ಪಂಚಪಕ್ಷಗಳನ್ನು ಯಾವ ಸಂಗೀತವೇದಿಯೂ ಪರೀಕ್ಷಿಸಿ ತನ್ನ ಪಕ್ಷವನ್ನು ತಾತ್ತ್ವಿಕವಾಗಿ ಸ್ಥಾಪಿಸಿರಲಿಲ್ಲ. ಈ ವಿವೇಚನೆಗೆ ಭರ್ತೃಹರಿಯ ತತ್ತ್ವವೇ ಪ್ರೇರಕ. ಭರ್ತೃಹರಿಯು ಬೌದ್ಧ, ವೈಶೇಷಿಕ, ಸಾಂಖ್ಯವಾದಗಳನ್ನು ಪರಿಶೀಲಿಸಿ ತನ್ನದೇ ಆದ ಆಭಾಸವಾದವನ್ನು ಸ್ಥಾಪಿಸಿದನು. ಕೆಲವೇಳೆ ವರ್ಣ ಪದಗಳ ಸಂಬಂಧವನ್ನು ದಧಿ ಕ್ಷೀರ ನ್ಯಾಯದಂತೆ ಪರಿಣಾಮ ಸಂಬಂಧವೆಂದೂ, ಇನ್ನು ಕೆಲವು ವೇಳೆ ವಿವರ್ತಸಂಬಂಧವೆಂದೂ, ಈ ಪರಿಣಾಮ ರೂಪ ಆಭಾಸವೆಂದೂ, ಅಭಿವ್ಯಕ್ತ ರೂಪವೆಂದೂ, ಈ ಎಲ್ಲ ಪದಗಳನ್ನೂ ಒಂದನ್ನೊಂದು ವಿರೋಧಿಸದ ಪರ್ಯಾಯ ಪದಗಳಾಗಿ ಉಪಯೋಗಿಸಿರುತ್ತಾರೆ.

ಅಂತೂ ಇಲ್ಲಿ ಸಂದಿಗ್ಧತೆಗೆ ಅವಕಾಶವಿದೆ. ಮತಂಗನಾದರೊ ಗೌಡಪಾದ ಶಂಕರಾಚಾರ್ಯರ ಮಾಯಾವಾದರೂಪವಾದ ವಿವರ್ತವಾದವನ್ನು ಒಂದು ನಿರ್ದಿಷ್ಟವಾದ ಪ್ರತಿಪಕ್ಷವಾಗಿ ಲಕ್ಷಿಸಿ, ಅದರ ಪ್ರಕಾರ ಸ್ವರಗಳು ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬದಂತೆ ಮಿಥ್ಯಾರೂಪಗಳಾಗುತ್ತವೆಯಾದುದರಿಂದ, ಆ ವಾದ ಸ್ವರಶ್ರುತಿಗಳ ತಾದಾತ್ಮ್ಯಸಿದ್ಧಿಗೆ ಅನುಪಯೋಗವೆಂದು ಆ ವಾದವನ್ನು ತಳ್ಳಿಹಾಕಿದ್ದಾನೆ. ಶ್ರುತಿಗಳು ಕ್ಷಣಿಕವಾದ ಸ್ವಲಕ್ಷಣ ವ್ಯಕ್ತಿಗಳು, ಅವು ಹುಟ್ಟಿದ ಘಳಿಗೆಯಲ್ಲೇ ನಾಶಹೊಂದುವಂಥವು, ಅವುಗಳಿಂದ ಕೃತಕವಾಗಿ ಕಲ್ಪಿತವಾದ ಸ್ವರಗಳು ಕೃತಕ ಸಾಮಾನ್ಯಗಳು ಎಂದು ಹೇಳುವ ಬೌದ್ಧರ ವಾದವನ್ನು ಪರೀಕ್ಷಿಸಿ ಮತಂಗನು ಅದನ್ನೂ ನಿರಾಕರಿಸಿದ್ದಾನೆ. ಶ್ರುತಿಗಳು ಹುಟ್ಟಿದ ಕ್ಷಣದಲ್ಲೇ ಸಾಯುತ್ತವೆಯಾದ್ದರಿಂದ, ಅವು ಸ್ವರಗಳಲ್ಲಿ ಜೀವಿಸುವುದಿಲ್ಲ. ಆದ್ದರಿಂದ ಸ್ವರ ಸಾಮಾನ್ಯಗಳು ನಿರಾಧಾರವಾದ ಗಗನ ಕುಸುಮ ಸದೃಶವಾಗುತ್ತವೆ. ಈ ಗಗನಕುಸುಮಗಳಿಗೆ ಸಾಮ್ಯವಾದ ಸ್ವರಗಳಿಗೂ ಹುಟ್ಟಿದಾಗಲೇ ನಶಿಸುವ ಶ್ರುತಿಗಳಿಗೂ ತಾದಾತ್ಮ್ಯ ಹೇಗೆ ಸಾಧ್ಯ? ಆದ್ದರಿಂದ ಮತಂಗನು ಬೌದ್ಧರ ವಾದವನ್ನೂ ಅಯುಕ್ತವೆಂದು ಹೇಳಿರುತ್ತಾನೆ. ಇನ್ನು ವೈಶೇಷಿಕರ ವಾದ. ಇದು ಅಸತ್ಕಾರ್ಯವಾದ; ಕಾರ್ಯವು ಕಾರಣದಲ್ಲಿ ಇಲ್ಲವೆಂಬ ವಾದ. ಇದರ ಪ್ರಕಾರ ಶ್ರುತಿಗಳು, ಅಣುರೂಪಗಳು, ಸ್ವರಗಳು ಸಾಮಾನ್ಯಗಳು. ಇವು ಸಮವಾಯಿ ಸಂಬಂಧದ ಮೂಲಕ ಆಶ್ರಯ ಆಶ್ರಯಿಗಳು. ಶ್ರುತಿಗಳು ಸ್ವರಗಳಿಗೆ ಬಾಹ್ಯವಾದುವು, ಇವುಗಳನ್ನು ಸೇರಿಸುವ ಸಮವಾಯಿ ಸಂಬಂಧವು ಇವೆರಡಕ್ಕೂ ಬಾಹ್ಯವಾದದ್ದು. ಹೀಗೆ ಒಂದಕ್ಕೊಂದು ತೀರ ಬಾಹ್ಯವಾದ ಪ್ರಭೃತಿಗಳಿಗೆ ತಾದಾತ್ಮ್ಯ ಅಸಾಧ್ಯ. ಆದ್ದರಿಂದ ಆ ವಾದವೂ ಅಸಾಧುವೆಂದು ಅದನ್ನೂ ಮತಂಗನು ನಿರಾಕರಿಸಿರುತ್ತಾನೆ. ಇನ್ನು ಪರಿಣಾಮವಾದ. ಹಾಲು ಮೊಸರಾಗಿ ಪರಿಣಮಿಸುವಂತೆ, ಶ್ರುತಿಗಳು ಸ್ವರರೂಪವಾಗಿ ಪರಿಣಮಿಸುತ್ತವೆಂದು ಹೇಳುವುದು ಅಸಾಧುವಲ್ಲವೆಂದು ತಿಳಿಸುತ್ತಾನೆ. ಕೊನೆಯಲ್ಲಿ, ದೀಪದಿಂದ ಗಡಿಗೆಯ ರೂಪ ಉದ್ದೀಪನವಾದಂತೆ ಸ್ವರಗಳು ಶ್ರುತಿಗಳಿಂದ ಉದ್ದೀಪನವಾಗುತ್ತವೆ, ಅಭಿವ್ಯಕ್ತವಾಗುತ್ತವೆ, ಎಂಬ ವಾದವನ್ನು ಸಂಗತವೆಂದು ಬಗೆದಿರುತ್ತಾನೆ. ಒಟ್ಟಿನಲ್ಲಿ ಪರಿಣಾಮ ಮತ್ತು ಅಭಿ

[27] ರಾಗಜನಕೋ ಧ್ವನಿಃ ಸ್ವರ ಇತಿ. ತಥಾ ಚಾಹ ಕೋಹಲಃ. ನಾಡಿಭಿತ್ತೌ ತಥಾಕಾಶೇ ಧ್ವನಿರಕ್ತಃ ಸ್ವರಸ್ಮೃತಃ. ಬೃಹದ್ದೇಶೀ. ಪುಟ ೧೨. ತಥಾ ಚಾಹ ಕೋಹಲಃ. ಊರ್ಧ್ವನಾಡೀಪ್ರಯತ್ನೇನ ಸರ್ವಭಿತ್ತಿನಿಘಟ್ಟನಾತ್ ಮೂರ್ಛಿತೋ ಧ್ವನಿರಾಮೂರ್ಧ್ನಃ ಸ್ವರೋಽಸೌ ವ್ಯಾಪಕಃ ಪರಃ|| ಅದೇ ಪುಟ. ಶ್ರುತ್ಯನಂತರಭಾವೀ ಶ್ರುತೇಶ್ಚತುರ್ಥಾದೇರ್ವಾರುತಾದ್ಯಾಹತ್ಯುತ್ಪನ್ನಪ್ರಥಮಧ್ವನೇರನಂತರಭಾವ್ಯಾವಿರ್ಭವಶೀಲಃ, ಸ್ನಿಗ್ಧೋ ರೂಕ್ಷಃ ಸಂದೂರಸಂಶ್ರಾವ್ಯಃ; ಅನುರಣಾತ್ಮಕೋಽನುಸ್ವಾನರೂಪಃ; ಸ್ವತಃ ಸಹಕಾರಿಕಾರಣನಿರಪೇಕ್ಷಂ ಶ್ರೋತೃಚಿತ್ತಂ ರಂಜಯತ್ಯನುರಕ್ತಂ ಕರೋತಿ. ಸಂ. ರತ್ನಾ (ಅಡ್ಯಾರ್) ಪುಟ ೮೨.

ವ್ಯಕ್ತಿ ನ್ಯಾಯಗಳೆರಡೂ ಸಾಧು ಪಕ್ಷಗಳೆಂದು ಪರಿಸಮಾಪ್ತಿಗೊಳಿಸಿರುತ್ತಾನೆ.[28] ಮುಖ್ಯವಾಗಿ ಅವನ ವಾದದಲ್ಲಿ ಲಕ್ಷಿಸಬೇಕಾದದ್ದು, ಸ್ವರಶ್ರುತಿಗಳ ತಾದಾತ್ಮ್ಯ ಸಂಬಂಧವು ಬಾಹ್ಯಾರ್ಥಗಳಿಗೆ ಅನ್ವಯವಾಗುವ ಕಾರ್ಯಕಾರಣ ಸಂಬಂಧವಲ್ಲವೆಂಬುದು. ಏಕೆಂದರೆ ಅವು ಲೌಕಿಕ ಪದಾರ್ಥಗಳಲ್ಲ. ಅವುಗಳ ಸಂಬಂಧವನ್ನು ಅನುಮಾನ ಅರ್ಥಾಪತ್ತಿಗಳೆಂಬ ತಾರ್ಕಿಕ ಉಪಾಯಗಳಿಂದ ತಿಳಿಯಲಾಗುವುದಿಲ್ಲ.[29] ಪ್ರತಿಭೆಯೊಂದೇ ಅದನ್ನು ತೋರಿಸುವ ಪ್ರಮಾಣ.

(ಊ) ಸ್ವರಸಮೂಹಗಳನ್ನು ಮತಂಗನು ನಾಲ್ಕಾಗಿ ವಿಂಗಡಿಸಿರುತ್ತಾನೆ. ಅವು ವಾದಿ, ಸಂವಾದಿ, ಅನುವಾದಿ, ವಿವಾದಿಗಳು. ಪ್ರಥಮವಾಗಿ ಪ್ರಧಾನವಾಗಿ ನುಡಿಯುವ ಸ್ವರಸಮೂಹವು ವಾದಿ. ಅದು ರಾಜನಿಗೆ ಸಮಾನ. ಅದಕ್ಕೆ ಅನಂತರದಲ್ಲಿ ಬೆಂಬಲಕೊಟ್ಟು ಅದನ್ನು ವರ್ಧಿಸುವುದು ಸಂವಾದಿಸಮೂಹ. ಅದು ಅಮಾತ್ಯನಿಗೆ ಸಮನಾದದ್ದು. ಮಧ್ಯೇ ಮಧ್ಯೇ ವಾದಿಯನ್ನು ಸೇವಿಸುವುವು ಅನುವಾದಿಗಳು. ಅವು ಭೃತ್ಯರಿಗೆ ಸಮಾನ. ಇವುಗಳ ಮಂಡಲಗಳನ್ನು ಬೃಹದ್ದೇಶೀಯದ ೧೪ ರಿಂದ ೧೮ ಪುಟಗಳಲ್ಲಿ ನೋಡಬಹುದು.

(ಋ) ಸ್ವರಶ್ರುತ್ಯಾದಿ ಸಂಯುಕ್ತ ಸಮೂಹಗಳು ಗ್ರಾಮಗಳು.[30] ಸ್ವರಶ್ರುತಿಜಾತಿಗಳು ಗ್ರಾಮರಾಗಗಳಿಂದ ಹುಟ್ಟುತ್ತವೆ. ಷಡ್ಜ ಮಧ್ಯಮ ಗ್ರಾಮಗಳಿಂದ ಎಲ್ಲ ಬಗೆಯ ಜಾತಿಗಳೂ ಹುಟ್ಟುತ್ತವೆ. ಇವುಗಳಲ್ಲಿ ಮೋಹ ಹೆಚ್ಚಿಸಿ ಒಂದು ಉನ್ನತರೂಪವನ್ನು ಸೃಷ್ಟಿಸುವುದಕ್ಕೆ ಮೂರ್ಛನವೆಂದು ಹೆಸರು.[31]

(ೠ) ಮೂರ್ಛನದಿಂದ ಏರ್ಪಟ್ಟ ರಾಗಬೀಜವನ್ನು ಅಭಿವ್ಯಕ್ತಗೊಳಿಸುವವು ವರ್ಣಗಳು. ಇವು ನಾಲ್ಕು ಬಗೆಯವು : ಸ್ಥಾಯಿ, ಸಂಚಾರಿ, ಆರೋಹಿ, ಅವರೋಹಿ. ಸರ್ವಾಲಂಕಾರ ಸಿದ್ಧರೂಪಗಳೇ ವರ್ಣಗಳು.[32] ಸ್ವರಸಂದರ್ಭಗಳನ್ನು ಏರ್ಪಡಿಸುವುದೇ[33] ವರ್ಣಗಳ ಕರ್ತವ್ಯ. ನಾಟಕದಲ್ಲಿ ಸರಿಯಾದ ಸಂದರ್ಭವೇರ್ಪಡಿಸಿದ ವಿನಾ ನಾಯಕನಾಯಿಕೆಯರು ಎಷ್ಟೇ ತೇಜಸ್ವಿಗಳಾದರೂ ಸತ್ತ್ವವುಳ್ಳವರಾದರೂ ಅವರ ಸತ್ತ್ವ ಹೊರಹೊಮ್ಮುವುದಿಲ್ಲ. ಅಂತೆಯೇ ರಾಗದ ಪಾತ್ರಗಳಾದ ವಾದಿ ಸಂವಾದಿ ಅನುವಾದಿ ವಿವಾದಿಗಳು ಶೋಭಿಸಬೇಕಾದರೆ ತನ್ಮೂಲಕ ಆಕರ್ಷಣ ವಿಕರ್ಷಣ ಹುಟ್ಟಿಸುವ ಉಚಿತವಾದ ಸಂದರ್ಭದ ಸೃಷ್ಟಿ ಅಗತ್ಯ. ವಾದಿಯು ವಿವಾದಿಯನ್ನು ಲಕ್ಷಿಸುತ್ತ ಅದನ್ನು ತಡೆದಿಡಬೇಕು. ಈ ಕಾರ್ಯದಲ್ಲಿ ಸಂವಾದಿ ಅನುವಾದಿಗಳು ಅದಕ್ಕೆ ನೆರವಾದಂತೆ ಏರ್ಪಡಬೇಕು. ವಾದಿ ಸಂವಾದಿ ವಿವಾದಿಗಳ ನಾಟ್ಯಾಯಮಾನವೇ ಸಂಗೀತ. ಬೆಳದಿಂಗಳಿಲ್ಲದ

---

28 ತಾದಾತ್ಮ್ಯಂಚ ವಿವರ್ತತ್ವಂ ಕಾರ್ಯತ್ವಂ ಪರಿಣಾಮಿತಾ | ಅಭಿವ್ಯಂಜಕತಾ ಚಾಪಿ ಶ್ರುತೀನಾಂ ಪರಿಕಥ್ಯತೇ ||೩೧|| ಬೃಹದ್ದೇಶೀ. ಭೇದಃ ಸ್ವರಲಕ್ಷಣಾನಾಂ ಸಾಮಾನ್ಯೇನಾನ್ಯವಸ್ತುವತ್ ಸಿದ್ಧಃ| ತದ್ಧಿ ವಿಶೇಷೈಃ ಶೂನ್ಯಂ ಭವತಿ ನಭಃ ಪುಷ್ಪ ಸಂಕಾಶಮ್ || ೩೮ || ನಾನಾಬುದ್ಧಿಪ್ರಸಾಧ್ಯತ್ವಾತ್ ಸ್ವರಶ್ರುತ್ಯೋಸ್ತು ಭಿನ್ನತಾ | ಆಶ್ರಯಾಶ್ರಯಿಭೇದಾಚ್ಚ ತಾದಾತ್ಮ್ಯಂ ನೈವ ಸಿಧ್ಯತಿ || ೩೯ || ಯದಭಾಣಿ ವಿವರ್ತತ್ವಂ ಶ್ರುತೀನಾಂ ತದಸಂಗತಮ್ | ವಿವರ್ತತ್ವೇ ಸ್ವರಾಣಾಂ ಹಿ ಭ್ರಾಂತಿಜ್ಞಾನಂ ಪ್ರಸಜ್ಯತೇ ||೪೦|| ಕಾರ್ಯಕಾರಣಭಾವಸ್ತು ಸ್ವರಶ್ರುತ್ಯೋರ್ನ ಸಂಭವೇತ್ | ಶ್ರುತೀನಾಮಿಹ ಸದ್ಭಾವೇ ಪ್ರಮಾಣಂ ನೈವ ವಿದ್ಯತೇ ||೪೧|| ಪರಿಣಾಮೋಭಿವ್ಯಕ್ತಿಸ್ತು ನ್ಯಾಯ್ಯಃ ಪಕ್ಷಃ ಸತಾಂ ಮತಃ ||೪೫||.

29 ಶ್ರುತ್ಯಾದಿಭೇದಭಿನ್ನಃ ಪ್ರತಿಭಾಸ ಇತಿ, ಬೃಹದ್ದೇಶೀ, ಪುಟ ೪.

30 ಸಮೂಹವಾಚಿನೌ ಗ್ರಾಮೌ ಸ್ವರಶ್ರುತ್ಯಾದಿ ಸಂಯುತೌ. ಬೃಹದ್ದೇಶೀ. ಪುಟ ೨೦. ಜಾತಿಭಿಃ ಶ್ರುತಿಭಿಶ್ಚೈವ ಸ್ವರಾ ಗ್ರಾಮತ್ವಮಾಗತಾಃ. ಅದೇ, ಪುಟ ೨೧.

31 ಮೂರ್ಛ್ಯತೇ ಯೇನ ರಾಗೋ ಹಿ ಮೂರ್ಛನೇತ್ಯಭಿಸಂಜ್ಞಿತಾ. ಪುಟ ೨೨.

32 ಯದಾ ಹಿ ಸ್ವರಾ ವರ್ಣಕರ್ಷಮಾಕರ್ಷಯಂತಿ ಗೀತವಶಾತ್ ಸ್ಥಾಯಿತ್ವೇನ ಸಂಚಾರಿತ್ವೇನ ಆರೋಹಿತ್ವೇನ ಅವರೋಹಿತ್ವೇನ ತದಾ ವರ್ಣಸ್ಯ ನಿಷ್ಪತ್ತಿಃ ವ್ಯುತ್ಪತ್ತಿಶ್ಚ ಯಥಾ—'ಡುಕೃಞ್‌ಕರಣೇ' ಧಾತುರಲಂಕೃತಶಬ್ದಪೂರ್ವಃ. ಬೃಹದ್ದೇಶೀ, ಪು. ೩೪-೩೫.

33 ವಿಶಿಷ್ಟಂ ವರ್ಣಸಂದರ್ಭಮಲಂಕಾರಂ ಪ್ರಚಕ್ಷತೇ. ಸಂ ರತ್ನಾ, I vi, ೩. ಅತೋ ಸಂದರ್ಭವಿಶೇಷಣಂ ಸ್ವರಾಣಾಂ ವಿಶೇಷಣಂ. ಕಲ್ಲಿನಾಥ, ಸಂ. ರತ್ನಾ, (ಆನಂದಾಶ್ರಮ) ಪುಟ ೨೭೧. ಗ್ರಹಾದಿಸ್ವರಸಂದರ್ಭೋ ರಂಜಕೋ ರಾಗ ಉಚ್ಯತೇ. ರಾಣಾ ಕುಂಭಕರ್ಣ, ಸಂಗೀತರಾಜ. ಶ್ಲೋಕ ೩೩.

ರಾತ್ರಿ, ನೀರಿಲ್ಲದ ನದಿ, ಹೂವಿಲ್ಲದ ಲತೆ, ಒಪ್ಪವಿಲ್ಲದ ಅಂಗನೆಯರು ಹೇಗೆ ಶೋಭಿಸುವುದಿಲ್ಲವೋ ಹಾಗೆಯೇ ಪ್ರಸನ್ನಾದಿ ಮುಂತಾದ ವರ್ಣಾಲಂಕಾರಗಳಿಲ್ಲದ ಸಂಗೀತ ಶೋಭಿಸುವುದಿಲ್ಲ. ನೃತ್ಯ ನೃತ್ತಗಳಲ್ಲಿ ಕರಣಗಳು (gestures) ಹೇಗೋ ಹಾಗೆಯೇ ಸಂಗೀತದಲ್ಲಿ ಅಲಂಕಾರಗಳು ಕರಣಗಳು.[34] ಇವು ಸಂದರ್ಭ ವಿಶೇಷ ರೂಪಗಳಾದ್ದರಿಂದ ಇವು ಸಂಗೀತದ ರಕ್ತಿಲಾಭಕ್ಕೆ[35] ಅವಶ್ಯವಾದ ಅಂಗಗಳು; ಅನುಚಿತ ಬಾಹ್ಯಾಡಂಬರಗಳಲ್ಲ. ಅನುಚಿತ ಪ್ರಯೋಗದಿಂದ ಇವು ಬಾಹ್ಯಾಡಂಬರಗಳೆಂಬ ಅಪವಾದ ತಲೆದೋರುತ್ತದೆ. ಎಷ್ಟೇ ಶ್ರೇಷ್ಠವಾದ ಅಂಶವಾಗಲಿ ಔಚಿತ್ಯ ತಪ್ಪಿದರೆ ಅದು ಕೇವಲ ಅನಗತ್ಯವಾದ ಬಾಹ್ಯಾಂಶ ಮಾತ್ರವಾಗುವುದಿಲ್ಲ, ಹಂತಕವಾಗುತ್ತದೆ. ಅದು ಸುಖಾವಹವಾಗುವುದರ ಬದಲು ಭಾಮಹನು ಹೇಳಿದಂತೆ ಹಸಿಯ ಬೇಲದಕಾಯಿ ತಿಂದಾಗ ಗಂಟಲು ಕಟ್ಟಿ ಪ್ರಾಣಹಿಂಸೆಯಾಗುವಂತೆ ಕ್ಲೇಶವುಂಟುಮಾಡುತ್ತದೆ.

ಮತಂಗನ ದೃಷ್ಟಿಯಲ್ಲಿ—ಶಾರ್ಙ್ಗದೇವ ಮುಂತಾದ ಪ್ರಸಿದ್ಧರಾದ ಎಲ್ಲರ ದೃಷ್ಟಿಯಲ್ಲೂ—ಅಲಂಕಾರಗಳು ಸಂಗೀತದಲ್ಲಿ ನಿತ್ಯವಾದುವು, ಅತ್ಯಗತ್ಯವಾದುವು, ಅಭಿವ್ಯಕ್ತಿ[36]ಗೊಳಿಸುವಂಥವು. ಶ್ರುತಿಸ್ವರಗಳೇ ವ್ಯಂಜಕಗಳೆಂದ ಮೇಲೆ ಅಲಂಕಾರಗಳನ್ನು ವ್ಯಂಜಕಗಳೆಂದೂ ಅಭಿವ್ಯಕ್ತಿ ರೂಪಗಳೆಂದೂ ಮತಂಗನು ಹೇಳಿರುವುದೇನೂ ಆಶ್ಚರ್ಯಕರವಲ್ಲ. ಮತಂಗನು ಹೆಸರಿಸಿರುವ ಅಲಂಕಾರಗಳು ಇವು : ಪ್ರಸನ್ನಾದಿ, ಪ್ರಸನ್ನಾಂತ ಪ್ರಸನ್ನಾದ್ಯಂತ ಪ್ರಸನ್ನಮಧ್ಯಮಗಳ ಸಮಬಿಂದುಗಳ ನಿವೃತ್ತಿ ಪ್ರವೃತ್ತಿಗಳಿಂದ ಉತ್ಪಾದ್ಯವಾದ ವರ್ಣಗಳು: ಕಂಪಿತ, ಕುಹರಿತ, ರೇಚಿತ, ಪ್ರೇಙ್ಖೋಲಿತ, ತಾರಮಂದ್ರ ಪ್ರಮಂದ್ರತಾರ, ಪ್ರಸನ್ನ ನಿಸನ, ಹ್ರಸ್ವಾರಪ್ರಸಾದ, ಉದ್ವಾಹಿತ, ಉಪಲೋಕಕ, ಕ್ರಮ, ನಿಷ್ಕೂಜಿತ, ಆಹ್ಲಾದಮಾನ, ರಂಜಿತ, ಆವರ್ತಕ, ಪರಿವರ್ತಕ, ಉದ್ಘಟಿತ, ಆಕ್ಷಿಪ್ತಕ, ಸಂಪ್ರದಾನ, ಹಸಿತ, ಹುಂಕಾರ, ಸಂಧಿಪ್ರಚ್ಛಾದನ, ವಿಧುತ, ಉದ್ಗೀತ ಗಾತ್ರವರ್ಣ.

(ಎ) ಈ ಅಲಂಕಾರಗಳು ಎಷ್ಟೇ ಮುಖ್ಯವಾಗಲಿ, ಇವುಗಳಿಂದಲೇ ಸಂಗೀತ ಪೂರ್ಣವಾಗಿ ಶೋಭಿಸುವುದಿಲ್ಲ. ಅಲಂಕಾರಗಳ ವ್ಯಂಜನತ್ವವು ಅವುಗಳಲ್ಲೇ ಪರಿಸಮಾಪ್ತವಾಗದೆ ಅದು ವರ್ಧಿಸಬೇಕು. ಈ ವರ್ಧಮಾನಕ್ಕೆ ಕಾರಣಗಳಾಗುವ ಸ್ವರಾಂಶಗಳು, ಅಲಂಕಾರಗಳು ಅಂಶಗಳಿಗೆ ಪ್ರತಿಸ್ಪರ್ಧಿಗಳಲ್ಲ; ಅಂಶಗಳೂ ಅಲಂಕಾರಗಳಿಗೆ ಪ್ರತಿಸ್ಪರ್ಧಿಗಳಲ್ಲ. ಇವು ಪರಸ್ಪರ ಪೋಷಕವಾಗಿ ಏಕಘನವಾದ ರಾಗರೂಪದಲ್ಲಿ ಪೂರ್ಣಗೊಳ್ಳುತ್ತವೆ. ಎಲ್ಲವೂ ವ್ಯಂಜಕಗಳೇ. ಆದರೆ ಅಂಶಗಳಲ್ಲಿ ಅನುರಣನ ರೂಪ ವಿಸ್ತರಿಸಿ ಧ್ವನಿರೂಪ ಪ್ರಕಾಶಿಸುತ್ತದೆ.[37] ಅಲಂಕಾರಗಳ ವ್ಯಾಪ್ತಿ ನಿಯತ, ಅಂಶಧ್ವನಿವ್ಯಾಪ್ತಿ ಅನಿಯತ, ವಿಶಾಲ; ಅಲಂಕಾರಧ್ವನಿ ಬಾಹ್ಯಗೋಚರ, ಅಂಶಧ್ವನಿ ಅಂತರ್ಗೋಚರ. ರಾಗದ ಹೃದಯರೂಪ, ಅಂಶರೂಪ. ರೂಪಬಾಹುಳ್ಯವೇ, ರೂಪವಿಸ್ತಾರವೇ, ವ್ಯಾಪಕತ್ವವೇ ಅಂಶಧ್ವನಿಯ ಲಕ್ಷಣ. ಮೂವತ್ತಾರು ಅಲಂಕಾರಗಳು ಅಗತ್ಯವಾದರೂ ಅವುಗಳಿಗಿಂತ ಅಂಶಗಳು ಪ್ರಧಾನ. ಅದು ಹೇಗೆ ಎಂದು ಕೇಳಿದರೆ ಮತಂಗನ ಉತ್ತರ ಇದು : ರಾಗವನ್ನು ಜನಿಯಿಸುವುದರಲ್ಲಿ ಇವು ತುಂಬ ವ್ಯಾಪಕಗಳಾದ್ದರಿಂದ; ಅವುಗಳ ಕ್ರಿಯೆಯಿಂದ ರಾಗ ಪ್ರವೃದ್ಧವಾಗುವುದರಿಂದ; ರಾಗಾಭಿವ್ಯಕ್ತಿ ಉಂಟುಮಾಡುವುದರಿಂದ; ಅಲಂಕಾರಗಳು ಉತ್ಸರ್ಗವಾಗಿ, ಅಂದರೆ ಹಿಂದಕ್ಕೆ ಸರಿದು ಅಂಶಗಳು ಮುಂದೆ ಬಂದು ನಿಲ್ಲುವುದರಿಂದ.[38]

---

[34] ಗೀತಾಲಂಕಾರಾಣಾಂ ಕರಣವಿಧಿರಯಂ ಸಮುದ್ದಿಷ್ಟಃ. ಬೃಹದ್ದೇಶೀ, ಪುಟ, ೪೭.

[35] ಯದ್ ಗೀತಂ ವರ್ಣಾಭಿವ್ಯಕ್ತಿಕೃತ್ ಯತ್ರ ಪದೇ ಸ ವರ್ಣಃ. ಬೃಹದೇಶೀ, ಪುಟ, ೩೩.

[36] ರಕ್ತಿಲಾಭ ಇತಿ | ಸ್ವರಾಣಾಂ ರಂಜಕತ್ವಜ್ಞಾನಂ ಸ್ಥಾಯ್ಯಾದಿವರ್ಣಾನಾಂ ವೈಚಿತ್ರ್ಯಂ ಚಾಲಂಕಾರ ನಿರೂಪಣೇ ಪ್ರಯೋಜನಂ || ಸಂ. ರತ್ನಾ. (ಅಡ್ಯಾರ್) ಪುಟ, ೧೯೪.

[37] ಶ್ರವಣಯೋಗ್ಯತ್ವಮನುರಣಾತ್ಮನಃ ಸ್ವರತಾನಾದಿ ದೀರ್ಘದೀರ್ಘವ್ಯಾಪಿ ವಿದ್ಯತೇ. ವರ್ಧಮಾನ ಪದೇ ತಾಸಾಂ ಕಾರ್ಯಾ ಸ್ಯಾದಾಂಶಕಲ್ಪನಾ. ಬೃಹದ್ದೇಶೀ, ಪುಟ ೬೫.೬೪ ನೇಯ ಪುಟದಲ್ಲೂ ಹಾಗೆಯೆ.

[38] ನನು ಕಥಮಂಶಸ್ಯೈವ ಪ್ರಾಧಾನ್ಯಮುಚ್ಯತೇ. ರಾಗಜನಕತ್ವಾದ್ ವ್ಯಾಪಕತ್ವಾಚ್ಚಾಂಶಸ್ಯೈವ ಪ್ರಾಧಾನ್ಯಂ. ಯದ್ಯಪಿ ಸರ್ವಜಾತೀನಾಂ ಗ್ರಹೋಂಶಶ್ಚ ಪ್ರಧಾನೀಭೂತ ಇತ್ಯುತ್ಸರ್ಗಸಿದ್ಧಮ್. ಬೃಹದ್ದೇಶೀ. ಪುಟ ೫೬. ಯಸ್ಮಿನ್ನಂಶೇ ಕ್ರಿಯಮಾಣೇ ರಾಗಾಭಿವ್ಯಕ್ತಿರ್ಭವತಿ ಸೋಂಶಃ. ಯಸ್ಮಾದಾರಭ್ಯ ಗೀತಃ ಪ್ರವರ್ತತೇ.

ಅವು ಹತ್ತುವಿಧವಾದವು.[39] ರಾಗದಲ್ಲಿ ಮೊದಲನೆಯದು ಗ್ರಹಭಾಗ, ಎರಡನೆಯದು ಅಂಶಭಾಗ, ಕೊನೆಯದು ನ್ಯಾಸಭಾಗ; ಮೊದಲನೆಯದರಿಂದ ಆರಂಭವಾಗಿ ಅಂಶಭಾಗದಿಂದ ವರ್ಧಿಸಿ, ನ್ಯಾಸಭಾಗದಲ್ಲಿ ಪರಿಸಮಾಪ್ತಿಹೊಂದುತ್ತದೆ, ಬಿಡುಗಡೆ ಹೊಂದುತ್ತದೆ ಅಥವಾ ವಿಶ್ರಾಂತಿ ಹೊಂದುತ್ತದೆ.[40] ಇದು ರಾಗದ ಮೋಕ್ಷದಶೆ. ಹೀಗೆ ನಾನಾ ದಶೆಗಳಿಂದ ಉತ್ಪನ್ನವಾದ ಧ್ವನಿಯ ಉಪದೇಶವೇ ಬೃಹದ್ದೇಶೀ.[41] ಅದು ಧ್ವನಿಯ ವಿಸ್ತಾರನಿರೂಪಣೆ.

೨೩

ಹೀಗೆ ವಿಸ್ತಾರವಾದ ಧ್ವನಿದೃಷ್ಟಿಯಿಂದ ಧ್ವನಿಯನ್ನೊಳಗೊಂಡ ರಾಗಲಕ್ಷಣವನ್ನು ಮೊಟ್ಟಮೊದಲಿಗೆ ಕಲ್ಪಿಸಿದವನು ಮತಂಗ. 'ಭರತನು ಈ ರಾಗಲಕ್ಷಣವನ್ನು ಹೇಳಿಲ್ಲ, ನಾನು ಈಗ ಅದನ್ನು ನಿರೂಪಿಸುತ್ತೇನೆ' ಎಂದು ಕಂಠೋಕ್ತವಾಗಿ ಹೇಳಿರುತ್ತಾನೆ. ಇದು ನಾರದ ಮತಂಗರ ಈ ಸಂವಾದದಿಂದ ಸ್ಪಷ್ಟವಾಗುತ್ತದೆ.

ಕಿಮುಚ್ಯತೇ ರಾಗಶಬ್ದೇನ ಕಿಂವಾ ರಾಗಸ್ಯ ಲಕ್ಷಣಮ್ |
ಉತ್ಪತ್ತಿಲಕ್ಷಣಂ ತಸ್ಯ ಯಥಾವದ್ ವಕ್ತುಮರ್ಹಸಿ || ೨೭೮ ||

ಗ್ರಂಥಾರಂಭದಲ್ಲಿ ನಾರದನು "ಧ್ವನೇಸ್ತು ದೇಶೀತ್ವಂ ಕಥಂ" ಎಂದು ಕೇಳಿದಂತೆ ಈಗ ಗ್ರಂಥದ ಮಧ್ಯಭಾಗವಾದ ರಾಗಾಧ್ಯಾಯದಲ್ಲಿ, ರಾಗದ ಲಕ್ಷಣ ಮತ್ತು ವ್ಯುತ್ಪತ್ತಿ ಏನು ಎಂದು ಮತಂಗನನ್ನು ಕೇಳುತ್ತಾನೆ.

ಮತಂಗ ಉವಾಚ—

ರಾಗಮಾರ್ಗಸ್ಯ ಯದ್ ರೂಪಂ ಯನ್ನೋಕ್ತಂ ಭರತಾದಿಭಿಃ |
ನಿರೂಪ್ಯತೇ ತದಸ್ಮಾಭಿರ್ಲಕ್ಷ್ಯಲಕ್ಷಣಸಂಯುತಮ್ || ೨೭೯ ||

ತತ್ರಾದೌ

ಸ್ವರವರ್ಣವಿಶೇಷೇಣ ಧ್ವನಿಭೇದೇನ ವಾ ಪುನಃ |
ರಜ್ಯತೇ ಯೇನ ಯಃ ಕಶ್ಚಿತ್ ಸರಾಗಃ ಸಂಮತಃ ಸತಾಮ್ || ೨೮೦ ||

ಅಥವಾ—

ಯೋಽಸೌ ಧ್ವನಿವಿಶೇಷಸ್ತು ಸ್ವರವರ್ಣ ವಿಭೂಷಿತಃ |
ರಂಜಕೋ ಜನಚಿತ್ತಾನಾಂ ಸ ಚ ರಾಗ ಉದಾಹೃತಃ || ೨೮೧ ||

ಸಾಮಾನ್ಯಂ ಚ ವಿಶೇಷಶ್ಚ ಲಕ್ಷಣಂ ದ್ವಿವಿಧಂ ಮತಮ್ |
ಚತುರ್ವಿಧಂತು ಸಾಮಾನ್ಯಂ ವಿಶೇಷಶ್ಚಾಂಶಕಾದಿಕಮ್ || ೨೮೨ ||

ಇತ್ಯೇವಂ ರಾಗಶಬ್ದಸ್ಯ ವ್ಯುತ್ಪತ್ತಿರಭಿಧೀಯತೇ |
ರಂಜನಾಜ್ಜಾಯತೇ ರಾಗೋ ವ್ಯುತ್ಪತ್ತಿಃ ಸಮುದಾಹೃತಾ || ೨೮೩ ||

---

ಬೃಹದ್ದೇಶೀ ಪುಟ ೫೭. ಯಥೋಕ್ತಂ ಮತಂಗೇನ ಬಹುಲತ್ವಂ ಪ್ರಯೋಗೇಷು ವ್ಯಾಪಕತ್ವಾಂಶ ಲಕ್ಷಣಂ. ಅಂಶಸ್ಯ ಸಂವಾದೀ ವಾ ಭವತಿ ಯಸ್ಮಾಚ್ಚೈವಪ್ರವರ್ತತೇ. ಬೃಹದ್ದೇಶೀ, ಪುಟ ೫೮.

[39] ಅಂಶವಿಭಾಗಃ. ಸ ದಶವಿಧೋ ಬೋದ್ಧವ್ಯಃ ಬೃಹದ್ದೇಶೀ, ಪುಟ ೫೯. ಅಂಶಸ್ಯ ಸಂವಾದೀ ವಾ ಭವತಿ ಯಸ್ಮಾಚ್ಚೈವ ಪ್ರವರ್ತತೇ | ನೇತಾ ಚ ತಾರಮಂದ್ರಾಣಾಂ ಯೋಽತ್ಯರ್ಥಮುಪಲಭ್ಯತೇ || ಗ್ರಹಾಪನ್ಯಾಸ ವಿನ್ಯಾಸಸಂನ್ಯಾಸಗೋಚರಃ | ಅನುವೃತ್ತಶ್ಚ ಯಶ್ಚೇಹ ಸೋಽಂಶಃ ಸ್ಯಾದ್ ದಶಲಕ್ಷಣಃ || ಬೃಹದ್ದೇಶೀ, ಪುಟ ೪೮.

[40] ತತ್ರಾದೌ ಜಾತ್ಯಾದಿ ಪ್ರಯೋಗೋ ಗೃಹ್ಯತೇ ಯೇನಾಸೌ ಗ್ರಹಃ. ಬೃಹದ್ದೇಶೀ, ಪುಟ ೫೬. ಗ್ರಹಸ್ತು ಸರ್ವಜಾತೀನಾಮಂಶವತ್ ಪರಿಕೀರ್ತಿತಃ | ಯತ್ಪ್ರವೃತ್ತೇ ಭವೇದ್ ಗೇಯಃ ಸೋಽಂಶೋ ಗ್ರಹ ವಿಕಲ್ಪಕಃ || ಪುಟ ೫೭. ನ್ಯಸ್ಯತೇ ತ್ಯಜ್ಯತೇ ಯಸ್ಮಿನ್ ಯೇನ ವಾ ಗೀತಂ ತನ್ನ್ಯಾಸ ಇತಿ. ಪುಟ ೬೦.

[41] ಧ್ವನೇಸ್ತು ದೇಶಿಯತ್ವಂ. ಬೃಹದ್ದೇಶೀ ಪುಟ ೧.

ಅಶ್ವಕರ್ಣಾದಿವದ್ ರೂಢೋ ಯೌಗಿಕೋವಾಪಿ ವಾಚಕಃ|
ಯೋಗಾರೂಢೋ ಯಥಾ ರಾಗೋ ಜ್ಞೇಯೋ ಪಂಕಜಶಬ್ದವತ್ || ೨೮೪ ||

ಈ ರಾಗಲಕ್ಷಣದಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದದ್ದು ಇದು : ರಾಗದಲ್ಲಿ ಮತಂಗನು ಎರಡು ಭಾಗಗಳನ್ನು ಮೊಟ್ಟಮೊದಲಿಗೆ ಕಲ್ಪಿಸಿರುತ್ತಾನೆ.[42] ಸ್ವರವರ್ಣಾಲಂಕಾರ ತ್ರಿಷಷ್ಟಿ ವಿಭಾಗ. ತ್ರಿಷಷ್ಟಿಭೇದ ಭಿನ್ನವಾದ[43] ಅಂಶಭಾಗ, ಧ್ವನಿಭಾಗ. ಈ ಎರಡು ದೃಷ್ಟಿಗಳಿಂದಲೂ ರಾಗಲಕ್ಷಣವನ್ನು ಹೇಳಿರುತ್ತಾನೆ. ಮೊದಲನೆಯದಾಗಿ ಗಾಯಕನ ದೃಷ್ಟಿಯಿಂದ, ಎರಡನೆಯದಾಗಿ ಶ್ರೋತೃದೃಷ್ಟಿಯಿಂದ, ಜನರ ಚಿತ್ತರಂಜನೆಯ ದೃಷ್ಟಿಯಿಂದ ಲಕ್ಷಿಸಿರುತ್ತಾನೆ. ರಾಗದಲ್ಲಿ ಅಲಂಕಾರಭಾಗ ಸಾಮಾನ್ಯಭಾಗ, ಅಂಶಭಾಗ ವಿಶೇಷಭಾಗ.

ಮತಂಗನ ಅನಂತರ ಬಂದ ಗಣ್ಯರಾದ ಧ್ವನಿವೇದಿಗಳೆಲ್ಲರೂ ಅವನನ್ನೇ ಅನುಸರಿಸಿರುತ್ತಾರೆ. ರಾಣಾ ಕುಂಭಕರ್ಣನು **ಸಂಗೀತರಾಜ**ದಲ್ಲಿ ಹೇಳಿರುವ ರಾಗಲಕ್ಷಣ ಇದು: ವಿಚಿತ್ರ ವರ್ಣಾಲಂಕಾರೋ ವಿಶೇಷೋ ಯೋ ಧ್ವನ್ಯೈರ್ ಇಹ| ಗ್ರಹಾದಿ ಸ್ವರಸಂದರ್ಭೋ ರಂಜಕೋ ರಾಗ ಉಚ್ಯತೇ || ೩೩ ||

'ಸಂಗೀತಸಮಯಸಾರ'ಕಾರನಾದ ಪಾರ್ಶ್ವದೇವನೂ ಅದನ್ನು ಪುನಶ್ಚರಣೆ ಮಾಡಿರುತ್ತಾನೆ.

ಸ್ವರವರ್ಣ ವಿಶಿಷ್ಟೇನ ಧ್ವನಿಭೇದೇನ ವಾ ಪುನಃ|
ರಜ್ಯತೇ ಯೇನ ಸಚ್ಚಿತ್ತಂ ಸರಾಗಃ ಸಂಮತಃ ಸತಂ ||[45]

ಶಾರ್ಙ್ಗದೇವನು ಧ್ವನಿಗೆ ಕಾರಣವಾದ ಈ ಅಂಶ ಸ್ವರಗಳನ್ನು ಜೀವಸ್ವರಗಳೆಂದು ಕರೆದಿದ್ದಾನೆ.[46] ಮತಂಗನಂತೆಯೇ ಶಾರ್ಙ್ಗದೇವನೂ ಒಂದು ಜೀವಸ್ವರ (ಅಂಶಸ್ವರ)ವಿರುವ ರಾಗಗಳನ್ನೂ ಎರಡಂಶಗಳಿರುವ ರಾಗಗಳನ್ನೂ ಮೂರು, ನಾಲ್ಕು, ಐದು, ಆರು, ಏಳಂಶಗಳಿರುವ ರಾಗಗಳನ್ನೂ ಅವು ಯಾವ ಯಾವ ರಸಗಳನ್ನು ಅಭಿವ್ಯಕ್ತಗೊಳಿಸುತ್ತವೆಯೆಂಬುದನ್ನೂ ವಿಸ್ತಾರವಾಗಿ ಹೇಳಿರುತ್ತಾನೆ.[47]

ಮತಂಗಾದಿರಹಸ್ಯವೇದೀ ಎಂದು ಹೇಳಿಕೊಳ್ಳುವ ಕಲ್ಲಿನಾಥನು " ಸೋಂಶಃ ತ್ರಿಷಷ್ಟಿ

---

42 ಮತಂಗನಿಗಿಂತ ಹಿಂದೆ ವಿಶ್ವಾವಸು, ದತ್ತಿಲ, ಕೋಹಲ ಮುಂತಾದವರಲ್ಲೂ ಧ್ವನಿಯ ಸೂಚನೆಗಳಿವೆ. ಆದರೆ ರಾಗರೂಪದಲ್ಲಿ ಅದು ರಾಗಲಕ್ಷಣದಲ್ಲಿ ಪ್ರತಿಷ್ಠಿತವಾಗಿರುವುದು ಮತಂಗನಲ್ಲಿ. ಧ್ವನಿಯ ಸೂಚನೆಗಳಿವೆ ಎಂಬುದಕ್ಕೆ ಇವು ಆಧಾರ ಸಾಮಗ್ರಿ: ವಿಶ್ವಾವಸುವಿನ ಮತ್ತು ಕೋಹಲನ ಈ ಭಾಗವನ್ನು ಮತಂಗನು ಉದ್ಧರಿಸಿರುತ್ತಾನೆ. ಶ್ರವಣೇಂದ್ರಿಯಗ್ರಾಹ್ಯತ್ವಾತ್ ಧ್ವನಿರೇವ ಶ್ರುತಿರ್ಭವೇತ್ . . . ಅಂತಃಶ್ರುತಿ ವಿವರ್ತಿನ್ಯೋ ಹ್ಯಂತರಶ್ರುತಯೋ ಮತಃ. ಬೃಹದ್ದೇಶಿ, ಪುಟ ೪. ನಾಡೀಭಿತ್ತೌ ತದಾಕಾಶೇ ಧ್ವನಿರಕ್ತಃ ಸ್ವರ ಸ್ಮೃತಃ. ಮೂರ್ಛಿತೋ ಧ್ವನಿರಾಮೂರ್ಧ್ನಃ ಸ್ವರೋ ವ್ಯಾಪಕಃ ಪರಃ. ಬೃಹದ್ದೇಶೀ, ಪುಟ ೧೨. ಅಭಿನವಗುಪ್ತನು ಅಭಿನವಭಾರತಿಯಲ್ಲಿ ಹೀಗೆ ಹೇಳಿರುತ್ತಾನೆ. ದತ್ತಿಲಾಚಾರ್ಯೋಪಿ ಧ್ವನಿ ಶಬ್ದೇನಾನುಸ್ಥಾನಮೇವಾಭ್ಯಧಾತ್. ಷಡ್ಜತ್ವೇನ ಗೃಹೀತೋ ಯಃ ಷಡ್ಜಗ್ರಾಮೇ ಧ್ವನಿಃ. I—22. ನಾಟ್ಯಶಾಸ್ತ್ರ, ಗಾಯಕವಾಡ್ ಗ್ರಂಥಮಾಲಾ, ನಾಲ್ಕನೆಯ ಸಂಪುಟ, ೧೯೬೪, ಪುಟ ೧೩.

43 ಅಂಶವರ್ತಿಷಷ್ಟಿಭೇದಭಿನ್ನೋ ಬೋದ್ಧವ್ಯಃ, ಬೃಹದ್ದೇಶೀ. ಪುಟ ೫೬.

44 ಮತಂಗೇನಾಪಿ—ಸೋಂಶವತ್ತ್ರಿಷಷ್ಟಿ ಭೇದ ಭಿನ್ನೋ ಬೋದ್ಧವ್ಯಃ ಇತಿ—ಯೋ ರಕ್ತಿವ್ಯಂಜಕಃ ಸಂ. ರತ್ನಾ I. ಪುಟ ೧೮೨.

45 ಸಂಗೀತ ರತ್ನಾಕರದ ಭಾಷ್ಯಕಾರನಾದ ಕಲ್ಲಿನಾಥನಿಂದ ಉದಾಹೃತ. ಸಂಗೀತರತ್ನಾಕರ, ಅಡ್ಯಾರ್, ಎರಡನೆಯ ಸಂಪುಟ, ಪುಟ ೩.

46 ಸ್ಥಾಯ್ಯಾಸ್ತದನ್ವಿತಾಶ್ಚಾಲೇರಂಶೋಜೀವ ಸ್ವರೋ ಮತಃ. ಸಂಗೀತರತ್ನಾಕರ (ಅಡ್ಯಾರ್) ೨ ನೆಯ ಸಂಪುಟ, III, ೧೬೫, ಪುಟ ೧೮೪. ಟೀಕೆ—ಚಾಲಿಃ ಭಂಗಿವಿಶೇಷೇಣ ಸ್ವರಾಣಾಂ ಚಾಲನಮ್. . . ಅಂಶ ಸ್ವರೋ ಜೀವಸ್ವರ ಇತ್ಯುಚ್ಯತೇ. ಅದೇ ಪುಟ.

47 ಬೃಹದ್ದೇಶೀ, ಪುಟಗಳು ೬೪-೬೫. ಸಂಗೀತರತ್ನಾಕರ, ಅಡ್ಯಾರ್ ಮೊದಲನೆಯ ಸಂಪುಟ, ಪುಟಗಳು, ೧೭೮-೧೭೯.

ಭೇದಭಿನ್ನೋ ಬೋದ್ಧವ್ಯಃ" ಎಂಬ ಮತಂಗೋಕ್ತಿಯನ್ನು ಟೀಕಿಸುತ್ತ ಈ ಅಂಶಧ್ವನಿಯನ್ನು ಕಾವ್ಯಧ್ವನಿಯಲ್ಲೊಂದಾದ ವಿವಕ್ಷಿತಾನ್ಯಪರವಾಚ್ಯಸಂಲಕ್ಷ್ಯಕ್ರಮಧ್ವನಿಗೆ ಹೋಲಿಸಿರುತ್ತಾನೆ.[48] ಪ್ರಬಂಧ ಅಧ್ಯಾಯದಲ್ಲಿ ಮತಂಗನು ತಾಲ, ಪ್ರಾಸ, ಪದ ಮುಂತಾದ ಪ್ರಬಂಧ ಗೀತೆಯ ಅಂಗಗಳಿಂದ ಧ್ವನಿಪ್ರತಾಪ ವರ್ಧಿಸುತ್ತದೆ ಎಂಬುದನ್ನು ತಿಳಿಸಿರುವಂತೆಯೇ ಶಾರ್ಙ್ಗದೇವನೂ ಮತ್ತಷ್ಟು ವಿವರವಾಗಿ ತಿಳಿಸಿರುತ್ತಾನೆ. ಮತಂಗನಂತೆ ಶಾರ್ಙ್ಗದೇವನೂ ಋಗ್ವೇದಾದಿಗಳಿಂದ ಹುಟ್ಟಿದ ನಂದವತೀ ಮುಂತಾದುವು ಧ್ವನಿರಂಜಕವಾದುವು ಎಂದು ಹೇಳಿರುವುದು ಗಮನಾರ್ಹ.[49]

ಒಂದೊಂದು ರಾಗದ ಸರ್ವಾಂಗಗಳನ್ನೂ ಅವನು ಹೇಗೆ ವೀಕ್ಷಿಸುತ್ತಾನೆ ಎಂಬುದನ್ನು ಶಾಂತಾಧಿಕವಾದ ಬೋಟ್ಟರಾಗಕ್ಕೆ ಅನ್ವಯವಾದಂತೆ ಉದಾಹರಿಸಬಹುದು. ಬೋಟ್ಟರಾಗವು ಷಡ್ಜಮಧ್ಯಮ ಸಂಬಂಧಿ. ಷಡ್ಜ ಮಧ್ಯಮ ಪಂಚಮೀ ಜಾತಿಗಳಿಂದ ಹುಟ್ಟಿದ್ದು. ಪಂಚಮ ಗ್ರಹಾಂಶ, ಮಧ್ಯಮನ್ಯಾಸ, ನಿಷಾದ ಗಾಂಧಾರಗಳಲ್ಲಿ ಅಲ್ಪತ್ವ, ಪೂರ್ಣಸ್ವರಗಳುಳ್ಳದ್ದು. ಉತ್ಸವಾದಿಗಳಲ್ಲಿ ವಿನಿಯೋಗ, ಶಾಂತಾದಿ ಅಧಿಕ, ಪಂಚಮಾದಿ ಮೂರ್ಛನಾ, ಆರೋಹಿ ವರ್ಣ, ಪ್ರಸನ್ನಾಂತ ಅಲಂಕಾರ, ದಕ್ಷಿಣೇ ಕಲಾ, ನಾರ್ಕಿಕೇ ಕಲಾ, ಚಿತ್ರೇ ಕಲಾ, ಸ್ವರ ಪದ ಗೀತೆಯಲ್ಲಿ ಚಚ್ಚತ್ಪುಟತಾಳ.[50]

ಕೆಲವು ಜಾತಿರಾಗಗಳಲ್ಲಿ—ಉದಾ. ನಂದಯಂತೀ ಜಾತಿಯಲ್ಲಿ—ಒಂದೇ ಅಂಶ ಸ್ವರವಾದ್ದರಿಂದ ಇದರಲ್ಲಿ ಒಂದು ರಸದ ಅಭಿವ್ಯಕ್ತಿ ಮಾತ್ರ ಸಾಧ್ಯ. ಕೈಶಿಕೀ ಜಾತಿ ರಾಗದಲ್ಲಿ ಆರು ಅಂಶ ಸ್ವರಗಳಿರುವುದರಿಂದ ಅದರ ಮೂಲಕ ಹೆಚ್ಚು ರಸಗಳಿಗೆ ಅವಕಾಶವಿದೆ. ಷಡ್ಜಮಧ್ಯಮದಲ್ಲಿ ಏಳು ಅಂಶ ಸ್ವರಗಳಿರುವುದರಿಂದ ಎಲ್ಲ ರಸಗಳಿಗೂ ಅದು ಆಧಾರವಾಗಬಹುದು.

ಹಿಂದಿನಕಾಲದ ಮತಂಗ ಮುನಿಯಂಥ ಶಾರ್ಙ್ಗದೇವನಂಥ ಧ್ವನಿವೇದಿಗಳು ಯೋಗ ಶಾಸ್ತ್ರ ಪ್ರಯೋಗವನ್ನು ತಿಳಿದವರಾಗಿದ್ದರು. ಅವರಿಗೆ ನಾದಸ್ಥಾನಗಳ ಭಾವಸ್ಥಾನಗಳ ಅರಿವಿತ್ತು.[51] ಒಂದೊಂದು ಭಾವಸ್ಥಾನವನ್ನೂ ತತ್ಸಮವಾದ ನಾದಸ್ಥಾನವನ್ನೂ ಅರಿತು ಧ್ಯಾನಾ

---

[48] ರಕ್ತಿವ್ಯಂಜಕ ಇತ್ಯೇತಾವತ್ಯುಚ್ಯಮಾನೇ ಸ್ವರಗತರಕ್ತಿ ಮಾತ್ರ ವ್ಯಂಜಕತ್ವಂ ಸ್ವರಾಂತರಾಣಾಮಪ್ಯ ವಿಷ್ಟಮಿತೀಹ ಸ್ವರ ಸಂದರ್ಭ ಭೇದ ಪ್ರತಿನಿಯತ ರಕ್ತಿವಿಶೇಷ ವ್ಯಂಜಕತ್ವಸ್ಯ ವಿವಿಕ್ಷಿತತ್ವಾದ್ಗೇಯ ಇತಿ ವಿಶೇಷಣಂ ಯಥಾ ವಾಕ್ಯಾರ್ಥಭೂತರಸಾದಿ ವ್ಯಂಜಕತ್ವಂ ವಿವಕ್ಷಿತಾನ್ಯಪರವಾಚ್ಯೇ ಸಂಲಕ್ಷ್ಯಕ್ರಮಧ್ವನೌ ಸ್ವಾರ್ಥಮಭಿದಧತಃ ಪದಸ್ಯ. ಸಂಗೀತ ರತ್ನಾಕರ ಒಂದನೆಯ ಸಂಪುಟ, ಪುಟ, ೧೮೨.

[49] ಬೃಹದ್ದೇಶೀ. ೪೯೨, ೫೦೦, ೫೦೧ ನೆಯ ಶ್ಲೋಕಗಳನ್ನು ನೋಡಿ. ನಂದಾವತೀ ತೃತೀಯಾ ಚತುರ್ಯಾ ಭದ್ರಾವತೀ ಸ್ಮೃತಾ। ಋಗ್ವೇದಾದಿ ಸಮುದ್ಭೂತಾ ವಿಚಿತ್ರ ಧ್ವನಿರಂಜಿತಾ ॥ ೪೩೯ ॥ ಏಕೈಕ ಪದ ಸಂಯುಕ್ತಾ ಮೂರ್ಛನಾ ಧ್ವನಿ ಸಂಕುಲಾ ॥ ೪೫೨ ॥ ವರ್ಣ ಧ್ವನಿ ಸಮಾಯುಕ್ತಾ ಪದ್ಮಿತ್ಯೇಲಾ ನಿಗದ್ಯತೇ ॥ ೪೮೨ ॥ ಮಾತ್ರಾಸಮಾ ಧ್ವನಿಶ್ಚಾತ್ರ ವಿರಾಮೋನಂತರಂ ಕ್ವಚಿತ್ ॥ ೫೦೦ ॥ ಭಾವಾಭಿನಯತಾಲಾಢ್ಯಾ ವಿಚಿತ್ರಧ್ವನಿರಂಜಿತಾ ಪ್ರಾಸಹೀನಾ ರಸಸ್ಥಾ ಚ ಏಲಾ ದ್ರವಿಡದೇಶಜಾ ॥ ೪೯೨ ॥ ಏಲಾ ಕರ್ಣಾಟಕಾ ಪ್ರೋಕ್ತಾ ಲಲಿತ ಧ್ವನಿ ಸಂಯುತಾ ॥ ೪೭೯ ॥

[50] ಬೃಹದ್ದೇಶೀ, ಪುಟ ೯೬.

[51] ಸ್ವಾಧಿಷ್ಠಾನಂ ಲಿಂಗ ಮೂಲೇ ... ಫಲಾನ್ಯೇತಾನ್ಯನುಕ್ರಮಾತ್. ಪ್ರಶ್ರಯಃ ಕ್ರೂರತಾಗರ್ವನಾಶೋ ಮೂರ್ಛಾ ತತಃ ಪರಮ್ ॥೧೨೨-೩॥ ಅವಜ್ಞಾಸ್ಯಾದವಿಶ್ವಾಸಃ ಕಾಮಶಕ್ತೇರಿದಂ ಗೃಹಮ್। ನಾಭೌ ದಶದಲಂ ಚಕ್ರಂ . . . ॥೧೨೪॥ ಸುಷುಪ್ತಿರತ್ರ ತೃಷ್ಣಾ ಸ್ಯಾದೀರ್ಷ್ಯಾ ಪಿಶುನತಾ ತಥಾ। ಲಜ್ಜಾ ಭಯಂ ಘೃಣಾ ಮೋಹಃ ಕಷಾಯೋಥ ವಿಷಾದಿತಾ ॥೧೨೫॥ . . . ಹೃದಯೇನಾಹತಂ ಚಕ್ರಂ ಶಿವಸ್ಯ ಪ್ರಣವಾಕೃತೇಃ ॥೧೨೬॥ ಪೂಜಾಸ್ಥಾನಂ ತದಿಚ್ಛಂತಿ . . . ಲೌಲ್ಯಪ್ರಣಾಶಃ ಪ್ರಕಟೋ ವಿತರ್ಕೋಽಪ್ಯನುತಾಪಿತಾ ॥೧೨೭॥ ಆಶಾ ಪ್ರಕಾಶಶ್ಚಿಂತಾ ಚ ಸಮೀಹಾ ಸಮತಾ ತತಃ। ಕ್ರಮೇಣ ದಂಭೋ ವೈಕಲ್ಯಂ ವಿವೇಕೋಹಂಕೃತಿಸ್ತಥಾ ॥೧೨೮॥ ಕಂಠೇಽಸ್ತಿ ಭಾರತೀಸ್ಥಾನಂ . . . ಅಮೃತಂ ಸಪ್ತಸ್ವರಾಃ ॥೧೩೦॥ ಲಲನಾಖ್ಯಂ ಘಂಟಿಕಾಯಾಂ ಚಕ್ರಂ. . . ಮದೋ ಮಾನಸ್ತತಃ ಸ್ನೇಹಃ ಶೋಕಃ ಖೇದಶ್ಚ ಲುಬ್ಧತಾ। ಅರತಿಃ ಸಂಭ್ರಮಶ್ಚೋರ್ಮಿಃ ಶ್ರದ್ಧಾತೋಷೋ ಪರೋಧಿತಾಃ ॥೧೩೨॥ ತತೋಽಪ್ಯಸ್ತಿ ಮನಶ್ಚಕ್ರಂ . . . ॥೧೩೪॥ ಸ್ವಪ್ನೋ ರಸೋಪಭೋಗಶ್ಚ ಘ್ರಾಣಂ ರೂಪೋಪಲಂಭನಮ್। ಸ್ಪರ್ಶನಂ ಶಬ್ದಬೋಧಶ್ಚ ಪೂರ್ವಾದಿಷುದಲೇಷ್ವಿತಿ ॥೧೩೫॥

ರೂಢರಾಗಿ ರಾಗಾಲಪ್ತಿಯಲ್ಲಿ ತಾದಾತ್ಮ್ಯ ಹೊಂದಬಲ್ಲವರಾಗಿದ್ದರು. ಅವರಿಗೆ ಧ್ಯಾನಶ್ಲೋಕಗಳ ಆವಶ್ಯಕತೆ ಇರಲಿಲ್ಲ. ಸುಮಾರು ಕ್ರಿ.ಶ. ೧೩ ನೆಯ ಶತಮಾನದ ವೇಳೆಗೆ ಒಂದೊಂದು ರಾಗಕ್ಕೂ ಧ್ಯಾನಶ್ಲೋಕಗಳು ಪ್ರಾರಂಭವಾದುವು. ತದನಂತರದಲ್ಲಿ ಧ್ಯಾನಶ್ಲೋಕಗಳನ್ನೂ ಉಪಯೋಗಿಸಿಕೊಳ್ಳಲಾಗದ ಗಾಯಕರ ಉಪಯೋಗಕ್ಕಾಗಿ ಧ್ಯಾನ ಚಿತ್ರಗಳು ಉದ್ಭವಿಸಿದುವು. ಈ ಚಿತ್ರಗಳ ಶೈಲಿ ಮೊಘಲ್ ಮತ್ತು ರಾಜಪುತ್ರ ಶೈಲಿ. ಅವುಗಳಲ್ಲಿ ಕೆಲವು—ತೋಡೀರಾಗಿಣಿ, ದೇಶವರಾಟಿ, ಕಕುಭ, ಮಾಲವೀ—ರಾಗಿಣೀ ಚಿತ್ರಗಳು ಅತ್ಯುತ್ತಮ ಭಾವಚಿತ್ರಗಳು. ಈ ಚಿತ್ರಗಳನ್ನು ಬರೆದವರ ಸಂಗೀತ ಪ್ರತಿಭೆ ಅವರ ಚಿತ್ರಗಳಲ್ಲಿ ಔಚಿತ್ಯದಿಂದ ಮೂಡಿಬಂದಿದೆ. ಮನಶ್ಶಾಸ್ತ್ರ ದೃಷ್ಟಿಯಿಂದ ಪ್ರತಿಭೆ ಒಂದೇ ಆದರೂ, ಕಲೆಯಲ್ಲಿ ಅದರ ವ್ಯಾಪಾರ ಒಂದೇ ಆದರೂ, ಅದು ಆಯಾ ಕಲೆಯ ಮಾಧ್ಯಮಕ್ಕೆ ಹೊಂದಿಕೆಯಾದಂತೆ ತಿಳಿಯಲು ಆ ಕಲೆಗಳ ಪರಿಶ್ರಮ ವಿಶೇಷವಾಗಿ ಪಳಗಿರಬೇಕು. ಆದ್ದರಿಂದ ಈ ಚಿತ್ರಗಳನ್ನು ಸೃಷ್ಟಿಸಿದವರಿಗೂ ಆ ಚಿತ್ರಗಳಿಂದ ಸ್ಫೂರ್ತಿಪಡೆಯಬೇಕಾದ ಗಾಯಕರಿಗೂ ಎರಡರ ಧ್ವನಿ ರೂಪವನ್ನೂ ಗ್ರಹಿಸುವ ಶಕ್ತಿ ಇರಬೇಕು. ಯಾರೊಬ್ಬರಲ್ಲಿ ಅದು ಇಲ್ಲದಿದ್ದರೂ ಆ ಚಿತ್ರಗಳಿಂದ ಉಪಕಾರಕ್ಕಿಂತ ಅಪಕಾರವಾಗುವ ಸಂಭವವೇ ಹೆಚ್ಚು. ಮೂಲಭೂತವಾದ ಶಕ್ತಿಯೊಂದೇ ಕಲೆಯ ಪ್ರಮಾಣ. ಇದರ ಬಲವಿದ್ದರೆ ಪರಿಶ್ರಮದಿಂದ ಅದು ವರ್ಧಿಸುತ್ತದೆ. ಆ ಬಲವಿಲ್ಲದೆ ಬೇರೆಯ ಐಶ್ವರ್ಯ ಎಷ್ಟಿದ್ದರೂ, ಎಷ್ಟು ಪೋಷಣೆಯ ಸೌಕರ್ಯವಿದ್ದರೂ ಸಾರ್ಥಕ್ಯವಿಲ್ಲ. ಪ್ರತಿಭೆಯೇನೂ ಅಂಥ ಅತಿಮಾನುಷ ಶಕ್ತಿಯೇನೂ ಅಲ್ಲ. ಅದು ಮನುಷ್ಯಜಾತಿಗೆ ಸಹಜವಾದದ್ದು ; ಆ ಜಾತಿ ಹುಟ್ಟುವುದಕ್ಕೆ ಅದೇ ಕಾರಣ. ಅದು ಮಾನವ ಚೈತನ್ಯದ ಪ್ರಥಮ ಸ್ಪಂದನ. ಶಿಶುಗಳಲ್ಲಿ ಪ್ರಥಮವಾಗಿ ಕೆಲಸ ಮಾಡುವುದು ಅದೇ. ಮಾನವನು ನೂತನವಾದ ಯಾವುದನ್ನಾದರೂ ಕಂಡುಹಿಡಿಯಲು ಅತ್ಯಗತ್ಯವಾದದ್ದು ಅದೇ.

---

ತತೋಽಪಿ . . . ಸೋಮ ಚಕ್ರಮಿತೀರಿತಮ್ ||೧೩೬|| ಕೃಪಾ ಕ್ಷಮಾರ್ಜವಂ ಧೈರ್ಯಂ ವೈರಾಗ್ಯಂ ಧೃತಿಸಂಮದೌ| ಹಾಸ್ಯಂ ರೋಮಾಂಚನಿಚಯೋ, ಧ್ಯಾನಾಶ್ರು ಸ್ಥಿರತಾ ತತಃ ||೧೩೭|| ಗಾಂಭೀರ್ಯಮುದ್ಯಮೋಽಚ್ಛತ್ವಮೌದಾರ್ಯೈಕಾಗ್ರತೇಕ್ರಮಾತ್ | . . . ||೧೩೮|| ಚಕ್ರಂ ಸಹಸ್ರಪತ್ರಂ ತು . . . . | ತತ್ಸುಧಾಸಾರಧಾರಾಭಿರಭಿವರ್ಧಯತೇ ತನುಮ್ ||೧೩೯|| . . . ದ್ವಾದಶೇ ಚ ಸ್ಥಿತೋ ಜೀವೋ ಗೀತಾದೇಃ ಸಿದ್ಧಿಮೃಚ್ಛತಿ ||೧೪೦|| ಚತುರ್ಥ ಷಷ್ಠದಶಮೈರ್ದಲೈರ್ಗೀತಾದಿ ನಶ್ಯತಿ |೧೪೧|| ಬ್ರಹ್ಮರಂಧ್ರಿಸ್ಥಿತೋ ಜೀವಃ ಸುಧಯಾ ಸಂಪ್ಲುತೋ ಯಥಾ ||೧೪೩|| ತುಷ್ಟ್ಯೇ ಗೀತಾದಿ ಕಾರ್ಯಾಣಿ ಸಪ್ರಕರ್ಷಾಣಿ ಸಾಧಯೇತ್| ಏಷಾಂ ಶೇಷೇಷು ಪತ್ರೇಷು ಚಕ್ರೇಷ್ವನ್ಯೇಷು ಚ ಸ್ಥಿತಃ ||೧೪೪|| ಜೀವೋ ಗೀತಾದಿ ಸಂಸಿದ್ಧಿಂ ನ ಕದಾಚಿದವಾಪ್ನುಯಾತ್ . . . ||೧೪೫|| ಶರೀರ ಮತ್ತು ಮನಸ್ಸಂಬಂಧವನ್ನು ವಿಚಾರಮಾಡುವ ವಿಜ್ಞಾನದಲ್ಲಿ ಇಂದ್ರಿಯಗಳಿಗೂ ಮಿದುಳಿಗೂ ಬೆನ್ನಿನ ಬಳಿಯ ಮೂಲಕ ಇರುವ ನರಗಳ ವ್ಯವಸ್ಥೆ ವಿಸ್ತಾರವಾಗಿ ವರ್ಣಿತವಾಗಿದೆ. ಅದರಲ್ಲಿ ಪ್ರಾಯೋಗಿಕವಾಗಿ ಸ್ಥಿರಪಟ್ಟ ವಿವರಗಳು ಅನೇಕವಾಗಿವೆ. ಅಷ್ಟೊಂದು ವಿವರಗಳು ಯೋಗಶಾಸ್ತ್ರದಲ್ಲಿ ಇಲ್ಲದಿದ್ದರೂ, ಸಿ. ಷೆರಿಂಗ್‌ಟನ್‌ನಿಂದ ಪ್ರತಿಪಾದಿತವಾದ ಮೂಲಭೂತವಾದ ಅಂಶಗಳಿಗೂ ಯೋಗಶಾಸ್ತ್ರದ ಮೂಲಭೂತವಾದ ಅಂಶಗಳಿಗೂ ಸಾಂಗತ್ಯವಿದೆ. ಪಾಶ್ಚಾತ್ಯ ಶಾಸ್ತ್ರದಲ್ಲಿ ಧ್ಯಾನಾರೂಢವಾದ ಅಂತರಂಗ ಪರೀಕ್ಷಾ ವಿಧಾನವನ್ನು ಪರಿಣಾಮಕಾರಿಯಾದ ರೀತಿಯಲ್ಲಿ ಉಪಯೋಗಿಸಿಕೊಂಡಿರುವುದಿಲ್ಲ. ವಾಟ್ಸನ್ನಿನಂತೆ ಆ ವಿಧಾನವನ್ನು ಅವಹೇಳನ ಮಾಡುವ ಮನಶ್ಶಾಸ್ತ್ರಜ್ಞರೇ ಹೆಚ್ಚು. ನಮ್ಮಲ್ಲಿ ಶರೀರವನ್ನು ಪ್ರಾಯೋಗಿಕವಾಗಿ ವಿಶ್ಲೇಷಿಸಿ ನೋಡುವ ಕ್ರಮ ಚರಕ ಸುಶ್ರುತರ ಕಾಲಕ್ಕೆ ನಿಂತುಹೋಯಿತು. ಇವೆರಡು ವಿಧಾನಗಳೂ ಒಂದಕ್ಕೊಂದು ಪೋಷಕವಾದ ಹೊರತು ಮನಶ್ಶಾಸ್ತ್ರದ ಸಮಸ್ಯೆಗಳು ಬಗೆಹರಿಯಲಾರವು. ಯೋಗಶಾಸ್ತ್ರದಿಂದ ಏರ್ಪಟ್ಟ ವಿಷಯಗಳನ್ನು ಪ್ರಯೋಗದಿಂದ ಪುನರ್ವಿಮರ್ಶಿಸುವುದೂ, ಪ್ರಯೋಗದಿಂದ ಕಂಡು ಬಂದ ವಿಷಯಗಳನ್ನು ಅಂತರಂಗ ಪರೀಕ್ಷೆಯಿಂದ ಪುನರ್ವಿಮರ್ಶಿಸುವುದೂ ಅತ್ಯಗತ್ಯ. ಕಲೆಗಳ ತತ್ತ್ವಕ್ಕೆ ಅಂತರಂಗ ಪರೀಕ್ಷೆಯಿಂದ ಹೊರಬಿದ್ದ ತತ್ವಗಳೇ ಹೆಚ್ಚು ಸಾಧಕಗಳು ಎಂಬುದು ಇತ್ತೀಚಿನ ಪಾಶ್ಚಾತ್ಯ ಕಲೆಯ ಮೀಮಾಂಸೆಯ ತೀರ್ಪು. "so for the data furnished by galvanometers and encephalographs have not borne on artistic problems, even to the extent of explaining the simple, obvious difference between a major scale and its parallel . . . . the proposition that if we knew the facts we would find them thus and thus is merely an article of innocent psuedo-scientific faith." S. K. Langer, *Feeling and Form*, pp 38-39.

ತರ್ಕಬುದ್ಧಿ, ಉಪಯೋಗಬುದ್ಧಿ ಅದನ್ನಾಶ್ರಯಿಸಿ ಅದರಿಂದ ಕವಲೊಡೆದದ್ದು. ಈ ಮೂಲಾಶ್ರಯದ ಸಂಪರ್ಕ ತಪ್ಪಿದರೆ ತರ್ಕಬುದ್ಧಿ ಬರಡಾಗುತ್ತದೆ. ಬುದ್ಧಿಯಿಂದ ಆ ಶಕ್ತಿಯನ್ನು ಹದ್ದಿನಲ್ಲಿಡದಿದ್ದರೆ ಅದರ ಆವರಣವನ್ನು ಕ್ಲುಪ್ತಗೊಳಿಸದಿದ್ದರೆ, ಹದಗೊಳಿಸದಿದ್ದರೆ ಅದು ಮೇರೆ ಮೀರಿ, ಅಡ್ಡದಾರಿ ಹಿಡಿದು ಮಿಥ್ಯಾ, ಸ್ವಪ್ನ, ಅಪಸ್ಮಾರ, ಉನ್ಮಾದ ಪ್ರಪಂಚಗಳನ್ನು ಸೃಜಿಸುತ್ತದೆ. ಅದನ್ನು ಹದಗೊಳಿಸಿದರೆ ಕಲೆಯ ಪ್ರಪಂಚವನ್ನು ಸೃಷ್ಟಿಸಿ ತನ್ಮೂಲಕ ನಮ್ಮ ಅಂತರಂಗದ ಪ್ರಾಣಭಾವವನ್ನೂ ಅದರ ತಾನಗಳನ್ನು ಧ್ವನಿಸುತ್ತದೆ. ಮತಂಗನು ಹೇಳಿದಂತೆ ಅದು ಭಾವ ಸಾಧನವಾಗುತ್ತದೆ.

೬

ಇದುವರೆಗಿನ ವಿವರಣೆ ತುಂಬ ಪಾರಿಭಾಷಿಕ ವಿಶ್ಲೇಷಣದಿಂದ ಕ್ಲಿಷ್ಟವಾಗಿ ತೋರಿರಬಹುದು. ಸಂಗೀತಧ್ವನಿಯ ವ್ಯಾಪಕತೆ ನಿಶ್ಶಂಕವಾಗಲೆಂಬ ಉದ್ದೇಶದಿಂದ ಇಷ್ಟು ವಿವರಗಳನ್ನು ಕೊಡಬೇಕಾಯಿತು. ವಿವರಗಳ ಕಡೆಗೆ ಲಕ್ಷ್ಯ ಹರಿದು ಒಟ್ಟಿನ ಸಾರಾಂಶ ಕಣ್ಮರೆಯಾಗುವ ಸಂಭವ ಹೆಚ್ಚು. ಆದ್ದರಿಂದ ಆ ಸಾರಾಂಶವನ್ನು ಲಕ್ಷಿಸಿ, ಇಂದಿನ ಪಾಶ್ಚಾತ್ಯ ಕಲಾ ತತ್ವಕ್ಕೆ ಪ್ರಾಸಂಗಿಕವಾಗಿ ಹೋಲಿಸಿ, ಅದನ್ನು ಈ ಕೊನೆಯ ಭಾಗದಲ್ಲಿ ಸಂಗ್ರಹಿಸಿದೆ.

(ಅ) ಒಂದು ರಾಗದ ಆಲಾಪನೆಯಾಗಲಿ, ಪ್ರಬಂಧ ಗೀತೆಯಾಗಲಿ ಅದು ಏಕಘನರೂಪ. ಸಂಗೀತವು ಚಲನಾತ್ಮಕ ಕಲೆಯಾದರೂ ಅದರ ಚಾಲಕಾಂಗಗಳು ಒಂದು ಸ್ಥಾಯಿಯ ಅಂಗಗಳೆಂದು ತಿಳಿಯಬೇಕು. ಒಂದು ಸ್ಥಾಯಿಯಿಂದ ಉದ್ಬೋಧವಾಗಿ ಎಷ್ಟೆಷ್ಟು ಮೇಲಕ್ಕೆ ಕ್ಷಿಪ್ತವಾದರೂ ಆ ಚಾಲಕಾಂಶಗಳು ಪುನಃ ಪುನಃ ಸ್ಥಾಯಿಗೆ ಮರಳಿ ಅದನ್ನು ಬೀಜರೂಪದಿಂದ, ಸಸ್ಯರೂಪವಾಗಿ, ಸಸ್ಯರೂಪದಿಂದ ಪುಷ್ಪಫಲಭರಿತರೂಪವಾಗಿ ವಿಕಾಸಗೊಳಿಸುತ್ತವೆ.[52] ಶಾರ್ಙ್ಗದೇವನು ಇದಕ್ಕೆ ಶಿಲ್ಪದ ಸಾಮ್ಯವನ್ನು ಕಲ್ಪಿಸಿರುತ್ತಾನೆ. ಶಿಲ್ಪಿಯು ಅನೇಕಾನೇಕ ಪ್ರಕಾರವಾಗಿ ಕಡೆದು ಒಂದು ಸ್ತಂಭ ಮೂರ್ತಿಯನ್ನು ಘಟಿಸುವಂತೆ ಸಂಗೀತಗಾರನೂ ಒಂದು ಸ್ಥಾಯಿಯನ್ನು ಕಡೆದು ಕಡೆದು ಒಂದು ರಾಗವಿಗ್ರಹವನ್ನಾಗಿ ನಿಲ್ಲಿಸುತ್ತಾನೆ.[53] ಇನ್ನೂ ಒಂದು ಉಪಮಾನವನ್ನು ಸಿಂಗಭೂಪಾಲಾದಿಗಳು ಕೊಡುವುದುಂಟು. ಪ್ರಶಾಂತವಾದ ಸಮುದ್ರವು ಸ್ಥಾಯಿರೂಪದಿಂದ ಬಿರುಗಾಳಿಯ ಒತ್ತಡದಿಂದ ಎಚ್ಚತ್ತು ಕ್ರಮ ಕ್ರಮವಾಗಿ ಅಲೆಯಲೆಯಾಗಿ ಕ್ಷಿಪ್ತವಾಗಿ ಮುಗಿಲನ್ನು ಮುಟ್ಟುವಷ್ಟು ಎತ್ತರದ ಅಲೆಗಳನ್ನು ಎಬ್ಬಿಸಿ ಪುನಃ ಸ್ಥಾಯಿಯಾದ ಪ್ರಶಾಂತ ಸ್ಥಿತಿಯನ್ನು ಪಡೆಯುವಂತೆ, ಸಂಗೀತವೂ ಹೃದಯಾಕಾಶದಿಂದ, ನಾಡಿಗಳ ಒತ್ತಡದಿಂದ ಹುಟ್ಟಿದ ಶ್ವಾಸದಿಂದ, ನಾದವನ್ನು ಅಲೆಯಲೆಯಾಗಿ ಎಬ್ಬಿಸಿ, ಘೋಷಿಸಿ, ಮಧ್ಯೆ ಮಧ್ಯೆ ವಿರಮಿಸಿ ವಿರಮಿಸಿ ಪುನಃ ಹೃದಯಸ್ಥಾನದಲ್ಲಿ ವಿಶ್ರಾಂತಿಗೊಳ್ಳುತ್ತದೆ. ನಿಶ್ಶಬ್ದ ಸ್ಥಾನದಿಂದ ಹುಟ್ಟಿ ನಾದಮೂರ್ತಿಯಾಗಿ ನರ್ತಿಸಿ ಪುನಃ ಅದೇ ನಿಶ್ಶಬ್ದ ಸ್ಥಾನದಲ್ಲಿ ಲೀನವಾಗುತ್ತದೆ. ಸಂಗೀತವು ಸೊಗಯಿಸುವುದಕ್ಕೆ ಈ ಆದಿ ಅಂತ್ಯ ನಿಶ್ಶಬ್ದತೆಗಳೇ ಜೀವಾಳ. ವ್ಯಕ್ತದಲ್ಲಿ ಅವ್ಯಕ್ತತೆ ಅವ್ಯಕ್ತತೆಯಲ್ಲಿ ವ್ಯಕ್ತತೆಯನ್ನು ಮೂಡಿಸುವುದೇ ಧ್ವನಿಯ ಸ್ವಾರಸ್ಯ. ಸಂಗೀತವನ್ನು ಹೇಳುವವರೂ ಕೇಳುವವರೂ ಆರಂಭದಲ್ಲಿ ತಮ್ಮೊಳಗಿನ ಆ ನಿಶ್ಶಬ್ದತೆಯನ್ನು ಚೇತನಗೊಳಿಸಿಕೊಂಡ ಹೊರತು ಅವರ ಅಂತರಂಗದ ಧ್ವನಿ ಸಂಗೀತದಲ್ಲಿ ವಿಕಸಿಸುವುದಿಲ್ಲ. ಸಂಗೀತವು ಜೀವಿಸುವುದು ಆ ನಿಶ್ಶಬ್ದತೆಯಿಂದಲೇ, ಅದಕ್ಕಾಗಿಯೇ. ಆದ್ದರಿಂದ ಗಾಯಕನೂ ಶ್ರೋತೃವೂ,

---

[52] "The growth of a musical composition may be compared to that of a flowering plant with its multitude of leaves and blossoms, intertwining of stems and branches: where not only the leaves repeat each other, but the leaves repeat the flowers and the very stems and branches are like unfolded leaves. . . . Musical expression follows the same Law". D. Selincourt, Music and Duration, in Reflections on Art, Edited by S. K. Langer, O.U.P., New York (1961), p. 155.

[53] ತೇ ಸ್ಥಾಯ್ಯಾ ಘಟನಾಯಾ ಯೇ ಶಿಲ್ಪಿನಾ ಘಟಿತಾ ಇವ, ಸಂ. ರತ್ನಾಕರ, ಅಡ್ಯಾರ್, III, ೧೬೪.

ಹೊರ ಪ್ರಪಂಚದ ಸಂಪರ್ಕವನ್ನು ತಮ್ಮ ಗಮನದಿಂದ ತೊಡೆದು ಹಾಕಿ ಅದಕ್ಕಾಗಿಯೇ ತಮ್ಮ ಅಂತರಂಗವನ್ನು ತೆರೆದಿಡಬೇಕು. ಇದೇ ಸಂಗೀತ ಸಮಯಸಾರ. ಇದನ್ನು ಮನಗಂಡ ಗಿಸೇಲೆ ಬ್ರಿಲೆಟ್ ಎಂಬ ಪಾಶ್ಚಾತ್ಯ ಸಂಗೀತ ಮೀಮಾಂಸಕನು, ಈ ಸಂಗೀತ ಸಮಯ ಸಾರವನ್ನು ಸಾಮಾನ್ಯವಾಗಿ ಪಾಶ್ಚಾತ್ಯರು ಉಪೇಕ್ಷಿಸುತ್ತಾರೆ, ಆದರೆ ಭಾರತೀಯರೂ ತಿಬೆಟ್ಟರೂ ಸಂಗೀತ ಶ್ರುತಿಯನ್ನು ಒಂದು ರಹಸ್ಯ ಸಮಯವಾಗಿ ಗೌರವಿಸುತ್ತಾರೆಂದು ಮೆಚ್ಚಿಕೊಂಡಿದ್ದಾನೆ.[54]

(ಇ) ಕಲೆಗಳ ಹೊರರೂಪ, ಭೌತಸಂಜ್ಞಾರೂಪ ಯಾವುದೇ ಆಗಲಿ, ಆ ಸಂಜ್ಞೆಗಳು ಪ್ರಕಾಶಿಸುವುದು ಅವುಗಳ ಒಳರೂಪವಾದ ಧ್ವನಿರೂಪದಿಂದ. ಇದನ್ನೇ ಎಲ್ಲ ಕಲೆಗಳ ಮೀಮಾಂಸಕರೂ 'ಯದ್‌ರೂಪಂ' ಎಂದು ಪದೇ ಪದೇ ಸ್ಮರಿಸುವುದು. ಸಂಗೀತದಲ್ಲಿ ಈ ರೂಪವನ್ನು ನಾವು ಸಾಕ್ಷಾತ್ಕರಿಸುವುದು ಮೂರು ಭಂಗಿಗಳಲ್ಲಿ. ಆ ಭಂಗಿಗಳನ್ನು ಗ್ರಹಭಂಗಿ, ಅಂಶಭಂಗಿ, ನ್ಯಾಸಭಂಗಿ ಎಂದು ಮತಂಗ, ಶಾರ್ಙ್ಗದೇವ ಮುಂತಾದವರು ಕರೆದಿರುತ್ತಾರೆ.

ಗಾಯಕನು ತನ್ನ ಪ್ರತಿಭೆಯಿಂದ ವರ್ಣಾಲಂಕಾರ ರೂಪವಾದ ಸ್ವರಸಂದರ್ಭಗಳನ್ನು ಒಂದು ಜಾತಿಯಾಗಿ ಬೀಜರೂಪದಲ್ಲಿ ಗ್ರಹಿಸುತ್ತಾನೆ. ಈ ಬೀಜರೂಪವೇ ಗ್ರಹಭಂಗಿ.[55] ಹೀಗೆ ಗ್ರಹಿಸಿದ ಬೀಜರೂಪವನ್ನು ಅಂತರ್ಮಾರ್ಗ ಸಂಬಂಧಿಗಳಾದ ಅಂಶಗಳಿಂದ ತೂಗಿಸಿ, ತೊನೆಯಿಸಿ, ಬಾಗಿಸಿ, ಬಳುಕಿಸಿ, ತೇಲಿಸಿ ಮೀಟಿಸಿ, ದಾಟಿಸಿ ವರ್ಧಿಸುವುದು ಮಧ್ಯದ ಅಂಶಭಂಗಿ. ರಾಗದಲ್ಲಿ ಪ್ರಧಾನವಾದದ್ದು ವ್ಯಾಪಕವಾದದ್ದು ಈ ಧ್ವನಿಭಂಗಿ.[56] ಈ ಮಧ್ಯಮ ರೂಪವನ್ನು ಸಂನ್ಯಾಸ, ವಿನ್ಯಾಸ, ಅಪನ್ಯಾಸಗಳ ಮೂಲಕ ಸಮಾಪ್ತಿಗೊಳಿಸುವುದು ನ್ಯಾಸ ಭಂಗಿ.[57] ನ್ಯಾಸವು ರಾಗದ ಅವಸಾನವಲ್ಲ; ಮೋಕ್ಷ. ಇದನ್ನು ಶೈವರು ಹೇಳುವಂತೆ ಶೂನ್ಯ ಸಂಪಾದನೆ ಎಂದು ಭಾವಿಸಬಹುದು. ಈ ಎಲ್ಲವೂ ಸೇರಿ ಏಕಘನವಾದ ರಾಗಾಲಾಪನೆಯ ಲಕ್ಷಣವನ್ನು ಮತಂಗನನ್ನನುಸರಿಸಿ[58] ಈ ರೀತಿ ಶಾರ್ಙ್ಗದೇವನು ಸಂಗೀತರತ್ನಾಕರದಲ್ಲಿ ಪರಿಷ್ಕರಿಸಿರುತ್ತಾನೆ:

> ಗ್ರಹಾಂಶಮಂದ್ರತಾರಾಣಾಂ ನ್ಯಾಸಾಪನ್ಯಾಸಯೋಸ್ತಥಾ II i, ೨೩
> ಅಲ್ಪತ್ವಸ್ಯ ಬಹುತ್ವಸ್ಯ ಷಾಡವೌಡುವಯೋರಪಿ |
> ಅಭಿವ್ಯಕ್ತಿರ್ಯತ್ರ ದೃಷ್ಟಾ ಸ ರಾಗಾಲಾಪ ಉಚ್ಯತೇ || II i, ೨೪
> ರೂಪಕಂ ತದ್ವದೇವ ಸ್ಯಾತ್ ಪೃಥಗ್ಭೂತವಿದಾರಿಕಮ್ |
> ಚಚ್ಚತ್ಪುಟಾದಿತಾಲೇನ ಮಾರ್ಗತ್ರಯವಿಭೂಷಿತಾ || II i, ೨೫
> ಮತಂಗಾದಿಮತಾದ್ ಬ್ರೂಮೋ ಭಾಷಾದ್ವಿಷ್ಟೇವ ರೂಪಕಮ್ | ಪುಟ, ೩೩

ಮೊದಲನೆಯ ಪಂಕ್ತಿಯಲ್ಲಿ ಹೇಳಿರುವ ತ್ರಿಭಂಗಿಗಳನ್ನು ಈಗಾಗಲೇ ಹೆಸರಿಸಿದೆ. ಎರಡನೆಯ ಪಂಕ್ತಿಯಲ್ಲಿ ಹೇಳಿರುವ ಅಲ್ಪತ್ವ ಬಹುತ್ವಗಳು ಧ್ವನಿ ದೃಷ್ಟಿಯಿಂದ ತುಂಬ ಮುಖ್ಯವಾದುವು.

---

[54] If silence bears and supports music, it is in order to remove music from the external world by creating in it an atmosphere of calm collectedness in which it can flower. In that original silence from which the musical work emerges, the soul broods over itself—and only in itself, in its inner essence, will the true substance of sounds be revealed to it. . . . Therefore, the original silence must be respected, both by the performer and by the listener. . . . Often the Westerner neglects to prepare himself to hear, whereas the Hindus and the Tibetans have long considered 'the birth of sound' as a religious mystery into which the soul may not enter unworthily". Music and Silence in *Reflection on Art*, p. 104.

[55] ಜಾತ್ಯಾದಿ ಪ್ರಯೋಗೋ ಗೃಹ್ಯತೇ ಯೇನ ಸ ಗ್ರಹಃ. ಬೃಹದ್ದೇಶೀ, ಪುಟ ೫೬೬.

[56] ರಾಗಜನಕತ್ವಾದ್ ವ್ಯಾಪಕತ್ವಾಚ್ಚಾಂಶಸ್ಯೈವ ಪ್ರಾಧಾನ್ಯಂ. ಬೃಹದ್ದೇಶೀ, ಪುಟ ೫೬.

[57] ನ್ಯಸ್ಯತೇ ತ್ಯಜ್ಯತೇ ಯಸ್ಮಿನ್ ಯೇನ ವಾ ಗೀತಂ ತನ್ನ್ಯಾಸ ಇತಿ. ಬೃಹದ್ದೇಶೀ, ಪುಟ ೬೦. ಗೀತೇ ಸಮಾಪ್ತಿಕೃನ್ನ್ಯಾಸಃ. ಸಂ. ರತ್ನಾ, I ೧೮೬.

[58] ಬೃಹದ್ದೇಶೀ, ಪುಟ ೫೭, ತಥಾ ಚಾಹ ಕಾಶ್ಯಪಃ, ಬೃಹದ್ದೇಶೀ, ಪುಟಗಳು ೧೦೩-೪.

ಈ ಎರಡೂ ಅಂತರ್ಮಾರ್ಗವರ್ತಿಗಳು. ಬೀಜರೂಪವಾದ ಜಾತಿಗೆ ವ್ಯಕ್ತಿತ್ವವನ್ನು ಕೊಡುವುದು ಇವುಗಳ ಕೆಲಸ.[59] ಅಭಿವ್ಯಕ್ತವಾದ ಭಾವರೂಪವು ಆ ಎರಡು ಬಗೆಗಳಲ್ಲಿ ಅಲ್ಲದೆ ಬೇರೆ ಯಾವ ರೀತಿಯಲ್ಲೂ ನುಡಿಯಲೂ ಆರದು, ಇರಲೂ ಆರದು[60]. ಅಲ್ಪತ್ವ ಬಹುತ್ವಗಳು ರಾಗವೈಚಿತ್ರ್ಯಕಾರಿಗಳು. ಅಲ್ಪತ್ವವು ಎರಡು ಬಗೆಯಾಗಿ ವಿಚಿತ್ರಕಾರಿ. ಒಂದನೆಯ ಬಗೆಯ ಅಲ್ಪತ್ವ ಅನಭ್ಯಾಸ. ಅನಭ್ಯಾಸವೆಂದರೆ ಅನುಕ್ತತೆ. ನುಡಿಯ ನಿರೀಕ್ಷೆ, ಆಕಾಂಕ್ಷೆ ಬಲವಾಗಿದ್ದಾಗ, ಭಾವ ಉಲ್ಬಣವಾದಾಗ, ನುಡಿಯದೆಯೇ ಇರುವುದು. ಮತಂಗನು ಹೇಳಿರುವಂತೆ ಈ ಅನುಕ್ತಿಯ ಪರಿಣಾಮ ಬಹುತ್ವ. 'ಅಲ್ಪವದತ್ರ ಬಹುತ್ವಮಿತಿ' (ಬೃ. ಪುಟ ೬೦). ಎರಡನೆಯ ಬಗೆಯ ಅಲ್ಪತ್ವ ಲಂಘನ. ಲಂಘನ ಎಂದರೆ ಅಲ್ಪಸ್ಪರ್ಶದಿಂದ, ಮುಟ್ಟಿಯೂ ಮುಟ್ಟದಂತೆ ನೆಗೆಯುವುದು. ಬಹುತ್ವವೂ ಎರಡು ಬಗೆಯಾಗಿದೆ. ಒಂದು ಸ್ವರವನ್ನು ಒತ್ತಿ ನುಡಿಯುವುದು ಒಂದು ಬಗೆಯ ಬಹುತ್ವ.[61] ವಾದಿ ಸಂವಾದಿ ಸ್ವರವನ್ನು "ನಿರಂತರವಾಗಿ ಆಗಲಿ, ಸಾಂತರವಾಗಿ ಆಗಲಿ, ಪರ್ಯಾಯವಾಗಿ ಆಗಲಿ, ಪುನಃ ಪುನಃ ಆವೃತ್ತವಾಗಿ ಉಚ್ಚರಿಸುವುದು ಎರಡನೆಯ ಬಗೆಯ ಬಹುತ್ವ."[62] ಈ ಅಲ್ಪತ್ವ ಬಹುತ್ವಗಳಿಗೆ ಸದೃಶವಾದ ಅಂಶಗಳನ್ನು ಪಾಶ್ಚಾತ್ಯ ಸಂಗೀತ ಮೀಮಾಂಸಕರಾದ ಲಿಯೊನಾರ್ಡ್ ಬಿ. ಮೇಯರ್ ಅವರು ಹೇಗೆ ಲಕ್ಷಿಸಿರುತ್ತಾರೆಂಬುದನ್ನು ಅಡಿಟಿಪ್ಪಣಿಯಲ್ಲಿ ನೋಡಬಹುದು.[63] ಏಳುಸ್ವರಗಳಲ್ಲಿ ಒಂದನ್ನು ಲೋಪಗೊಳಿಸಿ ಆರು ಸ್ವರ

---

[59] ದ್ವಿವಿಧಾಂತರಮಾರ್ಗಸ್ತು ಜಾತೀನಾಂ ವ್ಯಕ್ತಿಕಾರಕಮ್, ಬೃಹದ್ದೇಶೀ, ಪುಟ ೬೦.

[60] "The feeling so created not merely cannot be otherwise expressed, but cannot otherwise exist." B. Bosanquet, *Three Lectures on Aesthetic*, Macmillan, London, (1915), p. 345.

[61] ಅಲ್ಪತ್ವಂ. ಅನಭ್ಯಾಸಾಲ್ಲಂಘನಾಚ್ಚ ದ್ವಿಪ್ರಕಾರಂ. ಅನಭ್ಯಾಸತ್ವಂಶಸ್ವರಾದನ್ಯೇಷು ಸ್ವರೇಷು ಕ್ವಚಿಲ್ಲೋಪ್ಯೇಷ್ವಪೀಷ್ಯತೇ ಭರತಾದಿಭಿಃ | . . . ಸಕೃದುಚ್ಚಾರಣಂ ಲಂಘನಮ್. ಸಂ. ರತ್ನಾ. ಅಡ್ಯಾರ್, ಪುಟಗಳು ೧೯೦-೧೯೧. ಭಂಗಿ ವಿಶೇಷ ಕಾರಿಣೀ ಕ್ವಚಿದನಭ್ಯಾಸೈಃ ಕ್ವಚಿತ್ಕೇವಲೈರ್ಲಂಘನೈರೇವ ಯಾ ವಿಹಿತಾಂಶಾದಿಭಿಃ ಸಹ ಸಂಗತಿಃ ಸಾಂತರ ಮಾರ್ಗ ಇತ್ಯುಚ್ಯತೇ. ಅದೇ. ಪುಟ ೧೯೧.

[62] ಅಥ ಬಹುತ್ವಂ ಅಲಂಘನಾದಿತಿ, . . . ಸಾಕಲ್ಯೇನ ಸ್ಪರ್ಶ ಇತಿ. ಇದಮೇಕಂ ಬಹುತ್ವಂ . . . ನೈರಂತರ್ಯೇಣ ವಾ ಸಾಂತರತ್ವೇನ ವಾ ಸ್ವರಸ್ಯ ಪುನಃಪುನರುಚ್ಚಾರಣಮಾವೃತ್ತಿಃ. ಇದಮನ್ಯದ್ಬಹುತ್ವಮ್. ಪುಟಗಳು ೧೮೯-೧೯೦. ಲೋಪ್ಯೇಷ್ವಪಿ ಷಾಡವೌಡುವಕಾರಿಷು ಚ ಪ್ರಾಯ ಇಷ್ಯತೇ. ಪುಟ ೧೯೦.

[63] The following pages of Leonard B. Meyer's book, *Emotion and Meaning in Music* (The University of Chicago Press, 1956) are worthy of perusal: 47, 48, 49, 55, 104, 129, 152, 160, 1ʻ4, 204-5, 2'0-11, 236-37, 239, 26. The following statements in respect of expectation, stress, slur, deviation, repetition, closure bear a close resemblance to the Indian views on ***aṁśa*** **and** ***nyāsa, alpatva, bahutva.***

1. "The relation obtaining between two tones provide the listener with less basis for specific expectation than the relationship between five or six or ten tones. Similarly, the repetition or seeming repetition of a part arouses more specific expectations than the first statement of the part". P. 49. "Stylistic descriptions are also expectations of probability relations. When, for example, Fox Strangways gives the scale for Rāg Pilu. . . he is indicating by his notation certain probability relations within the tonal material available." P. 55. Unfortunately the term 'ornamental' has taken on pejorative connotations. We must revise our attitude towards ornamentation." P. 205.

2. "The words strong weak are not to be construed as implying value judgements. On the contrary, weak, ambiguous shapes may . . . . perform a valuable and useful function in creating and molding the affective musical experience. or lack of shapes and well-articulated modes of progression is capable of arousing powerful desires for, and expectations of, clarification and improvement." P. 160.

3. When uniformity persists for a relatively long time, the series will have a cumulative effect, arousing strong desires for a return to a more intelligible and controllable shape and a more certain and secure psychological atmosphere." P. 164.

11976



ಗಳಿಂದ ಆದದ್ದು ಷಾಡವ. ಎರಡು ಸ್ವರಗಳನ್ನು ಲೋಪಗೊಳಿಸಿ ಐದು ಸ್ವರಗಳಿಂದ ಆದದ್ದು ಔಡವ. ತಾಲಯುತವಾದ ಗಾನ ರೂಪಕ. ಆಲಾಪವಾಗಲಿ ರೂಪಕವಾಗಲಿ, ಅಭಿವ್ಯಕ್ತಿ ದೃಷ್ಟಿಯಿಂದ, ನಾನಾವಿಧವಾಗಿ ಗ್ರಹಾಂಶ ನ್ಯಾಸಪ್ರಯೋಗದಿಂದ ನುಡಿದ ಏಕಘನವಾದುದೇ ಗಾನ.

(ಈ) ಇಲ್ಲಿ 'ಅಭಿವ್ಯಕ್ತಿ' ಎಂಬ ಪದವನ್ನು ಸರಿಯಾದ ರೀತಿಯಲ್ಲಿ ಅರ್ಥಮಾಡಿಕೊಳ್ಳುವುದು ಅತ್ಯಾವಶ್ಯಕ. ಅಭಿವ್ಯಕ್ತಿ ಎಂಬ ಪದ ಆಂಗ್ಲಭಾಷೆಯಲ್ಲಿ 'ಎಕ್ಸ್‌ಪ್ರೆಷನ್' ಎಂಬ ಪದಕ್ಕೆ ಸಮಾನವಾದದ್ದು. ಆ ಪದದಂತೆ ಅಭಿವ್ಯಕ್ತಿಪದವೂ ಸಂದಿಗ್ಧ. ಎಲ್ಲ ವಿಧವಾದ ಪ್ರಾಕಟ್ಯವೂ ಅಭಿವ್ಯಕ್ತಿಯೇ; ಉಚ್ಚರಿತ ಶಬ್ದಗಳೆಲ್ಲವೂ ಅಭಿವ್ಯಕ್ತವೇ. ಧ್ವನಿ ಕೇವಲ ಸಾಮಾನ್ಯದ ವ್ಯಕ್ತವಲ್ಲ; ಅದು ವ್ಯಕ್ತಿವಿವೇಕ. ಆ ವ್ಯಕ್ತಿರೂಪ ಅಸಾಮಾನ್ಯರೂಪ. ಅದು ಯಾವುದೊಂದು ರೂಪದ ಅನುಕರಣರೂಪವಲ್ಲ; ಅದು ವಿಶಿಷ್ಟರೂಪ. ಆ ವಿಶಿಷ್ಟರೂಪದಲ್ಲಲ್ಲದೆ ಅದು ಬೇರೆ ವಿಧದಲ್ಲಿ ಇರಲು ಸಾಧ್ಯವಲ್ಲದ್ದು; ಆ ರೀತಿಯಲ್ಲಲ್ಲದೆ ಬೇರೆ ಯಾವರೀತಿಯಲ್ಲಿಯೂ ಹೊಮ್ಮಲು ಆಗದ್ದು. ಅದು ಸ್ವತಃಸಂಭವಿ, ಸ್ವಾತ್ಮನಿಷ್ಠ, ಸ್ವಲಕ್ಷಣರೂಪ. ಆ ಅಭಿವ್ಯಕ್ತಿಯನ್ನು "ಅಭಿವ್ಯಂಗ್ಯ", ಅಭಿವ್ಯಸಕ್ತಿ ಎಂದು ಹೇಳಿದರೆ ಆ ಸಂದಿಗ್ಧತೆಗೆ ಅವಕಾಶವಿರುವುದಿಲ್ಲ. ಅದು ಉದ್ದೀಪನ; ದೀಪವು ತನ್ನನ್ನೂ ತನ್ನ ಸುತ್ತಲಿರುವುದನ್ನೂ, ಸ್ವಪರಗಳನ್ನು ಒಟ್ಟಿಗೇ

---

4. "Stress is the dynamic emphasis of either an accented or an unaccented tone. . . . The stress may change the rhythmic grouping or may help to clarify an otherwise ambiguous rhythmic organisation." P. 194.

5. "Deviations in pitch which in western music would be considered as expressive deviations are, for instance, in the music of India classified as ornaments. "Both the delaying function of embellishment and its expressive effect have been discussed by Strangways in connection with Indian music." P. 210. "In Indian, as no doubt in Greek and probably in ecclesiastical melodies, this is done by the predominant (*aṁśa*, meśe, reciting note); notes receive the force of appoggiaturas as they delay this", p. 211. Note that delay is equivalent to virāma, vilamba.

6. "Cross-rhythm drumming in India . . . affords the greatest delight to Indian audience, particularly when it involves intricate deviations from the sound pattern or the introduction of new ones." pp. 236-37. "Thus by raising expectations, disappointing them, and finally satisfying them, the composer-performer molds an exciting and moving experience." P. 239.

7. "Completeness and closure are possible only because the motions presented in music are processes involving relationships between antecedents and consequents. Completion is possible only where there is shape and pattern. Repetition in itself does not make for completion and closure, nor does change in itself. For completion is not simple cessation or silence. It involves conclusion." p. 129. "The harmonic incompleteness leads the listener to expect that the main will eventually close on the tonic." P. 150. Only towards the end of the passage . . . where the harmonic changes are more marked, does there seem to be an intensification of rhythm, creating a feeling of increased excitement, quickening tempo, and an approach of a resolution to clarity and certainty." p 181.

8. "It (music) connotes that rich realm of experience in which death, darkness night and cold, winter and sleep and silence are all combined and consolidated into a single connotative complex". p. 265. "Since musical affective stimuli are different from the referential stimuli of real life there will always be a generic difference between musical affective experiences and the experiences of everyday life. From this point of view musical experience is unique." P. 269. Here Meyer points to rasa-dhvani. It is strange that he does not deal with the Indian theory of rasa-dhvani which is unique in Indian aesthetics and which has such an important bearing on the theme of his book—*Emotion and Meaning in Music* :

ಪ್ರಕಾಶಿಸುತ್ತದೆ. ಜೀವನದ ಕೋಪತಾಪಗಳು ವ್ಯಕ್ತರೂಪಗಳಾದರೂ ಅವು ಬಾಹ್ಯಾರ್ಥಕ್ಕೆ ಅಧೀನವಾದ ರೂಪಗಳು. ಇವೂ ನಮ್ಮಲ್ಲಿ ಅಂತರ್ಗತವಾದುವೇ ಇನ್ನೊಬ್ಬನಲ್ಲೂ ಅಂತರ್ಗತವಾದ ಅನಾದಿರೂಪಗಳೇ ಎಂಬ ಭಾವನೆ ಇರುವುದಿಲ್ಲ. ಅನಾದಿಯಾಗಿ ನನ್ನೊಳಗಿರುವುದೂ ಅನಾದಿಯಾಗಿ ಬೇರೆಯವರಲ್ಲಿರುವುದೂ ಒಂದೇ ಎಂಬ ಭಾವನೆ ಕಲೆಯು ಹುಟ್ಟಿಸುವ ಪ್ರತ್ಯಭಿಜ್ಞೆ. ಇದು ಪರತತ್ವ ಪ್ರತ್ಯಭಿಜ್ಞೆಯಲ್ಲ; ಆತ್ಮವೂ ಪರಮಾತ್ಮವೂ ಒಂದೇ ಎಂಬ ಪ್ರತ್ಯಭಿಜ್ಞೆಯಲ್ಲ; ಒಬ್ಬ ಜೀವಿಯು ತನ್ನಲ್ಲಿರುವ ಅನಾದಿಭಾವಗಳ ತಾನ, ಇನ್ನೊಬ್ಬ ಜೀವಿಯಲ್ಲಿರುವ ಈ ಅನಾದಿಭಾವಗಳ ತಾನ ಒಂದೇ ಎಂದು ಅರಿಯುವುದೇ ಈ ಪ್ರತ್ಯಭಿಜ್ಞೆ. ಈ ಪ್ರತ್ಯಭಿಜ್ಞೆ ಸಕಲ ಜೀವದ ಆಕ್ರಂದನ ಒಂದೇ ಎಂಬ ಜೈನರ ಪ್ರತ್ಯಭಿಜ್ಞೆಗೆ ಸದೃಶವಾದದ್ದು. ಈ ಪ್ರತ್ಯಭಿಜ್ಞೆಯು ಲೌಕಿಕವಾದ ವ್ಯಕ್ತಿಭಾವಗಳ ಅರಿವಿಲ್ಲದೆ ಹುಟ್ಟುವುದಿಲ್ಲವಾದರೂ ಆ ಅರಿವಿನಿಂದ ಮಾತ್ರವೇ ಪ್ರತ್ಯಭಿಜ್ಞೆ ಸಿದ್ಧಿಸುವುದಿಲ್ಲ. ಆ ಹೊರಭಾವ ತನ್ನೊಳಗಿನ ಚಿಲುಮೆಯ ಭಾವವೇ ಎಂದು ಅನುವ್ಯವಸಾಯದಿಂದ ಅನುಭಾವಿಸುವುದೇ ಪ್ರತ್ಯಭಿಜ್ಞೆ. ಹಾಗೆ ಪ್ರತಿಭೆಯಿಂದ ಅನುಭಾವಿಸಿದಾಗಲೇ ಅದು ಪ್ರತೀಯಮಾನವಾಗುವುದು, ಅಭಿವ್ಯಂಜಿಸುವುದು, ದೀಪ್ತವಾಗುವುದು.

ಈ ದೀಪಕ ಕ್ರಿಯೆಯನ್ನೂ ದೀಪ್ತರೂಪವನ್ನೂ ಸ್ಪಷ್ಟಪಡಿಸಲು ಮತಂಗನೂ ಆನಂದವರ್ಧನನೂ ಘಟಪ್ರದೀಪನ್ಯಾಯವನ್ನು ಉಪಯೋಗಿಸಿಕೊಂಡಿರುತ್ತಾರೆ. ಈ ದೀಪಶಿಖಾನ್ಯಾಯವು ಮತಂಗನಾಗಲಿ ಆನಂದವರ್ಧನನಾಗಲಿ ಸ್ವತಃ ಸೃಷ್ಟಿಸಿದ ನ್ಯಾಯವೇನೂ ಅಲ್ಲ. ಸುಸಂಸ್ಕೃತರಾದ ಭಾರತೀಯ ವಿದ್ವಾಂಸರು ವಾಕ್ಯಾರ್ಥ ಗೋಷ್ಠಿಗಳಲ್ಲಿ ತುಂಬ ಹಿಂದಿನ ಕಾಲದಿಂದಲೂ ಸಾಮ್ಯ ಸೌಕರ್ಯಗಳಾಗಿ ಬಳಕೆಯಲ್ಲಿದ್ದ, ಐವತ್ತಕ್ಕಿಂತಲೂ ಹೆಚ್ಚಾದ ನ್ಯಾಯಗಳಲ್ಲಿ ಇದು ಒಂದು. ಯಾವ ಉಪಮಾನವೇ ಆಗಲಿ, ಅದನ್ನು ಔಚಿತ್ಯವರಿತು ಉಪಯೋಗಿಸಿಕೊಳ್ಳದಿದ್ದರೆ ಅದು ಸಾಧಕವಾಗುವುದರ ಬದಲು ಬಾಧಕವಾಗಿ ಪರಿಣಮಿಸುವ ಸಂಭವವಿದೆ. ಗಡಿಗೆ ಮತ್ತು ದೀಪ ಎರಡೂ ಬಾಹ್ಯವಾದುವು, ಭೌತವಾದುವು. ಇವೆರಡರ ಸಂಬಂಧ ಬಾಹ್ಯಸಂಬಂಧ, ಭೌತಸಂಬಂಧ. ಇದನ್ನೇ ಲಕ್ಷ್ಯವಾಗಿ ಇಟ್ಟುಕೊಂಡರೆ ಕಲೆಗೂ ನಮ್ಮ ಚೈತನ್ಯಕ್ಕೂ ಇರುವ ಸಂಬಂಧವು ಸ್ಪಷ್ಟಪಡುವುದಿಲ್ಲ. ಈ ಉಪಮಾನದಲ್ಲಿ ಲಕ್ಷಿಸಬೇಕಾದದ್ದು ದೀಪದಲ್ಲಿರುವ ಮೂರು ಬಗೆಯಾದ ವೈಶಿಷ್ಟ್ಯ. ಪ್ರಥಮತಃ ಅದು ಕೇವಲ ಪ್ರಕಾಶ; ಎರಡನೆಯದಾಗಿ ಅದು ತನ್ನ ಆವರಣಕ್ಕೆ ಒಳಪಟ್ಟ ಎಲ್ಲವನ್ನೂ ಬೆಳಗುತ್ತದೆ, ಮೂರನೆಯದಾಗಿ ಅದೇ ಕಾಲದಲ್ಲೇ ತನ್ನನ್ನೂ ತೋರ್ಪಡಿಸಿಕೊಳ್ಳುತ್ತದೆ. ಈ ಮೂರೂ ಅವಿಭಾಜ್ಯವಾದ ದೀಪಶಿಖೆಯ ಗುಣಗಳು. ಏಕಕಾಲದಲ್ಲಿ ತ್ರಿಪುಟಿಯಾಗಿ ಪ್ರತ್ಯಕ್ಷವಾಗುವ ಈ ಲಕ್ಷಣವನ್ನು ಮಾತ್ರ ಕಲೆಯ ಚೈತನ್ಯಕ್ಕೆ ಹೊಂದಿಸಿಕೊಳ್ಳಬೇಕು. ಆ ಸಾಮ್ಯದ ಅನ್ವಯ ಹೀಗೆ: ಕಲೆಗಾರನಿಗೆ ತನ್ನ ಚೈತನ್ಯದ ಮೂಲಕ ಮೂರು ಪ್ರಕಾರವಾದ ಪ್ರತ್ಯಕ್ಷ ಸಿದ್ಧಿಸುತ್ತದೆ. ಅವನ ಚೈತನ್ಯದ ಮೂಲಕ ಎಲ್ಲರೂ ಲೋಕರೂಢಿಯಾಗಿ ಅರಿಯುವಂತೆ, ರತಿ, ಭಯ, ಕ್ರೋಧ ಮುಂತಾದುವನ್ನು ಲೋಕದ ವಸ್ತು ವ್ಯಕ್ತಿಗಳಿಂದ ಬೋಧಿತವಾದಂತೆ ಭಾವಿಸುತ್ತಾನೆ. ಇದು ಲೌಕಿಕ ಪ್ರತ್ಯಕ್ಷಾನುಭವ. ದೀಪವು ಬಾಹ್ಯವಾದ ಗಡಿಗೆಯನ್ನು ತೋರಿಸುವಂತೆ ಈ ಲೌಕಿಕ ಪ್ರತ್ಯಕ್ಷ ಬಾಹ್ಯವಾದ ಭಾವಗಳನ್ನು ತೋರಿಸುತ್ತದೆ. ಈ ಲೌಕಿಕಪ್ರತ್ಯಕ್ಷಾನುಭವವಿಲ್ಲದಿದ್ದರೆ ಯಾವ ರೀತಿಯಾದ ಕಲೆಯ ಅನುಭವವೂ ಸಾಧ್ಯವಿಲ್ಲ. ಈ ಅನುಭವದ ವಾಸನೆಯೇ ಇಲ್ಲದ ಪ್ರೇಕ್ಷಕರಿಗೆ, ನಾಟಕಮಂದಿರದ ಕಂಬಗಳಿಗೆ ಗೋಡೆಗಳಿಗೆ ನಾಟಕಕಲೆಯ ಅನುಭವ ಸಿದ್ಧಿಸದಂತೆ ಇವರಿಗೂ ಸಿದ್ಧಿಸುವುದಿಲ್ಲ[64]. ಕಲೆಗಾರನು ಈ ಲೋಕಾನುಭವದ ಭಾವಗಳನ್ನೇ, ಅವುಗಳನ್ನು ಚೋದಿಸುವ ಬಾಹ್ಯಾರ್ಥಗಳಿಂದ ನಿವೃತ್ತವಾದ ಅಂತರಂಗ ಭಾವಗಳಾಗಿ ಪ್ರತಿಭಾವಿಸಿ ಅವುಗಳನ್ನು ಮಾತಿನ ಮೂಲಕವೋ ಸ್ವರವರ್ಣಗಳ ಮೂಲಕವೋ ವರ್ಣರೇಖೆಗಳ

[64] ನಿರ್ವಾಸನಾಸ್ತು ರಂಗಾಂತಃಕಾಷ್ಠಕುಡ್ಯಾಶ್ಮಸಂನಿಭಾಃ || ರಸಪ್ರದೀಪದಲ್ಲಿ ಪ್ರಭಾಕರನಿಂದ ಶದುಕ್ತಂ ಧರ್ಮದತ್ತೇನ ಎಂದು ಉದಾಹೃತ.

ಮೂಲಕವೋ ಮೂರ್ತಿಗಳಾಗಿ ನಿಲ್ಲಿಸುತ್ತಾನೆ. ಸಂಗೀತಗಾರನು ಅಂತರಂಗದ ಭಾವಗಳನ್ನು ತನ್ನ ಚೈತನ್ಯದಿಂದ ಗ್ರಹಿಸಿ ತನ್ನಲ್ಲೇ ಹುಟ್ಟಿದ ನಾದದ ಮೂಲಕ ತನಗೇ ಗೋಚರವಾಗುವಂತೆ ಹೊರಕ್ಕೆ ಎಸೆಯುತ್ತಾನೆ. ಈ ಎಸೆತ ಎಲ್ಲ ಕಲೆಗಳಿಗೂ ಸಾಮಾನ್ಯವಾದ ಅಭಿನಯ ರೂಪ. ಒಂದೊಂದು ಕಲೆಯೂ ಒಂದೊಂದು ಬಗೆಯ ಅಭಿನಯ. ಈ ಅಭಿನಯವಿಲ್ಲದೆ ಯಾವ ಕಲೆಯೂ ಹುಟ್ಟಲಾರದು. ಈ ಅಭಿನಯವೇ ಕಲೆಯ ಸೃಷ್ಟಿ.

ಹೀಗೆ ಕಲೆಯ ಸೃಷ್ಟಿ ಪೂರ್ಣವಾದಾಗ ತನ್ನ ಅಂತರಂಗದಲ್ಲಿ ಹುಟ್ಟಿದ ರೂಪವೂ ಬಹಿರಂಗವಾಗಿ ಪ್ರಕಾಶವಾದ ರೂಪವೂ ಒಂದೇ ಎಂಬ ಪ್ರತ್ಯಭಿಜ್ಞೆಯುಂಟಾಗುತ್ತದೆ. ದೀಪಕ್ಕೆ ತನ್ನನ್ನು ತಾನು ಪ್ರಕಾಶಗೊಳಿಸುವ ಸಾಮರ್ಥ್ಯವಿದೆಯೇ ಹೊರತು, ಅದಕ್ಕೆ ಆ ಅರಿವಿಲ್ಲ. ಈ ಸಾಮ್ಯ ಸಮವಾಗಬೇಕಾದರೆ ಇಲ್ಲಿ ಆ ಸಾದೃಶ್ಯವನ್ನು ನಾವು ಅದಕ್ಕೆ ಆರೋಪಿಸಬೇಕು. ಆದರೆ ಚೈತನ್ಯದ ಬೆಳಕಿಗೆ ತನ್ನೊಳಗಿನ ಭಾವವೂ ಅದನ್ನು ತಾನೇ ಎಸೆದು ಪ್ರಕಾಶಿಸಿದ ಭಾವವೂ ಒಂದೇ, ಅದು ತನ್ನದೇ ಎಂಬ ಪ್ರತ್ಯಭಿಜ್ಞಾ ಪ್ರತ್ಯಕ್ಷ ಜ್ಞಾನವಿದೆ. ಇದು ಕಲಾಚೈತನ್ಯಕ್ಕೆ ವಿಶಿಷ್ಟವಾದ ಅಲೌಕಿಕಪ್ರತ್ಯಕ್ಷ. ಹೀಗೆ ಕಲೆಯ ಅನುಭವದಲ್ಲಿ ಮೂರು ಪುಟಿಗಳುಳ್ಳ ಪ್ರತ್ಯಕ್ಷವು ಕಾಣಬರುತ್ತದೆ. ಸ್ವನಿಮಿತ್ತವಾಗಿ ಒಳಗಿನಿಂದ ಹೊರಗೆ ಬಂದು, ಅಲೆಯಲೆಯಾಗಿ ರೂಪಗೊಂಡು ಪುನಃ ಸ್ವಾತ್ಮದಲ್ಲೇ ವಿಲೀನವಾದ ರೂಪವೇ ಸಂಗೀತದ ಧ್ವನಿರೂಪವೆಂಬುದು ಕೊನೆಯ ಪುಟಿಯಲ್ಲಿ ಪ್ರತ್ಯಕ್ಷವಾಗುತ್ತದೆ. (ಪ್ರತ್ಯಭಿಜ್ಞಾನಾಸ್ಥಾನತ್ರಯೇಪಿ ತ ಏವ ಸ್ವರಾ ಇತಿ ಪ್ರತೀಯತೇ. ಸಂ. ರತ್ನಾ. I. ಪುಟ ೯೦).

(ಉ) ಗಾನವನ್ನು ಸೃಷ್ಟಿಸಿದ ಗಾಯಕನಂತೆಯೇ ಶ್ರೋತೃವೂ ಪ್ರತ್ಯಭಿಜ್ಞೆ ಪಡೆಯಬೇಕು. ಗಾಯಕನ ಮಾರ್ಗ ಅಂತರ್ಬಹಿರ್ಮಾರ್ಗವಾದರೆ, ಶ್ರೋತೃವಿನದು ಬಹಿರಂತ ಮಾರ್ಗ. ಅವನು ಹೊರಗಿನ ಬಾಹ್ಯಾರ್ಥಕ್ಕೆ ವಿಮುಖನಾಗಿ ಬಹಿರಂಗವಾಗಿ ಕ್ಷಿಪ್ತವಾದ ಭಂಗಿರೂಪವನ್ನು ಅಂತರ್ಮುಖನಾಗಿ ಗ್ರಹಿಸುತ್ತಾನೆ. ಕುಮಾರಸಂಭವದಲ್ಲಿ ಅಪ್ಸರೆಯರ ಗೀತಿಯನ್ನು ಕೇಳಿದ ಹರನು ಪ್ರಸಂಖ್ಯಾನಪರನಾದಂತೆ[೮೬] ಭಾವನಾಯೋಗ್ಯತೆ ಇರುವ ಶ್ರೋತೃವು ಸಂಗೀತವನ್ನು ಕೇಳಿದಾಗ ಬಾಹ್ಯಾರ್ಥ ವಿಮುಖನಾಗಿ ಸಂಗೀತದಲ್ಲಿ ಅಂತರ್ಮುಖನಾಗಿ ಲೀನನಾಗುತ್ತಾನೆ.

ಸಂಗೀತದ ಶ್ರೋತೃಗಳಲ್ಲಿ ಮೂರು ಬಗೆಯವರಿರುತ್ತಾರೆ. ಮೊದಲನೆಯ ಬಗೆಯವರು ಬಹುಸಂಖ್ಯಾತರಾದ ಸಾಮಾನ್ಯ ಶ್ರೋತೃಗಳು. ಸಂಗೀತಕ್ಕೆ ಸಹಜವಾದ ನಾದ ಮಾಧುರ್ಯದಿಂದ ಮುಗ್ಧರಾಗುತ್ತಾರೆ. ಏನೂ ತಿಳಿಯದ ಬಾಲ್ಯಾವಸ್ಥೆಯಲ್ಲಿ ಯಾವುದೇ ಹಾಡಾಗಲಿ ಕೇವಲ ಇಂಪಾದ ನಾದದಿಂದಲೇ ಹರ್ಷಗೊಂಡದ್ದು ನಮ್ಮೆಲ್ಲರ ಅನುಭವ. ನಮ್ಮ ಇಂದ್ರಿಯಗಳ ಮೇಲೆ ಆಗುವ ಪರಿಣಾಮವೇ ಇಲ್ಲಿ ಮುಖ್ಯ: ನಾದದ ಮಾಧುರ್ಯ, ತಾಳದ ಕುಣಿತ, ಇವುಗಳಿಂದ ನಮ್ಮ ಅಂಗಾಂಗಗಳಲ್ಲಿ ಹುಟ್ಟುವ ಪುಳಕದಿಂದ ಹರ್ಷಗೊಳ್ಳುತ್ತೇವೆ. ಹೆಚ್ಚು ಕಡಿಮೆ ಎಲ್ಲ ಶ್ರೋತೃಗಳಿಗೂ ಸಮಾನವಾದ ಅನುಭವ ಇದು. ಈ ರಸಿಕತೆಯನ್ನು ಮುಗ್ಧರಸಿಕತೆ ಎಂದು ಕರೆಯಬಹುದು.

ನಮ್ಮಲ್ಲಿ ಕೆಲವರು ಮಾತ್ರವೇ ಸಂಗೀತದ ಪರಿಭಾಷೆಯನ್ನು ಅಲ್ಪಸ್ವಲ್ಪ ತಿಳಿದವರು. ಸಂಗೀತ ವಿದ್ವಾಂಸರಿಗಂತೂ ಪರಿಭಾಷೆಯಲ್ಲೇ ಹೆಚ್ಚು ವಿಶ್ವಾಸ. ಸ್ವರಗಳ ರಚನೆ, ಶ್ರುತಿ ತಾಲಗಳ ಸೇರಿಕೆ, ಸಾಂಗತ್ಯ, ಶಾಸ್ತ್ರೋಕ್ತನಿಯಮ ಪರಿಪಾಲನೆ, ಇವುಗಳ ಕಡೆಗೇ ಅವರ ಲಕ್ಷ್ಯ. ಈ ಶ್ರೋತೃಗಳನ್ನು ನಿಷ್ಠಾಶ್ರೋತೃಗಳೆಂದು ಕರೆಯಬಹುದು. ಆನಂದವರ್ಧನನು ಹೇಳಿರುವಂತೆ ಶ್ರುತಿ ಸ್ವರಗಳ ಪ್ರಮಾಣಗಳಿಂದ ಮಾತ್ರ ಸಂಗೀತವನ್ನು ಅಳೆಯುವವರಿಗೆ ಅದು ತಮ್ಮ ಅಂತರಂಗಭಾವದ ತಾನವೆಂಬ ಅರಿವಾಗದೆ ಅದರ ವ್ಯಂಗ್ಯಾರ್ಥ ತಿಳಿಯದೆ ಹೋಗಬಹುದು.

---

[೮೬] ಶ್ರುತಾಪ್ಸರೋಗೀತಿರಪಿ ಕ್ಷಣೇಸ್ಮಿನ್ | ಹರಃ ಪ್ರಸಂಖ್ಯಾನಪರೋ ಬಭೂವ ||
ಕುಮಾರಸಂಭವ, III. ೪೦.

ಭಾವಸಾಧನವೇ ಸಂಗೀತದ ಅಂತಿಮಗುರಿ. ಅದನ್ನು ಸಾಧಿಸಿದ ಗಾಯಕರನ್ನೇ ಅವರ ಭಾವವನ್ನು ಗ್ರಹಿಸಿದ ಶ್ರೋತೃಗಳನ್ನೇ ಮತಂಗನೂ ಶಾರ್ಙ್ಗದೇವನೂ ಧ್ವನಿವೇದಿಗಳೆಂದು ಕರೆದಿರುವುದು. ಧ್ವನಿಪೂರ್ಣವಾದ ಸಂಗೀತ ಶ್ರೋತೃವಿನ ಹೃದಯನ್ನು ತುಂಬಿದಾಗಲೇ ಅಲೌಕಿಕವಾದ ಆನಂದ ಉಂಟಾಗುವುದು. ಈ ಆನಂದಮೀಮಾಂಸೆಯ ಕಡೆಗೆ ಪಾಶ್ಚಾತ್ಯ ಮೀಮಾಂಸಕರು ಗಮನಕೊಡದೆ ಅದಕ್ಕೆ ಒಂದು ನಿರ್ದಿಷ್ಟ ಸ್ಥಾನವನ್ನು ಕೊಟ್ಟು ಅದನ್ನು ವಿವರಿಸದಿರುವುದನ್ನು ನೋಡಿ ರೇಮಂಡ್ ಬೇಯರ್ ಆಶ್ಚರ್ಯಚಕಿತನಾಗಿದ್ದಾನೆ."

(ಖ) ಸಂಗೀತದಲ್ಲೇ ಅಗಲಿ ಸಾಹಿತ್ಯದಲ್ಲೇ ಆಗಲಿ ಕಲೆಗಾರನ ಆಲೋಕವೇ ಬೇರೆ ಸಹೃದಯನ ಆಲೋಕವೇ ಬೇರೆ ಎಂದು ಬಗೆದು ಕೆಲವು ಭಾರತೀಯ ಮತ್ತು ಪಾಶ್ಚಾತ್ಯ ಕಲಾತತ್ತ್ವಜ್ಞರು ಕಲೆಗಾರನ ದೃಷ್ಟಿಯೊಂದನ್ನೇ ಅಥವಾ ಸಹೃದಯನ ದೃಷ್ಟಿಯನ್ನೇ ಮೂಲಾಧಾರವಾಗಿ ಎಣಿಸಿ ಕಲೆಯ ತತ್ತ್ವವನ್ನು ನಿರೂಪಿಸಲು ಪ್ರಯತ್ನಿಸಿದ್ದಾರೆ. ಒಂದು ರಾಗವನ್ನು ಅನೇಕ ಕಾಲ ಭಾವಿಸಿ ಅಭ್ಯಾಸಿಸಿ ಒಂದು ವಿಶಿಷ್ಟರೂಪವನ್ನು ಸೃಷ್ಟಿಸಿದವನಿಗೂ ಆ ರೂಪವನ್ನು ಅರಿತು ತಲ್ಲೀನನಾಗಿ ಆ ಅನುಭವವನ್ನು ಆಸ್ವಾದಿಸಿದವನಿಗೂ ಭೇದವಿರುವುದನ್ನು ಯಾರೂ ನಿರಾಕರಿಸಲಾಗುವುದಿಲ್ಲ. ಈ ಇಬ್ಬರ ಅನುಭವದ ಭೇದ ಪರಿಮಾಣಭೇದವೇ ಹೊರತು ಗುಣಭೇದವಾಗಲಾರದು. ಗಾಯಕನ ಗಾನವನ್ನು ಅನುಭಾವಿಸಿ ತಾನೇ ರಸಿಕನು ಅದನ್ನು ಆಸ್ವಾದಿಸುವುದು? ಗಾಯಕನಿಗೇ ಆಸ್ವಾದವಿಲ್ಲದಿದ್ದರೆ ಶ್ರೋತೃವಿಗೆ ಆಸ್ವಾದ ಹೇಗೆ ಸಾಧ್ಯ? ಇಲ್ಲಿ ನಾವು ಮುಖ್ಯವಾಗಿ ಲಕ್ಷಿಸಬೇಕಾದದ್ದು ಗಾಯಕನು ತನ್ನ ಅನುಭವವನ್ನು ಶ್ರೋತೃವಿಗೆ ಅರ್ಪಿಸಿದ ಗಾನಕ್ರಿಯೆ; ಗಾಯಕನ ಪೂರ್ವಸಿದ್ಧತೆಯ ಪರಿಣಾಮ ಮತ್ತು ಪರಿಶ್ರಮದ ಚರಿತ್ರೆಯಲ್ಲ. ಶಾರ್ಙ್ಗದೇವನು ಹೇಳಿರುವಂತೆ ಆಗ ಗಾಯಕರು ಪರಚಿತ್ತಪರಿಜ್ಞಾನದಿಂದ, ರಾಗದ್ವೇಷ ಪರಿತ್ಯಾಗದಿಂದ, ಸಾರ್ದ್ರತ್ವ ಉಚಿತಜ್ಞತೆಯಿಂದ, ರಸಾವಿಷ್ಟನಾಗಿ, ಧ್ವನಿ ಚಾತುರ್ಯಪ್ರಿಯನಾಗಿ, ಶ್ರೋತೃಚಿತ್ತರಂಜಕ ರಸಿಕನಾಗಿ ತನ್ನ ಗಾನವನ್ನು ನಿವೇದಿಸುವ ಭಾವಕತ್ವವ್ಯಾಪಾರವೇ[67] ಇಲ್ಲಿ ಪ್ರಸಕ್ತ. ಗಾಯಕನು ಇಲ್ಲಿ ಭಾವಬೋಧಕ ಭಾವಕ. ಬಾಕ್, ಮೊಜಾರ್ಟ್ ಮುಂತಾದ ಪಾಶ್ಚಾತ್ಯ ಗಾಯಕರು ಹೇಳಿರುವಂತೆ[68] ಅವನು ಶ್ರೋತೃವಿನ ಭಂಗಿಯನ್ನು ತಳೆದು, ಶ್ರೋತೃವನ್ನು ಭಾವಕನನ್ನಾಗಿಸಲು ಸರ್ವಪ್ರಕಾರವಾಗಿ ಪ್ರೇರಿಸುತ್ತಾನೆ. ಗಾಯಕನ ಪ್ರೇರಣೆ ಎಷ್ಟೇ ಬಲಯುತವಾದರೂ ಶ್ರೋತೃವೂ ಆ ಪ್ರೇರಣೆಯನ್ನು ಪ್ರೀತಿಸಿ ತಾನೂ ಅಂತೆಯೇ ಭಾವಕನಾಗಿ ಪ್ರೇರಿಸಿಕೊಂಡಲ್ಲದೆ, ಗಾಯಕನನ್ನು ಭಾವಕನು ಅರ್ಧಮಟ್ಟಿಗಾದರೂ ಎದುರುಗೊಂಡು ಸಹಭಾಗಿಯಾಗದಿದ್ದರೆ, ಅವನ ಗಾನದಲ್ಲಿ ಲೀನನಾಗಿ ಅದನ್ನು ತನ್ನ ಅಂತರಂಗದಲ್ಲಿ ಉದ್ಬೋಧಗೊಳಿಸಿಕೊಳ್ಳದಿದ್ದರೆ ಅವನಿಗೆ ರಸಾನುಭವ ಹೇಗೆ ತಾನೆ ಸಾಧ್ಯವಾದೀತು? ಈ ಪರಸ್ಪರ ಪ್ರೀತಿ ಮತ್ತು ಅನುಸಂಧಾನಗಳು ಗಾಯಕ ಶ್ರೋತೃಗಳ ತಾದಾತ್ಮ್ಯದಲ್ಲಿ ಮೋಕ್ಷ ಪಡೆಯುತ್ತವೆ.

---

66 "It is surprising, to say the least, that this has not been given a systematic place among the pleasures of the Beautiful; that in the first place it has not been described, and secondly, no account has ever been taken of the aristocracy to which it has given rise" Raymond Bayer : *The Essence of Rhythm*, in *Reflections on Art*, P. 196.

67 ರೋಷದ್ವೇಷಪರಿತ್ಯಾಗಃ ಸಾರ್ದ್ರತ್ವಮುಚಿತಜ್ಞತಾ, ಸಂ. ರತ್ನಾ III ೬. ಪರಚಿತ್ತಪರಿಜ್ಞಾನಂ, III ೭. ಪ್ರಭೂತಪ್ರತಿಭೋದ್ಭೇದಭಾಕ್ತ್ವಂ ಸುಭಗಗೇಯತಾ, III ೫. ರಸಾವಿಷ್ಟಸ್ತು ರಸಿಕೋ ರಂಜಕಃ ಶ್ರೋತೃರಂಜಕಃ, III ೨೧. ಗೀತಸ್ಯಾತಿಶಯಾಧಾನಾದ್ಭಾವಕಃ, III ೨೨. ಮಾಧುರ್ಯಧುರ್ಯ ಧ್ವನಯಶ್ಚತುರಾಶ್ಚತುರ ಪ್ರಿಯಾಃ. III ೨೪.

68 "A musician cannot move others unless he too is moved." Bach quoted in *Emotion and Meaning in Music*, p. 80. "It is because the composer is also a listener that he is able to control his inspiration with reference to the listener. The performer too is continually 'taking the attitude of the other'—the listener. As Leopold Mozart puts it, the performer 'must play everything in such a way that he will himself be moved by it.'" Ibid. p. 41.

ಇದು ‘ಪರಸ್ಪರ ಕೃತಾ ಸಿದ್ಧಿ.’ ಈ ಸಿದ್ಧಿ ಎಲ್ಲರಲ್ಲೂ ಒಂದೇ ಪ್ರಮಾಣದಲ್ಲಿರುತ್ತದೆಯೆಂದು ಹೇಳಲಾಗದು. ಅದು ಗಾಯಕ ಶ್ರೋತೃಗಳ ಸ್ವಶಕ್ತಿಸ್ವಾಧ್ಯಾಯಗಳ ಪರಿಮಾಣಾಶ್ರಿತ. ಅದು ಪೂರ್ಣ ಪರಿಣಾಮಕಾರಿಯಾಗುವುದು ಅಪೂರ್ವ. ಈ ಅಪೂರ್ವಸ್ಥಿತಿಯನ್ನು ಮುಟ್ಟುವುದು ಗಾಯಕ ಶ್ರೋತೃಗಳ ಧ್ಯೇಯ. ಅದನ್ನು ಮುಟ್ಟಿದಾಗ ಗೇಯ, ಗಾಯಕ, ಶ್ರೋತೃಗಳ ಅಭಿಪ್ರಾಯ ಒಂದೇ ಆಗುತ್ತದೆಯಲ್ಲದೆ, ಆ ಅನುಭವವು ಪೂರ್ಣವಾಗಿ ಸ್ವಾನುಭವವಾಗುತ್ತದೆ, ಸ್ವಸಂವೇದ್ಯವಾಗುತ್ತದೆ, ಸ್ವಾತ್ಮವಿಶ್ರಾಂತವಾಗುತ್ತದೆ. ಗಾನದ ಅರ್ಥವೇನಿದ್ದರೂ ಅದರಲ್ಲಿ ಲೀನವಾದವನ ಅಂತರಂಗದೊಳಗಿನಿಂದಲೇ ಉನ್ಮೀಲನವಾಗುತ್ತದೆ. ಆ ಅರ್ಥವನ್ನು ಸಂಗೀತದ ಹೊರಗೆ, ಅದರಲ್ಲಿ ಲೀನವಾಗದ ಚೈತನ್ಯದ ಹೊರಗೆ ಹುಡುಕಬಾರದು. ಅದರ ಅರ್ಥವೇನಿದ್ದರೂ ಅದರೊಳಗಿನಿಂದಲೇ ಬರಬೇಕು. ಗಾನವು ಗಾಯಕನ ಅಂತಶ್ಚೈತನ್ಯದಿಂದ ಸೃಷ್ಟಿಯಾದ ನಾದತನು, ನಾದವಿಗ್ರಹ; ಗಾಯಕನು ಅದರಲ್ಲಿ ಅನುಪ್ರವೇಶಮಾಡಿ ತನ್ನದೆಂದು ತಿಳಿಯುತ್ತಾನೆ. ಶ್ರೋತೃವೂ ಹಾಗೆಯೇ ಅದರಲ್ಲಿ ಅನುಪ್ರವೇಶಮಾಡಿ ಸ್ವಾತ್ಮಪ್ರಕಾಶರೂಪವಾಗಿ ಗ್ರಹಿಸುತ್ತಾನೆ. ಅದು ಸ್ವಸಂವೇದ್ಯವೆಂದು ಮತಂಗನು ಸ್ಪಷ್ಟಪಡಿಸಿದ್ದಾನೆ.[69] ಕೋಹಲನ ಉಕ್ತಿಯನ್ನು ತನ್ನ ಅಭಿಪ್ರಾಯಕ್ಕೆ ಬೆಂಬಲವಾಗಿ ಉದ್ಧರಿಸಿರುತ್ತಾನೆ. ಎಸ್. ಟಿ. ಕೋಲರಿಜ್ ಇದೇ ಭಾವವನ್ನೇ ತನ್ನ ‘ಡಿಜೆಕ್ಷನ್’ ಎಂಬ ಪದ್ಯದಲ್ಲಿ ಸೂಚಿಸಿರುತ್ತಾನೆ.[70] ಸ್ವಾತ್ಮವೇ ಅದರ ಸೃಷ್ಟಿಸ್ಥಾನ, ಅದೇ ಅದರ ವಿಶ್ರಾಂತಿಸ್ಥಾನ; ನಾವು ಕೊಟ್ಟದ್ದನ್ನು ನಾವು ಪಡೆಯುತ್ತೇವೆ.

(ಋ) ಆನಂದವರ್ಧನನು ಅನೇಕಾನೇಕ ಧ್ವನಿಭೇದಗಳನ್ನು ವಿಶ್ಲೇಷಿಸಿದಂತೆ ಮತಂಗನು ಧ್ವನಿಭೇದಗಳನ್ನು ಏರ್ಪಡಿಸಿರುವುದಿಲ್ಲ. ಹಾಗೆ ಭೇದಗಳನ್ನು ಏರ್ಪಡಿಸದುದಕ್ಕೆ ವಿಚಾರಾಲಸ್ಯ ಕಾರಣವೆಂದು ಹೇಳುವ ಹಾಗಿಲ್ಲ; ಅವನು ಅನಿರ್ವಚನೀಯವಾದಿಯಲ್ಲ. ನಿರ್ವಚನ ಮಾಡಲು ಅವನು ಹಿಂತೆಗೆದಿಲ್ಲ. ಧ್ವನಿಗೆ ಪ್ರೇರಕಗಳಾದ ದಶಾಂಶಗಳನ್ನು ಸ್ಪಷ್ಟವಾಗಿ ವಿವರಿಸಿ, ಒಂದೊಂದು ರಾಗದ ವಿಶಿಷ್ಟಾಂಶ ಯಾವುದೆಂಬುದನ್ನು ನಿರ್ದಿಷ್ಟವಾಗಿ ಹೇಳಿರುತ್ತಾನೆ. ಅಂಶಭೇದಗಳಿಂದ ಒಂದೊಂದು ರಾಗವೂ ಒಂದೊಂದು ವಿಶಿಷ್ಟ ಧ್ವನಿಯಾಗುತ್ತದೆ. ಎಷ್ಟು ರಾಗಗಳು ಸೃಷ್ಟಿಯಾದರೆ ಅಷ್ಟು ಧ್ವನಿಗಳು ಸೃಷ್ಟಿಯಾಗುತ್ತವೆ. ರಾಗಗಳು ಅಸಂಖ್ಯಾತವಾದಂತೆ ಧ್ವನಿಗಳೂ ಅನಂತವೇ.[71] ರಾಗವನ್ನು ಹೆಸರಿಸಿದಾಗಲೇ ಧ್ವನಿಯನ್ನೂ ಹೆಸರಿಸಿದಂತಾಗುತ್ತದೆ. ಆದ್ದರಿಂದ ಒಂದೊಂದು ಧ್ವನಿಗೂ ಬೇರೆ ಹೆಸರು ಕೊಡುವ ಅಗತ್ಯವಿಲ್ಲ. ಒಂದೇ ರಾಗದಲ್ಲಿ ತಾಲಭೇದ ನಿಮಿತ್ತವಾದ ಅನೇಕ ರೂಪಕಗಳನ್ನು ಸೃಷ್ಟಿಸಬಹುದು. ತಾಲ ರೂಪಗಳು ಧ್ವನಿಯನ್ನು ಮತ್ತಷ್ಟು ವರ್ಧಿಸುತ್ತವೆ. ಆಯಾ ಪ್ರಬಂಧ ವೈಶಿಷ್ಟ್ಯವೇ ಅದರದರ ಧ್ವನಿ. ಒಟ್ಟು ರಾಗಧ್ವನಿಯೇ, ಒಟ್ಟು ಪ್ರಬಂಧದ ಧ್ವನಿಯೇ ಧ್ವನಿ ಎಂಬುದು ಮತಂಗನ ನಿಲುವು.

ಮತಂಗನು ಆನಂದವರ್ಧನನಂತೆ ಧ್ವನಿಭೇದಗಳನ್ನು ರಚಿಸದಿದ್ದುದಕ್ಕೆ ಮತ್ತೊಂದು ಕಾರಣವನ್ನು ಕೊಡಬಹುದು. ಮತಂಗನೇ ಆಗಲಿ, ಶಾರ್ಙ್ಗದೇವನೇ ಆಗಲಿ ಅಲಂಕಾರಗಳನ್ನು

---

[69] ಸ್ವಯಂ ಯೋ ರಾಜತೇ . . . ರಾಗಜನಕೋ ಧ್ವನಿಃ ಸ್ವರ ಇತಿ. ತಥಾಚಾಹ ಕೋಹಲಃ. ಆತ್ಮೇಚ್ಛಯಾ . . . ನಾಡಿಭಿತ್ವಾ ತಥಾಕಾಶೇ ಧ್ವನಿ ರಕ್ತಃ ಸ್ವರಃ ಸ್ಮೃತಃ, ಬೃಹದ್ದೇಶೀ, ಪುಟ ೧೨. ಶ್ರವಣಾನಂತರಮ್ ಮನನೇ ಕೃತೇ ಮಾನಸಪ್ರತ್ಯಕ್ಷ ಸ್ವಯಂ ರಾಜತೇ ಸ್ವೇನೈವ ಪ್ರಕಾಶತೇ, ಸಂ. ರತ್ನಾ. I iii ೨೪. ಟೀಕೆ.

[70] O lady! We receive but what we give . . .
Ah! from the soul itself must issue forth
A light, a glory, and a luminous cloud
Enveloping the earth.
And from the soul itself must there be sent
A sweet and potent voice of its own birth
Of all sweet sounds, the life and element. (*Dejection.*)

[71] ಯಥಾ ಧ್ವನಿವಿಶೇಷಾಣಾಂ ಆನಂತ್ಯಂ ಗಗನೋದರೇ. ಬೃಹದ್ದೇಶೀ, ಪುಟ ೭೧.

ವಾಚಕಗಳೆಂದು ಭಾವಿಸಿರುವುದಿಲ್ಲ. ಅವೂ ವ್ಯಂಗ್ಯ ಪದಗಳೇ. ಶಾರೀರ, ಶ್ರುತಿ, ಸ್ವರ, ಮೂರ್ಛನ, ತಾನ ವರ್ಣಾಲಂಕಾರಗಳೆಲ್ಲವೂ ವ್ಯಂಜಕಗಳೇ. ಎಲ್ಲವೂ ಅಭಿವ್ಯಕ್ತಿ ಪುಂಜವಾದುವೇ. ರಕ್ತಿಯೇ ಅಭಿವ್ಯಕ್ತಿ, ಇವೆಲ್ಲವೂ ರಕ್ತಿಲಾಭಕ್ಕಾಗಿಯೇ ಹುಟ್ಟಿದುವು. ಅಂಶಗಳು ರಕ್ತಿಲಾಭ ವನ್ನು ಹೆಚ್ಚಿಸುತ್ತವೆಯಾದುದರಿಂದ ಅವು ಪ್ರಧಾನ. ಮೂರ್ಛನ ತಾನಾದಿಗಳಿಂದ ಪ್ರಾರಂಭ ವಾದ ಅಭಿವ್ಯಕ್ತಿ ಅಂಶಗಳಿಂದ ದೂರ ದೂರವಾಗಿ ಪ್ರಸರಿಸುತ್ತ ಕೊನೆಯಲ್ಲಿ ನ್ಯಾಸಾಂಶಗಳ ಮೂಲಕ ರಸಾಭಿವ್ಯಕ್ತಿಯಲ್ಲಿ ಮುಕ್ತಿಪಡೆಯುತ್ತದೆ. ಅಂಶಗಳು ಉಳಿದೆಲ್ಲಕ್ಕಿಂತಲೂ ಧ್ವನಿ ಪ್ರಾಬಲ್ಯಕ್ಕೆ ಕಾರಣಗಳೆಂದು ತೋರಿಸಿದ್ದು ಮಾತ್ರ ಮತಂಗನ ವೈಶಿಷ್ಟ್ಯ. ಎಲ್ಲ ರಾಗಗಳಲ್ಲೂ ಅಲಂಕಾರರೂಪ ಇದ್ದೇ ಇರಬೇಕು; ಅದೂ ಧ್ವನಿರೂಪದಂತೆ ನಿತ್ಯವೇ. ಸಂಗೀತದಲ್ಲಿ ಯಾವ ಭಾಗವೂ ತಟಸ್ಥವಾಗಿ ತಾನೇತಾನಾಗಿ ನಿಂತುಬಿಡುವುದಿಲ್ಲ. ಒಂದು ಇನ್ನೊಂದರಲ್ಲಿ ಮುಂದುವರಿ ಯುತ್ತದೆ. ಒಂದೊಂದಕ್ಕೂ ಉಚಿತ ಸ್ಥಾನವಿದೆ. ಅಲಂಕಾರವಿಲ್ಲದ, ವಾದಿ, ಸಂವಾದಿ, ಅನುವಾದಿ ಗಳಿಲ್ಲದ, ಸ್ಥಾಯಿಸಂಚಾರಿಗಳಿಲ್ಲದ ರಾಗವೇ ಇಲ್ಲ. ಅಂದಮೇಲೆ ಇದು ಅಲಂಕಾರಧ್ವನಿ, ಇದು ವಸ್ತುಧ್ವನಿ ಎಂಬ ಭೇದಗಳಿಗಾಗಲಿ, ಇದು ರಸಾಲಂಕಾರವೆಂಬ ಭೇದಕ್ಕಾಗಲಿ ಅವಕಾಶವೇ ಇಲ್ಲ. ಇವೆಲ್ಲ ರಸವಾದ ಒಟ್ಟು ಧ್ವನಿಯ ಅಂಗಗಳು. ಒಂದೊಂದು ರಾಗವನ್ನೂ ತೆಗೆದುಕೊಂಡು ಅದು ವಿಶಿಷ್ಟವಾದ ಮೂರ್ಛನ, ತಾನ, ಕಲೆ, ತಾಲ, ಅಲಂಕಾರ, ಅಂಶ, ನ್ಯಾಸ ಮುಂತಾದ ಎಲ್ಲ ಅಂಶಗಳಿಂದ ಸಂಘಟ್ಟಿತವಾದ ಏಕಘನವೆಂದು ಮತಂಗನು ವರ್ಣಿಸಿರುತ್ತಾನೆ. ಅಭಿನವ ಗುಪ್ತನು ಆನಂದವರ್ಧನನ ಧ್ವನಿತತ್ತ್ವವನ್ನು ವಿಮರ್ಶಿಸಿ, ಅಲಂಕಾರ, ವಸ್ತುಧ್ವನಿಗಳನ್ನು ಅಂಗಾಂಶಕ್ಕೆ ಸೇರಿದಂತೆಯೂ, ಆ ಎಲ್ಲವೂ ಆತ್ಮರೂಪವಾದ ರಸಕ್ಕೆ ಅಂಗಗಳೆಂದೂ, ಆ ಅಂಗ ಗಳಲ್ಲಿ ಧ್ವನಿ ಅಂಶ ಪ್ರಮುಖವಾದ ಅಂಗವೆಂದೂ, ಕಾವ್ಯರೂಪ ಏಕಘನರೂಪವೆಂದೂ ವ್ಯವಸ್ಥೆ ಗೊಳಿಸಿದನು. ಮತಂಗನ ನಿಲುವು ಅಭಿನವಗುಪ್ತನ ಅಂತಿಮನಿರೂಪಣೆಗೆ ಸದೃಶವಾದದ್ದು.

ಅಭಿನವಗುಪ್ತನಲ್ಲಿ ಕಾಣುವ ಈ ಸಾಮರಸ್ಯ ಭಾವವು ಅವನಿಗಿಂತ ಮುಂಚಿನ ಮತಂಗ ನಲ್ಲಿ, ಸಂಗೀತದಲ್ಲಿ ಮೊಟ್ಟಮೊದಲಿಗೆ ಧ್ವನಿ ವಿವೇಕವು ಆರಂಭವಾದ ದಶೆಯಲ್ಲೇ ಎದ್ದು ಕಾಣುತ್ತದೆ. ಆದ್ದರಿಂದ ಸಂಗೀತದ ಮೀಮಾಂಸೆಯಲ್ಲಿ ಅದು ಹುಟ್ಟಿದಾರಭ್ಯ ಕಾವ್ಯ ಮೀಮಾಂಸೆಯಲ್ಲಿದ್ದಂತೆ ಅಂತಃಕಲಹಗಳು ಕಾಣುವುದಿಲ್ಲ. ಅಲಂಕಾರದಲ್ಲಿ ಧ್ವನಿ ಅಂತರ್ಭಾವ ಹೊಂದಲಿ, ಧ್ವನಿಯಲ್ಲಿ ಅಲಂಕಾರ ಅಂತರ್ಭಾವ ಹೊಂದಲಿ, ಎಂಬ ಗೊಂದಲ ಮತಂಗನಲ್ಲಾಗಲಿ ಅವನ ಅನಂತರದವರಲ್ಲಾಗಲಿ ತಲೆಹಾಕಲಿಲ್ಲ. ಅನೇಕ ದಶೆಗಳುಳ್ಳ ರಾಗದಲ್ಲಿ ಒಂದು ದಶೆ ಇನ್ನೊಂದು ದಶೆಯ ಸ್ಥಾನದಲ್ಲಿ ನಿಲ್ಲಲಾರದು. ದಶೆಯಾದ ಮೇಲೆ ದಶೆ ಕ್ರಮವಾಗಿ ಕಾಣಿಸಿ ಕೊಂಡು ಗಾಯಕಶ್ರೋತೃಗಳ ನಿರೀಕ್ಷೆಯನ್ನು ಚಿತ್ರ ವಿಚಿತ್ರವಾಗಿ ಈಡೇರಿಸುತ್ತವೆ. ಯಾವು ದೊಂದೂ ಕೇವಲ ಪುನರುಕ್ತವಾಗದೆ ಇವು ನಿರಂತರವಾಗಿ ಪರ್ಯಾಯಗಳಾಗಿ ಕ್ಷಿಪ್ತವಾಗಿ ಏಕಘನವಾದ ಒಂದು ರಾಗವಾಗಿ ಪುಷ್ಪಿಸುತ್ತವೆ. ಅದನ್ನು ಪುಷ್ಪಿಸುವುದರಲ್ಲಿ ಪ್ರಬಲವಾದದ್ದು ಅಂಶ ವ್ಯಂಗ್ಯ. ರಸಾಸ್ವಾದವು ಮೂರ್ಛನ ಅಲಂಕಾರ ಸ್ಥಾನದಲ್ಲಿ ಮೊಗ್ಗಾಗಿ, ಅಂಶ ಸ್ಥಾನದಲ್ಲಿ ಅರಳಿ, ನ್ಯಾಸಸ್ಥಾನದಲ್ಲಿ ಪರಿಮಳ ಸೂಸಿ ವಿಶ್ರಾಂತವಾಗುತ್ತದೆ. ಈ ಮೂರು ಭಂಗಿ ಗಳೂ ಪರಸ್ಪರಾವಲಂಬನಗಳಾಗಿ ಲಂಬಿಸುತ್ತವೆ. ಈ ತ್ರಿಸ್ಥಾನಗಳು ಗಾಯಕನಲ್ಲಿ ಹೇಗೋ ಅವನಂತೆಯೇ ಅವಧಾನವಿರುವ ಶ್ರೋತೃವಿನಲ್ಲೂ ಹಾಗೆಯೇ ಪ್ರತಿಫಲಿಸುತ್ತವೆ.

ಜಿ. ಹನುಮಂತರಾವ್

(ತರುವಾಯದ ಟಿಪ್ಪಣಿ—ಈ ಲೇಖನ ಅಚ್ಚಾಗುವುದಕ್ಕೆ ಕೆಲವೇ ದಿನಗಳ ಮುಂಚೆ ಬ್ರಿಟಿಷ್ ಜರ್ನಲ್ ಆಫ್ ಎಸ್ತೆಟಿಕ್ಸ್‌ನ ೧೯೬೪ಳ ನೆಯ ವರ್ಷದ ಸಂಪುಟದಲ್ಲಿ ಮತಂಗನ ಧ್ವನಿತತ್ತ್ವವನ್ನು ಕುರಿತು ಪ್ರಸಿದ್ಧ ಸಂಗೀತಮೀಮಾಂಸಕ ದಿವಂಗತ ಎ. ಎ. ಬೇಕ್ ಬರೆದ ಲೇಖನ ನನ್ನ ಕಣ್ಣಿಗೆ ಬಿತ್ತು. ಅದನ್ನು ಈ ಲೇಖನ ದಲ್ಲಿ ವಿಮರ್ಶಿಸಲಾಗಲಿಲ್ಲ.)

# ಬಿಚ್ಚಟಿ(ಳಿ)ಸು (?)—ಒಂದು ವಿಚಾರ

ಪಂಪನ ವಿಕ್ರಮಾರ್ಜುನ ವಿಜಯದಲ್ಲಿ ಹತ್ತನೆಯ ಆಶ್ವಾಸದ ಪದ್ಯವೊಂದು ಹೀಗಿದೆ:

ನಡುವ ಸರಲ್ ಸರಲ್ಕೊಳೆ ಸುರುಳ್ವ ಹಯಂ ಹಯದುಳ್ಗುರುಳ್ಗಳೊಳ್
ತೊಡರ್ವ ಭಟರ್ ಭಟರ್ಕಳೊಳೆ ತೊಟ್ಟುಟಿ ಮಾಬ್ಪ ರಥಂ ರಥಕ್ಕೆ ವಾ
ಯ್ದುಡಿಗಿಡೆ ಮೆಯ್ವೊಣರ್ಚುವ ಮಹಾರಥರಾಜಿಯೊಳಂತಗುರ್ವಿನ-
ಚ್ಚುಡಿದಿರೆ ಕಾದಿ ಬಿಚ್ಚಟಿಸಿದರ್ ಬಿಸುನೆತ್ತರ ಸುಟ್ಟರೆ ಸೂಸುವನ್ನೆಗಂ|| [1]

ದಾಯಾದಿಗಳಾದ ಕೌರವ-ಪಾಂಡವರ ಕಾದಾಟದ ವರ್ಣನೆಯ ಸಂನಿವೇಶದಲ್ಲಿ ಈ ಪದ್ಯ ಬಂದಿದೆ. ವೀರರು ಪ್ರಯೋಗಿಸುವ ಬಾಣಗಳೂ; ಹಾಗೆ ಪ್ರಯೋಗವಾದ ಬಾಣಗಳು ನೆಟ್ಟು ಸುರುಳಿಯಾಗಿ ಉರುಳುವ ಕುದುರೆಗಳೂ ; ಕುದುರೆಗಳ ಉರುಳಾಟದಲ್ಲಿ ತೊಡರಿಕೊಳ್ಳುವ ಸೈನಿಕರೂ ; ಆ ಸೈನಿಕರ ಕಾಲ ತುಳಿತಕ್ಕೆ ಪುಡಿಪುಡಿಯಾಗುವ ರಥಗಳೂ ; ಆ ರಥಗಳ ಮೇಲೆ ಬಿದ್ದು ಕಾಲು ಚುಚ್ಚಿದರೂ ದೇಹದಿಂದಲೇ ಹೋರಾಡುವ ಮಹಾರಥರೂ ಆ ಯುದ್ಧ ಭೂಮಿಯಲ್ಲಿ ಅಂತು ಭಯಂಕರತೆಯ ಅಚ್ಚು ಮುರಿದುಬಿದ್ದಂತೆ ಯುದ್ಧಮಾಡಿ ಬಿಸಿರಕ್ತದ ಪ್ರವಾಹ ಕಾಣಿಸುವವರೆಗೂ ಬಿಚ್ಚಟಿಸಿದರು (ವಿಸ್ತರಿಸಿದರು?) ಎಂಬುದು ಇದರ ಅರ್ಥ. ಈ ಪದ್ಯದ ಕೊನೆಯ ಪಾದದಲ್ಲಿ ಪ್ರಯೋಗವಾಗಿರುವ 'ಬಿಚ್ಚಟಿಸು' ಎಂಬ ಪದ ವಿಚಾರಾರ್ಹ ವಾಗಿದೆ. ಕೇಶಿರಾಜನು ತನ್ನ ಶಬ್ದಮಣಿದರ್ಪಣದ ಧಾತುಪ್ರಕರಣದಲ್ಲಿ ಬಿಚ್ಚಟಿಸು, ವಿಸ್ತಾರೇ[2] (to spread out) ಎಂಬ ಅರ್ಥಕೊಟ್ಟಿದ್ದಾನೆಂದು ಮಂಗಳೂರು, ಮತ್ತು ಪರಿಷತ್ತಿನ ಮುದ್ರಣ ಗಳೆರಡರಲ್ಲಿಯೂ ಸೂಚಿತವಾಗಿದೆ.[3] ಇದರಂತೆ ಇನ್ನೊಂದು ಪದ ಬಿತ್ತರಿಸು ಎಂಬುದು. ಅದಕ್ಕೂ 'ವಿಸ್ತಾರೇ' ಎಂಬರ್ಥವನ್ನೇ ಕೇಶಿರಾಜ ಕೊಟ್ಟಿದ್ದಾನೆ.[4] ಮಂಗಳೂರು ಮತ್ತು ಬೆಂಗಳೂರಿನ ಮುದ್ರಣವಾದ ಶಬ್ದಮಣಿದರ್ಪಣದ ಪ್ರಕಾರ ಕೇಶಿರಾಜನು ಟಿಟಯುಕ್ತವಾದ ಬಿಚ್ಚಟಿಸು ಪದವನ್ನು ಬಳಸಿದ್ದಾನೆಂದು ಗೊತ್ತಾಗುತ್ತದೆ. ಹಾಗೆಯೇ ಪಂಪನಲ್ಲಿ ಹಲವು ಕಡೆ ಈ ಪದದ ಪ್ರಯೋಗವನ್ನು ಗಮನಿಸಬಹುದು. ಅವನ ಸಮಸ್ತ ಭಾರತದ ಆರಂಭದಲ್ಲಿನ ಪದ್ಯ ಗಳಲ್ಲೊಂದಾದ,

ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತ ಭಾ
ರತಮನಪೂರ್ವಮಾಗೆ ಸಲೆ ಪೇೞ್ದ ಕವೀಶ್ವರರಿಲ್ಲ ವರ್ಣಕಂ
ಕತೆಯೊಳಡಂಬಡಂ ಪಡೆಯೆ ಪೇೞ್ವೊಡೆ ಪಂಪನೆ ಪೇೞ್ಗುಮೆಂದು ಪಂ
ಡಿತರೆ ತಗುಳ್ದು ಬಿಚ್ಚಟಿಸೆ ಪೇೞಲೊಡರ್ಚಿದೆನೀ ಪ್ರಬಂಧಮಂ||

ಎಂಬ ಪದ್ಯದಲ್ಲೂ 'ಟ' ಕಾರದಿಂದ ಕೂಡಿದ ಬಿಚ್ಚಟಿಸು ಪದದ ಪ್ರಯೋಗವಿದೆ. ಆದರೆ ಇಲ್ಲಿ

---

1 ಪಂಪಭಾರತ: ಪರಿಷತ್ತಿನ ಪ್ರಕಟನೆ: ೧೦—೧೧೪.

2 ಶಬ್ದಮಣಿದರ್ಪಣ: ಮೂರನೆಯ ಮುದ್ರಣ ೧೯೨೦: ಸಂ.: ಕಿಟೆಲ್, ಪಂಜೆಯವರು: ಧಾತು ಪ್ರಕರಣ: ಪುಟ ೩೪೬; ಪದಸಂಖ್ಯೆ ೭೬೯.

3 ಶಬ್ದಮಣಿದರ್ಪಣ: ಕರ್ಣಾಟಕ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೩೦. ಧಾತುಪ್ರಕರಣ: ಪುಟ ೨೪೨: ಪದ ಸಂಖ್ಯೆ: ೭೬೭.

4 ಅದೇ ಮಂಗಳೂರು ಮುದ್ರಣ: ಪುಟ ೩೪೬: ಪದಸಂಖ್ಯೆ ೭೫೯.

5 ಪಂಪಭಾರತ: ೧-೧೧.

ವಿಸ್ತರಿಸು ಎಂಬ ಅರ್ಥ ಆ ಪದಕ್ಕೆ ಆಗದೆ, ಅದರ ಬದಲು ಹುರಿದುಂಬಿಸಲು, ಪ್ರಾರ್ಥಿಸಲು ಎಂಬ ಅರ್ಥ ಬರುತ್ತದೆ.

ಹಾಗೆಯೇ ಸುಭದ್ರೆಯಲ್ಲಿ ಮೋಹಪರವಶನಾದ ಅರ್ಜುನನು ಮಾಧವೀಲತಾಮಂಟಪದ ಸಮೀಪಕ್ಕೆ ಬಂದು,

ಬಿರಿದಲರೊಳ್ ತೆಱಿಂಬೊಳೆವ ತುಂಬಿ ತಳಿರ್ಗಳಮಾವು ಮಾವಿನಂ
ಕುರುಮನೆ ಕರ್ಚಿ ಬಿಚ್ಚಟಿಪ ಕೋಗಿಲೆ ಕಂಪನವುಂಕೆ ಪೊತ್ತು ನಿ
ತ್ತರಿಪೆರಲೆಂಬಿವೇವುವೊ ಮದೀಯ ಮನೋಗತ ಕಾಮರಾಗ ಸಾ
ಗರದೊದವಿಂಗೆ ನಲ್ಲಳ ವಿಲೋಕನಚಂದ್ರಿಕೆಯೊಂದೆ ಸಾಲದೇ ||[6]

ಎಂಬ ವರ್ಣನೆ ಕೊಡುವ ಪದ್ಯದಲ್ಲೂ 'ಟ' ಕಾರಯುಕ್ತವಾದ 'ಬಿಚ್ಚಟಿಪ' ಪದವನ್ನು ಕಾಣಬಹುದು. ಹೀಗೆಯೇ ಇನ್ನೊಂದು ಕಡೆ, ೧೩-೯೫ ರ ವಚನದಲ್ಲೂ 'ಬಿಚ್ಚಟಿಸುವ' ಎಂಬ ಟಕಾರಯುಕ್ತವಾದ ಪ್ರಯೋಗವಿದೆ.[7] ಆದರೆ ಹನ್ನೊಂದನೆಯ ಆಶ್ವಾಸದಲ್ಲಿನ ಒಂದು ಪದ್ಯದಲ್ಲಿ ಮಾತ್ರ ಸ್ವಲ್ಪ ವ್ಯತ್ಯಾಸವಿರುವುದು ನಮ್ಮ ಕುತೂಹಲವನ್ನು ಹುಟ್ಟಿಸುತ್ತದೆ.

ಜ್ವಳನ ಪತತ್ರಿಯಂ ಕಡಿದು ವಾರುಣ ಪತ್ರಿಯಿನೈಂದ್ರಬಾಣಮಂ
ಕಳೆದು ಸಮೀರಣಾಸ್ತ್ರದಿನಿದಿರ್ಚಿದ ಭೂಭುಜರೆಲ್ಲರಂ ಭಯಂ |
ಗೊಳಿಸಿ ನಿಶಾತವಜ್ರಶರದಿಂ ಸುರರಂಬರದೊಳ್ ತಗುಳ್ದು ಬಿ
ಚ್ಚಳಿಸೆ ನದೀಜನುಚ್ಚಳಿಸೆ ಕಾದಿದನೇಂ ಕಲಿಯೋ ಗುಣಾರ್ಣವಂ ||[8]

ಭೀಷ್ಮನು ಪ್ರಯೋಗಿಸಿದ ಆಗ್ನೇಯಾಸ್ತ್ರವನ್ನು ತುಂಡರಿಸಿ, ವರುಣಾಸ್ತ್ರದಿಂದ ಇಂದ್ರಬಾಣವನ್ನು ನಿವಾರಿಸಿ, ವಾಯವ್ಯಾಸ್ತ್ರದಿಂದ ಪ್ರತಿಭಟಿಸಿದ ದೊರೆಗಳೆಲ್ಲರನ್ನೂ ಬೆದರಿಸಿ, ಹರಿತವಾದ ವಜ್ರಶರದಿಂದ—ದೇವತೆಗಳು ಬಾನಿನಲ್ಲಿ ಕೂಡಿ ಬಿಚ್ಚಳಿಸುತ್ತಿರಲು,—ಗಾಂಗೇಯನು ಮೇಲಕ್ಕೆ ಚಿಮ್ಮುವಂತೆ ಕಾದಾಡಿದ ಆ ಅರ್ಜುನನು ಅದೇನು ಪರಾಕ್ರಮಿಯೋ! ಎನ್ನುವ ಒಂದು ಕೊಂಡಾಟದ ಪದ್ಯ ಇದು. ಇಲ್ಲಿ 'ಬಿಚ್ಚಳಿಸು' ಎಂಬ ಪದಕ್ಕೆ ಪ್ರೋತ್ಸಾಹಿಸು, ಹೊಗಳು, ಹುರಿದುಂಬಿಸು, ಇತ್ಯಾದಿ ಅರ್ಥ. ಆದರೆ ಸ್ವಾರಸ್ಯವಿರುವುದು ಪದದ ಅರ್ಥದಲ್ಲಿಯಲ್ಲ, ಪ್ರಯೋಗದಲ್ಲಿ. ಪಂಪಭಾರತದ ಇತರ ನಾಲ್ಕು ಪ್ರಯೋಗಗಳಲ್ಲೂ 'ಟ' ಕಾರಯುಕ್ತ ಬಿಚ್ಚಟಿಸು ಇದ್ದರೆ ಇಲ್ಲಿ ಮಾತ್ರ 'ಳ' ಕಾರದಿಂದ ಕೂಡಿದ ಬಿಚ್ಚಳಿಸು ಇದೆ. ಉಳಿದ ನಾಲ್ಕೂ ಕಡೆಗಳಲ್ಲಿ ಬಂದಂತೆ ಇಲ್ಲಿಯೂ 'ಟ' ಕಾರಯುಕ್ತ ಬಿಚ್ಚಟಿಸು ಆಗಬೇಕಿತ್ತಲ್ಲವೆ? ಆಗ 'ಳ' ಕಾರ ಪ್ರಾಸದ ಈ ಪದ್ಯದಲ್ಲಿ 'ಟ' ಕಾರವೂ ಸೇರಬೇಕಾಗುತ್ತದೆ. ಹಾಗೆ ಮಾಡಿದರೆ ಟಟಕುಳಕ್ಷಳಗಳೆಲ್ಲವೂ ಪ್ರಾಸವಾಗಿ ಬಂದಂತಾಗುತ್ತದೆ. ಆದರೆ ವ್ಯಾಕರಣದ ನಿಯಮಕ್ಕೆ ಇದು ವಿರುದ್ಧವಾಗುತ್ತದೆ. ಕೇಶಿರಾಜನ 'ನಿಯಾಮಕ್ಕಂ, ಯಮಕ ವ್ಯವಹೃತಿಗಮಾಗವು' ಎಂಬ ಹೇಳಿಕೆ ಎಚ್ಚರಿಸುತ್ತದೆ.[9] ಹಾಗಾದರೆ ಈ ಬಿಚ್ಚಟಿಸು—ಬಿಚ್ಚಳಿಸು—ಎಂಬೆರಡು ಪದಗಳಲ್ಲಿ ಯಾವುದು ಸರಿಯಾದ ರೂಪವೆಂದು ಪ್ರಶ್ನೆ ಯೇಳುತ್ತದೆ. ಈಗ ಪಂಪನ ಇನ್ನೊಂದು ಕಾವ್ಯವಾದ ಆದಿಪುರಾಣದಲ್ಲಿನ ಈ ಕಂದ ಪದ್ಯವನ್ನು ಗಮನಿಸಬಹುದು:

---

[6] ಪಂಪಭಾರತ: ೫-೧೧.

[7] "....ತನ್ನ ಗದಾದಂಡಮಂ ಭುಜಾದಂಡದೊಳಳವಡಿಸಿಕೊಂಡ ವೃಕೋದರನನಂಬುಜೋದರಂ ಬಿಚ್ಚಟಿಸುವ ನೆವದೊಳ್ ..." ಪಂಪಭಾರತ: ೧೩-೯೫ (ವ).

[8] ಪಂಪಭಾರತ: ೧೧-೪೩.

[9] ಶಬ್ದಮಣಿದರ್ಪಣ: ಸಂ.: ಪ್ರೊ. ಡಿ. ಎಲ್ ನರಸಿಂಹಾಚಾರ್. ಮೊದಲ ಮುದ್ರಣ: ೧೯೫೪: ಪುಟ ೧೫: ಸೂತ್ರ ೨೯.

ಎಳಸುವ ಪುರುಳಿಯ ಗ[ಟಿ]ಪುವ
ಗಿಳಿಯ ತೆಱಂದಿರಿದು ಮೊರೆವ ಪೆಣ್ದುಂಬಿಯ ಬಿ
ಚ್ಚಳಿಪ ಪರಭೃತದ ಕಳಕಳ
ದೊಳೆ ಮಸುಳ್ದುದು ದಿವಿಜಯುಗಲ ಕಲಕಲನಿನದಂ ||[10]

ಇಲ್ಲಿಯೂ ‘ಬಿಚ್ಚಳಿಸು’ ಪದದ ಪ್ರಯೋಗವಿದೆಯಲ್ಲದೆ ಈ ಪದ್ಯದ ‘ಳ’ಕಾರ ಪ್ರಾಸಸ್ಥಾನದಲ್ಲಿ ಬಿಚ್ಚಳಿಸು ಪದದ ‘ಳ’ ಕಾರ ಬಂದಿದೆ, ಪಂಪಭಾರತದ ೧೧-೪೩ನೆಯ ಪದ್ಯದಂತೆ. ‘ಟ-ಳ’ ಕಾರಗಳಲ್ಲಿ ಯಾವುದು ಸರಿಯಾದ, ಸಾಧುವಾದ, ಗ್ರಾಹ್ಯವಾದ ಅಕ್ಷರವೆಂಬುದನ್ನು ನಿರ್ಧರಿಸಲು ಇಂಥ ಪ್ರಾಸಸ್ಥಾನದ ಪ್ರಯೋಗವೇ ಸಾಮಾನ್ಯವಾಗಿ ಅಂಗೀಕಾರಾರ್ಹವೆಂದು ಕಾಣುವುದರಿಂದ ಇದನ್ನು ಸಮರ್ಪಕವಾದ ಆಧಾರವೆಂದು ಪರಿಗಣಿಸಬಹುದು. ಅದೇ ಆದಿಪುರಾಣ ಕಾವ್ಯದಲ್ಲಿ ಇನ್ನೊಂದು ಕಡೆ, “. . . . . . . . ಲೋಕಾಂತಿಕಾಮರವೃಂದಂ ಬಂದು **ಬಿಚ್ಚಳಿಸಲೊಡಂ** ವಜ್ರಕ್ಕೆ ಬಳಮಿತ್ತಂತೆ ವಜ್ರಸೇನ ಮಹಾರಾಜಂ ಪರಿಸಿಷ್ಕ್ರಮಣ ಕಲ್ಯಾಣ” ನಾದನಂತೆ—ಎಂಬಲ್ಲಿ ‘ಳ’ ಕಾರಯುಕ್ತ ಪದವಿದೆ.[11]

ಇನ್ನು ಇತರ ಕೆಲವು ಕವಿಗಳ ಪ್ರಯೋಗಗಳನ್ನು ನೋಡೋಣ. ಪಂಪನ ಸಮಕಾಲೀನನಾದ ಪೊನ್ನನ ಶಾಂತಿಪುರಾಣದಲ್ಲಿ ಒಂದೆಡೆಗೆ ‘ಬಿಚ್ಚಳಿಸು’ ಎಂಬ ‘ಳ’ಕಾರಯುಕ್ತ ಪದದ ಪ್ರಯೋಗವಿದೆ.[12] ಹಾಗೆಯೇ ಪೊನ್ನನ ಶಾಂತಿಪುರಾಣದ ಕೊನೆಯಲ್ಲಿ ಕೊಟ್ಟಿರುವ ಪರಿಶಿಷ್ಟದಲ್ಲಿನ ಮೊದಲನೆಯ ಪದ್ಯ,

ಶ್ರೀಮದಶೇಷಜ್ಜನಸಮುಯ್ಯೈಕಶಿರೋಮಣಿ ಸರ್ವಜೀವರ
ಕ್ಷಾಮಣಿಯೆಂದು ಭವ್ಯತತಿ ಬಿಚ್ಚಳಿಸುತ್ತಿರೆ ಸಂದ ದಾನಚಿಂ
ತಾಮಣಿ ತನ್ನದೊಂದು ಪಿತೃಭಕ್ತತೆಯಂ ಮೆಱೆಯಲ್ ಪುರಾಣ ಚೂ
ಡಾಮಣಿಯಂ ನಿವಿರ್ಚಿದಳಿಳಾಗ್ರದೊಳಿಂತು ಜಸಕ್ಕೆ ನೋಂತರಾರ್ ||

ಇದರಲ್ಲಿಯೂ ‘ಳ’ ಕಾರಯುಕ್ತ ಬಿಚ್ಚಳಿಸು ಪದವನ್ನು ಗುರುತಿಸಬಹುದು.[13] ಮತ್ತು ಕನ್ನಡದ ಅತ್ಯಂತ ಹಳೆಯ ಗದ್ಯಗ್ರಂಥವಾದ ವಡ್ಡಾರಾಧನೆಯಲ್ಲಿನ ‘ಸುಕುಮಾರಸ್ವಾಮಿ ಕಥೆ’ಯಲ್ಲಿ ‘ಬಿಚ್ಚಳಿಸಿ’ ಎಂಬ ‘ಳ’ಕಾರಯುಕ್ತವಾದ ಪದದ ಪ್ರಯೋಗವಿದೆ, “. . . ಸಭೆಯೊಳಿರ್ದ ಪಂಡಿತಜನವೆಲ್ಲಂ ಮೆಚ್ಚಿ ಬಿಚ್ಚಳಿಸಿ ಪೊಗಲ್ದೊಡರಸಂ ಸಂತುಷ್ಟಚಿತ್ತನಾಗಿ. . . .” ಎಂಬ ವಾಕ್ಯವನ್ನು ಗಮನಿಸಬಹುದು.[14]

ನಾಗಚಂದ್ರ (ಅಭಿನವಪಂಪ) ಕವಿಯು ಮಲ್ಲಿನಾಥ ಪುರಾಣದಲ್ಲಿ ಎರಡು ಪದ್ಯಗಳಲ್ಲಿ ಬಿಚ್ಚಳಿಸು ಎಂಬ ‘ಳ’ ಕಾರಯುಕ್ತ ಪದವನ್ನು ಪ್ರಯೋಗಿಸಿದ್ದಾನೆ.

---

10 ಆದಿಪುರಾಣ : (ಸಂ.) ಚೌಗುಲೆ, ಕುಂದಣಗಾರ : ೬—೯೪.
ಈ ಪದ್ಯದ ಮೊದಲನೆಯ ಸಾಲಿನಲ್ಲಿ ‘ಎಳಸುವ ಪುರುಳಿಯ ಗಳಪುವ’ ಎಂದು ಸಂಪಾದಕರು ಕೊಟ್ಟಿದ್ದಾರೆ. ಆದರೆ ‘ಗಳಪುವ’ ಎಂಬುದು ‘ಗಟಿಪುವ’ ಎಂದಿರಬೇಕು. ಮೇಲಿನ ಪದ್ಯದಲ್ಲಿ ಹಾಗೆಯೇ ಕೊಟ್ಟಿದ್ದೇನೆ.

11 ಅದೇ ಪುಟ ೧೩೭, ೬–೨೩ (ವ). ಇಲ್ಲಿ ‘ಬಿಚ್ಚಳಿಸಲೊಡಂ’ ಎಂದು ಆದಿಪುರಾಣದ ಅ ಮತ್ತು ಬ ಪ್ರತಿಗಳಲ್ಲೂ, ‘ಬಿಚ್ಚಳಿಸೆ’ ಎಂದು ಚ ಪ್ರತಿಯಲ್ಲೂ ಪಾಠಾಂತರವಿದೆ. ಏನೇ ಇದ್ದರೂ ಎರಡೂ ಕಡೆಗಳಲ್ಲಿ ‘ಳ’ ಕಾರದ ಪ್ರಯೋಗವನ್ನೇ ಗಮನಿಸಬಹುದು.

12 ಶಾಂತಿಪುರಾಣ : ಮದ್ರಾಸ್ ಮುದ್ರಣ : ೮—೬೫ (ವ).

13 ಅದೇ—ಪರಿಶಿಷ್ಟ : ಪದ್ಯ—೧.

14 ವಡ್ಡಾರಾಧನೆ : ಸಂ : ಡಿ. ಎಲ್. ನರಸಿಂಹಾಚಾರ್ : ಹೊಸ ಮುದ್ರಣ : ಪುಟ ೪.

ಬಿಚ್ಚಳಿಸಲ್ಕೆ ನಾಲಗೆಗಳೆಯ್ದವೆನಲ್ ಬನಮಂ ವಿಲೋಕನ
ಕ್ಕಚ್ಚರಿಯಪ್ಪಿನಂ ಬರೆದ ಚಿತ್ರಕನಾವನೊ ದೇವ ದೇವರಂ|
ಮೆಚ್ಚಿಸುವನ್ನನೀದೊರೆಯನಾವನೊ ಭೂಭುಜನೊಂದುಕೋಟಿಯುಂ
ನೆಚ್ಚಱಿದೀವನೆಂದು ಪರಿಷಜ್ಜನಮುಂದುಲಿಯುತ್ತುವಿರ್ಪಿನಂ ||[15]

ಮತ್ತು,

ಮಾಣದೆ ನೋಡಿ ಕಣ್ದೊಳಲಿ ಕಯ್ಮುಗೆ ಸೇನೆಗೆ ಸುತ್ತಿ ವಾರುವಂ
ಸಾಣೆಯ ನೇಣವೊಲ್ಪರಿಯೆ ವಾಹಳಿಯೊಳ್ಪರಿವೇಷವಾದ ಪ|
ರ್ಯಾಣದ ಪಂಚರತ್ನರುಚಿಯಿಂದಱವರ್ಬೆಱಗಾಗಿ ಬಲ್ಮೆ ನಿ
ರ್ವಾಣಿಸಿತೆಂದು ಬಿಚ್ಚಳಿಸೆ ಪಂಚಮಧಾರೆಯೊಳೇಱದಂ ನೃಪಂ ||[16]

ಇದೇ ರೀತಿಯಲ್ಲಿ ಶಾಂತಿನಾಥ ಕವಿಯ ಸುಕುಮಾರ ಚರಿತೆಯಲ್ಲೂ 'ಳ' ಕಾರದಿಂದ ಕೂಡಿದ ಪದದ ಪ್ರಯೋಗವನ್ನೇ ಎರಡು ಸಲ ಕಾಣಬಹುದು.[17] ನಾಗಶ್ರೀಯು ಸಮಸ್ತ ವಿದ್ಯೆಗಳನ್ನೂ ಹೇಗೆ ಕಲಿತಳೆಂದು "ಸಭಾಸದರ್ ಮೆಚ್ಚಿ ಬಿಚ್ಚಳಿಸಿ ಪೊಗಟಿ"ದರಂತೆ. ಹಾಗೆಯೇ, "ಸುಕುಮಾರಸ್ವಾಮಿಯ ಪರಿಚ್ಛೇದಕ್ಕೆ ಯಶೋಭದ್ರಸ್ವಾಮಿಗಳ್ ಮೆಚ್ಚಿ ಬಿಚ್ಚಳಿಸಿ ದೀಕ್ಷಾಪ್ರಸಾದ"ವನ್ನು ದಯಪಾಲಿಸಿದರಂತೆ.[18] ರುದ್ರಭಟ್ಟ ಕವಿಯ ಜಗನ್ನಾಥ ವಿಜಯದಲ್ಲಿ ೮-೭೫ ರ ತರುವಾಯದ ಗದ್ಯದಲ್ಲಿಯೂ 'ಬಿಚ್ಚಳಿಸು' ಎಂಬ ಳಕಾರದಿಂದೊಡಗೂಡಿದ ಪದವೇ ಇದೆ.[19] ಆದರೆ ನಂದಳಿಕೆ ಲಕ್ಷ್ಮೀನಾರಣಪ್ಪನ (ಮುದ್ದಣ) ಶ್ರೀರಾಮಾಶ್ವಮೇಧಂ ಕಾವ್ಯದಲ್ಲಿ, "ಕೇಳಯ್ ! ಶತ್ರುಘ್ನ ! ಮೂಲೋಕಮುಮಂ ತನ್ನೊಂದು ಜೋಗದ ಜಾಣ್ಮೆಯ ಮೈಮೆಯ ಬಲ್ಮೆಯಿನೊರ್ಮೊದಲೊಳೆ ತೆಮಳ್ಚಿ ಬಿಚ್ಚಟಿಸಿ ನೋಡಲಾರ್ಪ . . . ." ಎಂಬಲ್ಲಿ ಟಟಯುಕ್ತವಾದ ಬಿಚ್ಚಟಿಸು ಪದವಿದೆ.[20] ಹೀಗೆ ಬೇರೆ ಬೇರೆ ಕೃತಿಗಳಲ್ಲೂ ಈ ಬಗೆಯ 'ಳ' ಕಾರ, 'ಟ' ಕಾರದಿಂದ ಕೂಡಿದ ಪದಗಳ ಪ್ರಯೋಗವನ್ನು ಗುರುತಿಸಬಹುದು. ಬಿಚ್ಚಳಿಸು ಎಂಬುದಕ್ಕೂ, ಬಿಚ್ಚಟಿಸು ಎಂಬುದಕ್ಕೂ ಹೀಗೆ ಹಲವು ಪ್ರಯೋಗಗಳ ನಿದರ್ಶನ ಸಿಗುವುದರಿಂದ ಸಾಹಿತ್ಯಾಭ್ಯಾಸಿಗಳಿಗೆ ಇವೆರಡರಲ್ಲಿ ಯಾವುದು ಸರಿ? ಯಾವುದು ತಪ್ಪು? ಎಂಬ ಅನುಮಾನ ತಲೆಯೆತ್ತುತ್ತದೆ ಮತ್ತು ಈ ರೀತಿಯ ಸಂದೇಹವನ್ನು ಆ ಪ್ರಯೋಗಗಳು ಬಲಪಡಿಸುತ್ತವೆ. ಅಲ್ಲದೆ ಮಂಗಳೂರು ಮತ್ತು ಬೆಂಗಳೂರು ಪ್ರಕಟನೆಯ ಶಬ್ದಮಣಿದರ್ಪಣದಲ್ಲಿ (ಧಾತು ಪ್ರಕರಣ) ಬಿಚ್ಚಟಿಸು ಎಂದೇ ಇದೆ. ಜೊತೆಗೆ ಪಂಪಭಾರತದ ನಿಘಂಟಿನಲ್ಲೂ ಬಿಚ್ಚಟಿಸು ಎಂದೇ ಬರೆದು ಅರ್ಥೈಸಿದ್ದಾರೆ.[21]

ಆದರೆ ಬಿಚ್ಚಳಿಸು ಎಂಬ 'ಳ'ಕಾರಯುಕ್ತ ಪದವೇ ಸರಿಯಾದ ಪದ, ಮತ್ತು ಅದರ ಸರಿಯಾದ ರೂಪ; ಸಂಸ್ಕೃತದ ವಿಸ್ತರಿಸು ಪದದ ತದ್ಭವವೇ ಕನ್ನಡದ ಬಿಚ್ಚಳಿಸು. ಬಿಚ್ಚಟಿಸು ತಪ್ಪು, ಬಿಚ್ಚಳಿಸು ಸರಿ. ಆದುದರಿಂದ ಈ ಪದದಲ್ಲಿ ಇರಬೇಕಾದುದು ಟಟವೂ ಅಲ್ಲ; ಕುಳವೂ ಅಲ್ಲ; ಅದು ಕ್ಷಳ. ಅಲ್ಲದೆ ಈ ಬಿಚ್ಚಟಿಸು ಎಂಬ ಟಟಯುಕ್ತವಾದ ಅಥವಾ ಕುಳಯುಕ್ತವಾದ ಕನ್ನಡದ ಪದ ಇದ್ದದ್ದೇ ಆದರೆ ಆಗ ಉಳಿದ ಸೋದರ ಭಾಷೆಗಳಲ್ಲಿ ಇದರ ಜ್ಞಾತಿಪದವೊಂದು ಇರುವ ಸಂಭವವಿರುತ್ತದೆ. ಆದರೆ ತಮಿಳು, ಮಲಯಾಳ, ತೆಲುಗುಗಳಲ್ಲಿ ಅಂಥ ಯಾವ ಜ್ಞಾತಿಪದವೂ

---

15 ಮಲ್ಲಿನಾಥಪುರಾಣ : ಕರ್ಣಾಟಕ ಕಾವ್ಯಮಂಜರಿ : ೧೮೯೫ : ಪುಟ ೯೯ : ೫-೪೮.

16 ಅದೇ ಪುಟ ೧೯೭ : ೯-೩೭ : ಈ ಪದ್ಯ ಅಭಿನವವಾದಿ ವಿದ್ಯಾನಂದಪಂಡಿತನ ಕಾವ್ಯಸಾರದ (ಕರ್ಣಾಟಕ ಕಾವ್ಯಮಂಜರಿ ಪ್ರಕಾಶನ : ೧೮೯೮) ಪುರಪ್ರವೇಶವರ್ಣನೆಯ ಪ್ರಕರಣದಲ್ಲಿ ಉದಾಹೃತವಾಗಿದೆ (ಪುಟ ೧೧೩).

17 ಸುಕುಮಾರಚರಿತಂ : (ಸಂ.) ಡಿ. ಎಲ್. ಎನ್. ಮತ್ತು ತ. ಸು. ಶಾಮರಾವ್, ೭-೫೬ (ವ).

18 ಅದೇ ೧೨-೮ (ವ).

19 ಜಗನ್ನಾಥವಿಜಯ : ಪ್ರಾಚ್ಯಸಂಶೋಧನಾಲಯ, ೧೯೨೩ : ಪುಟ ೧೯೮, ಸಾಲು ೧೭.

20 ಶ್ರೀ ರಾಮಾಶ್ವಮೇಧಂ : ಕಾವ್ಯಾಲಯ ಪ್ರಕಾಶನ : ಚ್ಯವನಾಶ್ರಮವರ್ಣನಂ : ಪುಟ ೬೯ : ೧೯೫೭.

21 ಪಂಪಭಾರತದ ನಿಘಂಟು : ೧೯೩೧ : ಪುಟ ೫೬.

ಇಲ್ಲವಾದುದರಿಂದ ಇದು ನಿಶ್ಚಯವಾಗಿಯೂ ಸಂಸ್ಕೃತದ ವಿಸ್ತರಿಸು ಪದದ ತದ್ಭವ ರೂಪವೆಂದೂ, ಬಿಚ್ಚಳಿಸು ಎಂಬ ಕ್ಷಳಯುಕ್ತವಾದುದೇ ಸರಿಯೆಂದು ನಿರ್ಧರಿಸಬಹುದು. ಪಂಪಭಾರತದ ೧೧—೪೩ ನೆಯ ಪದ್ಯ, ಮತ್ತು ಆದಿಪುರಾಣದ ೬—೯೪ನೆಯ ಪದ್ಯಗಳಲ್ಲಿ ಈ ಪದದ ಪ್ರಯೋಗ ಪ್ರಾಸಸ್ಥಾನದಲ್ಲಿದ್ದು, ಅಲ್ಲಿ 'ಳ'ಕಾರದ ಪ್ರಯೋಗವೇ ಸಿಗುವುದರಿಂದ ಈ ನಿರ್ಣಯಕ್ಕೆ ಬೆಂಬಲ ಬಂದಂತಾಗುತ್ತದೆ ಮತ್ತು ಹಿಂದೆಯೇ ಹೇಳಿರುವಂತೆ ಒಂದು ಪದದ ತಕ್ಕ ರೂಪವನ್ನು ಕಂಡುಹಿಡಿಯಲು ಆ ಪದದ ಪ್ರಾಸಸ್ಥಾನದ ಪ್ರಯೋಗವೇ ನಿರ್ಣಾಯಕ. ಅಲ್ಲದೆ ಆಚಾರ್ಯ ಶ್ರೀ ಡಿ. ಎಲ್. ನರಸಿಂಹಾಚಾರ್ಯರು ಸಂಪಾದಕರಾಗಿ ಸಶಾಸ್ತ್ರೀಯವೂ ವೈಜ್ಞಾನಿಕವೂ ಆಗಿ ಸಿದ್ಧಪಡಿಸಿರುವ ಕೇಶಿರಾಜನ ಶಬ್ದಮಣಿದರ್ಪಣದಲ್ಲಿ, 'ಬಿಚ್ಚಳಿಸು' ಎಂಬ ಳಕಾರಯುಕ್ತ ಪದವನ್ನೇ ಧಾತುಪ್ರಕರಣದಲ್ಲಿ[22] ಕೊಟ್ಟಿದ್ದಾರೆ. ಅವರ ವಡ್ಡಾರಾಧನೆ, ಸುಕುಮಾರಚರಿತೆಗಳಲ್ಲೂ ಸರಿಯಾದ ಪ್ರಯೋಗವನ್ನೇ ಉದಾಹರಿಸಿರುವುದನ್ನು (ಬಿಚ್ಚಳಿಸು) ಗುರುತಿಸಬಹುದು.

ಇನ್ನು ನಮಗೆ ಉಳಿಯುವ ಒಂದು ಅನುಮಾನವೆಂದರೆ ಪ್ರಾಕೃತದಿಂದ ಏನಾದರೂ ಈ ರೂಪಬಂದಿರಬಹುದೆ? ಎಂಬುದು. ಏಕೆಂದರೆ ಪ್ರಾಕೃತದ 'ಡ'ಕಾರ ಕನ್ನಡಕ್ಕೆ ಬಂದಾಗ 'ಟ'ಕಾರವಾಗುವುದುಂಟು, ಸಾಮಾನ್ಯವಾಗಿ. ಸಂಸ್ಕೃತದ ವಿಸ್ತಾರ, ವಿಸ್ತರಣ, ವಿಸ್ತಾರಣ, ವಿಸ್ತೃತ, ವಿಶಾಲ—ಎಂಬ ಪದಗಳು ಪ್ರಾಕೃತದಲ್ಲಿ ಕ್ರಮವಾಗಿ ವಿತ್ಥಾರ, ವಿತ್ಥರಣ, ವಿತ್ಥಾರಣ, ವಿತ್ಥರ, ವಿತ್ಥಡ ಮತ್ತು ವಿತ್ಥಯ ಎಂಬ ರೂಪಗಳನ್ನು ಹೊಂದುತ್ತವೆ.[23] ಇವುಗಳಲ್ಲಿ ವಿತ್ಥಡದಿಂದ ಏನಾದರೂ ಬಿಚ್ಚಟಿಸು ಎಂಬ ಪದ ಬಂದಿದ್ದರೆ ಆಗ 'ಡ'ಕ್ಕೆ ಬದಲಾಗಿ 'ಟ' ಬಂದಿರುತ್ತದೆ. ಈ ದೃಷ್ಟಿಯಿಂದ ಪರಿಶೀಲನೆಗೆ ಇನ್ನೂ ಅವಕಾಶವಿದೆಯೆಂಬುದನ್ನು ಮರೆಯಬಾರದು. ಆದರೂ ಇದುವರೆಗೆ ಕೊಟ್ಟ ಪ್ರಬಲವಾದ ಕಾರಣಗಳನ್ನೂ, ಅದಕ್ಕೆ ಪೋಷಕವಾಗಿ ಸಿಗುವ ಆಧಾರಗಳನ್ನೂ ಗಮನಿಸಿದಾಗ **ಬಿಚ್ಚಳಿಸು** ಎಂಬುದು ಸರಿಯಾದ ರೂಪವೆಂದೂ, ಅದಕ್ಕೆ ವಿಸ್ತರಿಸು, ಹುರಿದುಂಬಿಸು, ಧ್ವನಿಮಾಡು, ಹೊಗಳು, ಪ್ರಾರ್ಥಿಸು ಎಂಬ ಅರ್ಥವೆಂದೂ ಹೇಳಬಹುದು.

**ಹಂಪ ನಾಗರಾಜಯ್ಯ**

[22] ಶಬ್ದಮಣಿದರ್ಪಣ : (ಸಂ.) ಡಿ. ಎಲ್. ನರಸಿಂಹಚಾರ್ : ಪುಟ ೨೩೦ : ಪದಸಂಖ್ಯೆ ೭೯೯.

[23] ಪಾಇಅ ಸದ್ದಮಹಣ್ಣವೋ : A Comprehensive Prakrit—Hindi Dictionary Vol. III ; ಪುಟ ೫೭೮ ; ಪಂಡಿತ ಹರಗೋವಿಂದದಾಸ್, ಟಿ. ಶೇಠ್ : ೧೯೨೫.

# "ಮುನ್ನೀರು ಮುಂತಾಗಿ . . ."

'ಜೈಮಿನಿಭಾರತ'ದ ಸೀತಾಪರಿತ್ಯಾಗದ ಪ್ರಸಂಗದಲ್ಲಿ, ಲಕ್ಷ್ಮಣನು ಸೀತೆಯನ್ನು ಅಯೋಧ್ಯೆಯಿಂದ ಕರೆದುಕೊಂಡು ಹೋಗುತ್ತಿರುವಾಗ ದಾರಿಯಲ್ಲಿ ಗಂಗಾನದಿ ಸಿಕ್ಕುತ್ತದೆ. ಸೀತೆಯ ಕಣ್ಣಿಗೆ ಅದು ಹೇಗೆ ಕಾಣಿಸಿತೆಂಬುದನ್ನು ಲಕ್ಷ್ಮೀಶನು ಹೀಗೆ ವರ್ಣಿಸುತ್ತಾನೆ:

ಅನ್ನೆಗಂ ಜಾನಕಿಯ ಕಣ್ಗೆ ತೋಱಿತು ಮುಂದೆ
ನನ್ನುತರಘೂದ್ವಹನ ಕೀರ್ತಿಯೆನೆ ಮೂವಟ್ಟೆ
ಯನ್ನಡೆದು ಮುಕ್ಕಣ್ಣನಂ ಸಾರ್ದು ಮೂಜಗದ ಪಾಪಮಂ ಮುಱಿದು ಮುಕ್ಕಿ |
ಮುನ್ನೀರು ಮುಂತಾಗಿ ಮೂದೇವರೊಳಗಾದ
ಮುನ್ನುಳ್ಳ ಮೂವತ್ತುಮೂರ್ಕೋಟಿ ವಿಬುಧರಂ
ತನ್ನೊಳ್ ಮುಳುಗಿದರಣಕಿಪ ಪೆಂಪೊದವಿ ಪರಿವ ಬೆಳ್ಪೊನಲ್ ದಿವಿಜನದಿಯ || (೧೯.೪)

ಈ ದೇವನದಿಯ ಬೆಳ್ಳನೆ ಪ್ರವಾಹ ರಾಮನ ಕೀರ್ತಿಯಂತೆ ಕಾಣಿಸಿತಂತೆ. ರಾಮನ ಧ್ಯಾನವನ್ನೇ ಹೃದಯದ ತುಂಬ ತುಂಬಿಕೊಂಡಿದ್ದ ಪತಿಪರಾಯಣೆಯಾದ ಸೀತೆಗೆ ಎಲ್ಲೆಲ್ಲೂ ಅವನ ಕೀರ್ತಿಯ ಹೋಲಿಕೆಯೇ ಗೋಚರವಾದದ್ದು ಸೋಜಿಗವಲ್ಲ. ಅವನು ಆಕೆಯನ್ನು ಕಾಡಿಗೆ ಮರೆಮಾಜಿ ಅಟ್ಟಿ ತನ್ನ ಕೀರ್ತಿಗೆ ಕಳಂಕವನ್ನು ಹತ್ತಿಸಿಕೊಳ್ಳುವ ಸಂದರ್ಭದಲ್ಲೂ ಆ ಅರಿಯದ ಮುಗ್ಧೆಗೆ ರಾಮನ ಕೀರ್ತಿ ಗಂಗೆಯ ಜಲದಂತೆ ಶುಭ್ರವೆಂದೇ ತೋರಿತೆಂದು ಲಕ್ಷ್ಮೀಶನು ನಿರೂಪಿಸಿ ಈ ವೈಷಮ್ಯದ ಧ್ವನಿಯಿಂದ ಪದ್ಯದ ಸೊಬಗನ್ನು ಹೆಚ್ಚಿಸಿದ್ದಾನೆ. ಆದರೆ ಗಂಗಾನದಿಯ ಪರಿಶುದ್ಧತೆಯನ್ನು ವರ್ಣಿಸುವಲ್ಲಿ ಮಾತ್ರ ಮಮಮಕಾರಗಳ ಅನುಪ್ರಾಸಕ್ಕೆ ಮನಸೋತಿದ್ದಾನೆ. ಗಂಗೆ ಮೂರು ದಾರಿಗಳಲ್ಲಿ, ಎಂದರೆ ಸ್ವರ್ಗ ಮರ್ತ್ಯ ಪಾತಾಳಗಳಲ್ಲಿ, ಹರಿದವಳು—ತ್ರಿಪಥಗೆ; ಮುಕ್ಕಣ್ಣನ ನೆತ್ತಿಯನ್ನು ಮುಟ್ಟಿದವಳು; ಮೂರು ಲೋಕಗಳ ಪಾಪವನ್ನು ಧ್ವಂಸಮಾಡಿದವಳು; . . .; ತನ್ನಲ್ಲಿ ಮುಳುಗಿ ಸ್ನಾನಮಾಡಿದವರು ಮೂದೇವರನ್ನು, ಎಂದರೆ ತ್ರಿಮೂರ್ತಿಗಳನ್ನು, ಒಳಕೊಂಡ ಮೂವತ್ತುಮೂರುಕೋಟಿ ದೇವತೆಗಳೆಲ್ಲರನ್ನೂ ಅಣಕಿಸುವಂತೆ, ಎಂದರೆ ಸಮಸ್ತ ದೇವತೆಗಳಿಗಿಂತಲೂ ಹೆಚ್ಚಿನ ವಿಭವವನ್ನು ಪಡೆದು ಮೆರೆಯುವಂತೆ, ಮಾಡುವ ಮಹಿಮೆಯುಳ್ಳವಳು—ಹೀಗೆ ಗಂಗಾನದಿಯ ಪ್ರಶಸ್ತಿ ಈ ಪದ್ಯದಲ್ಲಿ ಬೆಳೆದಿದೆ.

ಈ ಪದ್ಯದ ಅಭಿಪ್ರಾಯ ಒಟ್ಟಿನಲ್ಲಿ ಸುಗಮವಾಗಿದ್ದರೂ "ಮುನ್ನೀರು ಮುಂತಾಗಿ" ಎಂಬ ಪದಸಮುಚ್ಚಯ ಮಾತ್ರ ಅರ್ಥಕಾರರನ್ನೂ ಅಧ್ಯಾಪಕರನ್ನೂ ಕ್ಲೇಶಪಡಿಸಿದೆ. "ಮುನ್ನೀರು" ಎಂದರೆ ಧ್ರುವಜಲ, ನದೀಜಲ, ಮೇಘಜಲ ಎಂಬ ಮೂರು ಜಲಗಳನ್ನುಳ್ಳ ಸಮುದ್ರ. "ಸಮುದ್ರ ಮುಂತಾಗಿ" ಎಂದರೆ ಅರ್ಥವೇನು? ಮುಂತಾದ=ಮೊದಲಾದ ಎಂಬುದರ ಸಾಮ್ಯದಿಂದ "ಸಮುದ್ರ ಮೊದಲಾಗಿ" ಎಂದು ಅರ್ಥಮಾಡಿದರೆ ಅನ್ವಯವೇ ಆಗುವುದಿಲ್ಲ. ದೇವಗಂಗೆಯ ಪ್ರವಾಹ ಸಮುದ್ರವನ್ನು ಪ್ರವೇಶಿಸುವುದು ಕೊನೆಯಲ್ಲಿ, ಮೊದಲಲ್ಲಿ ಅಲ್ಲ. "ಮುಂತಾಗಿ" ಎಂಬುದನ್ನು "ಮುನ್ + ತಾಗಿ" (=ಮೊದಲು ಸ್ಪರ್ಶಿಸಿ, ಸೇರಿ) ಎಂದು ಬಿಡಿಸಬೇಕೆಂಬ ಒಂದು ಸೂಚನೆಯುಂಟು. ಮೇಲಿನ ಆಕ್ಷೇಪಣೆ ಇದಕ್ಕೂ ಯಥೋಚಿತವಾಗಿ ಸಲ್ಲುತ್ತದೆ; ಅಲ್ಲದೆ ವ್ಯಾಕರಣದ ಕ್ಲೇಶವೂ ಉಂಟು. ಈ ತೊಡಕುಗಳನ್ನು ಪರಿಹರಿಸಲೆಂದು, ಅನೇಕ ವರ್ಷಗಳ ಹಿಂದೆ, "ಮುನ್ನೀರುಮಂ ತಾಗಿ" (=ಮುನ್ನೀರನ್ನೂ ಮುಟ್ಟಿ, ಸೇರಿ) ಎಂದು ಪಾಠವನ್ನು ತಾತ್ಕಾಲಿಕವಾಗಿ ತಿದ್ದಿಕೊಂಡು ಹೇಗೋ ಪಾಠ ಹೇಳಿದ

ಅನುಭವ ಪ್ರಕೃತ ಲೇಖಕನಿಗೆ ಉಂಟು.[1] ಆದರೆ ಕವಿಯ ಆಶಯ ಇದೇ ಸರಿ ಎಂಬ ನಿಶ್ಚಯ ಒದಗಲಿಲ್ಲ ; ಒಳಮನಸ್ಸಿಗೆ ಸಮಾಧಾನವಾಗಲಿಲ್ಲ.

ಕೆಲವು ವರ್ಷಗಳ ಹಿಂದೆ ಮಾನ್ಯ ಮಿತ್ರರೊಬ್ಬರು (ಶ್ರೀಮಾನ್ ಗೊರೂರು ರಾಮಸ್ವಾಮಿ ಅಯ್ಯಂಗಾರರು) ಯಾವುದೋ ಘಟನೆಯನ್ನು ವರ್ಣಿಸುತ್ತಾ "ನಾನು ಆ ಬೆಳಗ್ಗೆ ನಮ್ಮೂರಿನಿಂದ ಹಾಸನ ಮುಂದಾಗಿ ಹೊರಟೆ" ಎಂದರು. ಕೇಳಿ ನನ್ನ ಕಿವಿ ನೆಟ್ಟಗಾಯಿತು. ಇಲ್ಲಿ, "ಹಾಸನ ಮುಂದಾಗಿ" ಎಂದರೆ "ಹಾಸನವನ್ನು ಮುಂದಾಗಿ ಮಾಡಿಕೊಂಡು, ಹಾಸನಕ್ಕೆ ಅಭಿಮುಖವಾಗಿ, ಹಾಸನದ ಕಡೆಗೆ" ಎಂದು ಅರ್ಥ. ಪ್ರಯೋಗಕಾರರು ನನ್ನ ಮುಂದೆಯೇ ಇದ್ದ ಕಾರಣ, ಅವರ ಮಾತಿನ ಅರ್ಥವೇನೆಂಬುದನ್ನು ಪ್ರತ್ಯಕ್ಷವಾಗಿಯೇ, ಯಾವ ಊಹಾಪೋಹಗಳನ್ನೂ ಅವಲಂಬಿಸದೆಯೇ, ತಿಳಿದುಕೊಳ್ಳಲು ಸಾಧ್ಯವಾಯಿತು. "ಹಾಸನ ಮುಂದಾಗಿ" ಎಂಬುದಕ್ಕೂ "ಮುನ್ನೀರು ಮುಂತಾಗಿ" ಎಂಬುದಕ್ಕೂ ಅರ್ಥ ಸಾಮ್ಯವಿರುವುದು ಸ್ಪಷ್ಟವಾಯಿತು. "ಮುನ್ನೀರು ಮುಂತಾಗಿ . . . ಪರಿವ" ಎಂದರೆ "ಸಮುದ್ರಾಭಿಮುಖವಾಗಿ . . . ಹರಿಯುವ" ಎಂಬ ಅರ್ಥ ಹೊಳೆದು ಲಕ್ಷ್ಮೀಶನ ಪ್ರಯೋಗ ಸುಸಮಂಜಸವಾಯಿತು. ಲಕ್ಷ್ಮೀಶನು "ಮುಂತಾಗಿ" ಎಂಬುದರ ಬದಲು "ಮುಂದಾಗಿ" ಎಂದು ಬರೆದಿದ್ದರೆ ಈ ಕ್ಲೇಶ ಇನ್ನಷ್ಟು ಸುಲಭವಾಗಿ ಪರಿಹಾರವಾಗುತ್ತಿತ್ತೋ ಏನೋ ಎಂದೂ ತೋರದಿರಲಿಲ್ಲ.

ಆದರೆ ಇಂಥ ಸಂದರ್ಭಗಳಲ್ಲಿ "ಮುಂತಾಗಿ," "ಮುಂದಾಗಿ" ಎಂಬ ಎರಡಕ್ಕೂ ರೂಢಿಯುಂಟು ಎಂಬುದು ಈಚೆಗೆ ಕಣ್ಣಿಗೆ ಬಿದ್ದ ಕೆಲವು ಶಾಸನಗಳ ಪ್ರಯೋಗಗಳಿಂದ ದೃಢಪಟ್ಟಿದೆ. ಸಾಮಾನ್ಯವಾಗಿ ಜಮೀನುಗಳ ಎಲ್ಲೆಕಟ್ಟನ್ನು ("ಚತುಃಸೀಮೆ"ಯನ್ನು) ನಿರ್ದೇಶಿಸುವಾಗ ಇವು ಅಲ್ಲಲ್ಲಿ ಕಾಣಿಸುತ್ತವೆ.

**ಮುಂತಾಗಿ—**

೧. "ಹಿರಿಯ ಕೆಱೆಯ ಪಡುವಣ ಕೋಡಿಯ ಮಡಿಕಟ್ಟಿನ ಏರಿಯ ಕೆಳಗೆ ಕೋಡಿಯ ಹತ್ತಿರೆ ಬಡಗ ಮುಂತಾಗಿ ಹೋ[ೀ]ದ ಭಂಡೀ ದಾರಿಯ ಹಿರಿಯ ಓಣಿಯಿಂದವುಂ ಮೂಡಲು ಆ ಕೋಡಿಯ ಮಡಿಕಟ್ಟಿನ ಏರಿಯಿಂದವುಂ ಪಡುವಲು ಪೂರ್ವ್ವದಲು ಪಡುವ ಮುಂತಾಗಿ ಹೋದ ಏರಿಯಿಂದವುಂ ತೆಂಕಲು ಪಡುವ ಮುಂತಾಗಿ ಹೋದ ಕೋಡಿಯಿಂದವುಂ ಬಡಗಲು ಇಂತೀ ಚತುಸ್ಸೀಮೆಯೊಳಗುಳ್ಳ ಕ್ಷೇತ್ರವನೂ"

(ಎಪಿಗ್ರಾಫಿಯ ಕರ್ನಾಟಿಕ, XII, ಚಿಕ್ಕನಾಯಕನಹಳ್ಳಿ,
2, ಪಂಕ್ತಿ 41-43 ; ಕಾಲ ಕ್ರಿ.ಶ. 1261)

೨. "ಕೋಡಿಯ ಹಿರಿಯ ಹಳ್ಳದಿಂ ಮೂಡಲು ಹಾಲಗೊಂಡಿಯಿಂ ಬಡಗಲು ಗೂಳ ಸಮುದ್ರದ ಹಿಂದೆ ಪಡುವ ಮುಂತಾಗಿ ಹೋದ ಚಂಟರಿವಳ್ಳದ ಓಣಿಯಂ ತೆಂಕಲು"

(ಅದೇ ಶಾಸನ, ಪಂಕ್ತಿ 57-58)

---

1 ಮೈಸೂರು ಓರಿಯೆಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನ 'ಜೈಮಿನಿಭಾರತ'ದ ಹಸ್ತಲಿಖಿತ ಪ್ರತಿಗಳಲ್ಲಿ, "ಮು(ಂ)ನೀರು ಮುಂತಾಗಿ" ಎಂದು K 25, K 84/1, K 224/1, K 294, K A 225 ಇವುಗಳಲ್ಲಿಯೂ, "ಮುಂನೀರು ಮುಂತ್ತಾಗಿ" ಎಂದು K A 224 ರಲ್ಲಿಯೂ, "ಮು(ಂ)ನೀರ ಮುಂತಾಗಿ" ಎಂದು K 219, K 272, K B 293 ಇವುಗಳಲ್ಲಿಯೂ, "ಮುಂನ್ನೂರು ಮುಂತ್ತಾದ" ಎಂದು K 264 ರಲ್ಲಿಯೂ ಪಾಠಗಳಿವೆ. "ಮುನ್ನೀರುಮಂ ತಾಗಿ" ಎಂದು ಯಾವ ಹಸ್ತಲಿಖಿತ ಪ್ರತಿಯಲ್ಲೂ ಕಾಣಬರುವುದಿಲ್ಲ.

"ಮುನ್ನೀರುಮಂ ತಾಗಿ" ಎಂಬ ಪಾಠವನ್ನು ಅಂಗೀಕರಿಸಿ, ಅದಕ್ಕೆ "ಸಮುದ್ರವನ್ನು ಸೇರಿ" ಎಂದು ಅರ್ಥಮಾಡಿರುವುದು ಪಂಡಿತ ನಂಜುಂಡಶಾಸ್ತ್ರಿಗಳ ಟೀಕೆಯಲ್ಲಿ ಗೋಚರಿಸುತ್ತದೆ. (ಓ. ರಿ. ಇ. K. 2668 ; 1932ನೆಯ ಇಸವಿಯ ಮುದ್ರಣ, ಪು. ೪೮೧).

ಓ. ರಿ. ಇ. ಯಲ್ಲಿರುವ 'ಜೈಮಿನಿಭಾರತ'ದ ಹಸ್ತಲಿಖಿತಪ್ರತಿ ಮುದ್ರಿತಪ್ರತಿಗಳಿಂದ ಈ ಪಾಠಗಳನ್ನು ಗುರುತಿಸಿಕೊಟ್ಟು ಶ್ರೀಮಾನ್ ಬಿ. ಎಸ್. ಸಣ್ಣಯ್ಯನವರು ಉಪಕಾರಮಾಡಿದ್ದಾರೆ.

೩. "ಆ ಹಳ್ಳವನ್ನು ದಾಟ ರಂಗಸಮುದ್ರದ ಬಡಗಣ ಕೋಡಿಯ ಹಳ್ಳ ಮೇರೆಯಾಗಿ ಬಡಗು ಮುಂತಾಗಿ ನಡದು ನಾಗನಾಗನ ಕಟ್ಟೆ ಮೇರೆಯಾಗಿ ಹಂದೀಯ ಗುಂಡಿಯ ಪಡುವಣ ತೆವರನು ಬಲದಲಿ ಹಾಯಿಕಿಕೊಂಡು ತೆಂಕ ಮುಂತಾಗಿ ತಿರಿಗಿ ನಾಗನಾಗನ ಕಟ್ಟೆಯಂನೂ ಬಲದಲಿ ಹಾಯಿಕಿಕೊಂಡು . . . ಆ ಕಾಲುವೆ ಮೇರೆಯಾಗಿ ಮೂಡ ಮುಂತಾಗಿ ಆ ಕಾಲುವೆಯಂ ಬಳಿಯಾಗಿ ಯಿಶಾನ್ಯಾಭಿಮುಖವಾಗಿ ಆ ಕಾಲುವೆ ಮೇರೆಯಾಗಿ ನಡದು ಲೋಕಪಾವನಿಯಂಬ ಸಾಗರವ ಕೂಡಿತ್ತು . . . ಬಡಗ ಮುಂತಾಗಿ . . . ಅಲ್ಲಿಂದ ಬಡಗ ಮುಖವಾಗಿ ನಡದು . . . ತೆಂಕಮುಖವಾಗಿ ಆ ಹೆದ್ದಾರಿಯೇ ಮೇರೆಯಾಗಿ ನಡದು"

(ಎಪಿ. ಕ., III, ಶ್ರೀರಂಗಪಟ್ಟಣ, 133, ಪಂಕ್ತಿ 43-64 ; ಕಾಲ ಕ್ರಿ. ಶ. 1458)

## ಮುಂದಾಗಿ :

೧. "ತೆಂಕಲು ಬೆಂಡೆಯ ಕೆಱೆಯ ಕೋಡಿಯಿಂ ಪಡುವ ಮುಂದಾಗಿ ಪರಿದ ಜಲಪ್ರವಾಹವೇ ಮೇರೆ"

(ಎಪಿ. ಕ., VII, ಶಿಕಾರಿಪುರ, 118, ಪಂಕ್ತಿ 18-19; ಕಾಲ ಕ್ರಿ. ಶ. 1054)

೨. "ದಕ್ಷಿಣ ದಿಶಾಭಾಗಕ್ಕೆ ಅಲ್ಲಿಂದ ಪಶ್ಚಿಮಾಭಿಮುಖವಾಗಿ ಬನ್ದ ನೆತ್ತಿದೊಱೆ ಮೇರೆಯಾಗಿ . . . ಕಡಪಿನ ಕೂಂಟೆಯಿಂ ಪಡುವ ಮುಂದಾಗಿ ಬನ್ದು ಇಲಿಯಿನ್ದೆಯ ಮರನುಂ ಪುತ್ತುಂ ಮೇರೆ"

(ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್, IX—1, 119, ಪಂಕ್ತಿ 44-48 ; ಕಾಲ ಕ್ರಿ. ಶ. 1057)

ಈ ಪ್ರಯೋಗಗಳಲ್ಲಿರುವ "ಬಡಗ ಮುಂತಾಗಿ ಹೋದ," "ಪಡುವ ಮುಂತಾಗಿ ಹೋದ," "ಬಡಗ ಮುಂತಾಗಿ ನಡದು," "ತೆಂಕ ಮುಂತಾಗಿ ತಿರಿಗಿ," "ಪಡುವ ಮುಂದಾಗಿ ಪರಿದ," "ಪಡುವ ಮುಂದಾಗಿ ಬನ್ದು"—ಈ ಮೊದಲಾದ ಉಕ್ತಿಗಳಲ್ಲಿ "ಮುಂತಾಗಿ" "ಮುಂದಾಗಿ" ಎಂಬ ಮಾತುಗಳಿಗೆ "ಎದುರಾಗಿ, ಅಭಿಮುಖವಾಗಿ" ಎಂಬುದೇ ಅರ್ಥವೆಂಬುದು ಸ್ಪಷ್ಟ. ಶ್ರೀರಂಗಪಟ್ಟಣ 133 ರಲ್ಲಿ "ತೆಂಕ ಮುಂತಾಗಿ" ಮೊದಲಾದವುಗಳ ಜೊತೆಗೆ "ಯಿ[ಈ]ಶಾನ್ಯಾಭಿಮುಖವಾಗಿ," "ಬಡಗ ಮುಖವಾಗಿ," "ತೆಂಕ ಮುಖವಾಗಿ" ಎಂಬ ಮಾತುಗಳೂ ಬಂದು ಈ ಹೇಳಿಕೆಯನ್ನು ದೃಢಪಡಿಸುತ್ತವೆ. ಶಿಕಾರಿಪುರ 118 ನೆಯ ಶಾಸನದ "ಪಡುವ ಮುಂದಾಗಿ ಹರಿದ ಜಲಪ್ರವಾಹವೇ ಮೇರೆ" ಎಂಬುದಂತೂ 'ಜೈಮಿನಿ ಭಾರತ'ದ "ಮುನ್ನೀರು ಮುಂತಾಗಿ . . . ಪರಿವ ಬೆಳ್ವೊನಲ್" ಎಂಬುದಕ್ಕೆ ತುಂಬ ಸಂವಾದಿಯಾಗಿರುವುದನ್ನು ಇಲ್ಲಿ ಲಕ್ಷಿಸಬಹುದು.

"ತೆಂಕ ಮುಂತಾಗಿ ತಿರಿಗಿ," "ಪಡುವ ಮುಂದಾಗಿ ಬನ್ದು"—ಇಂಥ ಪ್ರಯೋಗಗಳು ಮಾತ್ರವಲ್ಲದೆ, "ಅಲ್ಲಿಂದ ತೆಂಕಲಾಗಿ ನಡದು," "ಅಲ್ಲಿಂದ ಪಡುವಲಾಗಿ ನಡದು," "ಅಲ್ಲಿಂದ ಪಡುವಲು ನಡದು (ಎಪಿ. ಕ., IV, ಗುಂಡ್ಲುಪೇಟೆ, 11, ಪಂಕ್ತಿ 14-20 ; ಕಾಲ ಕ್ರಿ.ಶ. 1497); "ಅಲ್ಲಿಂ ಪಡುವಲು ನಡದು," "ಅಲ್ಲಿಂ ಪಡುವ ನಡದು" (ಎಪಿ. ಕ., IV, ಗುಂಡ್ಲುಪೇಟೆ; 69, ಪಂಕ್ತಿ 44 ; ಕಾಲ ಕ್ರಿ.ಶ. 1321); "ಅಲಿಂದಂ ತೆಂಕ ನಡದು" (ಎಪಿ. ಕ., XII, ತಿಪಟೂರು 139, ಪಂಕ್ತಿ 50 ; ಕಾಲ ಕ್ರಿ.ಶ. ? )—ಈ ಮೊದಲಾದ ಪ್ರಯೋಗಗಳೂ ದೊರೆಯುತ್ತವೆ. ಇಲ್ಲೆಲ್ಲಾ, ತೆಂಕಲಾಗಿ=ತೆಂಕ ಮುಂತಾಗಿ=ತೆಂಕ ಮುಂದಾಗಿ=ತೆಂಕ ಮುಖವಾಗಿ=ದಕ್ಷಿಣಾಭಿಮುಖವಾಗಿ ಎಂದೇ ಅರ್ಥ. "ತೆಂಕ ನಡದು," "ಪಡುವಲು ನಡದು" ಈ ಮೊದಲಾದ ಕಡೆಗಳಲ್ಲಿ—ಆಗಿ ಎಂಬುದು ಕೂಡ ಸೇರಿಲ್ಲದೆ ದಿಗ್ವಾಚಕ ಶಬ್ದವಷ್ಟೇ ಪ್ರಯೋಗವಾಗಿದೆ.

ಇಂದಿನ ವ್ಯಾವಹಾರಿಕ ಭಾಷೆಯಲ್ಲಿ "ಮುಂತಾಗಿ" ಸಮೇತವಾದ ಸುಡಿಗಟ್ಟು ಉಳಿದಿರುವ ಸಂಭವ ಕಡಮೆ. "ಮುಂದಾಗಿ" ಎಂಬುದು ಹಾಸನದ ಸಮೀಪದಲ್ಲಿ ಇನ್ನೂ ರೂಢಿಯಲ್ಲಿದೆ ಎಂಬುದು ಮೇಲಿನ ನಿರೂಪಣೆಯಿಂದಲೇ ಗೊತ್ತಾಗುತ್ತದೆ. ಅದು ಕನ್ನಡ ನಾಡಿನ

ಬೇರೆ ಯಾವ ಪ್ರದೇಶಗಳಲ್ಲಿ ಇನ್ನೂ ಕೇಳಬರುತ್ತದೆ? ಹಿಂದಿನ ಕಾಲದಲ್ಲಿ "ಮುಂತಾಗಿ" "ಮುಂದಾಗಿ"ಗಳು ಅಭಿಮುಖಾರ್ಥದಲ್ಲಿ ದೇಶದ ಹಲವು ಕಡೆಗಳಲ್ಲಿ ಪ್ರಚುರವಾಗಿದ್ದುವು ಎಂಬುದಕ್ಕೆ ಶಾಸನಗಳು ಸಾಕ್ಷಿ. ಈಗ ಆ ವ್ಯಾಪ್ತಿ ಎಷ್ಟರಮಟ್ಟಿಗೆ ಸಂಕುಚಿತವಾಗಿದೆ? "ಮುಂದಾಗಿ" ಎಂಬುದರ ಇಂದಿನ ಸೀಮಾರೇಖೆ (isogloss) ಎಲ್ಲೆಲ್ಲಿ ಹಾದುಬರುತ್ತದೆ? ಇದರ ಅನ್ವೇಷಣೆ ಸ್ವಾರಸ್ಯವುಳ್ಳ ಸಂಗತಿ.

ತೀ. ನಂ. ಶ್ರೀಕಂಠಯ್ಯ

# ಮಹಾದೇವ—ರವಿನರ್ತಕ

೧

ಮುಮ್ಮಡಿ ಕೃಷ್ಣರಾಜವೊಡೆಯರ ಆಸ್ಥಾನಕವಿಯಾಗಿದ್ದ ಕೆಂಪುನಾರಾಯಣನು ರಚಿಸಿರುವ 'ಮುದ್ರಾಮಂಜೂಷ'ವೆಂಬ ಗದ್ಯಗ್ರಂಥ ಹಲವು ಕಾರಣಗಳಿಂದ ಕನ್ನಡ ಸಾಹಿತ್ಯದಲ್ಲಿ ಒಂದು ಅಪೂರ್ವಗ್ರಂಥ. ಕನ್ನಡ ಸಾಹಿತ್ಯದಲ್ಲಿ ಕಿಕ್ಕಿರಿದು ತುಂಬಿರುವ ಧಾರ್ಮಿಕ ಗ್ರಂಥಗಳನ್ನು ಓದಿ ಬೇಸರಗೊಂಡಿರುವವರಿಗೆ ಈ ಗ್ರಂಥದ ಪಠಣದಿಂದ ಮನಸ್ಸಿಗೆ ಉಲ್ಲಾಸವುಂಟಾಗುತ್ತದೆ. ಬ್ರಾಹ್ಮಣೋತ್ತಮನಾದ ಚಾಣಕ್ಯನು ನಂದರನ್ನು ಕೊಲ್ಲಿಸಿ, ಮೌರ್ಯಪುತ್ರನಾದ ಚಂದ್ರಗುಪ್ತನನ್ನು ಪಾಟಲೀಪುತ್ರದ ಸಿಂಹಾಸನದ ಮೇಲೆ ಸ್ಥಾಪಿಸಿದ ವಿಷಯವನ್ನೇ ವಸ್ತುವಾಗಿ ಉಳ್ಳ ಈ ಕೃತಿಯಲ್ಲಿ ಶೃಂಗಾರದ ವಾಸನೆಯೇ ಇಲ್ಲ. ಇಂಗ್ಲಿಷ್ ಸಾಹಿತ್ಯದ ಪ್ರಭಾವ ನಮ್ಮ ಸಾಹಿತ್ಯಕ್ಕೆ ತಟ್ಟದಿದ್ದ ಕಾಲದಲ್ಲಿ, ಕವಿ ಕಾದಂಬರಿಯಂತೆ ಆಕರ್ಷಕವಾದ ಒಂದು ಗದ್ಯಕಥೆಯನ್ನು ರಚಿಸಿ ಕನ್ನಡಿಗರಿಗೆ ಕಾಣಿಕೆಯಾಗಿ ಅರ್ಪಿಸಿದ್ದಾನೆ. ಅಲ್ಲದೆ ಹೊಸಗನ್ನಡ ಗದ್ಯದ ಹೊಳಹು ಈ ಕೃತಿಯಲ್ಲೇ ಕಾಣಿಸುತ್ತದೆ.

ಈ ಸೊಗಸಾದ ಗದ್ಯಕೃತಿಗೆ ಮೂಲವನ್ನು ಕವಿ ಸಂಸ್ಕೃತಭಾಷೆಯಲ್ಲಿ ರಚಿತವಾಗಿರುವ ವಿಶಾಖದತ್ತನ 'ಮುದ್ರಾರಾಕ್ಷಸ'ವೆಂಬ ನಾಟಕದಲ್ಲಿ ಕಂಡುಕೊಂಡಿದ್ದಾನೆ. ನಂದರ ವಧೆಯಾದ ಮೇಲೆ ನಾಟಕ ಮೊದಲಾಗುತ್ತದೆ. ಕೆಂಪುನಾರಾಯಣ ನಾಟಕದ ಈ ಭಾಗಕ್ಕೆ ಒಂದೆರಡು ಹೊಸ ವಿಷಯಗಳನ್ನು ಸೇರಿಸಿ, ಇದನ್ನು ರಮ್ಯೋಜ್ವಲವಾದ ಗದ್ಯದಲ್ಲಿ ಅನುವಾದ ಮಾಡಿದ್ದಾನೆ. ಮುದ್ರಾಮಂಜೂಷದಲ್ಲಿ ನಾಟಕಕ್ಕೆ ಋಣಿಯಾದ ಭಾಗ ಮೂರರಲ್ಲೊಂದು ಭಾಗ ಮಾತ್ರ. ನಾಟಕದಲ್ಲಿ ನಮ್ಮ ಗದ್ಯಕೃತಿಯ ಪೂರ್ವಭಾಗಕ್ಕೆ ಅಲ್ಲಲ್ಲೆ ಒಂದೆರಡು ಸೂಚನೆಗಳು ದೊರಕಿದರೂ, ಕಥೆಯ ಪೂರ್ವಭಾಗವನ್ನು ಬೆಳಸುವುದಕ್ಕೆ ಅನುಕೂಲವಾದಂತಹ ದೊಡ್ಡ ಸೂಚನೆಗಳೇನಲ್ಲ. ಹಾಗಾದರೆ ಕಥೆಯ ಉಳಿದ ಭಾಗಕ್ಕೆ ಕವಿಗೆ ವಸ್ತು ಎಲ್ಲಿ ದೊರಕಿತು ಎಂಬ ಪ್ರಶ್ನೆ ಏಳುತ್ತದೆ. ಈ ವಿಷಯದಲ್ಲಿ ನಾಟಕವನ್ನೂ ಹೆಸರಿಸದೆ, ಪುರಾಣಗಳನ್ನು ಮಾತ್ರ ಹೇಳಿ ಕೆಂಪುನಾರಾಯಣ ಮೌನ ತಾಳಿದ್ದಾನೆ. ಆದರೆ ಈ ವಿಷಯವಾಗಿ ಎಲ್ಲ ಪುರಾಣಗಳನ್ನೂ ಶೋಧಿಸಿದರೆ ದೊರಕುವ ಸಾಮಗ್ರಿ ಎಷ್ಟು? ತುಂಬ ಸ್ವಲ್ಪ. ಆದಕಾರಣ ನಮ್ಮ ಮನಸ್ಸಿನಲ್ಲಿ ಏಳುವ ಕುತೂಹಲವನ್ನು ತಣಿಸಲು, ಬೇರೆ ಬೇರೆಯ ಮೂಲಗಳನ್ನು ಹುಡುಕಬೇಕಾಗುತ್ತದೆ. ಈ ಕುತೂಹಲವನ್ನು ತಣಿಸುವುದರಲ್ಲಿ ಕೇರಳ ದೇಶದ ಕವಿಗಳಾದ ಮಹಾದೇವ ರವಿನರ್ತಕರ ಚಿಕ್ಕ ಸಂಸ್ಕೃತಕೃತಿಗಳು--ಒಂದು ಗದ್ಯ; ಒಂದು ಪದ್ಯ—ಈ ವಿಷಯದ ಮೇಲೆ ಹೊಸ ಬೆಳಕನ್ನು ಬೀರುತ್ತವೆ. ಈ ಕೃತಿಗಳ ವಿಚಾರವಾಗಿ ಈ ಪ್ರಬಂಧದಲ್ಲಿ ಒಂದೆರಡು ಮಾತುಗಳನ್ನು ಹೇಳಲು ಯತ್ನಿಸಿದೆ.

೨

ಕಾಲಕ್ರಮದಲ್ಲಿ ಮಹಾದೇವನ ಗದ್ಯ ಕೃತಿ ಮೊದಲು ಬರುತ್ತದೆ. ಈ ಚಿಕ್ಕ ಗ್ರಂಥ ಗದ್ಯದಲ್ಲೇ ರಚಿತವಾಗಿದ್ದರೂ, ಹನ್ನೊಂದು ಪದ್ಯಗಳನ್ನು ಒಳಗೊಂಡಿದೆ. ಈ ಹನ್ನೊಂದು ಪದ್ಯಗಳಲ್ಲಿ ಹತ್ತನ್ನು ಕವಿ ಮುದ್ರಾರಾಕ್ಷಸ ನಾಟಕದಿಂದ ತೆಗೆದುಕೊಂಡಿದ್ದಾನೆ. ಈ ಗ್ರಂಥದ ಹೆಸರು 'ಮುದ್ರಾರಾಕ್ಷಸನಾಟಕಕಥಾ' ಎಂದಿದ್ದರೂ, ಇದರಲ್ಲಿ ನಾಟಕದ ಪೂರ್ವಕಥೆಯೂ ಬರುತ್ತದೆ. ಕಥೆ ಸಾಂಪ್ರದಾಯಕವಾದ ರೀತಿಯಲ್ಲಿ, ದೇವತಾಸ್ತುತಿಯಿಂದ ಮೊದಲಾಗದೆ, 'ಪಾಟಲೀಪುರಂ ನಾಮ ಕಾಚನ ರಾಜಧಾನೀ ವರ್ತತೇ' ಎಂದು ನೇರವಾಗಿ ಮೊದಲಾಗುತ್ತದೆ. 'ರಾಕ್ಷಸೋಽಪಿ

ಸ್ವಕಲತ್ರಪುತ್ರಾದಿಭಿಸ್ಸಮೇತಸ್ಸಾಚಿವ್ಯಧುರಮುದ್ವಹನ್ ರಾಜ್ಞ ಉತ್ತರೋತ್ತರಂ ಹಿತಮನ್ವಿಷ್ಯನ್ ಸುಖಮಾಸ್ತ| ರಾಜಾ ಚಂದ್ರಗುಪ್ತೋಽಪಿ ಸಾರ್ವಭೌಮಸ್ಸನ್ ಚತುಸ್ಸಾಗರೀಮೇಖಲಾಂ ವಸುಂಧರಾಮಪಾಲಯದಿತಿ ಸರ್ವಂ ಶಿವಮ್ |' ಎಂದು ಮುಕ್ತಾಯವಾಗುತ್ತದೆ. ಕೃತಿಯ ಕೊನೆಯಲ್ಲಿ ಕವಿಯ ವಿಷಯವಾದ ಈ ಪದ್ಯವಿದೆ—

> ಶ್ರೀಮದ್ವತ್ಸಕುಲಾಂಬುರಾಶಿಶಶಿಭಿರ್ಜೀರ್ವೇನ ತುಲ್ಯೈರ್ಧಿಯಾ
> ಕಾವ್ಯಾಲಂಕೃತಿತಂತ್ರಷಟ್ಕಚತುರೈಃ ಖ್ಯಾತೈಃ ಕ್ಷಮಾಮಂಡಲೇ|
> ನೀತೇರ್ಬೋಧಯಿತಾ ಕ್ಷಮಾಸುರಮಹಾದೇವಾಖ್ಯತೀರ್ಥೈಃ ಕೃತೋ
> ಮುದ್ರಾರಾಕ್ಷಸನಾಟಕೋದಿತಕಥಾಭಾಗೋಽಗಮತ್ ಪೂರ್ಣತಾಮ್ ||

ಮಹಾದೇವನ ಜೀವನದ ವಿಷಯವಾಗಿ ಹೆಚ್ಚು ವಿವರಗಳು ತಿಳಿದುಬಂದಿಲ್ಲ. ಅವನು ಶ್ರೀವತ್ಸಗೋತ್ರದ ಬ್ರಾಹ್ಮಣ; ಹೆಸರು ಮಹಾದೇವತೀರ್ಥ; ಸಾಹಿತ್ಯವೇದಾಂತಗಳಲ್ಲಿ ವಿದ್ವಾಂಸ. ಬಹುಶಃ ಈತನು ತಂಜಾವೂರುದೊರೆಯ ಆಶ್ರಿತನಾಗಿದ್ದಿರಬೇಕು. 'ತೀರ್ಥ ಎಂಬುದರ ಅರ್ಥವೇನೆಂಬುದು ಸರಿಯಾಗಿ ತಿಳಿದುಬರುವುದಿಲ್ಲ. ಗ್ರಂಥಕರ್ತೃ ಸಂನ್ಯಾಸಿಯಾಗಿದ್ದನೆಂದಿಟ್ಟುಕೊಂಡರೆ, ಸಂನ್ಯಾಸಿಗಳು ತಮ್ಮ ಪೂರ್ವಾಶ್ರಮದ ವಿವರಗಳನ್ನು ತಿಳಿಸುವುದಿಲ್ಲ—ಗೋತ್ರದಂತೆ. ಬಹುಶಃ ತೀರ್ಥ ಎಂಬ ಪದ ವಂಶಸೂಚಕವಾಗಿರಬಹುದು; ಇಲ್ಲವೆ ಗೌರವವಾಚಕವಾಗಿರಬಹುದು.' ಇದಕ್ಕಿಂತ ಮಿಂಚಿದ ವಿವರಗಳು ಕವಿಯ ವಿಷಯವಾಗಿ ನಮಗೆ ತಿಳಿದುಬಾರವು. ಕವಿಯ ಕಾಲ ಸು. ಕ್ರಿ. ಶ. 1600.

ಕಾವ್ಯಾಲಂಕಾರಗಳಲ್ಲಿ ತಾನು ಚತುರನೆಂದು ಕವಿ ಹೇಳಿಕೊಂಡಿದ್ದಾನಷ್ಟೆ. ನಿರಾಭರಣ ಸುಂದರಿಯಂತಿರುವ ಅವನ ಗದ್ಯವನ್ನು ನೋಡಿದಾಗ, ಪಂಡಿತನಾದವನು ಈ ರೀತಿ ಗದ್ಯವನ್ನು ಬರೆಯುವುದು ಸಾಧ್ಯವೇ ಎಂದು ಸೋಜಿಗವಾಗುತ್ತದೆ. ಪಾಂಡಿತ್ಯರಹಿತವಾದ ಅವನ ಗದ್ಯ ವಾಚಕರ ದೃಷ್ಟಿಯಿಂದ ಒಂದು ದೊಡ್ಡಲಾಭ. ಕಥನಕ್ಕೆ ಸರಳವಾದ, ಹೆಚ್ಚು ಸಮಾಸರಹಿತವಾದ ಗದ್ಯವೇ ಸೂಕ್ತ. ಮಹಾದೇವನ ಗದ್ಯಶೈಲಿಗೆ ಲಕ್ಷ್ಯವಾಗಿ ಅವನ ಗ್ರಂಥದಿಂದ ಕೆಳಗೆ ಒಂದೆರಡು ವಾಕ್ಯಗಳನ್ನು ಎತ್ತಿಕೊಟ್ಟಿದೆ:

> 'ಕ್ರಮೇಣ ತೇಷಾಂ ದಶಾನಾಮಪಿ ಪುತ್ರಾಣಾಂ ವಿವಾಹದೀಂಶ್ಚಕಾರ| ಅನಂತರಂ ಮುರಾಪುತ್ರಸ್ಯ ಶತಂ ಪುತ್ರಾಃ ಪಿತೃತುಲ್ಯಾ ಅಜಾಯಂತ| ತೇಷು ಶತತಮಶ್ಚಂದ್ರಗುಪ್ತೋ ನಾಮ ಅತೀವ ಬುದ್ಧಿಮಾನ್ ದಂಡನೀತೌ ಪರಿನಿಷ್ಠಿತಃ| ತೈಃ ಪುತ್ರೈಃ ಪಿತ್ರಾ ಮೌರ್ಯೇಣ ಚ ಗುಣವತ್ತಯಾ ಸರ್ವೋಽಪಿ ಜನೋ ವಶೀಕೃತಃ|'

೩

ರವಿನರ್ತಕನದು ಪದ್ಯಕಾವ್ಯ. ಹಿಂದೆ ಗದ್ಯದಲ್ಲಿದ್ದ ಚಾಣಕ್ಯಕಥೆಯನ್ನು ಪದ್ಯದಲ್ಲಿ ಹೇಳುವ ಪ್ರಯತ್ನವೇ ಈ ತನ್ನ ಕೃತಿ ಎಂದು ಕವಿ ಹೇಳುತ್ತಾನೆ.

> ಚಾಣಕ್ಯಸ್ಯ ಕಥಾ ಸೇಯಂ ವಿದ್ಯತೇ ಗದ್ಯರೂಪಿಣೀ |
> ಅದ್ಯ ತಾಂ ಪದ್ಯತಾಂ ನೇತುಮುದ್ಯತೋ ರವಿನರ್ತಕಃ ||

ಕಾವ್ಯ ನಾರಾಯಣನ ಸ್ತೋತ್ರದಿಂದ ಮೊದಲಾಗುತ್ತದೆ.


11926

> ಸ್ವಭಾವಮಹಿತೈರ್ವೇಷೈಃ ಪುಷ್ಣನ್ಬುಧಸಂಪದಮ್ |
> ಖ್ಯಾಪಿತೋ ಗೀರ್ಭಿರಗ್ರ್ಯಾಭಿಃ ಶ್ರೀಮನ್ನಾರಾಯಣೋ ಜಯೇತ್ ||

ಗ್ರಂಥ ಈ ರೀತಿ ಕೊನೆಯಾಗುತ್ತದೆ.

> ಸ ಚಂದ್ರಗುಪ್ತೋಽಪಿ ವಿಧಾಯ ಬುದ್ಧಿಮಾನ್
> ಯೋಗ್ಯಾಂ ಪಿತೃಭ್ರಾತೃವಧಪ್ರತಿಕ್ರಿಯಾಮ್|

ಗುಣೋತ್ತರಂ ರಾಕ್ಷಸಮಾಪ್ಯ ಮಂತ್ರಿಣಂ
ನವೇ ವಯಸ್ಯನ್ವಭವನ್ಮಹೀಸುಖಮ್ ||

ರವಿನರ್ತಕನದು ಸರಳವೂ ಸುಂದರವೂ ಕಾವ್ಯಮಯವೂ ಆದ ರಚನೆಯಾದರೂ ಅಲ್ಲಲ್ಲಿ ಶ್ಲೇಷೆ, ಅನುಪ್ರಾಸ ಮುಂತಾದ ಅಲಂಕಾರಗಳು ನುಸುಳಿಕೊಂಡು ಬರುತ್ತವೆ. ಇವುಗಳಿಂದ ಎಲ್ಲಿಯೂ ಕಥೆಯ ಓಟಕ್ಕೆ ತಡೆಯುಂಟಾಗುವುದಿಲ್ಲ. ಶ್ಲೇಷೆ ಮತ್ತು ಅನುಪ್ರಾಸಗಳಿಗೆ ಉದಾಹರಣೆ—

ಅಸ್ತಿ ಸುಸ್ಥಿತ-ಭೂಪಾಲ-ಬೃಂದ-ಮಂದಾಕಿನೀ-ತಟೇ |
ರತ್ನಾಂಶು-ಪಾಟಲೀಭೂತಂ ಪಾಟಲೀಪುತ್ರಕಂ ಪುರಂ ||
ಬಹುಜಾತಿ-ಸಮಾಕೀರ್ಣಮಶೋಕೋದಯ-ಶೋಭನಂ |
ಭೂಮೌ ತಿಲಕಭೂತಂ ಯದಾಹುಃ ಪುಷ್ಪಪುರಂ ಜನಾಃ ||

ರವಿನರ್ತಕನ ಮನಸ್ಸಿನಲ್ಲಿದ್ದ ಹಿಂದಿನ ಗದ್ಯಕಥೆಯೆಂದರೆ ಮಹಾದೇವನ ಗ್ರಂಥವೇ ಇರಬಹುದು.

ಈ ಗ್ರಂಥದಿಂದ ಕವಿಯ ಜೀವನದ ವಿವರಗಳು ತಿಳಿದು ಬರುವುದಿಲ್ಲ. ಕವಿಯ ವಿಷಯದಲ್ಲಿ ಸಂಪ್ರದಾಯದ ಕಥೆ ಹೀಗಿದೆ. ಕೇರಳದ ಪ್ರಸಿದ್ಧ ವಿದ್ವಾಂಸನಾದ ಮೇಲ್‌ಪುತ್ತೂರಿನ ನಾರಾಯಣ ಭಟ್ಟನು (ಕ್ರಿ. ಶ. ೧೫೫೯–೧೬೬೬) ತನ್ನ ಪ್ರಬಂಧಗಳನ್ನು 'ಚಾಕ್ಕಿಯಾರ್ ಕೊಟ್ಟು' ಅಥವಾ ನಾಟ್ಯಸಂಘದವರ ಅಭಿನಯಕ್ಕಾಗಿ, ಚಾಕ್ಕಿಯಾರ್ ಸ್ನೇಹಿತನಾದ ರವಿಗಾಗಿ ರಚನೆಮಾಡಿದನಂತೆ. ಈ ರವಿಯೇ ಮುದ್ರಾರಾಕ್ಷಸ ನಾಟಕದ ಕಥೆಯನ್ನು ಪೂರ್ವಕಥೆಯೊಡನೆ ಕಾವ್ಯರೂಪದಲ್ಲಿ ರಚಿಸಿದನು. ಕವಿಯ ಹೆಸರು ರವಿಕರ್ತನ, ರವಿನರ್ತಕ ಎಂದು ಎರಡು ರೂಪಗಳಲ್ಲಿಯೂ ದೊರಕುತ್ತದೆ. ಈ ಕಾವ್ಯವನ್ನು 'ಮುದ್ರಾರಾಕ್ಷಸಕಥಾಸಾರ' 'ಮುದ್ರಾರಾಕ್ಷಸಕಥಾಸಂಗ್ರಹ' 'ಕೌಟಿಲ್ಯಕಥಾಸಾರ' 'ಚಾಣಕ್ಯಕಥಾ' ಎಂಬ ಬೇರೆ ಬೇರೆ ಹೆಸರುಗಳಿಂದ ಪ್ರತಿಕಾರರು ಕರೆದಿದ್ದಾರೆ. 'ಚಾಣಕ್ಯಸ್ಯ ಕಥಾ ಸೇಯಂ' ಎಂಬ ಕವಿಯ ಮಾತನ್ನೂ ಇಲ್ಲಿ ನಾವು ಗಮನಿಸಬಹುದು. ಇದಕ್ಕಿಂತ ಹೆಚ್ಚಿನ ಸಂಗತಿಗಳು ಕವಿಯ ವಿಷಯವಾಗಿ ನಮಗೆ ತಿಳಿದುಬಾರವು.

ಮಹಾದೇವ ರವಿನರ್ತಕರ ಗ್ರಂಥಗಳ ಹೆಸರುಗಳು ಸೂಚಿಸುವಂತೆ, ಇವರ ಕಾವ್ಯಗಳು ತುಂಬ ತೊಡಕಾಗಿರುವ ವಿಶಾಖದತ್ತನ ಮುದ್ರಾರಾಕ್ಷಸನಾಟಕದ ಕಥೆಯನ್ನು ಸರಳವಾಗಿ ಸಂಗ್ರಹವಾಗಿ ಜನಗಳಿಗೆ ತಿಳಿಸಿಕೊಡುವ ಪ್ರಯತ್ನಗಳೆಂದು ಸ್ವಯಂವೇದ್ಯವಾಗಿದೆ. ಅಲ್ಲದೆ ಈ ಇಬ್ಬರು ಕವಿಗಳೂ ನಾಟಕದ ಕಥೆಗೆ ಸ್ವಯಂ ಪೂರ್ಣತೆ ಬರುವಂತೆ ಪೂರ್ವಕಥೆಯನ್ನು ಜೋಡಿಸಿದ್ದಾರೆ. ('ಮುದ್ರಾರಾಕ್ಷಸನಾಟಕ'ಕ್ಕೆ ವ್ಯಾಖ್ಯಾನವನ್ನು ಬರೆದಿರುವ ಧುಂಡಿರಾಜನು ತನ್ನ ವ್ಯಾಖ್ಯಾನಕ್ಕೆ ಉಪೋದ್ಘಾತರೂಪವಾದ ಪೂರ್ವಕಥೆಯನ್ನು ಹೇಳಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.) ಈ ಭಾಗದಲ್ಲಿ ರವಿನರ್ತಕನು ಪೂರ್ತಿಯಾಗಿ ಮಹಾದೇವನನ್ನು ಅನುಸರಿಸಿದ್ದಾನೆ. ಆದರೆ ಕಥೆ ಹೇಳುವುದರಲ್ಲಿ ಇಬ್ಬರಿಗೂ ದೃಷ್ಟಿಭೇದ ತಲೆದೋರಿದೆ. ಮಹಾದೇವನು ನಾಟಕದ ಕಥೆಯನ್ನು ವಿಸ್ತರಿಸಿ ಪೂರ್ವಕಥೆಯನ್ನು ಸಂಗ್ರಹಿಸಿದ್ದರೆ, ರವಿನರ್ತಕನು ಪೂರ್ವಕಥೆಯನ್ನು ವಿಸ್ತರಿಸಿ, ನಾಟಕದ ಕಥೆಯನ್ನು ಸಂಗ್ರಹಿಸಿದ್ದಾನೆ. ನೆನಪಿಗೆ ಬಂದ ಒಂದೆರಡು ಉದಾಹರಣೆಗಳನ್ನು ಇಲ್ಲಿ ನಿರೂಪಿಸಬಹುದು.

(1) ನಂದರ ಸಾವನ್ನು ಮಹಾದೇವನು ಬಹಳ ಸಂಗ್ರಹವಾಗಿ ಹೇಳಿದ್ದಾನೆ. ಎಷ್ಟು ಸಂಗ್ರಹವಾಗಿ ಎಂದರೆ ಮೂರುವಾಕ್ಯಗಳಲ್ಲಿ ಆ ವೃತ್ತಾಂತ ಮುಗಿದುಹೋಗಿದೆ.

'ತೇ ಸರ್ವೇsಪಿ ಕ್ಷಪಣಕವಾಕ್ಯೇ ವಿಶ್ವಾಸಾತ್ 'ಅಸ್ಮಿನ್ ದಿನೇsಹಂ ಯೋದ್ಧುಂ ಗಚ್ಛಾಮಿ ಚೇನ್ಮ್ರಿಯಿಷ್ಯಾಮಿ' ಇತಿ ಪ್ರತ್ಯೇಕಂ ನಿಶ್ಚಿತ್ಯ ಯುದ್ಧಾಯ ನ ಗತವಂತಃ | ನವನಂದಾ ರಾಕ್ಷಸಶ್ಚ ಕತಿಪಯೈರ್ಭಟೈಸ್ಸಹ

ನಗರಾನ್ನಿರ್ಗತ್ಯ ಮ್ಲೇಚ್ಛೈಸ್ಸಹ ಯುಯುಧಿರೇ| ತತಶ್ಚ ಪರಿಮಿತಪರಿವಾರತಯಾ ಚಾಣಕ್ಯಮತಿಬಲಪರಿಗೃಹೀತೈರ್ಬಹುಭಿಃ ಪರ್ವತಕೇಶ್ವರಬಲೈರ್ನವ ನಂದಾ ವ್ಯಾಪಾದಿತಾಃ|'

ಈ ಸನ್ನಿವೇಶವನ್ನೇ ರವಿನರ್ತಕನು ಸ್ವಲ್ಪ ವಿಸ್ತಾರವಾಗಿ ವಿವರಿಸಿದ್ದಾನೆ. ಪರ್ವತಕನ ಸೇನೆಯೊಡನೆ ಚಾಣಕ್ಯನು ಪಾಟಲೀಪುತ್ರವನ್ನು ಎದುರಿಸಲು ಬಂದರೆ, ರಾಕ್ಷಸನು ಸಂಧರೊಡನೆ ಯುದ್ಧಕ್ಕೆ ಬಂದನು. ನಂದರವಧೆ ಸುಲಭವಾಗಿ ಕೈಗೂಡಲು, ರಾಕ್ಷಸನ ಗಮನವನ್ನು ತನ್ನತ್ತ ಸೆಳೆಯಲು, ಚಂದ್ರಗುಪ್ತನು ಅವನಲ್ಲಿಗೆ ಹೋಗಿ ರಾಜ್ಯದ ಒಂದು ಅಂಶವನ್ನಾದರೂ ಕೊಡಿಸಬೇಕೆಂದು ಬೇಡಿಕೊಂಡನು. ರಾಕ್ಷಸನು ಯುದ್ಧಮಾಡು ಎಂದು ಅಬ್ಬರಿಸಿದನು. ಈ ವಾಗ್ವಾದ ನಡೆದಾಗ ನಂದರು ಹತರಾದರು.

(2) ರಾಕ್ಷಸನ ತಂತ್ರಗಳಿಗೆ ಚಾಣಕ್ಯನು ಪ್ರತೀಕಾರಮಾಡಿದ್ದು, ಕಪಟಕಲಹ, ರಾಕ್ಷಸಸಂಗ್ರಹ ಇವೇ ಮೊದಲಾದ ಸನ್ನಿವೇಶಗಳನ್ನು ಮಹಾದೇವನು ವಿಸ್ತರಿಸಿದ್ದರೆ, ರವಿನರ್ತಕನು ಓಡಿಸಿಕೊಂಡು ಹೋಗಿದ್ದಾನೆ.

ವಿಶಾಖದತ್ತನ ಮುದ್ರಾರಾಕ್ಷಸನಾಟಕದಿಂದ ಚಾಣಕ್ಯ ಚಂದ್ರಗುಪ್ತರ ಕಥೆ ಭರತಖಂಡದಲ್ಲಿ ಪ್ರಖ್ಯಾತವಾಗಿದೆ. ಈ ನಾಟಕವಾದರೋ ರಾಕ್ಷಸನ ಮುದ್ರೆಯುಂಗುರದ ಸಂಗ್ರಹದಿಂದ ಮೊದಲಾಗುತ್ತದೆ. ನಾಟಕದ ಪೂರ್ವಕಥೆಗೆ ಸೂಚನೆಗಳು ವಿಶಾಖದತ್ತನ ಕೃತಿಯಲ್ಲಿ ಅಲ್ಲಲ್ಲೇ ದೊರಕುತ್ತವೆ. ಪುರಾಣದಲ್ಲಿ ಈ ವಿಷಯಕ್ಕೆ ಸಂಬಂಧಿಸಿದ ಸೂಚನೆಗಳು ಪರಸ್ಪರ ವಿರುದ್ಧವಾಗಿವೆ. ಜನಜನಿತವಾದ ಸಂಗತಿಗಳನ್ನೂ ಪುರಾಣನಾಟಕಗಳಲ್ಲಿ ದೊರಕುವ ಸೂಚನೆಗಳನ್ನೂ ಹೊಂದಿಸಿಕೊಂಡು, ಇತ್ತೀಚಿನವರು ಚಾಣಕ್ಯ ಚಂದ್ರಗುಪ್ತರ ಸಂಪೂರ್ಣಕಥೆಯನ್ನು ರಚಿಸಿರಬೇಕು. ಪೂರ್ವಕಥೆಯ ವಿಷಯದಲ್ಲಿ ರವಿನರ್ತಕನು ಮಹಾದೇವನನ್ನು ಅನುಸರಿಸಿದ್ದರೂ, ವಿವರಗಳಲ್ಲಿ ಇಬ್ಬರಿಗೂ ತುಂಬ ಭೇದವಿದೆ. ಪೂರ್ವಕಥೆ ಮಹಾದೇವನಿಗೆ ಚಿತ್ರಕ್ಕೆ ಗೋಡೆ ಇದ್ದಂತೆ. 'ಗೊತ್ತಿರುವ ಕಥೆಯನ್ನು ಮತ್ತೆ ಹೇಳಿ ಲಂಬಿಸುವುದರಲ್ಲಿ ಔಚಿತ್ಯವೇನು ಬಂತು? ಆ ಭಾಗವನ್ನು ಪೂರ್ವಕಥೆಯ ನಿರೂಪಣೆಗಾಗಿ ಏಕೆ ಮೀಸಲಾಗಿಡಬಾರದು?' ಎನ್ನುವುದು ರವಿನರ್ತಕನ ಅಭಿಪ್ರಾಯವಿದ್ದಂತೆ ಕಾಣುತ್ತದೆ. ಪೂರ್ವಕಥೆಯ ನಿರೂಪಣೆಯ ವಿಷಯದಲ್ಲಿ ಇಬ್ಬರಿಗೂ ಇರುವ ವ್ಯತ್ಯಾಸವನ್ನು ನಿರೂಪಿಸುವುದಕ್ಕಿಂತ ಮುಂಚೆ, ಇಲ್ಲಿ ಎರಡು ವಿಷಯಗಳನ್ನು ತಿಳಿಸಬೇಕು.

1. ಚಾಣಕ್ಯನು ಉತ್ತರದೇಶದವನೆಂದೂ, ತಕ್ಷಶಿಲೆಯ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಯೆಂದೂ ಚರಿತ್ರೆಯಲ್ಲಿ ಸುಪ್ರಸಿದ್ಧವಾದ ವಿಷಯ. ಆದರೆ ಮಹಾದೇವನ ಪ್ರಕಾರ, ಚಾಣಕ್ಯನು ಚಂದ್ರಗುಪ್ತನಿಗೆ ತನ್ನನ್ನು ಪರಿಚಯಿಸಿಕೊಳ್ಳುತ್ತ, ತಾನು ದಕ್ಷಿಣದೇಶದವನೆಂದು ಹೇಳಿಕೊಳ್ಳುತ್ತಾನೆ. ಯಾವ ಆಧಾರದ ಮೇಲೆ ಕವಿ ಹೀಗೆ ಹೇಳಿದ್ದಾನೆಯೋ ತಿಳಿಯದು. ಕವಿಯ ಮಾತು ನಿಜವಾಗಿದ್ದರೆ, ದಕ್ಷಿಣದೇಶದವರಿಗೆ ಚಾಣಕ್ಯನು ನಮ್ಮವನೆಂಬ ಹೆಮ್ಮೆಯಲ್ಲವೇ?

2. ನಂದವಧೆ, ರಾಕ್ಷಸಸಂಗ್ರಹ ಇವು ಆದಮೇಲೆ, ಚಾಣಕ್ಯನು ತಪೋವನಕ್ಕೆ ಹೋಗುತ್ತಾನೆ. ತನ್ನ ತಪಸ್ಸಿಗೆ ಯಾವ ಅಡ್ಡಿಯೂ ಇರಬಾರದು, ಆದರೆ ಚಂದ್ರಗುಪ್ತನ ರಾಜ್ಯಲಕ್ಷ್ಮಿ ಸುಸ್ಥಿರವಾಗಿ ನಿಲ್ಲಬೇಕು ಎಂಬ ಉದ್ದೇಶದಿಂದಲೇ ಚಾಣಕ್ಯನು ರಾಕ್ಷಸನನ್ನು ಸಂಗ್ರಹಿಸಿದ್ದು. ವಿಶಾಖದತ್ತನೂ ಮಹಾದೇವನೂ ತನ್ನ ಕಾರ್ಯ ಮುಗಿದ ಮೇಲೆ ಚಾಣಕ್ಯನು ತಪೋವನಕ್ಕೆ ಹೋದನೆನ್ನುತ್ತಾರೆ. ಆದರೆ ರವಿನರ್ತಕನ ಹೇಳಿಕೆಯೇ ಬೇರೆ.

ಪ್ರತಿಜ್ಞಾಂ ತೀರ್ತ್ವೈವಂ ವಿಪುಲಮತಿರಾಬಧ್ಯ ಚ ಶಿಖಾಂ
ನಿರಾಶೋಽಪಿ ಪ್ರೀತ್ಯಾ ನರಪತಿಕೃತಾಶೇಷವಿಭವಃ|
ಸ ಕೌಟಿಲ್ಯೋ ಧರ್ಮಾನ್ ವಿಧಿವದಕರೋದಾತ್ಮಭವನೇ
ವದನ್ ಕಾಲೇ ಕಾಲೇ ಹಿತಮಖಿಲಮಸ್ಮೈ ಕ್ಷಿತಿಭುಜೇ||

ಚಾಣಕ್ಯ ನಿಸ್ಪೃಹ; ಆದರೂ ದೊರೆ ಕೊಟ್ಟ ಅಷ್ಟೈಶ್ವರ್ಯವನ್ನು ಸ್ವೀಕರಿಸಿದ; ತನ್ನ ಮನೆಯಲ್ಲಿ ನಿಂತು ಧರ್ಮಾಚರಣೆ ಮಾಡುತ್ತಿದ್ದನು; ತಪೋವನಕ್ಕೆ ಹೋಗಲಿಲ್ಲ ಎಂದು ಕವಿ ಹೇಳಿರುವುದು ತುಂಬ ಸೋಜಿಗದ ವಿಷಯ. 'ಮೀಸೆ ಬಾರದ ಪೋರ'ನಿಗೆ ತಪಸ್ಸಿಗೆ ಹೋಗಲು ಮನಸ್ಸು ಇನ್ನು ಪರಿಪಕ್ವವಾಗಿರಲಿಲ್ಲವೆಂದು ಕವಿ ಭಾವಿಸಿದನೋ ಏನೋ!

೪

ತಂತ್ರಪ್ರತಿತಂತ್ರಗಳನ್ನೊಳಗೊಂಡ ಚಾಣಕ್ಯ ಚಂದ್ರಗುಪ್ತರ ಕಥೆ ತುಂಬ ತೊಡಕಾದ ಕಥೆ. ಈ ತೊಡಕನ್ನು ಬಿಡಿಸಿಕೊಂಡು, ನಾಟಕದ ಪೂರ್ವಕಥೆಯಲ್ಲಿ ಮಹಾದೇವರವಿನರ್ತಕರಿಗೆ ನಿರೂಪಣೆಯಲ್ಲಿ ಕಂಡು ಬರುವ ಸೂಕ್ಷ್ಮವ್ಯತ್ಯಾಸಗಳನ್ನರಿಯಲು, ಕಥೆಯನ್ನು ಕೆಲವು ಘಟ್ಟಗಳನ್ನಾಗಿ ವಿಭಾಗಿಸಿಕೊಳ್ಳುವುದು ಒಳ್ಳೆಯದು. ಸೌಕರ್ಯಕ್ಕಾಗಿ ಈ ಕಥೆಯನ್ನು ನಾಲ್ಕು ಘಟ್ಟಗಳನ್ನಾಗಿ ಒಡೆದಿದೆ: 1. ಮೌರ್ಯರ ಮರಣ, 2. ಚಾಣಕ್ಯ ಪ್ರತಿಜ್ಞೆ, 3. ನಂದರ ಮರಣ, 4. ಪರ್ವತರಾಜನ ಸಾವು ಮತ್ತು ಮಲಯಕೇತುವಿನ ಪಲಾಯನ. ಸ್ಥೂಲವಾಗಿ ಮಹಾದೇವನ ಕಥಾನಿರೂಪಣೆ ಇದು :

ಪಾಟಲೀಪುರದ ರಾಜನಾದ ಸರ್ವಾರ್ಥಸಿದ್ಧಿಗೆ ಇಬ್ಬರು ಹೆಂಡತಿಯರು–ಕ್ಷತ್ರಿಯಳಾದ ಸುನಂದೆ, ಸೂತಪುತ್ರಿಯಾದ ಮುರೆ. ಬಹುಕಾಲ ಮಕ್ಕಳಿಲ್ಲದ ಇವರಿಗೆ, ಋಷಿಯೊಬ್ಬನು ಸುನಂದೆಗೆ ಒಂಬತ್ತುಜನ ಮಕ್ಕಳನ್ನೂ ಮುರೆಗೆ ಒಬ್ಬ ಮಗನನ್ನೂ ಅನುಗ್ರಹಿಸಿದನು. ಗರ್ಭವತಿಯಾದ ಸುನಂದೆ ಒಂದು ಮಾಂಸಪಿಂಡವನ್ನು ಹೆತ್ತಳು. ಋಷಿಯ ಮಾತನ್ನು ನೆನೆದು, ರಾಕ್ಷಸನು ಆ ಪಿಂಡವನ್ನು ಒಂಬತ್ತು ಭಾಗಮಾಡಿ, ತುಪ್ಪದ ಪಾತ್ರೆಯಲ್ಲಿಡಿಸಿದನು. ಹಾಗೆ ಹುಟ್ಟಿದವರೇ ನವನಂದರು. ಆಮೇಲೆ ಮುರೆಯಲ್ಲಿ ಮೌರ್ಯನೂ, ಅವನಿಗೆ ಚಂದ್ರಗುಪ್ತನೇ ಮೊದಲಾದ ನೂರುಜನ ಮಕ್ಕಳೂ ಆದರು. ತನಗೆ ರಾಜ್ಯದೊರಕುವುದಿಲ್ಲವೆಂದರಿತ ಮೌರ್ಯನು ನಂದರಲ್ಲಿ ಭೇದವನ್ನು ಬಿತ್ತಿದನು. ಒಬ್ಬೊಬ್ಬರು ಒಂದೊಂದು ವರ್ಷ ರಾಜ್ಯವಾಳಬೇಕೆಂಬ ಸಲಹೆಗೆ, ಅಣ್ಣತಮ್ಮಂದಿರಲ್ಲಿ ಕಲಹ ಹುಟ್ಟಿದಾಗ, ಚೀಟಿ ಎತ್ತುವುದರ ಮೂಲಕ ಈ ಜಗಳವನ್ನು ಪರಿಹರಿಸಿ, ರಾಕ್ಷಸನು ರಾಜ್ಯವನ್ನು ಕಾಪಾಡಿದನು. ದಾಯಾದಿ ಮತ್ಸರದಿಂದ ಕೂಡಿದ ನಂದರು ಮಂತ್ರಾಲೋಚನ ಮಂದಿರದಲ್ಲಿ ಮೌರ್ಯನನ್ನು ಮಕ್ಕಳೊಡನೆ ಕೊಂದರು. ಅವರಲ್ಲಿ ಚಂದ್ರಗುಪ್ತನು ಮಾತ್ರ ಬದುಕಿಕೊಂಡನು.

ಒಮ್ಮೆ ಅನ್ಯರಾಜರು ಕಳುಹಿಸಿದ ಪಂಜರದ ಸಿಂಹವನ್ನು ವೃದ್ಧಮಂತ್ರಿಯ ಸಲಹೆಯಂತೆ, ಬಂಧನದಲ್ಲಿದ್ದ ಚಂದ್ರಗುಪ್ತನು ಬಿಡುಗಡೆಹೊಂದಿ, ಕರಗಿಸಿ ಹೊರತೆಗೆದನು. ನಂದರು ಅವನಿಗೆ ತಾವಾಡಿದ ಮಾತಿನಂತೆ ತಂದೆಯ ಅಧಿಕಾರವನ್ನು ಕೊಡಲಿಲ್ಲ; ಅನ್ನ ಸತ್ರಾಧಿಕಾರವನ್ನು ಕೊಟ್ಟರು.

ಒಂದು ಸಾರಿ ಚಂದ್ರಗುಪ್ತನು ಬ್ರಾಹ್ಮಣರನ್ನು ಹುಡುಕುತ್ತ, ಹೊರಗೆ ಕುಳಿತಿದ್ದಾಗ, ತರುಣನೂ ತೇಜಸ್ವಿಯೂ ಆದ ಬ್ರಾಹ್ಮಣನ ಪಾದಕ್ಕೆ ದರ್ಭೆಯ ಕುಡಿ ಚುಚ್ಚಿದಾಗ, ಅವನು ಅದನ್ನು ಬೇರುಸಹಿತ ಹೊರಗೆಳೆದು ಪುಡಿಮಾಡಿ ನೀರಿನಲ್ಲಿ ಕುಡಿದನು. ಅವನು ಹತ್ತುಸಾವಿರ ಜನರನ್ನು ತನ್ನ ಬುದ್ಧಿಶಕ್ತಿಯಿಂದ ಜಯಿಸಬಲ್ಲವನೆಂದು ಚಂದ್ರಗುಪ್ತನಿಗೆ ತಿಳಿಯಿತು. ಆ ಬಳಿಕ ಅವನು ನಂದರ ಭೋಜನಶಾಲೆಗೆ ಹೋದನು. ಅಲ್ಲಿ ರಾಜನಿಗೆ ಒಂಬತ್ತು, ಸರ್ವವಿದ್ಯಾಪಾರಂಗತನಾದ ಬ್ರಾಹ್ಮಣನಿಗೆ ಒಂದು–ಹೀಗೆ ಹತ್ತು ಚಿನ್ನದ ಪಾತ್ರೆಗಳಿದ್ದವು. ಉಳಿದ ತೊಂಬತ್ತು ಪಾತ್ರೆಗಳು ಇತರ ಬ್ರಾಹ್ಮಣರಿಗಿದ್ದವು. ಚಾಣಕ್ಯನು ಹೋಗಿ ಚಿನ್ನದ ಪಾತ್ರೆಯಿದ್ದ ಸ್ಥಳದಲ್ಲಿ ಕುಳಿತನು. ನಂದರು ಅವನು ಮೀಸೆಬಾರದ ಯುವಕನೆಂದು ಅವಮಾನಪಡಿಸಿ, ಆಸನದಿಂದ ಎಳಸಿದರು. ಚಾಣಕ್ಯನು ತಾನೇ ಜುಟ್ಟನ್ನು ಬಿಚ್ಚಿಕೊಂಡು ನಂದರನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿದನು. ಇವನಿಗೆ ಸಹಾಯಕನಾಗಿ ಇಂದುಶರ್ಮನು ನೆರವಾದನು.

ನೀತಿಶಾಸ್ತ್ರ, ಜ್ಯೋತಿಷ, ಮಂತ್ರಶಾಸ್ತ್ರಗಳಲ್ಲಿ ನಿಪುಣನಾದ ಇಂದುಶರ್ಮನು ರಾಕ್ಷಸನನ್ನು ಆಶ್ರಯಿಸಿ ಅವನನ್ನು ವಶಪಡಿಸಿಕೊಂಡನು. 'ವೈಶಾಖಪೂರ್ಣಮಾಸ್ಯೆಯ ದಿನ ನಿಮ್ಮ ಗ್ರಹಗತಿ ಚೆನ್ನಾಗಿಲ್ಲ. ಯುದ್ಧಕ್ಕೆ ಹೋದರೆ ನೀವು ಸಾಯುತ್ತೀರಿ' ಎಂದು ಸೇನಾಪತಿಗಳಿಗೆ ಬೇರೆಬೇರೆಯಾಗಿ ಹೇಳಿ, ಪರ್ವತರಾಜನಿಗೂ ನಂದರಿಗೂ ನಡೆದ ಯುದ್ಧ ಅವರು ತಟಸ್ಥರಾಗುವಂತೆ ಕ್ಷಪಣಕ ವೇಷದ ಇಂದುಶರ್ಮನು ಮಾಡಿದನು. ನಂದರಿಗೂ ಪರ್ವತರಾಜನಿಗೂ ನಡೆದ ಯುದ್ಧದಲ್ಲಿ ನಂದರು ಹತರಾದರು. ರಾಕ್ಷಸನು ಉಳಿದನು.

ಇತ್ತ ರಾಕ್ಷಸನು ಚಂದ್ರಗುಪ್ತನನ್ನು ಆಶ್ರಯಿಸಿದನು. ಇಂದುಶರ್ಮನು ಭೋಗಿಸಿದ ತಕ್ಷಣವೇ ಮೃತಪಡುವ ವಿಷಕನ್ಯೆಯೊಬ್ಬಳನ್ನು ಅವನಿಗೆ ಸೃಷ್ಟಿಮಾಡಿಕೊಟ್ಟನು. ಅವಳನ್ನು ಕೂಡಿ ಪರ್ವತರಾಜನು ಮೃತನಾದನು. ಪಾಟಲೀಪುರದಲ್ಲಿದ್ದ, ತಂದೆಯ ಮರಣದಿಂದ ವ್ಯಾಕುಲನಾಗಿದ್ದ ಮಲಯಕೇತುವನ್ನು ಭಾಗುರಾಯಣನು ಬೋಧಿಸಿ ಅವನ ರಾಜಧಾನಿಗೆ ಕರೆದುಕೊಂಡು ಹೋದನು.

ಇನ್ನು ಈ ಕಥಾಭಾಗದಲ್ಲಿ ರವಿನರ್ತಕನು ಮಾಡಿಕೊಂಡಿರುವ ವ್ಯತ್ಯಾಸವನ್ನು ಗಮನಿಸಬಹುದು—

ಸರ್ವಾರ್ಥಸಿದ್ಧಿಯೇ **ನಂದ**ನೆಂದು ರವಿನರ್ತಕನ ಸ್ಪಷ್ಟವಾದ ಹೇಳಿಕೆ. ಋಷಿಯ ಪಾದೋದಕವನ್ನು ಸುನಂದೆ ಗೋಣಗುತ್ತ ತನ್ನ ತಲೆಯಲ್ಲಿ ಧರಿಸುತ್ತಾಳೆ. ಸರ್ವಾರ್ಥಸಿದ್ಧಿಗೆ **ಮೊದಲು ಮೌರ್ಯ** ಆ ಬಳಿಕ ನವನಂದರು ಹುಟ್ಟುತ್ತಾರೆ. ಗರ್ಭಪಿಂಡವೊಂದು ಜನಿಸಿದುದಕ್ಕೆ ದುಃಖಿತನಾದ ದೊರೆಗೆ, **ಅಶರೀರವಾಣಿ** ಒಂಬತ್ತು ಜನ ಮಕ್ಕಳಾಗಿದ್ದಾರೆಂದು ಧೈರ್ಯಕೊಡುತ್ತದೆ. ಪ್ರಜ್ಞಾಶಾಲಿಯಾದ ರಾಕ್ಷಸನು ಗಾಂಧಾರಿಯ ವೃತ್ತಾಂತವನ್ನು ನೆನೆದು, ಆ ಮಾಂಸಪಿಂಡವನ್ನು ಒಂಬತ್ತು ಭಾಗಮಾಡಿ, **ಎಣ್ಣೆಯ** ಪಾತ್ರೆಯಲ್ಲಿರಿಸುತ್ತಾನೆ.

ಮಕ್ಕಳಲ್ಲಿ ಹಿರಿಯನಾರೆಂಬ ಚಿಂತೆ ರಾಜನನ್ನು ಆವರಿಸಿದಾಗ, **ವಕ್ರನಾಸ**ನೆಂಬ ಮಂತ್ರಿ ನಂದರಾಜ್ಯವನ್ನು ಒಂಬತ್ತು ಭಾಗವನ್ನಾಗಿಸುವ ಸೂಚನೆಯನ್ನು ರಾಜನ ಮುಂದಿಟ್ಟನು. ಮಕ್ಕಳಲ್ಲಿ ಒಬ್ಬನನ್ನು ಆರಿಸಿ, ಅವನನ್ನು ದೊರೆಯನ್ನಾಗಿ ಮಾಡಿ, ಉಳಿದೆಂಟು ಜನರನ್ನು ಅವನ ಸೇವಕರನ್ನಾಗಿ ಮಾಡುವ ಸೂಚನೆ ಮೌರ್ಯನಿಂದ ಬಂತು. ಪಾಟಲೀಪುತ್ರಕ್ಕೆ ಸಮಾನವಾದ ಎಂಟು ಪಟ್ಟಣಗಳನ್ನು ಕಟ್ಟಿ, ಕೋಶಸೇನೆಗಳನ್ನು ಒಂಬತ್ತಾಗಿ ಭಾಗಿಸಬೇಕೆಂದು ರಾಕ್ಷಸನು ಸಲಹೆಮಾಡಿದನು.

ಮೌರ್ಯರು ಸತ್ತು **ಮೂರುತಿಂಗಳಾದ** ಮೇಲೆ,ವಂಗದೇಶದ ದೊರೆ ಪಂಜರದ ಸಿಂಹವನ್ನು ಕಳುಹಿಸುತ್ತಾನೆ. ರಾಜಸಭೆಯಲ್ಲಿ ಚಂದ್ರಗುಪ್ತನ ಬುದ್ಧಿಕೌಶಲವನ್ನು ಕೊಂಡಾಡುವವನು ವಿಶಿಖನೆಂಬ ಮಂತ್ರಿ. ತನ್ನನ್ನು ರಾಜಸಭೆಗೆ ಕರೆಯಬಂದ ಅಧಿಕಾರಿಗಳನ್ನು ಚಂದ್ರಗುಪ್ತನು ಕೊಲ್ಲುವಂತೆ ಪ್ರಾರ್ಥಿಸುತ್ತಾನೆ. ತಂದೆಯ **ಕೋಶ**ವನ್ನು ಒಪ್ಪಿಸಿಕೊಟ್ಟ ಮೇಲೆಯೇ ಅವನು ಹೊರಬರುತ್ತಾನೆ. ಒಮ್ಮೆ ಊರಿನ ಹೊರಗಡೆ ಸುತ್ತುತ್ತಿದ್ದಾಗ ಚಂದ್ರಗುಪ್ತನ ಕಣ್ಣಿಗೆ ಚಾಣಕ್ಯನು ಬಿದ್ದನು. ಕಾಲಿಗೆ ತೊಡರಿಕೊಂಡ ಹುಲ್ಲಿನ ಗುತ್ತಿಯನ್ನು ಬೆಂಕಿಯಿಂದ ಸುಟ್ಟು, ಅದರ ಬೂದಿಯನ್ನು ಕೋಪದ ದೃಷ್ಟಿಯಿಂದ ಚಾಣಕ್ಯನು ಕುಡಿಯುತ್ತಿದ್ದನು. ನಂದರ ಭೋಜನಶಾಲೆಯಲ್ಲಿ ಊಟಕ್ಕಾಗಿ ಒಂಬತ್ತು ಬಂಗಾರದ ತಟ್ಟೆ, ಒಂದು ಬೆಳ್ಳಿಯ ತಟ್ಟೆ, ಒಂದು ಸಾವಿರ ಎಲೆಗಳಿದ್ದುವು. ಮೀಸೆ ಬಾರದ ಘೋರ ಚಾಣಕ್ಯ ನಂದರಿಗೆ ಕಪಿಯಾಗಿ ಕಂಡನು. ರಾಜಭಟರು ಇವನ ಕೂದಲನ್ನು ಬಲವಾಗಿ ಹಿಡಿದೆಳೆದಾಗ ಚಾಣಕ್ಯನ ಶಿಖೆ ಮತ್ತು ಉತ್ತರೀಯ ಜಾರಿಹೋಗುತ್ತವೆ.

ಆಷಾಢಮಾಸದ ಕೃಷ್ಣಪಕ್ಷದ ಮೊದಲ ಮಂಗಳವಾರ ಶತ್ರು ಪಟ್ಟಣವನ್ನು ಮುತ್ತುವನೆಂದು ಕ್ಷಪಣಕನು ಸೇನಾಪತಿಗಳಿಗೆ ಸೂಚನೆಕೊಡುತ್ತಾನೆ. ಕ್ಷಪಣಕನ ಆಭಿಚಾರ

ಕ್ರಿಯೆಯಿಂದ, ಒಬ್ಬನನ್ನು ಸಾಯಿಸಿ ಮಾಯವಾಗುವ ಚಂದ್ರಮುಖಿಯೊಬ್ಬಳು ಹೋಮಾಗ್ನಿಯಿಂದ ಹುಟ್ಟುತ್ತಾಳೆ.

ಮಹಾದೇವನ ಕಥೆಗೆ ಕೆಲವು ಹೊಸ ಅಂಶಗಳನ್ನು ಸೇರಿಸಿ, ರವಿನರ್ತಕನು ಕೃತಿಯನ್ನು ಬೆಳಗಿದ್ದಾನೆ.

ರಾಕ್ಷಸನನ್ನು ಆಶ್ರಯಿಸಿದ ಇಂದುಶರ್ಮನು ಮೊದಲು ನಂದರಿಗೆ ಜ್ವರ ಬರುವಂತೆ ಮಾಡಿದನು; ಆಮೇಲೆ ಅದನ್ನು ತಪ್ಪಿಸಿದನು; ಕ್ಷೇಮಕಾರಕವಾದ ಬ್ರಾಹ್ಮಣಭೋಜನವನ್ನು ನಿಲ್ಲಿಸಿದನು; ನಂದರಿಗೆ ಉನ್ಮಾದಗ್ರಹ ಬರುವಂತೆ ಮಾಡಿ ಅದನ್ನು ಶಮನಗೊಳಿಸಿದನು; ಚಂದ್ರಗುಪ್ತನಿಗೆ ಹೆಚ್ಚು ಸ್ವಾತಂತ್ರ್ಯ ಸಿಕ್ಕಲೆಂಬ ಉದ್ದೇಶದಿಂದ ಅವನನ್ನು ಪಾಟಲೀಪುತ್ರದಿಂದ ಹೊರವಡಿಸಿ ವರ್ಧಮಾನವೆಂಬ ಹಳ್ಳಿಯಲ್ಲಿರಿಸಿದನು; ಶಬರರಾಜನಿಗೆ ನಂದರು ಕೊಡುತ್ತಿದ್ದ ಸಂಬಳವನ್ನು ನಿಲ್ಲಿಸಿದನು.

ಯಾವುದೋ ದೇಶದ ರಾಜನಮೇಲೆ ದಂಡೆತ್ತಿ ಹೋಗುತ್ತೇನೆಂದು ಹೇಳಿ ಪರ್ವತರಾಜನು ನಂದರಾಜ್ಯವನ್ನು ಮುತ್ತಿದನು. ಶಬರರಾಜನೂ ಇವನಿಗೆ ಸಹಾಯಕನಾದನು. ಪರ್ವತರಾಜನ ಸೇನೆಗೂ ನಂದಸೇನೆಗೂ ಯುದ್ಧ ನಡೆಯುತ್ತಿರುವಾಗ ಚಂದ್ರಗುಪ್ತನು ರಾಕ್ಷಸನ ಬಳಿಗೆ ಹೋಗಿ, ರಾಜ್ಯದ ಒಂದಂಶವನ್ನಾದರೂ ಕೊಡಿಸಬೇಕೆಂದು ಪ್ರಾರ್ಥಿಸುತ್ತಾನೆ. ಸರ್ವಾರ್ಥಸಿದ್ಧಿ ಮತ್ತು ರಾಕ್ಷಸನ ವಿರುದ್ಧ ಚಾಣಕ್ಯನು ಪೌರರನ್ನು ಪ್ರೋತ್ಸಾಹಿಸುತ್ತಾನೆ. ಪುನರಭ್ಯುದಯದ ಆಸೆಯನ್ನು ಬಿಡದೆ ಕಾಡಿಗೆ ಹೋದ ಸರ್ವಾರ್ಥಸಿದ್ಧಿ, ಮುನಿವೇಷಧಾರಿಗಳಾದ ಚಾರರೊಡನೆ, ಚಂದ್ರಗುಪ್ತನ ವಧೆಗಾಗಿ ವಿಷಯುಕ್ತವಾದ ಬದರೀಫಲಗಳನ್ನು ಕಳುಹಿಸಿಕೊಡುತ್ತಾನೆ. ಇದನ್ನು ತಿಳಿದ ಚಾಣಕ್ಯನ ದೂತರು, ದಾರಿಯಲ್ಲಿ ಚಾರರು ಮಲಗಿದ್ದಾಗ ಬೇರೆ ಹಣ್ಣುಗಳನ್ನು ಇಡುತ್ತಾರೆ. ಇವುಗಳನ್ನು ತಿಂದು ಚಂದ್ರಗುಪ್ತನು ಸುಖಿಯಾಗುತ್ತಾನೆ. ತಾನು ಕಳುಹಿಸಿದ ವಿಷಫಲಗಳನ್ನು ತಾನೇ ತಿಂದು ಸರ್ವಾರ್ಥಸಿದ್ಧಿ ಸಾಯುತ್ತಾನೆ.

ಈ ಇಬ್ಬರ ಗ್ರಂಥಗಳನ್ನು ಇನ್ನೂ ಸೂಕ್ಷ್ಮವಾಗಿ ಅವಲೋಕಿಸಿದರೆ, ಮತ್ತೆ ಕೆಲವು ವಿವರಗಳು ದೊರಕಬಹುದು. ಕೃತಿಗಳ ಪರಿಚಯಕ್ಕೆ ಇಷ್ಟು ವಿವರಗಳು ಸಾಕೆಂದು ತೋರುತ್ತದೆ.

ಕೊನೆಯದಾಗಿ ಒಂದು ಮಾತು. ತನಗಿರುವ ಪರಿಮಿತವಾದ ಅವಕಾಶದಲ್ಲಿ ರವಿನರ್ತಕನು ಪಾತ್ರಗಳ ಸೃಷ್ಟಿಗೆ ಹೆಚ್ಚು ಗಮನ ಕೊಟ್ಟಂತೆ ತೋರುತ್ತದೆ. ಮತ್ಸರಗ್ರಸ್ತನಾದ ಮೌರ್ಯನ ಮನಸ್ಸನ್ನು ತೆರೆದು ತೋರಿಸುವುದರಲ್ಲಿ, ಚಾಣಕ್ಯನ ದರ್ಪ ಅಭಿಮಾನ ತಂತ್ರ ಛಲಗಳನ್ನು ಪ್ರದರ್ಶಿಸುವುದರಲ್ಲಿ, ಇಂದುಶರ್ಮನ ಪಾತ್ರವನ್ನು ಕಡೆಯುವುದರಲ್ಲಿ ರವಿನರ್ತಕನು ಮಹಾದೇವನಿಗಿಂತ ತುಂಬ ಜಾಣ್ಮೆಯನ್ನು ತೋರಿದ್ದಾನೆ. ರವಿನರ್ತಕನ ಕಾವ್ಯದ ಪೂರ್ವಾರ್ಧದಲ್ಲಿ ಉತ್ತಮವಾದ ಸಂಭಾಷಣೆಗಳಿವೆ. ಬಳಕೆಯಲ್ಲಿರುವ ಅಲಂಕಾರಗಳಿಂದ ಕೂಡಿ ಕವಿಯ ಶೈಲಿ ಸರಳವೂ ಸುಂದರವೂ ಆಗಿದೆ. 'ಬುದ್ಧಿರೇವ ಜಯತ್ಯೇಕಾ ಪುಂಸಸ್ಸರ್ವಾರ್ಥಸಾಧಿನೀ' 'ಗುಣವತಾಂ ಹಿ ಭೂಃ' 'ಕಸ್ತ್ಯಜೇತ್ ಭವಿತವ್ಯತಾಮ್' 'ದುರ್ಲಭಾಃ ಗುಣಿನೋ ನರಾಃ'- ಈ ತೆರನಾದ ಹತ್ತಾರು ಚೆಲುವಾದ ಸೂಕ್ತಿಗಳು ಕಾವ್ಯದಲ್ಲಿ ಮೂಡಿ ಬಂದಿವೆ. ಈ ಗುಣಗಳಿಂದ ರವಿನರ್ತಕನ ಕಾವ್ಯ ಗ್ರಾಹ್ಯವಾಗಿದೆ.

೫

ಈ ಎರಡು ಸಂಸ್ಕೃತಕೃತಿಗಳೂ ಕೆಂಪುನಾರಾಯಣನ ಗದ್ಯಕೃತಿಗೆ ಎಷ್ಟರ ಮಟ್ಟಿಗೆ ಕಾವ್ಯ ಸಾಮಗ್ರಿಯನ್ನು ಒದಗಿಸಿವೆ ಎಂಬುದನ್ನು ಹೇಳುವುದು ಕಷ್ಟ. ಸರ್ವಾರ್ಥಸಿದ್ಧಿ ಬೌದ್ಧ; ಬೌದ್ಧಮತವನ್ನು ಪ್ರೋತ್ಸಾಹಿಸುತ್ತಿದ್ದ ರಾಜ. ಚಂದ್ರಗುಪ್ತನ ಉದ್ಧಾರಕ್ಕಿಂತ, ತನ್ನ ಗುರುವಿಗೆ ಕೊಟ್ಟ ಮಾತಿನಂತೆ ವೈದಿಕಧರ್ಮವನ್ನು ಎತ್ತಿ ಹಿಡಿಯುವುದು ಚಾಣಕ್ಯನ ಆಶಯ

ವಾಗಿತ್ತೆಂದು ಕವಿ ಹೇಳುತ್ತಾನೆ. ಈ ವಿವರ ಕೆಂಪುನಾರಾಯಣನಿಗೆ ಹೇಗೆ ದೊರಕಿತೋ! (ಬಿದ್ದು ಹೋಗಿದ್ದ ವೈದಿಕಧರ್ಮವನ್ನು ಮುಮ್ಮಡಿ ಕೃಷ್ಣರಾಜವೊಡೆಯರು ಉದ್ಧಾರ ಮಾಡಿದರೆಂಬ ಸೂಚನೆ ಇಲ್ಲಿ ಏನಾದರೂ ಅಡಗಿದೆಯೋ?) ಅದು ಹೇಗಾದರೂ ಇರಲಿ, ವಿಸ್ತಾರವಾದ ಕನ್ನಡ ಕಥೆಗೆ ವಿವರಗಳನ್ನು ಸೇರಿಸುವುದರಲ್ಲಿ, ಕೊಂಡಿ ಕೀಲುಗಳನ್ನು ಜೋಡಿಸುವುದರಲ್ಲಿ ಕವಿ ತನ್ನ ಜಾಣ್ಮೆಯನ್ನೂ ಪ್ರತಿಭೆಯನ್ನೂ ಮೆರೆದಿದ್ದಾನೆ. ಈ ಗದ್ಯಕೃತಿಯಲ್ಲಿ ಬರುವ ನೀತಿವಾಕ್ಯಗಳೆಷ್ಟು! ಇವುಗಳಲ್ಲಿ ಎಷ್ಟು ಸ್ವಂತ ಅನುಭವದಿಂದ ಮೂಡಿ ಬಂದವುಗಳು, ಹಿಂದಿನ ಕೃತಿಗಳಿಂದ ಎಷ್ಟನ್ನು ಎತ್ತಿಕೊಂಡಿವೆ ಎಂಬುದನ್ನು ಕಂಡುಹಿಡಿಯುವುದೇ ಸಂಶೋಧಕನಿಗೆ ಒಳ್ಳೆಯ ಕೆಲಸವಾಗುತ್ತದೆ. ಪುರಾಣಗಳು, ಮಹಾಭಾರತ, ಮುದ್ರಾರಾಕ್ಷಸ ನಾಟಕ, ಕಾದಂಬರೀ, ಶತಕತ್ರಯ ಇವೇ ಮೊದಲಾದ ಗ್ರಂಥಗಳು ಕೆಂಪುನಾರಾಯಣನ ಕೃತಿರಚನೆಗೆ ಸಾಮಗ್ರಿಯನ್ನು ಒದಗಿಸಿ ಪ್ರೇರಣೆಯನ್ನು ಕೊಟ್ಟಿವೆ. ಮುಮ್ಮಡಿ ಕೃಷ್ಣರಾಜವೊಡೆಯರ ಆಸ್ಥಾನ ವಿದ್ವಾಂಸರಿಂದ ತುಂಬಿತ್ತು. ಆ ವಿದ್ವಾಂಸರ ಸಾಹಚರ್ಯದಿಂದ ಕವಿಗೆ ದೊರೆತ ನೀತಿವಾಕ್ಯಗಳ ಸಾಮಗ್ರಿ ಎಷ್ಟೋ! ಹೀಗಿರುವಲ್ಲಿ ದಕ್ಷಿಣದೇಶದಲ್ಲಿ ರಚಿತವಾದ ಈ ಎರಡು ಕೃತಿಗಳನ್ನು ಕೆಂಪುನಾರಾಯಣನು ಅವಲೋಕಿಸಿದ್ದನೆಂದು ಹೇಳಿದರೆ ತಪ್ಪಾಗಲಾರದು.

**ಎಚ್. ಎಂ. ಶಂಕರನಾರಾಯಣರಾವ್**

# ಆಚಾರ್ಯ ಶ್ರೀ ಡಿ. ಎಲ್. ಎನ್. ಅವರ ಕೃತಿಗಳು

## ಲೇಖನಗಳು ಮತ್ತು ಮುನ್ನುಡಿಗಳು

ಪ್ರೊ. ಡಿ. ಎಲ್. ನರಸಿಂಹಾಚಾರ್ಯರ ಸಂಶೋಧನಾತ್ಮಕವಾದ ಗ್ರಂಥಗಳ, ಲೇಖನಗಳ ಮತ್ತು ಮುನ್ನುಡಿಗಳ ವಿವರವನ್ನು ಈ ಪಟ್ಟಿಯಲ್ಲಿ ಕೊಟ್ಟಿದೆ. ಇಲ್ಲಿ ಹೇಳಿರುವ ವಿಸ್ತಾರವಾದ ಲೇಖನಗಳಿಗೆ ಅವರು ಆರಿಸಿಕೊಂಡಿರುವ ವಿಷಯಗಳ ವೈವಿಧ್ಯದ ಒಂದು ವಿಹಂಗಮ ನೋಟ ಸಾಕು, ನರಸಿಂಹಾಚಾರ್ಯರ ವಿದ್ವತ್ತು, ಆಳವಾದ ಅಭ್ಯಾಸಗಳ ಪರಿಚಯಕ್ಕೆ. ಆಚಾರ್ಯರು ಪಟ್ಟಿರುವ ಶ್ರಮ, ವಹಿಸಿರುವ ಶ್ರದ್ಧೆಯನ್ನು ಈ ಲೇಖನಗಳು ಕನ್ನಡಿಸುತ್ತವೆ. ಅವರು ಸಂಪಾದಕರಾಗಿ ಅಚ್ಚುಹಾಕಿಸಿರುವ ಕೃತಿಗಳಿಗಿಂತಲೂ ಬರೆದಿರುವ ಲೇಖನಗಳ ಸಂಖ್ಯೆಯೇ ಹೆಚ್ಚು. ಲೇಖನಗಳನ್ನು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳೆರಡರಲ್ಲೂ ಬರೆದಿದ್ದಾರೆ. ಆ ಎಲ್ಲ ವಿವರವೂ ಇಲ್ಲಿ ಬಂದಿದೆ. ಈ ಪಟ್ಟಿಯಲ್ಲಿ ಉಪಯೋಗಿಸಿರುವ ಸಂಕೇತ ಚಿಹ್ನಗಳ ವಿವರ ಇಂತಿದೆ—

ಪ್ರ. ಕ. = ಪ್ರಬುದ್ಧ ಕರ್ಣಾಟಕ
ಜ. ಕ. = ಜಯಕರ್ನಾಟಕ
ಕ. ನು. = ಕನ್ನಡ ನುಡಿ
ಜೀ. = ಜೀವನ
ಕ. ಸಾ. ಪ. ಪ.= (ಕರ್ಣಾಟಕ) ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ
ಶ. ಸಾ = ಶರಣ ಸಾಹಿತ್ಯ

ಲೇಖನಗಳ ಹೆಸರುಗಳನ್ನು ಅಕಾರಾದಿಯ ಕ್ರಮದಲ್ಲಿ ಸಿದ್ಧಪಡಿಸಿದೆ. ಪ್ರೊ. ಡಿ. ಎಲ್. ಎನ್. ಅವರಿಗೆ ೪೧ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾದ ಸಂದರ್ಭದಲ್ಲಿ ೧೯೬೦ರಲ್ಲಿ ಅರ್ಪಿಸಿದ 'ಜ್ಞಾನೋಪಾಸಕ' ಎಂಬ ಕಿರುಹೊತ್ತಗೆಯಲ್ಲಿ ನಾನು ಕೊಟ್ಟಿರುವ ಪಟ್ಟಿಯನ್ನೇ ಮುಂದುವರಿಸಿ ಇದುವರೆಗಿನ ಅವರ ಎಲ್ಲ ಬರೆಹದ ವಿವರಣೆಯೂ ಬರುವಂತೆ ಈ ಲೇಖನವನ್ನು ನಿಯೋಜಿಸಿದೆ.

### (ಅ) ಗ್ರಂಥಗಳು

1. ಕನ್ನಡ ಗ್ರಂಥಸಂಪಾದನೆ: ಶಾರದಾ ಮಂದಿರ, ಮೈಸೂರು : 1964.
2. ಗೋವಿನ ಹಾಡು: ಶಾರದಾ ಮಂದಿರ, ಮೈಸೂರು 1960.
3. ಪಂಪರಾಮಾಯಣ ಸಂಗ್ರಹ: ಮೈಸೂರು ವಿಶ್ವವಿದ್ಯಾನಿಲಯ.
4. ಭೀಷ್ಮಪರ್ವ : ಪ್ರಾಚ್ಯವಸ್ತು ಸಂಶೋಧನಾಲಯ, ಮೈಸೂರು.
5. ವಡ್ಡಾರಾಧನೆ : ಶಾರದಾ ಮಂದಿರ, ಮೈಸೂರು : ಮೂರನೆಯ ಮುದ್ರಣ, 1965.
6. ಸುಕುಮಾರ ಚರಿತಂ: ಶ್ರೀ: ತ. ಸು. ಶಾ. ಅವರೊಡನೆ. ಕರ್ಣಾಟಕ ಸಂಘ, ಶಿವಮೊಗ್ಗ.
7. ಶಬ್ದವಿಹಾರ: ಶಾರದಾ ಮಂದಿರ, ಮೈಸೂರು 1956.
8. ಶಬ್ದಮಣಿದರ್ಪಣ : ಶಾರದಾ ಮಂದಿರ, ಮೈಸೂರು ; ದ್ವಿತೀಯ ಮುದ್ರಣ : 1964.
9. ಸಕಲ ವೈದ್ಯಸಂಹಿತ ಸಾರಾರ್ಣವಂ : ಪ್ರಾಚ್ಯವಸ್ತು ಸಂಶೋಧನಾಲಯ, ಮೈಸೂರು.
10. ಸಿದ್ಧರಾಮಚರಿತೆಯ ಸಂಗ್ರಹ: ಶಾರದಾ ಮಂದಿರ, ಮೈಸೂರು.
11. ಸಿದ್ಧರಾಮಚಾರಿತ್ರ: ಪ್ರೊ. ಟಿ. ಎಸ್. ವೆಂಕಣ್ಣಯ್ಯನವರೊಡನೆ. ಕರ್ಣಾಟಕ ಸಂಘ, ಶಿವಮೊಗ್ಗ.

## (ಇ) ಮುನ್ನುಡಿಗಳು

1. ಕನ್ನಡದಲ್ಲಿ ವಿಡಂಬನ ಸಾಹಿತ್ಯ: (ಲೇ) ಎಚ್ಚೆಸ್ಕೆ: 1947.
2. ತೂಗುದೀವಿಗೆ: (ಕವನ ಸಂಕಲನ): (ಲೇ). ಟಿ. ಕೇಶವಭಟ್ಟ: 1963.
3. ಬಸವಸ್ತೋತ್ರ ಗೀತೆ: (ಲೇ). ಶಿವಬಸವಸ್ವಾಮಿಗಳು : 1954.
4. ವ್ಯವಹಾರ ಕನ್ನಡ: (ಲೇ). ಎಚ್ಚೆಸ್ಕೆ: 1956.
5. ಶಿಲಾಲತೆ: (ಕವನ ಸಂಕಲನ) : (ಲೇ) : ಕೆ. ಎಸ್. ನರಸಿಂಹಸ್ವಾಮಿ : 1958.
6. ಶಿವದಾಸ ಗೀತಾಂಜಲಿ: (ಲೇ). ಎಲ್. ಬಸವರಾಜು: 1963: (ಮುನ್ನುಡಿ ಇಂಗ್ಲಿಷಿನಲ್ಲಿದೆ)
7. ಸಾಹಿತ್ಯದ ಹಿನ್ನೆಲೆ: (ಲೇ). ಕೆ. ವೆಂಕಟರಾಯಾಚಾರ್ಯ : 1957.

## (ಉ) ಲೇಖನಗಳು

1. ಅಗ್ಗಲದೇವ: ಪ್ರ. ಕ. 35—4
2. ಅಗ್ರಹಾರ: ಕ. ನು. 1946.
3. ಅಭಿನವಪಂಪನ ಕಾಲವಿಚಾರ: ಪ್ರ. ಕ. 16—3.
4. ಆದಿದೇವ (ಅಜ್ಞಾತಕವಿ): ಜ. ಕ. 10—4.
5. ಇಂದಿನ ಕನ್ನಡ ಕವಿತೆ: ತರಂಗರಂಗ—1943.
6. ಕಣ್ಣೊ ಕುರುಡೊ: ('ಮುತ್ತು—ಹವಳ'—ಎಂಬ ಸಂಕಲನ ಗ್ರಂಥದಲ್ಲಿದೆ).
7. ಕರ್ಣಪಾರ್ಯನ ನೇಮಿನಾಥಪುರಾಣದ ವಿಮರ್ಶೆ : ಪ್ರ. ಕ. 23—2.
8. ಕನ್ನಡದಲ್ಲಿ ಹೊಸ ನಿಘಂಟುವಿನ ಆವಶ್ಯಕತೆ: ಸಂಭಾವನೆ: 1941.
9. ಕನ್ನಡ ಸಾಹಿತ್ಯದ ಸೊಬಗು: ಉಪನ್ಯಾಸ: ಕ. ನು. 16—2.
10. ಕರ್ಣಾಟಕ ಸಾಹಿತ್ಯದಲ್ಲಿ ಪ್ರಕೃತಿ ವರ್ಣನೆ: ಕ. ಸಾ. ಪ. ಪ. 13—(1928).
11. ಕವಿಲಕ್ಷ್ಮೀಶ: (ಎಂ. ಆರ್. ಶ್ರೀ.—ಅವರೊಡನೆ ಪತ್ರವ್ಯವಹಾರ): ಪ್ರ. ಕ. 15—3.
12. ಕಾರೋಹಣದ ಪಟಿ: ಪ್ರ. ಕ. 42—3.
13. ಕಾಳಸೆ—ಕಾಳಸ—ಕಳಾಸ—ಕಾಳಾಸ: ಕ. ನು. 1947.
14. ಕುಮಾರವ್ಯಾಸನ ಕರ್ಣ : ಪ್ರ. ಕ. 38—1 (1958)
15. ಕೆಲವರು ವಚನಕಾರರು : ಪ್ರ. ಕ. 19—1.
16. ಕೆಲವರು ವಚನಕಾರರು: ಪ್ರ. ಕ. 19—4.
17. ಕೆಲವು ರಗಳೆಯ ಕವಿಗಳು : ಪ್ರ. ಕ. 17—4.
18. ಗಜಾಂಕುಶ: (10ನೆಯ ಶ. ದ ಕವಿ) ಪ್ರ. ಕ. 14—2.
19. ಗುಯ್ಯಲ್—ಒಂದು ವಿವೇಚನೆ: ಪ್ರ. ಕ. 45—4.
20. ಚೆನ್ನವೀರೇಶ್ವರ (ಒಬ್ಬ ಅಜ್ಞಾತಕವಿ): ಜ. ಕ. 13.
21. ಚೌಂಡರಸನ ಕಾಲವಿಚಾರ: ಜ. ಕ. 8—11.
22. ಜಟಾಸಿಂಹನಂದಿಯ ವರಾಂಗಚರಿತ್ರೆ: ಕ. ಸಾ. ಪ. ಪ. 25 (1945).
23. ಜನ್ನನೂ ವಾದಿರಾಜನೂ: ಕ. ಸಾ. ಪ. ಪ. 15—4.
24. ಜಿನದತ್ತರಾಯ ಚರಿತೆ: ಬಾಗಿನ: 1954.
25. ಡಂಗ ಹಾಕು ಎಂದರೇನು ? : ಜೇ. 1952.
26. ತುರುಗಾಹಿ ರಾಮಣ್ಣನ ವಚನಗಳು : ಶರಣ ಸಾಹಿತ್ಯ: 1949.
27. ತೋಮರ ರಗಳೆ: ಪ್ರ. ಕ. 34—1
28. ದೇವಾಂಗ ದಾಸಿಮಯ್ಯನ ಪುರಾಣ : ದೇವರ ದಾಸಿಮಯ್ಯ ಪ್ರಶಸ್ತಿ: 1953
29. ಧವಳವೆಂಬ ಹಾಡಿನ ಸ್ವರೂಪ: ಪಂಜೆಯವರ ನೆನಪಿಗಾಗಿ : 1952.

30. ನಲವತ್ತೊಂದನೆಯ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷ ಭಾಷಣ : 1960.
31. ನಾಲ್ಕನೆಯ ಮಂಗರಸ: ಕ. ಸಾ. ಪ. ಪ. 15 (1930).
32. ಪಕ್ಷಿ>ಹಕ್ಕಿಗೆ ಸಮಾನ ಕನ್ನಡ ಶಬ್ದ: ಪ್ರ. ಕ. 44—2.
33. ಪಟಂಗಾಸು : ಪ್ರ. ಕ. 42—2.
34. ಪಂಪ : (ಭಾಷಣ) : ಕ. ನು. 11.
35. ಪೊನ್ನನ ಭುವನೈಕ ರಾಮಾಭ್ಯುದಯ : ಪ್ರ. ಕ. 15—2.
36. ಪೊನ್ನನೂ ಕಾಳಿದಾಸನೂ : ಪ್ರ. ಕ. 12–2
37. ಪೊರಸು—ಒಂದು ವಿಚಾರ: ಪ್ರ. ಕ. 27—3 (1946).
38. ಬರಡಗೆ : ಪ್ರ. ಕ. 42—1.
39. ಬಸವಣ್ಣನವರ ಕೆಲವು ವಚನಗಳ ಪಾಠ: ಶ. ಸಾ.: 11—7.
40. ಭಗವತಿಯೇಱುವೆಟ್ಟ ತೇಱದಿಂ ಕಥೆಯಾಯ್ತುವರೇಱು : ಪ್ರ. ಕ. 44—2.
41. ಭಾಷಾವಿಹಾರ—1 : ಕ. ನು—15.
42. ಭಾಷಾವಿಹಾರ—2 : ಕ. ನು—15.
43. ಮದನಾವತಾರ: ಪ್ರ. ಕ. 38—4.
44. ಮೇಕು—ಇದರ ಅರ್ಥ ಮತ್ತು ನಿಷ್ಪತ್ತಿ: ಪ್ರ. ಕ. 45—1.
45. ಮೊಹಂಜೊದಾರೊದಲ್ಲಿ ಈಚೆಗೆ ನಡೆದ ಭೂಶೋಧನೆ: (ಅನುವಾದ ಲೇಖನ) ಪ್ರ. ಕ. 16—4 (1935)
46. ರನ್ನಕವಿಯ ಸಹಸ್ರವಾರ್ಷಿಕೋತ್ಸವ (ಭಾಷಣ): ಕ. ನು. 12—6.
47. ರಪಣ—ರವಣ : ಅಭಿವಂದನೆ : 1957.
48. ರುದ್ರಭಟ್ಟ: ಪ್ರ. ಕ. 32—4
49. ರೆವರೆಂಡ್. ಎಫ್. ಕಿಟ್ಟೆಲ್ : ಪ್ರ. ಕ. 40–3.
50. ಲಕ್ಷ್ಮೀಶನ ಕಾಲವಿಚಾರ : ಪ್ರ. ಕ. 13—1.
51. ಲಾಳ ಕಟ್ಟಿಸಿಕೊಳ್ಳುವ ಎತ್ತು: ಕ. ನು. 11.
52. ಲಿಂಗಾರ್ಚನೆ ಮತ್ತು ಲಿಂಗಾರಾಧನೆ : ಜ. ಕ. 8—11.
53. ವಡ್ಡಾರಾಧನೆ: ಕ. ಸಾ. ಪ. ಪ.—1931.
54. ವಡ್ಡಾರಾಧನೆಯ ಕೆಲವು ವಿಚಾರಗಳು : ಕ. ಸಾ. ಪ. ಪ. 25.
55. ವಡ್ಡಾರಾಧನೆಯೆಂಬ ಹಳಗನ್ನಡ ಗದ್ಯಗ್ರಂಥ: (ಮೂಲ : ಡಾ. ಎ. ಎನ್. ಉಪಾಧ್ಯೆ) (ಅನುವಾದ) ಪ್ರ. ಕ. 24—2.
56. ವರಾಂಗ ಚರಿತೆ : (ಭಾಷಾಂತರ) : ಕ. ಸಾ. ಪ. ಪ. 1943.
57. ವಿಜಯನಗರ ಕಾಲದ ಸಾಹಿತ್ಯ: ಪ್ರ. ಕ. 22—4.
58. ವ್ಯಾಸಂಗದ ಹವ್ಯಾಸ: ಪ್ರ. ಕ. 33–2
59. ಶಿವಸಿದ್ಧರಾಮ (ಒಬ್ಬ ಅಜ್ಞಾತ ಕವಿ): ಜ. ಕ. 9—8.
60. ಸಾಹಿತ್ಯ ಚರಿತ್ರೆಯ ಸ್ವರೂಪ : ಪ್ರ. ಕ. 30—2.
61. ಸಿದ್ಧಲಿಂಗೇಶ : (ಒಬ್ಬ ಅಜ್ಞಾತ ಕವಿ) : ಜ. ಕ. 9—4.
62. ಸಿದ್ಧರಾಮನ ವೀರಶೈವತ್ವ (ಪುನರಾಲೋಕನ): ಪ್ರ. ಕ. 45—3
63. *The Genealogy of Arikesarin* II—Journal of Andhra Historical Society, Vol. 7.
64. *The Jaina Ramayanas: Indian Historical Quarterly*, Vol. 15: No. 4: 1939.
65. *Kannada Literature under Vijayanagara*—Vijayanagara sexcentenary Volume.

11976



66. *Old Kannada Literature : A brief Survey*—Karnataka Darsana.
67. *The Talangere Inscription of Jayasimha* :—(in collaboration with N. L. N. Rao) El-Vol 29.
68. *Social and Religious life in Karnataka under the Satavahanas*—(to be Published in Karnataka Through the Ages).
69. *Four Etymos from old Kannada*—(Emeneau Presentation Volume).
70. *Empires of Karnataka*—Lecture delivered on the occasion of the Galden Jubilee of the Historical Association Maharaja's College, Mysore (To be published).

## (ಎ) ವಿಮರ್ಶೆ : ಪುಸ್ತಕ ಪರಿಚಯ

1. ಅಕ್ಕಮಹಾದೇವಿ : (ಲೇ). ರಂ. ಶ್ರೀ ಮುಗಳಿ : ಪ್ರ. ಕ. 19—2, 3.
2. ಕನ್ಯಾಬಲಿ (ಸೂಳೆಯ ಸಂಸಾರ) : (ಲೇ) ಶಿವರಾಮ ಕಾರಂತ.
3. ಕುಮುದೇಂದು ರಾಮಾಯಣ : ಕ. ಸಾ. ಪ. ಪ : 25.
4. ಗುಣವರ್ಮನ ಪುಷ್ಪದಂತ ಪುರಾಣ : ಪ್ರ. ಕ. 16—1
5. ಜೀವನಯಾತ್ರೆ: (ಲೇ). ಅ. ನ. ಕೃ : ಪ್ರ. ಕ. 17—1
6. ಪ್ರಭುದೇವರ ಪುರಾಣ : ಪ್ರ. ಕ. 22—1.
7. ಪ್ರೇಮಾಹುತಿ : (ಲೇ) ಲಿ. ವಿ. ರಾವ್ : ?
8. ಮರಳಿ ಮಣ್ಣಿಗೆ : (ಲೇ). ಶಿವರಾಮ ಕಾರಂತ : ಪ್ರ. ಕ. 24—4.
9. ಮಹದೇವಿಯಕ್ಕ: ಪ್ರ. ಕ. 21—1.
10. ವೀಣಾನಾದ : (ಲೇ) ಕೃಹಕು :
11. ವೈದ್ಯರಾಜ : (ಲೇ). ಶ್ರೀರಂಗ : ಪ್ರ. ಕ· 14—2.
12. ಶಂ. ಬಾ. ಜೋಶಿಯವರ ಮಹಾರಾಷ್ಟ್ರದ ಮೂಲ : ಪ್ರ. ಕ : 16—2

ಹಂಪ. ನಾ.

Wesley Press, Mysore

